ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೪

## ಕಾಶೀಖಂಡ

(ಉತ್ತರಾರ್ಧ—ಪೂರ್ವ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
...ರು ರೋಡು, ಬೆಂಗಳೂರು ಸಿಟಿ
೧೯೪೮

# ಶ್ರೀಸ್ಕಾಂದಮಹಾಪುರಾಣಂ

## ಕಾಶೀಖಂಡ

(ಉತ್ತರಾರ್ಧ–ಪೂರ್ವ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೪

## ಕಾಶೀಖಂಡ

(ಉತ್ತರಾರ್ಧ–ಪೂರ್ವ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೪

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ ಪೂರ್ವ ಭಾಗವು ಮುಗಿದಿರುತ್ತದೆ. ಮೂಲದಲ್ಲಿ 'ಪೂರ್ವ ಭಾಗ ಉತ್ತರ ಭಾಗ' ಎಂದು ವಿಭಾಗವೇನೂ ಇಲ್ಲದಿದ್ದರೂ ಸಂಪುಟೀಕರಣದ ಸೌಲಭ್ಯಕ್ಕಾಗಿ ಇಲ್ಲಿ ಮಾತ್ರ ಹೀಗೆ ಭಾಗಮಾಡಲಾಗಿದೆ. ಇನ್ನೊಂದು ಸಂಪುಟದೊಡನೆ ಈ ಕಾಶೀಖಂಡವು ಸಮಾಪ್ತವಾಗುತ್ತದೆ. ಕ್ಷೇತ್ರೋತ್ತಮವಾದ ಕಾಶಿಯ ವೈಭವವನ್ನು ವರ್ಣಿಸುವ ಈ ಕಾಶೀಖಂಡದ ಬಗ್ಗೆ ಸೂಚಿಸಬೇಕಾದ ಸಂಗತಿಗಳನ್ನು ಈ ಖಂಡದ ಮೊದಲ ಸಂಪುಟದ ಅರಿಕೆಯಲ್ಲಿ ಕೊಡಲಾಗಿದೆ. ವಾಚಕರು ದಯವಿಟ್ಟು ಅದನ್ನೊಮ್ಮೆ ಮನಸ್ಕರಿಸಬೇಕೆಂದು ಬಿನ್ನಹ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನೆಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಕಾಶೀಖಂಡಸ್ಯೋತ್ತರಾರ್ಧಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಯೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರವಿಶಾಲಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥೈಕಪಂಚಾಶತ್ತಮೋಽಧ್ಯಾಯಃ

**ಅರುಣವೃದ್ಧಕೇಶವ ವಿಮಲಗಂಗಾಯುಮಾದಿತ್ಯವರ್ಣನಂ**

ಅಗಸ್ತಿರುವಾಚ :—

**ಪಾರ್ವತೀಹೃದಯಾನಂದ ಸರ್ವಜ್ಞಾಂಗಭವ ಪ್ರಭೋ ।**
**ಕಿಂಚಿತ್ಪ್ರಷ್ಟುಮನಾಃ ಸ್ವಾಮಿಂಸ್ತದ್ಭವಾನ್ ವಕ್ತುಮರ್ಹತಿ ॥ ೧ ॥**

---

### ಕನ್ನಡದ ಅನುವಾದ

**ಅರುಣವೃದ್ಧಕೇಶವ ವಿಮಲಗಂಗಾಯುಮಾದಿತ್ಯವರ್ಣನ**

೧. ಅಗಸ್ತ್ಯನು ಕೇಳುತ್ತಾನೆ:—ಪಾರ್ವತಿಯ ಹೃದಯಕ್ಕೆ ಆನಂದವನ್ನುಂಟುಮಾಡುವ ಓ ಸ್ಕಂದಸ್ವಾಮಿಯೆ! ಸರ್ವಜ್ಞನಾದ ಮಹೇಶ್ವರನ ಶರೀರದಿಂದ ಉತ್ಪನ್ನನಾದ ಲೋಕೇಶ್ವರನೆ! ನಿನ್ನಲ್ಲಿ ಒಂದು ವಿಷಯವನ್ನು ಪ್ರಶ್ನೆ ಮಾಡಲು ಕುತೂಹಲವುಳ್ಳವನಾಗಿರುವೆನು. ಅದನ್ನು ನೀನು ತಿಳಿಸಲು ಶಕ್ತನಾಗಿರುವೆ.

ದಕ್ಷಪ್ರಜಾಪತೇಃ ಪುತ್ರೀ ಕಶ್ಯಪಸ್ಯ ಪರಿಗ್ರಹಃ ।
ಗರುತ್ಮತಃ ಪ್ರಸೂಃ ಸಾಧ್ವೀ ಕುತೋ ದಾಸ್ಯಮವಾಪ ಸಾ ॥ ೨ ॥

ಸ್ಕಂದ ಉವಾಚ :—

ಹಂಜಿಕಾತ್ವಂ ಯಥಾ ಪ್ರಾಪ್ತಾ ವಿನತಾ ಸಾ ತಪಸ್ವಿನೀ ।
ತದಪ್ಯಹಂ ಸಮಾಖ್ಯಾಸ್ಯೇ ನಿಶಾಮಯ ಮಹಾಮತೇ ॥ ೩ ॥
ಕದ್ರೂರಜೀಜನತ್ಪುತ್ರಾನ್ ಶತಂ ಕಶ್ಯಪತಃ ಪುರಾ ।
ಉಲೂಕಮರುಣಂ ತಾರ್ಕ್ಷ್ಯಮಸೂತ ವಿನತಾ ತ್ರಯಂ ॥ ೪ ॥
ಕೌಶಿಕೋ ರಾಜ್ಯಮಾಪ್ಯಾಪಿ ಶ್ರೇಷ್ಠತ್ವಾತ್ಪಕ್ಷಿಣಾಂ ಮುನೇ ।
ನಿರ್ಗುಣತ್ವಾಚ್ಚ ತೈಃ ಸರ್ವೈಃ ಸ ರಾಜ್ಯಾದವರೋಪಿತಃ ॥ ೫ ॥
ಕ್ರೂರಾಕ್ಷೋಽಯಂ ದಿವಾಂಧೋಽಯಂ ಸದಾ ವಕ್ರನಖಸ್ತ್ವಸೌ ।
ಅತೀವೋದ್ವೇಗಜನಕಂ ಸರ್ವೇಷಾಮಸ್ಯ ಭಾಷಣಂ ॥ ೬ ॥
ಇತ್ಥಂ ತಸ್ಯ ಗುಣಗ್ರಾಮಾನ್ನಿಕಥ್ಯ ಬಹುಶಃ ಖಗಾಃ ।
ನಾದ್ಯಾಪಿ ವೃಣ್ವತೇ ರಾಜ್ಯೇ ಕಮಪಿ ಸ್ವೈರಚಾರಿಣಃ ॥ ೭ ॥

---

೨. ದಕ್ಷಪ್ರಜೇಶ್ವರನ ಮಗಳೂ, ಕಶ್ಯಪಬ್ರಹ್ಮನ ಪತ್ನಿಯೂ ಆದ ವಿನತಾದೇವಿಯು ಮಹಾತ್ಮನಾದ ಗರುಡನನ್ನು ಪುತ್ರನನ್ನಾಗಿ ಪಡೆದವಳಲ್ಲವೆ. ಆದರೂ ಆ ಸಾಧ್ವೀಮಣಿಯು ತನ್ನ ಸಪತ್ನಿಯ ದಾಸ್ಯವನ್ನು ಪಡೆಯಲು ಕಾರಣವೇನು ?

೩. ಸ್ಕಂದನು ಹೇಳುತ್ತಾನೆ:—ತಪಸ್ಸಂಪನ್ನೆಯಾದ ಆ ವಿನತೆಯು ಹೇಗೆ ದಾಸಿಯ ಪದವಿಯನ್ನು ಹೊಂದಿದಳೆಂಬುದನ್ನು ನಾನು ವಿಸ್ತಾರವಾಗಿ ತಿಳಿಸುವೆನು. ಮಹಾಪ್ರಾಜ್ಞನಾದ ಅಗಸ್ತ್ಯನೆ! ಶ್ರದ್ಧೆಯಿಂದ ಕೇಳು.

೪. ಪೂರ್ವದಲ್ಲಿ ಕಶ್ಯಪನ ದೆಸೆಯಿಂದ ಕದ್ರೂದೇವಿಯು ಒಂದುನೂರು ಮಕ್ಕಳನ್ನು ಪಡೆದಳು. ಜ್ಯೇಷ್ಠಳಾದ ವಿನತೆಯಾದರೋ, ಉಲೂಕ, ಅರುಣ ಮತ್ತು ಗರುಡರೆಂಬ ಮೂವರನ್ನು ಮಾತ್ರ ಮಕ್ಕಳಾಗಿ ಪಡೆದಳು.

೫. ಗೂಗೆಯ ರೂಪವನ್ನು ಹೊಂದಿದ್ದ ಜ್ಯೇಷ್ಠಪುತ್ರನಾದ ಉಲೂಕನು ಪಕ್ಷಿಗಳಲ್ಲಿ ಶ್ರೇಷ್ಠನೆನಿಸಿದ್ದರೂ ಗುಣವಿಹೀನನಾಗಿದ್ದುದರಿಂದ ಅವರೆಲ್ಲರೂ ಅವನನ್ನು ರಾಜ್ಯಾಧಿಕಾರದಿಂದ ಚ್ಯುತನನ್ನಾಗಿ ಮಾಡಿದರು.

೬. ಈತನು ಕ್ರೂರನೇತ್ರಗಳುಳ್ಳವನು. ಹಗಲಿನಲ್ಲಿ ಕಣ್ಣುಕಾಣದವನು. ಇವನ ಪಾದಗಳಲ್ಲಿ ನಖಗಳು ಯಾವಾಗಲೂ ವಕ್ರಗಳಾಗಿರುವುವು. ಇವನ ಮಾತುಗಳಾದರೋ ಕೇಳುವವರೆಲ್ಲರಿಗೂ ಅತ್ಯಂತವಾದ ಅಸಹ್ಯತೆಯನ್ನುಂಟುಮಾಡುತ್ತಿರುವುವು.

೭. ಇಂತೆಂದು ಆ ಉಲೂಕನ ದುರ್ಗುಣಗಳನ್ನೇ ಅನೇಕ ವಿಧವಾಗಿ

ಕೌಶಿಕೇಽಥ ತಥಾವೃತ್ತೇ ಪುತ್ರವೀಕ್ಷಣಲಾಲಸಾ ।
ಅಂಡಂ ಪ್ರಸ್ಫೋಟಯಾಮಾಸ ಮಧ್ಯಮಂ ವಿನತಾ ತದಾ ॥ ೮ ॥
ಪೂರ್ಣೇ ವರ್ಷಸಹಸ್ರೇ ತು ಪ್ರಸ್ಫೋಟ್ಯ ಘಟಸಂಭವ ।
ತದಭೇದಿ ತಯೌತ್ಸುಕ್ಯಾದಂಡಮಷ್ಟಮಕೇ ಶತೇ ॥ ೯ ॥
ತಾವತ್ಸರ್ವಾಣಿ ಗಾತ್ರಾಣಿ ತಸ್ಯಾತಿಮಹಸಃ ಶಿಶೋಃ ।
ಊರ್ವೋರುಪರಿ ಸಿದ್ಧಾನಿ ತದಂಡಾಂತರ್ನಿವಾಸಿನಃ ॥ ೧೦ ॥
ಅಂಡಾನ್ನಿರ್ಗತಮಾತ್ರೇಣ ಕ್ರೋಧಾರುಣಮುಖಶ್ರಿಯಾ ।
ಅರ್ಧನಿಷ್ಪನ್ನದೇಹೇನ ಶಿಶುನಾ ಶಾಪಿತಾ ಪ್ರಸೂಃ ॥ ೧೧ ॥
ಜನಯಿತ್ರಿ ತ್ವಯಾ ದೃಷ್ಟ್ವಾ ಕಾದ್ರವೇಯಾನ್ಸಲೀಲಯಾ ।
ಖೇಲತೋ ಮಾತುರುತ್ಸಂಗೇ ಯದಂಡಂ ಯಾದಿತಾ ದ್ವಿಧಾ ॥ ೧೨ ॥
ತದನಿಷ್ಪನ್ನಸರ್ವಾಂಗಃ ಶಪಾಮಿ ತ್ವಾಂ ವಿಹಂಗಮೇ ।
ತೇಷಾಮೇವೈಧಿ ದಾಸೀತ್ವಂ ಸಪತ್ನ್ಯಂಗಭುವಾಮಿಹ ॥ ೧೩ ॥

---

ಎತ್ತಿ ಹೇಳಿಕೊಳ್ಳುವವುಗಳಾಗಿ ಪಕ್ಷಿಗಳೆಲ್ಲವೂ ಅದನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದುದಲ್ಲದೆ ಇಂದಿಗೂ ಸಹ ಯಾವನನ್ನೂ ತಮ್ಮ ರಾಜನಾಗಿ ಸ್ವೀಕರಿಸದೆ ಯಥೇಚ್ಛವಾಗಿಯೇ ವಿಹರಿಸುತ್ತಿರುವುವು.

೮. ಜ್ಯೇಷ್ಠಪುತ್ರನಾದ ಉಲೂಕನ ವಿಷಯವು ಹೀಗೆ ಪರಿಣಮಿಸಲು ತಾಯಿಯಾದ ವಿನತಾದೇವಿಯು ಮತ್ತೊಬ್ಬ ಮಗನನ್ನು ಪಡೆಯಬೇಕೆಂಬ ಕುತೂಹಲದಿಂದ ಎರಡನೆಯ ಅಂಡವನ್ನು ಬಲಾತ್ಕಾರವಾಗಿ ಒಡೆದುಹಾಕಿದಳು.

೯. ಎಲೈ ಅಗಸ್ತ್ಯನೆ! ಒಂದು ಸಾವಿರ ವರ್ಷಗಳು ಕಳೆಯಲು ಆ ಅಂಡವು ತಾನಾಗಿಯೇ ಒಡೆಯಬೇಕಾಗಿದ್ದಿತು. ಆದರೆ ತಾಯಿಯ ಔತ್ಸುಕ್ಯವು ತಡೆಯಲಾರದುದಾಗಿ ಅದು ಎಂಟನೆಯ ಶತಮಾನದಲ್ಲಿಯೇ ಭೇದಿಸಲ್ಪಟ್ಟಿತು.

೧೦–೧೧. ಆ ಸಮಯಕ್ಕೆ ಅಂಡದೊಳಗಿದ್ದ ಮಹಾಮಹಿಮಾನ್ವಿತವಾದ ಶಿಶುವಿಗೆ ತೊಡೆಗಳ ಮೇಲಿನ ಸರ್ವ ಅವಯವಗಳೂ ವಿಭಜಿಸಲ್ಪಟ್ಟು ಸಿದ್ಧವಾಗಿದ್ದುವು. ಅಂಡದಿಂದ ಹೊರಬಿದ್ದ ಕ್ಷಣದಲ್ಲಿಯೇ ಆ ಮಗುವು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಮುಖವು ರಂಜಿಸುತ್ತಿರಲು ಅರ್ಧನಿಷ್ಪನ್ನವಾದ ರೂಪದಿಂದಲೇ ಹೊರಬಿದ್ದು ತಾಯಿಯನ್ನೇ ಶಾಪಗ್ರಸ್ತಳನ್ನಾಗಿ ಮಾಡಿದನು.

೧೨. ಓ ತಾಯೆ! ನಿನ್ನ ಸವತಿಯಾದ ಕಾದ್ರೂದೇವಿಯ ಮಕ್ಕಳು ಲೀಲಾವಿನೋದಗಳಿಂದ ತಮ್ಮ ತಾಯಿಯ ಮಡಿಲಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿರುವುದನ್ನು ಕಂಡು ಈ ಅಂಡವನ್ನು ಇಬ್ಭಾಗವಾಗಿ ಸೀಳಿದೆಯಲ್ಲವೆ.

೧೩. ಎಲೌ ವಿನತೆಯೆ! ನಿನ್ನ ಕುತೂಹಲದ ಫಲವಾಗಿ ಅಂಗಸೌಷ್ಠವವನ್ನು ಹೊಂದದೆ ಅನೂರುವಾಗಿರುವ ನಾನು ಈಗ ನಿನಗೆ ಶಾಪವನ್ನು ಕೊಡು

ವೇಪಮಾನಾಥ ತಚ್ಛಾಪಾದಿದಂ ಪ್ರೋವಾಚ ಪಕ್ಷಿಣೀ ।
ಅನೂರೋ ಬ್ರೂಹಿ ಮೇ ಶಾಪಾವಸಾನಂ ಮಾತುರಂಗಜ ॥ ೧೪ ॥

ಅನೂರುರುವಾಚ :—

ಅಂಡಂ ತೃತೀಯಂ ಮಾ ಭಿಂದಿ ಹ್ಯನಿಷ್ಪನ್ನಂ ಮಮೇವ ಹಿ ।
ಅಸ್ಮಿನ್ನಂಡೇ ಭವಿಷ್ಯೋ ಯಃ ಸ ತೇ ದಾಸ್ಯಂ ಹರಿಷ್ಯತಿ ॥ ೧೫ ॥
ಇತ್ಯುಕ್ತ್ವಾ ಸೋಽರುಣೋಽಗಚ್ಛದುಡ್ಡೀಯಾನಂದಕಾನನಂ ।
ಯತ್ರ ವಿಶ್ವೇಶ್ವರೋ ದದ್ಯಾದಪಿ ಪಂಗೋಃ ಶುಭಾಂ ಗತಿಂ ॥ ೧೬ ॥
ಏತತ್ತೇ ಪೃಚ್ಛತಃ ಖ್ಯಾತಂ ವಿನತಾದಾಸ್ಯಕಾರಣಂ ।
ಮುನೇ ಪ್ರಸಂಗತೋ ವಚ್ಮಿ ಅರುಣಾದಿತ್ಯಸಂಭವಂ ॥ ೧೭ ॥
ಅನೂರುತ್ವಾದನೂರುರ್ಯೋಽರುಣಃ ಕ್ರೋಧಾರುಣೋ ಯತಃ ।
ವಾರಾಣಸ್ಯಾಂ ತಪಸ್ತಪ್ತ್ವಾ ತೇನಾರಾಧಿ ದಿವಾಕರಃ ॥ ೧೮ ॥

---

ವೆನು. ನಿನ್ನ ಸವತಿಯ ಮಕ್ಕಳಾದ ಆ ನಾಗರಿಗೇ ನೀನು ದಾಸಿಯಾಗಿ ಬದುಕು.

೧೪. ಈ ಶಾಪವನ್ನು ಕೇಳಿ ಪಕ್ಷಿರೂಪಿಣಿಯಾದ ವಿನತೆಯು ಭಯದಿಂದ ನಡುಗುತ್ತ "ಅಪ್ಪಾ ಅರುಣನೆ! ನೀನು ನನ್ನ ಶರೀರದಿಂದಲೇ ಉದ್ಭವಿಸಿರುವ ನಲ್ಲವೆ. ನನ್ನ ಈ ಶಾಪಕ್ಕೆ ಅವಸಾನಕಾಲವನ್ನೂ ಅಂತೆಯೆ ಹೇಳುವವನಾಗು" ಎಂದು ಕೇಳಿಕೊಂಡಳು.

೧೫. ಅರುಣನು ಹೇಳುತ್ತಾನೆ:—ಈ ಮೂರನೆಯ ಅಂಡವನ್ನು ಖಂಡಿತ ವಾಗಿಯೂ ಭೇದಿಸಬೇಡ. ಇದರಲ್ಲಿಯೂ ನನ್ನಂತೆಯೇ ಅರ್ಧದೇಹವುಳ್ಳ ವ್ಯಕ್ತಿಯೊಬ್ಬನಿರುವನು. ಸಹಸ್ರವರ್ಷಗಳ ಅವಧಿಯು ಮುಗಿದ ಮೇಲೆ ಈ ಅಂಡದಿಂದ ಹುಟ್ಟುವ ಮಹಾತ್ಮನು ನಿನ್ನ ದಾಸ್ಯವನ್ನು ಕೊನೆಗಾಣಿಸುವನು.

೧೬. ಇಂತೆಂದು ಅಭಯವನ್ನಿತ್ತು ಅರುಣದೇವನು ಆಕಾಶದಲ್ಲಿ ಹಾರಿ ಆನಂದಕಾನನವೆಂಬ ಹೆಸರಿನ ಕಾಶೀಕ್ಷೇತ್ರವನ್ನು ಕುರಿತು ಹೊರಟುಹೋದನು. ಆ ಪುಣ್ಯಕ್ಷೇತ್ರದಲ್ಲಿ ವಿಶ್ವೇಶ್ವರನು ಕುಂಟರಾದವರಿಗೂ ಉತ್ತಮವಾದ ಗತಿಯನ್ನು ಕೊಡುತ್ತ ನೆಲಸಿರುವನಷ್ಟೆ.

೧೭. ಎಲೈ ಅಗಸ್ತ್ಯಮಹರ್ಷಿಯೆ! ಪ್ರಸಂಗವೊದಗಿರುವುದರಿಂದ ನೀನು ಪ್ರಶ್ನೆಯನ್ನು ಮಾಡಿದ ವಿನತಾದಾಸೀತ್ವದ ಕಾರಣವನ್ನು ವಿಸ್ತರಿಸಿರುವೆನು. ಇನ್ನು ಅರುಣಾದಿತ್ಯಮೂರ್ತಿಯ ಉದ್ಭವವನ್ನು ನಿರೂಪಿಸುವೆನು.

೧೮. ತೊಡೆಗಳಿಲ್ಲದುದರಿಂದ ಅನೂರುವೆಂದು ಪ್ರಸಿದ್ಧನಾದ ಅರುಣನು ತಾಯಿಯಮೇಲಿನ ಸಿಟ್ಟಿನಿಂದ ಕೆಂಪಡರಿದ ಮುಖವುಳ್ಳವನಾಗಿ ಅರುಣನೆಂಬ ಅನ್ವರ್ಥನಾಮವನ್ನು ಪಡೆದನು. ಅವನು ಆ ಬಳಿಕ ವಾರಾಣಸೀಕ್ಷೇತ್ರದಲ್ಲಿ ತೀವ್ರವಾದ ತಪಸ್ಸನ್ನು ಕೈಗೊಂಡು ಸೂರ್ಯದೇವನನ್ನು ಆರಾಧಿಸುತ್ತಿದ್ದನು.

ಸೋಽಪಿ ಪ್ರಸನ್ನೋ ದತ್ವಾಥ ವರಂ ತಸ್ಮಾ ಅನೂರವೇ ।
ಆದಿತ್ಯಸ್ತಸ್ಯ ನಾಮ್ನಾಭೂದರುಣಾದಿತ್ಯ ಇತ್ಯಪಿ ॥ ೧೯ ॥
ಅರ್ಕ ಉವಾಚ:—
ತಿಷ್ಠಾನೂರೋ ಮಮ ರಥೇ ಸದೈವ ವಿನತಾತ್ಮಜ ।
ಜಗತಾಂ ಚ ಹಿತಾರ್ಥಾಯ ಧ್ವಾಂತಂ ವಿಧ್ವಂಸಯನ್ಸ್ಫುರಃ ॥ ೨೦ ॥
ಅತ್ರ ತ್ವತ್ಸ್ಥಾಪಿತಾಂ ಮೂರ್ತಿಂ ಯೇ ಭಜಿಷ್ಯಂತಿ ಮಾನವಾಃ ।
ವಾರಾಣಸ್ಯಾಂ ಮಹಾದೇವೋತ್ತರೇ ತೇಷಾಂ ಕುತೋ ಭಯಂ ॥ ೨೧ ॥
ಯೇಽರ್ಚಯಿಷ್ಯಂತಿ ಸತತಮರುಣಾದಿತ್ಯಸಂಜ್ಞಕಂ ।
ಮಾಮತ್ರ ತೇಷಾಂ ನೋ ದುಃಖಂ ನ ದಾರಿದ್ರ್ಯಂ ನ ಪಾತಕಂ ॥ ೨೨ ॥
ವ್ಯಾಧಿಭಿರ್ನಾಭಿಭೂಯಂತೇ ನೋಪಸರ್ಗೈಶ್ಚ ಕೈಶ್ಚನ ।
ಶೋಕಾಗ್ನಿನಾ ನ ದಹ್ಯಂತೇ ಹ್ಯರುಣಾದಿತ್ಯಸೇವನಾತ್ ॥ ೨೩ ॥
ಅಥ ಸ್ಯಂದನಮಾರೋಪ್ಯ ನೀತವಾನರುಣಂ ರವಿಃ ।
ಅದ್ಯಾಪಿ ಸ ರಥೇ ಸೌರೇಃ ಪ್ರಾತರೇವ ಸಮುದ್ಯತಿ ॥ ೨೪ ॥

---

೧೯. ಆ ಸೂರ್ಯದೇವನೂ ಆತನ ತಪಸ್ಸಿಗೆ ಪ್ರಸನ್ನನಾಗಿ ಅನೂರುವಾದ ಆತನಿಗೆ ಇಷ್ಟಾರ್ಥಗಳನ್ನು ಕೊಟ್ಟು ಆತನ ಹೆಸರಿನಿಂದಲೇ ಅರುಣಾದಿತ್ಯನೆಂದು ಪ್ರಸಿದ್ಧಿಯನ್ನು ಪಡೆದನು.

೨೦–೨೨. ಸೂರ್ಯನು ಹೇಳುತ್ತಾನೆ:—ವಿನತಾದೇವಿಯ ಸತ್ಪುತ್ರನಾದ ಅನೂರುವೆ! ನೀನು ನನ್ನ ರಥದ ಮುಂದುಗಡೆಯಲ್ಲಿ ಸುಖಾಸೀನನಾಗಿರು. ನಿರಂತರದಲ್ಲಿಯೂ ಲೋಕಗಳ ಅಂಧಕಾರವನ್ನು ನಾಶಗೊಳಿಸಿ ಹಿತವನ್ನು ಚರಿಸುತ್ತ ವರ್ತಿಸುತ್ತಿರು. ಇಲ್ಲಿ ನೀನು ಸ್ಥಾಪಿಸಿರುವ ನನ್ನ ಮೂರ್ತಿಯನ್ನು ಯಾವ ಮಾನವರು ಭಜಿಸುತ್ತಾರೆಯೊ, ವಾರಾಣಸಿಯಲ್ಲಿ ಮಹಾದೇವನಿಗೆ ಉತ್ತರದಲ್ಲಿರುವ ಈ ನನ್ನ ರೂಪವನ್ನು ಯಾರು ನೋಡುವರೊ ಅವರಿಗೆ ಭಯವೆತ್ತಣದು? ಯಾರು ಅರುಣಾದಿತ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ನನ್ನನ್ನು ನಿತ್ಯವೂ ಪೂಜಿಸುತ್ತಿರುವರೊ, ಅವರಿಗೆ ದುಃಖಗಳಾಗಲಿ, ದಾರಿದ್ರ್ಯವಾಗಲಿ, ಪಾತಕಗಳಾಗಲಿ ಎಂದಿಗೂ ಸಂಭವಿಸಲಾರವು.

೨೩. ಅರುಣಾದಿತ್ಯನ ಸೇವೆಯ ಫಲವಾಗಿ ಭಕ್ತರು ದೇಹವ್ಯಾಧಿಗಳಿಗೆ ಈಡಾಗುವುದಿಲ್ಲವು. ಇತರ ಯಾವ ವಿಧಗಳ ಕಷ್ಟಗಳಿಗೂ ಗುರಿಯಾಗಲಾರರು. ಎಂದಿಗೂ ಶೋಕವೆಂಬ ಅಗ್ನಿಯಲ್ಲಿ ಸುಡಲ್ಪಡುವುದಿಲ್ಲ.

೨೪. ಇಂತೆಂದು ವರವನ್ನಿತ್ತು ಸೂರ್ಯನು ಅರುಣನನ್ನು ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡನು. ಇಂದಿಗೂ ಆತನು ಸೂರ್ಯರಥದಲ್ಲಿದ್ದು ಪ್ರಾತಃಕಾಲದಲ್ಲಿ ಸೂರ್ಯನಿಗೆ ಮುಂಚೆಯೇ ಕಾಣಿಸಿಕೊಳ್ಳುವನು.

ಯಃ ಕುರ್ಯಾತ್ಪ್ರಾತರುತ್ಥಾಯ ನಮಸ್ಕಾರಂ ದಿನೇದಿನೇ ।
ಅರುಣಾಯ ಸಸೂರ್ಯಾಯ ತಸ್ಯ ದುಃಖಭಯಂ ಕುತಃ ॥ ೨೫ ॥
ಅರುಣಾದಿತ್ಯಮಾಹಾತ್ಮ್ಯಂ ಯಃ ಶ್ರೋಷ್ಯತಿ ನರೋತ್ತಮಃ ।
ನ ತಸ್ಯ ದುಷ್ಕೃತಂ ಕಿಂಚಿದ್ಭವಿಷ್ಯತಿ ಕದಾಚನ ॥ ೨೬ ॥

ಸ್ಕಂದ ಉವಾಚ:—

ವೃದ್ಧಾದಿತ್ಯಸ್ಯ ಮಾಹಾತ್ಮ್ಯಂ ಶೃಣು ತೇ ಕಥಯಾಮ್ಯಹಂ ।
ಯಸ್ಯ ಶ್ರವಣಮಾತ್ರೇಣ ನರೋ ನೋ ದುಷ್ಕೃತಂ ಭಜೇತ್ ॥ ೨೭ ॥
ಪುರಾತ್ರ ವೃದ್ಧಹಾರೀತೋ ವಾರಾಣಸ್ಯಾಂ ಮಹಾತಪಾಃ ।
ಮಹಾತಪಸ್ಸಮೃದ್ಧ್ಯರ್ಥಂ ಸಮಾರಾಧಿತವಾನ್ ರವಿಂ ॥ ೨೮ ॥
ಮೂರ್ತಿಂ ಸಂಸ್ಥಾಪ್ಯ ಶುಭದಾಂ ಭಾಸ್ವತಃ ಶುಭಲಕ್ಷಣಾಂ ।
ದಕ್ಷಿಣೇನ ವಿಶಾಲಾಕ್ಷ್ಯಾ ದೃಢಭಕ್ತಿಸಮನ್ವಿತಃ ॥ ೨೯ ॥
ತುಷ್ಟಸ್ತಸ್ಮೈ ವರಂ ಪ್ರಾದಾದ್ಬ್ರಧ್ನೋ ವೃದ್ಧತಪಸ್ವಿನೇ ।
ಅಲಂ ವಿಲಂಬ್ಯ ಯಾಚಸ್ವ ಕಸ್ತೇ ದೇಯೋ ವರೋ ಮಯಾ ॥ ೩೦ ॥

---

೨೫. ಯಾವನು ಪ್ರತಿನಿತ್ಯದಲ್ಲಿಯೂ ಸೂರ್ಯಸಹಿತನಾದ ಅರುಣನಿಗೆ ಪ್ರಾತಃಕಾಲದಲ್ಲಿ ಎದ್ದು ನಮಸ್ಕಾರಗಳನ್ನು ಮಾಡುವನೊ, ಅವನಿಗೆ ದುಃಖಗಳ ಭಯವು ಹೇಗೆ ಸಂಭವಿಸುವುದು ?

೨೬. ಯಾವ ಮನುಷ್ಯೋತ್ತಮನು ಈ ಅರುಣಾದಿತ್ಯನ ಮಾಹಾತ್ಮ್ಯವನ್ನು ಶ್ರದ್ಧಾನ್ವಿತನಾಗಿ ಕೇಳುವನೊ, ಅವನಿಗೆ ಸ್ವಲ್ಪವಾದರೂ ಯಾವ ವಿಧವಾದ ಪಾತಕದ ಲೇಪವೂ ಎಂದಿಗೂ ಉಂಟಾಗುವುದಿಲ್ಲ.

೨೭. ಸ್ಕಂದನು ಹೇಳುತ್ತಾನೆ:—ಇನ್ನು ವೃದ್ಧಾದಿತ್ಯನ ಮಾಹಾತ್ಮ್ಯವನ್ನು ಕೇಳು. ನಿನಗೆ ಅದನ್ನು ಕಥನಮಾಡುವೆನು. ಅದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

೨೮. ಪೂರ್ವದಲ್ಲಿ ಕಾಶೀನಗರಿಯಲ್ಲಿ ವೃದ್ಧಹಾರೀತನೆಂಬ ಮಹಾತಪಸ್ಸಂಪನ್ನನೊಬ್ಬನು ತನ್ನ ತಪಸ್ಸನ್ನು ಸಂಪೂರ್ಣಗೊಳಿಸುವ ಉದ್ದೇಶದಿಂದ ಸೂರ್ಯನನ್ನು ಚೆನ್ನಾಗಿ ಪೂಜಿಸುತ್ತಿದ್ದನು.

೨೯-೩೦. ವಿಶಾಲಾಕ್ಷಿಗೆ ದಕ್ಷಿಣದಲ್ಲಿ ಮಂಗಳಪ್ರದವೂ ಸರ್ವಲಕ್ಷಣಲಕ್ಷಿತವೂ ಆದ ಸೂರ್ಯನ ಮೂರ್ತಿಯನ್ನು ಸ್ಥಾಪಿಸಿ ನಿಶ್ಚಲವಾದ ಭಕ್ತಿಯಿಂದೊಡಗೂಡಿದವನಾಗಿ ಆರಾಧನೆ ಮಾಡುತ್ತಿದ್ದನು. ಆತನ ವಿಷಯದಲ್ಲಿ ಸಂತುಷ್ಟನಾದ ಸೂರ್ಯಭಗವಾನನು ಪ್ರಸನ್ನನಾಗಿ ವೃದ್ಧತಪಸ್ವಿಯಾದ ಆತನಿಗೆ ವರವನ್ನು ಕೊಡಲು ಸಾಕ್ಷಾತ್ಕರಿಸಿ, "ಅಯ್ಯಾ ಹಾರೀತನೆ! ನಿನ್ನ ತಪಸ್ಸು ಸಾಕು. ನಾನು ಯಾವ ವರವನ್ನು ಕೊಡಬೇಕೆಂಬುದನ್ನು ತಡಮಾಡದೆ ಯಾಚಿಸುವವನಾಗು" ಎಂಬುದಾಗಿ ಅಪ್ಪಣೆಮಾಡಿದನು.

ಸೋಽಥ ಪ್ರಸನ್ನಾದ್ದ್ಯುಮಣೇರವೃಣೀತ ವರಂ ಮುನಿಃ ।
ಯದಿ ಪ್ರಸನ್ನೋ ಭಗವಾನ್ಯುವತ್ವಂ ದೇಹಿ ಮೇ ಪುನಃ ॥ ೩೧ ॥
ತಪಃಕರಣಸಾಮರ್ಥ್ಯಂ ಸ್ಥವಿರಸ್ಯ ನ ಮೇ ಯತಃ ।
ಪುನಸ್ತಾರುಣ್ಯಮಾಪ್ತೋಽಹಂ ಚರಿಷ್ಯಾಮ್ಯುತ್ತಮಂ ತಪಃ ॥ ೩೨ ॥
ತಪ ಏವ ಪರೋ ಧರ್ಮಸ್ತಪ ಏವ ಪರಂ ವಸು ।
ತಪ ಏವ ಪರಃ ಕಾಮೋ ನಿರ್ವಾಣಂ ತಪ ಏವ ಹಿ ॥ ೩೩ ॥
ಋತೇನ ತಪಸಃ ಕ್ವಾಪಿ ಲಭ್ಯಾ ಐಶ್ವರ್ಯಸಂಪದಃ ।
ಪದಂ ಧ್ರುವಾದಿಭಿಃ ಪ್ರಾಪಿ ಕೇವಲಂ ತಪಸೋ ಬಲಾತ್ ॥ ೩೪ ॥
ತತಸ್ತಪಶ್ಚರಿಷ್ಯಾಮಿ ಲೋಕದ್ವಯಮಹತ್ತ್ವದಂ ।
ಪ್ರಾಪ್ಯ ತ್ವದ್ವರದಾನೇನ ಯೌವನಂ ಸರ್ವಸಮ್ಮತಂ ॥ ೩೫ ॥
ಧಿಗ್ಜರಾಂ ಪ್ರಾಣಿನಾಮತ್ರ ಯಯಾ ಸರ್ವೋ ವಿರಜ್ಯತಿ ।
ಜರಾತುರೇಂದ್ರಿಯಗ್ರಾಮೋ ಸ್ತ್ರಿಯೋಽಪಿ ನ ಯತಃ ಸ್ವಸಾತ್ ॥ ೩೬ ॥

---

೩೧. ಇಂತು ಪ್ರಸನ್ನನಾದ ಸೂರ್ಯನನ್ನು ಕಂಡು ಹಾರೀತಮಹಾಮುನಿಯು ವರವನ್ನು ಬೇಡಿಕೊಂಡನು. "ಭಗವಂತನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ನನಗೆ ಪುನಃ ಯೌವನವನ್ನು ದಯಪಾಲಿಸು.

೩೨. ಗತವಯಸ್ಕನಾಗಿರುವ ನನಗೆ ತಪಸ್ಸನ್ನಾಚರಿಸುವ ಸಾಮರ್ಥ್ಯವು ಕಳೆದು ಹೋಗಿರುವುದು. ನಿನ್ನ ಅನುಗ್ರಹದಿಂದ ಮತ್ತೆ ತಾರುಣ್ಯವನ್ನು ಪಡೆದರೆ ಮತ್ತೂ ಸರ್ವೋತ್ತಮವಾದ ತಪಸ್ಸನ್ನು ಮಾಡಲೆಳಸುವೆನು.

೩೩. ತಪಸ್ಸೇ ನಮಗೆ ಉತ್ತಮ ಧರ್ಮವು. ತಪವೇ ನಾಶರಹಿತವಾದ ಧನವು. ಅದೇ ಪರಾತ್ಪರವೆನಿಸಿ ನಮಗೆ ಅಭಿಲಷಿತವಾಗಿರುವುದು. ಸರ್ವಸೌಖ್ಯವೆಂದರೂ ನಮಗೆ ಆ ತಪಸ್ಸೇ ಆಗಿರುವುದು.

೩೪. ತಪಸ್ಸಿನ ಸಾಧನೆಯಿಲ್ಲದೆ ಎಲ್ಲಿಯೂ ಯಾರಿಗೂ ಐಶ್ವರ್ಯಾದಿ ಸಂಪತ್ತುಗಳು ಲಭಿಸಲಾರವು. ಧ್ರುವನೇ ಮೊದಲಾದ ಮಹಾಪುರುಷರಿಗೂ ಕೂಡ ಕೇವಲ ತಪಸ್ಸಿನ ಬಲದಿಂದಲೇ ಕೈವಲ್ಯಪದವು ಲಭಿಸಿತು.

೩೫. ಆದಕಾರಣ ನೀನು ವರವನ್ನು ಕೊಡುವೆಯಾದರೆ ಸಕಲರಿಗೂ ಸಮ್ಮತವೆನಿಸಿದ ಯೌವನವನ್ನು ಪಡೆದು ಇಹಲೋಕ ಪರಲೋಕಗಳೆರಡರಲ್ಲಿಯೂ ಮಹಾ ಪದವಿಯನ್ನು ಸಂಪಾದಿಸಿ ಕೊಡುವ ತಪಸ್ಸನ್ನೇ ಆಚರಿಸುವೆನು.

೩೬. ಸಕಲ ಪ್ರಾಣಿಗಳಲ್ಲಿಯೂ, ಅಲಂಬುದ್ಧಿಯನ್ನುಂಟುಮಾಡುವ ಮುದಿತನವೆಂಬ ಅವಸ್ಥೆಗೆ ಧಿಕ್ಕಾರವಿರಲಿ. ವಾರ್ಧಕ್ಯದಿಂದ ಇಂದ್ರಿಯಗಳ ಪಾಟವವು ನಶಿಸಿಹೋಗಲು ಸ್ತ್ರೀಯರೂ ಸಹ ಪರಕೀಯರಂತೆ ವರ್ತಿಸುವರಲ್ಲವೆ.

ವರಂ ಮರಣಮೇವಾಸ್ತು ಮಾ ಜರಾಸ್ತ್ವತಿ ಶೋಚ್ಯಕೃತ್ ।
ಕ್ಷಣಂ ದುಃಖಂ ಚ ಮರಣಂ ಜರಾದುಃಖಂ ಕ್ಷಣೇ ಕ್ಷಣೇ ॥ ೩೭ ॥
ಕಾಂಕ್ಷಂತಿ ದೀರ್ಘತಪಸೇ ಚಿರಮಾಯುರ್ಜಿತೇಂದ್ರಿಯಾಃ ।
ಧನಂ ದಾನಾಯ ಪುತ್ರಾಯ ಕಲತ್ರಂ ಮುಕ್ತಯೇ ಧಿಯಂ ॥ ೩೮ ॥
ವೃದ್ಧಸ್ಯ ವಾರ್ಧಕಂ ಬ್ರಧ್ನಸ್ತತ್‌ಕ್ಷಣಾದಪಹೃತ್ಯ ವೈ ।
ದದೌ ಚ ಚಾರುತಾಹೇತುಂ ತಾರುಣ್ಯಂ ಪುಣ್ಯಸಾಧನಂ ॥ ೩೯ ॥
ಏವಂ ಸ ವೃದ್ಧಹಾರೀತೋ ವಾರಾಣಸ್ಯಾಂ ಮಹಾಮುನಿಃ ।
ಸಂಪ್ರಾಪ್ಯ ಯೌವನಂ ಬ್ರಧ್ನಾತ್ತಪ ಉಗ್ರಂ ಚಚಾರ ಹ ॥ ೪೦ ॥
ವೃದ್ಧೇನಾರಾಧಿತೋ ಯಸ್ಮಾದ್ಧಾರೀತೇನ ತಪಸ್ವಿನಾ ।
ಆದಿತ್ಯೋ ವಾರ್ಧಕಹರೋ ವೃದ್ಧಾದಿತ್ಯಸ್ತತಃ ಸ್ಮೃತಃ ॥ ೪೧ ॥
ವೃದ್ಧಾದಿತ್ಯಂ ಸಮಾರಾಧ್ಯ ವಾರಾಣಸ್ಯಾಂ ಘಟೋದ್ಭವ ।
ಜರಾದುರ್ಗತಿರೋಗಘ್ನಂ ಬಹವಃ ಸಿದ್ಧಿಮಾಗತಾಃ ॥ ೪೨ ॥

---

೩೭. ಇದಕ್ಕಿಂತಲೂ ಕ್ಷಣಮಾತ್ರದಲ್ಲಿ ಸಂಭವಿಸುವ ಮರಣವೇ ಉತ್ತಮವೆಂದು ಆಶಿಸಬಹುದು. ಅನೇಕ ಶೋಕಗಳಿಗೆ ನಿದಾನವೆನಿಸಿದ ವಾರ್ಧಕ್ಯವು ಯಾರಿಗೂ ಉಂಟಾಗದಿರಲಿ. ಮರಣವು ಕ್ಷಣಕಾಲೀನವಾದ ದುಃಖವಾದರೆ ಜರೆಯು ಕ್ಷಣಕ್ಷಣಕ್ಕೂ ದುಃಖಗಳನ್ನು ತಂದೊಡ್ಡುವುದು.

೩೮. ಜಿತೇಂದ್ರಿಯರಾದ ಮನುಷ್ಯೋತ್ತಮರು ದೀರ್ಘವಾದ ತಪಸ್ಸನ್ನು ಮಾಡುವುದಕ್ಕಾಗಿಯೇ ಚಿರಾಯುಸ್ಸನ್ನೂ, ದಾನವನ್ನು ಮಾಡಲು ಮಾತ್ರ ಧನವನ್ನೂ, ಸಂತಾನೋತ್ಪಾದನಕ್ಕಾಗಿಯೇ ಪತ್ನಿಯನ್ನೂ, ಮೋಕ್ಷವನ್ನು ಪಡೆಯುವುದಕ್ಕಾಗಿಯೇ ಸದ್ಬುದ್ಧಿಯನ್ನೂ ಅಪೇಕ್ಷಿಸುವರು."

೩೯. ವೃದ್ಧನಾದ ಹಾರೀತನ ಈ ಮಾತುಗಳನ್ನು ಕೇಳಿ, ಸೂರ್ಯಭಗವಂತನು ಆತನ ಮುಪ್ಪನ್ನು ಕ್ಷಣಮಾತ್ರದಲ್ಲಿಯೇ ಕಳೆದು, ಅಂಗಸೌಷ್ಠವಕ್ಕೆ ಕಾರಣಭೂತವೂ, ಪುಣ್ಯಸಾಧನೆಗೆ ಅನುಕೂಲವೂ ಆದ ಯೌವನವನ್ನು ಆತನಿಗೆ ಅನುಗ್ರಹಿಸಿದನು.

೪೦. ಇಂತು ಮಹಾಮುನಿಯಾದ ಆ ವೃದ್ಧಹಾರೀತನು ಸೂರ್ಯದೇವನಿಂದ ಯೌವನಾವಸ್ಥೆಯನ್ನು ಪಡೆದು ವಾರಾಣಸಿಯಲ್ಲಿಯೇ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

೪೧. ವೃದ್ಧನೂ, ತಪೋನಿರತನೂ ಆದ ಹಾರೀತನಿಂದ ಪೂಜೆಯನ್ನು ಸ್ವೀಕರಿಸಿದ ಕಾರಣದಿಂದಲೂ, ಆತನ ವಾರ್ಧಕ್ಯವನ್ನು ಕಳೆದುದರಿಂದಲೂ ಆ ಆದಿತ್ಯನಿಗೆ ವೃದ್ಧಾದಿತ್ಯನೆಂಬ ಹೆಸರಾಯಿತು.

೪೨. ಕುಂಭಸಂಭವನಾದ ಅಗಸ್ತ್ಯನೆ! ವಾರಾಣಸೀ ಕ್ಷೇತ್ರದಲ್ಲಿರುವ

ವೃದ್ಧಾದಿತ್ಯಂ ನಮಸ್ಕೃತ್ಯ ವಾರಾಣಸ್ಯಾಂ ರವೌ ನರಃ ।
ಲಭೇದಭೀಪ್ಸಿತಾಂ ಸಿದ್ಧಿಂ ನ ಕ್ವಚಿದ್ದುರ್ಗತಿಂ ಲಭೇತ್ ॥ ೪೩ ॥
ಸ್ಕಂದ ಉವಾಚ :—
ಅತಃ ಪರಂ ಶೃಣು ಮುನೇ ಕೇಶವಾದಿತ್ಯಮುತ್ತಮಂ ।
ಯಥಾ ತು ಕೇಶವಂ ಪ್ರಾಪ್ಯ ಸವಿತಾ ಜ್ಞಾನಮಾಪ್ತವಾನ್ ॥ ೪೪ ॥
ವ್ಯೋಮ್ನಿ ಸಂಚರಮಾಣೇನ ಸಪ್ತಾಶ್ವೇನಾದಿಕೇಶವಃ ।
ಏಕದಾದರ್ಶಿ ಭಾವೇನ ಪೂಜಯನ್ ಲಿಂಗಮೈಶ್ವರಂ ॥ ೪೫ ॥
ಕೌತುಕಾದಿವ ಉತ್ತೀರ್ಯ ಹರೇ ರವಿರುಪಾವಿಶತ್ ।
ನಿಃಶಬ್ದೋ ನಿಶ್ಚಲಃ ಸ್ವಸ್ಥೋ ಮಹಾಶ್ಚರ್ಯಸಮನ್ವಿತಃ ॥ ೪೬ ॥
ಪ್ರತೀಕ್ಷಮಾಣೋಽವಸರಂ ಕಿಂಚಿತ್ಪ್ರಷ್ಟುಮನಾ ಹರಿಂ ।
ಹರಿಂ ವಿಸರ್ಜಿತಾರ್ಚಂ ಚ ಪ್ರಣನಾಮ ಕೃತಾಂಜಲಿಃ ॥ ೪೭ ॥

---

ಈ ವೃದ್ಧಾದಿತ್ಯನನ್ನು ಪೂಜೆಮಾಡಿ, ಮುಪ್ಪು, ದುರ್ಗತಿ, ರೋಗಗಳನ್ನು ನಾಶಗೊಳಿಸುವ ಈತನ ಅನುಗ್ರಹದಿಂದ ಹಿಂದೆ ಅನೇಕರು ಸಿದ್ಧಿಯನ್ನು ಪಡೆದಿರುವರು.

೪೩. ಕಾಶಿಯ ನಿವಾಸಿಯಾದ ವೃದ್ಧಾದಿತ್ಯನಿಗೆ ಭಾನುವಾರದ ದಿನ ನಮಸ್ಕಾರವನ್ನು ಮಾಡಿದ ಮನುಷ್ಯನು ಮನಸ್ಸಿನಲ್ಲಿ ಕಾಮಿಸಿದ ಸಿದ್ಧಿಯನ್ನು ಪಡೆಯುವುದಲ್ಲದೆ ಎಂದಿಗೂ ದಾರಿದ್ರ್ಯಾದಿ ದುರ್ಗತಿಯನ್ನು ಹೊಂದುವುದಿಲ್ಲ.

೪೪. ಸ್ಕಂದನು ಹೇಳುತ್ತಾನೆ :—ಬಳಿಕ ಉತ್ತಮವಾದ ಕೇಶವಾದಿತ್ಯನ ವಿಷಯವನ್ನು ಹೇಳುವೆನು. ಮಹಾಮುನಿಯೆ! ಕೇಳು. ಸೂರ್ಯನು ಶ್ರೀಮನ್ನಾರಾಯಣನನ್ನು ಪ್ರಸನ್ನೀಕರಿಸಿಕೊಂಡು ಜ್ಞಾನವನ್ನು ಪಡೆದ ವಿಧಾನವನ್ನು ನಿರೂಪಿಸುವೆನು.

೪೫. ಒಂದು ದಿನ ಸಪ್ತಾಶ್ವಗಳಿಂದ ಕೂಡಿದ ರಥದಲ್ಲಿ ಸೂರ್ಯನು ಆಕಾಶಮಾರ್ಗದಲ್ಲಿ ಸಂಚರಿಸುತ್ತಿರಲು ನಾರಾಯಣನು ಭಕ್ತಿಭಾವಭರಿತನಾಗಿ ಮಾಹೇಶ್ವರಲಿಂಗವೊಂದನ್ನು ಪೂಜಿಸುತ್ತಿರುವುದನ್ನು ಕಂಡನು.

೪೬. ಅತ್ಯಂತ ಕುತೂಹಲದಿಂದ ಕೂಡಿದವನಾಗಿ ರವಿಯು ತನ್ನ ರಥದಿಂದ ಭೂಲೋಕಕ್ಕಿಳಿದು ಮಾತನಾಡದೆ, ನಿಶ್ಚಲನಾಗಿ, ಮಹಾಶ್ಚರ್ಯಭರಿತನಾಗಿ, ಶ್ರೀ ಹರಿಯ ಸಮೀಪದಲ್ಲಿ ಸ್ವಸ್ಥವಾಗಿ ಕುಳಿತುಕೊಂಡನು.

೪೭. ವಿಷಯವನ್ನು ಕೇಳಬಯಸಿದವನಾಗಿ ಶ್ರೀಮನ್ನಾರಾಯಣನನ್ನು ನೋಡುತ್ತ ಆತನ ಸಮಯವನ್ನೇ ಕಾಯುತ್ತಿದ್ದನು. ಹರಿಯು ಪೂಜೆಯನ್ನು ಮುಗಿಸಿದಮೇಲೆ ಅಂಜಲಿಬಂಧವನ್ನು ಮಾಡಿಕೊಂಡು ಅತನಿಗೆ ದಂಡಪ್ರಣಾಮವನ್ನು ಮಾಡಿದನು.

ಸ್ವಾಗತಂ ತೇ ಹರಿಃ ಪ್ರಾಹ ಬಹುಮಾನಪುರಸ್ಸರಂ ।
ಸ್ವಾಭ್ಯಾಶ ಆಸಯಾಮಾಸ ಭಾಸ್ವಂತಂ ನತಕಂಧರಂ ॥ ೪೮ ॥
ಅಥಾವಸರಮಾಲೋಕ್ಯ ಲೋಕಚಕ್ಷುರಧೋಕ್ಷಜಂ ।
ನತ್ವಾ ವಿಜ್ಞಾಪಯಾಮಾಸ ಕೃತಾನುಜ್ಞೋಽಸುರಾರಿಣಾ ॥ ೪೯ ॥

ರವಿರುವಾಚ :—

ಅಂತರಾತ್ಮಾಸಿ ಜಗತಾಂ ವಿಶ್ವಂಭರ ಜಗತ್ಪತೇ ।
ತವಾಪಿ ಪೂಜ್ಯಃ ಕೋಽಪ್ಯಸ್ತಿ ಜಗತ್ಪೂಜ್ಯಾತ್ರ ಮಾಧವ ॥ ೫೦ ॥
ತ್ವತ್ತಶ್ಚಾವಿರ್ಭವೇದೇತತ್ತ್ವಯಿ ಸರ್ವಂ ಪ್ರಲೀಯತೇ ।
ತ್ವಮೇವ ಪಾತಾ ಸರ್ವಸ್ಯ ಜಗತೋ ಜಗತಾಂ ನಿಧೇ ॥ ೫೧ ॥
ಇತ್ಯಾಶ್ಚರ್ಯಂ ಸಮಾಲೋಕ್ಯ ಪ್ರಾಪ್ತೋಽಸ್ಮ್ಯತ್ರ ತವಾಂತಿಕಂ ।
ಕಿಮಿದಂ ಪೂಜ್ಯತೇ ನಾಥ ಭವತಾ ಭವತಾಪಹೃತ್ ॥ ೫೨ ॥

---

೪೮. ಹರಿಯೂ ಸಹ ಸೂರ್ಯನನ್ನು ಮರ್ಯಾದೆಯಿಂದ ಬರಮಾಡಿಕೊಂಡು "ನಿನಗೆ ಸುಸ್ವಾಗತವಿರಲಿ" ಎಂಬುದಾಗಿ ಹೇಳಿದನು. ಅಲ್ಲದೆ ತಲೆಯನ್ನು ಬಗ್ಗಿಸಿ ವಿನೀತನಾಗಿದ್ದ ಆತನನ್ನು ತನ್ನ ಸಮೀಪದಲ್ಲಿಯೇ ಕುಳ್ಳಿರಿಸಿಕೊಂಡನು.

೪೯. ಬಳಿಕ ಸುಸಮಯವನ್ನರಿತು ಲೋಕನೇತ್ರನೆನಿಸಿದ ಸೂರ್ಯನು ಶ್ರೀಮನ್ನಾರಾಯಣನನ್ನು ಕುರಿತು ನಮಸ್ಕಾರವನ್ನು ಮಾಡಿ, ದೈತ್ಯದಮನನಾದ ಆತನಿಂದ ಅನುಜ್ಞೆಯನ್ನು ಪಡೆದು, ಇಂತೆಂದು ವಿಜ್ಞಾಪಿಸಿಕೊಂಡನು.

೫೦. ಸೂರ್ಯನು ಹೇಳುತ್ತಾನೆ:—ಬ್ರಹ್ಮಾಂಡವನ್ನು ರಕ್ಷಿಸುತ್ತಿರುವ ಜಗನ್ನಾಥನಾದ ಮಾಧವನೇ! ನೀನೇ ಸಕಲ ಪ್ರಾಣಿಗಳಿಗೂ ಅಂತರಾತ್ಮನಾಗಿರುವೆ. ಲೋಕ ಪೂಜ್ಯನಾದ ನಿನಗೂ ಪೂಜ್ಯನಾದ ಮತ್ತೊಬ್ಬನು ಯಾವನು ತಾನೆ ಈ ಸ್ಥಳದಲ್ಲಿ ನೆಲಸಿರುವನು?

೫೧. ನಿನ್ನಿಂದಲೇ ಈ ಬ್ರಹ್ಮಾಂಡವೆಲ್ಲವೂ ನಾಮರೂಪಾತ್ಮಕವಾಗಿ ಹೊರಬಂದಿರುವುದು. ನಿನ್ನಲ್ಲಿಯೇ ಕಾಲಾಂತರದಲ್ಲಿ ಲಯವನ್ನೂ ಹೊಂದುವುದು. ಸಕಲ ಲೋಕಗಳಿಗೂ ನಿಧಿಸ್ವರೂಪನಾದ ನೀನೇ ಈ ಜಗತ್ತಿಗೆ ರಕ್ಷಕನಾಗಿರುವೆ.

೫೨. ಆದರೂ ನೀನು ಪೂಜೆಮಾಡುತ್ತಿರುವ ಆಶ್ಚರ್ಯವನ್ನು ಕಂಡು ಈಗ ನಿನ್ನ ಸಮೀಪಕ್ಕೆ ಬಂದಿರುವೆನು. ಒಡೆಯನೆ! ಭಕ್ತರಿಗೆ ಸಂಸಾರದ ತೊಡಕುಗಳನ್ನು ಕಳೆಯುವ ನಿನ್ನಿಂದಲೇ ಪೂಜೆಗೊಳ್ಳುತ್ತಿರುವ ಈ ಮೂರ್ತಿಯು ಯಾವುದು?

ಇತಿ ಶ್ರುತ್ವಾ ಹೃಷೀಕೇಶಃ ಸಹಸ್ರಾಂಶೋರುದೀರಿತಂ ।
ಉಚ್ಚೈರ್ಮಾ ಶಂಸ ಸಪ್ತಾಶ್ವೇನ್ ವಾರಯುಸ್ಕರಸಂಜ್ಞಯಾ ॥ ೫೩ ॥

ಶ್ರೀ ವಿಷ್ಣುರುವಾಚ :—

ದೇವದೇವೋ ಮಹಾದೇವೋ ನೀಲಕಂಠ ಉಮಾಪತಿಃ ।
ಏಕ ಏವ ಹಿ ಪೂಜ್ಯೋಽತ್ರ ಸರ್ವಕಾರಣಕಾರಣಂ ॥ ೫೪ ॥
ಅತ್ರ ತ್ರಿಲೋಚನಾದನ್ಯಂ ಸಮರ್ಚಯತಿ ಯೋಽಲ್ಪಧೀಃ ।
ಸಲೋಚನೋಽಪಿ ವಿಜ್ಞೇಯೋ ಲೋಚನಾಭ್ಯಾಂ ವಿವರ್ಜಿತಃ ॥ ೫೫ ॥
ಏಕೋ ಮೃತ್ಯುಂಜಯಃ ಪೂಜ್ಯೋ ಜನ್ಮಮೃತ್ಯುಜರಾಹರಃ ।
ಮೃತ್ಯುಂಜಯಂ ಕಿಲಾಭ್ಯರ್ಚ್ಯ ಶ್ವೇತೋ ಮೃತ್ಯುಂಜಯೋಽಭವತ್ ॥ ೫೬ ॥
ಕಾಲಕಾಲಂ ಸಮಾರಾಧ್ಯ ಭೃಂಗೀ ಕಾಲಂ ಜಿಗಾಯ ವೈ ।
ಶೈಲಾದಿಮಪಿ ತತ್ಯಾಜ ಮೃತ್ಯುರ್ಮೃತ್ಯುಂಜಯಾರ್ಚಕಂ ॥ ೫೭ ॥

---

೫೩. ಸೂರ್ಯನು ಹೇಳಿದ ಈ ಮಾತುಗಳನ್ನು ಕೇಳಿ ಹೃಷೀಕೇಶನು "ಎಲೈ ಸಪ್ತಾಶ್ವನೆ! ಈ ವಿಧವಾದ ದೈವದ್ರೋಹದ ಮಾತುಗಳನ್ನು ಗಟ್ಟಿಯಾಗಿ ಆಡಬೇಡ" ಎಂಬುದನ್ನು ಸೂಚಿಸುವಂತೆ ಕೈಸಂಜ್ಞೆಯನ್ನು ಮಾಡಿದನು.

೫೪. ಶ್ರೀ ವಿಷ್ಣುವು ಹೇಳುತ್ತಾನೆ:—ದೇವತಾಸಾರ್ವಭೌಮನೂ, ನೀಲಕಂಠನೂ, ಪಾರ್ವತೀನಾಥನೂ ಆದ ಮಹಾದೇವನೊಬ್ಬನೇ ಇಲ್ಲಿ ಸಕಲರ ಪೂಜೆಗಳನ್ನೂ ಸ್ವೀಕರಿಸಲು ಅರ್ಹನು. ಆತನೇ ಬ್ರಹ್ಮಾಂಡ ವ್ಯಾಪಾರಕ್ಕೆ ಕಾರಣರಾದ ನಮ್ಮೆಲ್ಲರಿಗೂ ಕಾರಣಭೂತನಾಗಿರುವನು.

೫೫. ಅಲ್ಪಬುದ್ಧಿಯಾದ ಯಾವ ಮಾನವನು ಈ ಕ್ಷೇತ್ರದಲ್ಲಿ ತ್ರಿನೇತ್ರನಾದ ಮಹೇಶ್ವರನನ್ನುಳಿದು ಬೇರೊಬ್ಬನನ್ನು ಅರ್ಚಿಸುವನೊ, ಅವನು ಕಣ್ಣುಗಳಿರುವವನಾದರೂ ಲೋಚನಹೀನನಾದವನೆಂದೇ ತಿಳಿಯಲ್ಪಡುವನು.

೫೬. ಭಜಕರ ಜನ್ಮಮೃತ್ಯುಜರಾದಿಗಳನ್ನು ಪರಿಹರಿಸುವ ಮೃತ್ಯುಂಜಯನೊಬ್ಬನೇ ಲೋಕವಂದಿತನಾಗಿರುವನು. ಆತನನ್ನೇ ಪೂಜಿಸಿ ಪೂರ್ವದಲ್ಲಿ ಶ್ವೇತಮಹಾರಾಜನು* ಮೃತ್ಯುವನ್ನೂ ಸಹ ಜಯಿಸಿದವನಾದನು.

೫೭. ಯಮಧರ್ಮರಾಯನಿಗೂ ಯಮನೆನಿಸಿದ ಆತನನ್ನು ಆರಾಧಿಸಿಯೇ

---

* ಪೂರ್ವದಲ್ಲಿ ಶ್ವೇತರಾಜನೆಂಬ ಮಹಾ ಶಿವಭಕ್ತನೊಬ್ಬನು ಪರಮೇಶ್ವರನ ಪೂಜೆಯನ್ನು ನಿಶ್ಚಲಭಕ್ತಿಯಿಂದ ಮಾಡುತ್ತಿರಲು ಆತನಿಗೆ ದೇಹವಿಯೋಗದ ಕಾಲವೊದಗಿತು. ತೇಜೋಮಯನಾದ ಆತನ ಸಮೀಪಕ್ಕೆ ಹೋಗಲಾರದೆ ಯಮಕಿಂಕರರೂ ಯಮನೂ ತಳಮಳಿಸುತ್ತಿರಲು, ಕಾಲನು ಉದ್ಧಟತನದಿಂದ ಖಡ್ಗವನ್ನು ಒರೆಯಿಂದ ಸೆಳೆದು ಆತನ ಬಳಿಗೆ ಬರುತ್ತಿರುವಾಗ ಪರಮೇಶ್ವರನ ಮೂರನೆಯ ಕಣ್ಣಿನ ಬೆಂಕಿಗೆ ತುತ್ತಾಗಿಹೋದನು. ಬಳಿಕ ಆ ಶ್ವೇತರಾಜನ ಪ್ರಾರ್ಥನೆಯನ್ನೇ ಅಂಗೀಕರಿಸಿ ಪರಶಿವನು ಪುನಃ ಕಾಲನಿಗೆ ಮುನ್ನಿನ ರೂಪವನ್ನೇ ಅನುಗ್ರಹಿಸಿದನು. (ಇದೇ ಪುರಾಣದ ಕೇದಾರ ಖಂಡದ ಮುಪ್ಪತ್ತೆರಡನೆಯ ಅಧ್ಯಾಯವನ್ನು ನೋಡಿ.)

ವಿಜಿಗ್ಯೇ ತ್ರಿಪುರಂ ಯಸ್ತು ಹೇಲಯೈಕೇಷುಣೇಕ್ಷಣಾತ್ ।
ತಂ ಸಮಭ್ಯರ್ಚ್ಯ ಭೂತೇಶಂ ಕೋ ನ ಪೂಜ್ಯತಮೋ ಭವೇತ್ ॥ ೫೮ ॥
ತ್ರಿಜಗಜ್ಜಯಿನೋ ಹೇತೋಸ್ತ್ರ್ಯಕ್ಷಸ್ಯಾರಾಧನಂ ಪರಂ ।
ಕೋ ನಾರಾಧಯತಿ ಬ್ರಧ್ನ ಸಾರಸ್ಯ ಸ್ಮರವಿದ್ವಿಷಃ ॥ ೫೯ ॥
ಯಸ್ಯಾಕ್ಷಿಪಕ್ಷ್ಮಸಂಕೋಚಾಜ್ಜಗತ್ಸಂಕೋಚಮೇತ್ಯಹೋ ।
ವಿಕಸ್ವರಂ ವಿಕಾಸಾಚ್ಚ ಕಸ್ಯ ಪೂಜ್ಯತಮೋ ನ ಸಃ ॥ ೬೦ ॥
ಶಂಭೋರ್ಲಿಂಗಂ ಸಮಭ್ಯರ್ಚ್ಯ ಪುರುಷಾರ್ಥಚತುಷ್ಟಯಂ ।
ಪ್ರಾಪ್ನೋತ್ಯತ್ರ ಪುಮಾನ್ಸದ್ಯೋ ನಾತ್ರ ಕಾರ್ಯಾ ವಿಚಾರಣಾ ॥ ೬೧ ॥
ಸಮರ್ಚ್ಯ ಶಾಂಭವಂ ಲಿಂಗಮಪಿ ಜನ್ಮಶತಾರ್ಜಿತಂ ।
ಪಾಪಪುಂಜಂ ಜಹಾತ್ಯೇವ ಪುಮಾನತ್ರ ಕ್ಷಣಾಧ್ರುವಂ ॥ ೬೨ ॥

---

ಭೃಂಗಿಪಾರ್ಷದನು ಯಮನನ್ನು ಜಯಿಸಿದನು. ಮೃತ್ಯುಂಜಯನನ್ನು ಪೂಜಿಸಿದ ನಂದಿಯನ್ನೂ ಸಹ ಮೃತ್ಯುದೇವತೆಯು ಕೈಬಿಡಬೇಕಾಯಿತು.

೫೮. ದುರ್ಗಮವಾದ ತ್ರಿಪುರವನ್ನೂ ಸಹ ಕೇವಲ ಲೀಲೆಯಿಂದಲೇ ಒಂದು ಬಾಣವನ್ನು ಬಿಟ್ಟ ಮಾತ್ರದಿಂದ ಯಾವನು ನಿಗ್ರಹಿಸಿದನೊ, ಭೂತನಾಯಕನಾದ ಅಂತಹ ಪರಮೇಶ್ವರನನ್ನು ಪೂಜಿಸಿದ ಯಾವನು ತಾನೆ ಲೋಕವಂದಿತನಾಗುವುದಿಲ್ಲ?

೫೯. ಎಲೈ ಸೂರ್ಯನೆ! ಮೂರುಲೋಕಗಳ ವಿಜಯಕ್ಕೂ ಕಾರಣಭೂತನೂ, ತ್ರಿನೇತ್ರನೂ ಆದ ಆತನ ಆರಾಧನೆಯೇ ಸಕಲ ಪುರುಷಾರ್ಥಗಳ ಸಾಧನೆಗೂ ಉತ್ತಮೋಪಾಯವಾಗಿರುವುದು. ಬ್ರಹ್ಮಾಂಡದ ಸಾರಭೂತನೂ ಮನ್ಮಥವೈರಿಯೂ ಆದ ಆತನನ್ನು ಯಾವನು ತಾನೆ ಪೂಜೆಮಾಡುವುದಿಲ್ಲ?

೬೦. ಯಾವನ ಕಣ್ಣುರೆಪ್ಪೆಗಳ ಮುಚ್ಚುವಿಕೆಯಿಂದಲೇ ಈಗ ಕಾಣುತ್ತಿರುವ ಈ ಬ್ರಹ್ಮಾಂಡವೆಲ್ಲವೂ ಕಾರಣಲಯವನ್ನು ಹೊಂದುವುದೊ, ಮತ್ತು ಯಾರ ನೇತ್ರೋನ್ಮೀಲನದಿಂದ ವಿಕಾಸವುಳ್ಳದಾಗುವುದೊ, ಅಂತಹ ಮಹಾಮಹಿಮನಾದ ಪರಮೇಶ್ವರನು ಯಾರಿಗೆ ಪೂಜ್ಯನಾಗದಿರುವನು?

೬೧. ಈ ಕ್ಷೇತ್ರದಲ್ಲಿ ಶಿವನ ಲಿಂಗವನ್ನು ಪೂಜಿಸಿದ ಮಾನವನು ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ನಿಮಿಷಮಾತ್ರದಲ್ಲಿಯೇ ಪಡೆಯುವನು. ಈ ವಿಷಯದಲ್ಲಿ ಸಂದೇಹಪಡಬಾರದು.

೬೨. ಯಾವ ಮನುಷ್ಯನಾದರೂ ಪರಮೇಶ್ವರನ ಲಿಂಗವನ್ನು ಆರಾಧಿಸಿದರೆ ನಿಶ್ಚಯವಾಗಿಯೂ ಕ್ಷಣಕಾಲದಲ್ಲಿಯೇ ಹಿಂದಿನ ನೂರಾರು ಜನ್ಮಗಳಲ್ಲಿ ಸಂಪಾದಿಸಿದ ಪಾಪರಾಶಿಯನ್ನೂ ಕಳೆದುಕೊಳ್ಳುವುದರಲ್ಲಿ ಸಂಶಯವಿಲ್ಲ.

ಕಿಂ ಕಿಂ ನ ಸಂಭವೇದತ್ರ ಶಿವಲಿಂಗಸಮರ್ಚನಾತ್ ।
ಪುತ್ರಾಃ ಕಲತ್ರಕ್ಷೇತ್ರಾಣಿ ಸ್ವರ್ಗೋ ಮೋಕ್ಷೋಽಪ್ಯಸಂಶಯಮ್ ॥ ೬೩ ॥
ತ್ರೈಲೋಕ್ಯೈಶ್ವರ್ಯಸಂಪತ್ತಿರ್ಮಯಾ ಪ್ರಾಪ್ತಾ ಸಹಸ್ರಗೋ ।
ಶಿವಲಿಂಗಾರ್ಚನಾದೇಕಾತ್ಸತ್ಯಂ ಸತ್ಯಂ ಪುನಃ ಪುನಃ ॥ ೬೪ ॥
ಅಯಮೇವ ಪರೋ ಯೋಗಸ್ತ್ವಿದಮೇವ ಪರಂ ತಪಃ ।
ಇದಮೇವ ಪರಂ ಜ್ಞಾನಂ ಸ್ಥಾಣುಲಿಂಗಂ ಯದರ್ಚ್ಯತೇ ॥ ೬೫ ॥
ಯೈರ್ಲಿಂಗಂ ಸಕೃದಪ್ಯತ್ರ ಪೂಜಿತಂ ಪಾರ್ವತೀಪತೇಃ ।
ಕುತೋ ದುಃಖಭಯಂ ತೇಷಾಂ ಸಂಸಾರೇ ದುಃಖಭಾಜನೇ ॥ ೬೬ ॥
ಸರ್ವಂ ಪರಿತ್ಯಜ್ಯ ರವೇ ಯೋ ಲಿಂಗಂ ಶರಣಂ ಗತಃ ।
ನ ತಂ ಪಾಪಾನಿ ಬಾಧಂತೇ ಮಹಾಂತ್ಯಪಿ ದಿವಾಕರ ॥ ೬೭ ॥
ಲಿಂಗಾರ್ಚನೇ ಭವೇದ್ಬುದ್ಧಿಸ್ತೇಷಾಮೇವಾತ್ರ ಭಾಸ್ಕರ ।
ಯೇಷಾಂ ಪುನರ್ಭವಚ್ಛೇದಂ ಚಿಕೀರ್ಷತಿ ಮಹೇಶ್ವರಃ ॥ ೬೮ ॥

---

೬೩. ಶಿವಲಿಂಗವನ್ನು ಪೂಜಿಸುವ ಭಕ್ತರಿಗೆ ಯಾವ ಯಾವ ಇಷ್ಟಾರ್ಥಗಳು ಕೈಗೂಡಲಾರವು? ಸತ್ಪುತ್ರರು, ಪತ್ನಿ, ಭೂಮಿ, ಸ್ವರ್ಗ, ಮೋಕ್ಷಗಳೂ ಸಹ ನಿಸ್ಸಂಶಯವಾಗಿಯೂ ಲಭಿಸುವುವು.

೬೪. ಎಲೈ ಸಹಸ್ರರಶ್ಮಿಯಾದ ಸೂರ್ಯನೆ! ಶಿವಲಿಂಗಾರ್ಚನೆಯೆಂಬ ಕೇವಲ ಒಂದು ಸಾಧನದಿಂದಲೇ ನನಗೆ ಮೂರು ಲೋಕಗಳ ಪಾಲಕತನದ ಐಶ್ವರ್ಯವು ಲಭಿಸಿರುವುದು. ಈ ಮಾತನ್ನು ಸತ್ಯವೆಂದು ಮತ್ತೆ ಮತ್ತೆ ಶಪಥ ಪೂರ್ವಕವಾಗಿ ಹೇಳುತ್ತಿರುವೆನು.

೬೫. ಸ್ಥಾಣುಲಿಂಗದ ಪರಿಚರ್ಯೆಯೆಂಬ ಕಾರ್ಯವೇ ಸರ್ವಶ್ರೇಷ್ಠವಾದ ಯೋಗಾಭ್ಯಾಸವು. ಅದೇ ಉತ್ತಮ ತಪಶ್ಚರಣೆಯು. ಅದೇ ಮೋಕ್ಷಪ್ರದವಾದ ಜ್ಞಾನವೆನಿಸಿರುವುದು.

೬೬. ಒಮ್ಮೆಯಾದರೂ ಪಾರ್ವತೀರಮಣನ ಲಿಂಗವನ್ನು ಈ ಕ್ಷೇತ್ರದಲ್ಲಿ ಯಾರು ಅರ್ಚಿಸುವರೋ, ಅಂತಹವರಿಗೆ ಕೇವಲ ದುಃಖಗಳ ಭಾಜನವೆನಿಸಿದ ಸಂಸಾರದೆಸೆಯಲ್ಲಿದ್ದರೂ ಕೂಡ ತಾಪತ್ರಯಗಳ ಭಯವುಂಟಾಗಲಾರದು.

೬೭. ಅಯ್ಯಾ ದಿವಾಕರನೆ! ಯಾವನು ಸಕಲವ್ಯಾಪಾರಗಳನ್ನೂ ಪರಿತ್ಯಜಿಸಿ ಶಿವಲಿಂಗದ ಸಮರ್ಚನೆಯಲ್ಲಿಯೇ ಕಾಲವನ್ನು ಕಳೆಯುತ್ತ ಅದನ್ನೇ ಶರಣು ಹೊಕ್ಕಿರುವನೊ, ಅವನನ್ನು ಎಂತಹ ಮಹಾಪಾತಕಗಳಾದರೂ ಬಾಧಿಸಲಾರವು.

೬೮. ಸೂರ್ಯನೆ! ನಿನಗೆ ಮತ್ತೊಂದು ರಹಸ್ಯವನ್ನು ತಿಳಿಸುವೆನು. ಮಹಾದೇವನು ಯಾರಿಗೆ ಜನನಮರಣರೂಪವಾದ ಸಂಸಾರದಿಂದ ಬಿಡುಗಡೆಯನ್ನು ಮಾಡಲೆಳಸುವನೊ, ಅವರಿಗೆ ಮಾತ್ರ ಈ ಪ್ರದೇಶದಲ್ಲಿ ಶಿವಲಿಂಗದ ಪೂಜೆಯನ್ನು ಮಾಡುವ ಸದ್ಬುದ್ಧಿಯುಂಟಾಗುವುದು.

ನ ಲಿಂಗಾರಾಧನಾತ್ಪುಣ್ಯಂ ತ್ರಿಷು ಲೋಕೇಷು ಚಾಪರಂ ।
ಸರ್ವತೀರ್ಥಾಭಿಷೇಕಃ ಸ್ಯಾಲ್ಲಿಂಗಸ್ನಾನಾಂಬುಸೇವನಾತ್ ॥ ೬೯ ॥
ತಸ್ಮಾಲ್ಲಿಂಗಂ ತ್ವಮಪ್ಯರ್ಕ ಸಮರ್ಚಯ ಮಹೇಶಿತುಃ ।
ಸಂಪ್ರಾಪ್ತುಂ ಪರಮಾಂ ಲಕ್ಷ್ಮೀಂ ಮಹಾತೇಜೋಽಭಿಜೃಂಭಣೀಂ ॥ ೭೦ ॥
ಇತಿ ಶ್ರುತ್ವಾ ಹರೇರ್ವಾಕ್ಯಂ ತದಾರಭ್ಯ ಸಹಸ್ರಗುಃ ।
ವಿಧಾಯ ಸ್ಫಾಟಿಕಂ ಲಿಂಗಂ ಮುನೇಽದ್ಯಾಪಿ ಸಮರ್ಚಯೇತ್ ॥ ೭೧ ॥
ಗುರುತ್ವೇನ ತದಾಕಲ್ಪ್ಯ ನಿವಸ್ವಾನಾದಿಕೇಶವಂ ।
ತತ್ರೋಪತಿಷ್ಠತೇಽದ್ಯಾಪಿ ಉತ್ತರೇಣಾದಿಕೇಶವಾತ್ ॥ ೭೨ ॥
ಅತಃ ಸ ಕೇಶವಾದಿತ್ಯಃ ಕಾಶ್ಯಾಂ ಭಕ್ತತಮೋನುದಃ ।
ಸಮರ್ಚಿತಃ ಸದಾ ದೇಯಾನ್ಮನಸೋ ವಾಂಛಿತಂ ಫಲಂ ॥ ೭೩ ॥
ಕೇಶವಾದಿತ್ಯಮಾರಾಧ್ಯ ವಾರಾಣಸ್ಯಾಂ ನರೋತ್ತಮಃ ।
ಪರಮಂ ಜ್ಞಾನಮಾಪ್ನೋತಿ ಯೇನ ನಿರ್ವಾಣಭಾಗ್ಭವೇತ್ ॥ ೭೪ ॥

---

೬೯. ಲಿಂಗಾರಾಧನೆಗಿಂತ ಪುಣ್ಯತಮವಾದ ಕರ್ತವ್ಯವು ಮೂರುಲೋಕಗಳಲ್ಲಿಯೂ ಮತ್ತೊಂದಿಲ್ಲವು. ಲಿಂಗಕ್ಕೆ ಅಭಿಷೇಕಮಾಡಿದ ತೀರ್ಥೋದಕವನ್ನು ಸೇವಿಸುವುದರಿಂದ ಭೂಮಂಡಲದ ಸಕಲ ತೀರ್ಥಗಳಲ್ಲಿಯೂ ಸ್ನಾನಗಳನ್ನು ಮಾಡಿದ ಫಲವು ಲಭಿಸುವುದು ಖಂಡಿತವು.

೭೦. ಎಲೈ ಸೂರ್ಯನೆ! ಮಹಾತೇಜಸ್ಸನ್ನು ನಿನ್ನಲ್ಲಿ ಪ್ರಕಾಶಗೊಳಿಸುವುದಾದ ಪರಮೈಶ್ವರ್ಯವನ್ನು ಪಡೆಯಬೇಕೆಂಬ ಬಯಕೆಯಿದ್ದರೆ ನೀನೂ ಸಹ ಮಹೇಶ್ವರನ ಲಿಂಗವನ್ನು ಭಕ್ತಿಯಿಂದ ಪೂಜೆಮಾಡು."

೭೧. ಅಗಸ್ತ್ಯ ಮಹರ್ಷಿಯೆ! ಇಂತೆಂದ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ಸಹಸ್ರಕಿರಣನೂ ಒಂದು ಸ್ಫಟಿಕಲಿಂಗವನ್ನು ನಿರ್ಮಾಣಮಾಡಿ ಸ್ಥಾಪಿಸಿ ಇಂದಿಗೂ ಅದನ್ನು ಪೂಜಿಸುತ್ತಿರುವನು.

೭೨. ಸೂರ್ಯನು ಆದಿಕೇಶವನನ್ನೇ ಗುರುಸ್ಥಾನದಲ್ಲಿ ಸ್ವೀಕರಿಸಿ ಇಂದಿಗೂ ಕೂಡ ಆದಿಕೇಶವಸ್ವಾಮಿಗೆ ಉತ್ತರದಲ್ಲಿ ನೆಲಸಿರುವನು.

೭೩. ಆದುದರಿಂದ ಆ ಮೂರ್ತಿಗೆ ಕೇಶವಾದಿತ್ಯನೆಂಬ ಹೆಸರುಂಟಾಯಿತು. ಕಾಶಿಯಲ್ಲಿ ಆತನು ಭಕ್ತರ ಮನಸ್ಸಿನ ಅಂಧಕಾರವನ್ನು ಕಳೆಯುತ್ತಿರುವನು. ಆತನನ್ನು ಪೂಜಿಸಿದ ಭಕ್ತರ ಮನಸ್ಸಿನ ಅಭೀಷ್ಟವನ್ನು ಯಾವಾಗಲೂ ನೀಡುತ್ತಿರುವನು.

೭೪. ಮನುಜಶ್ರೇಷ್ಠನಾದವನು ಕೇಶವಾದಿತ್ಯನನ್ನು ಆರಾಧನೆಮಾಡಲು ಕಾಶೀಕ್ಷೇತ್ರದಲ್ಲಿ ಸರ್ವೋತ್ತಮವಾದ ಜ್ಞಾನವನ್ನು ಪಡೆಯುವನು. ಆ ಜ್ಞಾನದ ಫಲವಾಗಿ ಮೋಕ್ಷದಲ್ಲಿಯೂ ಭಾಗಿಯಾಗುವನು.

ತತ್ರ ಪಾದೋದಕೇ ತೀರ್ಥೇ ಕೃತಸರ್ವೋದಕಕ್ರಿಯಃ ।
ವಿಲೋಕ್ಯ ಕೇಶವಾದಿತ್ಯಂ ಮುಚ್ಯತೇ ಜನ್ಮಪಾತಕೈಃ ॥ ೭೫ ॥
ಅಗಸ್ತೇ ರಥಸಪ್ತಮ್ಯಾಂ ರವಿವಾರೋ ಯದಾಪ್ಯತೇ ।
ತದಾ ಪಾದೋದಕೇ ತೀರ್ಥೇ ಆದಿಕೇಶವಸನ್ನಿಧೌ ॥ ೭೬ ॥
ಸ್ನಾತ್ವೋಷಸಿ ನರೋ ಮೌನೀ ಕೇಶವಾದಿತ್ಯಪೂಜನಾತ್ ।
ಸಪ್ತಜನ್ಮಾರ್ಜಿತಾತ್ಪಾಪಾನ್ಮುಕ್ತೋ ಭವತಿ ತತ್ಕ್ಷಣಾತ್ ॥ ೭೭ ॥
ಯದ್ಯಜ್ಜನ್ಮಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।
ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥ ೭೮ ॥
ಏತಜ್ಜನ್ಮಕೃತಂ ಪಾಪಂ ಯಚ್ಚ ಜನ್ಮಾಂತರಾರ್ಜಿತಂ ।
ಮನೋವಾಕ್ಕಾಯಜಂ ಯಚ್ಚ ಜ್ಞಾತಾಜ್ಞಾತೇ ಚ ಯೇ ಪುನಃ ॥ ೭೯ ॥
ಇತಿ ಸಪ್ತವಿಧಂ ಪಾಪಂ ಸ್ನಾನಾನ್ಮೇ ಸಪ್ತಸಪ್ತಿಕೇ ।
ಸಪ್ತವ್ಯಾಧಿಸಮಾಯುಕ್ತಂ ಹರೇ ಮಾಕರಿ ಸಪ್ತಮಿ ॥ ೮೦ ॥

---

೭೫. ಅಲ್ಲಿರುವ ಪಾದೋದಕವೆಂಬ ತೀರ್ಥದಲ್ಲಿ ಸ್ನಾನವೇ ಮೊದಲಾದ ಸಕಲ ಕ್ರಿಯೆಗಳನ್ನೂ ಮುಗಿಸಿಕೊಂಡು ಕೇಶವಾದಿತ್ಯನ ದರ್ಶನವನ್ನು ಮಾಡಲು ಒಂದು ಜನ್ಮದಲ್ಲಿ ಮಾಡಿದ ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

೭೬–೭೭. ಎಲೈ ಅಗಸ್ತ್ಯನೆ! ರಥಸಪ್ತಮಿಯ ತಿಥಿಯು ಭಾನುವಾರದ ದಿನದೊಡನೆ ಕೂಡಿಬರಲು ಉತ್ತಮಯೋಗವಾಗುವುದು. ಅಂದು ಆದಿಕೇಶವನ ಸನ್ನಿಧಿಯಲ್ಲಿರುವ ಪಾದೋದಕ ತೀರ್ಥದಲ್ಲಿ (ಗಂಗಾ ಮತ್ತು ವರಣಾನದಿಗಳ ಸಂಗಮದಲ್ಲಿ) ಸ್ನಾನವನ್ನು ಮಾಡಿ ಉಷಃಕಾಲದಲ್ಲಿ ಮೌನವ್ರತವನ್ನು ಧರಿಸಿ ಕೇಶವಾದಿತ್ಯನನ್ನು ಪೂಜಿಸುವ ಮನುಷ್ಯನು ಏಳು ಜನ್ಮಗಳಲ್ಲಿ ಉಪಾರ್ಜಿಸಿದ ಮಹಾಪಾತಕಗಳನ್ನು ಕ್ಷಣಮಾತ್ರದಲ್ಲಿಯೇ ಕಳೆದುಕೊಳ್ಳುವನು.

೭೮. ಈ ಜನ್ಮದಲ್ಲಿ ಮೊದಲಿನಿಂದ ಮಾಡಿದ ಪಾಪದ, ಹಿಂದಿನ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳ ಫಲವಾದ ರೋಗವೂ, ದುಃಖವೂ ಈ ಮಕರ ಮಾಸದ ಸಪ್ತಮಿಯ ಸ್ನಾನದಿಂದ ಕಳೆದುಹೋಗಲಿ.

೭೯–೮೦. ಓ ಮಾಘಸಪ್ತಮಿಯೆ! ಈ ಜನ್ಮದಲ್ಲಿ ಮಾಡಿದ ಪಾಪವು, ಜನ್ಮಾಂತರಗಳಲ್ಲಿ ಸಂಚಿತವಾದ ಪಾತಕವು, ಮನಸ್ಸಿನಿಂದಲೂ ಮಾತಿನಿಂದಲೂ ದೇಹದಿಂದಲೂ ಮಾಡಿದ ಪಾಪಗಳು, ತಿಳಿದೂ ತಿಳಿಯದೆಯೂ ಮಾಡಿದ ಪಾತಕಗಳು ಎಂಬುದಾಗಿ ಪಾಪಗಳು ಏಳು ವಿಧಗಳಾಗಿರುವುವು. ಸೂರ್ಯಾಧಿದೈವತಾಕವಾದ ಮಕರ ಸಪ್ತಮಿಯೆ! ನಾನು ಮಾಡುತ್ತಿರುವ ಸ್ನಾನದ ಫಲವಾಗಿ ಈ ಏಳು ಪ್ರಕಾರಗಳಿಂದ ಕೂಡಿದ ಪಾತಕಗಳನ್ನು ನಾಶಗೊಳಿಸು.

ಏತನ್ಮಂತ್ರತ್ರಯಂ ಜಪ್ತ್ವಾ ಸ್ನಾತ್ವಾ ಪಾದೋದಕೇ ನರಃ ।
ಕೇಶವಾದಿತ್ಯಮಾಲೋಕ್ಯ ಕ್ಷಣಾನ್ನಿಷ್ಕಲುಷೋ ಭವೇತ್ ॥ ೮೧ ॥
ಕೇಶವಾದಿತ್ಯಮಾಹಾತ್ಮ್ಯಂ ಶೃಣ್ವನ್ ಶ್ರದ್ಧಾಸಮನ್ವಿತಃ ।
ನರೋ ನ ಲಿಪ್ಯತೇ ಪಾಪೈಃ ಶಿವಭಕ್ತಿಂ ಚ ವಿಂದತಿ ॥ ೮೨ ॥

ಸ್ಕಂದ ಉವಾಚ:—

ಅತಃ ಪರಂ ಶೃಣು ಮುನೇ ವಿಮಲಾದಿತ್ಯಮುತ್ತಮಂ ।
ಹರಿಕೇಶ ವನೇ ರಮ್ಯೇ ವಾರಾಣಸ್ಯಾಂ ವ್ಯವಸ್ಥಿತಂ ॥ ೮೩ ॥
ಉಚ್ಚದೇಶೇಽಭವತ್ಪೂರ್ವಂ ವಿಮಲೋ ನಾಮ ಬಾಹುಜಃ ।
ಸ ಪ್ರಾಕ್ತನಾತ್ಕರ್ಮಯೋಗಾದ್ವಿಮಲೇ ಪಥ್ಯಪಿ ಸ್ಥಿತಃ ॥ ೮೪ ॥
ಕುಷ್ಠರೋಗಮವಾಪ್ಯೋಚ್ಚೈಸ್ತ್ಯಕ್ತ್ವಾ ದಾರಾನ್ಗೃಹಂ ವಸು ।
ವಾರಾಣಸೀಂ ಸಮಾಸಾದ್ಯ ಬ್ರಧ್ನಮಾರಾಧಯತ್ಸುಧೀಃ ॥ ೮೫ ॥
ಕರವೀರೈರ್ಜಪಾಭಿಶ್ಚ ಗಂಧಕೈಃ ಕಿಂಶುಕೈಃ ಶುಭೈಃ ।
ರಕ್ತೋತ್ಪಲೈರಶೋಕೈಶ್ಚ ಸ ಸಮಾನರ್ಚ ಭಾಸ್ಕರಂ ॥ ೮೬ ॥

---

೮೧. ಮೇಲೆ ಹೇಳಿದ ಮೂರು ಮಂತ್ರಗಳನ್ನು ಜಪಿಸುತ್ತ ಪಾದೋದಕ ತೀರ್ಥದಲ್ಲಿ ಸ್ನಾನವನ್ನು ಮಾಡಿ ಮಾನವನು ಕೇಶವಾದಿತ್ಯನನ್ನು ದರ್ಶನ ಮಾಡಲು ಕ್ಷಣದಲ್ಲಿಯೇ ಪಾಪರಹಿತನಾಗುವನು.

೮೨. ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ ಮನುಷ್ಯನು ಈ ಕೇಶವಾದಿತ್ಯನ ಮಾಹಾತ್ಮ್ಯವನ್ನು ಕೇಳಲು, ಯಾವ ಪಾತಕಗಳ ಲೇಪವನ್ನೂ ಹೊಂದ ಲಾರನು. ಮತ್ತು ಶಿವನಲ್ಲಿ ಭಕ್ತಿಯನ್ನೂ ಮಾಡುವನು.

೮೩. ಸ್ಕಂದನು ಹೇಳುತ್ತಾನೆ:—ಮಹಾ ಮುನಿಯೆ! ಇನ್ನುಮೇಲೆ ಉತ್ತಮನಾದ ವಿಮಲಾದಿತ್ಯನ ವಿಷಯವನ್ನು ಲಾಲಿಸು. ಈ ಸ್ವಾಮಿಯು ವಾರಾಣಸೀ ಕ್ಷೇತ್ರದಲ್ಲಿ ಮನೋಹರವಾದ ಹರಿಕೇಶವನದಲ್ಲಿ ನೆಲಸಿರುವನು.

೮೪—೮೫. ಪರ್ವತಪ್ರಾಂತದಲ್ಲಿ ಮುನ್ನು ವಿಮಲನಾಮಕನಾದ ಕ್ಷತ್ರಿಯನೊಬ್ಬನಿದ್ದನು. ಆತನು ನಿರ್ಮಲವಾದ ಸದಾಚಾರಮಾರ್ಗದಲ್ಲಿ ನೆಲಸಿದವನಾದರೂ ಪೂರ್ವಜನ್ಮಗಳ ಪಾಪಸಂಸ್ಕಾರವಿಶೇಷದಿಂದ ಕುಷ್ಠರೋಗ ವನ್ನು ಹೊಂದಿದವನಾಗಿ, ಉದ್ವೇಗದಿಂದ ಹೆಂಡತಿಯನ್ನೂ, ಮನೆಯನ್ನೂ, ಐಶ್ವರ್ಯವನ್ನೂ ತ್ಯಜಿಸಿ ಉತ್ತಮ ಜ್ಞಾನಿಯಾದುದರಿಂದ ವಾರಾಣಸಿಗೆ ಹೊರಟು ಅಲ್ಲಿ ಸೂರ್ಯನನ್ನು ಭಕ್ತಿಯಿಂದ ಆರಾಧಿಸುತ್ತಿದ್ದನು.

೮೬. ಕರವೀರ, ಜಪಾ, ಗಂಧಕ, ಪವಿತ್ರವಾದ ಕಿಂಶುಕ, ರಕ್ತೋತ್ಪಲ ಮತ್ತು ಅಶೋಕಗಳೆಂಬ ಪುಷ್ಪಗಳಿಂದ ಸೂರ್ಯದೇವನನ್ನು ನಿತ್ಯವೂ ಪೂಜಿಸು ತ್ತಿದ್ದನು.

ವಿಚಿತ್ರರಚನೈರ್ಮಾಲ್ಯೈಃ ಪಾಟಲಾಚಂಪಕೋದ್ಭವೈಃ ।
ಕುಂಕುಮಾಗುರುಕರ್ಪೂರಮಿಶ್ರಿತೈಃ ಶೋಣಚಂದನೈಃ ॥ ೮೭ ॥
ದೇವಮೋಹನಧೂಪೈಶ್ಚ ಬಹ್ವಾಮೋದತತಾಂಬರೈಃ ।
ಕರ್ಪೂರವರ್ತಿದೀಪೈಶ್ಚ ನೈವೇದ್ಯೈರ್ಘೃತಪಾಯಸೈಃ ॥ ೮೮ ॥
ಅರ್ಘ್ಯದಾನೈಶ್ಚ ವಿಧಿವತ್ ಸೌರ್ಯೈಃ ಸ್ತೋತ್ರಜಪೈರಪಿ ।
ಏವಂ ಸಮಾರಾಧಯತಸ್ತಸ್ಯಾರ್ಕೋಽ ವರದೋಽಭವತ್ ॥ ೮೯ ॥
ಉವಾಚ ಚ ವರಂ ಬ್ರೂಹಿ ವಿಮಲಾಮಲಚೇಷ್ಟಿತ ।
ಕುಷ್ಠಶ್ಚ ತೇ ಪ್ರಯಾತ್ವೇಷ ಪ್ರಾರ್ಥಯಾನ್ಯಂ ವರಂ ಪುನಃ ॥ ೯೦ ॥
ಆಕರ್ಣ್ಯ ವಿಮಲಶ್ಚೇತ್ಥಮಾಲಾಪಂ ರಶ್ಮಿಮಾಲಿನಃ ।
ಪ್ರಣತೋ ದಂಡವದ್ಭೂಮೌ ಸಂಪ್ರಹೃಷ್ಟತನೂರುಹಃ ॥ ೯೧ ॥
ಶನೈರ್ವಿಜ್ಞಾಪಯಾಂಚಕ್ರ ಏಕಚಕ್ರರಥಂ ರವಿಂ ।
ಜಗಚ್ಚಕ್ಷುರಮೇಯಾತ್ಮನ್ಮಹಾಧ್ವಾಂತವಿಧೂನನ ॥ ೯೨ ॥

---

೮೭-೮೯. ಪಾಟಲ ಮತ್ತು ಸಂಪಿಗೆಯ ಪುಷ್ಪಗಳಿಂದ ವಿಚಿತ್ರಾಕಾರಗಳಾಗಿ ರಚಿಸಲ್ಪಟ್ಟ ಮಾಲೆಗಳಿಂದಲೂ, ಕುಂಕುಮ, ಅಗರು, ಕರ್ಪೂರಗಳು ಬೆರಸಿದ ಚಂದನಲೇಪನದಿಂದಲೂ, ದೇವತೆಗಳನ್ನೂ ಮೋಹನಗೊಳಿಸುವ ಧೂಪಗಳಿಂದಲೂ, ಸುವಾಸನಾದ್ರವ್ಯಗಳಿಂದ ಮಘಮಘಿಸುತ್ತಿರುವ ದಿವ್ಯ ವಸ್ತ್ರಗಳಿಂದಲೂ, ಕರ್ಪೂರ ಮತ್ತು ಬತ್ತಿಗಳ ದೀಪಗಳಿಂದಲೂ, ತುಪ್ಪ ಪಾಯಸಗಳನ್ನೊಳಗೊಂಡ ವಿವಿಧ ಭಕ್ಷ್ಯಗಳ ನೈವೇದ್ಯಗಳಿಂದಲೂ, ವಿಧ್ಯುಕ್ತ ರೀತಿಯಿಂದ ಅರ್ಪಿಸಲ್ಪಟ್ಟ ಅರ್ಘ್ಯದಾನಗಳಿಂದಲೂ, ಸೂರ್ಯದೇವನನ್ನು ಕುರಿತ ಸ್ತೋತ್ರಗಳನ್ನು ಜಪಮಾಡುವುದರಿಂದಲೂ ಆತನು ಪೂಜೆಯನ್ನು ಭಕ್ತಿಯಿಂದ ಮಾಡುತ್ತಿರಲು ಕಾಲಕ್ರಮದಲ್ಲಿ ಸೂರ್ಯನು ಪ್ರಸನ್ನನಾಗಿ ಆತನಿಗೆ ವರವನ್ನು ಕೊಡುವವನಾದನು.

೯೦. ಮತ್ತು ಇಂತೆಂದು ಹೇಳಿದನು. "ನಿರ್ಮಲಸದಾಚಾರಸಂಪನ್ನನಾದ ವಿಮಲನೆ! ನಿನಗೆ ಬೇಕಾದ ವರವನ್ನು ಬೇಡಿಕೊ. ನಿನ್ನ ದೇಹದಲ್ಲಿರುವ ಈ ಕುಷ್ಠರೋಗವು ಕಳೆದುಹೋಗಲಿ. ಇದಲ್ಲದೆ ಮತ್ತೊಂದು ವರವನ್ನು ಪ್ರಾರ್ಥಿಸು."

೯೧. ಸಹಸ್ರಕಿರಣನಾದ ಸೂರ್ಯನ ಈ ಮಾತುಗಳನ್ನು ವಿಮಲನು ಕೇಳಿದವನಾಗಿ ಭೂಮಿಯಲ್ಲಿ ಸಾಷ್ಟಾಂಗಪ್ರಣಾಮವನ್ನು ಮಾಡಿ ಹರ್ಷಾಧಿಕ್ಯದಿಂದ ಮೈನವಿರೇಳುತ್ತಿರುವವನಾದನು.

೯೨. ಬಳಿಕ ಒಂದೇ ಚಕ್ರವುಳ್ಳ ರಥದಲ್ಲಿ ಸಂಚರಿಸುತ್ತಿರುವ ಆ ಸೂರ್ಯನನ್ನು ಕುರಿತು ಮೆಲ್ಲಮೆಲ್ಲಗೆ ವಿಜ್ಞಾಪನೆಯನ್ನು ಮಾಡಿಕೊಂಡನು. ಲೋಕ

ಯದಿ ಪ್ರಸನ್ನೋ ಭಗವನ್ಯದಿ ದೇಯೋ ವರೋ ಮಮ ।
ತದಾ ತ್ವದ್ಭಕ್ತಿನಿಷ್ಠಾ ಯೇ ಕುಷ್ಠಂ ಮಾಸ್ತು ತದನ್ವಯೇ ॥ ೯೩ ॥
ಅನ್ಯೇಽಪಿ ರೋಗಾ ಮಾ ಸಂತು ಮಾಸ್ತು ತೇಷಾಂ ದರಿದ್ರತಾ ।
ಮಾಸ್ತು ಕಶ್ಚನ ಸಂತಾಪಸ್ತ್ವದ್ಭಕ್ತಾನಾಂ ಸಹಸ್ರಗೋ ॥ ೯೪ ॥

ಶ್ರೀ ಸೂರ್ಯ ಉವಾಚ :—

ತಥಾಸ್ತ್ವಿತಿ ಮಹಾಪ್ರಾಜ್ಞ ಶೃಣ್ವನ್ಯಂ ವರಮುತ್ತಮಂ ।
ತ್ವಯೇಯಂ ಪೂಜಿತಾ ಮೂರ್ತಿರೇವಂ ಕಾಶ್ಯಾಂ ಮಹಾಮತೇ ॥ ೯೫ ॥
ಅಸ್ಯಾಃ ಸಾನ್ನಿಧ್ಯಮತ್ರಾಹಂ ನ ತ್ಯಕ್ಷ್ಯಾಮಿ ಕದಾಚನ ।
ಪ್ರಥಿತಾ ತವ ನಾಮ್ನಾ ಚ ಪ್ರತಿಮೈಷಾ ಭವಿಷ್ಯತಿ ॥ ೯೬ ॥
ವಿಮಲಾದಿತ್ಯ ಇತ್ಯಾಖ್ಯಾ ಭಕ್ತಾನಾಂ ವರದಾ ಸದಾ ।
ಸರ್ವವ್ಯಾಧಿನಿಹಂತ್ರೀ ಚ ಸರ್ವಪಾಪಕ್ಷಯಂಕರೀ ॥ ೯೭ ॥

---

ನೇತ್ರನೆ! ಅಪ್ರಮೇಯವಾದ ಸ್ವರೂಪದಿಂದ ಕೂಡಿದವನೆ! ಸಂಸಾರದಶೆಯೆಂಬ ಘೋರವಾದ ಈ ಅಂಧಕಾರವನ್ನು ಕಳೆಯಲು ನೀನೊಬ್ಬನೇ ಸಮರ್ಥನಾಗಿರುವೆ.

೯೩. ಭಗವಂತನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ಮತ್ತು ನಾನು ವರವನ್ನು ಪಡೆಯಲು ಅರ್ಹನಾಗಿರುವುದು ನಿಜವಾದರೆ ನಿನ್ನಲ್ಲಿ ಈ ವರವನ್ನು ಬೇಡುವೆನು. ನಿನ್ನ ಭಕ್ತಿಯಲ್ಲಿಯೇ ಯಾರು ನಿರತರಾಗಿರುವರೊ, ಅವರ ವಂಶಗಳಲ್ಲಿ ಯಾರಿಗೂ ಕುಷ್ಠರೋಗವುಂಟಾಗದಿರಲಿ.

೯೪. ಅವರಿಗೆ ಇತರ ರೋಗಗಳೂ ಸಂಭವಿಸದಿರಲಿ. ಅವರಿಗೆ ಎಂದಿಗೂ ದಾರಿದ್ರ್ಯ ದುಃಖವು ಸಂಭವಿಸದಂತಾಗಲಿ. ಸಹಸ್ರರಶ್ಮಿಯೆ! ನಿನ್ನ ಭಕ್ತರೆನ್ನಿಸಿಕೊಂಡವರಿಗೆ ಯಾವ ವಿಧವಾದ ಸಂತಾಪವೂ ಉಂಟಾಗದಿರಲಿ.

೯೫–೯೬. ಸೂರ್ಯನು ಹೇಳುತ್ತಾನೆ:—"ಎಲೈ ಮಹಾಪ್ರಾಜ್ಞನೆ! ನೀನು ಬಯಸಿದಂತೆಯೇ ಎಲ್ಲವೂ ನಡೆಯಲಿ. ನಿನಗೆ ಮತ್ತೊಂದು ಉತ್ತಮವಾದ ವರವನ್ನು ಕೊಡುವೆನು, ಕೇಳು. ಬುದ್ಧಿವಂತನಾದ ನಿನ್ನಿಂದ ಪೂಜೆಗೊಂಡಿರುವ ಈ ಮೂರ್ತಿಯು ಹೀಗೆಯೇ ಕಾಶೀಕ್ಷೇತ್ರದಲ್ಲಿ ನೆಲಸಿರುತ್ತದೆ. ನಾನು ಈ ಪ್ರತಿಮೆಯಲ್ಲಿ ಸಾನ್ನಿಧ್ಯವನ್ನೆಂದಿಗೂ ತ್ಯಜಿಸುವುದಿಲ್ಲ. ಈ ಮೂರ್ತಿಯು ನಿನ್ನ ಹೆಸರಿನಿಂದಲೇ ಭೂಲೋಕದಲ್ಲಿ ಪ್ರಖ್ಯಾತಿಯನ್ನು ಪಡೆಯುವುದು.

೯೭. ವಿಮಲಾದಿತ್ಯನೆಂಬ ಹೆಸರಿನ ಈ ಮೂರ್ತಿಯು ಯಾವಾಗಲೂ ಭಕ್ತರ ಸಕಲಾಭೀಷ್ಟಗಳನ್ನೂ ನೆರವೇರಿಸುವುದು. ಅವರ ಸಕಲ ವ್ಯಾಧಿಗಳನ್ನೂ ನಿರ್ಮೂಲಗೊಳಿಸಿ ಸಮಸ್ತ ಪಾತಕಗಳನ್ನೂ ನಾಶಮಾಡುವುದು."

ಇತಿ ದತ್ವಾ ವರಾನ್ಸೂರ್ಯಸ್ತತ್ರೈವಾಂತರಧೀಯತ ।
ವಿಮಲೋ ನಿರ್ಮಲತನುಃ ಸೋಽಪಿ ಸ್ವಭವನಂ ಯಯೌ ॥ ೯೮ ॥
ಇತ್ಥಂ ಸ ವಿಮಲಾದಿತ್ಯೋ ವಾರಾಣಸ್ಯಾಂ ಶುಭಪ್ರದಃ ।
ತಸ್ಯ ದರ್ಶನಮಾತ್ರೇಣ ಕುಷ್ಠರೋಗಃ ಪ್ರಣಶ್ಯತಿ ॥ ೯೯ ॥
ಯಶ್ಚೈತಾಂ ವಿಮಲಾದಿತ್ಯಕಥಾಂ ವೈ ಶೃಣುಯಾನ್ನರಃ ।
ಪ್ರಾಪ್ನೋತಿ ನಿರ್ಮಲಾಂ ಶುದ್ಧಿಂ ತ್ಯಜ್ಯತೇ ಚ ಮನೋಮಲೈಃ ॥ ೧೦೦ ॥

ಸ್ಕಂದ ಉವಾಚ:—

ಗಂಗಾದಿತ್ಯೋಽಸ್ತಿ ತತ್ರಾನ್ಯೋ ವಿಶ್ವೇಶಾದ್ದಕ್ಷಿಣೇನ ವೈ ।
ತಸ್ಯ ದರ್ಶನಮಾತ್ರೇಣ ನರಃ ಶುದ್ಧಿಮಿಯಾದಿಹ ॥ ೧೦೧ ॥
ಯದಾ ಗಂಗಾ ಸಮಾಯಾತಾ ಭಗೀರಥಪುರಸ್ಕೃತಾ ।
ತಥಾ ಗಂಗಾಂ ಪರಿಷ್ಟೋತುಂ ರವಿಸ್ತತ್ರೈವ ಸಂಸ್ಥಿತಃ ॥ ೧೦೨ ॥
ಅದ್ಯಾಪ್ಯಹರ್ನಿಶಂ ಗಂಗಾಂ ಸಮ್ಮುಖೀ ಕೃತ್ಯ ಭಾಸ್ಕರಃ ।
ಪರಿಷ್ಟೌತಿ ಪ್ರಸನ್ನಾತ್ಮಾ ಗಂಗಾಭಕ್ತವರಪ್ರದಃ ॥ ೧೦೩ ॥

---

೯೮. ಇಂತೆಂದು ವರಗಳನ್ನು ಅನುಗ್ರಹಿಸಿ ಸೂರ್ಯನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ವಿಮಲನೂ ಕೂಡ ಪರಿಶುದ್ಧಶರೀರವುಳ್ಳವನಾಗಿ ತನ್ನ ಮನೆಗೆ ಹಿಂದಿರುಗಿದನು.

೯೯. ಇಂತು ವಿಮಲಾದಿತ್ಯನು ವಾರಾಣಸಿಯಲ್ಲಿ ನೆಲಸಿ ಮಂಗಳಪ್ರದನಾಗಿರುವನು. ಆತನ ದರ್ಶನವನ್ನು ಮಾಡಿದ ಮಾತ್ರದಿಂದಲೇ ಜನರ ಕುಷ್ಠರೋಗವು ಕಳೆದುಹೋಗುವುದು.

೧೦೦. ಯಾವ ಮನುಷ್ಯನು ವಿಮಲಾದಿತ್ಯನ ಈ ಚರಿತ್ರೆಯನ್ನು ಭಕ್ತಿಯುಕ್ತನಾಗಿ ಶ್ರವಣಮಾಡುವನೊ, ಅವನು ಮಲರಹಿತನಾಗಿ ದೇಹಶುದ್ಧಿಯನ್ನು ಪಡೆಯುವನಲ್ಲದೆ ಮನಸ್ಸಿನ ಕಲ್ಮಷಗಳನ್ನೂ ಕಳೆದುಕೊಳ್ಳುವನು.

೧೦೧. ಸ್ಕಂದನು ಹೇಳುತ್ತಾನೆ:— ವಿಶ್ವೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಗಂಗಾದಿತ್ಯವೆಂಬ ಮತ್ತೊಂದು ಮೂರ್ತಿಯು ಕಾಶಿಯಲ್ಲಿ ನೆಲಸಿರುವುದು. ಅದರ ದರ್ಶನಮಾತ್ರದಿಂದಲೇ ಮಾನವರು ಕಾಯಿಕ ಮಾನಸಿಕ ಪಾರಿಶುದ್ಧ್ಯವನ್ನು ಪಡೆಯುವರು.

೧೦೨. ಪೂರ್ವದಲ್ಲಿ ಭಗೀರಥನು ಗಂಗೆಯನ್ನು ಕರೆದುಕೊಂಡು ಬರುತ್ತಿರಲು, ಇಲ್ಲಿ ಸೂರ್ಯನು ಆ ಗಂಗೆಯನ್ನು ಸ್ತೋತ್ರಮಾಡಲು ನಿಂತನು.

೧೦೩. ಇಂದಿಗೂ ಸಹ ಸೂರ್ಯದೇವನು ಗಂಗೆಗೆ ಅಭಿಮುಖನಾಗಿ ನಿಂತು ಆ ದೇವನದಿಯನ್ನು ಸ್ತೋತ್ರಮಾಡುತ್ತ ಪ್ರಸನ್ನಾಂತಃಕರಣನಾಗಿ ಗಂಗೆಯ ಭಕ್ತರಿಗೆ ವರಗಳನ್ನು ನೀಡುತ್ತ ಪ್ರತಿಷ್ಠಿತನಾಗಿರುವನು.

ಗಂಗಾದಿತ್ಯಂ ಸಮಾರಾಧ್ಯ ವಾರಾಣಸ್ಯಾಂ ನರೋತ್ತಮಃ ।
ದುರ್ಗತಿಂ ಜಾತು ನ ಕ್ವಾಪಿ ಲಭತೇ ನ ಚ ರೋಗಭಾಕ್ ॥ ೧೦೪ ॥

ಸ್ಕಂದ ಉವಾಚಃ—

ಅನ್ಯಚ್ಛೃಣು ಮಹಾಭಾಗ ಯಮಾದಿತ್ಯಸ್ಯ ಸಂಭವಂ ।
ಯಚ್ಛೃತ್ವಾಪಿ ನರೋ ಜಾತು ಯಮಲೋಕಂ ನ ಪಶ್ಯತಿ ॥ ೧೦೫ ॥
ಯಮೇಶಾತ್ಪಶ್ಚಿಮೇ ಭಾಗೇ ವೀರೇಶಾತ್ಪೂರ್ವತೋ ಮುನೇ ।
ಯಮಾದಿತ್ಯಂ ನರೋ ದೃಷ್ಟ್ವಾ ಯಮಲೋಕಂ ನ ಪಶ್ಯತಿ ॥ ೧೦೬ ॥
ಯಮತೀರ್ಥೇ ನರಃ ಸ್ನಾತ್ವಾ ಭೂತಾಯಾಂ ಭೌಮವಾಸರೇ ।
ಯಮೇಶ್ವರಂ ವಿಲೋಕ್ಯಾಶು ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೧೦೭ ॥
ಯಮತೀರ್ಥೇ ಯಮಃ ಪೂರ್ವಂ ತಪ್ತ್ವಾ ಸುವಿಮಲಂ ತಪಃ ।
ಯಮೇಶಂ ಚ ಯಮಾದಿತ್ಯಂ ಪ್ರತ್ಯಷ್ಠಾದ್ಭಕ್ತಿಸಿದ್ಧಿದಂ ॥ ೧೦೮ ॥
ಯಮೇನ ಸ್ಥಾಪಿತೋ ಯಸ್ಮಾದಾದಿತ್ಯಸ್ತತ್ರ ಕುಂಭಜ ।
ಅತಃ ಸ ಹಿ ಯಮಾದಿತ್ಯೋ ಯಾಮೀಂ ಹರತಿ ಯಾತನಾಂ ॥ ೧೦೯ ॥

---

೧೦೪. ವಾರಾಣಸೀ ಕ್ಷೇತ್ರದಲ್ಲಿರುವ ಈ ಗಂಗಾದಿತ್ಯನನ್ನು ಚೆನ್ನಾಗಿ ಪೂಜಿಸಿದ ಮನುಷ್ಯೋತ್ತಮನು ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ ವಲ್ಲದೆ ದೇಹರೋಗಗಳಿಗೆ ಭಾಗಿಯಾಗಲಾರನು.

೧೦೫. ಸ್ಕಂದನು ಹೇಳುತ್ತಾನೆ:—ಮಹಾತ್ಮನಾದ ಅಗಸ್ತ್ಯನೆ! ಯಮಾದಿತ್ಯನೆಂಬ ಬೇರೊಂದು ಮೂರ್ತಿಯ ವಿಷಯವನ್ನು ಕೇಳು. ಈ ಚರಿತ್ರೆಯನ್ನು ಕೇಳುವ ಪುಣ್ಯದ ಫಲವಾಗಿ ಮನುಷ್ಯನು ಯಾವಾಗಲೂ ಯಮಲೋಕವನ್ನು ನೋಡುವ ಸಂಭವವೇ ಇರುವುದಿಲ್ಲವು.

೧೦೬. ಯಮೇಶ್ವರನಿಗೆ ಪಶ್ಚಿಮ ಭಾಗದಲ್ಲಿಯೂ, ವೀರೇಶ್ವರಲಿಂಗಕ್ಕೆ ಪೂರ್ವದಿಕ್ಕಿನಲ್ಲಿಯೂ, ನೆಲಸಿರುವ ಯಮಾದಿತ್ಯನನ್ನು ನೋಡಿದ ಮಾನವನು ಯಮಲೋಕದ ದರ್ಶನವನ್ನು ಮಾಡುವುದಿಲ್ಲ.

೧೦೭. ಮಂಗಳವಾರದ ಪ್ರಾತಃಕಾಲದಲ್ಲಿ ಯಮತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಮನುಷ್ಯನು ಯಮೇಶ್ವರನ ದರ್ಶನವನ್ನು ತೆಗೆದುಕೊಳ್ಳಲು ಕ್ಷಣಮಾತ್ರದಲ್ಲಿಯೇ ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೧೦೮. ಪೂರ್ವದಲ್ಲಿ ಯಮತೀರ್ಥದಲ್ಲಿ ಯಮಧರ್ಮರಾಜನು ಸ್ನಾನವನ್ನು ಮಾಡುತ್ತ ಲೋಕೋಪಕಾರಕವಾದ ತಪಸ್ಸನ್ನು ಮಾಡಿ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಒಡಗೂಡಿಸುವ ಯಮೇಶ್ವರನನ್ನೂ, ಯಮಾದಿತ್ಯನನ್ನೂ ಸ್ಥಾಪಿಸಿದನು.

೧೦೯. ಕುಂಭೋದ್ಭವನೆ! ಈ ಆದಿತ್ಯನು ಯಮನಿಂದ ಪ್ರತಿಷ್ಠೆಯನ್ನು

ಯಮೇಶಂ ಚ ಯಮಾದಿತ್ಯಂ ಯಮೇನ ಸ್ಥಾಪಿತಂ ನಮನ್ ।
ಯಮತೀರ್ಥೇ ಕೃತಸ್ನಾನೋ ಯಮಲೋಕಂ ನ ಪಶ್ಯತಿ ॥ ೧೧೦ ॥
ಯಮತೀರ್ಥೇ ಚತುರ್ದಶ್ಯಾಂ ಭರಣ್ಯಾಂ ಭೌಮವಾಸರೇ ।
ತರ್ಪಣಂ ಪಿಂಡದಾನಂ ಚ ಕೃತ್ವಾ ಪಿತ್ರನೃಣೀ ಭವೇತ್ ॥ ೧೧೧ ॥
ಅಭಿಲಷ್ಯಂತಿ ಸತತಂ ಪಿತರೋ ನರಕೌಕಸಃ ।
ಭೌಮೇ ಭರಣ್ಯಾಂ ಭೂತಾಯಾಂ ಯದಿ ಯೋಗೋಽಯಮುತ್ತಮಃ ॥
ಕಾಶ್ಯಾಂ ಕಶ್ಚಿದ್ಯಮೇ ತೀರ್ಥೇ ಕೃತ್ವಾ ಸ್ನಾನಂ ಮಹಾಮತಿಃ ।
ಅಪಿ ಯಸ್ತರ್ಪಣಂ ಕುರ್ಯಾತ್ಸತಿಲಂ ನೋ ವಿಮುಕ್ತಯೇ ॥ ೧೧೩ ॥
ಕಿಂ ಗಯಾಗಮನೈಃ ಪುಂಸಾಂ ಕಿಂ ಶ್ರಾದ್ಧೈರ್ಭೂರಿದಕ್ಷಿಣೈಃ ।
ಯದಿ ಕಾಶ್ಯಾಂ ಯಮೇ ತೀರ್ಥೇ ಯೋಗೇಽಸ್ಮಿನ್ ಶ್ರಾದ್ಧಮಾಪ್ಯತೇ ॥

---

ಪಡೆದ ಕಾರಣದಿಂದ ಯಮಾದಿತ್ಯನೆಂದು ಪ್ರಸಿದ್ಧಿಯನ್ನು ಪಡೆದು ಪೂಜಿಸುವವರ ಯಮಯಾತನೆಗಳನ್ನು ಬಿಡಿಸುವನು.

೧೧೦. ಇಂತು ಯಮದೇವನಿಂದ ಪ್ರತಿಷ್ಠಿಸಲ್ಪಟ್ಟ ಯಮೇಶ್ವರನನ್ನೂ ಯಮಾದಿತ್ಯನನ್ನೂ ಪೂಜಿಸಿ ನಮಸ್ಕಾರಗಳನ್ನರ್ಪಿಸಿ, ಯಮತೀರ್ಥದಲ್ಲಿ ಸ್ನಾನವನ್ನು ಮಾಡಲು ಮನುಷ್ಯನು ಯಮಲೋಕವನ್ನು ನೋಡುವುದಿಲ್ಲ.

೧೧೧. ಚತುರ್ದಶೀ ತಿಥಿಯೂ, ಭರಣೀ ನಕ್ಷತ್ರವೂ, ಮಂಗಳವಾರವೂ ಒಟ್ಟಿಗೆ ಪ್ರಾಪ್ತವಾಗಿರಲು ಪಿತೃಗಳನ್ನುದ್ದೇಶಿಸಿ ತರ್ಪಣಗಳನ್ನೂ ಪಿಂಡಗಳನ್ನೂ ದಾನಮಾಡುವ ಮಾನವನು ಪಿತೃಋಣದಿಂದ ಬಿಡುಗಡೆ ಹೊಂದುವನು.

೧೧೨. ನರಕವಾಸಿಗಳಾದ ಪಿತೃಗಳೂ ಸಹ ಮಂಗಳವಾರದ ದಿವಸ ಭರಣೀನಕ್ಷತ್ರದ ಉತ್ತಮಯೋಗವು ಸಂಭವಿಸುವುದನ್ನೇ ನಿರಂತರವೂ ನಿರೀಕ್ಷಿಸುತ್ತಿರುವರು.

೧೧೩. "ಕಾಶೀಕ್ಷೇತ್ರದಲ್ಲಿ ಯಮತೀರ್ಥದಲ್ಲಿ ಈ ಪುಣ್ಯದಿನದಲ್ಲಿ ಸ್ನಾನವನ್ನು ಮಾಡಿ ನಮ್ಮ ವಂಶದ ಯಾವ ಮಹಾತ್ಮನಾದರೂ ನಮ್ಮ ಮೋಕ್ಷಕ್ಕಾಗಿ ತಿಲೋದಕದಿಂದ ತರ್ಪಣಗಳನ್ನು ಕೊಡಬಹುದು" ಎಂಬುದಾಗಿಯೇ ಯಾವಾಗಲೂ ಅಪೇಕ್ಷಿಸುತ್ತಿರುವರು.

೧೧೪. ಈ ಉತ್ತಮ ಯೋಗವು ದೊರೆತಾಗ ಕಾಶಿಯಲ್ಲಿ ಶ್ರಾದ್ಧಕರ್ಮವನ್ನು ಮಾಡಿದ ಮೇಲೆ ಮನುಷ್ಯರು ಗಯಾಕ್ಷೇತ್ರದ ಪ್ರವಾಸದಿಂದಲಾಗಲಿ, ಬಹು ದಕ್ಷಿಣೆಗಳಿಂದೊಡಗೂಡಿದ ಶ್ರಾದ್ಧಗಳಿಂದಾಗಲಿ ಹೆಚ್ಚಿಗೆ ಏನನ್ನು ಪಡೆಯಲು ಅಪೇಕ್ಷಿಸಬಹುದು?

ಶ್ರಾದ್ಧಂ ಕೃತ್ವಾ ಯಮೇ ತೀರ್ಥೇ ಪೂಜಯಿತ್ವಾ ಯಮೇಶ್ವರಂ ।
ಯಮಾದಿತ್ಯಂ ನಮಸ್ಕೃತ್ಯ ಪಿತೄಣಾಮನೃಣೋ ಭವೇತ್ ॥ ೧೧೫ ॥

ಸ್ಕಂದ ಉವಾಚ:—

ಇತಿ ತೇ ದ್ವಾದಶಾದಿತ್ಯಾಃ ಕಥಿತಾಃ ಪಾಪನಾಶನಾಃ ।
ಯತ್ಸಂಭವಂ ಸಮಾಕರ್ಣ್ಯ ನರೋ ನ ನಿರಯೀ ಭವೇತ್ ॥ ೧೧೬ ॥
ಅನ್ಯೇಽಪಿ ಸಂತಿ ಘಟಜ ರವಿಭಕ್ತೈರನೇಕಶಃ ।
ಕಾಶ್ಯಾಂ ಸಂಸ್ಥಾಪಿತಾಃ ಸೂರ್ಯಾ ಗುಹ್ಯಕಾರ್ಕಾದಯಃ ಕಿಲ ॥ ೧೧೭ ॥
ಶ್ರುತ್ವಾಧ್ಯಾಯಾನಿಮಾನ್ಪುಣ್ಯಾನ್ದ್ವಾದಶಾದಿತ್ಯಸೂಚಕಾನ್ ।
ಶ್ರಾವಯಿತ್ವಾಪಿ ನೋ ಮರ್ತ್ಯೋ ದುರ್ಗತಿಂ ಯಾತಿ ಕುತ್ರಚಿತ್ ॥೧೧೮॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಅರುಣವೃದ್ಧಕೇಶವ ವಿಮಲ ಗಂಗಾಯಮಾದಿತ್ಯವರ್ಣನಂ"ನಾಮೈಕಪಂಚಾಶತ್ತಮೋಽಧ್ಯಾಯಃ

---

೧೧೫. ಯಮತೀರ್ಥದಲ್ಲಿ ಪಿತೃಶ್ರಾದ್ಧವನ್ನು ನೆರವೇರಿಸಿ, ಯಮೇಶ್ವರನ ಪೂಜೆಯನ್ನು ಮಾಡಿಕೊಂಡು, ಯಮಾದಿತ್ಯನಿಗೆ ನಮಸ್ಕರಿಸಲು ಮಾನವನು ಪಿತೃಗಳ ಋಣಗಳಿಂದ ಮುಕ್ತನಾಗುವನು.

೧೧೬. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ಇಂತು ಭಕ್ತರ ಪಾತಕಗಳನ್ನು ನಾಶಮಾಡುತ್ತ ಕಾಶೀಕ್ಷೇತ್ರದಲ್ಲಿ ನೆಲಸಿರುವ ದ್ವಾದಶಾದಿತ್ಯರ ವಿಷಯವನ್ನು ನಿರೂಪಿಸಿರುವೆನು. ಇವರ ಉತ್ಪತ್ತಿಯ ಪ್ರಕಾರಗಳನ್ನು ಶ್ರದ್ಧೆಯಿಂದ ಕೇಳಿದ ಮನುಷ್ಯನು ಎಂದಿಗೂ ನರಕಭಾಗಿಯಾಗಲಾರನು.

೧೧೭. ಅಯ್ಯಾ ಘಟೋದ್ಭವನೆ! ಸೂರ್ಯೋಪಾಸಕರಿಂದ ಸ್ಥಾಪಿಸಲ್ಪಟ್ಟಿರುವ ಗುಹ್ಯಕಾದಿತ್ಯನೇ ಮುಂತಾದ ಅನೇಕ ಇತರ ಆದಿತ್ಯ ವಿಗ್ರಹಗಳೂ ಕಾಶಿಯಲ್ಲಿ ಸ್ಥಾಪಿತಗಳಾಗಿ ಭಕ್ತರ ಅಭೀಷ್ಟಗಳನ್ನು ಸಲ್ಲಿಸುತ್ತಿರುವುವು.

೧೧೮. ದ್ವಾದಶಾದಿತ್ಯರ ಪ್ರತಿಷ್ಠಾನಾದಿಗಳನ್ನೊಳಕೊಂಡಿರುವ ಪುಣ್ಯತಮಗಳಾದ ಈ ದಿವ್ಯೋಪಾಖ್ಯಾನಗಳನ್ನು ಕೇಳಿದವನೂ, ಇತರರಿಗೆ ಕೇಳಿಸುವವನೂ ಎಂದಿಗೂ ಎಲ್ಲಿಯೂ ದುರ್ಗತಿಯನ್ನು ಪಡೆಯಲಾರನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಅರುಣವೃದ್ಧಕೇಶವ ವಿಮಲಗಂಗಾಯಮಾದಿತ್ಯವರ್ಣನ"ವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶತ್ತಮೋಽಧ್ಯಾಯಃ

### ದಶಾಶ್ವಮೇಧವರ್ಣನಂ

ಸ್ಕಂದ ಉವಾಚ :—

ಗಭಸ್ತಿಮಾಲಿನಿ ಗತೇ ಕಾಶೀಂ ತ್ರೈಲೋಕ್ಯಮೋಹಿನೀಂ ।
ಪುನಶ್ಚಿಂತಾಮವಾಪೋಚ್ಚೈರ್ಮಂದರಸ್ಥೋ ಮುನೇ ಹರಃ ॥ ೧ ॥
ನಾದ್ಯಾಪ್ಯಾಯಾಂತಿ ಯೋಗಿನ್ಯೋ ನಾದ್ಯಾಪ್ಯಾಯಾತಿ ತಿಗ್ಮಗುಃ ।
ಪ್ರವೃತ್ತಿರಪಿ ಮೇ ಕಾಶ್ಯಾಶ್ಚಿತ್ರಮತ್ಯಂತದುರ್ಲಭಾ ॥ ೨ ॥
ಕಿಮತ್ರ ಚಿತ್ರಂ ಯತ್ಕಾಶೀ ಮದೀಯಮಪಿ ಮಾನಸಂ ।
ನಿಶ್ಚಲಂ ಚಂಚಲಯತಿ ಗಣನಾ ಕೇತರೇ ಸುರೇ ॥ ೩ ॥
ಅಧಾಕ್ಷಿಷಮಹಂ ಕಾಮಂ ತ್ರಿಜಗಜ್ಜಿತ್ವರಂ ದೃಶಾ ।
ಅಹೋ ಕಾಶ್ಯಭಿಲಾಷೋಽತ್ರ ಮಾಮೇವ ದುನುಯಾತ್ತರಾಂ ॥ ೪ ॥

---

## ಕನ್ನಡದ ಅನುವಾದ

### ದಶಾಶ್ವಮೇಧವರ್ಣನ

೧. ಸ್ಕಂದನು ಹೇಳುತ್ತಾನೆ:—“ಅಗಸ್ತ್ಯಮುನಿಯೆ ! ಇಂತು ಸೂರ್ಯ ದೇವನು ಮೂರು ಲೋಕದ ನಿವಾಸಿಗಳಿಗೂ ಮೋಹವನ್ನುಂಟುಮಾಡುವ ಕಾಶೀಕ್ಷೇತ್ರಕ್ಕೆ ಹೋಗಿ ಬಹುಕಾಲವಾದರೂ ಹಿಂದಿರುಗದಿರಲು ಇತ್ತ ಮಂದರ ಪರ್ವತದಲ್ಲಿ ವಾಸಿಸುತ್ತಿದ್ದ ಮಹೇಶ್ವರನು ಪುನಃ ದೀರ್ಘವೂ ಮಹತ್ತರವೂ ಆದ ಚಿಂತೆಗೊಳಗಾದನು.

೨. ಇಂದಿನವರೆಗೂ ಯೋಗಿನಿಯರೂ ಹಿಂದಕ್ಕೆ ಬರಲಿಲ್ಲ. ಸೂರ್ಯನೂ ಇಲ್ಲಿಯವರೆಗೂ ಬರಲಿಲ್ಲ. ನನಗೆ ಪ್ರಿಯವಾದ ಕಾಶಿಯಲ್ಲಿ ವಾಸವು ವಿಚಿತ್ರ ಫಲಪ್ರದವೂ ಅತ್ಯಂತ ದುರ್ಲಭವೂ ಆಗಿರುವುದು.

೩. ಇದರಲ್ಲಿ ಆಶ್ಚರ್ಯವು ತಾನೆ ಏನಿರುವುದು ? ಈ ವಾರಾಣಸಿಯು ತಪಃಪ್ರಭಾವದಿಂದ ಏಕಾಗ್ರಗೊಳಿಸಿದ ನನ್ನ ಮನಸ್ಸನ್ನೂ ಕೂಡ ಚಾಂಚಲ್ಯ ಯುತವನ್ನಾಗಿ ಮಾಡುತ್ತಿರುವುದೆಂದಮೇಲೆ ಈ ವಿಷಯದಲ್ಲಿ ಇತರ ದೇವತೆಗಳು ಕೂಡ ಎಷ್ಟುಮಾತ್ರದವರು ?

೪. ಮೂರುಲೋಕಗಳನ್ನೂ ಜಯಿಸುವ ವೈಭವದಿಂದ ಕೂಡಿದ ಮನ್ಮಥ ನನ್ನೂ ನಾನು ಕೇವಲ ದೃಷ್ಟಿಪಾತದಿಂದಲೇ ಸುಟ್ಟುಹಾಕಿದೆನು. ಆದರೆ ಕಾಮ ವೈರಿಯಾದ ನನ್ನನ್ನೂ ಕಾಶೀಕ್ಷೇತ್ರದ ಅಭಿಲಾಷೆಯು ಮಾತ್ರ ಬಹುವಿಧವಾಗಿ ಪೀಡಿಸುತ್ತಿರುವುದು ಆಶ್ಚರ್ಯಕರವೇ ಆಗಿರುವುದು.

ಕಾಶೀಪ್ರವೃತ್ತಿಮನ್ವೇಷ್ಟುಂ ಕಂ ವಾ ಪ್ರಹಿಣುಯಾಮಿತಃ ।
ಜ್ಞಾತುಂ ಕ ಏವ ನಿಪುಣೋ ಯತಃ ಸ ಚತುರಾನನಃ ॥ ೫ ॥
ಇತ್ಯಾಹೂಯ ವಿಧಾತಾರಂ ಬಹುಮಾನಪುರಸ್ಸರಂ ।
ತತ್ರೋಪವೇಶ್ಯ ಶ್ರೀಕಂಠಃ ಪ್ರೋವಾಚ ಚತುರಾನನಂ ॥ ೬ ॥
ಯೋಗಿನ್ಯಃ ಪ್ರೇಷಿತಾಃ ಪೂರ್ವಂ ಪ್ರೇಷಿತೋಽಥ ಸಹಸ್ರಗುಃ ।
ನಾದ್ಯಾಪಿ ತೇ ನಿವರ್ತಂತೇ ಕಾಶ್ಯಾಃ ಕಮಲಸಂಭವ ॥ ೭ ॥
ಸಾ ಸಮುತ್ಸುಕಯೇತ್ಯಾಕಾಶೀ ಲೋಕೇಶ ಮಮ ಮಾನಸಂ ।
ಪ್ರಾಕೃತಸ್ಯ ಜನಸ್ಯೇವ ಚಂಚಲಾಕ್ಷೀವ ಕಾಚನ ॥ ೮ ॥
ಮಂದರೇತ್ರ ರತಿರ್ಮೇ ನ ಭೃಶಂ ಸುಂದರಕಂದರೇ ।
ಅನಚ್ಛತುಚ್ಛಪಾನೀಯೇ ನಕ್ರಸ್ಯೇವಾಲ್ಪಪಲ್ವಲೇ ॥ ೯ ॥
ನಾಬಾಧಿಷ್ಟ ತಥಾ ಮಾಂ ಸ ತಾಪೋ ಹಾಲಾಹಲೋದ್ಭವಃ ।
ಕಾಶೀವಿರಹಜನ್ಮಾತ್ರ ಯಥಾ ಮಾಮತಿ ಬಾಧತೇ ॥ ೧೦ ॥

---

೫. ಕಾಶೀಕ್ಷೇತ್ರದ ವಿಚಾರವನ್ನು ತಿಳಿದುಕೊಳ್ಳಲು ಇಲ್ಲಿಂದ ಮತ್ತೆ ಯಾರನ್ನು ಕಳುಹಲಿ? ಅಲ್ಲಿನ ವಿದ್ಯಮಾನಗಳನ್ನು ತಿಳಿಸಲು ಯಾವನು ತಾನೆ ನಿಪುಣನಾಗಿರುವನು? ಪ್ರಕೃತದಲ್ಲಿ ಚತುರ್ಮುಖನಾದ ಬ್ರಹ್ಮನೇ ಉತ್ತಮ ದೂತನೆಂದು ತೋರುತ್ತಿರುವುದು.”

೬. ಇಂತೆಂದು ಯೋಚಿಸಿ ಉಚಿತಮರ್ಯಾದೆಗಳೊಡನೆ ಬ್ರಹ್ಮದೇವನನ್ನು ಬರಮಾಡಿಕೊಂಡು ಸಮೀಪದಲ್ಲಿ ಕುಳ್ಳಿರಿಸಿ ನೀಲಕಂಠನು ಆತನಿಗೆ ಹೇಳತೊಡಗಿದನು.

೭. “ಎಲೈ ಕಮಲೋದ್ಭವನೆ! ಕಾಶೀಕ್ಷೇತ್ರದ ವೃತ್ತಾಂತಗಳನ್ನು ತಿಳಿದುಬರಲು ಮೊದಲು ಯೋಗಿನಿಯರನ್ನು ಕಳುಹಿಸಿದೆನು. ಬಳಿಕ ಸೂರ್ಯನು ಹೋದನು. ಅವರಾಗಲಿ ಅವನಾಗಲಿ ಇಂದಿನವರೆಗೂ ಕಾಶೀಕ್ಷೇತ್ರದಿಂದ ಹಿಂದಿರುಗಲಿಲ್ಲವು.

೮. ಅಯ್ಯಾ ಲೋಕಜನಕನೆ! ಆ ಕಾಶಿಯು ನನ್ನ ಮನಸ್ಸಿನಲ್ಲಿಯೂ ಅತ್ಯಂತವಾದ ಕುತೂಹಲವನ್ನುಂಟುಮಾಡುತ್ತಿರುವುದು. ಇಂದ್ರಿಯಲೋಲುಪರಾದ ಪ್ರಾಕೃತ ಜನರು ಒಬ್ಬಾನೊಬ್ಬ ಸುಂದರಿಯಾದ ಸ್ತ್ರೀಯ ಮೋಹಕ್ಕೊಳಗಾಗುವಂತೆ ನಾನು ಕಾಶಿಗಾಗಿ ಅಭಿಲಷಿಸುತ್ತಿರುವೆನು.

೯. ಸುಂದರಗಳಾದ ತಪ್ಪಲುಗಳಿಂದ ಕೂಡಿದುದಾದರೂ ಈ ಮಂದರಪರ್ವತದಲ್ಲಿ ವಿಶೇಷವಾದ ಅಭಿರುಚಿಯಿರುವುದಿಲ್ಲ. ಕಲ್ಮಷಯುಕ್ತವೂ, ತುಚ್ಛವೂ ಆದ ನೀಚ ಜಲಾಶಯದಲ್ಲಿ ಮೊಸಳೆಗೆ ಎಂದೂ ಪ್ರೀತಿಯಿಲ್ಲವಷ್ಟೆ.

೧೦. ಈ ಕಾಶೀಕ್ಷೇತ್ರದ ಅಗಲಿಕೆಯಿಂದುಂಟಾದ ವ್ಯಥೆಯು ನನ್ನನ್ನು

ಶೀತರಶ್ಮಿಃ ಶಿರಸ್ಥೋಽಪಿ ವರ್ಷನ್ಪೀಯೂಷಸೀಕರೈಃ ।
ಕಾಶೀವಿಶ್ಲೇಷಜಂ ತಾಪಂ ನಾಹರ್ಹೋ ಗಮಯಿತುಂ ಪ್ರಭುಃ ॥ ೧೧ ॥
ವಿಧೇ ವಿಧೇಹಿ ಮೇ ಕಾರ್ಯಮಾರ್ಯಧುರ್ಯ ಮಹಾಮತೇ ।
ಯಾಹಿ ಕಾಶೀಮಿತಸ್ತೂರ್ಣಂ ಯತಸ್ವ ಚ ಮನೋಹಿತೇ ॥ ೧೨ ॥
ಬ್ರಹ್ಮಂಸ್ತ್ವಮೇವ ತದ್ವೇತ್ಸಿ ಕಾಶೀತ್ಯಜನಕಾರಣಂ ।
ಮಂದೋಽಪಿ ನ ತ್ಯಜೇತ್ಕಾಶೀಂ ಕಿಮು ಯೋ ವೇತ್ತಿ ಕಿಂಚನ ॥ ೧೩ ॥
ಅದ್ಯೈವ ಕಿಂ ನ ಗಚ್ಛೇಯಂ ಕಾಶೀಂ ಬ್ರಹ್ಮನ್ಸ್ವಮಾಯಯಾ ।
ದಿವೋದಾಸಂ ಸ್ವಧರ್ಮಸ್ಥಂ ನ ತೂಲ್ಲಂಘಿತುಮುತ್ಸಹೇ ॥ ೧೪ ॥
ವಿಧೇ ಸರ್ವವಿಧೇಯಾನಿ ತ್ವಮೇವ ವಿದಧಾಸಿ ಯತ್ ।
ಇತಿ ಚೇತಿ ಚ ವಕ್ತವ್ಯಂ ತ್ವಯ್ಯಪಾರ್ಥಮತೋಽಖಿಲಂ ॥ ೧೫ ॥

---

ಎಷ್ಟು ಬಾಧಿಸುತ್ತಿರುವುದೊ, ಅಷ್ಟರಮಟ್ಟಿಗೆ ಪೂರ್ವದಲ್ಲಿ ಹಾಲಾಹಲ ವಿಷವನ್ನು ಪಾನಮಾಡಿದ ಸಂತಾಪವೂ ಬಾಧೆಗೊಳಿಸಲಿಲ್ಲ.

೧೧. ಶೀತಕಿರಣನಾದ ಚಂದ್ರನು ನನ್ನ ತಲೆಯಮೇಲೆ ಕುಳಿತು ತನ್ನ ಅಮೃತವನ್ನು ಸುರಿಸುತ್ತಿದ್ದರೂ ಕಾಶೀಕ್ಷೇತ್ರದ ವಿರಹದಿಂದುಂಟಾದ ತಾಪವನ್ನು ಶಮನಮಾಡಲು ಸಮರ್ಥನಾಗಿಲ್ಲವು.

೧೨. ಬ್ರಹ್ಮನೆ! ನೀನು ಪೂಜ್ಯತಮರಲ್ಲಿ ಅಗ್ರಗಣ್ಯನಾಗಿರುವೆ. ಮಹಾ ಪ್ರಾಜ್ಞನೂ ಆಗಿರುವೆ. ಆದುದರಿಂದ ನನ್ನ ಕಾರ್ಯವನ್ನು ನೀನೇ ನೆರವೇರಿಸ ಬೇಕು. ಶೀಘ್ರವಾಗಿ ಇಲ್ಲಿಂದ ಕಾಶಿಗೆ ಹೋಗಿ ನನ್ನ ಅಭಿಪ್ರಾಯದ ಸಾಧನೆ ಗಾಗಿ ಪ್ರಯತ್ನವನ್ನು ಮಾಡಬೇಕು.

೧೩. ಚತುರ್ಮುಖನೆ! ನಾನು ಕಾಶಿಯನ್ನು ಬಿಟ್ಟು ಬಂದುದಕ್ಕೆ ಕಾರಣವನ್ನು ನೀನು ಆದ್ಯಂತವಾಗಿ ತಿಳಿದಿರುವೆ. ಎಂತಹ ಮೂಢನೂ ಕಾಶಿಯನ್ನೊಮ್ಮೆ ಸೇರಿದಮೇಲೆ ಬಿಟ್ಟುಬರಲಾರನೆಂದ ಮೇಲೆ ಆ ಕ್ಷೇತ್ರದ ಮಾಹಾತ್ಮ್ಯದ ಕಿಂಚಿದಂಶವನ್ನು ತಿಳಿದವರ ವಿಷಯವನ್ನು ಹೇಳಲೇಕೆ?

೧೪. ನನ್ನ ಮಾಯಾ ಶಕ್ತಿಯ ಸಹಾಯದಿಂದ ಇಂದೇ ಕಾಶಿಗೆ ಏಕೆ ಹೋಗಬಾರದೆಂದು ನೀನು ಕೇಳಬಹುದು. ಆದರೆ ಸ್ವಧರ್ಮದಲ್ಲಿ ನಿರತ ನಾಗಿರುವ ದಿವೋದಾಸನ ರಾಜ್ಯಭಾರವನ್ನು ಉಲ್ಲಂಘನೆಮಾಡಲು ನನಗೆ ಅಭಿಲಾಷೆಯಿರುವುದಿಲ್ಲವು.

೧೫. ವಿಧಾತೃವೆ! ನೀನೇ ಸಕಲ ಪ್ರಪಂಚವ್ಯಾಪಾರಗಳನ್ನೂ ನಡೆಸು ವವನಾಗಿರುವುದರಿಂದ ನಿನಗೆ 'ಹೀಗೆ ಮಾಡು; ಹಾಗೆ ಮಾಡು' ಎಂದು ಹೇಳುವುದೇ ವ್ಯರ್ಥವಾಗಿರುವುದು.

ಅರಿಷ್ಟಂ ಗಚ್ಛ ಪಂಥಾಸ್ತೇ ಶುಭೋದರ್ಕೋ ಭವತ್ವಲಂ ।
ಆದಾಯಾಜ್ಞಾಂ ವಿಧಿರ್ಮೂರ್ಧ್ನಿ ಯಯೌ ವಾರಾಣಸೀಂ ಮುದಾ ॥ ೧೬ ॥
ಸಿತಹಂಸರಥಸ್ತೂರ್ಣಂ ಪ್ರಾಪ್ಯ ವಾರಾಣಸೀಂ ಪುರೀಂ ।
ಕೃತಕೃತ್ಯಮಿವಾತ್ಮಾನಮಮನ್ಯತ ತದಾತ್ಮಭೂಃ ॥ ೧೭ ॥
ಹಂಸಯಾನಫಲಂ ಮೇಽದ್ಯ ಜಾತಂ ಕಾಶೀಸಮಾಗಮೇ ।
ಕಾಶೀ ಪ್ರಾಪ್ತೌ ಯತಃ ಪ್ರೋಕ್ತಾ ಅಂತರಾಯಾಃ ಪದೇಪದೇ ॥ ೧೮ ॥
ದೃಶಿ ಧಾತುರಭೂದದ್ಯ ಮದ್ದೃಶೌ ಪ್ರಾಪ್ಯ ಸಾನ್ವಯಃ ।
ಸ್ಪಷ್ಟಂ ದೃಷ್ಟಿಪಥಂ ಪ್ರಾಪ್ತಾ ಯದೇಷಾಽಽನಂದವಾಟಿಕಾ ॥ ೧೯ ॥
ಸ್ವಯಂ ಸಿಂಚತಿ ಯಾಮದ್ಭಿಃ ಸ್ವಾಭಿಃ ಸ್ವರ್ಗತರಂಗಿಣೀ ।
ಯತ್ರಾನಂದಮಯಾ ವೃಕ್ಷಾ ಯತ್ರಾನಂದಮಯಾ ಜನಾಃ ॥ ೨೦ ॥

---

೧೬. ಇನ್ನು ಹೊರಡು. ನಿನಗೆ ಮಂಗಳವಾಗಲಿ. ದಾರಿಯು ನಿನಗೆ ಸುಖಮಯವಾಗಿ ಪರಿಣಮಿಸಲಿ.'' ಇಂತೆಂದ ಮಹಾದೇವನ ಅನುಜ್ಞೆಯನ್ನು ಶಿರಸಾವಹಿಸಿ ಆ ಬ್ರಹ್ಮದೇವನು ಸಂತೋಷದಿಂದ ವಾರಾಣಸೀ ಕ್ಷೇತ್ರವನ್ನು ಕುರಿತು ಪ್ರಯಾಣಮಾಡಿದನು.

೧೭. ಕಮಲಾಸನನಾದ ಆತನು ಶ್ವೇತವರ್ಣದ ಹಂಸಯಾನವನ್ನೇರಿ ಬರುತ್ತ ಜಾಗ್ರತೆಯಾಗಿಯೇ ವಾರಾಣಸೀಪುರಿಯನ್ನು ಸೇರಿ ಆ ಉತ್ತಮ ಕ್ಷೇತ್ರದ ದರ್ಶನ ಮಾತ್ರದಿಂದಲೇ ತಾನು ಕೃತಕೃತ್ಯನಾದಂತೆ ಯೋಚಿಸಿಕೊಂಡನು.

೧೮. ಕಾಶೀಕ್ಷೇತ್ರದ ಸಮಾಗಮದಿಂದಲೇ ನನ್ನ ಹಂಸಯಾನದ ಸಫಲತೆಯು ಇಂದಿಗೆ ಸಮಗ್ರವಾಯಿತು. ಈ ಕ್ಷೇತ್ರದ ದರ್ಶನವನ್ನು ಪಡೆಯ ಬಯಸುವವರಿಗೆ ಅಡಿಗಡಿಗೂ ಅನೇಕ ವಿಘ್ನಗಳು ಸಂಭವಿಸುತ್ತಿರುವುವೆಂದು ಹೇಳುತ್ತಿರುವರಲ್ಲವೆ?

೧೯. ಇಂದಿಗೆ ನನ್ನ ನೇತ್ರಗಳಿಗೆ ಸಂಬಂಧಪಟ್ಟುದರಿಂದ ''ದೃಶಿರ್ ಪ್ರೇಕ್ಷಣೇ'' ಎಂಬ ವ್ಯಾಕರಣಧಾತುವು ಸಾರ್ಥಕತೆಯನ್ನು ಪಡೆಯಿತು. ಇಂದಿಗೆ ಈ ಆನಂದವಾಟಿಕೆಯೆಂಬ ಕಾಶಿಯು ನನ್ನ ನೇತ್ರಪಥಕ್ಕೆ ಸ್ಪಷ್ಟವಾಗಿ ಗೋಚರವಾಯಿತು.

೨೦. ಈ ಕ್ಷೇತ್ರವನ್ನು ಸ್ವರ್ಗಲೋಕದಿಂದ ಅವತರಿಸಿದ ಗಂಗೆಯೇ ಸ್ವತಃ ತನ್ನ ನೀರಿನಿಂದ ಪಾವನಗೊಳಿಸುತ್ತಿರುವಳು. ಇಲ್ಲಿರುವ ವೃಕ್ಷಗಳೆಲ್ಲವೂ ಸಚ್ಚಿದಾನಂದ ಸ್ವರೂಪವುಳ್ಳವುಗಳಾಗಿರುವುವು. ಇಲ್ಲಿ ವಾಸಮಾಡುವ ಜನರೂ ಸಹ ಆನಂದಭರಿತರಾಗಿಯೇ ಇರುವರು.

ನಿರ್ವಿಶಂತಿ ಸದಾ ಕಾಶ್ಯಾಂ ಫಲಾನ್ಯಾನಂದವಂತ್ಯಪಿ ।
ಸದೈವಾನಂದಭೂಃ ಕಾಶೀ ಸದೈವಾನಂದದಃ ಶಿವಃ ।
ಆನಂದರೂಪಾ ಜಾಯಂತೇ ತೇನ ಕಾಶ್ಯಾಂ ಹಿ ಜಂತವಃ ॥ ೨೧ ॥
ಚರಣೌ ಚರಿತುಂ ವಿತ್ತಸ್ತಾವೇವ ಕೃತಿನಾವಿಹ ।
ಚರಣೌ ವಿಚರೇತಾಂ ಯೌ ವಿಶ್ವಭರ್ತೃಪುರೀಭುವಿ ॥ ೨೨ ॥
ತಾವೇವ ಶ್ರವಣೌ ಶ್ರೋತುಂ ಸಂವಿದಾತೇ ಬಹುಶ್ರುತೌ ।
ಇಹ ಶೃತಿಮತಾಂ ಪುಂಸಾಂ ಯಾಭ್ಯಾಂ ಕಾಶೀ ಶೃತಾಸಕೃತ್ ॥ ೨೩ ॥
ತದೇವ ಮನುತೇ ಸರ್ವಂ ಮನಸ್ತ್ವಿಹ ಮನಸ್ವಿನಾಂ ।
ಯೇನಾಮುಮನ್ಯತೇ ಜ್ಯೈಷಾ ಕಾಶೀ ಸರ್ವಪ್ರಮಾಣಭೂಃ ॥ ೨೪ ॥
ಬುದ್ಧಿರ್ಬುಧ್ಯತಿ ಸಾ ಸರ್ವಮಿಹ ಬುದ್ಧಿಮತಾಂ ಸತಾಂ ।
ಯಯೈತದ್ಧೂರ್ಜಟೇರ್ಧಾಮ ಧ್ರುವಂ ಸ್ವವಿಷಯೀಕೃತಂ ॥ ೨೫ ॥

---

೨೧. ಕಾಶೀಕ್ಷೇತ್ರವನ್ನು ಪ್ರವೇಶಮಾಡಲು ಇತರ ಪ್ರದೇಶಗಳಲ್ಲಿ ಬೆಳೆದ ಫಲಗಳೂ ಆನಂದದಾಯಕಗಳಾಗುವುವು. ಈ ಕಾಶಿಯು ಯಾವಾಗಲೂ ಆನಂದ ಭೂಮಿಯೇ ಆಗಿರುವುದು. ಇಲ್ಲಿ ನೆಲಸಿರುವ ವಿಶ್ವೇಶ್ವರನೂ ಸಕಲರಿಗೂ ಆನಂದವನ್ನೇ ಉಂಟುಮಾಡುತ್ತಿರುವನು. ಆದುದರಿಂದ ಈ ವಾರಾಣಸಿಯಲ್ಲಿ ಸಕಲ ಜಂತುಗಳೂ ಆನಂದಮಯಸ್ವರೂಪವುಳ್ಳವುಗಳಾಗಿಯೇ ತೋರುತ್ತಿರುವುವು.

೨೨. ಯಾವ ಪುಣ್ಯಪುರುಷನ ಚರಣದ್ವಂದ್ವಗಳು ಲೋಕೇಶ್ವರನ ನೆಲೆವನೆಯಾದ ಈ ಕ್ಷೇತ್ರದ ಭೂಮಿಯನ್ನು ಸುತ್ತುತ್ತಿರುವುವೊ, ಆ ಪಾದಗಳೇ ನಿಜವಾಗಿಯೂ ಸಂಚಾರಕ್ರಮವನ್ನು ತಿಳಿದುಕೊಂಡಿರುವುವು.

೨೩. ಈ ಲೋಕದಲ್ಲಿ ಶ್ರವಣತತ್ಪರರಾದ ಮಹಾತ್ಮರ ಯಾವ ಶ್ರೋತ್ರೇಂದ್ರಿಗಳು ಕಾಶೀಕ್ಷೇತ್ರದ ಮಹಾತ್ಮ್ಯವನ್ನು ಪದೇ ಪದೇ ಕೇಳುತ್ತಿರುವುವೊ, ಬಹುಶ್ರುತಗಳಾದ ಆ ಶ್ರವಣಗಳೇ ಕೇಳುವುದನ್ನು ಕಲಿತಿರುವುವೆಂದು ಹೇಳಬೇಕು.

೨೪. ಸಕಲ ಮಾನವರಿಗೂ ಪ್ರಾಪ್ಯೈಕದೇಶವಾದ ಈ ಕಾಶಿಯನ್ನು ಯಾವ ಮನೋಯೋಗಿಗಳ ಮನಸ್ಸು ಲಕ್ಷ್ಯವನ್ನಾಗಿ ಮಾಡಿಕೊಂಡಿರುವುದೊ, ಆ ಮನಸ್ಸೇ ನಿಜವಾದ ಧ್ಯಾನಕ್ಕೆ ಯೋಗ್ಯವಾದುದು.

೨೫. ಬುದ್ಧಿವಂತರೂ ಸತ್ಪುರುಷರೂ ಆದ ಯಾವ ಭಕ್ತೋತ್ತಮರ ಬುದ್ಧಿಯಲ್ಲಿ ಈ ಪ್ರದೇಶವೇ ಪರಮೇಶ್ವರನಿಗೆ ಶಾಶ್ವತನಿವಾಸವೆಂಬ ನಿಶ್ಚಯಜ್ಞಾನವು ಉತ್ಪನ್ನವಾಗಿರುವುದೊ, ಆ ಬುದ್ಧಿಯೇ ಸಕಲವನ್ನೂ ತಿಳಿಯಲು ಸಾಮರ್ಥ್ಯವುಳ್ಳದ್ದಾಗಿರುವುದು.

ವರಂ ತೃಣಾನಿ ಧಾನ್ಯಾನಿ ತಾನಿ ವಾತ್ಯಾಹತಾನ್ಯಪಿ ।
ಕಾಶ್ಯಾಂ ಯಾನ್ಯಾಪತಂತೀಹ ನ ಜನಾಃ ಕಾಶ್ಯದರ್ಶನಾಃ ॥ ೨೬ ॥
ಅದ್ಯ ಮೇ ಸಕಲಂ ಜಾಯುಃ ಪರಾರ್ಧದ್ವಯಸಂಮಿತಂ ।
ಯಸ್ಮಿನ್ಸತಿ ಮಯಾ ಪ್ರಾಪಿ ದುಷ್ಪ್ರಾಪಾ ಕಾಶಿಕಾ ಪುರೀ ॥ ೨೭ ॥
ಅಹೋ ಮೇ ಧರ್ಮಸಂಪತ್ತಿರಹೋ ಮೇ ಭಾಗ್ಯಗೌರವಂ ।
ಯದದ್ರಾಕ್ಷಿಷಮದ್ಯಾಹಂ ಕಾಶೀಂ ಸುಚಿರಚಿಂತಿತಾಂ ॥ ೨೮ ॥
ಅದ್ಯ ಮೇ ಸ್ವತಪೋವೃಕ್ಷೋ ಮನೋರಥಫಲೈರಲಂ ।
ಶಿವಭಕ್ತ್ಯಂಬುನಾ ಸಿಕ್ತಃ ಫಲಿತೋಽತಿಬೃಹತ್ತರೈಃ ॥ ೨೯ ॥
ಮಯಾ ವ್ಯಧಾಯಿ ಬಹುಧಾ ಸೃಷ್ಟಿಃ ಸೃಷ್ಟಿಂ ವಿತನ್ವತಾ ।
ಪರಮನ್ಯಾದೃಶೀ ಕಾಶೀ ಸ್ವಯಂ ವಿಶ್ವೇಶನಿರ್ಮಿತಾ ॥ ೩೦ ॥
ಇತಿ ಹೃಷ್ಟಮನಾ ವೇಧಾ ದೃಷ್ಟ್ವಾ ವಾರಾಣಸೀಂ ಪುರೀಂ ।
ವೃದ್ಧಬ್ರಾಹ್ಮಣರೂಪೇಣ ರಾಜಾನಂ ಚ ದದರ್ಶ ಹ ॥ ೩೧ ॥

---

೨೬. ಗಾಳಿಯ ಸೆಳೆತಕ್ಕೆ ಸಿಕ್ಕಿ ಕಾಶೀಪ್ರದೇಶದಲ್ಲಿ ಬಂದು ಆಕಸ್ಮಿಕವಾಗಿ ಬೀಳುವ ಹುಲ್ಲುಕಡ್ಡಿಗಳೂ ಧಾನ್ಯಕಣಗಳೂ ಸರ್ವೋತ್ತಮಗಳೆನಿಸುವುವೇ ಹೊರತು ಕಾಶಿಯ ದರ್ಶನವನ್ನು ಮಾಡದಿರುವ ಮನುಷ್ಯರೂ ಕೂಡ ನಿಕೃಷ್ಟರೇ ಆಗಿರುವರು.

೨೭. ಇಂದಿಗೆ ಎರಡು ಪರಾರ್ಧಗಳ ಪರಿಮಿತಿಯಿಂದ ಕೂಡಿದ ನನ್ನ ಆಯುಷ್ಯವು ಸಾಫಲ್ಯವನ್ನು ಹೊಂದಿತು. ಆ ದೀರ್ಘಾಯುಸ್ಸಿನ ಪರಿಣಾಮವಾಗಿಯೇ ಇತರರಿಗೆ ದುಷ್ಪ್ರಾಪ್ಯವಾದ ಕಾಶೀಕ್ಷೇತ್ರವು ನನಗೆ ಲಭ್ಯವಾಯಿತು.

೨೮. ಆಹಾ! ನನ್ನ ಧರ್ಮದ ಸಂಚಯವನ್ನೂ ಸೌಭಾಗ್ಯದ ಹಿರಿಮೆಯನ್ನೂ ಎಷ್ಟೆಂದು ವರ್ಣಿಸಲಿ! ಬಹುಕಾಲದಿಂದ ಮನಸ್ಸಿನಲ್ಲಿಯೇ ಬಯಸಲ್ಪಡುತ್ತಿದ್ದ ಈ ಕಾಶೀಕ್ಷೇತ್ರವನ್ನು ಇಂದು ನಾನು ಸಾಕ್ಷಾತ್ತಾಗಿಯೇ ನೋಡುವ ಪುಣ್ಯವೊದಗಿತು.

೨೯. ಶಿವಭಕ್ತಿಯೆಂಬ ನೀರಿನಿಂದ ಬೆಳೆದ ನನ್ನ ತಪಸ್ಸೆಂಬ ಮಹಾವೃಕ್ಷವು ಮನೋರಥಗಳೆಂಬ ಬಹುಪ್ರಮಾಣಗಳಾದ ಫಲಗಳಿಂದ ತುಂಬಿದುದಾಗಿ ಇಂದಿಗೆ ನನಗೆ ಮನಸ್ಸಂತೋಷವನ್ನುಂಟುಮಾಡಿತು.

೩೦. ಲೋಕಗಳ ಸೃಷ್ಟಿಯನ್ನು ಹೊರಗೆಡಹಿದ ನನ್ನಿಂದ ಬಹುವಿಧವಾದ ಸೃಷ್ಟಿಯೇ ವ್ಯಾಕೃತವಾಯಿತು. ಆದರೆ ಅನ್ಯಾದೃಶವಾದ ಈ ಕಾಶೀಕ್ಷೇತ್ರವು ಮಾತ್ರ ಶ್ರೀ ವಿಶ್ವೇಶ್ವರನ ಸ್ವಂತ ನಿರ್ಮಾಣವೇ ಆಗಿರುವುದು.

೩೧. ಇಂತೆಂದು ವಾರಾಣಸೀಕ್ಷೇತ್ರವನ್ನು ಕಂಡ ಬ್ರಹ್ಮದೇವನು ಅತ್ಯಂತ ಸಂತೋಷಗೊಂಡು ವೃದ್ಧನಾದ ಒಬ್ಬ ಬ್ರಾಹ್ಮಣನ ವೇಷವನ್ನು ತಾಳಿ ಅರಸನಾದ ದಿವೋದಾಸನನ್ನು ಕಾಣಲು ಬಂದನು.

ಜಲಾರ್ದ್ರಾಕ್ಷತಪಾಣಿಶ್ಚ ಸ್ವಸ್ತ್ಯುಕ್ತ್ವಾ ಪೃಥಿವೀಭುಜೇ ।
ಕೃತಪ್ರಣಾಮೋ ರಾಜ್ಞಾಥ ಭೇಜೇ ತದ್ದತ್ತಮಾಸನಂ ॥ ೩೨ ॥
ಕೃತಮಾನೋ ನೃಪತಿನಾ ಸೋಽಭ್ಯುತ್ಥಾನಾಸನಾದಿಭಿಃ ।
ವಿಪ್ರೋ ವ್ಯಜಿಜ್ಞಪದ್ಭೂಪಂ ಪೃಷ್ಟಾಗಮನಕಾರಣಂ ॥ ೩೩ ॥

ಬ್ರಾಹ್ಮಣ ಉವಾಚ :—

ಭೂಪಾಲ ಬಹುಕಾಲೀನೋಽಸ್ಮ್ಯಹಮತ್ರ ಚಿರಂತನಃ ।
ತ್ವಂ ತು ಮಾಂ ನೈವ ಜಾನಾಸಿ ಜಾನೇ ತ್ವಾಂ ಹಿ ರಿಪುಂಜಯಂ ॥ ೩೪ ॥
ಪರಃ ಶತಾ ಮಯಾ ದೃಷ್ಟಾ ರಾಜಾನೋ ಭೂರಿದಕ್ಷಿಣಾಃ ।
ವಿಜಿತಾನೇಕಸಂಗ್ರಾಮಾ ಯಾಯಜೂಕಾ ಜಿತೇಂದ್ರಿಯಾಃ ॥ ೩೫ ॥
ವಿನಿಷ್ಕೃತಾರಿಷಡ್ವರ್ಗಾಃ ಸುಶೀಲಾಃ ಸತ್ತ್ವಶಾಲಿನಃ ।
ಶೃತಸ್ಯ ಪಾರದೃಶ್ವಾನೋ ರಾಜನೀತಿವಿಚಕ್ಷಣಾಃ ॥ ೩೬ ॥

---

೩೨. ನೀರಿನಲ್ಲಿ ನೆನೆಯಿಸಿದ ಅಕ್ಷತೆಗಳನ್ನು ಕೈಯಲ್ಲಿ ಹಿಡಿದು ಆ ಮಹಾರಾಜನಿಗೆ ಸ್ವಸ್ತಿವಾಚನಗಳನ್ನು ಮಾಡಿದವನಾಗಿ ಆತನು ಸಾಷ್ಟಾಂಗಪ್ರಣಾಮವನ್ನು ಮಾಡಿ ಸಮರ್ಪಿಸಿದ ಉಚಿತಾಸನವನ್ನಲಂಕರಿಸಿದನು.

೩೩. ರಾಜೇಶ್ವರನು ಪ್ರತ್ಯುತ್ಥಾನ, ಆಸನದಾನಗಳೇ ಮುಂತಾದ ಉಚಿತೋಪಚಾರಗಳನ್ನು ಸಮರ್ಪಿಸಿ ಆಗಮನದ ಕಾರಣವನ್ನು ಕುರಿತು ವಿನಯಾನ್ವಿತನಾಗಿ ಪ್ರಶ್ನೆಮಾಡುತ್ತಿರಲು ಆ ಬ್ರಾಹ್ಮಣೋತ್ತಮನು ವಿಜ್ಞಾಪನೆ ಮಾಡಲುಪಕ್ರಮಿಸಿದನು.

೩೪. ಬ್ರಾಹ್ಮಣನು ಹೇಳುತ್ತಾನೆ:—ಮಹಾರಾಜನೆ! ನಾನು ಬಹಳ ಹಿಂದಿನ ಕಾಲದವನು. ಈ ಕ್ಷೇತ್ರಕ್ಕೂ ನಾನು ಚಿರಕಾಲದಿಂದಲೂ ನಿವಾಸಿಯಾಗಿರುವೆನು. ಆದರೆ ನೀನು ಮಾತ್ರ ನನ್ನನ್ನು ಪ್ರಾಯಶಃ ತಿಳಿದಿರಲಾರೆ. ನಾನಾದರೊ ಶತ್ರುಂಜಯನಾದ ನಿನ್ನನ್ನು ಚೆನ್ನಾಗಿ ಬಲ್ಲೆನು.

೩೫. ಬ್ರಾಹ್ಮಣಾದಿಗಳಿಗೆ ವಿಶೇಷ ದಕ್ಷಿಣೆಗಳನ್ನು ಕೊಡುತ್ತಿದ್ದವರೂ, ಅನೇಕ ಯುದ್ಧಗಳಲ್ಲಿ ವಿಜಯಶಾಲಿಗಳಾದವರೂ, ಯಜ್ಞಯಾಗಾದಿಗಳನ್ನು ನೆರವೇರಿಸಿದವರೂ, ಜಿತೇಂದ್ರಿಯರೂ ಆದ ನೂರಾರು ಮಹಾರಾಜರನ್ನು ಇಲ್ಲಿಯವರೆಗೂ ಕಂಡಿರುವೆನು.

೩೬. ಅವರು ಕಾಮಕ್ರೋಧಾದಿ ಅರಿಷಡ್ವರ್ಗಗಳೆಲ್ಲವನ್ನೂ ದೂರಮಾಡಿ, ಸೌಶೀಲ್ಯಾದಿ ಸದ್ಗುಣಭರಿತರಾಗಿ, ಪರಾಕ್ರಮವಂತರಾಗಿ ಶ್ರುತಿಸ್ಮೃತಿಗಳ ಪರಮಾರ್ಥ ತತ್ತ್ವಗಳನ್ನು ತಿಳಿದುಕೊಂಡು, ರಾಜನೀತಿಗಳ ನಿಯಮಗಳನ್ನು ಪಯೋಗಿಸುವುದರಲ್ಲಿಯೂ ಅತ್ಯಂತ ವಿಚಕ್ಷಣರಾಗಿದ್ದರು.

ದಯಾದಾಕ್ಷಿಣ್ಯನಿಪುಣಾಃ ಸತ್ಯವ್ರತಪರಾಯಣಾಃ ।
ಕ್ಷಮಯಾ ಕ್ಷಮಯಾ ತುಲ್ಯಾ ಗಾಂಭೀರ್ಯಜಿತಸಾಗರಾಃ ॥ ೩೭ ॥
ಜಿತರೋಷರಯಾಃ ಶೂರಾಃ ಸೌಮ್ಯಸೌಂದರ್ಯಭೂಮಯಃ ।
ಇತ್ಯಾದಿ ಗುಣಸಂಪನ್ನಾಃ ಸುಸಂಚಿತಯಶೋಧನಾಃ ॥ ೩೮ ॥
ಪರಂ ದ್ವಿತ್ರಾಃ ಪವಿತ್ರಾ ಯೇ ರಾಜರ್ಷೇ ತವ ಸದ್ಗುಣಾಃ ।
ತೇಷ್ವೇಷು ರಾಜಸು ಮಮ ಪ್ರಾಯಶೋ ನ ದೃಶಂ ಗತಾಃ ॥ ೩೯ ॥
ಪ್ರಜಾನಿಜಕುಟುಂಬಸ್ತ್ವಂ ತ್ವಂ ತು ಭೂದೇವದೈವತಃ ।
ಮಹಾತಪಸ್ಸಹಾಯಸ್ತ್ವಂ ಯಥಾ ನಾನ್ಯೇ ಯಥಾ ನೃಪಾಃ ॥ ೪೦ ॥
ಧನ್ಯೋ ಮಾನ್ಯೋಽಸಿ ಚ ಸತಾಂ ಪೂಜನೀಯೋಽಸಿ ಸದ್ಗುಣೈಃ ।
ದೇವಾ ಅಪಿ ದಿವೋದಾಸ ತ್ವತ್ತ್ರಾಸಾನ್ನ ವಿಮಾರ್ಗಗಾಃ ॥ ೪೧ ॥

---

೩೭. ಅವರೆಲ್ಲರೂ ದಯಾದಾಕ್ಷಿಣ್ಯಗಳಿಂದ ಕೂಡಿದವರಾಗಿ, ಸತ್ಯವಾಕ್ಯವೆಂಬ ವ್ರತವನ್ನೇ ಅಖಂಡವಾಗಿ ನಡೆಸುವವರೂ, ಸಹನೆಯ ಗುಣದಲ್ಲಿ ಭೂಮಿಗೆ ಸಮಾನರಾದವರೂ, ಗಾಂಭೀರ್ಯದಿಂದ ಸಮುದ್ರವನ್ನೂ ಧಿಕ್ಕರಿಸುವವರೂ ಆಗಿರುತ್ತಿದ್ದರು.

೩೮. ಎಲ್ಲರೂ ರೋಷದ ವೇಗವನ್ನು ತಡೆಗಟ್ಟಿದವರು. ಶೂರರು. ಪ್ರಸನ್ನ ಮುಖಗಳುಳ್ಳವರು. ಶರೀರ ಸೌಂದರ್ಯದ ಖನಿಗಳು. ಇವೇ ಮೊದಲಾದ ಸದ್ಗುಣಗಳಿಂದ ಭರಿತರಾಗಿ ಜೀವಮಾನದಲ್ಲೆಲ್ಲ ಸತ್ಕೀರ್ತಿಯೆಂಬ ಧನವೊಂದನ್ನೇ ಶ್ರದ್ಧೆಯಿಂದ ಗಳಿಸುತ್ತಿದ್ದರು.

೩೯. ಎಲೈ ರಾಜರ್ಷಿಯೆ ! ಆದರೆ ಇಷ್ಟು ಜನರಲ್ಲಿಯೂ ನಿನ್ನಲ್ಲಿರುವಂತಹ ಸದ್ಗುಣಗಳುಳ್ಳ ಪವಿತ್ರರಾದ ಇಬ್ಬರು ಮೂವರನ್ನು ಮಾತ್ರ ನೋಡಿರುವೆನು. ಅವರನ್ನುಳಿದು ಆ ರಾಜೋತ್ತಮರಲ್ಲಿಯೂ ಸಹ ಪ್ರಾಯಶಃ ನಿನಗೆ ಸಮಾನರೆನಿಸಿದವರು ನನ್ನ ದೃಷ್ಟಿಗೆ ಬಿದ್ದಿಲ್ಲವು.

೪೦. ನೀನು ಪ್ರಜೆಗಳನ್ನೇ ಕುಟುಂಬವನ್ನಾಗಿ ತಿಳಿದು ಪಾಲಿಸುತ್ತಿರುವೆ. ಎಲೈ ರಾಜನೆ! ನೀನೇ ಅವರಿಗೆ ದೈವಪ್ರಾಯನಾಗಿ ಸಕಲಾಭೀಷ್ಟಗಳನ್ನು ಕೊಡುತ್ತಿರುವೆ. ಅಲ್ಲದೆ ಮಹೋಗ್ರವಾದ ತಪಸ್ಸಿಗೆ ಸಹಾಯವನ್ನೂ ಪಡೆದಿರುವೆ. ಇಂತಹ ಉತ್ತಮಗುಣಶಾಲಿಗಳು ಹಿಂದೆ ಇತರರು ಯಾರೂ ಇರಲಿಲ್ಲ.

೪೧. ನೀನೇ ಧನ್ಯನು. ಸಕಲ ಸಜ್ಜನರ ಮನ್ನಣೆಗೂ ಪಾತ್ರನಾಗಿರುವೆ. ಸದ್ಗುಣಗಳುಳ್ಳವನಾದುದರಿಂದ ಲೋಕಪೂಜ್ಯನಾಗಿರುವೆ. ಎಲೈ ದಿವೋದಾಸನೆ! ನಿನ್ನ ಭಯದಿಂದಲೇ ದೇವತೆಗಳೂ ಸಹ ಅಯೋಗ್ಯಮಾರ್ಗಗಳಲ್ಲಿ ವ್ಯವಹರಿಸುತ್ತಿಲ್ಲ.

ಕಿಂ ನ ಸ್ತುತ್ಯಾ ತವ ನೃಪ ದ್ವಿಜಾನಾಮಸ್ಪೃಹಾವತಾಂ ।
ಕಿಂ ಕುರ್ಮಸ್ತ್ವದ್ಗುಣಗ್ರಾಮಾಃ ಸ್ತಾವಕಾನ್ನಃ ಪ್ರಕುರ್ವತೇ ॥ ೪೨ ॥
ಗೋಷ್ಠೀ ತಿಷ್ಠತ್ವಿಯಂ ತಾವತ್ಪ್ರಸ್ತುತಂ ಶೃಣು ಸಾಂಪ್ರತಂ ।
ಯಷ್ಟುಕಾಮೋಽಸ್ಮ್ಯಹಂ ರಾಜಂಸ್ತ್ವಾಂ ಸಹಾಯಮತೋ ವೃಣೇ ॥ ೪೩ ॥
ತ್ವಯಾ ರಾಜನ್ವತೀ ಚೈಷಾಽವನಿಃ ಸರ್ವರ್ದ್ಧಿಭಾಜನಂ ।
ಅಹಂ ಚಾಸ್ತಿಧನೋ ರಾಜನ್ನ್ಯಾಯೋಪಾತ್ತಮಹಾಧನಃ ॥ ೪೪ ॥
ಇಯಂ ಚ ರಾಜಧಾನೀ ತೇ ಕರ್ಮಭೂಮಾವನುತ್ತಮಾ ।
ಯಸ್ಯಾಂ ಕೃತಾನಾಂ ಕಾರ್ಯಾಣಾಂ ಸಂವರ್ತೇಽಪಿ ನ ಸಂಕ್ಷಯಃ ॥ ೪೫ ॥
ಸಂಚಿತಂ ಯದ್ಧನಂ ಪುಂಭಿರ್ನಯಸನ್ಮಾರ್ಗಗಾಮಿಭಿಃ ।
ತತ್ಕಾಶ್ಯಾಂ ವಿನಿಯುಜ್ಯೇತ ಕ್ಲೇಶಾಯೇತರಥಾ ಭವೇತ್ ॥ ೪೬ ॥
ಮಹಿಮಾನಂ ಪರಂ ಕಾಶ್ಯಾಃ ಕೋಽಪಿ ವೇದ ನ ಭೂಪತೇ ।
ಋತೇ ತ್ರಿನಯನಾಚ್ಛಂಭೋಃ ಸರ್ವಜ್ಞಾನಪ್ರದಾಯಿನಃ ॥ ೪೭ ॥

---

೪೨. ಮಹಾರಾಜನೆ! ಬ್ರಾಹ್ಮಣರೂ ಸಕಲ ಕಾಮನಾರಹಿತರೂ ಆಗಿರುವ ನಮಗೆ ನಿನ್ನನ್ನು ಸ್ತೋತ್ರಮಾಡಿದುದರಿಂದಾಗಬೇಕಾದುದೇನು? ಆದರೂ ಈ ವಿಷಯದಲ್ಲಿ ನಮಗೆ ಸ್ವಾತಂತ್ರ್ಯವಿಲ್ಲದಂತೆಯೇ ಆಗಿರುವುದು. ನಿನ್ನಲ್ಲಿರುವ ಸದ್ಗುಣಗಳ ಸಮೂಹವೇ ನಮ್ಮನ್ನು ಸ್ತುತಿಪಾಠಕರನ್ನಾಗಿ ಮಾಡಿರುವುದು.

೪೩. ಈ ವಿಚಾರವದಂತಿರಲಿ. ಈಗ ನನಗೊದಗಿರುವ ಕಾರ್ಯಗೌರವವನ್ನು ನಿನ್ನಲ್ಲಿ ವಿಜ್ಞಾಪಿಸಿಕೊಳ್ಳುವೆನು. ಎಲೈ ರಾಜನೆ! ನಾನು ಯಜ್ಞಗಳನ್ನು ಮಾಡಬೇಕೆಂಬ ಕುತೂಹಲವುಳ್ಳವನಾಗಿರುವೆನು. ಆದುದರಿಂದ ನೀನು ಸಹಾಯಕನಾಗಬೇಕೆಂದು ಯಾಚಿಸಲು ಇಲ್ಲಿಗೆ ಬಂದಿರುವೆನು.

೪೪. ಈ ದೇಶವೆಲ್ಲವೂ ನಿನ್ನಿಂದಲೇ ಸನಾಯಕವೆಂದು ಕರೆಯಲ್ಪಡುತ್ತಿರುವುದು. ಸಕಲೈಶ್ವರ್ಯಗಳಿಗೂ ನೆಲೆಮನೆಯಾಗಿರುವುದು. ನೃಪನೆ! ನಾನೂ ಸಹ ಯತ್ಕಿಂಚಿತ್ತಾದ ಧನವುಳ್ಳವನಾಗಿರುವೆನು. ನನ್ನ ಸಮಗ್ರ ವೈಭವವೂ ನ್ಯಾಯಮಾರ್ಗದಲ್ಲಿಯೇ ಸಂಪಾದಿತವಾಗಿರುವುದು.

೪೫. ಕರ್ಮಭೂಮಿಯೆನಿಸಿದ ಭರತಖಂಡದಲ್ಲಿ ಈ ನಿನ್ನ ರಾಜಧಾನಿಯಾದ ಕಾಶೀಕ್ಷೇತ್ರವು ಸರ್ವೋತ್ತಮವಾದ ಪ್ರದೇಶವಾಗಿರುವುದು. ಇಲ್ಲಿ ನೆರವೇರಿಸಿದ ಸತ್ಕರ್ಮಗಳ ಫಲಗಳಿಗೆ ಪ್ರಳಯಕಾಲದಲ್ಲಿಯೂ ನಾಶವೆಂಬುದಿಲ್ಲ.

೪೬. ಮನುಷ್ಯನು ವಿನಯ ಮತ್ತು ಸದಾಚಾರಗಳಿಂದ ಯಾವ ಧನವನ್ನು ಶೇಖರಿಸಿರುವನೊ, ಅದನ್ನು ಕಾಶೀಕ್ಷೇತ್ರದಲ್ಲಿಯೇ ಸದ್ವಿನಿಯೋಗಮಾಡಬೇಕು. ಇತರ ವಿಧದಲ್ಲಿ ವ್ಯಯವನ್ನುಮಾಡಲು ಕೇವಲ ಕ್ಲೇಶಪಾಗಿಯೆ ಪರಿಣಮಿಸುವುದು.

೪೭. ತ್ರಿನೇತ್ರಗಳಿಂದೊಪ್ಪುವವನೂ, ಸಕಲರಿಗೂ ಜ್ಞಾನದಾಯಕನೂ

ಮನ್ಯೇ ಧನ್ಯತರೋಽಸಿ ತ್ವಂ ಬಹುಜನ್ಮಶತಾರ್ಜಿತೈಃ ।
ಸುಕೃತೈಃ ಪಾಸಿ ಯತ್ಕಾಶೀಂ ವಿಶ್ವಭರ್ತುಃ ಪರಾಂ ತನುಮ್ ॥ ೪೮ ॥
ಕಾಶೀ ತ್ರಿಜಗತೀಸಾರಸ್ತ್ರಿವೇದೀಸಾರ ಏವ ವೈ ।
ತ್ರಿವರ್ಗೋತ್ತರಸಾರಶ್ಚ ನಿರ್ಣೀತೇತಿ ಮಹರ್ಷಿಭಿಃ ॥ ೪೯ ॥
ವಿಶ್ವೇಶಾನುಗ್ರಹೇಣೈವ ತ್ವಯೈಷಾ ಪಾಲ್ಯತೇ ಪುರೀ ।
ಏಕಸ್ಯಾಪ್ಯವನಾತ್ಕಾಶ್ಯಾಂ ತ್ರೈಲೋಕ್ಯಮವಿತಂ ಭವೇತ್ ॥ ೫೦ ॥
ಅನ್ಯಚ್ಚ ತೇ ಹಿತಂ ವಚ್ಮಿ ಯದಿ ತೇ ರೋಚತೇಽನಘ ।
ಪ್ರೀಣನೀಯಃ ಸದೈವೈಕೋ ವಿಶ್ವೇಶಃ ಸರ್ವಕರ್ಮಭಿಃ ॥ ೫೧ ॥
ಅನ್ಯದೇವಧಿಯಾ ರಾಜನ್ವಿಶ್ವೇಶಂ ಪಶ್ಯ ಮಾ ಕ್ವಚಿತ್ ।
ಬ್ರಹ್ಮವಿಷ್ಣ್ವಿಂದ್ರಚಂದ್ರಾರ್ಕಕ್ರೀಡೇಯಂ ತಸ್ಯ ಧೂರ್ಜಟೇಃ ॥ ೫೨ ॥

---

ಆಗಿರುವ ಪರಮೇಶ್ವರನೊಬ್ಬನನ್ನುಳಿದು ಮತ್ತೆ ಯಾವನೂ ಕಾಶೀಕ್ಷೇತ್ರದ ಪರಾತ್ಪರವಾದ ಮಹಿಮೆಯನ್ನು ತಿಳಿಯಲಾರನು.

೪೮. ಲೋಕೇಶ್ವರನ ಅಪರ ಶರೀರವೆಂದು ಪ್ರಸಿದ್ಧವಾದ ಈ ಕಾಶೀಕ್ಷೇತ್ರವನ್ನು ಪಾಲಿಸುತ್ತಿರುವುದರಿಂದ ನೀನು ಅನೇಕ ನೂರು ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಗಳಿಂದ ಕೂಡಿದ ಧನ್ಯತಮನೆಂದೇ ತಿಳಿಯುವೆನು.

೪೯. ಈ ಕಾಶಿಯು ಮೂರು ಲೋಕಗಳ ಸಾರಭೂತವಾಗಿರುವುದು. ಮೂರು ವೇದಗಳಲ್ಲಿ ಪ್ರತಿಪಾದ್ಯವಾದ ಸಾರವೂ ಆಗಿರುವುದು. ಧರ್ಮಾರ್ಥಕಾಮಗಳನ್ನು ಮೀರಿದ ಮೋಕ್ಷಕ್ಕೂ ಇದೇ ಏಕಾಂತವಾದ ಮಾರ್ಗವೆಂದು ಮಹರ್ಷಿಗಳು ನಿಶ್ಚಯಿಸಿರುತ್ತಾರೆ.

೫೦. ವಿಶ್ವೇಶ್ವರನ ಅನುಗ್ರಹದ ಬಲದಿಂದಲೇ ನೀನು ಈ ನಗರವನ್ನು ಪಾಲಿಸುತ್ತಿರುವೆ. ಕಾಶಿಯಲ್ಲಿ ಒಬ್ಬ ಮನುಷ್ಯನನ್ನು ಅನ್ನವಸನಗಳಿಂದ ಪೋಷಿಸಲು ಮೂರುಲೋಕಗಳ ನಿವಾಸಿಗಳೆಲ್ಲರನ್ನೂ ಪಾಲಿಸಿದ ಪುಣ್ಯವೊದಗುವುದು.

೫೧. ಎಲೈ ಪಾಪರಹಿತನೆ! ನಿನಗೆ ಕೇಳಬೇಕೆಂಬ ಅಭಿಲಾಷೆಯಿದ್ದರೆ ಮತ್ತೊಂದು ಹಿತವಚನವನ್ನು ಹೇಳುವೆನು. ಸಕಲರೂ ಯಾವಾಗಲೂ ಸಮಸ್ತ ಕಾರ್ಯಗಳಿಂದಲೂ ವಿಶ್ವೇಶ್ವರನೊಬ್ಬನನ್ನೇ ಸಂತೋಷಗೊಳಿಸಬೇಕು.

೫೨. ರಾಜೇಂದ್ರನೆ! ಇತರ ದೇವತೆಗಳಂತೆ ಸಾಮಾನ್ಯನೆಂಬ ದೃಷ್ಟಿಯಿಂದ ಎಂದಿಗೂ ವಿಶ್ವೇಶ್ವರನನ್ನು ಕಾಣಬೇಡ. ಬ್ರಹ್ಮ, ವಿಷ್ಣು, ಮಹೇಂದ್ರ, ಚಂದ್ರ, ಸೂರ್ಯ, ಮುಂತಾದ ರೂಪಗಳಿಂದ ಆ ಧೂರ್ಜಟಿಯ ಲೀಲೆಯೇ ಈ ಜಗತ್ತಿನಲ್ಲಿ ವಿಸ್ತಾರಿತವಾಗಿರುವುದು.

ವಿಪ್ರೈರುದರ್ಕಮಿಚ್ಛದ್ಭಿಃ ಶಿಕ್ಷಣೀಯಾ ಯತೋ ನೃಪಾಃ ।
ಅತಸ್ತವ ಹಿತಂ ಖ್ಯಾತಂ ಕಿಂ ವಾ ಮೇ ಚಿಂತಯಾನಯಾ ॥ ೫೩ ॥
ಇತಿ ಜೋಷಂ ಸ್ಥಿತಂ ವಿಪ್ರಂ ಪ್ರತ್ಯುವಾಚ ನೃಪೋತ್ತಮಃ ।
ಸರ್ವಂ ಮಯಾ ಹೃದಿ ಧೃತಂ ಯತ್ತ್ವಯೋಕ್ತಂ ದ್ವಿಜೋತ್ತಮ ॥ ೫೪ ॥

ರಾಜೋವಾಚ :—

ಅಹಂ ಯಿಯಕ್ಷಮಾಣಸ್ಯ ತವ ಸಾಹಾಯ್ಯಕರ್ಮಣಿ ।
ದಾಸೋಽಸ್ಮಿ ಯಜ್ಞಸಂಭಾರಾನ್ನಯ ಮೇ ಕೋಶತೋಽಖಿಲಾನ್ ॥ ೫೫ ॥
ಯದಸ್ತಿ ಮೇಽಖಿಲಂ ತತ್ರ ಸಪ್ತಾಂಗೇಽಪಿ ಭವಾನ್ಪ್ರಭುಃ ।
ಯಜಸ್ವೈಕಮನಾ ಬ್ರಹ್ಮನ್ಸಿದ್ಧಂ ಮನ್ಯಸ್ವ ವಾಂಛಿತಂ ॥ ೫೬ ॥
ರಾಜ್ಯಂ ಕರೋಮಿ ಯದ್ಬ್ರಹ್ಮನ್ಸ್ವಾರ್ಥಂ ತನ್ನ ಮನಾಗಪಿ ।
ಪುತ್ರೈಃ ಕಲತ್ರೈರ್ದೇಹೇನ ಪರೋಪಕೃತಯೇ ಯತೇ ॥ ೫೭ ॥

---

೫೩. ಶ್ರೇಯೋಭಿಲಾಷಿಗಳಾದ ಬ್ರಾಹ್ಮಣರು ಯಾವಾಗಲೂ ರಾಜರನ್ನು ಸನ್ಮಾರ್ಗದಲ್ಲಿ ಶಿಕ್ಷಿಸುತ್ತಿರಬೇಕು. ಆದುದರಿಂದ ನಿನಗೆ ಉತ್ತರೋತ್ತರದಲ್ಲಿ ಹಿತವನ್ನುಂಟುಮಾಡುವ ಈ ಮಾತುಗಳನ್ನಾಡಿದೆನೇ ಹೊರತು ಈ ಚಿಂತೆಯಿಂದಾದರೂ ನನಗೆ ಆಗಬೇಕಾದದ್ದೇನು ?

೫೪. ಇಂತೆಂದು ಹೇಳಿ ಸುಮ್ಮನೆ ಕುಳಿತ ಬ್ರಾಹ್ಮಣೋತ್ತಮನನ್ನು ಕಂಡು ದಿವೋದಾಸ ಮಹಾರಾಜನು 'ಓ ದ್ವಿಜಶ್ರೇಷ್ಠ ! ನೀನು ಹೇಳಿದ ಮಾತುಗಳೆಲ್ಲವನ್ನೂ ನಾನು ಚೆನ್ನಾಗಿ ಹೃದಯದಲ್ಲಿ ಧರಿಸಿರುವೆನು' ಎಂಬುದಾಗಿ ಪ್ರತ್ಯುತ್ತರವನ್ನಿತ್ತನು.

೫೫. ರಾಜನು ಹೇಳುತ್ತಾನೆ:—"ಯಜ್ಞಗಳನ್ನು ಮಾಡಲೆಳಸುತ್ತಿರುವ ನಿನಗೆ ಸಹಾಯವನ್ನು ಮಾಡುವ ಕಾರ್ಯದಲ್ಲಿ ನಾನು ನಿನ್ನ ದಾಸನಾಗಿರುವೆನು. ನಿನ್ನ ಯಜ್ಞಗಳಿಗೆ ಬೇಕಾದ ಸಂಭಾರಗಳೆಲ್ಲವನ್ನೂ ನನ್ನ ರಾಜ್ಯ ಕೋಶದಿಂದ ತೆಗೆದುಕೊಂಡು ಹೋಗು.

೫೬. ಸಪ್ತಾಂಗ ಸಮನ್ವಿತವಾದ ನನ್ನ ಈ ರಾಜ್ಯದಲ್ಲಿ ನನ್ನದೆಂಬ ಯಾವುದಿರುವುದೊ, ಅದೆಲ್ಲಕ್ಕೂ ನೀನೇ ಸ್ವಾಮಿಯಾಗಿರುವೆ. ಬ್ರಾಹ್ಮಣನೆ! ನೀನು ಏಕಾಗ್ರಚಿತ್ತದಿಂದ ಯಜ್ಞಗಳನ್ನು ನಿರ್ವಹಿಸು. ನಿನ್ನ ಅಭೀಷ್ಟವೆಲ್ಲವೂ ನೆರವೇರಿತೆಂದೇ ನಿಶ್ಚಯಿಸಿಕೊ.

೫೭. ಎಲೈ ಬ್ರಾಹ್ಮಣನೆ! ನಾನು ಈ ದುರ್ಭರವಾದ ರಾಜ್ಯದ ಭಾರವನ್ನು ವಹಿಸುತ್ತಿರುವೆನಾದರೂ ಇದರಲ್ಲಿ ನನಗೆ ಸ್ವಾರ್ಥಾಭಿಲಾಷೆಯು ಎಳ್ಳಿನಷ್ಟೂ ಇರುವುದಿಲ್ಲ. ಮಕ್ಕಳು, ಹೆಂಡತಿಯರು, ಶರೀರ ಮುಂತಾದ ಸಕಲ ಸನ್ನಾಹಗಳಿಂದಲೂ ನಾನು ಪರೋಪಕಾರಗಳಲ್ಲಿಯೇ ನಿರತನಾಗಿರುವೆನು.

ರಾಜ್ಞಾಂ ಕ್ರತುಕ್ರಿಯಾಭ್ಯೋಽಪಿ ತೀರ್ಥೇಭ್ಯೋಽಪಿ ಸಮಂತತಃ ।
ಪ್ರಜಾಪಾಲನಮೇವೈಕೋ ಧರ್ಮಃ ಪ್ರೋಕ್ತೋ ಮನೀಷಿಭಿಃ ॥ ೫೮ ॥
ಪ್ರಜಾಸಂತಾಪಜೋ ವಹ್ನಿರ್ವಜ್ರಾದಪಿಸುದಾರುಣಃ ।
ದ್ವಿತ್ರಾನ್ಹಂತಿ ವಜ್ರಾಗ್ನಿಃ ಪೂರ್ವೋ ರಾಜ್ಯಂ ಕುಲಂ ತನುಂ ॥ ೫೯ ॥
ಯದಾವಭೃಥಸಿಸ್ನಾಸುರ್ಭವೇಯಂ ದ್ವಿಜಸತ್ತಮ ।
ತದಾ ವಿಪ್ರಪದಾಂಭೋಭಿರಭಿಷೇಕಂ ಕರೋಮ್ಯಹಂ ॥ ೬೦ ॥
ಹವನಂ ಬ್ರಾಹ್ಮಣಮುಖೇ ಯತ್ಕರೋಮಿ ದ್ವಿಜೋತ್ತಮ ।
ಮನ್ಯೇ ಕ್ರತುಕ್ರಿಯಾಭ್ಯೋಽಪಿ ತದ್ವಿಶಿಷ್ಟಂ ಮಹಾಮತೇ ॥ ೬೧ ॥
ಅಭಿಲಾಷೇಷು ಸರ್ವೇಷು ಜಾಗರ್ತ್ಯೇಕೋ ಹೃದೀಹ ಮೇ ।
ಅದ್ಯಾಪಿ ಮಾರ್ಗಣಃ ಕೋಽಪಿ ದ್ರಷ್ಟವ್ಯಃ ಸ್ವತನೋರಪಿ ॥ ೬೨ ॥
ಅಹೋ ಅಹೋಭಿರ್ಬಹುಭಿಃ ಫಲಿತೋ ಮೇ ಮನೋರಥಃ ।
ಯತ್ತ್ವಂ ಮೇಽದ್ಯ ಗೃಹೇ ಪ್ರಾಪ್ತಃ ಕಿಂಚಿತ್ಪ್ರಾರ್ಥಯಿತುಂ ದ್ವಿಜ ॥ ೬೩ ॥

---

೫೮. ಯಜ್ಞಗಳಿಗಿಂತಲೂ, ಇತರ ಕ್ರಿಯೆಗಳಿಗಿಂತಲೂ, ಭೂಲೋಕದ ಸಮಸ್ತ ತೀರ್ಥಯಾತ್ರೆಗಳಿಗಿಂತಲೂ, ರಾಜರಾದವರಿಗೆ ತಮ್ಮ ಪ್ರಜೆಗಳನ್ನು ಪಾಲನೆಮಾಡುವುದೇ ಉತ್ತಮಧರ್ಮವೆಂದು ಶಾಸ್ತ್ರಜ್ಞರೆಲ್ಲರೂ ಹೇಳುತ್ತಿರುವರು.

೫೯. ಪ್ರಜೆಗಳ ಸಂತಾಪವೆಂಬ ಬೆಂಕಿಯು ವಜ್ರಘಾತದ ಬೆಂಕಿಗಿಂತಲೂ ಭಯಂಕರವಾದುದು. ಸಿಡಿಲಿನ ಘಾತವು ಇಬ್ಬರು ಮೂವರನ್ನು ಮಾತ್ರ ನಾಶಗೊಳಿಸುವುದು. ಆದರೆ ಪ್ರಜೆಗಳ ಸಂತಾಪದಿಂದೆದ್ದ ಬೆಂಕಿಯು ರಾಜನಾದವನ ರಾಜ್ಯವನ್ನೂ, ವಂಶವನ್ನೂ, ದೇಹವನ್ನೂ ಒಮ್ಮೆಯೇ ನಾಶಮಾಡುವುದು.

೬೦. ಬ್ರಾಹ್ಮಣೋತ್ತಮನೆ! ನಾನು ಯಾವಾಗ ಅವಭೃಥಸ್ನಾನವನ್ನು ಮಾಡಲೆಳಸುವೆನೊ, ಆಗ ಬ್ರಾಹ್ಮಣರ ಪಾದಗಳನ್ನು ತೊಳೆದ ತೀರ್ಥೋದಕದಿಂದಲೇ ಅಭಿಷೇಕವನ್ನು ಮಾಡುತ್ತಿರುವೆನು.

೬೧. ಮಹಾಪ್ರಾಜ್ಞನಾದ ವಿಪ್ರನೆ! ನಾನು ನಿತ್ಯವೂ ಬ್ರಾಹ್ಮಣರ ಮುಖಾಗ್ನಿಯಲ್ಲಿ ಯಾವ ಹೋಮವನ್ನು ಮಾಡುತ್ತಿರುವೆನೊ (ಬ್ರಾಹ್ಮಣರನ್ನು ಭೋಜನಗಳಿಂದ ತೃಪ್ತಿಗೊಳಿಸುತ್ತಿರುವೆನೊ), ಅದನ್ನೇ ಸಕಲ ಯಜ್ಞಗಳ ಆಚರಣೆಗಿಂತಲೂ ಮುಖ್ಯಕರ್ತವ್ಯವೆಂದು ತಿಳಿದಿರುವೆನು.

೬೨. ಈಗ ನನಗೆ ಸಕಲ ಅಭಿಲಾಷೆಗಳಿಗಿಂತಲೂ ಒಂದು ಮಾತ್ರ ಪ್ರಬಲವಾಗಿ ಬಾಧಿಸುತ್ತಿರುವುದು. ಆ ಕೊರತೆ ಯಾವುದೆಂದರೆ ಇಲ್ಲಿಯವರೆಗೂ ಈ ನನ್ನ ದೇಹವನ್ನು ಅಪೇಕ್ಷಿಸಿದ ಯಾವ ಯಾಚಕನೂ ಕಾಣಿಸಲಿಲ್ಲವೆಂಬುದೇ ಆಗಿರುವುದು.

೬೩. ಆಶ್ಚರ್ಯ! ಬಹಳ ದಿವಸಗಳಾದಮೇಲೆ ನನ್ನ ಮನೋರಥವೆಂಬ

ಏಕಾಗ್ರಮಾನಸೋ ವಿಪ್ರ ಯಜ್ಞಾನ್ವಿಪುಲದಕ್ಷಿಣಾನ್ ।
ಬಹೂನ್ಯಜ ಕೃತಂ ವಿದ್ಧಿ ಸಾಹಾಯ್ಯಂ ಸರ್ವವಸ್ತುಷು ॥ ೬೪ ॥
ಇತಿ ರಾಜ್ಞೋ ಮಹಾಬುದ್ಧೇರ್ಧರ್ಮಶೀಲಸ್ಯ ಭಾಷಿತಂ ।
ಶ್ರುತ್ವಾ ತುಷ್ಟಮನಾಃ ಸ್ರಷ್ಟಾ ಕ್ರತುಸಂಭಾರಮಾಹರತ್ ॥ ೬೫ ॥
ಸಾಹಾಯ್ಯಂ ಪ್ರಾಪ್ಯ ರಾಜರ್ಷೇರ್ದಿವೋದಾಸಸ್ಯ ಪದ್ಮಭೂಃ ।
ಇಯಾಜ ದಶಭಿಃ ಕಾಶ್ಯಾಮಶ್ವಮೇಧೈರ್ಮಹಾಮಖೈಃ ॥ ೬೬ ॥
ಅದ್ಯಾಪಿ ಹೋಮಧೂಮೌಘೈರ್ಯದ್ವ್ಯಾಪ್ತಂ ಗಗನಾಂತರಂ ।
ತದಾ ಪ್ರಭೃತಿ ನ ವ್ಯೋಮ ನೀಲಿಮಾನಂ ಜಹಾತ್ಯದಃ ॥ ೬೭ ॥
ತೀರ್ಥಂ ದಶಾಶ್ವಮೇಧಾಖ್ಯಂ ಪ್ರಥಿತಂ ಜಗತೀತಲೇ ।
ತದಾ ಪ್ರಭೃತಿ ತತ್ರಾಸೀದ್ವಾರಾಣಸ್ಯಾಂ ಶುಭಪ್ರದಂ ॥ ೬೮ ॥
ಪುರಾ ರುದ್ರಸರೋನಾಮ ತತ್ತೀರ್ಥಂ ಕಲಶೋದ್ಭವ ।
ದಶಾಶ್ವಮೇಧಿಕಂ ಪಶ್ಚಾಜ್ಜಾತಂ ವಿಧಿಪರಿಗ್ರಹಾತ್ ॥ ೬೯ ॥

---

ವೃಕ್ಷವು ಫಲಭರಿತವಾದಂತಾಯಿತು. ವಿಪ್ರನೆ! ಇಂದು ನೀನು ನನ್ನನ್ನು ಯಾಚಿಸಲು ನನ್ನ ಮನೆಗೆ ಬಂದಿರುವೆಯಲ್ಲವೆ.

೬೪. ಎಲೈ ವಿಪ್ರೋತ್ತಮನೆ! ನೀನು ಏಕಾಗ್ರಮನಸ್ಸಿನಿಂದ ಬಹುದಕ್ಷಿಣೆಗಳಿಂದೊಡಗೂಡಿದ ಯಜ್ಞಗಳನ್ನು ನಿಶ್ಚಿಂತೆಯಾಗಿ ನೆರವೇರಿಸು. ಸಕಲ ವಸ್ತುಗಳ ಶೇಖರಣೆಯಲ್ಲಿಯೂ ನನ್ನ ಪೂರ್ಣ ಸಹಾಯವು ಇರುವುದೆಂದು ತಿಳಿದುಕೊ.''

೬೫. ಇಂತೆಂದು ಮಹಾಬುದ್ಧಿಶಾಲಿಯೂ, ಧರ್ಮಶೀಲನೂ ಆದ ಮಹಾರಾಜನಾಡಿದ ಮಾತುಗಳನ್ನು ಕೇಳಿ ಬ್ರಹ್ಮನು ಸಂತುಷ್ಟಾಂತರಂಗನಾಗಿ ಯಜ್ಞಸಂಭಾರಗಳನ್ನೆಲ್ಲ ಭಂಡಾರದಿಂದ ತೆಗೆದುಕೊಂಡನು.

೬೬. ರಾಜರ್ಷಿಯಾದ ದಿವೋದಾಸನ ಸಹಾಯಸಂಪತ್ತನ್ನು ಪಡೆದವನಾಗಿ ಕಮಲಸಂಭವನು ಕಾಶೀಕ್ಷೇತ್ರದಲ್ಲಿಯೇ ಮಹಾಯಜ್ಞಗಳೆನಿಸಿದ ಹತ್ತು ಅಶ್ವಮೇಧಗಳನ್ನು ನೆರವೇರಿಸಿದನು.

೬೭–೬೮. ಈ ಸಮಾರಂಭದಲ್ಲಿ ಎದ್ದ ಹೋಮಗಳ ಹೊಗೆಯ ಮೊತ್ತದಿಂದ ಆಚ್ಛಾದಿತವಾದ ಆಕಾಶವು ಅಂದಿನಿಂದ ಇಂದಿನವರೆಗೂ ತನ್ನ ನೀಲಿಮವನ್ನು ಬಿಟ್ಟಿರುವುದಿಲ್ಲ. ಆ ಕಾಲದಿಂದಲೇ ವಾರಾಣಸಿಯಲ್ಲಿ ಮಂಗಳಪ್ರದವಾದ ದಶಾಶ್ವಮೇಧನಾಮಕವಾದ ತೀರ್ಥವು ಉತ್ಪನ್ನವಾಗಿ ಭೂಮಂಡಲದಲ್ಲೆಲ್ಲ ಪ್ರಖ್ಯಾತಿಯನ್ನು ಪಡೆದಿರುವುದು.

೬೯. ಓ ಕಲಶಸಂಭವಾ! ಪೂರ್ವದಲ್ಲಿ ಆ ತೀರ್ಥವು ರುದ್ರಸರಸ್ಸೆಂಬ ಹೆಸರಿನಿಂದ ಕೂಡಿದ್ದಿತು. ಬಳಿಕ ತನ್ನ ಯಜ್ಞಗಳ ಕಾಲದಲ್ಲಿ ಬ್ರಹ್ಮನು ಅದನ್ನು

ಸ್ವಧರ್ಮನ್ಯತ್ರ ತತಃ ಪ್ರಾಪ್ತಾ ಭಗೀರಥಸಮಾಗಮಾತ್ ।
ಅತೀವ ಪುಣ್ಯವಜ್ಜಾತಮುತಸ್ತತ್ತೀರ್ಥಮುತ್ತಮಂ ॥ ೭೦ ॥
ವಿಧಿರ್ದಶಾಶ್ವಮೇಧೇಶಂ ಲಿಂಗಂ ಸಂಸ್ಥಾಪ್ಯ ತತ್ರ ವೈ ।
ಸ್ಥಿತವಾನ್ನ ಗತೋಽದ್ಯಾಪಿ ಕ್ವಾಪಿ ಕಾಶೀಂ ವಿಹಾಯ ತು ॥ ೭೧ ॥
ರಾಜ್ಞೋ ಧರ್ಮರತೇಸ್ತಸ್ಯ ಛಿದ್ರಂ ನಾವಾಪ ಕಿಂಚನ ।
ಅತಃ ಪುರಾರೇಃ ಪುರತೋ ವ್ರಜಿತ್ವಾ ಕಿಂ ವದೇದ್ವಿಧಿಃ ॥ ೭೨ ॥
ಕ್ಷೇತ್ರಪ್ರಭಾವಂ ವಿಜ್ಞಾಯ ಧ್ಯಾಯನ್ವಿಶ್ವೇಶ್ವರಂ ಶಿವಂ ।
ಬ್ರಹ್ಮೇಶ್ವರಂ ಚ ಸಂಸ್ಥಾಪ್ಯ ವಿಧಿಸ್ತತ್ರೈವ ಸಂಸ್ಥಿತಃ ॥ ೭೩ ॥
ಪರಾ ತನುರಿಯಂ ಕಾಶೀ ವಿಶ್ವೇಶಸ್ಯೇತಿ ನಿಶ್ಚಿತಂ ।
ಅಸ್ಯಾಃ ಸಂಸೇವನಾಚ್ಛಂಭುರ್ನ ಕುಪ್ಯತಿ ಪುರೋ ಮಯಿ ॥ ೭೪ ॥
ಕಃ ಪ್ರಾಪ್ಯ ಕಾಶೀಂ ದುರ್ಮೇಧಾಃ ಪುನಸ್ತ್ಯಕ್ತುಮಿಹೇಹತೇ ।
ಅನೇಕಜನ್ಮಜನಿತಕರ್ಮನಿರ್ಮೂಲನಕ್ಷಮಾಂ ॥ ೭೫ ॥

---

ಸ್ನಾನಾದಿಗಳಿಗಾಗಿ ಪರಿಗ್ರಹಿಸಿದುದರಿಂದ ದಶಾಶ್ವಮೇಧವೆಂಬುದಾಗಿ ಕರೆಯಲ್ಪಟ್ಟಿತು.

೭೦. ಕಾಲಾಂತರದಲ್ಲಿ ಭಗೀರಥನನ್ನು ಹಿಂಬಾಲಿಸಿ ಬಂದ ಗಂಗೆಯು ಈ ತೀರ್ಥದ ಮೂಲಕ ಹರಿದುಹೋಯಿತು. ಆದುದರಿಂದ ಮೊದಲೇ ಸರ್ವೋತ್ತಮವಾಗಿದ್ದ ಈ ತೀರ್ಥವು ಮತ್ತೂ ಹೆಚ್ಚಿನ ಪುಣ್ಯವನ್ನು ಗಳಿಸಿಕೊಡುವಂತಹುದಾಗಿ ಪರಿಣಮಿಸಿತು.

೭೧. ಬ್ರಹ್ಮನಾದರೊ ಆ ಸ್ಥಳದಲ್ಲಿಯೇ ದಶಾಶ್ವಮೇಧೇಶ್ವರವೆಂಬ ಲಿಂಗವನ್ನು ಸ್ಥಾಪನೆಮಾಡಿ ಅಲ್ಲಿಯೆ ನೆಲಸಿದನು. ಇಂದಿನವರೆಗೂ ಕಾಶಿಯನ್ನು ತ್ಯಜಿಸಿ ಎಲ್ಲಿಗೂ ಹೋಗಿರುವುದಿಲ್ಲ.

೭೨. ಕೇವಲ ಸ್ವಧರ್ಮದಲ್ಲಿಯೇ ನಿರತನಾಗಿದ್ದ ದಿವೋದಾಸರಾಜನಲ್ಲಿ ಅತ್ಯಲ್ಪವಾದ ಅಧರ್ಮವನ್ನೂ ಬ್ರಹ್ಮನು ಕಾಣಲಾರದಾದನು. ಅದುದರಿಂದ ಮಹೇಶ್ವರನ ಸಮ್ಮುಖಕ್ಕೆ ಹೋಗಿ ಆತನು ಏನನ್ನು ತಾನೆ ಹೇಳಲಾದೀತು ?

೭೩. ಆ ಕ್ಷೇತ್ರದ ಮಹಾಮಹಿಮೆಯನ್ನು ತಿಳಿದು, ವಿಶ್ವೇಶ್ವರನಾದ ಸದಾಶಿವನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ, ಬ್ರಹ್ಮೇಶ್ವರಲಿಂಗವನ್ನು ಸ್ಥಾಪಿಸಿ ಚತುರ್ಮುಖನು ಕಾಶಿಯಲ್ಲಿಯೇ ಶಾಶ್ವತವಾಗಿ ನೆಲಸಿದನು.

೭೪. ಲೋಕೇಶ್ವರನಿಗೆ ಈ ಕಾಶಿಯು ಮತ್ತೊಂದು ಶರೀರವೆಂದೇ ಶಾಸ್ತ್ರಗಳು ನಿಶ್ಚಯಿಸಿರುವುವು. ಆದುದರಿಂದ ಈ ಕ್ಷೇತ್ರವನ್ನು ನಾನು ಸೇವಿಸುತ್ತಿರಲು ಮಹಾದೇವನು ನನ್ನ ವಿಷಯದಲ್ಲಿ ಕೋಪಗೊಳ್ಳಲಾರನು.

೭೫. ಅನೇಕ ಜನ್ಮಗಳಲ್ಲಿ ಸಂಪಾದಿಸಿರುವ ಕರ್ಮಗಳನ್ನು ನಿರ್ಮೂಲ

ವಿಶ್ವಸಂತಾಪಸಂಹರ್ತುಃ ಸ್ಥಾನೇ ವಿಶ್ವಪತೇಸ್ತನುಃ ।
ಸಂತಾಪ್ಯತೇತರಾಂ ಕಾಶ್ಯಾ ವಿಶ್ಲೇಷಜಮಹಾಗ್ನಿನಾ ॥ ೭೬ ॥
ಪ್ರಾಪ್ಯ ಕಾಶೀಂ ತ್ಯಜೇದ್ಯಸ್ತು ಸಮಸ್ತಾಘೌಘನಾಶಿನೀಂ ।
ನೃಪಶುಃ ಸ ಪರಿಜ್ಞೇಯೋ ಮಹಾಸೌಖ್ಯಪರಾಙ್ಮುಖಃ ॥ ೭೭ ॥
ನಿರ್ವಾಣಲಕ್ಷ್ಮೀಂ ಯಃ ಕಾಂಕ್ಷೇತ್ತ್ಯಕ್ತ್ವಾ ಸಂಸಾರದುರ್ಗತಿಂ ।
ತೇನ ಕಾಶೀ ನ ಸಂತ್ಯಾಜ್ಯಾ ಯದ್ಯಾಪ್ತೈಶಾದನುಗ್ರಹಾತ್ ॥ ೭೮ ॥
ಯಃ ಕಾಶೀಂ ಸಂಪರಿತ್ಯಜ್ಯ ಗಚ್ಛೇದನ್ಯತ್ರ ದುರ್ಮತಿಃ ।
ತಸ್ಯ ಹಸ್ತತಲಾದ್ಗಚ್ಛೇಚ್ಚತುರ್ವರ್ಗಫಲೋದಯಃ ॥ ೭೯ ॥
ನಿಬರ್ಹಣೀಮಘೌಘಸ್ಯ ಸುಪುಣ್ಯಪರಿಬೃಂಹಿಣೀಂ ।
ಕಃ ಪ್ರಾಪ್ಯ ಕಾಶೀಂ ದುರ್ಮೇಧಾಸ್ತ್ಯಜೇನ್ಮೋಕ್ಷಸುಖಪ್ರದಾಂ ॥ ೮೦ ॥
ಸತ್ಯಲೋಕೇ ಕ್ವ ತತ್ಸೌಖ್ಯಂ ಕ್ವ ಸೌಖ್ಯಂ ವೈಷ್ಣವೇ ಪದೇ ।
ಯತ್ಸೌಖ್ಯಂ ಲಭ್ಯತೇ ಕಾಶ್ಯಾಂ ನಿಮೇಷಾರ್ಧನಿಷೇವಣಾತ್ ॥ ೮೧ ॥

---

ಗೊಳಿಸಲು ಶಕ್ತವಾಗಿರುವ ಕಾಶಿಯನ್ನು ಸೇರಿದ ಮೇಲೆ ದುರ್ಬುದ್ಧಿಯುಳ್ಳ ಯಾವನಾದರೂ ಬಿಟ್ಟುಹೋಗಲು ಅಪೇಕ್ಷಿಸುವನೆ?

೭೬. ಸಕಲ ಲೋಕಗಳ ಸಂತಾಪಗಳನ್ನೂ ನಾಶಗೊಳಿಸುವ ವಿಶ್ವೇಶ್ವರನ ಶರೀರವಾದ ಈ ಕ್ಷೇತ್ರವು ತನ್ನ ಅಗಲಿಕೆಯುಂಟಾದ ಮಹಾಗ್ನಿಯಿಂದ ಆತನಿಗೆ ಅತಿಶಯವಾದ ಸಂತಾಪವನ್ನುಂಟುಮಾಡುತ್ತಿರುವುದು.

೭೭. ಸಕಲ ಪಾತಕಗಳ ಸಮೂಹವನ್ನು ಹದಗೆಡಿಸುವ ಕಾಶೀಕ್ಷೇತ್ರವನ್ನು ಸೇರಿ ಯಾವನು ಬಿಟ್ಟುಹೋಗಲೆಳಸುವನೊ, ಅವನನ್ನು ಮಹಾ ಸೌಖ್ಯದಿಂದ ಹಿಂದಿರುಗಲೆಳಸಿದ ನರಪಶುವೆಂದೇ ಲೆಕ್ಕಿಸಬೇಕು.

೭೮. ಸಂಸಾರದ ದುರ್ಗತಿಯನ್ನು ಕಳೆದುಕೊಂಡು ಯಾವನು ಮೋಕ್ಷಲಕ್ಷ್ಮಿಯನ್ನು ಪಡೆಯಲಪೇಕ್ಷಿಸುವನೊ, ಅವನು ಒಮ್ಮೆ ಮಹೇಶ್ವರನ ಅನುಗ್ರಹದಿಂದ ಕಾಶಿಯನ್ನು ಸೇರಿದುದಾದರೆ ಆದನ್ನು ತ್ಯಜಿಸಿ ಬರಬಾರದು.

೭೯. ಯಾವ ಮೂಢಮಾನವನು ಕಾಶಿಯನ್ನು ತ್ಯಜಿಸಿ ಇತರ ಸ್ಥಳಗಳಿಗೆ ಹೋಗುವನೊ, ಅವನಿಗೆ ಕರತಲಗತಗಳಾದ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೂ ಕೈಬಿಟ್ಟುಹೋಗುವುವು. ಎಂದಿಗೂ ಫಲೋನ್ಮುಖಗಳಾಗಲಾರವು.

೮೦. ಸಕಲ ಪಾಪಗಳನ್ನು ಪರಿಹರಿಸುವುದೂ, ಪುಣ್ಯಸಂಚಯವನ್ನು ವೃದ್ಧಿಗೊಳಿಸುವುದೂ, ಮೋಕ್ಷಸುಖವನ್ನೊದಗಿಸಿಕೊಡುವುದೂ ಆದ ಕಾಶಿಯನ್ನು ಸೇರಿದ ಯಾವ ಜ್ಞಾನಹೀನನಾದರೆ ಅದನ್ನು ತ್ಯಜಿಸಲಾಶಿಸುವನು?

೮೧. ಕಾಶಿಯಲ್ಲಿ ಅರ್ಧ ನಿಮಿಷದ ಕಾಲದ ಸೇವೆಯಿಂದ ಲಭಿಸುವ

ವಾರಾಣಸೀ ಗುಣಗಣಾನ್ನಿರ್ಣೀಯ ದ್ರುಹಿಣಸ್ತ್ವಿತಿ ।
ವ್ಯಾವೃತ್ಯ ಮಂದರಗಿರಿಂ ನ ಪುನಃ ಪ್ರತ್ಯಗಾನ್ಮನೇ ॥ ೮೨ ॥

ಸ್ಕಂದ ಉವಾಚ :—

ಮಿತ್ರಾವರುಣಯೋಃ ಪುತ್ರ ಮಹಿಮಾನಂ ಬ್ರವೀಮಿ ತೇ ।
ಕಾಶ್ಯಾಂ ದಶಾಶ್ವಮೇಧಸ್ಯ ಸರ್ವತೀರ್ಥಶಿರೋಮಣೇಃ ॥ ೮೩ ॥
ದಶಾಶ್ವಮೇಧಿಕಂ ಪ್ರಾಪ್ಯ ಸರ್ವತೀರ್ಥೋತ್ತಮೋತ್ತಮಂ ।
ಯತ್ಕಿಂಚಿತ್ಕ್ರಿಯತೇ ಕರ್ಮ ತದಕ್ಷಯಮಿಹೇರಿತಂ ॥ ೮೪ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।
ಸಂಧ್ಯೋಪಾಸ್ತಿಸ್ತರ್ಪಣಂ ಚ ಶ್ರಾದ್ಧಂ ಪಿತೃಸಮರ್ಚನಂ ॥ ೮೫ ॥
ದಶಾಶ್ವಮೇಧಿಕೇ ತೀರ್ಥೇ ಸಕೃತ್ಸ್ನಾತ್ವಾ ನರೋತ್ತಮಃ ।
ದೃಷ್ಟ್ವಾ ದಶಾಶ್ವಮೇಧೇಶಂ ಸರ್ವಪಾಪೈಃ ಪ್ರಮುಚ್ಯತೇ ॥ ೮೬ ॥

---

ಸೌಖ್ಯಕ್ಕೆ ಸಮಾನವಾದ ಆನಂದವು ಬ್ರಹ್ಮದೇವನಾದ ನನ್ನ ಸತ್ಯಲೋಕದಲ್ಲಾಗಲಿ ಮಹಾ ವಿಷ್ಣುವಿನ ವೈಕುಂಠದಲ್ಲಾಗಲಿ ಹೇಗೆ ಲಭಿಸುವುದು ?

೮೨. ಬ್ರಹ್ಮನು ಈ ವಿಧವಾಗಿ ವಾರಾಣಸಿಯ ಸದ್ಗುಣಸಮೂಹವನ್ನು ನಿಶ್ಚಯಿಸಿದವನಾಗಿ ಕಾಶಿಯಿಂದ ಹಿಂದಿರುಗಿ ಪುನಃ ಮಂದರಪರ್ವತಕ್ಕೆ ಹೋಗಲು ಅಪೇಕ್ಷಿಸಲಿಲ್ಲ.

೮೩. ಸ್ಕಂದನು ಹೇಳುತ್ತಾನೆ:—ಮಿತ್ರಾವರುಣರ ಪುತ್ರನಾದ ಅಗಸ್ತ್ಯನೆ! ಕಾಶಿಯಲ್ಲಿ ಸಕಲ ತೀರ್ಥಗಳಲ್ಲಿ ಉತ್ತಮೋತ್ತಮವೆನಿಸಿದ ದಶಾಶ್ವಮೇಧ ತೀರ್ಥದ ಮಹಿಮೆಯನ್ನು ಬಣ್ಣಿಸುವೆನು.

೮೪. ಸಕಲತೀರ್ಥಗಳಲ್ಲಿಯೂ ಉತ್ತಮೋತ್ತಮವೆನಿಸಿದ ದಶಾಶ್ವಮೇಧ ತೀರ್ಥವನ್ನು ಸೇರಿ ಮನುಷ್ಯನು ಎಷ್ಟೇ ಅಲ್ಪವಾದ ದಾನಾದಿ ಸತ್ಕರ್ಮವನ್ನು ಮಾಡಿದರೂ, ಅದು ಅಕ್ಷಯವಾದ ಫಲವನ್ನು ಸಂಪಾದಿಸಿಕೊಡುವುದೆಂದು ಶಾಸ್ತ್ರಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದು.

೮೫. ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವತಾರ್ಚನೆ, ಸಂಧ್ಯಾವಂದನಾದಿ ನಿತ್ಯಕರ್ಮ, ಪಿತೃತರ್ಪಣ, ಶ್ರಾದ್ಧಕ್ರಿಯೆ, ಪಿತೃಪೂಜೆ ಮುಂತಾದ ಕರ್ಮಗಳೆಲ್ಲವೂ ಅಲ್ಲಿ ಅನಂತ ಫಲದಾಯಕಗಳಾಗುವುವು.

೮೬. ಮಾನವೋತ್ತಮನಾದವನು ದಶಾಶ್ವಮೇಧ ತೀರ್ಥದಲ್ಲಿ ಒಮ್ಮೆಯಾದರೂ ಸ್ನಾನವನ್ನು ಮಾಡಿ ದಶಾಶ್ವಮೇಧೇಶ್ವರನ ದರ್ಶನವನ್ನು ಮಾಡಲು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪ್ರಾಪ್ಯ ಪ್ರತಿಪದಂ ತಿಥಿಂ ।
ದಶಾಶ್ವಮೇಧಿಕೇ ಸ್ನಾತ್ವಾ ಮುಚ್ಯತೇ ಜನ್ಮಪಾತಕೈಃ ॥ ೮೭ ॥
ಜ್ಯೇಷ್ಠೇ ಶುಕ್ಲದ್ವಿತೀಯಾಯಾಂ ಸ್ನಾತ್ವಾ ರುದ್ರಸರೋವರೇ ।
ಜನ್ಮದ್ವಯಯುಕೃತಂ ಪಾಪಂ ತತ್‌ಕ್ಷಣಾದೇವ ನಶ್ಯತಿ ॥ ೮೮ ॥
ಏವಂ ಸರ್ವಾಸು ತಿಥಿಷು ಕ್ರಮಸ್ನಾಯೀ ನರೋತ್ತಮಃ ।
ಆಶುಕ್ಲಪಕ್ಷದಶಮಿ ಪ್ರತಿಜನ್ಮಾಘಮುತ್ಸೃಜೇತ್ ॥ ೮೯ ॥
ತಿಥಿಂ ದಶಹರಾಂ ಪ್ರಾಪ್ಯ ದಶಜನ್ಮಾಘಹಾರಿಣೀಂ ।
ದಶಾಶ್ವಮೇಧಿಕೇ ಸ್ನಾತೋ ಯಾಮೀಂ ಪಶ್ಯೇನ್ನ ಯಾತನಾಂ ॥ ೯೦ ॥
ಲಿಂಗಂ ದಶಾಶ್ವಮೇಧೇಶಂ ದೃಷ್ಟ್ವಾ ದಶಹರಾತಿಥೌ ।
ದಶಜನ್ಮಾರ್ಜಿತೈಃ ಪಾಪೈಸ್ತ್ಯಜ್ಯತೇ ನಾತ್ರ ಸಂಶಯಃ ॥ ೯೧ ॥
ಸ್ನಾತೋ ದಶಹರಾಯಾಂ ಯಃ ಪೂಜಯೇಲ್ಲಿಂಗಮುತ್ತಮಂ ।
ಭಕ್ತ್ಯಾ ದಶಾಶ್ವಮೇಧೇಶಂ ನ ತಂ ಗರ್ಭದಶಾ ಸ್ಪೃಶೇತ್ ॥ ೯೨ ॥

---

೮೭. ಜ್ಯೇಷ್ಠಮಾಸದ ಶುಕ್ಲಪಕ್ಷದ ಪ್ರತಿಪತ್ತಿಥಿಯು ಪ್ರಾಪ್ತವಾಗಲು ದಶಾಶ್ವಮೇಧತೀರ್ಥದಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಜನ್ಮದಿನದಿಂದ ಮಾಡಿದ ಸಕಲ ಪಾಪಗಳಿಂದಲೂ ಮೋಕ್ಷವನ್ನು ಪಡೆಯುವನು.

೮೮. ಅದೇ ಜ್ಯೈಷ್ಠ ಶುಕ್ಲ ದ್ವಿತೀಯೆಯ ದಿನ ಈ ರುದ್ರ ಸರೋವರದಲ್ಲಿ ಸ್ನಾನವನ್ನು ಮಾಡಲು ಎರಡು ಜನ್ಮಗ್ರಳಲ್ಲಿ ಮಾಡಿದ ಪಾಪರಾಶಿಯೆಲ್ಲವೂ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುದು.

೮೯. ಇಂತು ಆ ಮಾಸದ ಶುಕ್ಲ ದಶಮಿಯ ತಿಥಿಯವರೆಗೂ ಪ್ರತಿ ನಿತ್ಯವೂ ಸ್ನಾನಗಳನ್ನು ಮಾಡಲು ಆಯಾ ತಿಥಿ ಸಂಖ್ಯೆಗನುಗುಣವಾದ ಜನ್ಮಗಳಲ್ಲಿ ಆರ್ಜಿಸಿದ ಪಾತಕಗಳನ್ನು ಕಳೆದುಕೊಳ್ಳುವನು.

೯೦. ಹತ್ತು ಜನ್ಮಗಳ ಪಾಪಸಂಚಯವನ್ನು ನಾಶಗೊಳಿಸುವ ದಶಹರಾ ನಾಮಕವಾದ ದಶಮೀತಿಥಿಯ ದಿನದಲ್ಲಿ ದಶಾಶ್ವಮೇಧತೀರ್ಥದಲ್ಲಿ ಸ್ನಾನವನ್ನು ಮಾಡಿದ ನರನು ಯಮಲೋಕದ ಯಾತನೆಗಳನ್ನನುಭವಿಸುವುದಿಲ್ಲ.

೯೧. ಈ ದಶಹರಾತಿಥಿಯಲ್ಲಿ ದಶಾಶ್ವಮೇಧೇಶ್ವರನ ಲಿಂಗವನ್ನು ದರ್ಶನ ಮಾಡಿಕೊಂಡು ಮನುಷ್ಯನು ಹತ್ತುಜನ್ಮಗಳಲ್ಲಿ ಸಂಪಾದಿಸಿದ ಪಾತಕಗಳಿಂದ ಬಿಡುಗಡೆಯನ್ನು ಹೊಂದುವುದರಲ್ಲಿ ಸಂದೇಹವಿಲ್ಲವು.

೯೨. ಯಾವನು ಈ ತಿಥಿಯಲ್ಲಿ ಈ ತೀರ್ಥದ ಸ್ನಾನವನ್ನು ಮಾಡಿ ಭಕ್ತಿಯಿಂದೊಡಗೂಡಿದವನಾಗಿ ಸರ್ವೋತ್ತಮವಾದ ದಶಾಶ್ವಮೇಧೇಶ್ವರ ಲಿಂಗವನ್ನು ಪೂಜಿಸುವನೊ, ಅವನಿಗೆ ಪುನಃ ಗರ್ಭವಾಸವು ಸಂಭವಿಸಲಾರದು.

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪಕ್ಷಂ ರುದ್ರಸರೇ ನರಃ ।
ಕುರ್ವನ್ನೈ ವಾರ್ಷಿಕೀಂ ಯಾತ್ರಾಂ ನ ವಿಘ್ನೈರಭಿಭೂಯತೇ ॥ ೯೩ ॥
ದಶಾಶ್ವಮೇಧಾವಭೃಥೈರ್ಯತ್ಫಲಂ ಸಮ್ಯಗಾಪ್ಯತೇ ।
ದಶಾಶ್ವಮೇಧೇ ತನ್ನೂನಂ ಸ್ನಾತ್ವಾ ದಶಹರಾತಿಥೌ ॥ ೯೪ ॥
ಸ್ವರ್ಧುನ್ಯಾಃ ಪಶ್ಚಿಮೇ ತೀರೇ ನತ್ವಾ ದಶಹರೇಶ್ವರಂ ।
ನ ದುರ್ದಶಾಮವಾಪ್ನೋತಿ ಪುಮಾನ್ಪುಣ್ಯತಮಃ ಕ್ವಚಿತ್ ॥ ೯೫ ॥
ಯತ್ಕಾಶ್ಯಾಂ ದಕ್ಷಿಣಾದ್ವಾರಮಂತರ್ಗೇಹಸ್ಯ ಕೀರ್ತ್ಯತೇ ।
ತತ್ರ ಬ್ರಹ್ಮೇಶ್ವರಂ ದೃಷ್ಟ್ವಾ ಬ್ರಹ್ಮಲೋಕೇ ಮಹೀಯತೇ ॥ ೯೬ ॥
ಇತಿ ಬ್ರಾಹ್ಮಣವೇಷೇಣ ವಾರಾಣಸ್ಯಾಂ ಮಹಾಧಿಯಾ ।
ದ್ರುಹಿಣೇನ ಸ್ಥಿತಂ ತಾವದ್ಯಾವಾದ್ವಿಶ್ವೇಶ್ವರಾಗಮಃ ॥ ೯೭ ॥
ದಿವೋದಾಸೋಽಪಿ ರಾಜೇಂದ್ರೋ ವೃದ್ಧಬ್ರಾಹ್ಮಣರೂಪಿಣೇ ।
ಬ್ರಹ್ಮಣೇ ಕೃತಯಜ್ಞಾಯ ಬ್ರಹ್ಮಶಾಲಾಮಕಲ್ಪಯತ್ ॥ ೯೮ ॥

---

೯೩. ಈ ಪ್ರದೇಶಕ್ಕೆ ಪ್ರತಿವರ್ಷವೂ ಜ್ಯೇಷ್ಠಮಾಸದ ಶುಕ್ಲಪಕ್ಷದ ಸಮಯವನ್ನರಿತು ಯಾತ್ರೆಯನ್ನು ಮಾಡಿ ಮನುಷ್ಯನು ರುದ್ರಸರೋವರದಲ್ಲಿ ಪಕ್ಷದ ಎಲ್ಲ ದಿವಸಗಳಲ್ಲಿಯೂ ಸ್ನಾನವನ್ನು ಮಾಡಲು ಅವನಿಗೆ ಜನ್ಮದಲ್ಲೆಂದಿಗೂ ಕಾರ್ಯಗಳಲ್ಲಿ ವಿಘ್ನಗಳು ಪರಾಭವವನ್ನುಂಟುಮಾಡಲಾರವು.

೯೪. ಹತ್ತು ಅಶ್ವಮೇಧಯಜ್ಞಗಳನ್ನು ಮಾಡಿ ಅವಭೃಥಸ್ನಾನವನ್ನು ಮಾಡಿದವನಿಗೆ ಯಾವ ಪುಣ್ಯವು ಲಭಿಸುವುದೊ, ಆ ಪುಣ್ಯಫಲವೇ ದಶಹರಾ ತಿಥಿಯಲ್ಲಿ ದಶಾಶ್ವಮೇಧತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನಿಗೆ ಪ್ರಾಪ್ತವಾಗುವುದು. ಇದು ನಿಸ್ಸಂದೇಹವು.

೯೫. ಗಂಗಾನದಿಯ ಪಶ್ಚಿಮತೀರದಲ್ಲಿರುವ ದಶಹರೇಶ್ವರಲಿಂಗಕ್ಕೆ ನಮಸ್ಕರಿಸಿದ ಮನುಷ್ಯನು ಎಂದಿಗೂ ದುರ್ದಶೆಯನ್ನು ಹೊಂದುವುದಿಲ್ಲ. ಯಾವಾಗಲೂ ಪುಣ್ಯವಂತನಾಗಿಯೇ ಇರುವನು.

೯೬. ಕಾಶೀಕ್ಷೇತ್ರದಲ್ಲಿ ಅಂತರ್ಗೃಹದ ದಕ್ಷಿಣದ್ವಾರಪ್ರದೇಶವೆಂದು ಪ್ರಖ್ಯಾತವಾಗಿರುವ ಸ್ಥಳದಲ್ಲಿ ನೆಲಸಿರುವ ಬ್ರಹ್ಮೇಶ್ವರನನ್ನು ಸಂದರ್ಶಿಸಿದ ಮನುಷ್ಯನು ಬ್ರಹ್ಮಲೋಕದಲ್ಲಿಯೂ ಸಂಪೂಜ್ಯನಾಗುವನು.

೯೭. ಈ ವಿಧವಾಗಿ ಮಹಾಧೀಮಂತನಾದ ಬ್ರಹ್ಮದೇವನು ಕಾಶಿಯಲ್ಲಿ ಬ್ರಾಹ್ಮಣನ ವೇಷವನ್ನು ಧರಿಸಿಕೊಂಡು ವಿಶ್ವೇಶ್ವರನ ಪುರಪ್ರವೇಶದ ಸಮಯವನ್ನೇ ನಿರೀಕ್ಷಿಸುತ್ತ ಅಲ್ಲಿಯೇ ನಿಂತುಬಿಟ್ಟನು.

೯೮. ರಾಜಶ್ರೇಷ್ಠನಾದ ದಿವೋದಾಸನೂ ಸಹ ವೃದ್ಧಬ್ರಾಹ್ಮಣನ ರೂಪವನ್ನು ತಾಳಿ ಯಜ್ಞಗಳನ್ನು ಸಮಾಪ್ತಿಗೊಳಿಸಿದ ಆ ಬ್ರಹ್ಮನಿಗಾಗಿ ಉತ್ತಮವಾದೊಂದು ಬ್ರಹ್ಮಶಾಲೆಯನ್ನು ನಿರ್ಮಾಣಮಾಡಿದನು.

ಬ್ರಹ್ಮೇಶ್ವರಸಮೀಪೇ ತು ಬ್ರಹ್ಮಶಾಲಾ ಮನೋಹರಾ ।
ಬ್ರಹ್ಮಾ ತತ್ರಾವಸದ್ವ್ಯೋಮ ಬ್ರಹ್ಮಘೋಷೈರ್ನಿನಾದಯನ್ ॥ ೯೯ ॥
ಇತಿ ತೇ ಕಥಿತೋ ಬ್ರಹ್ಮನ್ಮಹಿಮಾತಿಮಹತ್ತರಃ ।
ದಶಾಶ್ವಮೇಧತೀರ್ಥಸ್ಯ ಸರ್ವಾಘೌಘವಿನಾಶನಃ ॥ ೧೦೦ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ಶ್ರಾವಯಿತ್ವಾ ತಥೈವ ಚ ।
ಬ್ರಹ್ಮಲೋಕಮವಾಪ್ನೋತಿ ಶ್ರದ್ಧಯಾ ಮಾನವೋತ್ತಮಃ ॥ ೧೦೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದಶಾಶ್ವಮೇಧವರ್ಣನಂ"
ನಾಮ ದ್ವಿಪಂಚಾಶತ್ತಮೋಽಧ್ಯಾಯಃ

---

೯೯. ಬ್ರಹ್ಮೇಶ್ವರನ ಸಮೀಪದಲ್ಲಿಯೇ ಅತ್ಯಂತ ಮನೋಹರವಾದ ಆ ಬ್ರಹ್ಮಶಾಲೆಯು ಕಟ್ಟಲ್ಪಟ್ಟದ್ದಿತು. ಅದರಲ್ಲಿ ವೇದಘೋಷಗಳಿಂದ ಆಕಾಶವನ್ನೂ ಪ್ರತಿಧ್ವನಿಗೊಳಿಸುತ್ತ ಬ್ರಹ್ಮನು ಸುಖವಾಗಿ ವಾಸಮಾಡುತ್ತಿದ್ದನು.

೧೦೦. ಎಲೈ ಅಗಸ್ತ್ಯನೆ! ಇಂತು ನಿನಗೆ ಸಕಲ ಪಾಪಗಳನ್ನೂ ನಿರ್ಮೂಲಗೊಳಿಸುವಂತಹ ದಶಾಶ್ವಮೇಧತೀರ್ಥದ ಅಪಾರವಾದ ಮಹಿಮೆಯನ್ನು ವಿಸ್ತಾರವಾಗಿ ತಿಳಿಸಿರುವೆನು.

೧೦೧. ಪರಮಪವಿತ್ರವಾದ ಈ ಅಧ್ಯಾಯವನ್ನು ಕೇಳಿದರಾಗಲಿ, ಇತರರಿಗೆ ಶ್ರವಣಮಾಡಿಸಿದರಾಗಲಿ, ಆ ಮನುಷ್ಯಶ್ರೇಷ್ಠನು ತನ್ನ ಶ್ರದ್ಧಾಭಕ್ತಿಗಳ ಫಲವಾಗಿ ಬ್ರಹ್ಮಲೋಕವನ್ನೇ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ದಶಾಶ್ವಮೇಧವರ್ಣನ"ವೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಪಂಚಾಶತ್ತಮೋಽಧ್ಯಾಯಃ

### ವಾರಾಣಸೀವರ್ಣನಂ— ಗಣಪ್ರೇಷಣವರ್ಣನಂ

ಅಗಸ್ತಿರುವಾಚ :—

ಅಪೂರ್ವೇಯಂ ಕಥಾ ಖ್ಯಾತಾ ಬ್ರಹ್ಮಣೋ ಬ್ರಹ್ಮವಿತ್ತಮ ।
ಕಿಂ ಚಕಾರ ಪುನಃ ಶಂಭುಸ್ತತ್ರ ಬ್ರಹ್ಮಣ್ಯಪಿ ಸ್ಥಿತೇ ॥ ೧ ॥

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಮಹಾಭಾಗ ಕಾಶ್ಯಾಂ ಬ್ರಹ್ಮಣ್ಯಪಿ ಸ್ಥಿತೇ ।
ಗಿರಿಶಶ್ಚಿಂತಯಾಮಾಸ ಭೃಶಮುದ್ವಿಗ್ನಮಾನಸಃ ॥ ೨ ॥
ಪುರೀ ಸಾ ಯಾದೃಶೀ ಕಾಶೀ ವಶೀಕರಣಭೂಮಿಕಾ ।
ನ ತಾದೃಶೀದೃಶೀಹಾಸೀತ್ಕಚ್ಚಿನ್ಮೇ ಪ್ರಾಯಶೋ ಧ್ರುವಂ ॥ ೩ ॥
ಯೋ ಯೋ ಯಾತಿ ಪುರೀಂ ತಾಂ ತು ಸ ಸ ತತ್ರೈವ ತಿಷ್ಠತಿ ।
ಅಭೂವನ್ನನು ಯೋಗಿನ್ಯೋಽಯೋಗಿನ್ಯಃ ಕಾಶಿಸಂಗತಾಃ ॥ ೪ ॥

---

### ಕನ್ನಡದ ಅನುವಾದ

#### ವಾರಾಣಸೀವರ್ಣನ— ಗಣಪ್ರೇಷಣವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ವೇದಗಳಲ್ಲಿ ನಿಷ್ಣಾತನಾದ ಷಣ್ಮುಖನೆ! ಬ್ರಹ್ಮದೇವನಿಗೆ ಸಂಬಂಧಿಸಿದ ಅಪೂರ್ವವಾದ ಈ ಚರಿತ್ರೆಯನ್ನು ನನಗೆ ತಿಳಿಸಿರುವೆ. ಇಂತು ಬ್ರಹ್ಮದೇವನೂ ಸಹ ಕಾಶೀಕ್ಷೇತ್ರದಲ್ಲಿಯೇ ಶಾಶ್ವತವಾಗಿ ನೆಲಸಲು ಆ ಪರಮೇಶ್ವರನು ಮತ್ತೇನನ್ನು ಮಾಡಿದನು ?

೨. ಸ್ಕಂದನು ಹೇಳುತ್ತಾನೆ:—ಮಹಾತ್ಮನಾದ ಅಗಸ್ತ್ಯನೆ! ಕೇಳು. ಇಂತು ಬ್ರಹ್ಮನೂ ಸಹ ಕಾಶಿಯಲ್ಲಿಯೇ ನಿಂತುಬಿಡಲು ಮಹೇಶ್ವರನು ಮನಸ್ಸಿನಲ್ಲಿ ಅತ್ಯಂತ ಉದ್ವೇಗವನ್ನು ಹೊಂದಿದವನಾಗಿ ತನ್ನಲ್ಲಿಯೇ ಯೋಚಿಸತೊಡಗಿದನು.

೩. ಕಾಶಿಯೆಂಬ ಈ ನಗರಿಯು ಜನರನ್ನು ವಶಮಾಡಿಕೊಳ್ಳುವುದರಲ್ಲಿ ಎಷ್ಟರಮಟ್ಟಿನದಾಗಿರುವುದೊ, ಅಷ್ಟುಮಟ್ಟಿನ ಮತ್ತೊಂದು ಪ್ರದೇಶವು ಪ್ರಾಯಿಕವಾಗಿ ಬೇರೆ ಯಾವೆಡೆಯಲ್ಲಿಯೂ ಖಂಡಿತವಾಗಿಯೂ ನನ್ನ ಕಣ್ಣುಗಳಿಗೆ ಗೋಚರವಾಗುವುದಿಲ್ಲ.

೪. ಯಾವ ಯಾವನು ಆ ಪಟ್ಟಣವನ್ನು ನೋಡಲು ಹೋಗುವನೊ, ಅವನವನು ಅಲ್ಲಿಯೇ ಸ್ಥಿರವಾಗಿ ನೆಲಸಿಬಿಡುವನು. ಕಾಶಿಯನ್ನು ನೋಡಿಬರಲು ಹೊರಟ ಯೋಗಿನಿಯರೂ ಸಹ ಅಯೋಗಿನಿಯರೇ ಆಗಿರುವರೋ ಏನೋ ?

ಅಕಿಂಚಿತ್ಕರತಾಂ ಪ್ರಾಪ್ತಃ ಸ ಸಹಸ್ರಕರೋಽಪ್ಯಹಂ ।
ವಿಧಿರ್ವಿಧಾನದಕ್ಷೋಽಪಿ ನ ಮೇ ಸ ಸವಿಧೋಽಭವತ್ ॥ ೫ ॥
ಚಿಂತಯನ್ನಿತಿ ದೇವೇಶೋ ಗಣಾನಾಹೂಯ ಭೂರಿಶಃ ।
ಪ್ರೇಷಯಾಮಾಸ ಭೋ ಯಾತ ಕ್ಷಿಪ್ರಂ ವಾರಾಣಸೀಂ ಪುರೀಂ ॥ ೬ ॥
ಕಿಂ ಕುರ್ವಂತಿ ತು ಯೋಗಿನ್ಯಃ ಕಿಂ ಕರೋತಿ ಸ ಭಾನುಮಾನ್ ।
ಗತ್ವಾ ವಿತ್ತ ತ್ವರಾಯುಕ್ತಾ ವಿಧಿಶ್ಚ ವಿದಧಾತಿ ಕಿಂ ॥ ೭ ॥
ಸಾಮಗ್ರ್ಯಾಹ್ವಂ ತತೋಽಪ್ಯೈಷೀದ್ಬಹುಮಾನಪುರಸ್ಸರಂ ।
ಶಂಕುಕರ್ಣ ಮಹಾಕಾಲ ಘಂಟಾಕರ್ಣ ಮಹೋದರ ॥ ೮ ॥
ಸೋಮನಂದಿನ್ನಂದಿಷೇಣ ಕಾಲ ಪಿಂಗಲ ಕುಕ್ಕುಟ ।
ಕುಂಡೋದರ ಮಯೂರಾಕ್ಷ ಬಾಣ ಗೋಕರ್ಣ ತಾರಕ ॥ ೯ ॥
ತಿಲಪರ್ಣ ಸ್ಥೂಲಕರ್ಣ ದ್ರುಮಿಚಂಡ ಪ್ರಭಾಮಯ ।
ಸುಕೇಶ ವಿಂದತೇ ಛಾಗ ಕಪರ್ದಿನ್ ಪಿಂಗಲಾಕ್ಷಕ ॥ ೧೦ ॥
ವೀರಭದ್ರ ಕಿರಾತಾಖ್ಯ ಚತುರ್ಮುಖ ನಿಕುಂಭಕ ।
ಪಂಚಾಕ್ಷ ಭಾರಭೂತಾಖ್ಯ ತ್ರ್ಯಕ್ಷ ಕ್ಷೇಮಕ ಲಾಂಗಲಿನ್ ॥ ೧೧ ॥

---

೫. ಸಹಸ್ರರಶ್ಮಿಯಾದ ಸೂರ್ಯನೂ ಸಹ ಅಲ್ಲಿ ಬಹಳವಾದ ನಿಶ್ಚಲ ಸ್ವಭಾವವನ್ನೇ ಹೊಂದಿರುವನು. ಬ್ರಹ್ಮಾಂಡದ ಕಾರ್ಯವನ್ನೆಲ್ಲ ನಿರ್ವಹಿಸುವುದರಲ್ಲಿ ದಕ್ಷನೆನಿಸಿದ ಬ್ರಹ್ಮನೂ ನನ್ನ ಕಾರ್ಯಭಾರವನ್ನು ನಿರ್ವಹಿಸುವುದರಲ್ಲಿ ಅಶಕ್ತನಾಗಿರುವನು.''

೬. ಇಂತೆಂದು ಚಿಂತಿಸುತ್ತ ಮಹಾದೇವನು ಬಹುಸಂಖ್ಯಾತರಾದ ತನ್ನ ಗಣಗಳನ್ನೆಲ್ಲ ಕರೆದು ''ಎಲೈ ಗಣಗಳಿರಾ! ನೀವೆಲ್ಲರೂ ವೇಗವಾಗಿ ಆ ಕಾಶೀ ನಗರಿಯನ್ನು ಹೋಗಿ ಸೇರಿರಿ'' ಎಂಬುದಾಗಿ ಕಳುಹಿಸಿಕೊಟ್ಟನು.

೭. ಅಲ್ಲಿಗೆ ಕಳುಹಿಸಿದ ಯೋಗಿನಿಯರು ಏನನ್ನು ಮಾಡುತ್ತಿರುವರು? ಆ ಸೂರ್ಯನಾದರೂ ಅಲ್ಲಿ ಏನು ಮಾಡುತ್ತಿರುವನು? ಬ್ರಹ್ಮದೇವನು ಯಾವ ಕಾರ್ಯದಲ್ಲಿ ನಿರತನಾಗಿರುವನು? ನೀವು ತ್ವರೆಯಿಂದ ಅಲ್ಲಿಗೆ ಹೋಗಿ ಈ ಸಮಾಚಾರವೆಲ್ಲವನ್ನೂ ತಿಳಿದುಬನ್ನಿರಿ.

೮–೧೨. ಇಂತೆಂದು ಪರಮೇಶ್ವರನು ತನ್ನ ಗಣಾನಾಯಕರಲ್ಲಿ ಒಬ್ಬೊಬ್ಬನನ್ನೇ ಬಹುಮಾನಪೂರ್ವಕವಾಗಿ ಹೆಸರುಗಳಿಂದ ಕೂಗಿ ಕರೆದನು. ''ಶಂಕುಕರ್ಣ, ಮಹಾಕಾಲ, ಘಂಟಾಕರ್ಣ, ಮಹೋದರ, ಸೋಮನಂದಿ, ನಂದಿಷೇಣ, ಕಾಲ, ಪಿಂಗಲ, ಕುಕ್ಕುಟ, ಕುಂಡೋದರ, ಮಯೂರಾಕ್ಷ, ಬಾಣ, ಗೋಕರ್ಣ, ತಾರಕ, ತಿಲಪರ್ಣ, ಸ್ಥೂಲಕರ್ಣ, ದ್ರುಮಿಚಂಡ, ಪ್ರಭಾಮಯ, ಸುಕೇಶ, ವಿಂದತಿ, ಛಾಗ, ಕಪರ್ದಿ, ಪಿಂಗಲಾಕ್ಷ, ವೀರಭದ್ರ, ಕಿರಾತ, ಚತುರ್ಮುಖ,

ವಿರಾಧ ಸುಮುಖಾಷಾಢೇ ಭವಂತೋ ಮಮ ಸೂನವಃ ।
ಯಥೇಮೌ ಸ್ಕಂದಹೇರಂಬೌ ನೈಗಮೇಯೋ ಯಥಾ ತ್ವಯಂ ॥ ೧೨ ॥
ಯಥಾ ಶಾಖವಿಶಾಖೌ ಚ ಯಥೇಮೌ ನಂದಿಭೃಂಗಿಣೌ ।
ಭವತ್ಸು ವಿದ್ಯಮಾನೇಷು ಮಹಾವಿಕ್ರಮಶಾಲಿಷು ॥ ೧೩ ॥
ಕಾಶೀಪ್ರವೃತ್ತಿಂ ನೋ ಜಾನೇ ದಿವೋದಾಸನೃಪಸ್ಯ ಚ ।
ಯೋಗಿನ್ಯರ್ಕವಿಧೀನಾಂ ಚ ತದ್ಯೋ ಯಾತಂ ಭವತ್ಸ್ವಮೂ ॥ ೧೪ ॥
ಶಂಕುಕರ್ಣಮಹಾಕಾಲೌ ಕಾಲಸ್ಯಾಪಿ ಪ್ರಕಂಪನೌ ।
ಜ್ಞಾತುಂ ವಾರಾಣಸೀವಾರ್ತಾಮಾಯಾತಂ ಚ ತ್ವರಾನ್ವಿತೌ ॥ ೧೫ ॥
ಕೃತಪ್ರತಿಜ್ಞೌ ತೌ ತೂರ್ಣಂ ಪ್ರಾಪ್ಯ ವಾರಾಣಸೀಂ ಪುರೀಂ ।
ಶಂಕುಕರ್ಣಮಹಾಕಾಲೌ ವಿಸ್ಮೃತ್ಯ ಶಾಂಭವೀಂ ಗಿರಂ ॥ ೧೬ ॥
ಯಥೈಂದ್ರಜಾಲಿಕೀಂ ದೃಷ್ಟ್ವಾ ಮಾಯಾಮಿಹ ವಿಚಕ್ಷಣಃ ।
ಕ್ಷಣೇನ ಮೋಹಮಾಯಾತಿ ಕಾಶೀಂ ವೀಕ್ಷ್ಯ ತಥೈವ ತೌ ॥ ೧೭ ॥

---

ನಿಕುಂಭಕ, ಪಂಚಾಕ್ಷ, ಭಾರಭೂತ, ತ್ರ್ಯಕ್ಷ, ಕ್ಷೇಮಕ, ಲಾಂಗಲಿ, ವಿರಾಧ, ಸುಮುಖ, ಆಷಾಢಿ, ನೀವೆಲ್ಲರೂ ನನ್ನ ಪುತ್ರರಿಗೆ ಸಮಾನರಾಗಿರುವಿರಿ. ಷಣ್ಮುಖ ಗಣೇಶರಂತೆಯೂ ಈ ನೈಗಮೇಯನಂತೆಯೂ ನೀವು ನನಗೆ ಪ್ರಿಯರಾಗಿರುವಿರಿ.

೧೩–೧೪. ಈ ಶಾಖ, ವಿಶಾಖರು ಹೇಗೆಯೋ ನಂದಿ, ಭೃಂಗಿಗಳು ಹೇಗೆಯೋ ಹಾಗೆಯೇ ನೀವೂ ಇರುವಿರಿ. ಇಂತಹ ಮಹಾಪರಾಕ್ರಮಶಾಲಿಗಳಾದ ನೀವೆಲ್ಲರೂ ಪರಿವಾರವಾಗಿದ್ದರೂ ನಾನು ಕಾಶೀನಗರದ ವೃತ್ತಾಂತವನ್ನಾಗಲಿ, ದಿವೋದಾಸನ ನಡೆವಳಿಕೆಗಳನ್ನಾಗಲಿ ತಿಳಿಯಲಾರದೆ ತವಕಪಡುತ್ತಿರುವೆನು. ಯೋಗಿನಿಯರೂ, ಸೂರ್ಯನೂ, ಬ್ರಹ್ಮನೂ ಏನಾದರೆಂಬುದು ತಿಳಿಯದಾಗಿದೆ. ಆದುದರಿಂದ ನಿಮ್ಮಲ್ಲಿ ಇಬ್ಬರು ಅಲ್ಲಿಗೆ ಹೊರಡಲನುವಾಗಿರಿ.

೧೫. ಕಾಲಯಮನಿಗೂ ಭಯವನ್ನುಂಟುಮಾಡುವ ಈ ಶಂಕುಕರ್ಣ ಮಹಾಕಾಲರಿಬ್ಬರೂ ವಾರಾಣಸೀನಗರದ ವೃತ್ತಾಂತವನ್ನು ತಿಳಿಯಲು ಹೋಗಿ ಜಾಗ್ರತೆಯಾಗಿ ಹಿಂದಿರುಗಿಬರಲಿ.''

೧೬. ಹಾಗೆಯೇ ಆಗಲೆಂದು ಪ್ರತಿಜ್ಞೆಯನ್ನು ಮಾಡಿ ಆ ಶಂಕುಕರ್ಣ ಮಹಾಕಾಲರಿಬ್ಬರೂ ಶೀಘ್ರವಾಗಿ ವಾರಾಣಸಿಯನ್ನು ಸೇರಿದ ಕೂಡಲೆ ಮಹೇಶ್ವರನು ತಮಗೆ ಹೇಳಿ ಕಳುಹಿಸಿದ ಸಂದೇಶವನ್ನು ಸಂಪೂರ್ಣವಾಗಿ ಮರೆತುಬಿಟ್ಟರು.

೧೭. ಲೋಕದಲ್ಲಿ ಎಂತಹ ವಿಚಕ್ಷಣನಾದ ಮನುಷ್ಯನಾದರೂ ಐಂದ್ರಜಾಲಿಕನ ಮಾಯಾಸೃಷ್ಟಿಯನ್ನು ಕಂಡು ಕ್ಷಣಮಾತ್ರವಾದರೂ ಹೇಗೆ ಭ್ರಾಂತ

ಅಹೋ ಮೋಹಸ್ಯ ಮಾಹಾತ್ಮ್ಯಮಹೋ ಭಾಗ್ಯವಿಪರ್ಯಯಃ ।
ನಿರ್ವಾಣರಾಶಿಂ ಯತ್ಕಾಶೀಂ ಪ್ರಾಪ್ಯ ಯಾಂತ್ಯನ್ಯತೋಽಬುಧಾಃ ॥ ೧೮ ॥
ತತ್ಯಜೇ ಯೈರಿಯಂ ಕಾಶೀ ಮಹಾಶೀರ್ವಾದಭೂಮಿಕಾ ।
ತೇಷಾಂ ಕರತಲಾಂ ಮುಕ್ತಿಃ ಪ್ರಾಪ್ತಾಪಿ ಪರಿತೋ ಗತಾ ॥ ೧೯ ॥
ಯತ್ರ ಸರ್ವಾವಭೃಥತಃ ಸ್ನಾನಮಾತ್ರಂ ವಿಶಿಷ್ಯತೇ ।
ಅಪ್ಯುಷ್ಣೀಕೃತಪಾನೀಯೈಸ್ತಾಂ ಕಾಶೀಂ ಕಃ ಪರಿತ್ಯಜೇತ್ ॥ ೨೦ ॥
ಯತ್ರೈಕಪುಷ್ಪದಾನೇನ ಶಿವಲಿಂಗಸ್ಯ ಮೂರ್ಧನಿ ।
ದಶಸೌವರ್ಣಿಕಂ ಪುಣ್ಯಂ ಕಸ್ತಾಂ ಕಾಶೀಂ ಪರಿತ್ಯಜೇತ್ ॥ ೨೧ ॥
ಯತ್ರ ದಂಡಪ್ರಣಾಮೇನ ಅಪ್ಯೇಕೇನ ಶಿವಾಗ್ರತಃ ।
ತುಚ್ಛಮೈಂದ್ರಪದಂ ಪ್ರಾಹುಸ್ತಾಂ ಕಾಶೀಂ ಕೋ ವಿಮುಂಚತಿ ॥ ೨೨ ॥

---

ನಾದಂತೆ ತೋರುವನೊ, ಹಾಗೆಯೇ ಇವರಿಬ್ಬರೂ ಸಹ ಕಾಶೀಕ್ಷೇತ್ರವನ್ನು ಕಂಡು ಸಂಭ್ರಾಂತರಾಗಿದ್ದರು.

೧೮. ಆಶ್ಚರ್ಯ! ಮೋಹದ ಮಹಾಮಹಿಮೆಯನ್ನೇನೆಂದು ಹೇಳೋಣ! ಜನರ ಭಾಗ್ಯದ ವ್ಯತ್ಯಾಸವನ್ನು ಹೇಗೆ ವರ್ಣಿಸೋಣ! ಮೋಕ್ಷ ಸೌಖ್ಯದ ರಾಶಿಯೆನಿಸಿದ ಕಾಶಿಯನ್ನು ಹೊಂದಿಯೂ ಮೂಢರಾದ ಜನರು ಇತರ ತೀರ್ಥ ಕ್ಷೇತ್ರಗಳಿಗೆ ಹೋಗುತ್ತಿರುವರಲ್ಲವೆ!

೧೯. ಸಕಲಾಶೀರ್ವಾದಗಳಿಗೂ ನಿವಾಸಭೂಮಿಯಾದ ಈ ವಾರಾಣಸಿಯು ಯಾರಿಂದ ಪರಿತ್ಯಕ್ತವಾಗಿದೆಯೊ, ಅವರಿಗೆ ಕರತಲಗತವಾದ ಮೋಕ್ಷ ಸಾಮ್ರಾಜ್ಯವೂ ಸಹ ಅವರನ್ನು ಬಿಟ್ಟು ಹೋಗುವುದು.

೨೦. ಯಾವ ಪ್ರದೇಶದಲ್ಲಿ ಕಾಯಿಸಿದ ನೀರಿನಲ್ಲಿ ಮಾಡಿದ ಸ್ನಾನವೂ ಇತರ ಸ್ಥಳಗಳಲ್ಲಿ ಸಕಲ ಯಜ್ಞಗಳನ್ನು ಸಮಾಪ್ತಿಗೊಳಿಸಿ ಮಾಡಿದ ಅವಭೃಥ ಸ್ನಾನಕ್ಕಿಂತಲೂ ವಿಶೇಷಫಲದಾಯಕವಾಗಿರುವುದೊ, ಅಂತಹ ಕಾಶೀಕ್ಷೇತ್ರ ವನ್ನು ಯಾವ ಮನುಷ್ಯನು ತಾನೆ ಬಿಟ್ಟು ಹೋಗುವನು?

೨೧. ಎಲ್ಲಿ ಶಿವಲಿಂಗದ ಮೇಲೆ ಒಂದು ಪುಷ್ಪ ಸಮರ್ಪಣೆಯಿಂದಲೇ ಹತ್ತು ಸುವರ್ಣ ಪುಷ್ಪಗಳನ್ನರ್ಪಿಸಿದ ಪುಣ್ಯವೊದಗುವುದೊ, ಅಂತಹ ಕಾಶಿ ಯನ್ನು ಯಾವ ಮನುಷ್ಯನು ತ್ಯಜಿಸಲಿಚ್ಛಿಸುವನು?

೨೨. ಯಾವ ಕ್ಷೇತ್ರದಲ್ಲಿ ಶಿವಲಿಂಗದ ಎದುರಿನಲ್ಲಿ ಮಾಡಿದ ಒಂದೇ ಸಾಷ್ಟಾಂಗ ನಮಸ್ಕಾರಕ್ಕೆ ಮಹೇಂದ್ರಪದವಿಯೂ ಅತ್ಯಲ್ಪ ಫಲವೆಂದು ಪ್ರಸಿದ್ಧ ನಾಗಿರುವುದೊ, ಅಂತಹ ವಾರಾಣಸಿಯನ್ನು ಯಾವನು ತಾನೆ ಬಿಟ್ಟುಬರು ವನು?

ಯತ್ರೈಕದ್ವಿಜಮಾತ್ರಂ ತು ಭೋಜಯಿತ್ವಾ ಯಥೇಚ್ಛಯಾ ।
ವಾಜಪೇಯಾಧಿಕಂ ಪುಣ್ಯಂ ತಾಂ ಕಾಶೀಂ ಕೋ ವಿಮುಂಚತಿ ॥ ೨೩ ॥
ಏಕಾಂ ಗಾಂ ಯತ್ರ ದತ್ವಾ ವೈ ವಿಧಿವದ್ಬ್ರಾಹ್ಮಣಾಯ ವೈ ।
ಲಭೇದಯುತಗೋಪುಣ್ಯಂ ಕಸ್ತಾಂ ಕಾಶೀಂ ತ್ಯಜೇತ್ಸುಧೀಃ ॥ ೨೪ ॥
ಏಕಂ ಲಿಂಗಂ ಪ್ರತಿಷ್ಠಾಪ್ಯ ಯತ್ರ ಸಂಸ್ಥಾಪಿತಂ ಭವೇತ್ ।
ಅಪಿ ತ್ರೈಲೋಕ್ಯಮಖಿಲಂ ತಾಂ ಕಾಶೀಂ ಕಃ ಸಮುಜ್ಝತಿ ॥ ೨೫ ॥
ಪರಿನಿಶ್ಚಿತ್ಯ ತಾವಿತ್ಥಂ ಲಿಂಗೇ ಸಂಸ್ಥಾಪ್ಯ ಪುಣ್ಯದೇ ।
ತತ್ರೈವ ಸಂಸ್ಥಿತಿಂ ಪ್ರಾಪ್ತೌ ಕಾಶೀಂ ನಾದ್ಯಾಪಿ ಮುಂಚತಃ ॥ ೨೬ ॥
ಶಂಕುಕರ್ಣೇಶ್ವರಂ ಲಿಂಗಂ ಶಂಕುಕರ್ಣಗಣಾರ್ಚಿತಂ ।
ದೃಷ್ಟ್ವಾ ನ ಜಾಯತೇ ಜಂತುರ್ಜಾತು ಮಾತುರ್ಮಹೋದರೇ ॥ ೨೭ ॥
ವಿಶ್ವೇಶಾದ್ವಾಯುದಿಗ್ಭಾಗೇ ಶಂಕುಕರ್ಣೇಶ್ವರಂ ನರಃ ।
ಸಂಪೂಜ್ಯ ನ ವಿಶೇದತ್ರ ಘೋರೇ ಸಂಸಾರಸಾಗರೇ ॥ ೨೮ ॥

---

೨೩. ಎಲ್ಲಿ ಕೇವಲ ಒಬ್ಬ ಬ್ರಾಹ್ಮಣನಿಗೇ ಯಥೇಚ್ಛವಾದ ಭೋಜನವನ್ನು ಮಾಡಿಸುವುದರಿಂದ ಅಶ್ವಮೇಧಫಲಕ್ಕೂ ಹೆಚ್ಚಿನ ಪುಣ್ಯವು ಲಭಿಸುವುದೊ, ಅಂತಹ ಕಾಶಿಯನ್ನು ಯಾವನು ತ್ಯಜಿಸುವನು?

೨೪. ಎಲ್ಲಿ ವಿಧ್ಯುಕ್ತರೀತಿಯಿಂದ ಬ್ರಾಹ್ಮಣೋತ್ತಮನಿಗೆ ಒಂದು ಗೋವನ್ನೇ ದಾನಮಾಡುವುದರಿಂದ ಹತ್ತು ಸಾವಿರ ಗೋವುಗಳ ಮಹಾದಾನದ ಪುಣ್ಯವನ್ನು ಪಡೆಯಬಹುದೊ, ಅಂತಹ ಕಾಶಿಯನ್ನು ಯಾವ ಮನುಷ್ಯನು ತ್ಯಜಿಸುವನು?

೨೫. ಯಾವ ಕ್ಷೇತ್ರದಲ್ಲಿ ಒಂದು ಲಿಂಗವನ್ನು ಪ್ರತಿಷ್ಠೆಮಾಡುವುದರಿಂದಲೇ ಮೂರು ಲೋಕಗಳನ್ನೂ ಸ್ಥಾಪನೆಮಾಡಿದ ಪುಣ್ಯವೊದಗುವುದೊ, ಅಂತಹ ಕಾಶೀಕ್ಷೇತ್ರವನ್ನು ಯಾವನು ತಾನೆ ಬಿಟ್ಟು ಬರುವನು?

೨೬. ಇಂತೆಂದು ಮನಸ್ಸಿನಲ್ಲಿಯೇ ದೃಢನಿಶ್ಚಯವನ್ನು ಮಾಡಿಕೊಂಡು ಅವರಿಬ್ಬರೂ ಪುಣ್ಯಪ್ರದಗಳಾದ ಎರಡು ಲಿಂಗಗಳನ್ನು ಸ್ಥಾಪಿಸಿ ಅಲ್ಲಿಯೇ ನೆಲಸುವವರಾದರು. ಇಂದಿಗೂ ಅವರು ಕಾಶಿಯನ್ನು ತ್ಯಜಿಸಲಿಲ್ಲ.

೨೭. ಶಂಕುಕರ್ಣನೆಂಬ ಗಣೇಶ್ವರನಿಂದ ಪೂಜಿತವಾದ ಶಂಕುಕರ್ಣೇಶ್ವರವೆಂಬ ಲಿಂಗವನ್ನು ನೋಡಿದ ಮಾನವನು ಪುನಃ ದುಃಖಮಯವಾದ ತಾಯಿಯ ಗರ್ಭದಲ್ಲಿ ಜನ್ಮವನ್ನು ಪಡೆಯುವುದಿಲ್ಲ.

೨೮. ವಿಶ್ವೇಶ್ವರನ ವಾಯುವ್ಯ ದಿಗ್ಭಾಗದಲ್ಲಿ ನೆಲಸಿರುವ ಶಂಕುಕರ್ಣೇಶ್ವರನನ್ನು ಪೂಜಿಸಲು ಮಾನವನು ಘೋರವಾದ ಸಂಸಾರವೆಂಬ ಸಮುದ್ರದಲ್ಲಿ ಪುನಃ ಬೀಳಲಾರನು.

ಮಹಾಕಾಲೇಶ್ವರಂ ಲಿಂಗಂ ಮಹಾಕಾಲಗಣಾರ್ಚಿತಂ ।
ಅರ್ಚಯಿತ್ವಾ ಚ ನತ್ವಾ ಚ ಸ್ತುತ್ವಾ ಕಾಲಭಯಂ ಕುತಃ ॥ ೨೯ ॥
ಸ್ಕಂದ ಉವಾಚ :—
ಶಂಕುಕರ್ಣೇ ಮಹಾಕಾಲೇ ಚಿರಂತನವಿಲಂಬಿತೇ ।
ಜ್ಞಾತ್ವಾ ಸರ್ವಜ್ಞನಾಥೋಽಥ ಪ್ರಾಹೈಷೀದಪರೌ ಗಣೌ ॥ ೩೦ ॥
ಘಂಟಾಕರ್ಣ ತ್ವಮಾಗಚ್ಛ ಮಹೋದರ ಮಹಾಮತೇ ।
ಕಾಶೀಂ ಯಾತಂ ಯುವಾಂ ತೂರ್ಣಂ ಜ್ಞಾತುಂ ತತ್ರತ್ಯಚೇಷ್ಟಿತಂ॥ ೩೧ ॥
ಇತ್ಯಗಸ್ತೇ ಗಣೌ ತೌ ತು ಗತ್ವಾ ಕಾಶೀಂ ಮಹಾಪುರೀಂ ।
ವ್ಯಾವೃತ್ಯಾದ್ಯಾಪಿ ನೋ ಯಾತೌ ಕ್ವಾಪಿ ತತ್ರೈವ ಸಂಸ್ಥಿತೌ ॥ ೩೨ ॥
ಘಂಟಾಕರ್ಣೇಶ್ವರಂ ಲಿಂಗಂ ಘಂಟಾಕರ್ಣಗಣೋತ್ತಮಃ ।
ಕಾಶ್ಯಾಂ ಸಂಸ್ಥಾಪ್ಯ ವಿಧಿವತ್ಸ್ವಯಂ ತತ್ರೈವ ನಿರ್ವೃತಃ ॥ ೩೩ ॥
ಕುಂಡಂ ತತ್ರೈವ ಸಂಸ್ಥಾಪ್ಯ ಲಿಂಗಸ್ನಪನಕರ್ಮಣಿ ।
ನಾದ್ಯಾಪಿ ಸಂತ್ಯಜೇತ್ಕಾಶೀಂ ಧ್ಯಾಯನ್ ಲಿಂಗಂ ತಥೈವ ಹಿ ॥ ೩೪ ॥

---

೨೯. ಮಹಾಕಾಲನೆಂಬ ಗಣನಾಯಕನಿಂದ ಪೂಜಿಸಲ್ಪಟ್ಟ ಮಹಾಕಾಲೇಶ್ವರಲಿಂಗವನ್ನು ಪೂಜಿಸಿ ನಮಸ್ಕಾರವನ್ನೂ, ಸ್ತೋತ್ರವನ್ನೂ ಮಾಡಲು ಕಾಲಯಮನ ಬಾಧೆಯ ಭಯವೆಲ್ಲಿಯದು ?

೩೦. ಸ್ಕಂದನು ಹೇಳುತ್ತಾನೆ :—ಶಂಕುಕರ್ಣ ಮಹಾಕಾಲರಿಬ್ಬರೂ ಬಹುಕಾಲವಾದರೂ ಹಿಂದಿರುಗದೆ ವಿಲಂಬವನ್ನು ಮಾಡುತ್ತಿರಲು ಸರ್ವಜ್ಞರಲ್ಲಿ ಶ್ರೇಷ್ಠನಾದ ಪರಮೇಶ್ವರನು ನಡೆದುದೆಲ್ಲವನ್ನೂ ತಿಳಿದು ಪುನಃ ಇಬ್ಬರು ಗಣನಾಯಕರನ್ನು ಕಳುಹಿಸಿಕೊಟ್ಟನು.

೩೧. "ಘಂಟಾಕರ್ಣ! ನೀನಿಲ್ಲಿ ಬಾ. ಮಹಾಪ್ರಾಜ್ಞನಾದ ಮಹೋದರನೆ! ನೀನೂ ಬಾ. ನೀವಿಬ್ಬರೂ ಕಾಶೀಕ್ಷೇತ್ರದಲ್ಲಿ ನಡೆದಿರುವ ವ್ಯಾಪಾರವನ್ನು ತಿಳಿದುಬರಲು ಶೀಘ್ರವಾಗಿ ಅಲ್ಲಿಗೆ ಹೊರಡುವವರಾಗಿರಿ."

೩೨. ಎಲೈ ಅಗಸ್ತ್ಯನೆ! ಈ ಆಜ್ಞಾನುಸಾರವಾಗಿ ಆ ಇಬ್ಬರು ಗಣಾಧಿಪರೂ ಕಾಶೀ ಮಹಾನಗರಿಗೆ ಹೊರಟವರು ಇಂದಿನವರೆಗೂ ಹಿಂದಿರುಗಿ ಬರಲಿಲ್ಲ, ಅಲ್ಲಿಯೇ ಒಂದೆಡೆಯಲ್ಲಿ ನಿಂತುಬಿಟ್ಟರು.

೩೩. ಘಂಟಾಕರ್ಣನೆಂಬ ಗಣೋತ್ತಮನು ತನ್ನ ಹೆಸರಿನಿಂದ ಪ್ರಖ್ಯಾತವಾದ ಲಿಂಗವೊಂದನ್ನು ವಿಧಿಪ್ರೋಕ್ತಪ್ರಕಾರದಿಂದ ಸ್ಥಾಪನೆಮಾಡಿ ತಾನೂ ಅಲ್ಲಿಯೇ ಸುಖವಾಗಿ ವಾಸಮಾಡಿಕೊಂಡಿರುವನು.

೩೪. ಆತನು ಆ ಲಿಂಗದ ಅಭಿಷೇಕೋದಕಕ್ಕಾಗಿ ಅಲ್ಲಿಯೇ ಒಂದು ಕುಂಡವನ್ನು ನಿರ್ಮಾಣಮಾಡಿ ಆ ಲಿಂಗವನ್ನೇ ಏಕಾಗ್ರಮನಸ್ಸಿನಿಂದ ಧ್ಯಾನಿಸುತ್ತಿರುವವನಾಗಿ ಇಂದಿಗೂ ಕಾಶಿಯನ್ನು ಬಿಟ್ಟುಹೋಗದಿರುವನು.

ಮಹೋದರೋಽಪಿ ತತ್ಪ್ರಾಚ್ಯಾಂ ಶಿವಧ್ಯಾನಪರಾಯಣಃ ।
ಮಹೋದರೇಶ್ವರಂ ಲಿಂಗಂ ಧ್ಯಾಯೇದದ್ಯಾಪಿ ಕುಂಭಜ ॥ ೩೫ ॥
ಮಹೋದರೇಶ್ವರಂ ದೃಷ್ಟ್ವಾ ವಾರಾಣಸ್ಯಾಂ ದ್ವಿಜೋತ್ತಮ ।
ಕದಾಚಿದಪಿ ನೈ ಮಾತುಃ ಪ್ರವಿಶೇನ್ನೋದರೀಂ ದರೀಂ ॥ ೩೬ ॥
ಘಂಟಾಕರ್ಣಹ್ರದೇ ಸ್ನಾತ್ವಾ ದೃಷ್ಟ್ವಾ ವ್ಯಾಸೇಶ್ವರಂ ವಿಭುಂ ।
ಯತ್ರ ಕುತ್ರ ವಿಪನ್ನೋಽಪಿ ವಾರಾಣಸ್ಯಾಂ ಮೃತೋ ಭವೇತ್ ॥ ೩೭ ॥
ಘಂಟಾಕರ್ಣೇ ಮಹಾತೀರ್ಥೇ ಶ್ರಾದ್ಧಂ ಕೃತ್ವಾ ವಿಧಾನತಃ ।
ಅಪಿ ದುರ್ಗತಿಮಾಪನ್ನಾನುದ್ಧರೇತ್ಸಪ್ತಪೂರ್ವಜಾನ್ ॥ ೩೮ ॥
ನಿಮಜ್ಜ್ಯಾದ್ಯಾಪಿ ತತ್ಕುಂಡೇ ಕ್ಷಣಂ ಯೋಽವಹಿತೋ ಭವೇತ್ ।
ವಿಶ್ವೇಶ್ವರಮಹಾಪೂಜಾಘಂಟಾರಾವಾನ್ ಶೃಣೋತಿ ಸಃ ॥ ೩೯ ॥
ವದಂತಿ ಪಿತರಃ ಕಾಶ್ಯಾಂ ಘಂಟಾಕರ್ಣೇಽಮಲೇ ಜಲೇ ।
ದಾತಾ ತಿಲೋದಕಸ್ಯಾಪಿ ವಂಶೇ ನಃ ಕೋಽಪಿ ಜಾಯತೇ ॥ ೪೦ ॥

---

೩೫. ಕುಂಭಸಂಭವನೆ! ಮಹೋದರನೂ ಆ ಲಿಂಗದ ಪೂರ್ವದಿಕ್ಕಿನಲ್ಲಿ ಮಹೋದರೇಶ್ವರನೆಂಬ ಮತ್ತೊಂದು ಲಿಂಗವನ್ನು ಪ್ರತಿಷ್ಠಾಪಿಸಿ ಇಂದಿಗೂ ಶಿವಧ್ಯಾನಪರಾಯಣನಾಗಿ ಅಲ್ಲಿಯೇ ನೆಲಸಿರುವನು.

೩೬. ಬ್ರಾಹ್ಮಣೋತ್ತಮನೆ! ವಾರಾಣಸಿಯಲ್ಲಿರುವ ಮಹೋದರೇಶ್ವರನನ್ನು ಕಂಡುದರಿಂದ ಮನುಷ್ಯನು ಎಂದಿಗೂ ತಾಯಿಯ ಜಠರವೆಂಬ ಗುಹೆಯ ಅಂಧಕಾರವನ್ನು ಪುನಃ ಪ್ರವೇಶಿಸುವುದಿಲ್ಲ.

೩೭. ಘಂಟಾಕರ್ಣಕುಂಡದಲ್ಲಿ ಸ್ನಾನವನ್ನು ಮಾಡಿ ಸ್ವಾಮಿಯಾದ ವ್ಯಾಸೇಶ್ವರನ ದರ್ಶನವನ್ನು ಮಾಡಲು ಮನುಷ್ಯನು ದೇಹವನ್ನು ಎಲ್ಲಿ ತ್ಯಜಿಸಿದರೂ, ಕಾಶಿಯಲ್ಲಿಯೇ ಮರಣವನ್ನು ಪಡೆದ ಪುಣ್ಯಕ್ಕೆ ಭಾಗಿಯಾಗುವನು.

೩೮. ಈ ಘಂಟಾಕರ್ಣಮಹಾತೀರ್ಥದಲ್ಲಿ ವಿಧ್ಯುಕ್ತವಿಧಾನದಿಂದ ಪಿತೃಶ್ರಾದ್ಧವನ್ನು ನೆರವೇರಿಸಲು, ಮಾನವನು ಹಿಂದಿನ ಏಳುತಲೆಗಳವರೆಗೂ ಪಿತೃಗಳಲ್ಲಿ ತಮ್ಮ ದುಷ್ಕರ್ಮಗಳ ಫಲವಾಗಿ ನರಕಗಳಲ್ಲಿ ಬಳಲುತ್ತಿರುವ ಎಲ್ಲರನ್ನೂ ಉದ್ಧರಿಸುವನು.

೩೯. ಇಂದಿಗೂ ಕೂಡ ಆ ಘಂಟಾಕರ್ಣಕುಂಡದಲ್ಲಿ ಮುಳುಗಿಕೊಂಡು ನಿಮಿಷಮಾತ್ರವಾದರೂ ಯಾವನು ಏಕಾಗ್ರಚಿತ್ತನಾಗಿರುವನೊ, ಅವನ ಕಿವಿಗಳಿಗೆ ವಿಶ್ವೇಶ್ವರನ ಮಹಾಪೂಜೆಯ ಘಂಟಾನಾದವು ಸ್ಪಷ್ಟವಾಗಿ ಕೇಳಿಬರುವುದು.

೪೦. "ಕಾಶೀಕ್ಷೇತ್ರದ ಘಂಟಾಕರ್ಣತೀರ್ಥದ ನಿರ್ಮಲಜಲದಲ್ಲಿ ನಮಗೆ ತಿಲೋದಕವನ್ನಾದರೂ ಕೊಡುವವನು ಯಾವನಾದರೂ ನಮ್ಮ ವಂಶದಲ್ಲಿ ಹುಟ್ಟುತ್ತಾನೆಯೇ" ಎಂಬುದಾಗಿ ಪಿತೃಗಳೆಲ್ಲರೂ ನಿತ್ಯವೂ ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿರುವರು.

ಯದ್ವಂಶ್ಯಾ ಮುನಯಃ ಕಾಶ್ಯಾಂ ಘಂಟಾಕರ್ಣೇ ಮಹಾಹ್ರದೇ ।
ಕೃತೋದಕಕ್ರಿಯಾಃ ಪ್ರಾಪ್ತಾಃ ಪರಾಂ ಸಿದ್ಧಿಂ ಘಟೋದ್ಭವ ॥ ೪೧ ॥

ಸ್ಕಂದ ಉವಾಚ :—

ಘಂಟಾಕರ್ಣೇ ಗಣೇ ಯಾತೇ ಪ್ರಯಾತೇ ಚ ಮಹೋದರೇ ।
ವಿಸಿಸ್ಮಾಯ ಸ್ಮರದ್ವೇಷ್ಟಾ ಮೌಲಿಮಾಂದೋಲಯನ್ ಮುಹುಃ ॥ ೪೨ ॥
ಉವಾಚ ಚ ಮನಸ್ಯೇವ ಹರಃ ಸ್ಮಿತ್ವಾ ಪುನಃ ಪುನಃ ।
ಮಹಾಮೋಹನವಿದ್ಯಾಸಿ ಕಾಶಿ ತ್ವಾಂ ಪರ್ಯವೈಮ್ಯಹಂ ॥ ೪೩ ॥
ಪುರಾವಿದಃ ಪ್ರಶಂಸಂತಿ ತ್ವಾಂ ಮಹಾಮೋಹಹಾರಿಣೀಂ ।
ಕಾಶೀಂ ತ್ವಿತಿ ನ ಜಾನಂತಿ ಮಹಾಮೋಹನಭೂರಿಯಂ ॥ ೪೪ ॥
ಪ್ರೇಷಯಿಷ್ಯಾಮ್ಯಹಂ ಸರ್ವಾನ್ಭವತೀ ಮೋಹಯಿಷ್ಯತಿ ।
ಇತಿ ಸಮ್ಯಗ್ವಿಜಾನಾಮಿ ಕಾಶಿ ತ್ವಾಂ ಮೋಹನೌಷಧಿಂ ॥ ೪೫ ॥

---

೪೧. ಅಗಸ್ತ್ಯ ಮಹರ್ಷಿಯೇ! ಯಾರ ವಂಶಜರು ಇಂತು ಕಾಶಿಯಲ್ಲಿರುವ ಘಂಟಾಕರ್ಣವೆಂಬ ಮಹಾತಟಾಕದಲ್ಲಿ ತಿಲೋದಕಾದಿ ಕ್ರಿಯೆಗಳನ್ನು ಮಾಡುವರೊ, ಆ ಪಿತೃಗಳೆಲ್ಲರೂ ಮಹಾಮುನಿಗಳಾಗಿ ಉತ್ತಮವಾದ ಸಿದ್ಧಿಯನ್ನೂ ಪಡೆಯುವರು.

೪೨. ಸ್ಕಂದನು ಹೇಳುತ್ತಾನೆ:—ಘಂಟಾಕರ್ಣನು ಹೊರಟುಹೋಗಿ ಮಹೋದರನೂ ಸಹ ಹಿಂದಿರುಗದಿರಲು ಮನ್ಮಥವೈರಿಯಾದ ಮಹೇಶ್ವರನು ವಿಸ್ಮಯಗೊಂಡು ಕಾಶಿಯ ಮಾಹಾತ್ಮ್ಯಕ್ಕಾಗಿ ಮತ್ತೆ ಮತ್ತೆ ಕಿರೀಟಾಲಂಕೃತವಾದ ತನ್ನ ತಲೆಯನ್ನು ತೂಗಿದನು.

೪೩. ಆ ಮುಗುಳ್ನಗೆಯಿಂದ ಕೂಡಿ ತನ್ನಲ್ಲಿಯೇ ಪುನಃಪುನಃ ಹೇಳಿಕೊಂಡನು. ''ಕಾಶಿಯೆ! ನೀನು ಅತ್ಯಂತ ಮೋಹವನ್ನುಂಟುಮಾಡುವ ವಿದ್ಯೆಯುಳ್ಳವಳೆಂದು ನಾನು ಚೆನ್ನಾಗಿ ತಿಳಿದಿರುವೆನು.

೪೪. ಪುರಾಣಾದಿಗಳಲ್ಲಿ ನಿಷ್ಣಾತರಾದವರು ನಿನ್ನನ್ನು ಸಂಸಾರದ ಮಹಾಮೋಹವನ್ನು ಕಳೆಯುವ ಕ್ಷೇತ್ರವೆಂಬುದಾಗಿ ಸ್ತೋತ್ರಮಾಡುತ್ತಿರುವರು. ಆದರೆ ಕಾಶಿಯು ಭಕ್ತರಿಗೆ ಮಹಾ ಮೋಹವನ್ನುಂಟುಮಾಡುವ ಭೂಮಿಯೆಂಬುದನ್ನು ಮಾತ್ರ ಅವರು ತಿಳಿದಿರಲಾರರು.

೪೫. ಹೀಗೆಯೇ ನಾನು ನನ್ನ ಅನುಚರರೆಲ್ಲರನ್ನೂ ಕಳುಹಿಸಿಕೊಡುತ್ತೇನೆ. ನೀನು ಅವರನ್ನೆಲ್ಲ ಮೋಹಗೊಳಿಸುವೆಯೆಂದು ನಾನು ಚೆನ್ನಾಗಿ ತಿಳಿದಿರುವೆನು. ಕಾಶಿಯೇ! ನೀನು ಲೋಕವನ್ನೇ ಸಮ್ಮೋಹಗೊಳಿಸುವ ಮಹೌಷಧಿಯು.

ತಥಾಪಿ ಪ್ರೇಷಯಿಷ್ಯಾಮಿ ಯಾವಾನ್ಮೇಽಸ್ತಿ ಪರಿಚ್ಛದಃ ।
ನೋದ್ಯಮಾದ್ವಿರಮಂತೀಹ ಜ್ಞಾನಿನಃ ಸಾಧ್ಯಕರ್ಮಣಿ ॥ ೪೬ ॥
ನೋದ್ಯಮಾದ್ವಿರತಿಃ ಕಾರ್ಯಾ ಕ್ವಾಪಿ ಕಾರ್ಯೇ ವಿಚಕ್ಷಣೈಃ ।
ಪ್ರತಿಕೂಲೋಽಪಿ ಖಿದ್ಯೇತ ವಿಧಿಸ್ತತ್ಸತತೋದ್ಯಮಾತ್ ॥ ೪೭ ॥
ಶೀತೋಷ್ಣಭಾನೂ ಸ್ವರ್ಭಾನುಗ್ರಸ್ತಾವಪಿ ನಭೋಽಂಗಣೇ ।
ಗತಿಂ ನ ತ್ಯಜತೋಽದ್ಯಾಪಿ ಪ್ರಕ್ರಾಂತವ್ಯಕೃತೋದ್ಯಮೌ ॥ ೪೮ ॥
ಏಕತ್ರ ಹಂತಿ ಕಾರ್ಯಾಣಿ ಪ್ರಾತಿಕೂಲ್ಯಾದ್ವಿಧಿರ್ಮುಹುಃ ।
ಏಕತ್ರ ಕರಣೀಯಾನಿ ಸೇತ್ಸ್ಯಂತ್ಯತ್ರ ಭೃಶೋದ್ಯಮಾತ್ ॥ ೪೯ ॥
ದೈವಂ ಪೂರ್ವಕೃತಂ ಕರ್ಮ ಕಥ್ಯತೇ ನೇತರತ್ಸ್ವನಃ ।
ತನ್ನಿರಾಕರಣೇ ಯತ್ನಃ ಸ್ವಯಂ ಕಾರ್ಯೋ ವಿಪಶ್ಚಿತಾ ॥ ೫೦ ॥
ಭಾಜನೋಪಸ್ಥಿತಂ ದೈವಾದ್ಭೋಜ್ಯಂ ನಾಸ್ಯಂ ಸ್ವಯಂ ವಿಶೇತ್ ।
ಹಸ್ತವಕ್ತ್ರೋದ್ಯಮಾತ್ತಚ್ಚ ಪ್ರವಿಶೇದೌದರೀಂ ದರೀಂ ॥ ೫೧ ॥

---

೪೬. ಆದರೂ ನನ್ನ ಪರಿವಾರದಲ್ಲಿರುವ ಜನರನ್ನೆಲ್ಲ ನಿನ್ನಲ್ಲಿಗೆ ಕಳುಹಿಸುತ್ತೇನೆ. ಜ್ಞಾನಿಗಳಾದವರು ತಮಗೆ ಸಾಧ್ಯವಾದ ಕೆಲಸದಲ್ಲಿ ಮಧ್ಯದಲ್ಲೊದಗಿವ ಕೆಲವು ವಿಘ್ನಗಳ ಭಯದಿಂದಲೇ ತಮ್ಮ ಪ್ರಯತ್ನದಿಂದ ವಿಮುಖರಾಗುವುದಿಲ್ಲವಷ್ಟೆ.

೪೭. ಕಾರ್ಯಗೌರವದಲ್ಲಿ ವಿಚಕ್ಷಣರಾದವರು ಎಂದಿಗೂ ಸ್ವಪ್ರಯತ್ನದಲ್ಲಿ ಅಲಂಬುದ್ಧಿಯನ್ನು ಮಾಡಬಾರದು. ನಿರಂತರವಾದ ಅವರ ಕಾರ್ಯೋದ್ಯಮವನ್ನು ಕಂಡು ಪ್ರಥಮದಲ್ಲಿ ಪ್ರತಿಕೂಲವಾಗಿರುವ ದೈವವೂ ಅನಂತರದಲ್ಲಿ ಅನುಕೂಲವಾಗಬಹುದು.

೪೮. ಚಂದ್ರಸೂರ್ಯರನ್ನು ಆಕಾಶಮಾರ್ಗದಲ್ಲಿ ಪುನಃಪುನಃ ರಾಹುವು ಪರಿಭವಿಸುತ್ತಿದ್ದರೂ ಅವರು ತಮ್ಮ ಕೆಲಸಗಳಿಗೆ ಸತತೋದ್ಯಮವುಳ್ಳವರಾಗಿ ಇಂದಿಗೂ ತಮ್ಮ ಸಂಚಾರವನ್ನು ನಡೆಸುತ್ತಲೇ ಇರುವರು.

೪೯. ಈ ದೈವವು ಅತ್ಯಂತ ಪ್ರತಿಕೂಲವಾಗಿ ಒಮ್ಮೆ ಕಾರ್ಯಗಳನ್ನೆಲ್ಲ ಕೆಡಿಸಿಬಿಡುವುದು. ಅದೇ ಈ ಭೂಲೋಕದಲ್ಲಿ ನಿರಂತರಪ್ರಯತ್ನದ ಫಲವಾಗಿ ಒಮ್ಮೆ ಹಿಡಿದ ಕಾರ್ಯಗಳನ್ನೆಲ್ಲ ಅನುಕೂಲಮಾಡಿಕೊಡುವುದು.

೫೦. ಪೂರ್ವದಲ್ಲಿ ಮಾಡಿದ ಕರ್ಮವೇ ದೈವವೆಂದು ಕರೆಯಲ್ಪಡುವುದಲ್ಲದೆ ಮತ್ತೆ ಬೇರೆಯಲ್ಲ. ಆದುದರಿಂದ ಬುದ್ಧಿವಂತನಾದವನು ತಾನೇ ಅದನ್ನು ನಿರಾಕರಿಸಲು ಪ್ರಯತ್ನಮಾಡಬೇಕು.

೫೧. ಭೋಜನಕ್ಕಾಗಿ ದೈವಿಕವಾಗಿ ಲಭಿಸಿದ ಪದಾರ್ಥವಾದರೂ ತಾನೇ ಬಾಯಿಯೊಳಕ್ಕೆ ಬಂದು, ಬೀಳುವುದಿಲ್ಲವಷ್ಟೆ. ಹಸ್ತಗಳ ಮತ್ತು ಮುಖದ

ಇತ್ಯುದ್ಯಮಂ ಸಮುರ್ಥ್ಯೇಶೋ ನಿಶ್ಚಿತಂ ದೈವಜಿತ್ವರಂ ।
ಪುನಶ್ಚ ಪ್ರೇಷಯಾಂಚಕ್ರೇ ಗಣಾನ್ಪಂಚ ಮಹಾರಯಾನ್ ॥ ೫೨ ॥
ಸೋಮನಂದೀ ನಂದಿಷೇಣಃ ಕಾಲಪಿಂಗಲಕುಕ್ಕುಟಾಃ ।
ತೇಽದ್ಯಾಪಿ ನ ನಿವರ್ತಂತೇ ಕಾಶ್ಯಾಂ ಜೀವಾನ್ಮೃತಾ ಯಥಾ ॥ ೫೩ ॥
ತೇಽಪಿ ಸ್ವನಾಮ್ನಾ ಲಿಂಗಾನಿ ಶಂಭುಸಂತುಷ್ಟಿಕಾಮ್ಯಯಾ ।
ಪ್ರತಿಷ್ಠಾಪ್ಯಸ್ಥಿತಾಃ ಕಾಶ್ಯಾಂ ವಿಶ್ವನಿರ್ವಾಣಜನ್ಮನಿ ॥ ೫೪ ॥
ಸೋಮನಂದೀಶ್ವರಂ ದೃಷ್ಟ್ವಾ ಲಿಂಗಂ ನಂದವನೇ ಪರಂ ।
ಸೋಮಲೋಕೇ ಪರಾನಂದಂ ಪ್ರಾಪ್ನುಯಾದ್ಭಕ್ತಿಮಾನ್ನರಃ ॥ ೫೫ ॥
ತದುತ್ತರೇ ವಿಲೋಕ್ಯಾಥ ನಂದಿಷೇಣೇಶ್ವರಂ ನರಃ ।
ಆನಂದಸೇನಾಂ ಸಂಪ್ರಾಪ್ಯ ಜಯೇನ್ಮೃತ್ಯುಮಪಿ ಕ್ಷಣಾತ್ ॥ ೫೬ ॥
ಕಾಲೇಶ್ವರಂ ಮಹಾಲಿಂಗಂ ಗಂಗಾಯಾಃ ಪಶ್ಚಿಮೋತ್ತರೇ ।
ಪ್ರಣಮ್ಯ ಕಾಲಪಾಶೇನ ನೋ ಬಧ್ಯೇತ ಕದಾಚನ ॥ ೫೭ ॥

---

ವ್ಯಾಪಾರಗಳಿಂದಲೇ ಆ ಆಹಾರವು ಜಠರದ ಗುಹೆಯನ್ನು ಪ್ರವೇಶಿಸಲು ಸಾಧ್ಯವಾಗುವುದು.

೫೨. ಇಂತೆಂದು ಮಹೇಶ್ವರನು ಅದೃಷ್ಟವನ್ನೂ ಜಯಿಸಲು ಸಾಧನವಾದ ಪುರುಷಕಾರವನ್ನೇ ಮಾಡುವ ನಿಶ್ಚಯವುಳ್ಳವನಾಗಿ ಪುನಃ ಮಹಾ ವೇಗಶಾಲಿಗಳಾದ ಐದು ಮಂದಿ ಗಣಾಧೀಶರನ್ನು ಕಾಶಿಗೆ ಕಳುಹಿಸಿದನು.

೫೩. ಸೋಮನಂದಿ, ನಂದಿಷೇಣ, ಕಾಲ, ಪಿಂಗಳ ಮತ್ತು ಕುಕ್ಕುಟರೆಂಬುವರೇ ಆ ಐವರು. ಅವರೂ ಇಂದಿನವರೆಗೂ ಹಿಂದಿರುಗದೆ ಕಾಶಿಯಲ್ಲಿಯೇ ಅಮೃತಮಯವಾದ ಜೀವನವುಳ್ಳವರಾಗಿ ನೆಲಸಿರುವರು.

೫೪. ಅವರೂ ಪರಮೇಶ್ವರನನ್ನು ಸಂತೋಷಗೊಳಿಸುವವರಾಗಿ ತಮ್ಮ ತಮ್ಮ ಹೆಸರುಗಳಿಂದ ಶಿವಲಿಂಗಗಳನ್ನು ಸ್ಥಾಪಿಸಿ ಸಕಲ ಸೌಖ್ಯಗಳ ನೆಲಮನೆಯೆನಿಸಿದ ಕಾಶಿಯಲ್ಲಿಯೇ ವಾಸಮಾಡುತ್ತಲಿರುವರು.

೫೫. ನಂದವನದಲ್ಲಿರುವ ಪರಮೋತ್ಕೃಷ್ಟವಾದ ಸೋಮನಂದೀಶ್ವರನನ್ನು ನೋಡಲು ಭಕ್ತಿಯುಕ್ತನಾದ ಮಾನವನು ಚಂದ್ರಲೋಕದಲ್ಲಿ ನಿರತಿಶಯಿತವಾದ ಆನಂದವನ್ನು ಅನುಭವಿಸುವನು.

೫೬. ಅದಕ್ಕೆ ಉತ್ತರದಿಕ್ಕಿನಲ್ಲಿರುವ ನಂದಿಷೇಣೇಶ್ವರನನ್ನು ನೋಡಿದ ಮಾನವನು ಆನಂದದ ಪರಂಪರೆಯನ್ನೇ ಪಡೆದವನಾಗಿ ಮೃತ್ಯುವನ್ನೂ ಸಹ ಕ್ಷಣಮಾತ್ರದಲ್ಲಿಯೇ ಜಯಿಸುವನು.

೫೭. ಗಂಗಾನದಿಗೆ ವಾಯುವ್ಯದಿಗ್ಭಾಗದಲ್ಲಿರುವ ಕಾಲೇಶ್ವರನೆಂಬ ಮಹಾಲಿಂಗವನ್ನು ಕಂಡು ನಮಸ್ಕರಿಸಲು ಮಾನವನು ಎಂದೆಂದಿಗೂ ಕಾಲನ ಪಾಶಗಳಿಗೆ ಸಿಕ್ಕಿ ಬಾಧೆಗೊಳಗಾಗುವುದಿಲ್ಲ.

ಪಿಂಗಲೇಶ್ವರಮಭ್ಯರ್ಚ್ಯ ಕಾಲೇಶಾತ್ಕಿಂಚಿದುತ್ತರೇ ।
ಲಭತೇ ಪಿಂಗಲಜ್ಞಾನಂ ಯೇನ ತನ್ಮಯತಾಂ ವ್ರಜೇತ್ ॥ ೫೮ ॥
ಕುಕ್ಕುಟೇಶ್ವರಲಿಂಗಸ್ಯ ಯೇಽತ್ರ ಭಕ್ತಿಂ ವಿತನ್ವತೇ ।
ಕುಕ್ಕುಟಾಂಡಾಕೃತೇಸ್ತಸ್ಯ ನ ತೇ ಗರ್ಭಮವಾಪ್ನುಯುಃ ॥ ೫೯ ॥

ಸ್ಕಂದ ಉವಾಚ :-

ಸೋಮನಂದಿಪ್ರಭೃತಿಷು ಮುನೇ ಪಂಚಗಣೇಷ್ವಪಿ ।
ಆನಂದಕಾನನಂ ಪ್ರಾಪ್ಯ ಸ್ಥಿತೇಷು ಸ್ಥಾಣುರಬ್ರವೀತ್ ॥ ೬೦ ॥
ಕಾರ್ಯಮಸ್ಮಾಕಮೇವೈತದ್ಯದಿ ಸಮ್ಯಗ್ವಿಮೃಶ್ಯತೇ ।
ಅನೇನೋಪಾಧಿನಾಪ್ಯೇತೇ ತತ್ರ ತಿಷ್ಠಂತು ಮಾಮಕಾಃ ॥ ೬೧ ॥
ಪ್ರಮಥೇಷು ಪ್ರವಿಷ್ಟೇಷು ಮಾಯಾವೀರ್ಯಮಹತ್ಸ್ವಪಿ ।
ಅಹಮೇವ ಪ್ರವಿಷ್ಟೋಽಸ್ಮಿ ವಾರಾಣಸ್ಯಾಂ ನ ಸಂಶಯಃ ॥ ೬೨ ॥
ಕ್ರಮೇಣ ಪ್ರೇಷಯಿಷ್ಯಾಮಿ ಯೋಽಸ್ತಿ ಮೇ ಸ್ವಪರಿಚ್ಛದಃ ।
ತತ್ರ ಸರ್ವೇಷು ಯಾತೇಷು ತತೋ ಯಾಸ್ಯಾಮ್ಯಹಂ ಪುನಃ ॥ ೬೩ ॥

---

೫೮. ಕಾಲೇಶ್ವರನಿಗೆ ಸ್ವಲ್ಪ ಉತ್ತರದಲ್ಲಿರುವ ಪಿಂಗಲೇಶ್ವರನನ್ನು ಪೂಜಿಸಿದವನು ಪಿಂಗಲೇಶ್ವರನ ಯಥಾರ್ಥಸ್ವರೂಪವನ್ನು ತಿಳಿದು ಶಿವನಲ್ಲಿಯೇ ಐಕ್ಯವನ್ನು ಪಡೆಯುವನು.

೫೯. ಯಾವ ಮನುಷ್ಯರು ಕಾಶಿಯಲ್ಲಿರುವ ಕೋಳಿಯ ಮೊಟ್ಟೆಯ ಆಕಾರವುಳ್ಳ ಕುಕ್ಕುಟೇಶ್ವರ ಲಿಂಗದಲ್ಲಿ ಭಕ್ತಿಯನ್ನು ಮಾಡುವರೊ, ಅವರು ಪುನಃ ಗರ್ಭವಾಸವನ್ನು ಅನುಭವಿಸುವುದಿಲ್ಲ.

೬೦. ಸ್ಕಂದನು ಹೇಳುತ್ತಾನೆ:—ಸೋಮನಂದಿಯೇ ಮೊದಲಾದ ಐವರು ಗಣಗಳೂ ಆನಂದವನವೆನಿಸಿದ ಕಾಶಿಯನ್ನು ಸೇರಿ ಅಲ್ಲಿಯೇ ನಿಂತುಬಿಡಲು ಮಹೇಶ್ವರನು ತನ್ನಲ್ಲಿಯೇ ಇಂತೆಂದನು.

೬೧. ನಿಜವಾಗಿ ಕೂಲಂಕಷವಾಗಿ ವಿಚಾರವನ್ನು ಮಾಡಲು ಇದು ನನಗೆ ಸೇರಿದ ಕೆಲಸವೇ ಆಗಿರುವುದು. ಈ ನೆಪದಿಂದಲಾದರೂ ನನ್ನ ಅನುಚರರಾದ ಗಣಗಳೆಲ್ಲರೂ ಅಲ್ಲಿಯೇ ವಾಸಮಾಡುತ್ತಿರಲಿ.

೬೨. ಮಾಯಾಶಕ್ತಿಯಲ್ಲಿಯೂ ಪರಾಕ್ರಮದಲ್ಲಿಯೂ ಮುಂದಾಳುಗಳಾದ ನನ್ನ ಪ್ರಮಥಗಣಗಳು ಕಾಶಿಯನ್ನು ಪ್ರವೇಶಮಾಡಿರಲು ಒಂದಂಶದಿಂದ ನಾನೇ ಪ್ರವಿಷ್ಟನಾಗಿರುವೆನೆಂಬುದರಲ್ಲಿ ಸಂದೇಹವಿಲ್ಲ.

೬೩. ನನ್ನ ಪರಿವಾರವೆಷ್ಟಿದೆಯೊ, ಅದೆಲ್ಲವನ್ನೂ ಕ್ರಮವಾಗಿ ಅಲ್ಲಿಗೆ ಕಳುಹಿಸುವೆನು. ಅವರೆಲ್ಲರೂ ಅಲ್ಲಿ ಸೇರಿದ ಮೇಲೆ ಪುನಃ ನಾನೇ ಪುರಪ್ರವೇಶವನ್ನು ಮಾಡುವೆನು.

ಸಂಪ್ರಧಾರ್ಯೇತಿ ಹೃದಯೇ ದೇವದೇವೇನ ಶೂಲಿನಾ ।
ಪ್ರೈಷಿಷ್ಟ ಪ್ರಮಥಾನಾಂ ತು ತತೋ ಗಣಚತುಷ್ಟಯಂ ॥ ೬೪ ॥
ಕುಂಡೋದರೋ ಮಯೂರಾಖ್ಯೋ ಬಾಣೋ ಗೋಕರ್ಣ ಏವ ಚ ।
ಮಾಯಾಬಲಂ ಸಮಾಶ್ರಿತ್ಯ ಕಾಶೀಂ ಪ್ರವಿವಿಶುರ್ಗಣಾಃ ॥ ೬೫ ॥
ಕೃತ್ವೋಪಾಯಶತಂ ತೈಸ್ತು ದಿವೋದಾಸಸ್ಯ ಸಂಭ್ರಮೇ ।
ಯದ್ಯೈಕೋऽಪಿ ಸಮರ್ಥೋ ನ ತದಾ ತತ್ರೈವ ಸಂಸ್ಥಿತಂ ॥ ೬೬ ॥
ಅಪರಾಧಶತೇಷ್ವೀಶಃ ಕೇನ ತುಷ್ಯತಿ ಕರ್ಮಣಾ ।
ಸಂಪ್ರಧಾರ್ಯೇತಿ ತೇ ಚಕ್ರುರ್ಲಿಂಗಾರಾಧನಮುತ್ತಮಂ ॥ ೬೭ ॥
ಏಕಸ್ಮಿನ್ ಶಾಂಭವೇ ಲಿಂಗೇ ವಿಧಿನಾತ್ರ ಸಮರ್ಚಿತೇ ।
ಕ್ಷಮೇತ್ತ್ರ್ಯಕ್ಷೋऽಪರಾಧಾನಾಂ ಶತಂ ಮೋಕ್ಷಂ ಚ ಯಚ್ಛತಿ ॥ ೬೮ ॥
ನ ತುಷ್ಯತಿ ತಥಾ ಶಂಭುರ್ಯಜ್ಞದಾನತಪೋವ್ರತೈಃ ।
ಯಥಾ ತುಷ್ಯೇತ್ಸಕೃಲ್ಲಿಂಗೇ ವಿಧಿನಾಭ್ಯರ್ಚಿತೇ ಸತಿ ॥ ೬೯ ॥

---

೬೪. ಇಂತು ಮನಸ್ಸಿನಲ್ಲಿಯೇ ದೃಢನಿಶ್ಚಯವನ್ನು ಮಾಡಿಕೊಂಡ ದೇವೋತ್ತಮನಾದ ಮಹೇಶ್ವರನಿಂದ ಪುನಃ ಪ್ರಮಥರ ನಾಲ್ಕು ಜನ ಗಣನಾಯಕರು ಕಾಶಿಗೆ ಪ್ರೇಷಿತರಾದರು.

೬೫. ಕುಂಡೋದರ, ಮಯೂರ, ಬಾಣ, ಗೋಕರ್ಣರೆಂಬ ನಾಲ್ವರೂ ತಮ್ಮ ಮಾಯಾಬಲವನ್ನಾಶ್ರಯಿಸಿದವರಾಗಿ ಕಾಶೀಕ್ಷೇತ್ರವನ್ನು ಪ್ರವೇಶಿಸಿದರು.

೬೬–೬೭. ಅವರೆಲ್ಲರೂ ನೂರಾರು ಉಪಾಯಗಳನ್ನು ಮಾಡಿದರೂ ಕೂಡ ದಿವೋದಾಸಮಹಾರಾಜನನ್ನು ಒಂದರಿಂದಲೂ ಭ್ರಾಂತಿಗೊಳಿಸಲು ಸಾಧ್ಯವಾಗಲಿಲ್ಲವು. ತಮ್ಮ ಯಾವ ಪ್ರಯತ್ನವೂ ಸಫಲವಾಗದಿರಲು ಅವರೆಲ್ಲರೂ ಅಲ್ಲಿಯೇ ನಿಂತುಬಿಟ್ಟರು. ನಮ್ಮ ಸ್ವಾಮಿಯಾದ ಮಹೇಶ್ವರನು ನೂರಾರು ಅಪರಾಧಗಳನ್ನು ಮಾಡಿದ ನಮ್ಮಲ್ಲಿ ಯಾವ ಸತ್ಕರ್ಮವನ್ನು ಮಾಡಿದರೆ ಸಂತುಷ್ಟನಾಗುವನು? ಎಂದು ತಮ್ಮಲ್ಲಿಯೇ ಪರಸ್ಪರಾಲೋಚನೆಯನ್ನು ನಡೆಸಿ ಸರ್ವೋತ್ತಮವಾದ ಲಿಂಗಪೂಜೆಯನ್ನೇ ಮಾಡಲುಪಕ್ರಮಿಸಿದರು.

೬೮. ಈ ಪವಿತ್ರದೇಶದಲ್ಲಿ ವಿಧಿವಿಹಿತರೀತಿಯಿಂದ ಒಂದು ಲಿಂಗವನ್ನು ಪೂಜಿಸಿದರೂ ಸಹ ತ್ರಿಲೋಚನನು ನೂರು ಅಪರಾಧಗಳನ್ನು ಕ್ಷಮಿಸುವನು; ಮೋಕ್ಷಪದವಿಯನ್ನೂ ದಯೆಗೈಯುವನು.

೬೯. ಲಿಂಗವನ್ನು ವಿಧಿಪ್ರಕಾರವಾಗಿ ಒಮ್ಮೆಯಾದರೂ ಪೂಜಿಸುವುದರಿಂದ ಮಹಾದೇವನು ಹೇಗೆ ಸಂತೋಷಪಡುವನೊ, ಹಾಗೆ ಅನೇಕ ಸಲ ಮಾಡಿದ ಯಜ್ಞಗಳಿಂದಲೂ, ದಾನಗಳಿಂದಲೂ, ತಪಸ್ಸುಗಳಿಂದಲೂ, ವ್ರತನಿಯಮಗಳಿಂದಲೂ ಸಂತುಷ್ಟನಾಗಲಾರನು.

ಲಿಂಗಾರ್ಚನವಿಧಾನಜ್ಞೋ ಲಿಂಗಾರ್ಚನರತಃ ಸದಾ ।
ತ್ರ್ಯಕ್ಷ ಏವ ಸ ವಿಜ್ಞೇಯಃ ಸಾಕ್ಷಾದ್ದ್ವ್ಯಕ್ಷೋಽಪಿ ಮಾನವಃ ॥ ೭೦ ॥
ನ ಗೋಶತಪ್ರದಾನೇನ ನ ಸ್ವರ್ಣಶತದಾನತಃ ।
ತತ್ಫಲಂ ಲಭ್ಯತೇ ಪುಂಭಿರ್ಯತ್ಸಕೃಲ್ಲಿಂಗಪೂಜನಾತ್ ॥ ೭೧ ॥
ಅಶ್ವಮೇಧಾದಿಭಿರ್ಯಾಗೈರ್ನ ತತ್ಫಲಮವಾಪ್ಯತೇ ।
ಯತ್ಫಲಂ ಲಭ್ಯತೇ ಮರ್ತ್ಯೈರ್ನಿತ್ಯಂ ಲಿಂಗಪ್ರಪೂಜನಾತ್ ॥ ೭೨ ॥
ಸ್ನಾಪಯಿತ್ವಾ ವಿಧಾನೇನ ಯೋ ಲಿಂಗಸ್ನಪನೋದಕಂ ।
ತ್ರಿಃ ಪಿಬೇತ್ತ್ರಿವಿಧಂ ಪಾಪಂ ತಸ್ಯೇಹಾಶು ಪ್ರಣಶ್ಯತಿ ॥ ೭೩ ॥
ಲಿಂಗಸ್ನಪನವಾರ್ಭಿರ್ಯಃ ಕುರ್ಯಾನ್ಮೂರ್ಧ್ನ್ಯಭಿಷೇಚನಂ ।
ಗಂಗಾಸ್ನಾನಫಲಂ ತಸ್ಯ ಜಾಯತೇಽತ್ರ ವಿಪಾಪ್ಮನಃ ॥ ೭೪ ॥
ಲಿಂಗಂ ಸಮರ್ಚಿತಂ ದೃಷ್ಟ್ವಾ ಯಃ ಕುರ್ಯಾತ್ಪ್ರಣತಿಂ ಸಕೃತ್ ।
ಸಂದೇಹೋ ಜಾಯತೇ ತಸ್ಯ ಪುನರ್ದೇಹನಿಬಂಧನೇ ॥ ೭೫ ॥

---

೭೦-೭೧. ಯಾವನು ಶಿವಲಿಂಗದ ಪೂಜೆಯ ವಿಧಾನವನ್ನರಿತಿರುವನೊ, ಮತ್ತು ಲಿಂಗಪೂಜೆಯಲ್ಲಿಯೇ ನಿರತನಾಗಿರುವನೊ, ಅವನು ಎರಡು ಕಣ್ಣುಗಳುಳ್ಳ ಮನುಷ್ಯನೇ ಆಗಿದ್ದರೂ ತ್ರಿಲೋಚನನಾದ ಪರಮೇಶ್ವರನೆಂದೇ ತಿಳಿಯಬೇಕು. ಒಮ್ಮೆ ಲಿಂಗಾರ್ಚನೆಯಿಂದ ಮನುಷ್ಯರು ಯಾವ ಫಲವನ್ನು ಪಡೆಯುವರೊ, ಅದನ್ನು ನೂರು ಆಕಳುಗಳ ದಾನದಿಂದಾಗಲಿ, ನೂರು ತೊಲ ಚಿನ್ನವನ್ನು ದಾನಮಾಡುವುದರಿಂದಾಗಲಿ ಪಡೆಯಲು ಸಾಧ್ಯವಿಲ್ಲವು.

೭೨. ಪ್ರತಿದಿನದಲ್ಲಿಯೂ ಲಿಂಗವನ್ನು ಪೂಜಿಸುವುದರಿಂದ ಮನುಷ್ಯರಿಗೆ ಲಭಿಸುವ ಪುಣ್ಯವು ಅಶ್ವಮೇಧವೇ ಮೊದಲಾದ ಮಹಾಯಜ್ಞಗಳನ್ನು ಮಾಡಿದುದರಿಂದಲೂ ಹೊಂದಲು ಸಾಧ್ಯವಾಗುವುದಿಲ್ಲ.

೭೩. ಯಾವನು ಕಲ್ಪೋಕ್ತ ವಿಧಾನದಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಿ ಆ ಅಭಿಷೇಕೋದಕವನ್ನು ಮೂರುಸಲ ಪಾನಮಾಡುವನೊ, ಅವನು ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ಮೂರು ವಿಧಗಳಾದ ತಾಪಗಳನ್ನೂ ಶೀಘ್ರವಾಗಿಯೇ ನಾಶಗೊಳಿಸಿಕೊಳ್ಳುವನು.

೭೪. ಶಿವಲಿಂಗಕ್ಕೆ ಅಭಿಷೇಕಮಾಡಿದ ತೀರ್ಥೋದಕವನ್ನು ಯಾವನು ಶಿರಸ್ಸಿನಲ್ಲಿ ಧಾರಣೆಮಾಡುವನೊ, ಪಾಪರಹಿತನಾದ ಆತನಿಗೆ ಗಂಗಾಸ್ನಾನವನ್ನು ಮಾಡಿದ ಫಲವು ಲಭಿಸುವುದು.

೭೫. ಲಿಂಗಪೂಜೆಯು ನಡೆಯುತ್ತಿರುವುದನ್ನು ಕಂಡು ಯಾವನು ಒಮ್ಮೆಯಾದರೂ ಅದಕ್ಕೆ ಸಾಷ್ಟಾಂಗನಮಸ್ಕಾರವನ್ನು ಮಾಡುವನೊ, ಅವನಿಗೆ ಪುನಃ ದೇಹಧಾರಣೆಯ ಬಂಧನವು ಬಹಳ ಅನುಮಾನಾಸ್ಪದವೇ ಸರಿ.

ಲಿಂಗಂ ಯಃ ಸ್ಥಾಪಯೇದ್ಭಕ್ತ್ಯಾ ಸಪ್ತಜನ್ಮಕೃತಾದಘಾತ್ ।
ಮುಚ್ಯತೇ ನಾತ್ರ ಸಂದೇಹೋ ವಿಶುದ್ಧಃ ಸ್ವರ್ಗಭಾಗ್ಭವೇತ್ ॥ ೨೬ ॥
ವಿಚಾರ್ಯೇತಿ ಗಣೈಃ ಕಾಶ್ಯಾಂ ಸ್ವಾಮಿದ್ರೋಹೋಪಶಾಂತಯೇ ।
ಪ್ರತಿಷ್ಠಿತಾನಿ ಲಿಂಗಾನಿ ಮಹಾಪಾತಕಭಿಂದ್ಯತಿ ॥ ೨೭ ॥
ಕುಂಡೋದರೇಶ್ವರಂ ಲಿಂಗಂ ದೃಷ್ಟ್ವಾ ಲೋಲಾರ್ಕಸನ್ನಿಧೌ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥ ೨೮ ॥
ಕುಂಡೋದರೇಶ್ವರಾಲ್ಲಿಂಗಾತ್ಪ್ರತೀಚ್ಯಾಮಸಿರೋಧಸಿ ।
ಮಯೂರೇಶ್ವರಮಭ್ಯರ್ಚ್ಯ ಸ ಗರ್ಭಂ ಪ್ರತಿಪದ್ಯತೇ ॥ ೨೯ ॥
ಮಯೂರೇಶಪ್ರತೀಚ್ಯಾಂ ಚ ಲಿಂಗಂ ಬಾಣೇಶ್ವರಂ ಮಹತ್ ।
ತಸ್ಯ ದರ್ಶನಮಾತ್ರೇಣ ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೩೦ ॥
ಗೋಕರ್ಣೇಶಂ ಮಹಾಲಿಂಗಮಂತರ್ಗೇಹಸ್ಯ ಪಶ್ಚಿಮೇ ।
ದ್ವಾರೇ ಸಮರ್ಚ್ಯ ವೈ ಕಾಶ್ಯಾಂ ನ ವಿಘ್ನೈರಭಿಭೂಯತೇ ॥ ೩೧ ॥

---

೨೬. ಯಾವನು ಭಕ್ತಿಯುಕ್ತನಾಗಿ ಲಿಂಗವನ್ನು ಸ್ಥಾಪನೆಮಾಡುವನೋ, ಅವನು ಏಳು ಜನ್ಮಗಳಲ್ಲಿ ಮಾಡಿದ ಪಾತಕಗಳಿಂದ ಮುಕ್ತನಾಗುವುದರಲ್ಲಿ ಸಂಶಯವಿಲ್ಲ. ಅವನು ಪರಿಶುದ್ಧನಾಗಿ ಸ್ವರ್ಗಕ್ಕೆ ಭಾಗಿಯಾಗುವನು.''

೨೭. ಇಂತೆಂದು ಶಿವಗಣಗಳೆಲ್ಲರೂ ಕಾಶೀಕ್ಷೇತ್ರದಲ್ಲಿ ವಿಚಾರದಿಂದ ನಿಶ್ಚಯಿಸಿಕೊಂಡು ಸ್ವಾಮಿಗೆ ಮಾಡಿದ ದ್ರೋಹದ ಶಮನಕ್ಕಾಗಿ ಮಹಾಪಾತಕಗಳನ್ನೂ ನಾಶಗೊಳಿಸುವ ಲಿಂಗಗಳನ್ನು ಪ್ರತಿಷ್ಠಿಸಿದರು.

೨೮. ಲೋಲಾರ್ಕನ ಸನ್ನಿಧಿಯಲ್ಲಿರುವ ಕುಂಡೋದರೇಶ್ವರಲಿಂಗವನ್ನು ನೋಡಿದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಶಿವಲೋಕದಲ್ಲಿ ಉತ್ತಮ ಪೂಜೆಯನ್ನು ಪಡೆಯುವನು.

೨೯. ಆ ಕುಂಡೋದರ ಲಿಂಗಕ್ಕೆ ಪಶ್ಚಿಮದಿಕ್ಕಿನಲ್ಲಿ ಅಸಿನದಿಯ ದಡದಲ್ಲಿ ನೆಲಸಿರುವ ಮಯೂರೇಶ್ವರನನ್ನು ಪೂಜಿಸಿದ ಮಾನವನಿಗೆ ಪುನಃ ಗರ್ಭವಾಸ ವುಂಟಾಗುವುದಿಲ್ಲ.

೩೦. ಆ ಮಯೂರೇಶ್ವರಲಿಂಗದ ಪಶ್ಚಿಮಕ್ಕೆ ಮಹಾಮಹಿಮೋಪೇತವಾದ ಬಾಣೇಶ್ವರಲಿಂಗವು ಪ್ರತಿಷ್ಠಿತವಾಗಿರುವುದು. ಅದನ್ನು ನೋಡಿದ ಮಾತ್ರದಿಂದಲೇ ಮನುಷ್ಯನು ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

೩೧. ಅಂತರ್ಗೃಹದ ಪಶ್ಚಿಮದ ಬಾಗಿಲಿನಲ್ಲಿ ನೆಲಸಿರುವ ಗೋಕರ್ಣೇಶ್ವರ ಮಹಾಲಿಂಗವನ್ನು ಕಾಶಿಯಲ್ಲಿ ಪೂಜೆಮಾಡಿದವನು ಯಾವ ಕಾರ್ಯದಲ್ಲಿಯೂ ವಿಘ್ನಗಳಿಂದ ಪರಿಭವವನ್ನು ಹೊಂದುವುದಿಲ್ಲ.

ಗೋಕರ್ಣೇಶ್ವರಭಕ್ತಸ್ಯ ಪಂಚತ್ವಸಮಯೇ ಸತಿ ।
ಜ್ಞಾನಭ್ರಂಶೋ ನ ಜಾಯೇತ ಕ್ವಚಿದಪ್ಯಂತಮೃಚ್ಛತಃ ॥ ೮೨ ॥
ಸ್ಕಂದ ಉವಾಚ :–
ಚಿರಯತ್ಸು ಗಣೇಷ್ವೇಷು ಚತುರ್ಷ್ವಪಿ ಗಣೇಶ್ವರಃ ।
ಮಹಿಮಾನಂ ಮಹತ್ವಂ ತು ತತ್ಕಾಶ್ಯಾಃ ಪರ್ಯವರ್ಣಯತ್ ॥ ೮೩ ॥
ವೈಷ್ಣವ್ಯಾ ಮಾಯಯಾ ವಿಶ್ವಂ ಭ್ರಾಮ್ಯೇತಾತ್ರ ಯಮಾಖಿಲಂ ।
ಧ್ರುವಂ ಮೂರ್ತಿಮತೀ ಸೈಷಾ ಕಾಶೀ ವಿಶ್ವೈಕಮೋಹಿನೀ ॥ ೮೪ ॥
ಅಪಾಸ್ಯ ಸೋದರಾನ್ದಾರಾನ್ಸುತ್ರಂ ಕ್ಷೇತ್ರಂ ಗೃಹಂ ವಸು ।
ಅಪ್ಯಂಗೀಕೃತ್ಯ ನಿಧನಂ ಸರ್ವೇ ಕಾಶೀಮುಪಾಸತೇ ॥ ೮೫ ॥
ಮರಣಾದಪಿ ನೋ ಕಾಶ್ಯಾಂ ಭಯಂ ಯತ್ರ ಮನಾಗಪಿ ।
ಗಣಾಸ್ತತ್ರ ತು ತಿಷ್ಠಂತಃ ಕುತೋ ಮತ್ತೋಽಪಿ ಬಿಭ್ಯತಿ ॥ ೮೬ ॥
ಮರಣಂ ಮಂಗಲಂ ಯತ್ರ ವಿಭೂತಿರ್ಯತ್ರ ಭೂಷಣಂ ।
ಕೌಪೀನಂ ಯತ್ರ ಕೌಶೇಯಂ ಕಾಶೀ ಕುತ್ರೋಪಮೀಯತೇ ॥ ೮೭ ॥

---

೮೨. ಗೋಕರ್ಣೇಶ್ವರನ ಭಕ್ತನಾದವನು ದೇಹವನ್ನು ಬಿಡುವ ಕಾಲವೊದಗಿದರೂ ಮುಮೂರ್ಷುಗಳಿಗೆ ಸಹಜವಾದ ಬುದ್ಧಿಭ್ರಮಣೆಯು ಆತನಿಗೆಂದಿಗೂ ಉಂಟಾಗುವುದಿಲ್ಲ.

೮೩. ಸ್ಕಂದನು ಹೇಳುತ್ತಾನೆ:—ಈ ನಾಲ್ಕು ಗಣಾಧಿಪರೂ ಬಹುಕಾಲದವರೆಗೂ ಹಿಂದಿರುಗದಿರಲು ಮಹೇಶ್ವರನು ಕಾಶಿಯ ಮಹಿಮೆಯನ್ನೂ ಮಹತ್ತ್ವವನ್ನೂ ಬಹುವಿಧವಾಗಿ ವರ್ಣಿಸಿದನು.

೮೪. ಸಕಲರಿಗೂ ಮೋಹವನ್ನುಂಟುಮಾಡುವ ಈ ಕಾಶೀಕ್ಷೇತ್ರವು ನಿಜವಾಗಿಯೂ ಸಕಲ ಬ್ರಹ್ಮಾಂಡವನ್ನೂ ವ್ಯಾಪಿಸಿ ಭ್ರಮೆಗೊಳಿಸುತ್ತಿರುವ ವೈಷ್ಣವ ಮಾಯೆಯು ಮೂರ್ತಿಗೊಂಡ ಪ್ರದೇಶವಾಗಿರುವುದು.

೮೫. ಅಲ್ಲಿಗೆ ಒಮ್ಮೆ ಹೋದವರೆಲ್ಲರೂ ಸಹೋದರರನ್ನೂ, ಹೆಂಡತಿಯರನ್ನೂ, ಮಕ್ಕಳನ್ನೂ, ಭೂಮಿಯನ್ನೂ, ಮನೆಯನ್ನೂ, ಹಣವನ್ನೂ ತ್ಯಜಿಸಿ ಮರಣವನ್ನೇ ಅಪೇಕ್ಷಿಸುತ್ತ ಕಾಶಿಯನ್ನೇ ಸೇವಿಸುತ್ತಿರುವರು.

೮೬. ಯಾವ ಕಾಶೀಕ್ಷೇತ್ರದಲ್ಲಿ ಮರಣದಿಂದಲೂ, ಸ್ವಲ್ಪವಾದರೂ ಜನರಿಗೆ ಭಯವಿಲ್ಲವೊ, ಅಂತಹ ಪ್ರದೇಶದಲ್ಲಿ ಹೋಗಿರುವ ನನ್ನ ಗಣಗಳಿಗೆ ನನ್ನಿಂದಲೂ ಭಯಪಡಲು ಕಾರಣವೇ ಇರುವುದಿಲ್ಲ.

೮೭. ಎಲ್ಲಿ ಮರಣವೇ ಪರಮಮಂಗಳವೊ, ವಿಭೂತಿಧಾರಣವೇ ಸಕಲಾಭರಣವೊ, ಕೌಪೀನವೇ ಪೀತಾಂಬರ ಸಮಾನವೊ, ಅಂತಹ ಕಾಶಿಗೆ ಸಮಾನವಾದ ಪ್ರದೇಶವು ಮತ್ತೊಂದು ಎಲ್ಲಿರುವುದು ?

ನಿರ್ವಾಣರಮಣೀ ಯತ್ರ ರಂಕಂ ವಾಽರಂಕಮೇವ ವಾ ।
ಬ್ರಾಹ್ಮಣಂ ವಾ ಶ್ವಪಾಕಂ ವಾ ವೃಣೀತೇ ಪ್ರಾಂತ್ಯಭೂಷಣಂ ॥ ೮೮ ॥
ಮೃತಾನಾಂ ಯತ್ರ ಜಂತೂನಾಂ ನಿರ್ವಾಣಪದಮೃಚ್ಛತಾಂ ।
ಕೋಟ್ಯಂಶೇನಾಪಿ ನ ಸಮಾ ಅಪಿ ಶಕ್ರಾದಯಃ ಸುರಾಃ ॥ ೮೯ ॥
ಯತ್ರ ಕಾಶ್ಯಾಂ ಮೃತೋ ಜಂತುರ್ಬ್ರಹ್ಮನಾರಾಯಣಾದಿಭಿಃ ।
ಪ್ರಬದ್ಧಮೂರ್ಧಾಂಜಲಿಭಿರ್ನಮಸ್ಯೇತಾತಿಯತ್ನತಃ ॥ ೯೦ ॥
ಯತ್ರ ಕಾಶ್ಯಾಂ ಶವತ್ವೇಽಪಿ ಜಂತುರ್ನಾಶುಚಿತಾಂ ವ್ರಜೇತ್ ।
ಅತಸ್ತತ್ಕರ್ಣಸಂಸ್ಪರ್ಶಂ ಕರೋಮ್ಯಹಮುಪಿ ಸ್ವಯಂ ॥ ೯೧ ॥
ಯಸ್ತು ಕಾಶೀತಿ ಕಾಶೀತಿ ದ್ವಿಸ್ತ್ರಿರ್ಜಪತಿ ಪುಣ್ಯವಾನ್ ।
ಅಪಿ ಸರ್ವಪವಿತ್ರೇಭ್ಯಃ ಸ ಪವಿತ್ರತರೋ ಮಹಾನ್ ॥ ೯೨ ॥
ಯೇನ ಕಾಶೀ ಹೃದಿ ಧ್ಯಾತಾ ಯೇನ ಕಾಶೀಹ ಸೇವಿತಾ ।
ತೇನಾಹಂ ಹೃದಿ ಸಂಧ್ಯಾತಸ್ತೇನಾಹಂ ಸೇವಿತಃ ಸದಾ ॥ ೯೩ ॥

---

೮೮. ಈ ಕ್ಷೇತ್ರದಲ್ಲಿ ನೀಚನನ್ನೂ, ಉಚ್ಚನನ್ನೂ, ಬ್ರಾಹ್ಮಣನನ್ನೂ, ಚಂಡಾಲನನ್ನೂ, ಮೋಕ್ಷಲಕ್ಷ್ಮಿಯು ದೇಹಾವಸಾನದಲ್ಲಿ ತಾರಕಬ್ರಹ್ಮೋಪದೇಶದಿಂದ ಸ್ವೀಕರಿಸುತ್ತಿರುವಳು.

೮೯. ಈ ಕ್ಷೇತ್ರದಲ್ಲಿ ಮರಣವನ್ನು ಹೊಂದಿ ಮೋಕ್ಷವನ್ನು ಕುರಿತು ಪ್ರಯಾಣಮಾಡುತ್ತಿರುವ ನೀಚಜಂತುಗಳಿಗೂ ಕೋಟ್ಯಂಶದಿಂದಲೂ ಮಹೇಂದ್ರಾದಿ ದೇವತೆಗಳೂ ಕೂಡ ಎಂದಿಗೂ ಸಮಾನವಾಗಲಾರರು.

೯೦. ಈ ಕಾಶಿಯಲ್ಲಿ ದೇಹವನ್ನು ತ್ಯಜಿಸಿದ ಮಾನವನನ್ನು ಬ್ರಹ್ಮವಿಷ್ಣುಗಳೇ ಮುಂತಾದವರೆಲ್ಲರೂ ತಲೆಗಳಲ್ಲಿ ಅಂಜಲಿಬಂಧಗಳನ್ನು ಮಾಡಿಕೊಂಡು "ನಾನು ಮುಂದು, ತಾನು ಮುಂದು" ಎಂಬುದಾಗಿ ಬಹು ಪ್ರಯತ್ನದಿಂದ ನಮಸ್ಕರಿಸುವರು.

೯೧. ಕಾಶಿಯಲ್ಲಿ ಸತ್ತ ಯಾವ ಜಂತುವಿನ ಶವವೂ ಸಹ ಅಶುಚಿಭಾವವನ್ನು ಹೊಂದುವುದಿಲ್ಲ. ಆದುದರಿಂದಲೇ ನಾನು ಸ್ವತಃ ಅದರ ಬಲಗಡೆಯ ಕಿವಿಯಲ್ಲಿ ಬಾಯಿಂದ ಮುಟ್ಟಿ ತಾರಕಮಂತ್ರವನ್ನುಪದೇಶಿಸುವೆನು.

೯೨. ಯಾವ ಪುಣ್ಯವಂತನು ಕಾಶಿ, ಕಾಶಿ ಎಂಬುದಾಗಿ ಎರಡು ಮೂರು ಸಲ ಭಕ್ತಿಯಿಂದ ಜಪವನ್ನು ಮಾಡುವನೊ, ಆ ಮಹಾತ್ಮನು ಸಕಲ ಪವಿತ್ರ ವಸ್ತುಗಳಿಗಿಂತಲೂ ಪವಿತ್ರತಮನಾಗುವನು.

೯೩. ಯಾವನಿಂದ ಹೃದಯದಲ್ಲಿ ಕಾಶಿಯು ಧ್ಯಾನಿಸಲ್ಪಡುತ್ತಿರುವುದೊ, ಮತ್ತು ಸೇವಿತವಾಗಿರುವುದೊ, ಅವನು ನಿಜವಾಗಿಯೂ ನನ್ನನ್ನೇ ಹೃದಯದಲ್ಲಿ ಧ್ಯಾನಮಾಡುತ್ತಿರುವನು ಮತ್ತು ಯಾವಾಗಲೂ ನನ್ನನ್ನೇ ಸೇವಿಸುತ್ತಿರುವನು.

ಕಾಶೀಂ ಯಃ ಸೇವತೇ ಜಂತುರ್ನಿರ್ವಿಕಲ್ಪೇನ ಚೇತಸಾ ।
ತಮಹಂ ಹೃದಯೇ ನಿತ್ಯಂ ಧಾರಯಾಮಿ ಪ್ರಯತ್ನತಃ ॥ ೯೪ ॥
ಸ್ವಯಂ ವಸ್ತುಮಶಕ್ತೋಽಪಿ ವಾಸಯೇತ್ತೀರ್ಥವಾಸಿನಂ ।
ಅಪ್ಯೇಕಮಪಿ ಮೂಲ್ಯೇನ ಸ ವಸ್ತುಃ ಫಲಭಾಗ್ಧ್ರುವಂ ॥ ೯೫ ॥
ಕಾಶ್ಯಾಂ ವಸಂತಿ ಯೇ ಧೀರಾ ಆಪಂಚತ್ವವಿನಿಶ್ಚಯಾಃ ।
ಜೀವನ್ಮುಕ್ತಾಸ್ತು ತೇ ಜ್ಞೇಯಾ ವಂದ್ಯಾಃ ಪೂಜ್ಯಾಸ್ತ ಏವ ಹಿ ॥ ೯೬ ॥
ಇತ್ಥಂ ವಿಮೃಶ್ಯ ಬಹುಶಃ ಸ್ಥಾಣುರ್ವಾರಾಣಸೀಗುಣಾನ್ ।
ಗಣಾನನ್ಯಾನ್ಸಮಾಹೂಯ ಪ್ರಾಹಿಣೋತ್ಪ್ರೀತಿಪೂರ್ವಕಂ ॥ ೯೭ ॥
ತಾರಕ ತ್ವಂ ಸಮಾಗಚ್ಛ ಗಚ್ಛಾತಿಸ್ವಚ್ಛಮಾನಸ ।
ದಿವೋದಾಸೋ ವೃಷಾವಾಸೋ ಯಾಮಧೀಷ್ಟೇ ವರಾಂ ಪುರೀಂ ॥ ೯೮ ॥
ತಿಲಪರ್ಣ ಸ್ಥೂಲಕರ್ಣ ದ್ರುಮಿಚಂಡ ಪ್ರಭಾಮಯ ।
ಸುಕೇಶ ವಿಂದತೇ ಭಾಗ ಕಪರ್ದಿನ್ ಪಿಂಗಲಾಕ್ಷಕ ॥ ೯೯ ॥

---

೯೪. ಯಾವ ಮನುಷ್ಯನು ನಿಶ್ಚಂಚಲವಾದ ಮನಸ್ಸಿನಿಂದ ಕಾಶೀಕ್ಷೇತ್ರವನ್ನು ಸೇವಿಸುವನೋ, ಅವನನ್ನು ನಾನು ಪ್ರಯತ್ನಪೂರ್ವಕವಾಗಿ ನನ್ನ ಹೃದಯದಲ್ಲಿ ಧರಿಸಿರುವೆನು.

೯೫. ಮನುಷ್ಯನು ತಾನೇ ಕಾಶಿಯಲ್ಲಿ ವಾಸಮಾಡಲು ಅಶಕ್ತನಾದಲ್ಲಿ ತೀರ್ಥವಾಸಿಯಾದ ಮತ್ತೊಬ್ಬನಿಗೆ ಜೀವನವನ್ನು ಕಲ್ಪಿಸಿಕೊಡಬೇಕು. ಇಂತು ಒಬ್ಬನಿಗಾದರೂ ದ್ರವ್ಯಸಹಾಯವನ್ನು ಮಾಡಲು ತಾನೂ ಕಾಶಿಯಲ್ಲಿ ವಾಸ ಮಾಡಿದ ಫಲಕ್ಕೆ ಭಾಗಿಯಾಗುವನೆಂಬುದು ನಿಶ್ಚಯವು.

೯೬. ಯಾವ ಧೀರಮಾನವರು ಮರಣವಾಗುವವರೆಗೂ ಕಾಶಿಯಲ್ಲಿಯೇ ವಾಸಮಾಡಲು ನಿಶ್ಚಯಿಸಿರುವರೊ, ಅವರನ್ನು ಜೀವನ್ಮುಕ್ತರೆಂದು ತಿಳಿಯಬೇಕು. ಅವರೇ ಸಕಲ ಜನರಿಗೂ ಪೂಜ್ಯರಾದವರು.

೯೭. ಇಂತೆಂದು ವಾರಾಣಸೀಕ್ಷೇತ್ರದ ಗುಣಗಳನ್ನು ಬಹು ವಿಧವಾಗಿ ತನ್ನಲ್ಲಿಯೇ ವಿಮರ್ಶೆಮಾಡಿ ಪರಮೇಶ್ವರನು ಪುನಃ ತನ್ನ ಗಣಗಳನ್ನು ಕರೆದು ಪ್ರೇಮಪುರಸ್ಸರವಾಗಿ ಕಳುಹಿಸಿಕೊಟ್ಟನು.

೯೮. ತಾರಕನೆ! ನೀನಿಲ್ಲಿ ಬಾ. ನೀನು ಪರಿಶುದ್ಧಮನಸ್ಕನಾಗಿರುವೆ. ಸಕಲ ಧರ್ಮಗಳಿಗೂ ಆಶ್ರಯಭೂತನಾದ ದಿವೋದಾಸನು ಶಾಸನಮಾಡುತ್ತಿರುವ ಉತ್ತಮನಗರಿಯಾದ ಕಾಶಿಗೆ ಹೊರಡುವವನಾಗು.

೯೯–೧೦೩. ತಿಲಪರ್ಣ, ಸ್ಥೂಲಕರ್ಣ, ದ್ರುಮಿಚಂಡ, ಪ್ರಭಾಮಯ, ಸುಕೇಶ, ವಿಂದತಿ, ಭಾಗ, ಕಪರ್ದಿ, ಪಿಂಗಲಾಕ್ಷ, ವೀರಭದ್ರ, ಕಿರಾತ, ಚತುರ್ಮುಖ, ನಿಕುಂಭಕ, ಪಂಚಾಕ್ಷ, ಭಾರಭೂತ, ತ್ರ್ಯಕ್ಷ, ಕ್ಷೇಮಕ,

ವೀರಭದ್ರ ಕಿರಾತಾಖ್ಯ ಚತುರ್ಮುಖ ನಿಕುಂಭಕ ।
ಪಂಚಾಕ್ಷ ಭಾರಭೂತಾಖ್ಯ ತ್ರ್ಯಕ್ಷ ಕ್ಷೇಮಕ ಲಾಂಗಲಿನ್ ॥ ೧೦೦ ॥
ವಿರಾಧ ಸುಮುಖಾಷಾಢೇ ಯಾಂತು ಸರ್ವೇ ಪೃಥಕ್‌ಪೃಥಕ್ ।
ಏತೇ ಗಣಾ ಮಹಾಭಾಗಾಃ ಸ್ವಾಮಿಭಕ್ತಾ ಧೃಢವ್ರತಾಃ ॥ ೧೦೧ ॥
ಕೃತ್ವಾ ಮಾಯಾ ಬಹುವಿಧಾ ಬಹುರೂಪವಿಚಕ್ಷಣಾಃ ।
ಅನಿಮೇಷೇಕ್ಷಣಾಸ್ತಸ್ಥುಃ ಕ್ಷೋಣೀಶಚ್ಛಿದ್ರಕಾಂಕ್ಷಿಣಃ ॥ ೧೦೨ ॥
ಅಪರಿಜ್ಞಾತತಚ್ಛಿದ್ರಾ ವಿದ್ರಾವಿತಯಶೋಧನಾಃ ।
ಅಃ ಕಿಮೇತದಹೋ ಜಾತಂ ನಿನಿಂದುಃ ಸ್ವಾಮಿತೀಹ ತೇ ॥ ೧೦೩ ॥

ಗಣಾವೂಚತುಃ:—

ಧಿಗಸ್ಮಾನ್ಸ್ವಾಮಿನಾ ನಿತ್ಯಂ ಕೃತಸಂಭಾವನಸಾನ್ಮಹುಃ ।
ಮನುಷ್ಯಮಾತ್ರಮಪ್ಯತ್ರ ಯೈರೇಕಂ ನ ವಶೀಕೃತಂ ॥ ೧೦೪ ॥
ಬಹುಮಾನೇನ ದಾನೇನ ಸೌಹಾರ್ದೇನ ಮಹೀಯಸಾ ।
ಕೃತಪ್ರಸಾದಾಂಸ್ತ್ರ್ಯಕ್ಷೇಣ ಧಿಙ್ ನಸ್ತತ್ಕಾರ್ಯವಂಚಕಾನ್ ॥ ೧೦೫ ॥

---

ಲಾಂಗಲಿ, ವಿರಾಧ, ಸುಮುಖ, ಆಷಾಢಿಗಳಿರಾ! ನೀವೆಲ್ಲರೂ ಬೇರೆ ಬೇರೆಯಾಗಿ ಹೊರಟು ಕಾಶೀನಗರಿಯನ್ನು ಸೇರುವವರಾಗಿರಿ.'' ಇಂತೆಂದ ಮಹೇಶ್ವರನ ಅಜ್ಞೆಯನ್ನನುಸರಿಸಿ ಮಹಾತ್ಮರೂ, ಸ್ವಾಮಿಭಕ್ತರೂ, ದೃಢಪ್ರತಿಜ್ಞರೂ ಆದ ಈ ಗಣಗಳೆಲ್ಲರೂ ಕಾರ್ಯದಕ್ಷರಾದುದರಿಂದ ಬಹುವಿಧವಾಗಿ ಮಾಯೆಯನ್ನುಂಟುಮಾಡಿಕೊಂಡು ಅನೇಕ ರೂಪಗಳನ್ನು ತಾಳಿ ದಿವೋದಾಸ ಮಹಾರಾಜನ ದಿನಚರ್ಯೆಗಳಲ್ಲಿ ಛಿದ್ರಗಳನ್ನೇ ಹುಡುಕುತ್ತ, ರೆಪ್ಪೆಯಾಡದ ಕಣ್ಣುಗಳಿಂದ ನಿರೀಕ್ಷಿಸುತ್ತ ನೆಲಸಿದ್ದರು.

೧೦೩. ಬಹುದಿನಗಳಾದರೂ ಆತನಲ್ಲಿ ಯಾವ ಛಿದ್ರವೂ ಕಾಣದಿರಲು ಅವರೆಲ್ಲರೂ ತಮ್ಮ ಯಶಸ್ಸೆಂಬ ಧನವನ್ನು ಕಳೆದುಕೊಳ್ಳುವ ಪ್ರಸಂಗವೊದಗಿತು. ಅವರೆಲ್ಲರೂ ಕೋಪದಿಂದಲೂ, ದುಃಖದಿಂದಲೂ ಕೂಡಿದವರಾಗಿ ಎಂತಹ ಪ್ರಸಂಗವು ಪ್ರಾಪ್ತವಾಯಿತೆಂದು ತಮ್ಮನ್ನೇ ನಿಂದಿಸಿಕೊಂಡರು.

೧೦೪. ಗಣಗಳು ಹೇಳುತ್ತಾರೆ:—''ಯಜಮಾನನಿಂದ ನಿತ್ಯದಲ್ಲಿಯೂ ಪದೇ ಪದೇ ಮರ್ಯಾದೆಗಳನ್ನು ಹೊಂದುತ್ತಿರುವ ನಮ್ಮ ಜನ್ಮಗಳಿಗೆ ಧಿಕ್ಕಾರವಿರಲಿ. ನಾವು ಇಷ್ಟುಜನರಿದ್ದರೂ ಮನುಷ್ಯಮಾತ್ರನಾದ ಇವನೊಬ್ಬನನ್ನು ಕೂಡ ವಶಪಡಿಸಿಕೊಳ್ಳಲು ಸಮರ್ಥರಾಗಲಿಲ್ಲ.

೧೦೫. ಬಹುಮಾನಗಳಿಂದಲೂ, ದಾನದಿಂದಲೂ, ಸೌಹಾರ್ದದಿಂದಲೂ, ಉನ್ನತಾಧಿಕಾರದಿಂದಲೂ ನಮ್ಮಲ್ಲಿ ಪ್ರಸನ್ನನಾಗಿರುವ ಮಹೇಶ್ವರನ ಕಾರ್ಯದಲ್ಲಿಯೂ ವಂಚಕರಾಗಿರುವ ನಮ್ಮ ಬಾಳಿಗೆ ಧಿಕ್ಕಾರವಿರಲಿ.

ಕಾ ಗತಿರ್ನೋ ಭವಿತ್ರೀಹ ಸ್ವಾಮಿಕೃತ್ಯಪ್ರಮಾದಿನಾಂ ।
ಅಂಧಂತಮೋಮಯೇ ಲೋಕೇ ಧ್ರುವಂ ವಾಸೋ ಭವಿಷ್ಯತಿ ॥ ೧೦೬ ॥
ಅಕೃತಸ್ವಾಮಿಕಾರ್ಯಾಣಾಮಹೋ ಜೀವಿತಧಾರಿಣಾಂ ।
ಅಕ್ಷತೇಂದ್ರಿಯವೃತ್ತೀನಾಂ ದುರ್ಗತಿಶ್ಚ ಪದೇ ಪದೇ ॥ ೧೦೭ ॥
ಲಬ್ಧಸಂಭಾವನಾನಾಂ ಚ ನ್ಯಕ್ಕೃತಸ್ವಾಮಿಕರ್ಮಣಾಂ ।
ಭೃತ್ಯಾನಾಂ ಭೂರಿಭಾಜಾಂ ಚ ಭಂಗುರಾಃ ಸ್ಯುರ್ಮನೋರಥಾಃ॥ ೧೦೮ ॥
ಅನಿಷ್ಪಾದಿತಕಾರ್ಯಾರ್ಥಾ ಯೇ ಮುಖಂ ಪ್ರೇಕ್ಷಯಂತ್ಯಹೋ ।
ಅಪತ್ರಪಾಃ ಪುರೋ ಭರ್ತುಸ್ತೈರ್ಭೂರ್ಭಾರವತೀ ತ್ವಿಯಂ ॥ ೧೦೯ ॥
ನಾದ್ರೀಣಾಂ ನ ಸಮುದ್ರಾಣಾಂ ನ ದ್ರುಮಾಣಾಂ ಮಹೀಯಸಾಂ ।
ಭೂತಧಾತ್ರ್ಯಾಸ್ತಥಾ ಭಾರೋ ಯಥಾ ಸ್ವಾಮಿದ್ರುಹಾಂ ಮಹಾನ್ ॥
ಅಹೋ ಪೌರಾಣಿಕೀ ಗಾಥಾ ಸ್ಮೃತಾಸ್ಮಾಭಿರನಿಂದಿತಾ ।
ತದರ್ಥಮವಲಂಬ್ಯೇಹ ಸ್ಥಾಸ್ಯಾಮಃ ಕೃತನಿಶ್ಚಯಾಃ ॥ ೧೧೧ ॥

---

೧೦೬. ಸ್ವಾಮಿಯ ಕಾರ್ಯಭಾರದಲ್ಲಿ ಪ್ರಮಾದದಿಂದ ವರ್ತಿಸಿರುವ ನಮಗೆ ಇಲ್ಲಿ ಯಾವ ದುರ್ಗತಿಯು ಲಭಿಸಬೇಕಾಗಿರುವುದೊ? ದೇಹಾವಸಾನವಾದ ಮೇಲೆ ನಿಜವಾಗಿಯೂ ನಮಗೆ ಅಂಧಂತಮಸ್ಸೆಂಬ ನರಕವೇ ಲಭಿಸುವುದು.

೧೦೭. ಅಕ್ಷತಗಳಾದ ಇಂದ್ರಿಯಗಳ ಪಾಟವವಿದ್ದರೂ ಸ್ವಾಮಿಕಾರ್ಯಗಳನ್ನು ನೆರವೇರಿಸದೆ ವ್ಯರ್ಥವಾಗಿ ಜೀವನವನ್ನು ನಡೆಸುತ್ತಿರುವ ಸೇವಕರಿಗೆ ಅಡಿಗಡಿಗೂ ದುರ್ಗತಿಯೇ ಲಭಿಸುತ್ತಿರುವುದು.

೧೦೮. ಸ್ವಾಮಿಯಿಂದ ಬಹುವಿಧಗಳಾದ ಬಹುಮಾನಗಳನ್ನು ಹೊಂದಿ ಆತನ ಐಶ್ವರ್ಯದಲ್ಲಿ ಭಾಗಿಗಳಾಗಿದ್ದರೂ ಆತನ ಕಾರ್ಯಗಳನ್ನು ನೆರವೇರಿಸದಿರುವ ಭೃತ್ಯರ ಮನೋರಥಗಳೆಲ್ಲವೂ ಕ್ಷಣಭಂಗುರಗಳೇ ಆಗಿರುವುವು.

೧೦೯. ಸ್ವಾಮಿಯ ಕಾರ್ಯಗಳನ್ನು ಸಂಪೂರ್ಣವಾಗಿ ಕೈಗೂಡಿಸದೆ ಲಜ್ಜಾಹೀನರಾಗಿ ಯಜಮಾನನ ಮುಂದೆ ನಿಂತು ಆತನ ಮುಖವನ್ನು ನೋಡುವ ಭೃತ್ಯಾಧಮರ ಭಾರದಿಂದಲೇ ಈ ಭೂಮಿಯು ಕ್ಲೇಶಗೊಳ್ಳುತ್ತಿರುವುದು.

೧೧೦. ಭೂದೇವಿಗೆ ಸ್ವಾಮಿದ್ರೋಹಿಗಳಿಂದ ಎಷ್ಟು ಮಹತ್ತಾದ ಭಾರವುಂಟಾಗುತ್ತಿರುವುದೊ, ಅಷ್ಟು ಪರ್ವತಗಳಿಂದಲೂ, ಸಮುದ್ರಗಳಿಂದಲೂ, ಮಹೋನ್ನತಗಳಾದ ವೃಕ್ಷಗಳಿಂದಲೂ ಉಂಟಾಗಲಾರದು.

೧೧೧. ಈಗ ಪುರಾಣಗಳಲ್ಲಿ ಹೇಳಲ್ಪಟ್ಟಿರುವ ನಿಷ್ಕಲ್ಮಷವಾದ ಗಾದೆಯು ನಮಗೆ ಜ್ಞಾಪಕಕ್ಕೆ ಬರುತ್ತಿರುವುದು. ಅದರ ಅರ್ಥವನ್ನನುಸರಿಸಿಯೇ ನಾವು

ಅನಾಕಲಿತಪುಣ್ಯಾನಾಂ ಪರಿಕ್ಷೀಣಧನಾಯುಷಾಂ ।
ಸರ್ವೋಪಾಯವಿಹೀನಾನಾಂ ಗತಿರ್ವಾರಾಣಸೀ ಪುರೀ ॥ ೧೧೨ ॥
ಅಪುಣ್ಯಭಾರಖಿನ್ನಾನಾಂ ಪಶ್ಚಾತ್ತಾಪಮುಪೇಯುಷಾಂ ।
ವಿಷ್ವಗೂರ್ಧ್ವಗತೀನಾಂ ಚ ಗತಿರ್ವಾರಾಣಸೀ ಪುರೀ ॥ ೧೧೩ ॥
ಸ್ವಾಮಿದ್ರುಹಃ ಕೃತಘ್ನಾಶ್ಚ ಯೇ ಚ ವಿಶ್ರಂಭಘಾತಕಾಃ ।
ತೇಷಾಂ ಕ್ವಾಪಿ ಗತಿರ್ನಾಸ್ತಿ ಮುಕ್ತ್ವಾ ವಾರಾಣಸೀಂ ಪುರೀಂ ॥ ೧೧೪ ॥
ಇತ್ಥಂ ನಿಶ್ಚಿತ್ಯ ಗಾಥಾರ್ಥಂ ಪ್ರಮಥಾ ಅವತಸ್ಥಿರೇ ।
ಅವಿಜ್ಞಾತಸ್ವರೂಪಾಶ್ಚ ದಿವೋದಾಸೇನ ಭೂಭುಜಾ ॥ ೧೧೫ ॥
ನ ಬುಬೋಧ ಸ ಭೂಪಾಲೋ ನಿತರಾಂ ಬುದ್ಧಿಮಾನಪಿ ।
ವಿಬುದ್ಧಾನ್ವಿವಿಧಾಕಾರೈಃ ಸ್ಥಿತಾನೀಶಪ್ರಭಾವತಃ ॥ ೧೧೬ ॥
ಚಿತ್ರಂ ನ ಚಿತ್ರಗುಪ್ತೋಽಪಿ ವೇತ್ತಿ ವಾರಾಣಸೀಸ್ಥಿತಾನ್ ।
ಜಂತೂನ್ಕಾ ಗಣನಾನ್ಯೇಷಾಂ ಮರ್ತ್ಯಲೋಕನಿವಾಸಿನಾಂ ॥ ೧೧೭ ॥

---

ದೃಢವಾದ ನಿಶ್ಚಯವನ್ನು ಮಾಡಿಕೊಂಡು ಈ ವಾರಾಣಸಿಯಲ್ಲಿಯೇ ವಾಸ ಮಾಡೋಣ.

೧೧೨–೧೧೩. ಹಿಂದಿನ ಜನ್ಮಗಳಲ್ಲಿ ಯಾವ ಪುಣ್ಯವನ್ನೂ ಸಂಪಾದಿಸದವರಿಗೂ, ಧನವೂ ಆಯುಷ್ಯವೂ ಕೊನೆಗಂಡಿರುವವರಿಗೂ, ಸರ್ವವಿಧದಿಂದಲೂ ಜೀವನೋಪಾಯವಿಲ್ಲದವರಿಗೂ ಈ ವಾರಾಣಸೀನಗರಿಯೇ ಗತಿದಾಯಕವಾಗಿರುವುದು. ಪಾಪಗಳ ಭಾರದಿಂದ ಖಿನ್ನರಾಗಿರುವವರಿಗೂ, ಹಿಂದಿನ ದುಷ್ಕರ್ಮಗಳಿಗೆ ಪಶ್ಚಾತ್ತಾಪಪಡುವವರಿಗೂ, ಸರ್ವಪ್ರಕಾರದಿಂದಲೂ ಉತ್ತಮ ಗತಿಯನ್ನಪೇಕ್ಷಿಸುತ್ತಿರುವವರಿಗೂ ಈ ವಾರಾಣಸಿಯೇ ಗತಿಯು.

೧೧೪. ಸ್ವಾಮಿದ್ರೋಹಿಗಳೂ, ಕೃತಘ್ನರೂ, ನಂಬಿಕೆಯನ್ನು ಹುಟ್ಟಿಸಿ ಮೋಸಮಾಡುವವರೂ ಆದ ಮಾನವರಿಗೆ ಈ ವಾರಾಣಸೀನಗರವನ್ನು ಬಿಟ್ಟರೆ ಮತ್ತೆಲ್ಲಿಯೂ ಸದ್ಗತಿಯು ದೊರೆಯುಲಾರದು."

೧೧೫. ಇಂತೆಂಬ ಪೌರಾಣಿಕ ಗಾದೆಯ ಮಾತನ್ನು ಮನಸ್ಸಿಗೆ ತಂದುಕೊಂಡು ಅವರೆಲ್ಲರೂ ಮಹಾರಾಜನಾದ ದಿವೋದಾಸನಿಂದ ತಮ್ಮ ನಿಜರೂಪಗಳು ತಿಳಿಯಲ್ಪಡದಂತೆ ಅಲ್ಲಿಯೇ ವಾಸಿಸುತ್ತಿದ್ದರು.

೧೧೬. ಮಹೇಶ್ವರನ ಪ್ರಭಾವದಿಂದ ಬ್ರಾಹ್ಮಣರ ರೂಪಗಳನ್ನು ಧರಿಸಿದ್ದ ಈ ಪ್ರಮಥಗಣಗಳನ್ನು ಅತ್ಯಂತ ಬುದ್ಧಿಶಾಲಿಯಾದರೂ ಆ ಮಹಾರಾಜನು ತಿಳಿಯುಲವಕಾಶವಾಗಲಿಲ್ಲ.

೧೧೭. ಆಶ್ಚರ್ಯಕರವಾದ ವಿಷಯವೆಂದರೆ ಚಿತ್ರಗುಪ್ತನೂ ಸಹ ಕಾಶೀಕ್ಷೇತ್ರದಲ್ಲಿರುವ ಅವರನ್ನು ಕಂಡುಹಿಡಿಯಲಾರನು. ಎಂದಮೇಲೆ ಮನುಷ್ಯಲೋಕದಲ್ಲಿ ವಾಸಮಾಡುವ ಇತರ ಮಾನವರ ವಿಷಯವನ್ನು ಹೇಳಲೇಕೆ?

ಅನಿಚ್ಛಿನ್ನಪ್ರಭಾವಾಣಾಮುಪರಿಚ್ಛಿನ್ನತೇಜಸಾಂ ।
ಕೃತಲಿಂಗಪ್ರತಿಷ್ಠಾನಾಂ ನಾಂತಂ ಪ್ರಾಪ್ನೋತಿ ಧರ್ಮರಾಟ್ ॥ ೧೧೮ ॥
ಇತಿ ತೇ ಪ್ರಮಥಾಃ ಸರ್ವೇ ಘಟೋದ್ಭವ ಮಹಾಮುನೇ ।
ಕೃತಲಿಂಗಾರ್ಚನಾಃ ಕಾಶೀಂ ನಾದ್ಯಾಪ್ಯುಜ್ಝಂತಿ ಶರ್ಮದಾಂ ॥ ೧೧೯ ॥
ತಾರಕೇಶಂ ಮಹಾಲಿಂಗಂ ತಾರಕಾಖ್ಯೋ ಗಣೋತ್ತಮಃ ।
ತಾರಕಜ್ಞಾನದಂ ಪುಂಸಾಂ ಮುನೇऽದ್ಯಾಪಿ ಸಮರ್ಚಯೇತ್ ॥ ೧೨೦ ॥
ತಾರಕೇಶ್ವರಲಿಂಗಸ್ಯ ಕೃತ್ವಾ ಭಕ್ತಿಂ ಸುನಿಶ್ಚಲಾಂ ।
ಸುಖೇನ ತಾರಕಜ್ಞಾನಂ ಲಭ್ಯತೇ ತೈರ್ನರೋತ್ತಮೈಃ ॥ ೧೨೧ ॥
ತಿಲಪರ್ಣೇಶ್ವರಂ ಲಿಂಗಂ ತಿಲಪರ್ಣಪ್ರತಿಷ್ಠಿತಂ ।
ತಿಲಪ್ರಮಾಣಮಪ್ಯತ್ರ ದೃಷ್ಟ್ವಾ ಪಾಪಂ ನ ಸಂಭವೇತ್ ॥ ೧೨೨ ॥
ಸ್ಥೂಲಕರ್ಣೇಶ್ವರಂ ಲಿಂಗಂ ಪರಿಪೂಜ್ಯ ನರೋತ್ತಮಃ ।
ನ ದುರ್ಗತಿಮವಾಪ್ನೋತಿ ಪುಣ್ಯಮಾಪ್ನೋತಿ ಚೋತ್ತಮಂ ॥ ೧೨೩ ॥

---

೧೧೮. ನಿರಾತಂಕವಾದ ಪ್ರಭಾವವುಳ್ಳವರೂ, ಸರ್ವತೋಮುಖವಾದ ತೇಜಸ್ಸನ್ನು ಬೆಳಗುವವರೂ, ಕಾಶಿಯಲ್ಲಿ ಶಿವಲಿಂಗಗಳನ್ನು ಪ್ರತಿಷ್ಠೆಗೊಳಿಸಿದವರೂ ಆದ ಮಾನವರ ಗತಿನಿರ್ಣಯವನ್ನು ಯಮಧರ್ಮರಾಯನೂ ಮಾಡಲಾರನು.

೧೧೯. ಮಹಾಮುನಿಯಾದ ಅಗಸ್ತ್ಯನೆ! ಇಂತೆಂದು ತಿಳಿದು ಆ ಪ್ರಮಥ ಗಣಗಳೆಲ್ಲರೂ ಲಿಂಗಪೂಜೆಯಲ್ಲಿ ನಿರತರಾಗಿ ಇಂದಿನವರೆಗೂ ಸರ್ವಸೌಖ್ಯ ಪ್ರದೆಯಾದ ಕಾಶಿಯನ್ನು ಬಿಟ್ಟು ಬರಲಿಲ್ಲವು.

೧೨೦. ಮುನಿವರ್ಯನೆ! ತಾರಕನಾಮಕನಾದ ಗಣನಾಯಕನು ಮಾನವ ರೆಲ್ಲರಿಗೂ ತಾರಕಜ್ಞಾನವನ್ನುಂಟುಮಾಡಿಸುವ ತಾರಕೇಶ್ವರವೆಂಬ ಮಹಾ ಲಿಂಗವನ್ನು ಪ್ರತಿಷ್ಠಿಸಿ ಅದನ್ನು ಇಂದಿಗೂ ಪೂಜಿಸುತ್ತಿರುವನು.

೧೨೧. ಯಾರು ಈ ತಾರಕೇಶ್ವರ ಲಿಂಗದಲ್ಲಿ ನಿಶ್ಚಲವಾದ ಭಕ್ತಿಯನ್ನು ಮಾಡುವರೊ, ಆ ಮನುಷ್ಯೋತ್ತಮರಿಗೆ ಅನಾಯಾಸವಾಗಿಯೇ ತಾರಕ ಜ್ಞಾನವು ಲಭಿಸುವುದು.

೧೨೨. ತಿಲಪರ್ಣನಿಂದ ಪ್ರತಿಷ್ಠಿತವಾದ ತಿಲಪರ್ಣೇಶ್ವರಲಿಂಗವನ್ನು ಸ್ವಲ್ಪಕಾಲವಾದರೂ ಯಾವನು ದರ್ಶನಮಾಡುವನೊ, ಅವನಿಗೆ ಮತ್ತೆ ಪಾಪಗಳ ಸಂಪರ್ಕವುಂಟಾಗುವುದಿಲ್ಲ.

೧೨೩. ಸ್ಥೂಲಕರ್ಣೇಶ್ವರನೆಂಬ ಲಿಂಗವನ್ನು ಪೂಜಿಸಲು ಮನುಷ್ಯೋ ತ್ತಮನು ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ಉತ್ತಮರೀತಿಯ ಪುಣ್ಯವನ್ನೇ ಸಂಪಾದಿಸುವನು.

ದೃಮಿಚಂಡೇಶ್ವರಂ ಲಿಂಗಂ ತಥಾ ಲಿಂಗಂ ಪ್ರಭಾಮಯಂ ।
ಆರಾಧ್ಯ ತತ್ರಪ್ರತೀಚ್ಯಾಂ ಚ ನ ಪಾಪೈರಭಿಭೂಯತೇ ॥ ೧೨೪ ॥
ಪ್ರಭಾಮಯೇಶ್ವರಂ ಲಿಂಗಂ ದೃಷ್ಟ್ವಾನ್ಯತ್ರಾಪಿ ಸಂಸ್ಥಿತಃ ।
ಪ್ರಭಾಮಯೇನ ಯಾನೇನ ಶಿವಲೋಕೇ ವ್ರಜೇತ್ಸುಧೀಃ ॥ ೧೨೫ ॥
ಸುಖೇಶೇಶ್ವರಮಭ್ಯರ್ಚ್ಯ ಹರಿಕೇಶ ವನೇ ಸರಃ ।
ಷಟ್ಕೌಶಿಕಮಯಂ ದೇಹಂ ಧಾರಯೇನ್ನ ಪುನಃ ಪುನಃ ॥ ೧೨೬ ॥
ವಿಂದತೀಶಂ ನರೋಽಭ್ಯರ್ಚ್ಯ ಭೀಮಚಂಡೀಸಮೀಪಿತಃ ।
ತ್ಯಕ್ತ್ವಾ ಪ್ರಚಂಡಮಪ್ಯೇನೋ ಮೋಕ್ಷಂ ವಿಂದತಿ ಶಾಶ್ವತಂ ॥ ೧೨೭ ॥
ಭಾಗಲೇಶಂ ಮಹಾಲಿಂಗಂ ಪಿತ್ರೀಶ್ವರಸಮೀಪಗಂ ।
ವಿಲೋಕ್ಯ ಪಶುವತ್ಕೋಽಪಿ ನ ಪಾಪಂ ಪ್ರಾಕೃತಂ ಸ್ಪೃಜೇತ್ ॥ ೧೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವಾರಾಣಸೀವರ್ಣನ–ಗಣಪ್ರೇಷಣ ವರ್ಣನಂ"ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

೧೨೪. ಆ ಸ್ಥೂಲಕರ್ಣೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿರುವ ದೃಮಿಚಂಡೇಶ್ವರ ಲಿಂಗವನ್ನೂ ಪ್ರಭಾಮಯ ಲಿಂಗವನ್ನೂ ಪೂಜಿಸಿದ ಮನುಷ್ಯನು ಪಾಪಗಳಿಂದ ಎಂದಿಗೂ ಪರಿಭವವನ್ನು ಹೊಂದುವುದಿಲ್ಲ.

೧೨೫. ಬೇರೊಂದೆಡೆಯಲ್ಲಿ ನಿಂತು ಪ್ರಭಾಮಯೇಶ್ವರ ,ಲಿಂಗವನ್ನು ನೋಡಿದರೂ ಸಹ ತೇಜೋಮಯವಾದ ವಿಮಾನದಲ್ಲಿ ಕುಳಿತು ಪ್ರಾಜ್ಞನಾದವನು ಶಿವಲೋಕವನ್ನು ಕುರಿತು ಪ್ರಯಾಣಮಾಡುವನು.

೧೨೬. ಹರಿಕೇಶ ವನದಲ್ಲಿ ಸ್ಥಾಪಿತವಾಗಿರುವ ಸುಖೇಶ್ವರನನ್ನು ಪೂಜಿಸಿದ ಮಾನವನು ಮತ್ತೆ ಮತ್ತೆ ಚರ್ಮ, ಮಾಂಸ, ರಕ್ತ, ಸ್ನಾಯು, ಅಸ್ಥಿ, ಮಜ್ಜೆಗಳಿಂದ ಕೂಡಿದ ಈ ಪಾಂಚಭೌತಿಕ ದೇಹವನ್ನು ಪಡೆಯುವುದಿಲ್ಲ.

೧೨೭. ಭೀಮಚಂಡೀದೇವಿಯ ಸಮೀಪದಲ್ಲಿರುವ ವಿಂದತೀಶ್ವರಲಿಂಗವನ್ನು ಪೂಜೆಮಾಡಲು ಪ್ರಚಂಡಗಳೆನಿಸಿದ ಪಾತಕಗಳೂ ಕಳೆದುಹೋಗಿ ಶಾಶ್ವತವಾದ ಮೋಕ್ಷಪದವಿಯು ಲಭಿಸುವುದು.

೧೨೮. ಪಿತ್ರೀಶ್ವರನ ಸಮೀಪದಲ್ಲಿರುವ ಭಾಗಲೇಶ್ವರನನ್ನು ದರ್ಶನ ಮಾಡಲು ಪಶುಸಮಾನವಾದ ಮನುಷ್ಯನನ್ನೂ ಸಹ ಸಾಧಾರಣಪಾತಕಗಳು ಬಾಧಿಸಲಾರವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವಾರಾಣಸೀವರ್ಣನ–ಗಣಪ್ರೇಷಣವರ್ಣನ"ವೆಂಬ ಐವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಷ್ಪಂಚಾಶತ್ತಮೋಽಧ್ಯಾಯಃ

### ಪಿಶಾಚಮೋಚನಮಹಿಮಾಕಥನಂ

ಸ್ಕಂದ ಉವಾಚ :—

ಕುಂಭಸಂಭವ ವಕ್ಷ್ಯಾಮಿ ಶೃಣೋತ್ಸವಹಿತೋ ಭವಾನ್ ।
ಕಪರ್ದೀಶಸ್ಯ ಲಿಂಗಸ್ಯ ಮಹಾಮಾಹಾತ್ಮ್ಯಮುತ್ತಮಂ ॥ ೧ ॥
ಕಪರ್ದೀನಾಮ ಗಣಪಃ ಶಂಭೋರತ್ಯಂತವಲ್ಲಭಃ ।
ಪಿತ್ರೀಶಾದುತ್ತರೇ ಭಾಗೇ ಲಿಂಗಂ ಸಂಸ್ಥಾಪ್ಯ ಶಾಂಭವಂ ॥ ೨ ॥
ಕುಂಡಂ ಚಖಾನ ತಸ್ಯಾಗ್ರೇ ವಿಮಲೋದಕಸಂಜ್ಞಕಂ ।
ಯಸ್ಯ ತೋಯಸ್ಯ ಸಂಸ್ಪರ್ಶಾದ್ವಿಮಲೋ ಜಾಯತೇ ನರಃ ॥ ೩ ॥
ಇತಿಹಾಸಂ ಪ್ರವಕ್ಷ್ಯಾಮಿ ತತ್ರ ತ್ರೇತಾಯುಗೇ ಪುರಾ ।
ಯಥಾವೃತ್ತಂ ಕುಂಭಯೋನೇ ಶ್ರವಣಾತ್ಪಾತಕಾಪಹಂ ॥ ೪ ॥
ಏಕಃ ಪಾಶುಪತಶ್ರೇಷ್ಠೋ ವಾಲ್ಮೀಕಿರಿತಿ ಸಂಜ್ಞಿತಃ ।
ತಪಶ್ಚಚಾರ ಸ ಮುನಿಃ ಕಪರ್ದೀಶಂ ಸಮರ್ಚಯತ್ ॥ ೫ ॥

---

## ಕನ್ನಡದ ಅನುವಾದ

### ಪಿಶಾಚಮೋಚನಮಹಿಮಾವರ್ಣನ

೧. ಸ್ಕಂದನು ಹೇಳುತ್ತಾನೆ:—ಕುಂಭೋದ್ಭವನೆ! ಇನ್ನು ಕಪರ್ದೀಶ್ವರ ಲಿಂಗದ ಮಹೋತ್ತಮವಾದ ಮಾಹಾತ್ಮ್ಯವನ್ನು ವಿವರಿಸುವೆನು. ಸಾವಧಾನ ಮನಸ್ಸುಳ್ಳವನಾಗಿ ಕೇಳು.

೨–೩. ಮಹೇಶ್ವರನಿಗೆ ಅತ್ಯಂತ ಪ್ರೀತಿಪಾತ್ರನಾಗಿದ್ದ ಕಪರ್ದಿಯೆಂಬ ಗಣನಾಯಕನು ಪಿತ್ರೀಶ್ವರನ ಉತ್ತರದಿಕ್ಕಿನಲ್ಲಿ ಉತ್ತಮವಾದ ಶಿವಲಿಂಗ ವೊಂದನ್ನು ಸ್ಥಾಪಿಸಿ ಅದಕ್ಕೆ ಇದಿರಾಗಿಯೇ ವಿಮಲೋದಕವೆಂಬ ಹೆಸರುಳ್ಳ ಕುಂಡವನ್ನು ನಿರ್ಮಾಣಮಾಡಿದನು. ಆ ಕುಂಡದ ನೀರನ್ನು ಸ್ಪರ್ಶಮಾಡುವ ಮಾತ್ರದಿಂದಲೇ ಯಾವ ಮನುಷ್ಯನಾದರೂ ಪರಿಶುದ್ಧನಾಗುವನು.

೪. ಕುಂಭಸಂಭವನೆ! ಈ ವಿಷಯವಾಗಿ ಹಿಂದೆ ತ್ರೇತಾಯುಗದಲ್ಲಿ ನಡೆದ ಚರಿತ್ರೆಯೊಂದನ್ನು ನಡೆದಂತೆಯೇ ನಿರೂಪಿಸುವೆನು. ಅದನ್ನು ಕೇಳು ವುದರಿಂದಲೇ ಸಕಲ ಪಾತಕಗಳೂ ಕಳೆದುಹೋಗುವುವು.

೫. ಮುನ್ನ ವಾಲ್ಮೀಕಿಯೆಂಬ ಹೆಸರಿನ ಶಿವಭಕ್ತರಲ್ಲಿ ಅಗ್ರಗಣ್ಯನಾಗಿದ್ದ ಮಹಾತ್ಮನೊಬ್ಬನಿದ್ದನು. ಆ ಮುನಿಯು ಕಪರ್ದೀಶ್ವರನ ಪೂಜೆಯನ್ನು ನಿತ್ಯವೂ ವಿಧ್ಯುಕ್ತರೀತಿಯಿಂದ ನೆರವೇರಿಸುತ್ತ ದುಸ್ತರವಾದ ತಪಸ್ಸನ್ನು ಮಾಡು ತ್ತಿದ್ದನು.

ಏಕದಾ ಸ ಹಿ ಹೇಮಂತೇ ಮಾರ್ಗೇ ಮಾಸಿ ತಪೋಧನಃ ।
ಸ್ನಾತ್ವಾ ತತ್ರ ಮಹಾತೀರ್ಥೇ ಮಧ್ಯಾಹ್ನೇ ವಿಮಲೋದಕೇ ॥ ೬ ॥
ಚಕಾರ ಭಸ್ಮನಾ ಸ್ನಾನಮಾಪಾದತಲಮಸ್ತಕಂ ।
ಲಿಂಗಸ್ಯ ದಕ್ಷಿಣೇ ಭಾಗೇ ಕೃತಮಾಧ್ಯಾಹ್ನಿಕಕ್ರಿಯಃ ॥ ೭ ॥
ನ್ಯಸ್ತಮಸ್ತಕಪಾಂಸುಶ್ಚ ಸಂಧ್ಯಾಮಾಧ್ಯಾತ್ಮಿಕೀಂ ಸ್ಮರನ್ ।
ಜಪನ್ಪಂಚಾಕ್ಷರೀಂ ವಿದ್ಯಾಂ ಧ್ಯಾಯನ್ದೇವಂ ಕಪರ್ದಿನಂ ॥ ೮ ॥
ಕೃತ್ವಾ ಸಂಹಾರಮಾರ್ಗೇಣ ಸಪ್ರಮಾಣಂ ಪ್ರದಕ್ಷಿಣಂ ।
ಹುಡುಂಕೃತ್ಯ ಹುಡುಂಕೃತ್ಯ ಹುಡುಂಕೃತ್ಯ ತ್ರಿರುಚ್ಚಕೈಃ ॥ ೯ ॥
ಪ್ರಣವಂ ಪುರತಃ ಕೃತ್ವಾ ಷಡ್ಜಾದಿಸ್ವರಭೇದತಃ ।
ಗೀತಂ ವಿಧಾಯ ಸಾನಂದಂ ಸನೃತ್ಯಂ ಹಸ್ತಕಾನ್ವಿತಂ ॥ ೧೦ ॥
ಅಂಗಹಾರೈರ್ಮನೋಹಾರಿಚಾರೀಮಂಡಲಸಂಯುತಂ ।
ಕ್ಷಣಂ ತತ್ರ ಸರಸ್ತೀರೇ ಉಪವಿಷ್ಟೋ ಮಹಾತಪಾಃ ॥ ೧೧ ॥

---

೬. ಒಮ್ಮೆ ಹೇಮಂತಋತುವಿನ ಮಾರ್ಗಶಿರ ಮಾಸದಲ್ಲಿ ಆ ತಪೋನಿಷ್ಠನಾದ ವಾಲ್ಮೀಕಿಯು ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ವಿಮಲೋದಕವೆಂಬ ಆ ಮಹಾ ತೀರ್ಥದಲ್ಲಿ ಸ್ನಾನವನ್ನು ಮಾಡಿದನು.

೭. ಬಳಿಕ ಆತನು ಪಾದತಲದಿಂದ ಮಸ್ತಕದವರೆಗೂ ವಿಭೂತಿಯಿಂದ ಸ್ನಾನವನ್ನು ಮಾಡಿದನು. ಆ ಕಪರ್ದೀಶ್ವರಲಿಂಗದ ದಕ್ಷಿಣಭಾಗದಲ್ಲಿ ಕುಳಿತು ಮಾಧ್ಯಾಹ್ನಿಕದ ವಿಧಿಯನ್ನು ನೆರವೇರಿಸಿಕೊಂಡನು.

೮. ಆಮೇಲೆ ಕಾರ್ಯಕಾರಣಸಂಘಾತರೂಪವಾದ ಆತ್ಮನಿಗೆ ಸಂಬಂಧಿಸಿದ ಜೀವಬ್ರಹ್ಮೈಕ್ಯವನ್ನೇ ಅನುಸಂಧಾನಮಾಡುತ್ತ, ಶಿವಪಂಚಾಕ್ಷರಿಯನ್ನು ಜಪಿಸುತ್ತ, ದೇವೋತ್ತಮನಾದ ಮಹೇಶ್ವರನನ್ನೇ ಧ್ಯಾನಿಸುತ್ತ ಪುನಃ ತಲೆಯಲ್ಲಿ ವಿಭೂತಿಯನ್ನು ಧರಿಸಿದನು.

೯–೧೦. ಶಾಸ್ತ್ರೋಕ್ತಪ್ರಮಾಣದಿಂದ ಲಿಂಗಕ್ಕೆ ಅಪಸವ್ಯವಾಗಿ ಪ್ರದಕ್ಷಿಣೆಯನ್ನು ಮಾಡಿ ಮೂರು ಸಲ ಪ್ರಮಾಣಪೂರ್ವಕವಾಗಿ ಹುಡುಂಕಾರವನ್ನು ಮಾಡಿದನು. ಬಳಿಕ ಷಡ್ಜವೇ ಮುಂತಾದ ಸ್ವರಭೇದಗಳಿಂದ ಕೂಡಿದ ಸಂಗೀತವನ್ನು ಹಾಡಿದವನಾಗಿ ಆನಂದಾಧಿಕ್ಯದಿಂದ ಕೈಗಳಲ್ಲಿ ಪತಾಕ, ಛತ್ರಾದಿ ಮುದ್ರೆಗಳನ್ನು ಪ್ರದರ್ಶಿಸುತ್ತ ನೃತ್ಯವನ್ನು ಸಮರ್ಪಿಸಿದನು.

೧೧. ಅಂಗವಿಕ್ಷೇಪಗಳಿಂದ ಮನೋಹರವೂ ಪಶುಪತಿಗೆ ಪ್ರದಕ್ಷಿಣರೂಪವೂ ಆದ ನೃತ್ಯವನ್ನು ಪ್ರದರ್ಶಿಸುತ್ತ . ಮಹಾತಪಸ್ಸಂಪನ್ನನಾದ ಆ ವಾಲ್ಮೀಕಿಯು ವಿಮಲೋದಕ ಸರೋವರದ ತೀರದಲ್ಲಿ ಕ್ಷಣಮಾತ್ರದವರೆಗೂ ವಿಶ್ರಾಂತಿಯನ್ನು ಹೊಂದಲು ಕುಳಿತುಕೊಂಡನು.

ಅದ್ರಾಕ್ಷೀದ್ರಾಕ್ಷಸಂ ಘೋರಮತೀವವಿಕೃತಾಕೃತಿಂ ।
ಶುಷ್ಕಶಂಖಕಪೋಲಾಸ್ಯಂ ನಿಮಜ್ಞಾಪಿಂಗಲೋಚನಂ ॥ ೧೨ ॥
ರೂಕ್ಷಸ್ಫುಟಿತಕೇಶಾಗ್ರಂ ಮಹಾಲಂಬಶಿರೋಧರಂ ।
ಅತೀವ ಚಿಪಿಟಘ್ರಾಣಂ ಶುಷ್ಕೌಷ್ಠಮತಿದಂತುರಂ ॥ ೧೩ ॥
ಮಹಾವಿಶಾಲಮೌಳಿಂ ಚ ಪ್ರೋರ್ಧ್ವೀಭೂತಶಿರೋರುಹಂ ।
ಪ್ರಲಂಬಕರ್ಣಪಾಲೀಕಂ ಪಿಂಗಲಶ್ಮಶ್ರುಭೀಷಣಂ ॥ ೧೪ ॥
ಪ್ರಲಂಬಿತಲಲಜ್ಜಿಹ್ವಮತ್ಯುತ್ಕಟಕೃಕಾಟಿಕಂ ।
ಸ್ಥೂಲಾಸ್ಥಿಜತ್ರುಸಂಸ್ಥಾನಂ ದೀರ್ಘಸ್ಕಂಧದ್ವಯೋತ್ಕಟಂ ॥ ೧೫ ॥
ನಿಮಗ್ನಕಕ್ಷಾಕುಹರಂ ಶುಷ್ಕಹ್ರಸ್ವಭುಜದ್ವಯಂ ।
ವಿರಲಾಂಗುಲಿಹಸ್ತಾಗ್ರಂ ನತಪೀನನಖಾವಲಿಂ ॥ ೧೬ ॥
ವಿಶುಷ್ಕಪಾಂಸುಲೋತ್ಕ್ರೋಡಂ ಪೃಷ್ಠಲಗ್ನೋದರತ್ವಚಂ ।
ಕಟೀತಟೇನ ವಿಕಟಂ ನಿರ್ಮಾಂಸತ್ರಿಕಬಂಧನಂ ॥ ೧೭ ॥

---

೧೨. ಅಲ್ಲಿ ಮಹಾ ಭಯಂಕರನೂ, ಅತ್ಯಂತ ವಿಕಾರಾವಯವಗಳುಳ್ಳವನೂ, ಒಣಗಿದ ಹಣೆ, ಕೆನ್ನೆಗಳುಳ್ಳ ಮುಖಸಹಿತನೂ, ಆಳವಾಗಿ ಒಳಹೊಕ್ಕಿರುವ ಕೆಂಪಾದ ಕಣ್ಣುಗಳುಳ್ಳವನೂ ಆದ ಒಬ್ಬ ರಾಕ್ಷಸನನ್ನು ಕಂಡನು.

೧೩. ಆ ರಾಕ್ಷಸನು ಒಣಗಿ ಒರಟಾಗಿ ಕವಲೊಡೆದ ಕೇಶಗಳಿಂದಲೂ, ಅತ್ಯಂತ ದೀರ್ಘವಾದ ಕುತ್ತಿಗೆಯಿಂದಲೂ, ಬಹಳವಾಗಿ ಅಡಗಿಹೋದ ಮೂಗಿನಿಂದಲೂ, ಒಣಗಿದ ತುಟಿಗಳಿಂದಲೂ, ಉದ್ದವಾದ ಕೋರೆದಾಡೆಗಳಿಂದಲೂ ಭಯವನ್ನುಂಟುಮಾಡುತ್ತಿದ್ದನು.

೧೪. ಬಹಳ ವಿಶಾಲವಾದ ತಲೆಯುಳ್ಳವನಾಗಿ ಆ ದೈತ್ಯನು ತಲೆಗೂದಲುಗಳು ಎದ್ದು ನಿಂತಿರಲು ಉದ್ದವಾಗಿ ಜೋಲಾಡುತ್ತಿರುವ ಕಿವಿಗಳಿಂದಲೂ, ಕೆಂಪಾದ ಗಡ್ಡಮೀಸೆಗಳಿಂದಲೂ ಕೂಡಿದ್ದನು.

೧೫–೧೬. ಉದ್ದವಾಗಿ ಜೊಲ್ಲನ್ನು ಸುರಿಸುತ್ತಿರುವ ನಾಲಿಗೆಯಿಂದಲೂ, ಬಹಳ ಉನ್ನತವಾದ ಹೆಗಲಿನಿಂದಲೂ, ದಪ್ಪವಾಗಿ ಒರಟಾದ ಎಲುಬುಗಳಿಂದ ಕೂಡಿದ ಅಸ್ಥಿಪಂಜರದಿಂದಲೂ, ವಿಶಾಲಗಳೂ, ಉಬ್ಬಿರುವುವುಗಳೂ ಆದ ಎರಡು ಭುಜಗಳಿಂದಲೂ ಅವನು ಕರಾಳನಾಗಿದ್ದನು. ಅವನ ಕಂಕುಳುಗುಣಿಗಳು ಆಳವಾಗಿದ್ದುವು. ಕೈಗಳು ಬಿಡಿಸಿದ ಬೆರಳುಗಳಿಂದ ಕೂಡಿದುವಾಗಿ ಒಳಕ್ಕೆ ಬಗ್ಗಿ ಪೀನಗಳಾದ ಉಗುರುಗಳು ಅವುಗಳಲ್ಲಿ ಹೊರಕಾಣಿಸುತ್ತಿದ್ದುವು.

೧೭. ಶುಷ್ಕವಾಗಿ .ಧೂಳಿಮುಚ್ಚಿದ ಮುಖವುಳ್ಳ ಅವನ ಹೊಟ್ಟೆಯ ಚರ್ಮವು ಬೆನ್ನೆಲುಬಿಗೆ ಅಂಟಿಕೊಂಡಿದ್ದಿತು. ಮಧ್ಯಭಾಗವು ವಕ್ರಾಕಾರವುಳ್ಳದುದಾಗಿ ಬೆನ್ನೆಲುಬಿನ ಬುಡದ ಪ್ರದೇಶವು ಮಾಂಸರಹಿತವಾಗಿದ್ದಿತು.

ಪ್ರಲಂಬಶ್ಶಿಗ್ಯುಗಯುತಂ ಶುಷ್ಕಮುಷ್ಕಾಲ್ಪಮೇಹನಂ ।
ದೀರ್ಘನಿರ್ಮಾಂಸಲೋರೂಕಂ ಸ್ಥೂಲಜಾನ್ವಸ್ಥಿಪಂಜರಂ ॥ ೧೮ ॥
ಅಸ್ಥಿಚರ್ಮಾವಶೇಷಂ ಚ ಶಿರಾಜಾಲಿತವಿಗ್ರಹಂ ।
ಶಿರಾಲಂ ದೀರ್ಘಜಂಘಂ ಚ ಸ್ಥೂಲಗುಲ್ಫಾಸ್ಥಿಭೀಷಣಂ ॥ ೧೯ ॥
ಅತಿವಿಸ್ತೃತಪಾದಂ ಚ ದೀರ್ಘವಕ್ರಕೃಶಾಂಗುಲಿಂ ।
ಅಸ್ಥಿಚರ್ಮಾವಶೇಷೇಣ ಶಿರಾತಾಡಿತವಿಗ್ರಹಂ ॥ ೨೦ ॥
ವಿಕಟಂ ಭೀಷಣಾಕಾರಂ ಕ್ಷುತ್ಕ್ಷಾಮಮತಿಲೋಮಶಂ ।
ದಾವದಗ್ಧದ್ರುಮಾಕಾರಮತಿಚಂಚಲಲೋಚನಂ ॥ ೨೧ ॥
ಮೂರ್ತಂ ಭಯಾನಕಮಿವ ಸರ್ವಪ್ರಾಣಿಭಯಪ್ರದಂ ।
ಹೃದಯಾಕಂಪನಂ ದೃಷ್ಟ್ವಾ ತಂ ಪ್ರೇತಂ ವೃದ್ಧತಾಪಸಃ ।
ಅತಿದೀನಾನನಂ ಕಸ್ತ್ವಮಿತಿ ಧೈರ್ಯೇಣ ಪೃಷ್ಟವಾನ್ ॥ ೨೨ ॥

---

೧೮. ಜೋಲಾಡುತ್ತಿರುವ ಪೃಷ್ಠಗಳಿಂದಲೂ, ಶುಷ್ಕವಾದ ಅಂಡಕೋಶದಿಂದ ಕೂಡಿದ ಶಿಶ್ನದಿಂದಲೂ, ದೀರ್ಘವೂ ಮಾಂಸವರ್ಜಿತವೂ ಆದ ವಕ್ಷಸ್ಥಳದಿಂದಲೂ, ಮೊಣಕಾಲುಗಳಲ್ಲಿ ದಪ್ಪವಾದ ಮೂಳೆಗಳಿಂದಲೂ ಆ ರಾಕ್ಷಸನು ವಿಕೃತಾಂಗನಾಗಿದ್ದನು.

೧೯. ಅವನ ಶರೀರವೆಲ್ಲವೂ ಕೇವಲ ಚರ್ಮ ಮತ್ತು ಮೂಳೆಗಳೇ ಆಗಿದ್ದಿತು. ದೇಹದಲ್ಲಿ ನಾಡಿಯ ನರಗಳೆಲ್ಲ ಹೆಳೆದುಕೊಂಡಿದ್ದುದು ಕಾಣುತ್ತಿದ್ದಿತು. ರಕ್ತನಾಳಗಳಿಂದ ಕೂಡಿದ ಆತನ ಕೆಳಗಾಲುಗಳು ಸ್ಥೂಲಗಳಾದ ಮೇಲ್ಗಾಲುಗಳಿಂದ ಕೂಡಿ ಭಯವನ್ನುಂಟುಮಾಡುತ್ತಿದ್ದುವು.

೨೦. ಆತನ ಪಾದಗಳು ಬಹಳ ಅಗಲವಾಗಿದ್ದು ಉದ್ದವೂ ವಕ್ರವೂ ಆದ ಬೆರಳುಗಳಿಂದ ಕೂಡಿದ್ದುವು. ಶರೀರವೆಲ್ಲವೂ ನಿರ್ಮಾಂಸವಾಗಿ ಕೇವಲ ಎಲುಬು ಚರ್ಮಗಳಿಂದಲೇ ತುಂಬಿ ನರಗಳಿಂದ ಬಿಗಿಯಲ್ಪಟ್ಟಿರುವಂತೆ ತೋರುತ್ತಿದ್ದಿತು.

೨೧. ಆ ರಾಕ್ಷಸನು ವಿಕಾರಸ್ವರೂಪನೂ, ಭಯಂಕರನೂ, ಹಸಿವಿನಿಂದ ಒಣಗಿದ ದೇಹವುಳ್ಳವನೂ, ಮೈತುಂಬ ಕೂದಲುಳ್ಳವನೂ, ಕಾಳ್ಗಿಚ್ಚಿನಿಂದ ಸುಡಲ್ಪಟ್ಟ ಮರದಂತೆ ಕಪ್ಪುಬಣ್ಣದವನೂ, ಅತ್ಯಂತ ಚಂಚಲಗಳಾದ ನೇತ್ರಗಳುಳ್ಳವನೂ ಆಗಿದ್ದನು.

೨೨. ಭಯವೇ ಮೂರ್ತಿಗೊಂಡಂತೆ ರೂಪವುಳ್ಳವನಾಗಿ ಸಕಲ ಜಂತುಗಳಿಗೂ ಭಯವನ್ನುಂಟುಮಾಡುತ್ತಿದ್ದನು. ಇಂತು ನೋಡುವವರ ಹೃದಯದಲ್ಲಿ ಕಂಪನವನ್ನುಂಟುಮಾಡುವನಾದರೂ ಬಾಡಿ ದೀನವಾದ ಮುಖವುಳ್ಳ ಅವನನ್ನು ಕಂಡು ಆ ವೃದ್ಧಬ್ರಾಹ್ಮಣನು ತನ್ನಲ್ಲಿಯೇ ಧೈರ್ಯವನ್ನವಲಂಬಿಸಿ ಆ ಪ್ರೇತವನ್ನು ಕುರಿತು "ನೀನು ಯಾರು?" ಎಂಬುದಾಗಿ ಪ್ರಶ್ನೆಮಾಡಿದನು.

ಕುತಸ್ತ್ವಮಿಹ ಸಂಪ್ರಾಪ್ತಃ ಕಸ್ಮಾತ್ತೇ ಗತಿರೀದೃಶೀ ।
ಅನುಕ್ರೋಶಧಿಯಾ ತ್ವಾಂ ತು ಪೃಚ್ಛಾಮಿ ವದ ನಿರ್ಭಯಂ ॥ ೨೩ ॥
ಅಸ್ಮಾಕಂ ತಾಪಸಾನಾಂ ಚ ನ ಭಯಂ ತ್ವದ್ವಿಧಾನ್ಮನಾಕ್ ।
ಶಿವನಾಮಸಹಸ್ರಾಣಾಂ ವಿಭೂತಿಕೃತವರ್ಮಣಾಂ ॥ ೨೪ ॥
ತಾಪಸೋದೀರಿತಮಿತಿ ತದ್ರಕ್ಷಃ ಪ್ರೀತಿಪೂರ್ವಕಂ ।
ನಿಶಮ್ಯ ಪ್ರಾಂಜಲಿಃ ಪ್ರಾಹ ತಂ ಕೃಪಾಲುಂ ತಪೋಧನಂ ॥ ೨೫ ॥

ರಾಕ್ಷಸ ಉವಾಚ :—

ಅನುಕ್ರೋಶೋಽಸ್ತಿ ಯದಿ ತೇ ಭಗವಂಸ್ತಾಪಸೋತ್ತಮ ।
ಸ್ವವೃತ್ತಾಂತಂ ತದಾ ವಚ್ಮಿ ಶೃಣುಷ್ವಾವಹಿತಃ ಕ್ಷಣಂ ॥ ೨೬ ॥
ಪ್ರತಿಷ್ಠಾನಾಭಿಧಾನೋಽಸ್ತಿ ದೇಶೋ ಗೋದಾವರೀತಟೇ ।
ತೀರ್ಥಪ್ರತಿಗ್ರಹರುಚಿಸ್ತತ್ರಾಸಂ ಬ್ರಾಹ್ಮಣಸ್ತ್ವಹಂ ॥ ೨೭ ॥
ತೇನ ಕರ್ಮವಿಪಾಕೇನ ಪ್ರಾಪ್ತೋಽಸ್ಮಿ ಗತಿಮೀದೃಶೀಂ ।
ಮರುಸ್ಥಲೇ ಮಹಾಘೋರೇ ತರುತೋಯವಿವರ್ಜಿತೇ ॥ ೨೮ ॥

---

೨೩. "ಇಲ್ಲಿಗೆ ನೀನೇತಕ್ಕಾಗಿ ಬಂದಿರುವೆ? ನಿನಗೆ ಈ ದುರವಸ್ಥೆಯು ಯಾವ ಕಾರಣದಿಂದುಂಟಾಯಿತು? ರಾಕ್ಷಸನೆ! ನಿನ್ನಲ್ಲಿ ಅನುಕಂಪವುಂಟಾಗಿರುವುದರಿಂದ ಪ್ರಶ್ನೆಮಾಡುತ್ತಿರುವೆನು. ಸಮಾಚಾರವನ್ನು ನಿರ್ಭಯವಾಗಿ ಹೇಳು.

೨೪. ನಿನ್ನಂತಹವರಿಂದ ತಪಸ್ಸಂಪನ್ನರಾದ ನಮಗೆ ಸ್ವಲ್ಪಮಾತ್ರವೂ ಭಯವುಂಟಾಗುವುದಿಲ್ಲ. ನಾವು ಪರಮಶಿವನ ಸಹಸ್ರನಾಮವನ್ನೇ ನಿರಂತರವೂ ಜಪಿಸುತ್ತ ವಿಭೂತಿಯಿಂದ ಅಭೇದ್ಯಕವಚವನ್ನು ಮಾಡಿಕೊಂಡಿರುವೆವು."

೨೫. ಇಂತೆಂದು ಪ್ರೀತಿಪುರಸ್ಸರವಾಗಿ ಹೇಳಿದ ವೃದ್ಧತಪಸ್ವಿಯ ಮಾತುಗಳನ್ನು ಕೇಳಿ ಆ ರಾಕ್ಷಸನು ಕೈಗಳನ್ನು ಮುಗಿದುಕೊಂಡು ಕೃಪಾಳುವಾದ ಆ ತಪೋಧನನನ್ನು ಕುರಿತು ಇಂತೆಂದನು.

೨೬. ರಾಕ್ಷಸನು ಹೇಳುತ್ತಾನೆ:—ಎಲೈ ತಾಪಸಶ್ರೇಷ್ಠನೆ! ನಿನಗೆ ನನ್ನಲ್ಲಿ ಅನುಕಂಪವಿರುವುದೇ ನಿಜವಾದಲ್ಲಿ ನನ್ನ ವೃತ್ತಾಂತವನ್ನೆಲ್ಲ ನಿನ್ನಲ್ಲಿ ನಿರೂಪಿಸಿಕೊಳ್ಳುವೆನು. ಭಗವಂತನೆ! ಒಂದು ಕ್ಷಣದ ಮಟ್ಟಿಗೆ ಸಾವಧಾನಮನಸ್ಸಿನಿಂದ ಕೇಳುವವನಾಗು.

೨೭. ಗೋದಾವರೀನದಿಯ ದಡದಲ್ಲಿ ಪ್ರತಿಷ್ಠಾನವೆಂಬ ಹೆಸರುಳ್ಳ ಒಂದು ದೇಶವಿರುವುದು. ಅಲ್ಲಿ ನಾನು ಒಬ್ಬ ಬ್ರಾಹ್ಮಣನಾಗಿ ದಾನಗಳನ್ನು ಪ್ರತಿಗ್ರಹಿಸುವುದರಲ್ಲಿಯೇ ನಿರತನಾಗಿರುತ್ತಿದ್ದೆನು.

೨೮. ಆ ದುಷ್ಕರ್ಮದ ಫಲವಾಗಿಯೇ ಈ ವಿಧವಾದ ದುರ್ಗತಿಯು ನನಗೆ

ಗತೋ ಬಹುತರಃ ಕಾಲಸ್ತತ್ರ ಮೇ ವಸತೋ ಮುನೇ ।
ಕ್ಷುಧಿತಸ್ಯ ತೃಷಾರ್ತಸ್ಯ ಶೀತತಾಪಸಹಸ್ಯ ಚ ॥ ೨೯ ॥
ವರ್ಷತ್ಯಪಿ ಮಹಾಮೇಘೇ ಧಾರಾಸಾರೈರ್ದಿವಾನಿಶಂ ।
ಪ್ರಾವೃಟ್ಕಾಲೇಽನಿಲೇ ವಾತಿ ಕಿಂಚಿತ್ಪ್ರಾವರಣಂ ನ ಮೇ ॥ ೩೦ ॥
ಪರ್ವಣ್ಯದತ್ತದಾನಾ ಯೇ ಕೃತತೀರ್ಥಪ್ರತಿಗ್ರಹಾಃ ।
ತ ಇಮಾಂ ಯೋನಿಮೃಚ್ಛಂತಿ ಮಹಾದುಃಖನಿಬಂಧಿನೀಂ ॥ ೩೧ ॥
ಗತೇ ಬಹುತಿಥೇ ಕಾಲೇ ಮರುಭೂಮೌ ಮುನೇ ಮಯಾ ।
ದೃಷ್ಟೋ ಬ್ರಾಹ್ಮಣದಾಯಾದ ಏಕದಾ ಕಶ್ಚಿದಾಗತಃ ॥ ೩೨ ॥
ಸೂರ್ಯೋದಯಮನುಪ್ರಾಪ್ಯ ಸಂಧ್ಯಾವಿಧಿವಿವರ್ಜಿತಃ ।
ಕೃತ್ವಾ ಮೂತ್ರಪುರೀಷೇ ತು ಶೌಚಾಚಮನವರ್ಜಿತಃ ॥ ೩೩ ॥
ಮುಕ್ತಕಚ್ಛಮಶೌಚಂ ಚ ಸಂಧ್ಯಾಕರ್ಮವಿವರ್ಜಿತಂ ।
ತಂ ದೃಷ್ಟ್ವಾ ತಚ್ಛರೀರೇಽಹಂ ಸಂಕ್ರಾಂತೋ ಭೋಗಲಿಪ್ಸಯಾ ॥ ೩೪ ॥

---

ಪ್ರಾಪ್ತವಾಗಿ ಅತ್ಯಂತ ಘೋರವೂ, ನೀರು ನೆರಳುಗಳಿಲ್ಲದುದೂ ಆದ ಒಂದು ಮರುಭೂಮಿಯಲ್ಲಿ ಕ್ಲೇಶಪಡುತ್ತಿರುವೆನು.

೨೯. ಹಸಿವಿನಿಂದಲೂ ಬಾಯಾರಿಕೆಯಿಂದಲೂ ಆರ್ತನಾಗಿ ಶೀತೋಷ್ಣಗಳನ್ನು ಸಹಿಸಿಕೊಂಡು ಅಲ್ಲಿ ವಾಸಮಾಡುತ್ತಿರಲು ದೀರ್ಘವಾದ ಕಾಲವು ಕಳೆದುಹೋಯಿತು.

೩೦. ಮಳೆಗಾಲದಲ್ಲಿ ಮಹಾಮೇಘವು ಹಗಲುರಾತ್ರಿಗಳೆನ್ನದೆ ಒಂದೇ ಸಮನೆ ಧಾರಾಕಾರವಾಗಿ ಮಳೆಯನ್ನು ಸುರಿಸುತ್ತಿದ್ದರೂ, ಬಿರುಗಾಳಿಯು ಬೀಸುತ್ತಿದ್ದರೂ ನನ್ನ ಶರೀರಕ್ಕೆ ಒಂದು ಹೊದಿಕೆಯೂ ಇಲ್ಲವಾಗಿದೆ.

೩೧. ಪರ್ವಕಾಲಗಳಲ್ಲಿ ಯಾರು ದಾನಗಳನ್ನು ಮಾಡುವುದಿಲ್ಲವೊ, ಯಾರು ದಾನಗಳನ್ನು ಪರಿಗ್ರಹಿಸುವರೊ, ಅವರೆಲ್ಲರೂ ಮಹಾದುಃಖಗಳಿಗೆ ತವರುಮನೆಯೆನಿಸಿದ ಈ ಪಿಶಾಚಜನ್ಮವನ್ನು ಪಡೆಯುವರು.

೩೨. ಮಹರ್ಷಿಯೆ! ಈ ರೀತಿಯಾಗಿ ಮರುಭೂಮಿಯಲ್ಲಿ ವಾಸಮಾಡುತ್ತ ಬಹಳ ಕಾಲವು ಕಳೆದಮೇಲೆ ಒಮ್ಮೆ ಅಲ್ಲಿಗೆ ಬಂದ ಬ್ರಾಹ್ಮಣನಾಮಧಾರಿಯೊಬ್ಬನು ಕಾಣಿಸಿಕೊಂಡನು.

೩೩. ಅವನು ಸೂರ್ಯೋದಯವೊದಗಿದರೂ ಸಂಧ್ಯಾಕಾರ್ಯಗಳನ್ನು ಮಾಡುತ್ತಿರಲಿಲ್ಲ. ಮೂತ್ರಪುರೀಷಗಳ ವಿಸರ್ಜನೆಯನ್ನು ಮಾಡಿದಮೇಲೆ ಶೌಚಾಚಮನಾದಿಗಳನ್ನೂ ಸಹ ತ್ಯಜಿಸಿಬಿಟ್ಟಿದ್ದನು.

೩೪. ಇಂತು ಕಚ್ಚೆಯಿಲ್ಲದವನಾಗಿ, ಶೌಚರಹಿತನಾಗಿ, ಸಂಧ್ಯಾದಿ ಸತ್ಕರ್ಮಗಳನ್ನು ವರ್ಜಿಸಿದ ಆ ಬ್ರಾಹ್ಮಣಾಧಮನನ್ನು ಕಂಡು ನಾನು ಭೋಗಗಳನ್ನನುಭವಿಸಬೇಕೆಂಬ ಅಭಿಲಾಷೆಯಿಂದ ಅವನ ದೇಹವನ್ನು ಪ್ರವೇಶಿಸಿದೆನು.

ಸ ದ್ವಿಜೋ ಮಂದಭಾಗ್ಯಾನ್ಮೇ ಕೇನಚಿದ್ವಣಿಜಾ ಸಹ ।
ಅರ್ಥಲೋಭೇನ ಸಂಪ್ರಾಪ್ತಃ ಪುರೀಂ ಪುಣ್ಯಾಮಿಮಾಂ ಮುನೇ ॥ ೩೫ ॥
ಅಂತಃಪುರಿ ಪ್ರವಿಷ್ಟೋಽಭೂತ್ಸ ದ್ವಿಜೋ ಮುನಿಸತ್ತಮ ।
ತಚ್ಛರೀರಾದ್ಬಹಿರ್ಭೂತಸ್ತ್ವಹಂ ಪಾಪೈಃ ಸಮಂ ಕ್ಷಣಾತ್ ॥ ೩೬ ॥
ಪ್ರವೇಶೋ ನಾಸ್ತಿ ಚಾಸ್ಮಾಕಂ ಪ್ರೇತಾನಾಂ ತಪಸಾಂ ನಿಧೇ ।
ಮಹತಾಂ ಪಾತಕಾನಾಂ ಚ ವಾರಾಣಸ್ಯಾಂ ಶಿವಾಜ್ಞಯಾ ॥ ೩೭ ॥
ಅದ್ಯಾಪಿ ತಾನಿ ಪಾಪಾನಿ ತದ್ಬಹಿರ್ನಿರ್ಗಮೇಚ್ಛಯಾ ।
ಬಹಿರೇವ ಹಿ ತಿಷ್ಠಂತಿ ಸೀಮ್ನಿ ಪ್ರಮಥಸಾಧ್ವಸಾನ್ ॥ ೩೮ ॥
ಅದ್ಯ ಶ್ವೋ ವಾ ಪರಶ್ವೋ ವಾ ಸ ಬಹಿರ್ನಿರ್ಗಮಿಷ್ಯತಿ ।
ಇತ್ಯಾಶಯಾ ಸ್ಥಿತಾಃ ಸ್ಮೋ ವೈ ಯಾವದದ್ಯ ತಪೋಧನ ॥ ೩೯ ॥
ನಾದ್ಯಾಪಿ ಸ ಬಹಿರ್ಗಚ್ಛೇನ್ನಾದ್ಯಾಪ್ಯಾಶಾ ಪ್ರಯಾತಿ ನಃ ।
ಇತ್ಯಾಸ್ಮಹೇ ನಿರಾಧಾರಾ ಆಶಾಪಾಶನಿಯಂತ್ರಿತಾಃ ॥ ೪೦ ॥

---

೩೫. ಮಹಾಮುನಿಯೆ! ನನ್ನ ದುರದೃಷ್ಟದ ಫಲವೊ ಎಂಬಂತೆ ಆ ಬ್ರಾಹ್ಮಣನು ಧನಲೋಭದಿಂದ ಪ್ರೇರಿಸಲ್ಪಟ್ಟವನಾಗಿ ಒಬ್ಬಾನೊಬ್ಬ ವರ್ತಕನನ್ನು ಕೂಡಿಕೊಂಡು ಪುಣ್ಯತಮವಾದ ಈ ಪಟ್ಟಣವನ್ನು ಸೇರಿದನು.

೩೬. ಮುನಿಶ್ರೇಷ್ಠನೆ! ಆ ದ್ವಿಜನು ಅಂತಃಪುರವನ್ನು ಪ್ರವೇಶಮಾಡಿದನು. ಆ ಕ್ಷಣದಲ್ಲಿಯೇ ಆತನ ಪಾತಕಗಳೊಡನೆ ನಾನೂ ಆತನ ಶರೀರದಿಂದ ಹೊರಕ್ಕೆ ಬರುವವನಾದೆನು.

೩೭. ತಪೋನಿಧಿಯೆ! ಪ್ರೇತಗಳಾದ ನಮಗೆ ಅಲ್ಲಿ ಪ್ರವೇಶವಿಲ್ಲವಷ್ಟೆ. ಶಿವನ ಆಜ್ಞೆಯನ್ನನುಸರಿಸಿ ಮಹತ್ತರಗಳಾದ ಪಾತಕಗಳು ವಾರಾಣಸಿಯೊಳಕ್ಕೆ ಪ್ರವೇಶಿಸಲಾರವು.

೩೮. ಇಂದಿಗೂ ಸಹ ಆ ಪಾತಕಗಳೆಲ್ಲವೂ ಪ್ರಮಥರ ಭಯದಿಂದ ಕೂಡಿದವುಗಳಾಗಿ ಅಂತಃಪ್ರಾವರಣದ ಮೇರೆಯಲ್ಲಿಯೇ ನಿಂತುಬಿಟ್ಟು ಪಾಪಕರ್ತೃಗಳು ಹೊರಕ್ಕೆ ಬರುವುದನ್ನೇ ಎದುರುನೋಡುತ್ತಿರುವುವು.

೩೯. ಎಲೈ ತಪಸ್ಸಂಪನ್ನನೆ! ನಾವೂ ಸಹ ಆ ಬ್ರಾಹ್ಮಣಾಧಮನು ಇಂದೋ ನಾಳೆಯೋ ನಾಳಿದ್ದೋ ಹೊರಕ್ಕೆ ಬಂದೇ ಬರುವನೆಂದು ಕಾಯುತ್ತ ಇಂದಿನವರೆಗೂ ಹೊರಗಡೆಯೇ ನಿಂತಿರುತ್ತಿದ್ದೆವು.

೪೦. ಇಲ್ಲಿನವರೆಗೂ ಅವನು ಹೊರಕ್ಕೆ ಬರಲಿಲ್ಲ. ಇಂದೂ ಸಹ ನಮ್ಮ ಆಶೆಯು ಕಳೆದುಹೋಗಿಲ್ಲ. ಇಂತು ಆಶೆಯೆಂಬ ಪಾಶಕ್ಕೆ ಕಟ್ಟುಬಿದ್ದವರಾಗಿ ನಾವು ಆಲಂಬನವಿಲ್ಲದೆ ಈ ರೀತಿ ಸಂಕಟಪಡುತ್ತಿರುವೆವು.

ಚಿತ್ರಮುದ್ಯತನಂ ವಚ್ಮಿ ತಪಸ್ವಿಂಸ್ತನ್ನಿಶಾಮಯ ।
ಅತೀವ ಭಾವಿ ಕಲ್ಯಾಣಮಿತಿ ಮನ್ಯೇಽಧುನೈವ ಹಿ ॥ ೪೧ ॥
ಆಪ್ರಯಾಗಂ ಪ್ರತಿದಿನಂ ಪ್ರಯಾಮಃ ಕ್ಷುದಿತಾ ವಯಂ ।
ಆಹಾರಕಾಮ್ಯಯಾ ಕ್ವಾಪಿ ಪರಂ ನೋ ಕಿಂಚಿದಾಪ್ನುಮಃ ॥ ೪೨ ॥
ಸಂತಿ ಸರ್ವತ್ರ ಫಲಿನಃ ಪಾದಪಾಃ ಪ್ರತಿಕಾನನಂ ।
ಜಲಾಶಯಾಶ್ಚ ಸ್ವಚ್ಛಾಪಾಃ ಸಂತಿ ಭೂಮ್ಯಾಂ ಪದೇಪದೇ ॥ ೪೩ ॥
ಅನ್ಯಾನ್ಯಪಿ ಚ ಭಕ್ಷ್ಯಾಣಿ ಸರ್ವೇಷಾಂ ಸುಲಭಾನ್ಯಹೋ ।
ಪಾನಾನ್ಯಪಿ ವಿಚಿತ್ರಾಣಿ ಸಂತಿ ಭೂಯಾಂಸಿ ಸರ್ವತಃ ॥ ೪೪ ॥
ಪರಂ ನೋ ದೃಗ್ಗತಾನ್ಯೇವ ದೂರೇ ದೂರೇ ವ್ರಜಂತ್ಯಹೋ ।
ದೈವಾದದ್ಯೈಕಮಾಯಾಂತಂ ದೃಷ್ಟ್ವಾ ಕಾರ್ಪಟಿಕಂ ಮುನೇ ॥ ೪೫ ॥
ತಸ್ಯಾಂತಿಕಮಹಂ ಪ್ರಾಪ್ತಃ ಕ್ಷುದಯಾ ಪರಿಪೀಡಿತಃ ।
ಪ್ರಸಹ್ಯ ಭಕ್ಷಯಾಮ್ಯೇನಮಿತಿ ಮತ್ವಾ ತ್ವರಾನ್ವಿತಃ ॥ ೪೬ ॥

---

೪೧. ತಪೋನಿರತನೆ! ಇಂದು ನಡೆದ ಒಂದು ವಿಚಿತ್ರವನ್ನು ಹೇಳುವೆನು. ಅದನ್ನು ಕೇಳುವವನಾಗು. ಇದರಿಂದ ಶೀಘ್ರದಲ್ಲಿಯೇ ಅತ್ಯಂತ ಮಂಗಳ ವುಂಟಾಗುವುದೆಂಬುದಾಗಿ ತಿಳಿಯುತ್ತೇನೆ.

೪೨. ನಾವು ಹಸಿವಿನಿಂದ ಸಂಕಟಪಡುತ್ತ ಆಹಾರವನ್ನು ಹುಡುಕಿಕೊಂಡು ಪ್ರಯಾಗದವರೆಗೂ ಹೋಗುತ್ತಿರುವೆವು. ಆದರೂ ನಮಗೆ ಯಾವ ವಿಧವಾದ ಪದಾರ್ಥವೂ ಎಂದೂ ದೊರೆಯುವುದಿಲ್ಲ.

೪೩. ದೇಶದಲ್ಲೆಲ್ಲ ಸಕಲ ವನಗಳಲ್ಲಿಯೂ ಫಲಭರಿತಗಳಾದ ವೃಕ್ಷಗಳಿರು ವುವು. ಭೂಮಿಯಲ್ಲಿ ಅಡಿಗಡಿಗೂ ನಿರ್ಮಲೋದಕದಿಂದ ಕೂಡಿದ ತಟಾಕಗಳೂ ಅನೇಕವಾಗಿರುವುವು.

೪೪. ಇತರ ವಿಧಗಳಾದ ಭಕ್ಷ್ಯಗಳೂ ಸಕಲರಿಗೂ ಸುಲಭದಿಂದಲೇ ಲಭಿಸುತ್ತಿರುವುವು. ಎಲ್ಲೆಡೆಗಳಲ್ಲಿಯೂ ವಿಚಿತ್ರಗಳಾಗಿ ಯಥೇಚ್ಛಗಳಾದ ಪಾನೀಯದ್ರವ್ಯಗಳೂ ಲಭಿಸುವುವು.

೪೫. ಆದರೆ ಅವುಗಳೆಲ್ಲವೂ ನಮ್ಮ ಕಣ್ಣುಗಳಿಗೆ ಬಿದ್ದಮಾತ್ರದಿಂದಲೇ ದೂರದೂರಕ್ಕೆ ಓಡಿಹೋಗುತ್ತಿರುವುವು. ಮುನಿಯೆ! ದೈವಯೋಗದಿಂದ ಇಂದು ಇಲ್ಲಿಗೆ ಬರುತ್ತಿದ್ದ ಒಬ್ಬಾನೊಬ್ಬ ಯಾತ್ರಿಕನನ್ನು ಕಂಡೆನು.

೪೬. ಹಸಿವಿನಿಂದ ಬಹುವಾಗಿ ಪೀಡಿತನಾಗಿ ಬಲಾತ್ಕಾರದಿಂದಾದರೂ ಅವನನ್ನು ತಿನ್ನಲೇಬೇಕೆಂಬ ಆಶಯವುಳ್ಳವನಾಗಿ ತ್ವರೆಯಿಂದ ನಾನು ಅವನ ಸಮೀಪವನ್ನು ಸೇರಿದೆನು.

ಯಾವತ್ತಂ ತು ಜಿಘೃಕ್ಷಾಮಿ ತಾವತ್ತದ್ವದನಾಂಬುಜಾತ್ ।
ಶಿವನಾಮಪವಿತ್ರಾ ವಾಙ್ ನಿರಗಾದ್ವಿಘ್ನಹಾರಿಣೀ ॥ ೪೭ ॥
ಶಿವನಾಮಸ್ಮರಣತೋ ಮದೀಯಮಪಿ ಪಾತಕಂ ।
ಮಂದೀಭೂತಂ ತತಸ್ತೇನ ಪ್ರವೇಶಂ ಲಬ್ಧವಾನಹಂ ॥ ೪೮ ॥
ಸೀಮಸ್ಥೈಃ ಪ್ರಮಥೈರ್ನಾಹಂ ಸದ್ಯೋ ದೃಗ್ಗೋಚರೀಕೃತಃ ।
ಶಿವನಾಮ ಶ್ರುತೌ ಯೇಷಾಂ ತಾನ್ನಪಶ್ಯೇದ್ಯಮೋಽಪಿ ಯತ್ ॥ ೪೯ ॥
ಅಂತರ್ಗೇಹಸ್ಯ ಸೀಮಾನಂ ಪ್ರಾಪ್ತಸ್ತೇನ ಸಹಾಧುನಾ ।
ಸ ತು ಕಾರ್ಪಟಿಕೋ ಮಧ್ಯಂ ಪ್ರವಿಷ್ಟೋಽಹಮಿಹ ಸ್ಥಿತಃ ॥ ೫೦ ॥
ಆತ್ಮಾನಂ ಬಹುಮನ್ಯೇಽಹಂ ತ್ವಾಂ ವಿಲೋಕ್ಯಾಧುನಾ ಮುನೇ ।
ಮಾಮುದ್ಧರ ಕೃಪಾಲೋ ತ್ವಂ ಯೋನೇರಸ್ಮಾತ್ಸುದಾರುಣಾತ್ ॥ ೫೧ ॥
ಇತಿ ಪ್ರೇತವಚಃ ಶ್ರುತ್ವಾ ಸ ಕೃಪಾಲುಸ್ತಪೋಧನಃ ।
ಮನಸಾ ಚಿಂತಯಾಮಾಸ ಧಿಙ್ ನಿಜಾರ್ಥೋದ್ಯಮಾನ್ನರಾನ್ ॥ ೫೨ ॥

---

೪೭. ನಾನು ಅವನನ್ನು ಹಿಡಿಯುವುದರಲ್ಲಿದ್ದಂತೆಯೇ ಅವನ ಮುಖ ಕಮಲದಿಂದ ಸಕಲವಿಘ್ನಗಳನ್ನೂ ದೂರಗೊಳಿಸುವ ಪವಿತ್ರವಾದ ಶಿವನಾಮ ರೂಪವಾದ ವಾಣಿಯು ಹೊರಹೊರಟಿತು.

೪೮. ಶಿವನಾಮದ ಸ್ಮರಣೆಯಿಂದ ನನ್ನ ಪಾತಕವೂ ಸಹ ಕಳೆದು ಹೋಯಿತು. ಆದುದರಿಂದಲೇ ಶಿವನಾಮದ ಪರಿಣಾಮದ ಫಲವಾಗಿ ನಾನು ಕಾಶಿಯೊಳಕ್ಕೆ ಪ್ರವೇಶವನ್ನು ಪಡೆಯಲನುವಾಯಿತು.

೪೯. ಈ ಕ್ಷೇತ್ರದ ಎಲ್ಲೆಗಳಲ್ಲಿರುವ ಪ್ರಮಥರಿಗೆ ನಾನು ನಿಮಿಷಮಾತ್ರವೂ ಕಣ್ಣುಗಳಿಗೆ ಬೀಳಲಿಲ್ಲ. ಯಾರು ಶಿವನಾಮವನ್ನು ಕಿವಿಗಳಿಂದ ಶ್ರವಣಮಾಡಿ ರುವರೊ, ಅವರನ್ನು ಯಮಧರ್ಮರಾಯನೂ ಸಹ ನೋಡಲಾರನು.

೫೦. ಆ ಯಾತ್ರಿಕನೊಡನೆಯೇ ನಾನು ಅಂತರ್ಗೃಹದ ಗಡಿಯವರೆಗೂ ಇಂದು ಬರುವವನಾದೆನು. ಆ ಯಾತ್ರಿಕನು ಕ್ಷೇತ್ರಮಧ್ಯಕ್ಕೆ ಹೋಗಲು ನಾನು ಇಲ್ಲಿಯೇ ನಿಲ್ಲಬೇಕಾಯಿತು.

೫೧. ಮಹಾಮುನಿಯೆ! ಈಗ ನಿನ್ನ ದರ್ಶನವಾದುದರಿಂದ ನಾನೇ ಬಹಳ ಪುಣ್ಯವಂತನೆಂದು ತಿಳಿಯುವೆನು. ಕೃಪಾಸಮುದ್ರನಾದ ನೀನು ಅತ್ಯಂತ ಕಠಿನವಾದ ಈ ನೀಚಜನ್ಮದಿಂದ ನನ್ನನ್ನು ಉದ್ಧರಿಸಬೇಕು.

೫೨. ಇಂತೆಂದ ಆ ಪ್ರೇತದ ಮಾತುಗಳನ್ನು ಕೇಳಿ ಕರುಣಾಪೂರಿತನಾದ ಆ ವಾಲ್ಮೀಕಿಯೆಂಬ ತಪೋಧನನು ತನ್ನ ಮನಸ್ಸಿನಲ್ಲಿಯೇ ಇಂತೆಂದು ಯೋಚಿಸ ತೊಡಗಿದನು. "ನಿರಂತರವೂ ಸ್ವಪ್ರಯೋಜನಕ್ಕಾಗಿಯೇ ಕಾರ್ಯಗಳನ್ನು ಮಾಡುತ್ತಿರುವ ಸಾಧಾರಣಮಾನವರಿಗೆ ಧಿಕ್ಕಾರವಿರಲಿ.

ಸ್ವೋದರಂಭರಯಃ ಸರ್ವೇ ಪಶುಪಕ್ಷಿಮೃಗಾದಯಃ ।
ಸ ಏವ ಧನ್ಯಃ ಸಂಸಾರೇ ಯಃ ಪರಾರ್ಥೋದ್ಯತಃ ಸದಾ ॥ ೫೩ ॥
ತಪಸಾದ್ಯ ನಿಜೇನಾಹಂ ಪ್ರೇತಮೇತಮಘಾತುರಂ ।
ಮಾಮೇವ ಶರಣಂ ಪ್ರಾಪ್ತಮುದ್ಧರಿಷ್ಯಾಮ್ಯಸಂಶಯಂ ॥ ೫೪ ॥
ವಿಮೃಶ್ಯೇತಿ ಸ ವೈ ಚಿತ್ತೇ ಪಿಶಾಚಂ ಪ್ರಾಹ ಸತ್ತಮಃ ।
ವಿಮಲೋದೇ ಸರಸ್ಯಸ್ಮಿನ್ಸ್ನಾಹಿ ರೇ ಪಾಪನುತ್ತಯೇ ॥ ೫೫ ॥
ಪಿಶಾಚ ತೇ ಪಿಶಾಚತ್ವಂ ತೀರ್ಥಸ್ಯಾಸ್ಯ ಪ್ರಭಾವತಃ ।
ಕಪರ್ದೀಶೇಕ್ಷಣಾದದ್ಯ ಕ್ಷಣಾತ್ ಕ್ಷೀಣಂ ವಿನಂಕ್ಷ್ಯತಿ ॥ ೫೬ ॥
ಶ್ರುತ್ವೇತಿ ಸ ಮುನೇರ್ವಾಕ್ಯಂ ಪ್ರೇತಃ ಪ್ರಾಹ ಪ್ರಣಮ್ಯ ತಂ ।
ಪ್ರೀತಾತ್ಮಾ ಪ್ರೀತಮನಸಂ ಪ್ರಬದ್ಧಕರಸಂಪುಟಃ ॥ ೫೭ ॥
ಪಾನೀಯಂ ಪಾತುಮಪಿ ನೋ ಲಭೇಯಂ ಮುನಿಸತ್ತಮ ।
ಸ್ನಾನಸ್ಯ ಕಾ ಕಥಾ ಸಾಥ ರಕ್ಷ್ಯೇಯುರ್ಜಲದೇವತಾಃ ॥ ೫೮ ॥

---

೫೩. ಪಶುಗಳೂ, ಪಕ್ಷಿಗಳೂ, ಅರಣ್ಯ ಮೃಗಗಳೂ, ಎಲ್ಲವೂ ತಮ್ಮ ತಮ್ಮ ಹೊಟ್ಟೆಗಳನ್ನು ತುಂಬಿಸಿಕೊಳ್ಳುತ್ತಲೇ ಇರುವುವು. ದುಃಖಮಯವಾದ ಈ ಸಂಸಾರದಲ್ಲಿ ಯಾವನು ಸರ್ವಕಾಲದಲ್ಲಿಯೂ ಇತರರ ಅನುಕೂಲಕ್ಕಾಗಿಯೇ ಪ್ರಯತ್ನಪಡುವನೊ, ಅವನೇ ನಿಜವಾಗಿಯೂ ಧನ್ಯನು.

೫೪. ಮಹಾಪಾತಕಸಹಿತನೂ, ನನ್ನನ್ನೇ ಶರಣು ಹೊಕ್ಕಿರುವವನೂ ಆದ ಈ ಪ್ರೇತವನ್ನು ಇಂದೇ ನನ್ನ ತಪಸ್ಸಿನ ಪ್ರಭಾವದಿಂದ ಉದ್ಧಾರಮಾಡುವೆನು. ಇದರಲ್ಲಿ ಸಂದೇಹವಿಲ್ಲ.''

೫೫–೫೬. ಇಂತೆಂದು ಆ ಬ್ರಾಹ್ಮಣನು ತನ್ನಲ್ಲಿಯೇ ನಿಶ್ಚಯವನ್ನು ಮಾಡಿಕೊಂಡು ಆ ಪಿಶಾಚವನ್ನು ಕುರಿತು ಹೇಳತೊಡಗಿದನು. ''ಎಲೈ ಪಿಶಾಚನೆ! ನಿನ್ನ ಪಾಪಗಳನ್ನು ಕಳೆದುಕೊಳ್ಳಬೇಕಾದರೆ ವಿಮಲೋದಕವೆಂಬ ಹೆಸರಿನ ಈ ಸರೋವರದಲ್ಲಿ ಸ್ನಾನವನ್ನು ಮಾಡು. ನಿನ್ನ ಪಿಶಾಚಜನ್ಮವು ಈ ತೀರ್ಥೋದಕದ ಪ್ರಭಾವದಿಂದಲೂ, ಕಪರ್ದೀಶ್ವರನ ದರ್ಶನಮಾತ್ರದಿಂದಲೂ ಈಗ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುದು ನಿಶ್ಚಯವು.''

೫೭. ಇಂತೆಂದ ಆ ಮುನಿಯ ವಾಕ್ಯಗಳನ್ನು ಕೇಳಿ ಪ್ರೇತನು ಆತನಿಗೆ ನಮಸ್ಕರಿಸಿ ಹೇಳತೊಡಗಿದನು. ಸಂತುಷ್ಟಾಂತರಂಗನಾದ ಆ ರಾಕ್ಷಸನು ಅಂಜಲಿಬಂಧವನ್ನು ಮಾಡಿಕೊಂಡು ಸುಪ್ರೀತನಾದ ಆತನಿಗೆ ಇಂತೆಂದನು.

೫೮. ''ಮುನಿಶ್ರೇಷ್ಠನೆ! ನನಗೆ ಇಂದಿನವರೆಗೂ ಕುಡಿಯುವುದಕ್ಕೆ ಸಹ ನೀರು ಸಿಕ್ಕುತ್ತಿಲ್ಲವು. ಇನ್ನು ಸ್ನಾನದ ವಿಷಯವನ್ನು ಹೇಳಲೇಕೆ? ಜಲವನ್ನು ಜಲದೇವತೆಗಳು ರಕ್ಷಿಸುತ್ತಿರುವರು.

ಪಾನಸ್ಯಾಪ್ಯತ್ರ ಕಾ ವಾರ್ತಾ ಜಲಸ್ಪರ್ಶೋಽಪಿ ದುರ್ಲಭಃ ।
ಇತಿ ಪ್ರೇತೋಕ್ತಮಾಕರ್ಣ್ಯ ಸ ಭೃಶಂ ಪ್ರೀತಿಮಾನಭೂತ್ ॥ ೫೯ ॥
ಉವಾಚ ಚ ತಪಸ್ವೀ ತಂ ಜಗದುದ್ಧರಣಕ್ಷಮಃ ।
ಗೃಹಾಣೇಮಾಂ ವಿಭೂತಿಂ ತ್ವಂ ಲಲಾಟಫಲಕೇ ಕುರು ॥ ೬೦ ॥
ಅಸ್ಮಾದ್ವಿಭೂತಿಮಾಹಾತ್ಮ್ಯಾತ್ಪ್ರೇತ ಕೋಽಪಿ ನ ಕುತ್ರಚಿತ್ ।
ಬಾಧಾಂ ಕರೋತಿ ಕಸ್ಯಾಪಿ ಮಹಾಪಾತಕಿನೋಽಪ್ಯಹೋ ॥ ೬೧ ॥
ಭಾಲಂ ವಿಭೂತಿಧವಲಂ ವಿಲೋಕ್ಯ ಯಮಕಿಂಕರಾಃ ।
ಪಾಪಿನೋಽಪಿ ಪಲಾಯಂತೇ ಭೀತಾಃ ಪಾಶುಪತಾಸ್ತ್ರತಃ ॥ ೬೨ ॥
ಅಸ್ಥಿಧ್ವಜಾಂಕಿತಂ ದೃಷ್ಟ್ವಾ ಯಥಾ ಪಾಂಥಾ ಜಲಾಶಯಂ ।
ದೂರಯಂತಿ ತಥಾ ಭಸ್ಮಭಾಲಾಂಕಂ ಯಮಕಿಂಕರಾಃ ॥ ೬೩ ॥
ಕೃತಭೂತಿತನುತ್ರಾಣಂ ಶಿವಮಂತ್ರೈರ್ನರೋತ್ತಮಂ ।
ನೋಪಸರ್ಪಂತಿ ನಿಯತಮಪಿ ಹಿಂಸ್ರಾಃ ಸಮಂತತಃ ॥ ೬೪ ॥

---

೫೯–೬೦. ಅಥವಾ ಪಾನಮಾಡುವ ವಿಷಯವಾದರೂ ಏಕೆ? ಈ ತೀರ್ಥದ ಜಲವನ್ನು ಮುಟ್ಟುವುದೂ ನನಗೆ ದುರ್ಲಭವಾಗಿರುವುದು.'' ಇಂತೆಂದ ಪ್ರೇತದ ಮಾತುಗಳನ್ನು ಕೇಳಿ ಆ ವಾಲ್ಮೀಕಿಯು ಅವನಲ್ಲಿ ಅತ್ಯಂತ ಪ್ರೀತಿಯುಳ್ಳವನಾದನು. ಲೋಕವನ್ನೇ ಉದ್ಧರಿಸಲು ಶಕ್ತನಾದ ಆ ಮುನಿಯು ಆಗ ಇಂತೆಂದು ನುಡಿದನು. ''ಈ ವಿಭೂತಿಯನ್ನು ತೆಗೆದುಕೊ. ಇದನ್ನು ನಿನ್ನ ಹಣೆಯಲ್ಲಿ ತ್ರಿಪುಂಡ್ರವಾಗಿ ಧಾರಣೆಮಾಡು.

೬೧. ಇದರಲ್ಲಿ ಮಾಹಾತ್ಮ್ಯವುಂಟು. ಈ ವಿಭೂತಿಯ ಮಾಹಾತ್ಮ್ಯದಿಂದ ಮಹಾಪಾತಕಗಳನ್ನು ಮಾಡಿದವನಿಗೂ ಕೂಡ ಯಾರೂ ಎಂದಿಗೂ ಯಾವ ವಿಧವಾದ ಬಾಧೆಯನ್ನೂ ಮಾಡಲು ಶಕ್ತರಾಗಲಾರರು.

೬೨. ಎಂತಹ ಪಾತಕಿಯಾದವನೂ ಹಣೆಯಲ್ಲಿ ವಿಭೂತಿಯ ಬಿಳುಪನ್ನು ತಾಳಿದವನಾದರೆ, ಅದನ್ನು ಕಂಡು ಶಿವಭಕ್ತರನ್ನು ಹಿಂಸಿಸಲು ತಮಗೆ ಪಾಶುಪತಾಸ್ತ್ರದ ಭಯವುಂಟಾಗುವುದರಿಂದ ಅವನನ್ನು ಬಿಟ್ಟು ಓಡುವರು.

೬೩. ಜಲಾಶಯದ ಸುತ್ತಲೂ ಮೂಳೆಗಳು ಹರಡಿಕೊಂಡಿರಲು ಆ ಚಿಹ್ನೆಗಳಿಂದ ದಾರಿಗರು ಜಲವು ವಿಷಮಯವಾದುದೆಂದು ತಿಳಿದು ಹೇಗೆ ದೂರಕ್ಕೆ ಸರಿಯುವರೊ, ಹಾಗೆಯೇ ಹಣೆಯಲ್ಲಿ ಭಸ್ಮಧಾರಣೆಯನ್ನು ಮಾಡಿದ ಮನುಷ್ಯನನ್ನು ಕಂಡು ಯಮಕಿಂಕರರೂ ದೂರದಲ್ಲಿಯೇ ನಿಂತುಬಿಡುವರು.

೬೪. ಶಿವಮಂತ್ರಗಳನ್ನುಚ್ಚರಿಸುತ್ತ ವಿಭೂತಿಲೇಪನವೆಂಬ ಅಂಗರಕ್ಷೆಯನ್ನು ಯಾವ ಮಾನವನು ಧರಿಸಿರುವನೊ, ಅವನನ್ನು ಸುತ್ತಲೂ ಮುತ್ತಿರುವ ಕ್ರೂರಮೃಗಗಳೂ ಸಹ ಸಮೀಪಿಸಲಾರವೆಂಬುದು ನಿಶ್ಚಯವು.

ಭಕ್ತ್ಯಾ ಬಿಭರ್ತಿ ಯೋ ಭಸ್ಮ ಶಿವಮಂತ್ರಪವಿತ್ರಿತಂ ।
ಭಾಲೇ ವಕ್ಷಸಿ ದೋರ್ಮೂಲೇ ನ ತಂ ಹಿಂಸಂತಿ ಹಿಂಸಕಾಃ ॥ ೬೫ ॥
ಸರ್ವೇಭ್ಯೋ ದುಷ್ಟಸತ್ವೇಭ್ಯೋ ಯತೋ ರಕ್ಷೇದಹರ್ನಿಶಂ ।
ರಕ್ಷೇತ್ಯೇಷಾ ತತಃ ಪ್ರೋಕ್ತಾ ವಿಭೂತಿರ್ಭೂತಿಕೃದ್ಯತಃ ॥ ೬೬ ॥
ಭಾಸನಾದ್ಭರ್ತ್ಸನಾದ್ಭಸ್ಮ ಪಾಂಸುಃ ಪಾಂಸುತ್ವದಾ ಯತಃ ।
ಪಾಪಾನಾಂ ಕ್ಷಾರಣಾತ್ಕ್ಷಾರೋ ಬುಧೈರೇವಂ ನಿರುಚ್ಯತೇ ॥ ೬೭ ॥
ಗೃಹೀತ್ವಾ ಧಾರಮಧ್ಯಾತ್ಸ ಭಸ್ಮ ಪ್ರೇತಕರೇಽರ್ಪಯತ್ ।
ಸೋಽಪ್ಯಾದರಾತ್ಸಮಾದಾಯ ಭಾಲದೇಶೇ ನ್ಯವೇಶಯತ್ ॥ ೬೮ ॥
ವಿಭೂತಿಧಾರಣಂ ವೀಕ್ಷ್ಯ ಪಿಶಾಚಂ ಜಲದೇವತಾಃ ।
ಜಲಾವಗಾಹನಪರಂ ವಾರಯಾಂಚಕ್ರಿರೇ ನ ತಂ ॥ ೬೯ ॥
ಸ್ನಾತ್ವಾ ಪೀತ್ವಾ ಸ ನಿರ್ಗಚ್ಛೇದ್ಯಾವತ್ತಸ್ಮಾಜ್ಜಲಾಶಯಾತ್ ।
ತಾವತ್ಪೈಶಾಚ್ಯಮುಗಮುದ್ದಿವ್ಯದೇಹಮವಾಪ ಚ ॥ ೭೦ ॥

---

೬೫. ಯಾವನು ಶಿವಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟು ಪವಿತ್ರಿತವಾದ ಭಸ್ಮವನ್ನು ಹಣೆಯಲ್ಲಿಯೂ, ವಕ್ಷಸ್ಥಳದಲ್ಲಿಯೂ, ಬಾಹುಮೂಲಗಳಲ್ಲಿಯೂ ಭಕ್ತಿಭಾವದಿಂದ ಧರಿಸುವನೊ, ಅವನನ್ನು ಯಾವ ಕ್ರೂರಿಗಳೂ ಸಹ ಹಿಂಸಿಸಲಾರರು.

೬೬. ಸಕಲ ವಿಧಗಳಾದ ದುಷ್ಟಜಂತುಗಳ ಉಪಟಳದಿಂದ ಹಗಲುರಾತ್ರಿಗಳಲ್ಲಿಯೂ ಈ ಭಸ್ಮವು ಮನುಷ್ಯನನ್ನು ಕಾಪಾಡುವುದರಿಂದ ಇದಕ್ಕೆ ರಕ್ಷೆಯೆಂಬ ಹೆಸರುಂಟಾಗಿರುವುದು. ಸಕಲೈಶ್ವರ್ಯಗಳನ್ನೂ ಕೈಗೂಡಿಸಿಕೊಡುವುದರಿಂದ ಇದಕ್ಕೇ ವಿಭೂತಿಯೆಂಬ ಹೆಸರೂ ಉಂಟಾಗಿರುವುದು.

೬೭. ಲೋಕವನ್ನೆಲ್ಲ ಬೆಳಗಿಸುವುದೂ, ಅವಿದ್ಯಾದಿ ದೋಷಗಳನ್ನು ಧಿಕ್ಕರಿಸುವುದೂ ಆದುದರಿಂದ ಇದನ್ನು ಭಸ್ಮವೆಂದು ಕರೆಯುವರು. ಮನುಷ್ಯನ ಪಾತಕಗಳನ್ನು ಹೋಗಲಾಡಿಸುವುದರಿಂದ ಪಾಂಸುವೆನ್ನುವರು. ಪಾಪಗಳನ್ನು ಸಡಿಲಿಸುವ ಮಹಿಮೆಯುಳ್ಳದ್ದಾಗಿರುವುದರಿಂದ ಇದಕ್ಕೆ ಕ್ಷಾರವೆನ್ನುವರು. ಇಂತು ಜ್ಞಾನಿಗಳಾದವರು ವಿಭೂತಿಯನಾಮಗಳನ್ನುನಿರ್ವಚನಮಾಡಿರುವರು.”

೬೮. ಇಂತೆಂದು ಆ ವಾಲ್ಮೀಕಿಮುನಿಯು ತನ್ನ ಕುಂಡದ ಮಧ್ಯದಿಂದ ಸ್ವಲ್ಪ ಭಸ್ಮವನ್ನು ತೆಗೆದುಕೊಂಡು ಅದನ್ನು ಆ ಪ್ರೇತದ ಕೈಯಲ್ಲಿ ಕೊಟ್ಟನು. ಅವನೂ ಆದರದಿಂದ ಅದನ್ನು ಸ್ವೀಕರಿಸಿ ತನ್ನ ಹಣೆಯಲ್ಲಿ ಲೇಪಿಸಿಕೊಂಡನು.

೬೯. ಆ ಪಿಶಾಚವು ಇಂತು ವಿಭೂತಿಧರನಾದುದನ್ನು ಕಂಡು ಜಲಸ್ನಾನಕ್ಕಾಗಿ ಬರುತ್ತಿರುವ ಆತನನ್ನು ಜಲದೇವತೆಗಳು ಕಂಡು ನಿವಾರಿಸಲಾರದೆ ಇದ್ದರು.

೭೦. ಅವನು ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಜಲವನ್ನು ಸೇವಿಸಿ

ದಿವ್ಯಮಾಲಾಂಬರಧರೋ ದಿವ್ಯಗಂಧಾನುಲೇಪನಃ ।
ದಿವ್ಯಯಾನಂ ಸಮಾರುಹ್ಯ ವರ್ತ್ಮ ಪ್ರಾಪ್ತೋಽಥ ಪಾವನಂ ॥ ೭೧ ॥
ಗಚ್ಛತಾ ತೇನ ಗಗನೇ ಸ ತಪಸ್ವೀ ನಮಸ್ಕೃತಃ ।
ಪ್ರೋಚ್ಚೈಃ ಪ್ರೋವಾಚ ಭಗವನ್ಮೋಚಿತೋಽಸ್ಮಿ ತ್ವಯಾನಘ ॥ ೭೨ ॥
ತಸ್ಮಾತ್ಕದರ್ಯಯೋನಿತ್ವಾದತೀವಪರಿನಿಂದಿತಾತ್ ।
ಅಸ್ಯ ತೀರ್ಥಸ್ಯ ಮಾಹಾತ್ಮ್ಯಾದ್ದಿವ್ಯಂ ದೇಹಮವಾಪ್ತವಾನ್ ॥ ೭೩ ॥
ಪಿಶಾಚಮೋಚನಂ ತೀರ್ಥಮದ್ಯಾರಭ್ಯ ಸಮಾಖ್ಯಯಾ ।
ಅನ್ಯೇಷಾಮಪಿ ಪೈಶಾಚ್ಯಮಿದಂ ಸ್ನಾನಾದ್ಧರಿಷ್ಯತಿ ॥ ೭೪ ॥
ಅಸ್ಮಿಂಸ್ತೀರ್ಥೇ ಮಹಾಪುಣ್ಯೇ ಯೇ ಸ್ನಾಸ್ಯಂತೀಹ ಮಾನವಾಃ ।
ಪಿಂಡಾಂಶ್ಚ ನಿರ್ವಪಿಷ್ಯಂತಿ ಸಂಧ್ಯಾತರ್ಪಣಪೂರ್ವಕಂ ॥ ೭೫ ॥
ದೈವಾತ್ಪೈಶಾಚ್ಯಮಾಪನ್ನಾಸ್ತೇಷಾಂ ಪಿತೃಪಿತಾಮಹಾಃ ।
ತೇಽಪಿ ಪೈಶಾಚ್ಯಮುತ್ಸೃಜ್ಯ ಯಾಸ್ಯಂತಿ ಪರಮಾಂ ಗತಿಂ ॥ ೭೬ ॥

---

ಹೊರಗೆ ಬರುವಷ್ಟರೊಳಗಾಗಿಯೇ ಪಿಶಾಚರೂಪದ ಅವನ ವಿಕಾರವೆಲ್ಲವೂ ಮಾಯವಾಗಿ ಅವನು ದಿವ್ಯದೇಹವನ್ನು ಹೊಂದಿದನು.

೭೧. ಸ್ವರ್ಗಲೋಕದ ಪುಷ್ಪಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿ, ದಿವ್ಯ ಗಂಧದಿಂದ ಲೇಪಿತನಾಗಿ ದಿವ್ಯವಾದ ವಿಮಾನವನ್ನೇರಿ ಪವಿತ್ರವಾದ ಕೈಲಾಸ ಮಾರ್ಗವನ್ನು ಸೇರುವವನಾದನು.

೭೨. ಇಂತು ಹೊರಡಲನುವಾದ ಆತನು ಆಕಾಶದಿಂದಲೇ ಆ ತಾಪಸನಿಗೆ ನಮಸ್ಕರಿಸಿ ಇಂತೆಂದನು. "ಭಗವಂತನೆ! ಪಾಪರಹಿತನೆ! ನಿನ್ನ ಅನುಗ್ರದಿಂದ ನಾನು ಪಿಶಾಚಜನ್ಮದಿಂದ ಬಿಡುಗಡೆಯನ್ನು ಹೊಂದಿದೆನು.

೭೩. ಈ ಪುಣ್ಯತೀರ್ಥದ ಮಾಹಾತ್ಮ್ಯದ ಫಲವಾಗಿ ಅತ್ಯಂತನಿಂದಿತವೂ ತುಚ್ಛವೂ ಆದ ಆ ಪಿಶಾಚಯೋನಿಯಿಂದ ಮುಕ್ತನಾಗಿ ದಿವ್ಯವಾದ ದೇಹವನ್ನು ಪಡೆದವನಾದೆನು.

೭೪. ಈ ತೀರ್ಥವು ಇಂದು ಮೊದಲುಗೊಂಡು ಪಿಶಾಚಮೋಚನತೀರ್ಥ ವೆಂಬ ಹೆಸರುಳ್ಳದ್ದಾಗಲಿ. ಇದು ಸ್ನಾನಮಾತ್ರದಿಂದಲೇ ಇತರ ಮಾನವರ ಪಿಶಾಚ ಬಾಧೆಗಳನ್ನೂ ನಾಶಮಾಡುವುದು.

೭೫–೭೬. ಮಹಾಪುಣ್ಯತಮವಾದ ಈ ತೀರ್ಥದಲ್ಲಿ ಯಾವ ಮಾನವರು ಸ್ನಾನವನ್ನು ಮಾಡಿಕೊಂಡು, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನೂ ತರ್ಪಣ ಗಳನ್ನೂ ನೆರವೇರಿಸಿ ಪಿತೃಗಳನ್ನುದ್ದೇಶಿಸಿ ಪಿಂಡಗಳನ್ನು ದಾನಮಾಡುವರೊ, ಅವರ ಪಿತೃಪಿತಾಮಹಾದಿಗಳು ದುರದೃಷ್ಟದಿಂದ ಪಿಶಾಚಜನ್ಮಗಳನ್ನು ಪಡೆ ದಿದ್ದರೂ ಕೂಡ ಅವರೂ ತಮ್ಮ ಪೈಶಾಚ್ಯವನ್ನು ತ್ಯಜಿಸಿ ಉತ್ತಮವಾದ ಸದ್ಗತಿ ಯನ್ನು ಪಡೆಯುವವರಾಗುವರು.

ಅದ್ಯ ಶುಕ್ಲಚತುರ್ದಶ್ಯಾಂ ಮಾರ್ಗೇ ಮಾಸಿ ತಪೋನಿಧೇ ।
ಅತ್ರ ಸ್ನಾನಾದಿಕಂ ಕಾರ್ಯಂ ಪೈಶಾಚ್ಯಪರಿಮೋಚನಂ ॥ ೭೭ ॥
ಇಮಾಂ ಸಾಂವತ್ಸರೀಂ ಯಾತ್ರಾಂ ಯೇ ಕರಿಷ್ಯಂತಿ ಮಾನವಾಃ ।
ತೀರ್ಥಪ್ರತಿಗ್ರಹಾತ್ಪಾಪಾನ್ನಿಸ್ಸರಿಷ್ಯಂತಿ ತೇ ನರಾಃ ॥ ೭೮ ॥
ಪಿಶಾಚಮೋಚನೇ ಸ್ನಾತ್ವಾ ಕಪರ್ದೀಶಂ ಸಮರ್ಚ್ಯ ಚ ।
ಕೃತ್ವಾ ತತ್ರಾನ್ನದಾನಂ ಚ ನರಾಸ್ಯತ್ರಾಪಿನಿರ್ಭಯಾಃ ॥ ೭೯ ॥
ಮಾರ್ಗಶುಕ್ಲಚತುರ್ದಶ್ಯಾಂ ಕಪರ್ದೀಶ್ವರಸನ್ನಿಧೌ ।
ಸ್ನಾತ್ವಾನ್ಯತ್ರಾಪಿಮರಣಾನ್ನ ಪೈಶಾಚ್ಯಮವಾಪ್ನುಯುಃ ॥ ೮೦ ॥
ಇತ್ಯುಕ್ತ್ವಾ ದಿವ್ಯಪುರುಷೋ ಭೂಯೋ ಭೂಯೋ ನಮಸ್ಯ ತಂ ।
ತಪೋಧನಂ ಮಹಾಭಾಗೋ ದಿವ್ಯಾಂ ಗತಿಮವಾಪ್ತವಾನ್ ॥ ೮೧ ॥
ತಪೋಧನೋಽಪಿ ತದ್ದೃಷ್ಟ್ವಾ ಮಹಾಶ್ಚರ್ಯಂ ಘಟೋದ್ಭವ ।
ಕಪರ್ದೀಶ್ವರಮಾರಾಧ್ಯ ಕಾಲಾನ್ನಿರ್ವಾಣಮಾಪ್ತವಾನ್ ॥ ೮೨ ॥

---

೭೭. ಎಲೈ ತಪೋನಿಧಿಯೆ! ಮಾರ್ಗಶೀರ್ಷಮಾಸದ ಈ ಶುಕ್ಲ ಚತುರ್ದಶೀ ತಿಥಿಯ ದಿವಸದಲ್ಲಿ ಪಿಶಾಚಜನ್ಮ ನಿವರ್ತಕಗಳಾದ ಸ್ನಾನಾದಿ ಕಾರ್ಯಗಳನ್ನು ಈ ತೀರ್ಥದಲ್ಲಿ ಮಾಡಬೇಕು.

೭೮. ಯಾವ ಮನುಷ್ಯರು ಇಂತು ಒಂದು ವರ್ಷದವರೆಗೂ ಈ ತೀರ್ಥದ ಸೇವೆಯನ್ನು ಮಾಡುವರೊ, ಅವರು ಮಾತ್ರ ದಾನಗಳನ್ನು ಪ್ರತಿಗ್ರಹಿಸಿದ ಪಾತಕದಿಂದ ಮೋಕ್ಷವನ್ನು ಪಡೆಯುವರು.

೭೯. ಪಿಶಾಚಮೋಚನ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಕಪರ್ದೀಶ್ವರನಿಗೆ ನಮಸ್ಕಾರವನ್ನರ್ಪಿಸಿ ಅಲ್ಲಿ ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಲು ಮನುಷ್ಯನು ಬೇರೆ ಸ್ಥಳಗಳಲ್ಲಿಯೂ ಭಯರಹಿತನಾಗಿ ಬಾಳುವನು.

೮೦. ಈ ಮಾರ್ಗಶಿರ ಶುಕ್ಲ ಚತುರ್ದಶಿಯ ದಿನದಲ್ಲಿ ಕಪರ್ದೀಶ್ವರನ ಸನ್ನಿಧಿಯಲ್ಲಿರುವ ಈ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಮನುಷ್ಯರು ಬೇರೆ ಸ್ಥಳಗಳಲ್ಲಿ ಮರಣವನ್ನು ಹೊಂದಿದರೂ ಪಿಶಾಚಜನ್ಮಗಳನ್ನು ಪಡೆಯುವುದಿಲ್ಲ."

೮೧. ಇಂತೆಂದು ಹೇಳಿ ಮಹಾಭಾಗ್ಯಶಾಲಿಯಾದ ಆ ದಿವ್ಯ ಪುರುಷನು ಮತ್ತೆ ಮತ್ತೆ ತಪಸ್ಸಂಪನ್ನನಾದ ಆ ವಾಲ್ಮೀಕಿಗೆ ಪ್ರಣಾಮಗಳನ್ನು ಮಾಡಿ ದಿವ್ಯವಾದ ಸದ್ಗತಿಯನ್ನು ಪಡೆದನು.

೮೨. ಎಲೈ ಅಗಸ್ತ್ಯನೆ! ಆ ತಪಸ್ವಿಯೂ ಸಹ ಅತ್ಯಂತಾಶ್ಚರ್ಯಾನ್ವಿತವಾದ ವೃತ್ತಾಂತವನ್ನೆಲ್ಲ ಕಂಡು ಕಪರ್ದೀಶ್ವರನನ್ನೇ ಪೂಜಿಸುತ್ತ ಉಚಿತಕಾಲದಲ್ಲಿ ಮೋಕ್ಷವನ್ನು ಹೊಂದಿದನು.

ಪಿಶಾಚಮೋಚನಂ ತೀರ್ಥಂ ತದಾರಭ್ಯ ಮಹಾಮುನೇ ।
ವಾರಾಣಸ್ಯಾಂ ಪುರಾ ಖ್ಯಾತಿಮಗಮತ್ಸರ್ವಪಾಪಹೃತ್ ॥ ೮೩ ॥
ಪೈಶಾಚಮೋಚನೇ ತೀರ್ಥೇ ಸಂಭೋಜ್ಯ ಶಿವಯೋಗಿನಂ ।
ಕೋಟಿಭೋಜ್ಯಫಲಂ ಸಮ್ಯಗೇಕೈಕಪರಿಸಂಖ್ಯಯಾ ॥ ೮೪ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ನರೋ ನಿಯತಮಾನಸಃ ।
ಭೂತೈಃ ಪ್ರೇತೈಃ ಪಿಶಾಚೈಶ್ಚ ಕದಾಚಿನ್ನಾಭಿಭೂಯತೇ ॥ ೮೫ ॥
ಬಾಲಗ್ರಹಾಭಿಭೂತಾನಾಂ ಬಾಲಾನಾಂ ಶಾಂತಿಕಾರಕಂ ।
ಪಠನೀಯಂ ಪ್ರಯತ್ನೇನ ಮಹಾಖ್ಯಾನಮಿದಂ ಪರಂ ॥ ೮೬ ॥
ಇದಮಾಖ್ಯಾನಮಾಕರ್ಣ್ಯ ಗಚ್ಛನ್ದೇಶಾಂತರಂ ನರಃ ।
ಚೋರವ್ಯಾಘ್ರಪಿಶಾಚಾದ್ಯೈರ್ನಾಭಿಭೂಯೇತ ಕುತ್ರಚಿತ್ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಪಿಶಾಚಮೋಚನಮಹಿಮಾಕಥನಂ" ನಾಮ ಚತುಷ್ಪಂಚಾಶತ್ತಮೋಽಧ್ಯಾಯಃ

---

೮೩. ಮಹಾಮುನಿಯೆ! ಅಂದು ಮೊದಲಾಗಿ ಈ ಪಿಶಾಚಮೋಚನ ತೀರ್ಥವು ಕಾಶೀಕ್ಷೇತ್ರದಲ್ಲಿ ಸಕಲ ಪಾತಕಗಳನ್ನೂ ಪಡಗೆಡಿಸುವುದೆಂಬುದಾಗಿ ಅಪಾರವಾದ ಪ್ರಖ್ಯಾತಿಯನ್ನು ಪಡೆದಿರುವುದು.

೮೪. ಈ ಪಿಶಾಚಮೋಚನ ತೀರ್ಥದ ಸಮೀಪದಲ್ಲಿ ಶಿವಯೋಗಿಯಾದ ಒಬ್ಬೊಬ್ಬ ಮನುಷ್ಯನನ್ನು ಚೆನ್ನಾಗಿ ಭೋಜನಮಾಡಿಸುವುದರಿಂದಲೂ, ಒಂದು ಕೋಟಿ ಬ್ರಾಹ್ಮಣರಿಗೆ ಭೋಜನಮಾಡಿಸಿದ ಉತ್ತಮಫಲವು ದೊರಕುವುದು.

೮೫. ಈ ಅಧ್ಯಾಯವನ್ನು ಏಕಾಗ್ರಮನಸ್ಸಿನಿಂದ ಕೇಳುವ ಮನುಷ್ಯನು ಯಾವಾಗಲೂ ಭೂತಗಳಿಂದಲೂ, ಪ್ರೇತಗಳಿಂದಲೂ, ಪಿಶಾಚಗಳಿಂದಲೂ ತೊಂದರೆಗೀಡಾಗುವುದಿಲ್ಲ.

೮೬. ಅತ್ಯುತ್ತಮವಾದ ಈ ಇತಿಹಾಸವು ಪೂತನಾದಿ ಬಾಲಗ್ರಹಗಳಿಂದ ಪೀಡಿತರಾದ ಮಕ್ಕಳಿಗೆ ಶಾಂತಿಯನ್ನುಂಟುಮಾಡುವುದು. ಆದುದರಿಂದ ಇದನ್ನು ಪ್ರತಿಯೊಂದು ಮನೆಯಲ್ಲಿಯೂ ಪ್ರಯತ್ನಪೂರ್ವಕವಾಗಿ ಪಠನಮಾಡಬೇಕು.

೮೭. ಈ ಅಧ್ಯಾಯವನ್ನು ಕೇಳಿದ ಮನುಷ್ಯನು ದೇಶಾಂತರಗಳಲ್ಲಿ ಪ್ರಯಾಣವನ್ನು ಮಾಡುತ್ತಿದ್ದರೂ ಎಲ್ಲಿಯೂ ಚೋರರಿಂದಾಗಲಿ, ವ್ಯಾಘ್ರಾದಿ ಹಿಂಸ್ರಮೃಗಗಳಿಂದಾಗಲಿ, ಪಿಶಾಚಾದಿ ಭೂತಗಳಿಂದಾಗಲಿ ಪರಿಭವವನ್ನು ಪಡೆಯಲಾರನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಪಿಶಾಚಮೋಚನಮಹಿಮಾವರ್ಣನ"ವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶತ್ತಮೋಽಧ್ಯಾಯಃ

### ಕಾಶೀವರ್ಣನಂ— ಗಣೇಶಪ್ರೇಷಣಂ

ಸ್ಕಂದ ಉವಾಚ :—

ಅನ್ಯೇಽಪಿ ಯೇ ಗಣಾಸ್ತತ್ರ ಕಾಶ್ಯಾಂ ಲಿಂಗಾನಿ ಚಕ್ರಿರೇ ।
ತಾಂಶ್ಚ ತೇ ಕಥಯಿಷ್ಯಾಮಿ ಕುಂಭಯೋನೇ ನಿಶಾಮಯ ॥ ೧ ॥
ಗಣೇನ ಪಿಂಗಲಾಖ್ಯೇನ ಪಿಂಗಲಾಖ್ಯೇಶಸಂಜ್ಞಿತಂ ।
ಲಿಂಗಂ ಪ್ರತಿಷ್ಠಿತಂ ಶಂಭೋಃ ಕಪರ್ದೀಶಾದುದಗ್ದಿಶಿ ॥ ೨ ॥
ತಸ್ಯ ದರ್ಶನಮಾತ್ರೇಣ ಪಾಪಾನಾಂ ಜಾಯತೇ ಕ್ಷಯಃ ।
ವೀರಭದ್ರೋ ಮಹಾಪ್ರೀತೋ ದೇವದೇವಸ್ಯ ಶೂಲಿನಃ ॥ ೩ ॥
ವೀರಭದ್ರೇಶ್ವರಂ ಲಿಂಗಂ ಧ್ಯಾಯೇದದ್ಯಾಪಿ ನಿಶ್ಚಲಃ ।
ತಸ್ಯ ದರ್ಶನಮಾತ್ರೇಣ ವೀರಸಿದ್ಧಿಃ ಪ್ರಜಾಯತೇ ॥ ೪ ॥
ಅವಿಮುಕ್ತೇಶ್ವರಾತ್ಪಶ್ಚಾದ್ವೀರಭದ್ರೇಶ್ವರಂ ನರಃ ।
ಸಮರ್ಚ್ಯ ನ ರಣೇ ಭಂಗಂ ಕದಾಚಿದಪಿ ಚಾಪ್ನುಯಾತ್ ॥ ೫ ॥

---

## ಕನ್ನಡದ ಅನುವಾದ

### ಕಾಶೀಕ್ಷೇತ್ರ–ಗಣೇಶಪ್ರೇಷಣ ವರ್ಣನ

೧. ಸ್ಕಂದನು ಹೇಳುತ್ತಾನೆ:—ಕುಂಭೋದ್ಭವನೆ! ಆ ಕಾಶೀನಗರಿಯಲ್ಲಿ ಲಿಂಗಗಳನ್ನು ಸ್ಥಾಪನೆಮಾಡಿದ ಇತರ ಗಣಗಳು ಯಾರಿದ್ದರೊ, ಅವರನ್ನು ನಿನಗೆ ಕಥನಮಾಡುವೆನು. ಕೇಳು.

೨. ಕಪರ್ದೀಶ್ವರಲಿಂಗದ ಉತ್ತರ ದಿಕ್ಕಿನಲ್ಲಿ ಪಿಂಗಲನಾಮಕನಾದ ಗಣನಿಂದ ಪಿಂಗಲೇಶ್ವರನೆಂಬ ಹೆಸರಿನ ಒಂದು ಲಿಂಗವು ಸ್ಥಾಪಿಸಲ್ಪಟ್ಟಿತು.

೩–೪. ಅದನ್ನು ನೋಡುವ ಮಾತ್ರದಿಂದಲೇ ಸಮಸ್ತ ದುರಿತಗಳ ಕ್ಷಯವುಂಟಾಗುವುದು. ಅತ್ಯಂತ ಸಂತೋಷಗೊಂಡ ವೀರಭದ್ರನು ದೇವತಾಸಾರ್ವಭೌಮನಾದ ತ್ರಿಶೂಲಿಯ ಲಿಂಗವೊಂದನ್ನು ವೀರಭದ್ರೇಶ್ವರನೆಂಬ ಹೆಸರಿನಿಂದ ಸ್ಥಾಪಿಸಿ ಇಂದಿಗೂ ಸಹ ಅದನ್ನೇ ಏಕಾಗ್ರಚಿತ್ತದಿಂದ ಧ್ಯಾನಿಸುತ್ತಿರುವನು. ಅದರ ದರ್ಶನದಿಂದಲೇ ಮನುಷ್ಯನಿಗೆ ಪರಾಕ್ರಮಸಿದ್ಧಿಯುಂಟಾಗುವುದು.

೫. ಅವಿಮುಕ್ತೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿರುವ ವೀರಭದ್ರೇಶ್ವರನನ್ನು ಪೂಜೆಮಾಡಿದ ಮನುಷ್ಯನು ಎಂದಿಗೂ ಯುದ್ಧದಲ್ಲಿ ಪರಾಜಯವನ್ನು ಪಡೆಯಲಾರನು.

ವೀರಭದ್ರಃ ಸ್ವಯಂ ಸಾಕ್ಷಾದ್ವೀರಮೂರ್ತಿಧರೋ ಮುನೇ ।
ಸಂಹರೇದ್ವಿಘ್ನಸಂಘಾತಮವಿಮುಕ್ತನಿವಾಸಿನಾಂ ॥ ೬ ॥
ಭದ್ರಯಾ ಭದ್ರಕಾಲ್ಯಾ ಚ ಭಾರ್ಯಯಾ ಶುಭಯಾ ಯುತಂ ।
ವೀರಭದ್ರಂ ನರೋಽಭ್ಯರ್ಚ್ಯ ಕಾಶೀವಾಸಫಲಂ ಲಭೇತ್ ॥ ೭ ॥
ಕಿರಾತೇನ ಕಿರಾತೇಶಂ ಲಿಂಗಂ ಕಾಶ್ಯಾಂ ಪ್ರತಿಷ್ಠಿತಂ ।
ಕೇದಾರಾದ್ದಕ್ಷಿಣೇ ಭಾಗೇ ಭಕ್ತಾನಾಮಭಯಪ್ರದಂ ॥ ೮ ॥
ಚತುರ್ಮುಖೋ ಗಣಃ ಶ್ರೀಮಾನ್ ವೃದ್ಧಕಾಲೇಶಸನ್ನಿಧೌ ।
ಚತುರ್ಮುಖೇಶ್ವರಂ ಲಿಂಗಂ ಧ್ಯಾಯೇದದ್ಯಾಪಿ ನಿಶ್ಚಲಃ ॥ ೯ ॥
ಭಕ್ತಾಶ್ಚತುರ್ಮುಖೇ ಯಸ್ಯ ಚತುರಾನನವದ್ದಿವಿ ।
ಪೂಜ್ಯಂತೇ ಶಿವಸಂಘಾತೈಃ ಸರ್ವಭೋಗಸಮನ್ವಿತಾಃ ॥ ೧೦ ॥
ನಿಕುಂಭೇಶ್ವರಮಾಲೋಕ್ಯ ನಿಕುಂಭಗಣಪೂಜಿತಂ ।
ಪೂಜಯಿತ್ವಾ ವ್ರಜನ್ಗ್ರಾಮಂ ಕಾರ್ಯಸಿದ್ಧಿಮವಾಪ್ನುಯಾತ್ ।
ಕುಬೇರೇಶಸಮೀಪೇ ತು ಶಿವಲೋಕೇ ಮಹೀಯತೇ ॥ ೧೧ ॥

---

೬. ಅವಿಮುಕ್ತೇಶ್ವರ ಕ್ಷೇತ್ರದಲ್ಲಿ ವಾಸಮಾಡುವವರ ವಿಘ್ನಗಳ ಸಮೂಹವನ್ನೆಲ್ಲ ರೌದ್ರಾಕಾರವನ್ನು ಸ್ವೀಕರಿಸಿದ ವೀರಭದ್ರನು ತಾನೇ ಮುಂದೆ ಬಂದು ನಾಶಗೊಳಿಸುವನು.

೭. ಮಂಗಳಸ್ವರೂಪಿಣಿಯೂ, ಶುಭಪ್ರದಳೂ ಆದ ಭದ್ರಕಾಲಿಯೆಂಬ ಪತ್ನಿಯೊಡನಿರುವ ವೀರಭದ್ರನನ್ನು ಪೂಜಿಸಲು ನರನು ಯಾವಜ್ಜೀವವೂ ಕಾಶೀಕ್ಷೇತ್ರದಲ್ಲಿಯೇ ವಾಸಮಾಡಿದ ಪುಣ್ಯವನ್ನು ಹೊಂದುವನು.

೮. ಕಿರಾತನೆಂಬ ಗಣಪನಿಂದ ಕಾಶಿಯಲ್ಲಿ ಕೇದಾರೇಶ್ವರನಿಗೆ ದಕ್ಷಿಣದಲ್ಲಿ ಭಕ್ತರಿಗೆಲ್ಲ ಅಭಯಪ್ರದವಾದೊಂದು ಲಿಂಗವು ಕಿರಾತೇಶ್ವರನೆಂಬ ಹೆಸರಿನಿಂದ ಸ್ಥಾಪನೆಮಾಡಲ್ಪಟ್ಟಿತು.

೯. ಗುಣಸಂಪನ್ನನಾದ ಚತುರ್ಮುಖನೆಂಬ ಗಣನಾಯಕನು ವೃದ್ಧಕಾಲೇಶ್ವರನ ಸನ್ನಿಧಿಯಲ್ಲಿ ಚತುರ್ಮುಖೇಶ್ವರನೆಂಬ ಲಿಂಗವನ್ನು ಪ್ರತಿಷ್ಠೆಮಾಡಿ ಇಲ್ಲಿಯವರೆಗೂ ನಿಶ್ಚಲಮನಸ್ಸಿನಿಂದ ಅಲ್ಲಿಯೇ ಧ್ಯಾನಾಸಕ್ತನಾಗಿರುವನು.

೧೦. ಈ ಚತುರ್ಮುಖೇಶ್ವರನ ಭಕ್ತರೆಲ್ಲರೂ ಸ್ವರ್ಗಲೋಕಕ್ಕೆ ಹೋಗಿ ಸಕಲ ಭೋಗಗಳನ್ನೂ ಅನುಭವಿಸುತ್ತ ಚತುರ್ಮುಖನಾದ ಬ್ರಹ್ಮದೇವನಂತೆಯೇ ಸಕಲ ದೇವತೆಗಳಿಂದಲೂ ಪೂಜೆಯನ್ನು ಕೈಗೊಳ್ಳುತ್ತಿರುವರು.

೧೧. ನಿಕುಂಭನೆಂಬ ಗಣೇಶ್ವರನಿಂದ ಪೂಜಿತವಾದ ನಿಕುಂಭೇಶ್ವರನನ್ನು ನೋಡಿ ಪೂಜೆಯನ್ನು ಮಾಡಿ ತನ್ನ ಗ್ರಾಮಕ್ಕೆ ಹಿಂದಿರುಗಲು ಸಕಲ ಕಾರ್ಯಗಳಲ್ಲಿಯೂ ಸಿದ್ಧಿಯನ್ನು ಪಡೆಯುವನು. ಕುಬೇರೇಶ್ವರನ ಸಮೀಪದಲ್ಲಿರುವ ಈ ಲಿಂಗದ ಪರಿಚರ್ಯೆಯಿಂದ ಶಿವಲೋಕದಲ್ಲಿ ಪೂಜ್ಯತೆಯನ್ನೂ ಸಂಪಾದಿಸುವನು.

ಪಂಚಾಕ್ಷೇಶಂ ಮಹಾಲಿಂಗಂ ಮಹಾದೇವಸ್ಯ ದಕ್ಷಿಣೇ ।
ಸಮಭ್ಯರ್ಚ್ಯ ನರಃ ಕಾಶ್ಯಾಂ ಜಾತಿಸ್ಮೃತಿಮವಾಪ್ನುಯಾತ್ ॥ ೧೨ ॥
ಭಾರಭೂತೇಶ್ವರಂ ಲಿಂಗಂ ಭಾರಭೂತಗಣಾರ್ಚಿತಂ ।
ಅಂತರ್ಗೃಹೋತ್ತರದ್ವಾರಿ ಧ್ಯಾತ್ವಾ ಶಿವಪುರೇ ವಸೇತ್ ॥ ೧೩ ॥
ಭಾರಭೂತೇಶ್ವರಂ ಲಿಂಗಂ ಯೈಃ ಕಾಶ್ಯಾಂ ನ ವಿಲೋಕಿತಂ ।
ಭಾರಭೂತಾಃ ಪೃಥಿವ್ಯಾಸ್ತೇಽವಕೇಶಿನ ಇವ ದ್ರುಮಾಃ ॥ ೧೪ ॥
ಗಣೇನ ತ್ರ್ಯಕ್ಷಸಂಜ್ಞೇನ ಲಿಂಗಂ ತ್ರ್ಯಕ್ಷೇಶ್ವರಂ ಪರಂ ।
ತ್ರಿಲೋಚನಪುರೋಭಾಗೇ ಕೀಲ್ಯೇತಾದ್ಯಾಪಿ ಕುಂಭಜ ॥ ೧೫ ॥
ತಸ್ಯ ಲಿಂಗಸ್ಯ ಯೇ ಭಕ್ತಾಸ್ತೇ ತು ದೇಹಾವಸಾನತಃ ।
ತ್ರ್ಯಕ್ಷಾ ಏವ ಪ್ರಜಾಯಂತೇ ನಾತ್ರ ಕಾರ್ಯಾ ವಿಚಾರಣಾ ॥ ೧೬ ॥
ಕ್ಷೇಮಕೋ ನಾಮ ಗಣಪಃ ಕಾಶ್ಯಾಂ ಮೂರ್ತಿಧರಃ ಸ್ವಯಂ ।
ವಿಶ್ವೇಶ್ವರಂ ಸರ್ವಗತಂ ಧ್ಯಾಯೇದದ್ಯಾಪಿ ನಿಶ್ಚಲಃ ॥ ೧೭ ॥

---

೧೨. ಮಹಾದೇವನಿಗೆ ದಕ್ಷಿಣದಿಕ್ಕಿನಲ್ಲಿರುವ ಪಂಚಾಕ್ಷರೇಶ್ವರನೆಂಬ ಮಹಾಲಿಂಗವನ್ನು ಚೆನ್ನಾಗಿ ಪೂಜಿಸಿದ ನರನು ಕಾಶಿಕ್ಷೇತ್ರದಲ್ಲಿ ಪೂರ್ವಜನ್ಮಗಳ ಸ್ಮರಣೆಯನ್ನು ಪಡೆಯಲು ಸಮರ್ಥನಾಗುವನು.

೧೩. ಅಂತರ್ಗೃಹದ ಉತ್ತರದ ಬಾಗಿಲಿನಲ್ಲಿ ಭಾರಭೂತಗಣನು ಪ್ರತಿಷ್ಠೆ ಮಾಡಿರುವ ಭಾರಭೂತೇಶ್ವರ ಲಿಂಗವನ್ನು ಧ್ಯಾನಮಾಡಲು ಮನುಷ್ಯನು ಶಿವನಗರಿಯಲ್ಲಿ ಶಾಶ್ವತವಾಗಿ ವಾಸಮಾಡುವನು.

೧೪. ಕಾಶೀಕ್ಷೇತ್ರದಲ್ಲಿರುವ ಭಾರಭೂತೇಶ್ವರಲಿಂಗವು ಯಾರಿಂದ ನೋಡಲ್ಪಡುವುದಿಲ್ಲವೊ, ಅವರು ನಿಜವಾಗಿಯೂ ಪುಷ್ಪಫಲಗಳನ್ನು ಕೊಡದಿರುವ ವೃಕ್ಷಗಳಂತೆ ಭೂದೇವಿಗೆ ಕೇವಲ ಭಾರಪ್ರಾಯರೇ ಆಗಿರುವರು.

೧೫. ತ್ರ್ಯಕ್ಷನೆಂಬ ಹೆಸರಿನ ಗಣನಾಯಕನಿಂದ ಉತ್ತಮವಾದ ಲಿಂಗವು ಸ್ಥಾಪಿತವಾಗಿರುವುದು. ಎಲೈ ಅಗಸ್ತ್ಯನೆ! ತ್ರಿಲೋಚನೇಶ್ವರನಿಗೆ ಎದುರು ಭಾಗದಲ್ಲಿರುವ ಈ ಲಿಂಗವು ಆತನಿಂದ ಇಂದಿಗೂ ಧ್ಯಾನಿಸಲ್ಪಡುತ್ತಿರುವುದು.

೧೬. ಆ ಲಿಂಗದ ಭಕ್ತರು ಯಾರು ಇರುವರೊ, ಅವರೆಲ್ಲರೂ ದೇಹವನ್ನು ತ್ಯಜಿಸಿದಮೇಲೆ ಮೂರು ಕಣ್ಣುಗಳುಳ್ಳವರಾಗಿಯೇ ಮಾರ್ಪಡುವರು. ಈ ವಿಷಯದಲ್ಲಿ ಸಂದೇಹವಿಲ್ಲವು.

೧೭. ಕ್ಷೇಮಕನೆಂಬ ಹೆಸರಿನ ಗಣನಾಥನು ಕಾಶಿಯಲ್ಲಿ ತಾನೇ ಮೂರ್ತೀಭವಿಸಿದವನಾಗಿ ಸರ್ವವ್ಯಾಪಿಯಾದ ವಿಶ್ವೇಶ್ವರನನ್ನು ಇಂದಿಗೂ ನಿಶ್ಚಲವಾದ ಭಕ್ತಿಯಿಂದ ಧ್ಯಾನಿಸುತ್ತಿರುವನು.

ಕ್ಷೇಮುಕಂ ಪೂಜಯೇದ್ಯಸ್ತು ವಾರಾಣಸ್ಯಾಂ ಮಹಾಗಣಂ ।
ವಿಘ್ನಾಸ್ತಸ್ಯ ಪ್ರಲೀಯಂತೇ ಕ್ಷೇಮಂ ಸ್ಯಾಚ್ಚ ಪದೇ ಪದೇ ॥ ೧೮ ॥
ದೇಶಾಂತರಂ ಗತೇ ಯಸ್ತು ತಸ್ಯಾಗಮನಕಾಮ್ಯಯಾ ।
ಕ್ಷೇಮುಕಃ ಪೂಜನೀಯೋಽತ್ರ ಕ್ಷೇಮೇಣಾಶು ಸ ಆವ್ರಜೇತ್ ॥ ೧೯ ॥
ಲಾಂಗಲೀಶ್ವರಮಾಲೋಕ್ಯ ಲಿಂಗಂ ಲಾಂಗಲಿನಾರ್ಚಿತಂ ।
ವಿಶ್ವೇಶಾದುತ್ತರೇ ಭಾಗೇ ನ ನರೋ ರೋಗಭಾಗ್ಭವೇತ್ ॥ ೨೦ ॥
ಲಾಂಗಲೀಶಂ ಸಕೃತ್ಪೂಜ್ಯ ಪಂಚಲಾಂಗಲದಾನಜಂ ।
ಫಲಂ ಪ್ರಾಪ್ನೋತ್ಯವಿಕಲಂ ಸರ್ವಸಂಪತ್ಕರಂ ಪರಂ ॥ ೨೧ ॥
ವಿರಾಧೇಶ್ವರಮಾರಾಧ್ಯ ವಿರಾಧಗಣಪೂಜಿತಂ ।
ಸರ್ವಾಪರಾಧಯುಕ್ತೋಽಪಿ ನಾಪರಾಧ್ಯತಿ ಕುತ್ರಚಿತ್ ॥ ೨೨ ॥
ದಿನೇ ದಿನೇಽಪರಾಧೋ ಯಃ ಕ್ರಿಯತೇ ಕಾಶಿವಾಸಿಭಿಃ ।
ಸ ಯಾತಿ ಸಂಕ್ಷಯಂ ಕ್ಷಿಪ್ರಂ ವಿರಾಧೇಶಸಮರ್ಚನಾತ್ ॥ ೨೩ ॥

---

೧೮. ವಾರಾಣಸಿಯಲ್ಲಿ ನೆಲಸಿರುವ ಮಹಾ ಗಣನಾಯಕನಾದ ಕ್ಷೇಮುಕನನ್ನು ಯಾವನು ಪೂಜಿಸುವನೊ, ಅವನ ವಿಘ್ನಗಳೆಲ್ಲವೂ ನಾಶವನ್ನು ಹೊಂದುವುವು. ಮತ್ತು ಹೆಜ್ಜೆಹೆಜ್ಜೆಗೂ ಅವನಿಗೆ ಮಂಗಳವೇ ಉಂಟಾಗುತ್ತಿರುವುದು.

೧೯. ದೇಶಾಂತರಕ್ಕೆ ಹೋಗಿರುವ ಮನುಷ್ಯನು ಹಿಂದಕ್ಕೆ ಬರಬೇಕೆಂಬ ಅಪೇಕ್ಷೆಯಿದ್ದಲ್ಲಿ ಕಾಶಿಯಲ್ಲಿ ಕ್ಷೇಮುಕನನ್ನು ಪೂಜಿಸತಕ್ಕದ್ದು. ದೇಶಾಟನದಲ್ಲಿರುವ ಮನುಷ್ಯನು ಶೀಘ್ರದಲ್ಲಿಯೇ ಹಿಂದಿರುಗುವನು.

೨೦. ವಿಶ್ವೇಶ್ವರನಿಗೆ ಉತ್ತರದಲ್ಲಿ ಲಾಂಗಲಿನಾಮಕವಾದ ಗಣನಿಂದ ಸ್ಥಾಪಿಸಲ್ಪಟ್ಟ ಲಾಂಗಲೀಶ್ವರಲಿಂಗವನ್ನು ನೋಡಿದ ಮನುಷ್ಯನು ಎಂದಿಗೂ ದೇಹದಲ್ಲಿ ರೋಗಗಳನ್ನನುಭವಿಸುವುದಿಲ್ಲ.

೨೧. ಲಾಂಗಲೀಶನನ್ನು ಒಮ್ಮೆ ಪೂಜೆಮಾಡುವುದರಿಂದಲೇ ಐದು ನೇಗಿಲುಗಳನ್ನು ದಾನಮಾಡುವುದರಿಂದುಂಟಾದ ಸಮಗ್ರಫಲವನ್ನೂ ಪಡೆಯಬಹುದು. ಈ ಪೂಜೆಯು ಸಕಲೈಶ್ವರ್ಯಗಳನ್ನು ಪಡೆಯುವ ಉತ್ತಮೋಪಾಯವಾಗಿರುವುದು.

೨೨. ವಿರಾಧಗಣನಿಂದ ಪೂಜಿತನಾದ ವಿರಾಧೇಶ್ವರನನ್ನು ಪೂಜಿಸಿದವನು ಸಕಲಾಪರಾಧಗಳಿಂದ ಕೂಡಿದವನಾದರೂ ಯಾರಲ್ಲಿಯೂ ಅಪರಾಧಿಯೆಂದು ಪರಿಗಣಿಸಲ್ಪಡುವುದಿಲ್ಲ.

೨೩. ಕಾಶೀನಿವಾಸಿಗಳಾದವರು ದಿನದಿನದಲ್ಲಿಯೂ ಮಾಡುವ ಅಪರಾಧವೆಲ್ಲವೂ ವಿರಾಧೇಶ್ವರನ ಪೂಜೆಯಿಂದ ಕ್ಷಿಪ್ರದಲ್ಲಿಯೇ ನಾಶವನ್ನು ಹೊಂದುತ್ತಲಿರುವುದು.

ನೈರ್ಋತೇ ದಂಡಪಾಣೇಸ್ತು ವಿರಾಧೇಶಂ ಪ್ರಯತ್ನತಃ ।
ನತ್ವಾ ಸರ್ವಾಪರಾಧೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨೪ ॥
ಸುಮುಖೇಶಂ ಮಹಾಲಿಂಗಂ ಸುಮುಖಾಖ್ಯಗಣಾರ್ಚಿತಂ ।
ಪಶ್ಚಿಮಾಭಿಮುಖಂ ಲಿಂಗಂ ದೃಷ್ಟ್ವಾ ಪಾಪೈಃ ಪ್ರಮುಚ್ಯತೇ ॥ ೨೫ ॥
ಸ್ನಾತ್ವಾ ಪಿಲಿಪಿಲಾತೀರ್ಥೇ ಸುಮುಖೇಶಂ ವಿಲೋಕ್ಯ ಚ ।
ಸದೈವ ಸುಮುಖಂ ಪಶ್ಯೇದ್ಧರ್ಮರಾಜಂ ನ ದುರ್ಮುಖಂ ॥ ೨೬ ॥
ಆಷಾಢಿನಾರ್ಚಿತಂ ಲಿಂಗಮಾಷಾಢೀಶ್ವರಸಂಜ್ಞಕಂ ।
ದೃಷ್ಟ್ವಾಷಾಢ್ಯಾಂ ನರೋ ಭಕ್ತ್ಯಾ ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೨೭ ॥
ಉದೀಚ್ಯಾಂ ಭಾರಭೂತೇಶಾದಾಷಾಢೀಶಂ ಸಮರ್ಚಯನ್ ।
ಆಷಾಢ್ಯಾಂ ಪಂಚದಶ್ಯಾಂ ವೈ ನ ಪಾಪೈಃ ಪರಿತಪ್ಯತೇ ॥ ೨೮ ॥
ಶುಚಿ ಶುಕ್ಲಚತುರ್ದಶ್ಯಾಂ ಪಂಚದಶ್ಯಾಮಥಾಪಿ ವಾ ।
ಕೃತ್ವಾ ಸಾಂವತ್ಸರೀಂ ಯಾತ್ರಾಮನೇನಾ ಜಾಯತೇ ನರಃ ॥ ೨೯ ॥

---

೨೪. ದಂಡಪಾಣಿಗೆ ನೈರ್ಋತ್ಯದಲ್ಲಿ ನೆಲಸಿರುವ ವಿರಾಧೇಶ್ವರನನ್ನು ಕಂಡು ಪ್ರಯತ್ನಪೂರ್ವಕವಾಗಿ ನಮಸ್ಕರಿಸಲು ಭಕ್ತನು ಸಕಲಾಪರಾಧಗಳಿಂದಲೂ ಮುಕ್ತನಾಗುವನೆಂಬುದರಲ್ಲಿ ಸಂದೇಹವಿಲ್ಲ.

೨೫. ಸುಮುಖನೆಂಬ ಗಣನು ಪೂಜಿಸಿದ ಸುಮುಖೇಶ್ವರನೆಂಬ ಪಶ್ಚಿಮಾಭಿಮುಖವಾದ ಲಿಂಗವನ್ನು ನೋಡಲು ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

೨೬. ಪಿಲಿಪಿಲಾ ತೀರ್ಥದಲ್ಲಿ ಸ್ನಾನವನ್ನು ಮಾಡಿ ಸುಮುಖೇಶ್ವರನ ದರ್ಶನವನ್ನು ಮಾಡಲು ಯಮಧರ್ಮರಾಜನನ್ನು ಯಾವಾಗಲೂ ಸುಮುಖನನ್ನಾಗಿಯೇ ನೋಡಬಹುದು. ಆತನೆಂದಿಗೂ ಕ್ರುದ್ಧಮುಖನಾಗಿರುವುದಿಲ್ಲವು.

೨೭. ಆಷಾಢಿಯಿಂದ ಪೂಜಿಲಸ್ಪಟ್ಟ ಆಷಾಢೀಶ್ವರ ನಾಮಕವಾದ ಲಿಂಗವನ್ನು ಆಷಾಢಮಾಸದ ಪೌರ್ಣಮಿಯ ದಿನದಲ್ಲಿ ಭಕ್ತಿಯಿಂದ ದರ್ಶಿಸಿದ ಮಾನವನು ಸರ್ವಪಾತಕಗಳಿಂದಲೂ ಮುಕ್ತನಾಗುವನು.

೨೮. ಭಾರಭೂತೇಶ್ವರನಿಂದ ಉತ್ತರದಿಕ್ಕಿನಲ್ಲಿರುವ ಆಷಾಢೀಶ್ವರನನ್ನು ಆಷಾಢಮಾಸದ ಪೌರ್ಣಮಿಯ ದಿನದಲ್ಲಿ ಪೂಜೆಮಾಡಲು ಯಾವ ಪಾತಕಗಳಿಂದಲೂ ಮಾನವನು ಕ್ಲೇಶಗೊಳ್ಳುವುದಿಲ್ಲ.

೨೯. ಆಷಾಢ ಶುಕ್ಲ ಚತುರ್ದಶಿಯಲ್ಲಾಗಲಿ, ಪೌರ್ಣಮಿಯಲ್ಲಾಗಲಿ ಆಷಾಢೀಶ್ವರನಿಗೆ ವಾರ್ಷಿಕಯಾತ್ರೆಯನ್ನು ನೆರವೇರಿಸಲು ಮನುಷ್ಯನು ಪಾಪರಹಿತನಾಗುವನು.

ಸ್ಕಂದ ಉವಾಚ :—
ಮುನೇ ಗಣೇಷು ಚೈತೇಷು ವಾರಾಣಸ್ಯಾಂ ಸ್ಥಿತೇಷ್ವಿತಿ ।
ಸ್ವನಾಮ್ನಾ ಸ್ಥಾಪ್ಯ ಲಿಂಗಾನಿ ವಿಶ್ವೇಶಪರಿತುಷ್ಟಯೇ ॥ ೩೦ ॥
ವಿಶ್ವೇಶಶ್ಚಿಂತಯಾಂಚಕ್ರೇ. ಪುನಃ ಕಾಶೀಪ್ರವೃತ್ತಯೇ ।
ಕಂ ವಾ ಹಿತಂ ಪ್ರಹಿತ್ಯಾದ್ಯ ನಿರ್ವೃತಿಂ ಪರಮಾಂ ಭಜೇ ॥ ೩೧ ॥
ಯೋಗಿನ್ಯಸ್ತಿಗ್ಮಗುರ್ವೇಧಾಃ ಶಂಕುಕರ್ಣಮುಖಾ ಗಣಾಃ ।
ವ್ಯಾವೃತ್ಯ ನಾಗತಾಃ ಕಾಶ್ಯಾಃ ಸಿಂಧುಗಾ ಇವ ಸಿಂಧವಃ ॥ ೩೨ ॥
ಧ್ರುವಂ ಕಾಶ್ಯಾಂ ಪ್ರವಿಷ್ಟಾ ಯೇ ತೇ ಪ್ರವಿಷ್ಟಾ ಮಮೋದರೇ ।
ತೇಷಾಂ ವಿನಿರ್ಗಮೋ ನಾಸ್ತಿ ದೀಪ್ತೇಽಗ್ನೌ ಹವಿಷಾಮಿವ ॥ ೩೩ ॥
ಯೇಷಾಂ ಹಿ ಸಂಸ್ಥಿತಿಃ ಕಾಶ್ಯಾಂ ಲಿಂಗಾರ್ಚನರತಾತ್ಮನಾಂ ।
ತ ಏವ ಮಮ ಲಿಂಗಾನಿ ಜಂಗಮಾನಿ ನ ಸಂಶಯಃ ॥ ೩೪ ॥
ಸ್ಥಾವರಾ ಜಂಗಮಾಃ ಕಾಶ್ಯಾಮಚೇತನಸಚೇತನಾಃ ।
ಸರ್ವೇ ಮಮೈವ ಲಿಂಗಾನಿ ತೇಭ್ಯೋ ದ್ರುಹ್ಯಂತಿ ದುರ್ಧಿಯಃ ॥ ೩೫ ॥

---

೩೦. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮುನಿಯೆ! ಇಂತು ಈ ಗಣಗಳೆಲ್ಲರೂ ವಾರಾಣಸಿಯಲ್ಲಿಯೇ ನೆಲಸಿ ವಿಶ್ವೇಶ್ವರನನ್ನು ಸಂತೋಷಗೊಳಿಸಲೋಸುಗವಾಗಿ ತಮ್ಮತಮ್ಮ ಹೆಸರುಗಳಿಂದ ಲಿಂಗಗಳನ್ನು ಸ್ಥಾಪಿಸಿ ಪೂಜಿಸುತ್ತಿದ್ದರು.

೩೧. ವಿಶ್ವೇಶ್ವರನು ಪುನಃ ಕಾಶಿಗೆ ಯಾರನ್ನು ಕಳುಹಿಸಬೇಕೆಂಬುದಾಗಿ ಚಿಂತಿಸತೊಡಗಿದನು. ನನಗೆ ಹಿತತಮನಾದ ಯಾವನನ್ನು ಕಳುಹಿಸಿ ನಾನು ಪರಮಸೌಖ್ಯವನ್ನು ಪಡೆಯಲಿ?

೩೨. ಯೋಗಿನಿಯರೂ, ಸೂರ್ಯನೂ, ಬ್ರಹ್ಮದೇವನೂ, ಶಂಕುಕರ್ಣನೇ ಮೊದಲಾದ ಗಣಗಳೂ ಸಮುದ್ರದಲ್ಲಿ ಐಕ್ಯವನ್ನು ಹೊಂದಿದ ನದಿಗಳಂತೆ ಕಾಶಿಯಲ್ಲಿ ಸೇರಿ ಇಂದಿನವರೆಗೂ ಹಿಂದಿರುಗಿಬರಲಿಲ್ಲ.

೩೩. ನಿಜವಾಗಿಯೂ ಕಾಶಿಯನ್ನು ಯಾರು ಪ್ರವೇಶಿಸುವರೊ ಅವರು ನನ್ನ ಉದರವನ್ನೇ ಪ್ರವೇಶಿಸುವರು. ಪ್ರಜ್ವಲಿಸುತ್ತಿರುವ ಬೆಂಕಿಯಲ್ಲಿ ಹಾಕಿದ ಹವಿಸ್ಸಿನಂತೆ ಅವರು ಪುನಃ ಹೊರಕ್ಕೆ ಬರಲು ಸಾಧ್ಯವಾಗುವುದಿಲ್ಲ.

೩೪. ಲಿಂಗಪೂಜೆಯಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ ಯಾರು ಕಾಶಿಯಲ್ಲಿಯೇ ನೆಲಸಿರುವರೊ, ಅವರೇ ನನ್ನ ಜಂಗಮಲಿಂಗರೂಪಿಗಳೆಂಬುದರಲ್ಲಿ ಸಂದೇಹವಿಲ್ಲ.

೩೫. ಕಾಶೀಕ್ಷೇತ್ರದಲ್ಲಿ ನಿಶ್ಚೇತನಗಳಾದ ಸ್ಥಾವರ ಪದಾರ್ಥಗಳು ಮತ್ತು ಸಚೇತನಗಳಾದ ಜಂಗಮ ಪ್ರಾಣಿಗಳು—ಎಲ್ಲವೂ ನನ್ನ ಲಿಂಗಗಳೇ ಆಗಿರುವುವು. ಆದುದರಿಂದ ಅವುಗಳಿಗೆ ದ್ರೋಹವನ್ನೆಣಿಸುವವರು ದುಷ್ಟಬುದ್ಧಿಗಳು.

ವಾಚಿ ವಾರಾಣಸೀ ಯೇಷಾಂ ಶ್ರುತೌ ವೈಶ್ವೇಶ್ವರೀ ಕಥಾ ।
ತ ಏವ ಕಾಶೀಲಿಂಗಾನಿ ವರಾಣ್ಯರ್ಚ್ಯಾನ್ಯಹಂ ಯಥಾ ॥ ೩೬ ॥
ವಾರಾಣಸೀತಿ ಕಾಶೀತಿ ರುದ್ರಾವಾಸ ಇತಿ ಸ್ಫುಟಂ ।
ಮುಖಾದ್ವಿನಿರ್ಗತಂ ಯೇಷಾಂ ತೇಷಾಂ ನ ಪ್ರಭವೇದ್ಯಮಃ ॥ ೩೭ ॥
ಆನಂದಕಾನನಂ ಪ್ರಾಪ್ಯ ಯೇ ನಿರಾನಂದಭೂಮಿಕಂ ।
ಅನ್ಯಾಂ ಹೃದಾಪಿ ವಾಂಛಂತಿ ನಿರಾನಂದಾಃ ಸದಾತ್ರ ತೇ ॥ ೩೮ ॥
ಅದ್ಯೈವ ವಾಸ್ತು ಮರಣಂ ಬಹುಕಾಲಾಂತರೇಽಪಿ ವಾ ।
ಕಲಿಕಾಲಭಿಯಾ ಪುಂಸಾಂ ಕಾಶೀ ತ್ಯಾಜ್ಯಾ ನ ಕರ್ಹಿಚಿತ್ ॥ ೩೯ ॥
ಅವಶ್ಯಂ ಭಾವಿನೋ ಭಾವಾ ಭವಿಷ್ಯಂತಿ ಪದೇ ಪದೇ ।
ಸಲಕ್ಷ್ಮೀನಿಲಯಾಂ ಕಾಶೀಂ ತೇ ತ್ಯಜಂತಿ ಕುತೋಽಧಿಯಃ ॥ ೪೦ ॥
ವರಂ ವಿಘ್ನಸಹಸ್ರಾಣಿ ಸೋಢವ್ಯಾನಿ ಪದೇ ಪದೇ ।
ಕಾಶ್ಯಾಂ ನಾನ್ಯತ್ರ ನಿರ್ವಿಘ್ನಂ ವಾಂಛೇದ್ರಾಜ್ಯಮಪಿ ಕ್ವಚಿತ್ ॥ ೪೧ ॥

---

೩೬. ಯಾರ ಮಾತುಗಳಲ್ಲಿ ವಾರಾಣಸೀಕಥನವಿರುವುದೊ, ಕಿವಿಗಳಲ್ಲಿ ವಿಶ್ವೇಶ್ವರನ ಸಚ್ಚರಿತ್ರವು ಶ್ರುತವಾಗಿರುವುದೊ, ಅವರೇ ಸರ್ವೋತ್ತಮರಾದ ಕಾಶೀ ಲಿಂಗರೂಪಿಗಳು; ನನ್ನ ಹಾಗೆಯೇ ನಿತ್ಯವೂ ಪೂಜಾರ್ಹರಾಗಿರುವರು.

೩೭. ವಾರಾಣಸಿಯೆಂದೂ, ಕಾಶಿಯೆಂದೂ, ರುದ್ರಾವಾಸವೆಂದೂ ನಿರಂತರವೂ ಈ ಕ್ಷೇತ್ರದ ನಾಮುಗಳನ್ನು ಯಾರು ಉಚ್ಚರಿಸುತ್ತಿರುವರೊ, ಅವರಿಗೆ ಯಮಧರ್ಮರಾಯನ ದರ್ಶನವಾಗುವುದಿಲ್ಲವೆಂಬುದು ದಿಟವು.

೩೮. ಆನಂದವನವನ್ನು ಸೇರಿ ಯಾವ ಮಾನವರು ನಿರಾನಂದ ಭೂಮಿಯಾದ ಬೇರೊಂದು ಸ್ಥಳವನ್ನು ಮನಸ್ಸಿನಲ್ಲಿಯಾದರೂ ಅಪೇಕ್ಷಿಸಿದರೆ, ಅವರು ಈ ಲೋಕದಲ್ಲಿ ಯಾವಾಗಲೂ ದುಃಖಭಾಗಿಗಳೇ ಆಗಿರುವರು.

೩೯. ಮರಣವು ಇಂದೇ ಉಂಟಾಗಲಿ, ಅಥವ ಬಹಳಕಾಲದ ಮೇಲಾದರೂ ಸಂಭವಿಸಲಿ. ಕಲಿಯುಗದ ಭಯದಿಂದ ಕೂಡಿರುವ ಮನುಷ್ಯರು ಎಂದಿಗೂ ಕಾಶೀಕ್ಷೇತ್ರವನ್ನು ತ್ಯಜಿಸಬಾರದು.

೪೦. ಮುಂದಾಗಬೇಕಾದುವುಗಳೆಲ್ಲವೂ ಅಡಿಗಡಿಗೂ ಖಂಡಿತವಾಗಿಯೂ ಸಂಭವಿಸುತ್ತಲೇ ಇರುವುವು. ಆದುದರಿಂದ ಅಲ್ಪಬುದ್ಧಿಗಳಾದವರು ಲಕ್ಷ್ಮೀನಿವಾಸವೆನಿಸಿದ ಕಾಶೀಕ್ಷೇತ್ರವನ್ನು ಏಕೆ ತ್ಯಜಿಸುವರು?

೪೧. ಅಡಿಗಡಿಗೂ ಸಹಸ್ರಸಂಖ್ಯಾತಗಳಾದ ವಿಘ್ನಗಳೊದಗುತ್ತಿದ್ದರೂ ಅವುಗಳನ್ನು ಸಹಿಸಿಕೊಂಡು ಕಾಶಿಯಲ್ಲಿ ವಾಸಮಾಡುವುದು ಉತ್ತಮವೇ ಹೊರತು ಇತರ ಸ್ಥಳಗಳಲ್ಲಿ ನಿರ್ವಿಘ್ನವಾದ ರಾಜ್ಯಾಧಿಕಾರವು ಲಭಿಸಿದರೂ ಅಪೇಕ್ಷಿಸಬಾರದು.

ಕಿಯಾನ್ನಿಮೇಷಸಂಭೋಗ್ಯಾಃ ಸಂತಿ ಲಕ್ಷ್ಮ್ಯಃ ಪದೇ ಪದೇ ।
ಪರಂ ನಿರಂತರಮಖಾಽಮುತ್ರಾಪ್ಯತ್ರಾಪಿ ಕಾಶಿಕಾ ॥ ೪೨ ॥
ವಿಶ್ವನಾಥೋ ಹ್ಯಹಂ ನಾಥಃ ಕಾಶಿಕಾ ಮುಕ್ತಿಕಾಶಿಕಾ ।
ಸುಧಾತರಂಗಾ ಸ್ವರ್ಗಂಗಾ ತ್ರಯ್ಯೇಷಾ ಕಿನ್ನ ಯಚ್ಛತಿ ॥ ೪೩ ॥
ಪಂಚಕ್ರೋಶ್ಯಾ ಪರಿಮಿತಾ ತನುರೇಷಾ ಪುರೀ ಮಮ ।
ಅವಿಚ್ಛಿನ್ನಪ್ರಮಾಣರ್ಧಿರ್ಭಕ್ತನಿರ್ವಾಣಕಾರಣಂ ॥ ೪೪ ॥
ಸಂಸಾರಭಾರಖಿನ್ನಾನಾಂ ಯಾತಾಯಾತಕೃತಾಂ ಸದಾ ।
ಏಕೈವ ಮೇ ಪುರೀ ಕಾಶೀ ಧ್ರುವಂ ವಿಶ್ರಾಮಭೂಮಿಕಾ ॥ ೪೫ ॥
ಮಂಡಪಃ ಪಂಕವಲ್ಲೀನಾಂ ಮನೋರಥಫಲೈರಲಂ ।
ಫಲಿತಃ ಕಾಶಿಕಾಖ್ಯೋಽಯಂ ಸಂಸಾರಾಧ್ವಜುಷಾಂ ಸದಾ ॥ ೪೬ ॥
ಚಕ್ರವರ್ತೇರಿಯಂ ಛತ್ರಂ ವಿಚಿತ್ರಂ ಸರ್ವತಾಪಹೃತ್ ।
ಕಾಶೀ ನಿರ್ವಾಣರಾಜಸ್ಯ ಮಮ ಶೂಲೋಚ್ಚದಂಡವತ್ ॥ ೪೭ ॥

---

೪೨. ಐಶ್ವರ್ಯದಿಂದ ಮತ್ತೆ ಮತ್ತೆ ಒದಗುವ ಭೋಗಗಳು ಹಲವಾರು ನಿಮಿಷಗಳ ಅನುಭವಕ್ಕೆ ಮಾತ್ರ ಯೋಗ್ಯಗಳಾಗಿರುವುವು. ಆದರೆ ಈ ಕಾಶೀ ಕ್ಷೇತ್ರವು ಇಹಲೋಕ ಪರಲೋಕಗಳೆರಡರಲ್ಲಿಯೂ ಅಖಂಡವಾದ ಸುಖವನ್ನುಂಟುಮಾಡುವುದು.

೪೩. ಲೋಕೇಶ್ವರನಾದ ನಾನೇ ಅದಕ್ಕೆ ಒಡೆಯನಾಗಿರುವೆನು. ಕಾಶಿಯು ಮೋಕ್ಷದಾಯಕವೆನಿಸಿ ಪ್ರಕಾಶಿಸುತ್ತಿರುವುದು. ಸ್ವರ್ಗದಿಂದ ಬಂದಿರುವ ಗಂಗೆಯು ಅಮೃತವಾಹಿನಿಯಾಗಿರುವುದು. ಈ ತ್ರಿತಯವು ಮಾನವರಿಗೆ ಏನನ್ನು ತಾನೆ ಕೊಡಲಾರದು ?

೪೪. ಐದು ಕ್ರೋಶಗಳ ಪರಿಮಿತಿಯುಳ್ಳ ಈ ಕಾಶೀನಗರಿಯು ನನ್ನ ಶರೀರವೇ ಆಗಿರುವುದು. ಅಪರಿಮಿತ ಪ್ರಮಾಣದ ಐಶ್ವರ್ಯಸಮೃದ್ಧಿಯನ್ನು ಕೊಡುವುದು. ಭಕ್ತರ ಮೋಕ್ಷಕ್ಕೆ ಏಕಕಾರಣವಾಗಿರುವುದು.

೪೫. ಹುಟ್ಟುಸಾವುಗಳಿಂದ ನಿರಂತರವಾಗಿ ಕ್ಲೇಶಗೊಂಡು ಸಂಸಾರದ ಭಾರದಿಂದ ಖಿನ್ನರಾಗಿರುವವರಿಗೆ ನನ್ನ ನಿವಾಸನಗರವಾದ ಈ ಕಾಶಿಯೊಂದೇ ನಿಜವಾಗಿಯೂ ವಿಶ್ರಾಂತಿದಾಯಕವಾದ ಪ್ರದೇಶವಾಗಿರುವುದು.

೪೬. ಅನಾದಿಯಾದ ಸಂಸಾರದ ಮಾರ್ಗದಲ್ಲಿ ಬಳಲುತ್ತಿರುವವರ ವಿಶ್ರಾಂತಿಗಾಗಿ ಕಾಶಿಯೆಂಬ ಮಂಟಪವು ಸೃಷ್ಟವಾಗಿರುವುದು. ಅದು ಕಲ್ಪವಲ್ಲಿಗಳಿಂದ ರಚಿಸಲ್ಪಟ್ಟು ಮನೋರಥಗಳೆಂಬ ಫಲಗಳಿಂದ ನಿಬಿಡಿತವಾಗಿ ರಂಜಿಸುತ್ತಿರುವುದು.

೪೭. ಮೋಕ್ಷವೆಂಬ ಚಕ್ರವರ್ತಿಗೆ ಸಕಲತಾಪಗಳನ್ನು ಹೋಗಲಾಡಿಸುವ

ನಿರ್ವಾಣಲಕ್ಷ್ಮೀಂ ಯೇ ಪುಣ್ಯಾಃ ಪರಿವಾಂಛಂತಿ ಲೀಲಯಾ ।
ನಿರಂತರಸುಖಪ್ರಾಪ್ತ್ಯೈ ಕಾಶೀ ತ್ಯಾಜ್ಯಾ ನ ತೈರ್ನೃಭಿಃ ॥ ೪೮ ॥
ಮಮಾನಂದವನೇ ಯೇ ವೈ ನಿರಂತರವನೌಕಸಃ ।
ಮೋಕ್ಷಲಕ್ಷ್ಮೀಫಲಾನ್ಯತ್ರ ಸುಸ್ವಾದೂನಿ ಲಭಂತಿ ತೇ ॥ ೪೯ ॥
ನಿರ್ಮಮಂ ಚಾಪಿ ನಿರ್ಮೋಹಂ ಯಾ ಮಾಮಪಿ ವಿಮೋಹಯೇತ್ ।
ಕೈರ್ನ ಸಂಸ್ಮರಣೀಯಾ ಸಾ ಕಾಶೀ ವಿಶ್ವವಿಮೋಹಿನೀ ॥ ೫೦ ॥
ನಾಮಾಪಿ ಮಧುರಂ ಯಸ್ಯಾಃ ಪರಾನಂದಪ್ರಕಾಶಕಂ ।
ತಸ್ಯಾಃ ಕಾಶೀತಿ ಕಾಶೀತಿ ಸಾಕ್ಯೈಃ ಪುಣ್ಯೈರ್ನ ಜಪ್ಯತೇ ॥ ೫೧ ॥
ಕಾಶೀನಾಮಸುಧಾಪಾನಂ ಯೇ ಕುರ್ವಂತಿ ನಿರಂತರಂ ।
ತೇಷಾಂ ವರ್ತ್ಮ ಭವತ್ಯೇವ ಸುಧಾಮ ವಸುಧಾಮಯಂ ॥ ೫೨ ॥
ಮಮತಾರಹಿತಸ್ಯಾಪಿ ಮಮ ಸರ್ವಾತ್ಮನೋ ಧ್ರುವಂ ।
ತ ಏವ ಮಾಮಕಾ ಲೋಕೇ ಯೇ ಕಾಶೀನಾಮಜಾಪಕಾಃ ॥ ೫೩ ॥

---

ಈ ಕಾಶೀ ಕ್ಷೇತ್ರವು ನನ್ನ ತ್ರಿಶೂಲವೆಂಬ ಉನ್ನತವಾದ ದಂಡದಿಂದ ಎತ್ತಿ ಹಿಡಿಯಲ್ಪಟ್ಟ ವಿಚಿತ್ರವಾದ ಶ್ವೇತಚ್ಛತ್ರದಂತೆ ಕಂಗೊಳಿಸುತ್ತಿರುವುದು.

೪೮. ಯಾವ ಪುಣ್ಯಪುರುಷರು ಅನಾಯಾಸವಾಗಿಯೇ ಮೋಕ್ಷಲಕ್ಷ್ಮಿಯನ್ನು ಪಡೆಯ ಬಯಸುವರೊ, ಮತ್ತು ನಿರ್ವಿಘ್ನವಾದ ಸುಖವನ್ನು ಹೊಂದಲೆಳಸುವರೊ, ಆ ಮಾನವರು ಎಂದಿಗೂ ಕಾಶೀಕ್ಷೇತ್ರವನ್ನು ತ್ಯಾಗಮಾಡಬಾರದು.

೪೯. ನನಗೆ ಪ್ರಿಯವಾದ ಆನಂದವನದಲ್ಲಿ ಯಾರು ನಿರಂತರವಾಗಿ ವನವಾಸಿಗಳಾಗಿರುವರೊ, ಅವರು ಅತ್ಯಂತ ರುಚಿಕರಗಳಾದ ಮೋಕ್ಷಲಕ್ಷ್ಮಿಯ ಫಲಗಳನ್ನು ಪಡೆಯುವರು.

೫೦. ಯಾವ ಲೋಕಮೋಹಕರಿಯಾದ ಕಾಶೀಕ್ಷೇತ್ರವು ಮಮತಾಹೀನನೂ, ಮೋಹರಹಿತನೂ ಆದ ನನ್ನನ್ನೂ ಸಹ ಮೋಹಗೊಳಿಸುತ್ತಿರುವುದೊ, ಅದು ಯಾವ ಮಾನವರ ಸಂಸ್ಮರಣೆಗೆ ಯೋಗ್ಯವಿಷಯವಲ್ಲದಿರುವುದು ?

೫೧. ಯಾವ ಕಾಶಿಯ ನಾಮವೂ ಸಹ ಅತ್ಯಂತ ಮಧುರವಾಗಿದ್ದು ಪರಮಾನಂದವನ್ನು ಪ್ರಕಾಶಿಸುತ್ತಿರುವುದೊ, ಅದನ್ನು "ಕಾಶಿ, ಕಾಶಿ" ಎಂಬುದಾಗಿ ಪುಣ್ಯವಂತರಲ್ಲದ ಜನರು ಎಂದಿಗೂ ಜಪಿಸುವುದಿಲ್ಲ.

೫೨. ಯಾರು ನಿರಂತರದಲ್ಲಿಯೂ ಕಾಶಿಯ ನಾಮವೆಂಬ ಅಮೃತವನ್ನು ಪಾನಮಾಡುತ್ತಿರುವರೊ, ಅವರ ಮಾರ್ಗವು ಭೂಮಂಡಲದ ಎಲ್ಲೆಡೆಗಳಲ್ಲಿಯೂ ನಿಷ್ಕಂಟಕವಾಗಿ ಪರಿಣಮಿಸುವುದು.

೫೩. ಸರ್ವರಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಮಮತಾ

ರಹಸ್ಯಮಿತಿ ವಿಜ್ಞಾಯ ವಾರಾಣಸ್ಯಾ ಗಣೇಶ್ವರೈಃ ।
ಸಬ್ರಹ್ಮಯೋಗಿನೀಬ್ರಧ್ನೈಃ ಸ್ಥಿತಂ ತತ್ರೈವ ನಾನ್ಯಥಾ ॥ ೫೪ ॥
ಅನ್ಯಥಾ ತಾಶ್ಚ ಯೋಗಿನ್ಯಃ ಸ ರವಿಃ ಸ ಪಿತಾಮಹಃ ।
ತೇ ಗಣಾ ಮಾಂ ಪರಿತ್ಯಜ್ಯ ಕಥಂ ತಿಷ್ಠೇಯುರನ್ಯತಃ ॥ ೫೫ ॥
ಅತೀವ ಭದ್ರಂ ಸಂಜಾತಂ ಕಾಶ್ಯಾಂ ತಿಷ್ಠತ್ಸು ತೇಷು ಹಿ ।
ಏಕೋಽಪಿ ಭೇದೇ ಪ್ರಭವೇದ್ರಾಜ್ಯೇ ರಾಜ್ಯಾಂತರಂ ವಿನಾ ॥ ೫೬ ॥
ಲಬ್ಧಪ್ರವೇಶಾಸ್ತಾವಂತಸ್ತೇ ಸರ್ವೇ ಮತ್ಸ್ವರೂಪಿಣಃ ।
ಯತಿಷ್ಯಂತಿ ಯತೋಽವಶ್ಯಂ ಮದಾಗಮನಹೇತವೇ ॥ ೫೭ ॥
ಅನ್ಯಾನಪಿ ಪ್ರೇಷಯಾಮಿ ಮತ್ಪಾರ್ಶ್ವಪರಿವರ್ತಿನಃ ।
ಯೇ ತೇ ತತ್ರ ಸ್ಥಿತಾಃ ಶ್ರೇಷ್ಠಾ ಅಪಿ ಗಂತಾಸ್ಮ್ಯಹಂ ತತಃ ॥ ೫೮ ॥
ವಿಚಾರ್ಯೇತಿ ಮಹಾದೇವಃ ಸಮಾಹೂಯ ಗಜಾನನಂ ।
ಪ್ರಾಹಿಣೋತ್ಕಥಯಿತ್ವೇತಿ ಗಚ್ಛ ಕಾಶೀಮಿತಃ ಸುತ ॥ ೫೯ ॥

---

ರಹಿತನಾದ ನನಗೂ ಸಹ ಕಾಶಿಯ ನಾಮವನ್ನು ಸದಾ ಜಪಿಸುತ್ತಿರುವ ಮನುಷ್ಯರೇ ಈ ಲೋಕದಲ್ಲಿ ನನ್ನವರಾಗಿ ಸಂಚರಿಸುತ್ತಿರುವರು.

೫೪. ವಾರಾಣಸೀಕ್ಷೇತ್ರದ ಈ ರಹಸ್ಯವನ್ನು ತಿಳಿದುಕೊಂಡೇ ಬ್ರಹ್ಮನಿಂದಲೂ, ಯೋಗಿನಿಯರಿಂದಲೂ, ಸೂರ್ಯನಿಂದಲೂ, ಕೂಡಿದ ಗಣಾಧಿಪತಿಗಳೆಲ್ಲರೂ ಅಲ್ಲಿಯೇ ನಿಂತುಬಿಟ್ಟಿರುವರಲ್ಲದೆ ಬೇರೆಯಿಲ್ಲ.

೫೫. ಇಲ್ಲದಿದ್ದರೆ ಆ ಯೋಗಿನಿಯರಾಗಲಿ, ಸೂರ್ಯನಾಗಲಿ, ಬ್ರಹ್ಮದೇವನಾಗಲಿ, ಆ ಗಣಗಳಾಗಲಿ ನನ್ನನ್ನು ಬಿಟ್ಟು ಅನ್ಯಸ್ಥಳದಲ್ಲಿ ಹೇಗೆ ನೆಲಸುವರು?

೫೬. ಅವರೆಲ್ಲರೂ ಕಾಶಿಯಲ್ಲಿ ನೆಲಸಿದುದರಿಂದ ನನ್ನ ಕಾರ್ಯಕ್ಕೆ ಮಹತ್ತರವಾದ ಮಂಗಳವೇ ಉಂಟಾದಂತಾಯಿತು. ಬೇರೆ ರಾಜ್ಯದ ಬಲವಿಲ್ಲದವನಿಗೆ ಶತ್ರುರಾಜ್ಯದಲ್ಲಿ ಭೇದವನ್ನುಂಟುಮಾಡಲು ತನ್ನ ಕಡೆಯವನೊಬ್ಬನಾದರೂ ಸಮರ್ಥನಾಗುವನು.

೫೭. ಅವರೆಲ್ಲರೂ ನನ್ನ ಸ್ವರೂಪವುಳ್ಳವರೇ ಆಗಿರುವರು. ಕಾರಣಾಂತರಗಳಿಂದ ಕಾಶಿಯಲ್ಲಿ ಪ್ರವೇಶವನ್ನು ಪಡೆದಿರುವರು. ಆದುದರಿಂದ ಅವರು, ನಾನು ಕಾಶಿಗೆ ಬರಬೇಕೆಂಬ ಉದ್ದೇಶದಿಂದ ಖಂಡಿತವಾಗಿಯೂ ಪ್ರಯತ್ನಮಾಡುವರು.

೫೮. ನನ್ನ ಪಾರ್ಶ್ವದಲ್ಲಿ ಸುಳಿದಾಡುತ್ತಿರುವ ಇತರ ಪ್ರಮಥಗಣಗಳನ್ನೂ ಸಹ ಅಲ್ಲಿಗೆ ಕಳುಹಿಸಿಕೊಡುವೆನು. ಆ ಗಣೋತ್ತಮರೂ ಸಹ ಅಲ್ಲಿಯೇ ವಾಸಮಾಡುತ್ತಿರಲಿ. ಬಳಿಕ ನಾನೂ ಕಾಶಿಗೆ ಪ್ರಯಾಣಮಾಡುವೆನು.

೫೯. ಇಂತೆಂದು ಮಹಾದೇವನು ತನ್ನಲ್ಲಿಯೇ ನಿಶ್ಚಯವನ್ನು ಮಾಡಿ

ತತ್ರ ಸ್ಥಿತೋಽಪಿ ಸಂಸಿದ್ಧ್ಯೈ ಯತಸ್ವ ಸಹಿತೋ ಗಣೈಃ ।
ನಿರ್ವಿಘ್ನಂ ಕುರು ಚಾಸ್ಮಾಕಂ ನೃಪೇ ವಿಘ್ನಂ ಸಮಾಚರ ॥ ೬೦ ॥
ಆದಾಯ ಶಾಸನಂ ಮೂರ್ಧ್ನಿ ಗಣಾಧೀಶೋಽಥ ಧೂರ್ಜಟೇಃ ।
ಪ್ರತಸ್ಥೇ ಸಹಿತಃ ಕಾಶೀಂ ಸ್ಥಿತಿಜ್ಞಃ ಸ್ಥಿತಿಹೇತವೇ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಕಾಶೀವರ್ಣನಂ-ಗಣೇಶಪ್ರೇಷಣಂ" ನಾಮ ಪಂಚಪಂಚಾಶತ್ತಮೋಽಧ್ಯಾಯಃ

---

ಕೊಂಡು ಗಜಮುಖನಾದ ಗಣಪತಿಯನ್ನು ಬಳಿಗೆ ಕರೆದು ಕಾಶಿಗೆ ಕಳುಹಿಸ ಲೆಳಸಿ ಸಂದೇಶವನ್ನು ಹೇಳಿದನು. "ಮಗನೆ! ಇಲ್ಲಿಂದ ಶೀಘ್ರವಾಗಿ ಕಾಶಿಗೆ ಹೊರಡು.

೬೦. ಅಲ್ಲಿರುವ ನಮ್ಮ ಗಣಗಳೊಡನೆ ಕೂಡಿಕೊಂಡವನಾಗಿ ಸ್ಥಿರವಾಗಿ ನಿಂತು ನಮ್ಮ ಕಾರ್ಯಸಿದ್ಧಿಗಾಗಿ ಪ್ರಯತ್ನವನ್ನು ಮಾಡು. ನಮ್ಮ ಕಾರ್ಯ ಗಳಿಗೆ ನಿರ್ವಿಘ್ನಗಳನ್ನುಂಟುಮಾಡುತ್ತ," ದಿವೋದಾಸಮಹಾರಾಜನ ಕಾರ್ಯ ಗಳಲ್ಲೆಲ್ಲ ವಿಘ್ನಗಳನ್ನೇ ತಂದೊಡ್ಡುತ್ತಿರು.

೬೧. ಇಂತೆಂದ ಪರಮೇಶ್ವರನ ಆಜ್ಞೆಯನ್ನು ಶಿರಸಾವಹಿಸಿ ಲೋಕಸ್ಥಿತಿಯ ಮರ್ಮಗಳನ್ನರಿತ ವಿಘ್ನೇಶ್ವರನು ಭಗವಂತನ ಕಾರ್ಯವನ್ನು ನೆರವೇರಿಸುವ ಕಾರಣದಿಂದ ಶೀಘ್ರವಾಗಿ ಕಾಶೀಕ್ಷೇತ್ರವನ್ನು ಕುರಿತು ಪ್ರಯಾಣಮಾಡುವವ ನಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಕಾಶೀಕ್ಷೇತ್ರ—ಗಣೇಶಪ್ರೇಷಣವರ್ಣನ"ವೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಪಂಚಾಶತ್ತಮೋಽಧ್ಯಾಯಃ

### ಗಣೇಶಮಾಯಾಪ್ರಪಂಚವರ್ಣನಂ

ಸ್ಕಂದ ಉವಾಚ:—

ಅಥೇಶಾಜ್ಞಾಂ ಸಮಾದಾಯ ಗಜವಕ್ತ್ರಃ ಪ್ರತಸ್ಥಿವಾನ್ ।
ಶಂಭೋಃ ಕಾಶ್ಯಾಗಮೋಪಾಯಂ ಚಿಂತಯನ್ಮಂದರಾದ್ರಿತಃ ॥ ೧ ॥
ಪ್ರಾಪ್ಯ ವಾರಾಣಸೀಂ ತೂರ್ಣಮಾಶು ಸ್ಯಂದನಗೋ ವಿಭುಃ ।
ವಾಡವೀಂ ಮೂರ್ತಿಮಾಲಂಬ್ಯ ಪ್ರಾವಿಶಚ್ಛಕುನ್ಯೈಃ ಸ್ತುತಃ ॥ ೨ ॥
ನಕ್ಷತ್ರಪಾಠಕೋ ಭೂತ್ವಾ ವೃದ್ಧಃ ಪ್ರತ್ಯವರೋಧಗಃ ।
ಚಚಾರ ಮಧ್ಯೇ ನಗರಂ ಪೌರಾಣಾಂ ಪ್ರೀತಿಮಾವಹನ್ ॥ ೩ ॥
ಸ್ವಯಮೇವ ನಿಶಾಭಾಗೇ ಸ್ವಪ್ನಂ ಸಂದರ್ಶಯನ್ನೃಣಾಂ ।
ಪ್ರಾತಸ್ತೇಷಾಂ ಗೃಹಾನ್ಗತ್ವಾ ತೇಷಾಂ ವಕ್ತಿ ಬಲಾಬಲಂ ॥ ೪ ॥
ಭವದ್ಭಿರದ್ಯ ರಾತ್ರೌ ಯದ್ದೃಷ್ಟಂ ಸ್ವಪ್ನವಿಚೇಷ್ಟಿತಂ ।
ಭವತ್ಕೌತೂಹಲೋತ್ಪತ್ತೇಃ ತದೇವ ಕಥಯಾಮ್ಯಹಂ ॥ ೫ ॥

---

### ಕನ್ನಡದ ಅನುವಾದ

#### ಗಣೇಶಮಾಯಾಪ್ರಪಂಚವರ್ಣನ

೧. ಸ್ಕಂದನು ಹೇಳುತ್ತಾನೆ:—ಬಳಿಕ ಈಶ್ವರನ ಅಪ್ಪಣೆಯನ್ನು ಸ್ವೀಕರಿಸಿ ಗಣಪತಿಯು ಶಂಭುವು ಕಾಶಿಯನ್ನು ಪ್ರವೇಶಿಸಲು ಉತ್ತಮೋಪಾಯವು ಯಾವುದೆಂಬುದನ್ನೇ ಚಿಂತಿಸುತ್ತ ಮಂದರಾಚಲವನ್ನು ಬಿಟ್ಟು ಹೊರಟನು.

೨. ಮೂಷಕವಾಹನನಾದ ಆ ಸ್ವಾಮಿಯು ಶೀಘ್ರವಾಗಿಯೇ ವಾರಾಣಸಿಯನ್ನು ಸೇರಿ ಬ್ರಾಹ್ಮಣ ವೇಷವನ್ನು ಪರಿಗ್ರಹಿಸಿ ಶಕುನದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ನಗರವನ್ನು ಪ್ರವೇಶಿಸಿದನು.

೩. ಜ್ಯೋತಿಷವನ್ನು ಹೇಳುವವನಾಗಿ ವಯೋವೃದ್ಧನಾದುದರಿಂದ ಪ್ರತಿಯೊಂದು ಮನೆಯ ಅಂತಃಪುರಕ್ಕೂ ಪ್ರವೇಶವುಳ್ಳವನಾಗಿ ಪುರಜನರೆಲ್ಲರಿಗೂ ಸಂತೋಷವನ್ನುಂಟುಮಾಡುತ್ತ ನಗರದ ಮಧ್ಯಭಾಗದಲ್ಲಿ ಸಂಚರಿಸುತ್ತಿದ್ದನು.

೪. ರಾತ್ರಿಯ ಕಾಲದಲ್ಲಿ ತಾನೇ ಪುರಜನರಿಗೆ ಸ್ವಪ್ನಗಳನ್ನು ತೋರಿಸಿಕೊಟ್ಟು ಮಾರನೆಯ ಪ್ರಾತಃಕಾಲದಲ್ಲಿ ಅವರವರ ಮನೆಗಳಿಗೆ ಹೋಗಿ ಅವರು ಕಂಡ ಸ್ವಪ್ನಗಳ ಶುಭಾಶುಭ ಫಲಗಳನ್ನೆಲ್ಲ ಹೇಳುತ್ತಿದ್ದನು.

೫. "ಇಂದಿನ ರಾತ್ರಿಯ ಸ್ವಪ್ನದಲ್ಲಿ ನೀವು ಯಾವ ವ್ಯಾಪಾರವಿಶೇಷವನ್ನು ಕಂಡಿರೊ, ಅದನ್ನೇ ನಿಮಗೆ ನಂಬುಗೆಯನ್ನು ಹುಟ್ಟಿಸುವುದಕ್ಕಾಗಿ ಹೇಳುವೆನು, ಕೇಳಿರಿ.

ಸ್ವಪತಾ ಭವತಾ ರಾತ್ರೌ ತುರ್ಯೇ ಯಾಮೇ ಮಹಾಹ್ರದಃ ।
ಅದರ್ಶಿ ತತ್ರ ಚ ಭವಾನ್ಮಜ್ಜನ್ಮಜ್ಜಂಸ್ತಟಂ ಗತಃ ॥ ೬ ॥
ತದಂಬುಸಿಕ್ತೆಲೇ ಪಂಕೇ ಮಗ್ನೋನ್ಮಗ್ನೋಽಸಿ ಭೂರಿಶಃ ।
ದುಸ್ಸ್ವಪ್ನಸ್ಯಾಸ್ಯ ಚ ಮಹಾನ್ವಿಪಾಕೋಽತಿಭಯಪ್ರದಃ ॥ ೭ ॥
ಕಾಷಾಯವಸನೋ ಮೂಢಃ ಪ್ರೈಕ್ಷ್ಯಹೋ ಭವತಾಪಿ ಯಃ ।
ಪರಿತಾಪಂ ಮಹಾನೇಷ ಜನಯಿಷ್ಯತಿ ದಾರುಣಂ ॥ ೮ ॥
ರಾತ್ರೌ ಸೂರ್ಯಗ್ರಹೋ ದೃಷ್ಟೋ ಮಹಾನಿಷ್ಟಕರೋ ಧ್ರುವಂ ।
ಐಂದ್ರಂ ಧನುರ್ದ್ವಯಂ ರಾತ್ರೌ ಯದಲೋಕಿ ನ ತಚ್ಛುಭಂ ॥ ೯ ॥
ಪ್ರತೀಚ್ಯಾಂ ರವಿರಾಗತ್ಯ ಪ್ರೋದ್ಯಂತಂ ವ್ಯೋಮ್ನಿ ಶೀತಗುಂ ।
ಪಾತಯಾಮಾಸ ಭೂಪೃಷ್ಠೇ ತದ್ರಾಜ್ಯಭಯಸೂಚಕಂ ॥ ೧೦ ॥
ಯುಗಪತ್ಕೇತುಯುಗಲಂ ಯುಧ್ಯಮಾನಂ ಪರಸ್ಪರಂ ।
ಯದದರ್ಶಿ ನ ತದ್ಭದ್ರಂ ರಾಷ್ಟ್ರಭಂಗಾಯ ಕೇವಲಂ ॥ ೧೧ ॥

---

೬. ನೀನು ರಾತ್ರಿಯಲ್ಲಿ ಮಲಗಿರಲು ನಾಲ್ಕನೆಯ ಯಾಮದ ಸ್ವಪ್ನದಲ್ಲಿ ಒಂದು ವಿಶಾಲವಾದ ಸರೋವರವನ್ನು ಕಂಡೆ. ಅದರಲ್ಲಿ ನೀನು ಮುಳುಗಿ ತೇಲುತ್ತ ಬಹಳ ಕಷ್ಟದಿಂದ ದಡವನ್ನು ಮುಟ್ಟುವವನಾದೆ.

೭. ಅದರ ನೀರಿನಿಂದ ಒದ್ದೆಯಾಗಿರುವ ಕೆಸರಿನಲ್ಲಿ ನೀನು ಅನೇಕ ವೇಳೆ ಮುಳುಗಿ ಮೇಲಕ್ಕೆ ಬಂದೆ. ಈ ನಿನ್ನ ದುಸ್ವಪ್ನದ ಫಲವು ಮಹತ್ತರವಾದುದೂ ಭಯವನ್ನುಂಟುಮಾಡುವುದೂ ಆಗಿರುವುದು.

೮. ನೀನೂ ಸಹ ಸ್ವಪ್ನದಲ್ಲಿ ಕಾಷಾಯವಸ್ತ್ರವನ್ನು ಧರಿಸಿದ ಸನ್ಯಾಸಿ ಯೊಬ್ಬನನ್ನು ಕಂಡೆಯಲ್ಲವೆ. ಅವನು ನಿನಗೆ ಅತ್ಯಂತ ದಾರುಣವಾದ ಪರಿತಾಪ ವನ್ನು ಶೀಘ್ರದಲ್ಲಿಯೇ ಉಂಟುಮಾಡುವನು.

೯. ನೀನು ರಾತ್ರಿಯಲ್ಲಿ ನೋಡಿದ ಸೂರ್ಯಗ್ರಹಣವು ನಿಜವಾಗಿಯೂ ಮಹತ್ತರವಾದ ಅನಿಷ್ಟವನ್ನು ಸೂಚಿಸುವುದು. ನೀನು ನೋಡಿದ ರಾತ್ರಿಯ ಕಾಲದ ಎರಡು ಕಾಮನಬಿಲ್ಲುಗಳು ನಿನಗೆ ಮಂಗಳವನ್ನುಂಟುಮಾಡುವುದಿಲ್ಲ.

೧೦. ಪಶ್ಚಿಮದಿಕ್ಕಿನಲ್ಲಿ ಸೂರ್ಯನುದಯಿಸಿ ಮೇಲಕ್ಕೇರುತ್ತಿರುವ ಚಂದ್ರ ನನ್ನು ಸೆಳೆದು ಭೂಮಿಯಲ್ಲಿ ಬೀಳಿಸಿದನಲ್ಲವೆ. ಅದು ಈ ರಾಜ್ಯಕ್ಕೇ ಮಹಾ ಭಯವನ್ನು ಸೂಚಿಸುವುದು.

೧೧. ಇಬ್ಬರು ಕೇತುಗಳು ಒಂದೇಕಾಲದಲ್ಲಿ ಹುಟ್ಟಿ ತಮ್ಮತಮ್ಮಲ್ಲಿಯೇ ಕಾದಾಡುತ್ತಿದ್ದುದನ್ನು ನೀನು ನೋಡಿದುದು ಒಳ್ಳೆಯದಲ್ಲ. ಅದರಿಂದ ರಾಜ್ಯ ಭಂಗವಾಗುವುದು ನಿಶ್ಚಯವು.

ವಿಶೀರ್ಯತ್ಕೇಶದಶನಂ ನೀಯಮಾನಂ ಚ ದಕ್ಷಿಣೇ ।
ಆತ್ಮಾನಂ ಯತ್ಸಮದ್ರಾಕ್ಷೀಃ ಕುಟುಂಬಸ್ಯಾಪಿ ಭೀಷಣಂ ॥ ೧೨ ॥
ಪ್ರಾಸಾದಧ್ವಜಭಂಗೋ ಯಸ್ತ್ವಯೈಕ್ಷತ ನಿಶಾಕ್ಷಯೇ ।
ರಾಜ್ಯಕ್ಷಯಕರಂ ವಿದ್ಧಿ ಮಹೋತ್ಪಾತಾಯ ನಿಶ್ಚಿತಂ ॥ ೧೩ ॥
ನಗರೀ ಪ್ಲಾವಿತಾ ಸ್ವಪ್ನೇ ತರಂಗೈಃ ಕ್ಷೀರನೀರಧೇಃ ।
ಪಕ್ಷೈಸ್ತ್ರಿಚತುರೈಃ ಶಂಕೇ ಮಹಾಶಂಕಾಂ ಪುರೌಕಸಾಂ ॥ ೧೪ ॥
ಸ್ವಪ್ನೇ ವಾನರಯಾನೇನ ಯತ್ತ್ವಮೂಢೋಽಸಿ ದಕ್ಷಿಣಾಂ ।
ಅತಸ್ತದ್ವಂಚನೋಪಾಯಃ ಪುರತ್ಯಾಗೋ ಮಹಾಮತೇ ॥ ೧೫ ॥
ರುದತೀ ಯಾ ತ್ವಯಾ ದೃಷ್ಟಾ ಮಹಿಲೈಕಾ ನಿಶಾತ್ಯಯೇ ।
ಮುಕ್ತಕೇಶೀ ವಿವಸನಾ ಸಾ ನಾರೀ ಶ್ರೀರಿವೋದ್ಗತಾ ॥ ೧೬ ॥
ದೇವಾಲಯಸ್ಯ ಕಲಶೋ ಯಸ್ತ್ವಯಾ ವೀಕ್ಷಿತಃ ಪತನ್ ।
ದಿನೈಃ ಕತಿಪಯೈರೇವ ರಾಜ್ಯಭಂಗೋ ಭವಿಷ್ಯತಿ ॥ ೧೭ ॥

---

೧೨. ಕೂದಲುಗಳನ್ನೂ ಹಲ್ಲುಗಳನ್ನೂ ಕೆದರಿಕೊಂಡು ದಕ್ಷಿಣದಿಕ್ಕಿಗೆ ಸೆಳೆಯಲ್ಪಡುತ್ತಿದ್ದ ನಿನ್ನನ್ನೇ ನೀನು ಕನಸಿನಲ್ಲಿ ಕಂಡುದರಿಂದ ನಿನ್ನ ಕುಟುಂಬಕ್ಕೆ ಅಶುಭವನ್ನು ಸೂಚಿಸುವುದು.

೧೩. ರಾತ್ರಿಯು ಕಳೆಯುತ್ತ ಬಂದ ವೇಳೆಯಲ್ಲಿ ನೀನು ನೋಡಿದ ದೇವಾಲಯದ ಧ್ವಜದ ಭಂಗವು ರಾಜ್ಯಕ್ಕೆ ಹಾನಿಯನ್ನುಂಟುಮಾಡುವುದೆಂದು ತಿಳಿದುಕೋ. ಇದರಿಂದ ಮಹಾ ಉತ್ಪಾತದ ಪ್ರಸಂಗವುಂಟಾಗುವುದೆಂಬುದು ನಿಶ್ಚಯವಾಗಿರುವುದು.

೧೪. ನೀನು ಸ್ವಪ್ನದಲ್ಲಿ ಈ ಪಟ್ಟಣವೆಲ್ಲ ಕ್ಷೀರಸಮುದ್ರದ ಅಲೆಗಳಿಂದ ಮುಳುಗಿಸಲ್ಪಟ್ಟುದನ್ನು ಕಂಡೆಯಲ್ಲವೆ. ಇನ್ನು ಮೂರು ನಾಲ್ಕು ಪಕ್ಷಗಳ ಕಾಲದಲ್ಲಿಯೇ ಈ ಪಟ್ಟಣದ ನಿವಾಸಿಗಳಿಗೆ ಮಹಾ ಭಯವುಂಟಾಗುವುದೆಂದು ಯೋಚಿಸುವೆನು.

೧೫. ಮಹಾ ಪ್ರಾಜ್ಞನೆ! ನೀನು ಸ್ವಪ್ನದಲ್ಲಿ ಕೋತಿಗಳನ್ನು ಕಟ್ಟಿದ ರಥದಲ್ಲಿ ಕುಳಿತು ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದೆ. ಅದರಿಂದ ಸೂಚಿಸಿದ ಅರಿಷ್ಟವನ್ನು ಕಳೆದುಕೊಳ್ಳುವ ಉಪಾಯವೆಂದರೆ ಪಟ್ಟಣದ ತ್ಯಾಗವೊಂದೇ ಆಗಿರುವುದು.

೧೬. ರಾತ್ರಿಯ ಕಡೆಯಭಾಗದಲ್ಲಿ ನೀನು ಕೂದಲುಗಳನ್ನು ಕೆದರಿಕೊಂಡು ದಿಗಂಬರಳಾಗಿ ಅಳುತ್ತ ಹೋಗುತ್ತಿದ್ದ ಉತ್ತಮ ಸ್ತ್ರೀಯೊಬ್ಬಳನ್ನು ನೋಡಿದೆಯಲ್ಲವೆ. ಅವಳೇ ಈ ಪಟ್ಟಣದ ಭಾಗ್ಯಲಕ್ಷ್ಮಿಯು. ನಗರವನ್ನು ತ್ಯಜಿಸಿದಳು.

೧೭. ನೀನು ಸ್ವಪ್ನದಲ್ಲಿ ನೋಡಿದ ದೇವಾಲಯದ ಕಳಶದ ಪತನದ

ಪುರೀ ಪರಿವೃತಾ ಸ್ವಪ್ನೇ ಮೃಗಯೂಥೈಃ ಸಮಂತತಃ ।
ರೋರೂಯಮಾಣೈರತ್ಯರ್ಥಂ ಮಾಸೇನೈವೋದ್ವಸೀಭವೇತ್ ॥ ೧೮ ॥
ಆತಾಯಿಯೂಕಗೃಧ್ರಾದ್ಯೈಃ ಪುರೀಸುಚರಿಚಾರಿಭಿಃ ।
ಸೂಚ್ಯತೇಽತ್ಯಾಹಿತಂ ಕಿಂಚಿದ್ಧ್ರುವಮತ್ರ ನಿವಾಸಿನಾಂ ॥ ೧೯ ॥
ಸ್ವಪ್ನೋತ್ಪಾತಾನಿತಿ ಬಹೂನ್ ಶಂಸನ್ ಶಂಸನ್ನಿತಸ್ತತಃ ।
ಬಹೂನುಚ್ಚಾಟಯಾಂಚಕ್ರೇ ಸ ವಿಘ್ನೇಶಃ ಪುರೌಕಸಃ ॥ ೨೦ ॥
ಕೇಷಾಂಚಿತ್ಸ್ವರತೋಽವಾದೀದ್ಗ್ರಹಚಾರಂ ಪ್ರದರ್ಶಯನ್ ।
ಏಕರಾಶಿಸ್ಥಿತಾಃ ಸೌರಿಸಿತಭೌಮಾ ನ ಶೋಭನಾಃ ॥ ೨೧ ॥
ಸೋಽಯಂ ಧೂಮಗ್ರಹೋ ವ್ಯೋಮ್ನಿ ಭಿತ್ವಾ ಸಪ್ತರ್ಷಿಮಂಡಲಂ ।
ಪ್ರಯಾತಃ ಪಶ್ಚಿಮಾಮಾಶಾಂ ಸ ನಾಶಾಯ ವಿಶಾಂಪತೇಃ ॥ ೨೨ ॥

---

ಸೂಚನೆಯಿಂದ ಮುಂದೆ ಕೆಲವಾರು ದಿವಸಗಳಲ್ಲಿಯೇ ಈ ರಾಜ್ಯದ ನಾಶವಾಗುವುದೆಂಬುದನ್ನು ನಿಶ್ಚಯವಾಗಿ ತಿಳಿದುಕೊ.

೧೮. ನಿನ್ನ ಕನಸಿನಲ್ಲಿ ನಾಯಿನರಿಗಳೇ ಮುಂತಾದ ಮೃಗಗಳು ದೀರ್ಘವಾಗಿಯೂ ವಿಶೇಷವಾಗಿಯೂ ರೋದನಮಾಡುತ್ತ ಈ ಪುರವನ್ನು ನಾಲ್ಕು ದಿಕ್ಕುಗಳಲ್ಲಿಯೂ ಆವರಿಸಿದ್ದುದರಿಂದ ಒಂದು ತಿಂಗಳೊಳಗಾಗಿ ನೀನು ಊರನ್ನು ಬಿಟ್ಟುಹೋಗುವುದೊಳ್ಳೆಯದು.

೧೯. ಶಂಖಚೀಲಗಳೂ (ಒಂದು ಬಗೆಯ ಗರುಡ), ಗೂಬೆಗಳೂ, ರಣಹದ್ದುಗಳೂ ನಿನ್ನ ಸ್ವಪ್ನದಲ್ಲಿ ಈ ನಗರದ ಮೇಲೆ ಆಕಾಶದಲ್ಲಿ ಹಾರಾಡುತ್ತಿದ್ದುದರಿಂದ ಇಲ್ಲಿ ವಾಸಮಾಡುತ್ತಿರುವವರಿಗೆ ಯಾವುದೋ ಮಹಾ ದುಃಖವುಂಟಾಗುವುದೆಂಬುದು ಸೂಚಿತವಾಗುತ್ತಿರುವುದು.”

೨೦. ಈ ರೀತಿಯಾಗಿ ಆ ವಿಘ್ನೇಶ್ವರನು ಪಟ್ಟಣಿಗರು ಸ್ವಪ್ನಗಳಲ್ಲಿ ಕಂಡ ಉತ್ಪಾತಗಳನ್ನೆಲ್ಲ ಬಹು ವಿಧವಾಗಿ ವರ್ಣಿಸುತ್ತ ಕಾಶೀಕ್ಷೇತ್ರದ ಬೀದಿಗಳಲ್ಲಿಯೇ ಮನೆಯಿಂದ ಮನೆಗೆ ಸುಳಿದಾಡುತ್ತ ಅನೇಕ ಜನ ಪುರನಿವಾಸಿಗಳನ್ನು ಪಟ್ಟಣದಿಂದ ಹೊರಕ್ಕೆ ಕಳುಹಿಸಿದನು.

೨೧. ಮತ್ತೆ ಕೆಲವರಿಗೆ ಜ್ಯೋತಿಃಶಾಸ್ತ್ರದ ಪ್ರಕಾರವಾಗಿ ಗ್ರಹಗತಿಗಳನ್ನು ವಿವರಿಸುತ್ತ ವಾದಿಸುತ್ತಿದ್ದನು. “ಒಂದೇ ರಾಶಿಯಲ್ಲಿ ಶನಿಯೂ, ಶುಕ್ರನೂ, ಕುಜನೂ ಸೇರಿರುವುದು ಈ ದೇಶಕ್ಕೆ ಅಮಂಗಳವಾಗಿರುವುದು.

೨೨. ಆಕಾಶದಲ್ಲಿ ಎಲ್ಲರಿಗೂ ಕಾಣುತ್ತಿರುವ ಧೂಮಕೇತುವು ಸಪ್ತರ್ಷಿಮಂಡಲವನ್ನು ಭೇದಿಸಿಕೊಂಡು ಪಶ್ಚಿಮದಿಕ್ಕಿಗೆ ಹೋಗುತ್ತಿರುವುದು. ಇದರಿಂದ ಈ ರಾಜ್ಯದ ಅರಸನಿಗೆ ನಾಶವೇ ಸಂಭವಿಸುವುದು.

ಅತಿಚಾರಗತೋ ಮಂದಃ ಪುನರ್ವಕ್ರಾಭ್ಯಸಂಸ್ಥಿತಃ ।
ಪಾಪಗ್ರಹಸಮಾಯುಕ್ತೋ ನ ಯುಕ್ತೋಽಯಮಿಹೇಷ್ಯತೇ ॥ ೨೩ ॥
ವ್ಯತೀತೇ ವಾಸರೇ ಯೋಽಯಂ ಭೂಕಂಪಃ ಸಮುಪದ್ಯತ ।
ಕಂಪಂ ಜನಯತೇಽತೀವ ಹೃದೋ ಮೇಽಪಿ ಪುರೌಕಸಃ ॥ ೨೪ ॥
ಉದೀಚ್ಯಾಃ ದಕ್ಷಿಣಾಶಾಯಾಂ ಯೇಯಮುಲ್ಕಾ ಪ್ರಧಾವಿತಾ ।
ವಿಲೀನಾ ಚ ವಿಯತ್ಯೇವ ಸನಿರ್ಘಾತಂ ನ ಸಾ ಶುಭಾ ॥ ೨೫ ॥
ಉನ್ಮೂಲಿತೋ ಮಹಾಮೂಲೋ ಮಹಾನಿಲರಯೇಣ ಯಃ ।
ಚತ್ವರೇ ಚೈತ್ರವೃಕ್ಷೋಽಯಂ ಮಹೋತ್ಪಾತಂ ಪ್ರಶಂಸತಿ ॥ ೨೬ ॥
ಸೂರ್ಯೋದಯಮನುಪ್ರಾಪ್ಯ ಪ್ರಾಚ್ಯಾಂ ಶುಷ್ಕತರೂಪರಿ ।
ಕರಟೋ ರಾರಟೀತ್ಯೇಷ ಕಟೋತ್ಕಟಭಯಪ್ರದಃ ॥ ೨೭ ॥
ಮಧ್ಯೇ ವಿಪಣಿ ಯತ್ತೂರ್ಣಂ ಕೌಚಿಚ್ಚಾರಣ್ಯಚಾರಿಣೌ ।
ಮೃಗೌ ಮೃಗಯತಾಂ ಯಾತೌ ಪೌರಾಣಾಂ ಪುರತೋಽಹಿತೌ ॥ ೨೮ ॥

---

೨೩. ಶನಿಯು ತನ್ನ ರಾಶಿಯನ್ನು ಮೀರಿ ನಡೆಯುತ್ತಿರುವನು. ವಕ್ರ ಮಾರ್ಗವನ್ನನುಸರಿಸುತ್ತಿರುವನು. ಪಾಪಗ್ರಹಗಳನ್ನು ಸೇರಿರುವನು. ಇವುಗಳೆಲ್ಲವೂ ಈ ದೇಶಕ್ಕೆ ಶುಭವನ್ನುಂಟುಮಾಡಲಾರವು.

೨೪. ಎಲೈ ಪುರನಿವಾಸಿಗಳಿರಾ! ಕಳೆದ ವಾರದಲ್ಲಿ ಇಲ್ಲಿ ಯಾವ ಭೂಕಂಪವು ಕಾಣಿಸಿಕೊಂಡಿತೊ, ಅದು ಇಂದಿಗೂ ನನ್ನ ಹೃದಯದಲ್ಲಿ ಭಯದಿಂದ ಕಂಪವನ್ನುಂಟುಮಾಡುತ್ತಿರುವುದು.

೨೫. ಉತ್ತರದಿಕ್ಕಿನಿಂದ ದಕ್ಷಿಣಕ್ಕೆ ಒಂದು ಉಲ್ಕಾಮಂಡಲವು ವೇಗವಾಗಿ ಹೋಯಿತಲ್ಲವೆ. ಅದು ಸಿಡಿಲಿನಂತೆ ಭಯಂಕರ ಶಬ್ದದಿಂದ ಕೂಡಿದುದಾಗಿ ಆಕಾಶದಲ್ಲಿಯೇ ಲೀನವಾಯಿತು. ಅದು ನಮಗೆ ಶುಭಕಾರಕವಲ್ಲವು.

೨೬. ರಾಜಮಾರ್ಗಗಳ ಚೌಕದಲ್ಲಿ ವಿಸ್ತಾರವಾದ ಬೇರುಗಳ ಸಮೂಹವುಳ್ಳದ್ದಾಗಿದ್ದ ಈ ಅಶ್ವತ್ಥವೃಕ್ಷವು ಭಯಂಕರವಾದ ಬಿರುಗಾಳಿಯಿಂದ ಬುಡಸಹಿತವಾಗಿ ಕಿತ್ತುಬಿದ್ದುದು ಪಟ್ಟಣಕ್ಕೆ ಮಹಾ ಭಯವನ್ನು ಸೂಚಿಸುತ್ತದೆ.

೨೭. ಸೂರ್ಯೋದಯ ಸಮಯಕ್ಕೆ ಸರಿಯಾಗಿ ಪೂರ್ವದಿಕ್ಕಿನಲ್ಲಿ ಒಣಗಿದ ಮರದ ಮೇಲೆ ಒಂದು ಕಾಗೆಯು ಕುಳಿತುಕೊಂಡು ಕರ್ಣಕಠೋರವಾಗಿಯೂ ಉಚ್ಚಧ್ವನಿಯಿಂದಲೂ ಕಾಗುಟ್ಟುತ್ತಿರುವುದನ್ನು ಕಂಡಿರಾ? ಇದು ಅತ್ಯಂತ ಭಯವನ್ನುಂಟುಮಾಡುವುದಾಗಿರುವುದು.

೨೮. ನಗರದ ಅಂಗಡಿಬೀದಿಯಲ್ಲಿ ಇಬ್ಬರು ಅರಣ್ಯವಾಸಿಗಳು ಕಾಡುಮೃಗಗಳನ್ನು ಹುಡುಕುತ್ತ ಹೋದುದನ್ನು ನೀವೆಲ್ಲರೂ ಕಂಡಿರಲ್ಲವೆ. ಅವರು ಈ ಪುರದ ಜನರಿಗೆ ಮುಂದೆ ಬರುವ ಅಶುಭಗಳನ್ನು ಸೂಚಿಸುವರು.

ರಸಾಲಶಾಲಮುಕುಲಂ ವೀಕ್ಷ್ಯತೇ ಯಚ್ಚ ಶರದ್ಯತಃ ।
ಮಹಾಕಾಲಭಯಂ ಮನ್ಯೇಽಪ್ಯಕಾಲೇಽಪಿ ಪುರೌಕಸಾಂ ॥ ೨೯ ॥
ಸಾಧ್ವಸಂ ಜನಯಿತ್ವೇತಿ ಕೇಚಿದುಚ್ಚಾಟಿತಾಃ ಪುರಾ ।
ತೇನ ವಿಘ್ನಕೃತಾ ಪೌರಾಃ ಕಪಟದ್ವಿಜರೂಪಿಣಾ ॥ ೩೦ ॥
ಅಥ ಮಧ್ಯೇಽವರೋಧಂ ಸ ಪ್ರವಿಶ್ಯ ನಿಜಮಾಯಯಾ ।
ದೃಷ್ಟಾರ್ಥಮೇವ ಕಥಯನ್ ಸ್ತ್ರೀಣಾಂ ವಿಸ್ರಂಭಭೂರಭೂತ್ ॥ ೩೧ ॥
ತವ ಪುತ್ರಶತಂ ಜಜ್ಞೇ ಸಪ್ತೋನಂ ಶುಭಲಕ್ಷಣೇ ।
ತೇಷ್ವೇಕಸ್ತುರಗಾರೂಢೋ ವಾಹ್ಯಾಲ್ಯಾಂ ಪತಿತೋ ಮೃತಃ ॥ ೩೨ ॥
ಅಂತರ್ವತ್ನೀ ತ್ವಿಯಂ ಕನ್ಯಾಂ ಜನಯಿಷ್ಯತಿ ಶೋಭನಾಂ ।
ಏಷಾ ಹಿ ದುರ್ಭಗಾ ಪೂರ್ವಂ ಸಾಂಪ್ರತಂ ಸುಭಗಾಽಭವತ್ ॥ ೩೩ ॥
ಅಸೌ ಹಿ ರಾಜ್ಞೋ ರಾಜ್ಞೀನಾಮತ್ಯಂತಮಿಹ ವಲ್ಲಭಾ ।
ಮುಕ್ತಾಲಂಕೃತಿರೇತಸ್ಯೈ ರಾಜ್ಞಾ ದತ್ತಾ ನಿಜೋರಸಃ ॥ ೩೪ ॥

---

೨೯. ಅಕಾಲವಾದ ಶರದೃತುವಿನಲ್ಲಿಯೂ ಮಾವಿನಮರಗಳೂ ಸಾಲವೃಕ್ಷಗಳೂ ಹೂವುಗಳನ್ನು ಹೊತ್ತಿರುವುದನ್ನು ಕಂಡರೆ ಈ ನಗರದ ನಿವಾಸಿಗಳೆಲ್ಲರಿಗೂ ಮಹಾಕಾಲನ ಭಯವೇ ಬರುವುದೆಂದು ನಿಶ್ಚಯಿಸುತ್ತೇನೆ.''

೩೦. ಇಂತು ಕಾಪಟ್ಯದಿಂದ ಬ್ರಾಹ್ಮಣವೇಷವನ್ನು ಧರಿಸಿದ ವಿಘ್ನೇಶ್ವರನು ಎಲ್ಲರ ಹೃದಯಗಳಲ್ಲಿಯೂ ಭಯವನ್ನುಂಟುಮಾಡುವವನಾಗಿ ಅನೇಕ ಪುರನಿವಾಸಿಗಳನ್ನು ಕಾಶಿಯಿಂದ ಹೊರಕ್ಕೆ ಹೊರಡಿಸಿದನು.

೩೧. ಬಳಿಕ ಮಾಯೆಯ ಬಲದಿಂದ ನಗರಮಧ್ಯದ ಅಂತಃಪುರಗಳಲ್ಲಿ ಹೊಕ್ಕು ಸ್ತ್ರೀಯರಿಗೆಲ್ಲ ಅವರವರ ಮನಸ್ಸಿನಲ್ಲಿದ್ದುದನ್ನು ಹೇಳುತ್ತ ಅವರ ಸಂಪೂರ್ಣ ವಿಶ್ವಾಸಕ್ಕೆ ಪಾತ್ರನಾದನು.

೩೨ ''ಎಲೌ ಮಂಗಳಾಂಗಿಯೇ! ನಿನಗೆ ಏಳು ಕಡಿಮೆಯಾಗಿ ಒಂದು ನೂರು ಮಕ್ಕಳು ಹುಟ್ಟಿರುವರು. ಅವರಲ್ಲಿ ಒಬ್ಬನು ಕುದುರೆಯನ್ನೇರಿ ಸವಾರಿ ಮಾಡುತ್ತಿದ್ದಾಗ ಕೆಳಗೆ ಬಿದ್ದು ಸತ್ತುಹೋದನು.

೩೩. ಈ ಗರ್ಭಿಣಿಯು ಸರ್ವಾಂಗಸುಂದರಿಯಾದ ಕನ್ಯಾರತ್ನವನ್ನು ಪ್ರಸವಿಸುವಳು. ಇವಳು ಪೂರ್ವದಲ್ಲಿ ವಿಧವೆಯಾಗಿದ್ದು ಈಗ ಸೌಭಾಗ್ಯವತಿಯಾಗಿರುವಳು.

೩೪. ಈಕೆಯು ಮಹಾರಾಜನ ರಾಣಿಯರೊಳಗೆಲ್ಲ ಅತ್ಯಂತ ಪ್ರೀತಿಪಾತ್ರಳಾಗಿರುವಳು. ಈಕೆಗೆ ರಾಜನು ತನ್ನ ವಕ್ಷದಲ್ಲಿದ್ದ ಮುತ್ತಿನಸರವನ್ನೇ ತೆಗೆದು ಕೊಟ್ಟಿರುತ್ತಾನೆ.

ಪಂಚಸಪ್ತದಿನಾನ್ಯೇವ ಜಾತಾನೀತಿ ಹ ತರ್ಕ್ಯತೇ ।
ಅಸ್ಯೈ ರಾಜ್ಞಾ ಪ್ರಸಾದೇನ ಗ್ರಾಮೌ ದಾತುಮುದೀರಿತೌ ॥ ೩೫ ॥
ಇತಿ ದೃಷ್ಟಾರ್ಥಕಥನೈ ರಾಜ್ಞೀಮಾನ್ಯೋಽಭವದ್ದ್ವಿಜಃ ।
ವರ್ಣಯಂತಿ ಚ ತಾ ರಾಜ್ಞಃ ಪರೋಕ್ಷೇಽಪಿ ಗುಣಾನ್ಬಹೂನ್ ॥ ೩೬ ॥
ಅಹೋ ಯಾದೃಗಸೌ ವಿಪ್ರಃ ಸರ್ವತ್ರಾತಿವಿಚಕ್ಷಣಃ ।
ಸುಶೀಲಶ್ಚ ಸುರೂಪಶ್ಚ ಸತ್ಯವಾಙ್ ಮಿತಭಾಷಣಃ ॥ ೩೭ ॥
ಅಲೋಲುಪ ಉದಾರಶ್ಚ ಸದಾಚಾರೋ ಜಿತೇಂದ್ರಿಯಃ ।
ಅಪಿ ಸ್ವಲ್ಪೇನ ಸಂತುಷ್ಟಃ ಪ್ರತಿಗ್ರಹಪರಾಙ್ಮುಖಃ ॥ ೩೮ ॥
ಜಿತಕ್ರೋಧಃ ಪ್ರಸನ್ನಾಸ್ಯಸ್ತ್ವನಸೂಯುರವಂಚಕಃ ।
ಕೃತಜ್ಞಃ ಪ್ರೀತಿಸುಮುಖಃ ಪರಿವಾದಪರಾಙ್ಮುಖಃ ॥ ೩೯ ॥
ಪುಣ್ಯೋಪದೇಷ್ಟಾ ಪುಣ್ಯಾತ್ಮಾ ಸರ್ವವ್ರತಪರಾಯಣಃ ।
ಶುಚಿಃ ಶುಚಿಚರಿತ್ರಶ್ಚ ಶ್ರುತಿಸ್ಮೃತಿವಿಶಾರದಃ ॥ ೪೦ ॥

---

೩೫. ಈಕೆಗೆ ರಾಜನು ಪ್ರಸನ್ನನಾಗಿ ಎರಡು ಗ್ರಾಮುಗಳನ್ನು ಸಹ ಬಳುವಳಿಯಾಗಿ ಕೊಡುವೆನೆಂದು ಹೇಳಿರುವನು. ಇದು ನಡೆದು ಪ್ರಾಯಶಃ ಐದೋ ಏಳೋ ದಿವಸಗಳಾಗಿರಬಹುದೆಂದು ಊಹಿಸುತ್ತೇನೆ."

೩೬. ಇಂತೆಂದು ಹಿಂದೆ ನಡೆದ ವಿಷಯಗಳನ್ನೇ ಯಥಾರ್ಥವಾಗಿ ತಿಳಿಸುತ್ತಿರುವ ಆ ಬ್ರಾಹ್ಮಣನು ರಾಜನ ರಾಣಿವಾಸದಲ್ಲಿಯೂ ಮನ್ನಣೆಯನ್ನು ಪಡೆಯುವವನಾದನು. ಆತನ ಪರೋಕ್ಷದಲ್ಲಿಯೂ ಆ ರಾಣಿಯರೆಲ್ಲರೂ ಆತನ ಅನೇಕ ಸದ್ಗುಣಗಳನ್ನು ತಮ್ಮಲ್ಲಿಯೇ ವರ್ಣಿಸಿಕೊಳ್ಳುತ್ತಿದ್ದರು.

೩೭. "ಆಶ್ಚರ್ಯವು! ಈ ಬ್ರಾಹ್ಮಣನು ಸಕಲ ವಿದ್ಯೆಗಳಲ್ಲಿಯೂ ಅತ್ಯಂತ ವಿಚಕ್ಷಣನಾಗಿರುವನು. ಈತನು ಒಳ್ಳೆಯ ನಡತೆಯುಳ್ಳವನು. ಸುಂದರ ರೂಪನು. ಮಿತಭಾಷಣವನ್ನು ಮಾಡುವವನಾದರೂ ಸತ್ಯವನ್ನೇ ಹೇಳುತ್ತಿರುವನು.

೩೮. ಯಾವ ಇಂದ್ರಿಯ ಲೋಲುಪತೆಯೂ ಈತನಲ್ಲಿಲ್ಲವು. ಉದಾರ ಬುದ್ಧಿಯುಳ್ಳವನೂ, ಸದಾಚಾರನಿರತನೂ, ಜಿತೇಂದ್ರಿಯನೂ, ಆಗಿರುವನು. ಎಷ್ಟು ಸ್ವಲ್ಪವನ್ನಿತ್ತರೂ ಸಂತೋಷಗೊಳ್ಳುವವನಾಗಿ ದಾನ ಸ್ವೀಕಾರದ ವಿಷಯದಲ್ಲಿ ಪರಾಙ್ಮುಖನಾಗಿರುವನು.

೩೯. ಕೋಪವನ್ನು ಜಯಿಸಿರುವನು. ಈತನ ಮುಖವು ಯಾವಾಗಲೂ ಪ್ರಸನ್ನವಾಗಿರುವುದು. ಅಸೂಯಾರಹಿತನಾಗಿ, ಯಾರಿಗೂ ವಂಚನೆಯನ್ನು ಮಾಡುವವನಲ್ಲ. ಕೃತಜ್ಞನೂ, ಪ್ರೀತಿಯನ್ನು ಮುಖದಲ್ಲಿ ತೋರುವವನೂ, ಪರನಿಂದೆಯನ್ನು ಸಹಿಸದವನೂ ಆಗಿರುವನು.

೪೦. ಪುಣ್ಯಕರ್ಮಗಳನ್ನೇ ಉಪದೇಶಮಾಡುವ ಪುಣ್ಯಪುರುಷನಿವನು.

ಧೀರಃ ಪುಣ್ಯೇತಿಹಾಸಜ್ಞಃ ಸರ್ವದೃಕ್ಸರ್ವಸಮ್ಮತಃ ।
ಕಲಾಕಲಾಪಕುಶಲೋ ಜ್ಯೋತಿಶ್ಶಾಸ್ತ್ರವಿದುತ್ತಮಃ ॥ ೪೧ ॥
ಕ್ಷಮೀ ಕುಲೀನೋಽಕೃಪಣೋ ಭೋಕ್ತಾ ನಿರ್ಮಲಮಾನಸಃ ।
ಇತ್ಯಾದಿಗುಣಸಂಪನ್ನಃ ಕೋಽಪಿ ಕ್ವಾಪಿ ನ ದೃಗ್ಗತಃ ॥ ೪೨ ॥
ಇತ್ಥಂ ತಾಸ್ತದ್ಗುಣಗ್ರಾಮಂ ವರ್ಣಯಂತ್ಯಃ ಪದೇ ಪದೇ ।
ಕಾಲಂ ವಿನೋದಯಂತಿ ಸ್ಮ ಅಂತಃಪುರಚರಾಃ ಸ್ತ್ರಿಯಃ ॥ ೪೩ ॥
ಏಕದಾವಸರಂ ಪ್ರಾಪ್ಯ ದಿವೋದಾಸಸ್ಯ ಭೂಭುಜಃ ।
ರಾಜ್ಞೀ ಲೀಲಾವತೀ ನಾಮ ರಾಜ್ಞೇ ತಂ ವ್ಯನ್ಯವೇದಯತ್ ॥ ೪೪ ॥
ರಾಜನ್ವೃದ್ಧೋ ಗುಣೈರ್ವೃದ್ಧೋ ಬ್ರಾಹ್ಮಣಃ ಸುವಿಚಕ್ಷಣಃ ।
ಏಕೋಽಸ್ತಿ ಸ ತು ದ್ರಷ್ಟವ್ಯೋ ಮೂರ್ತೋ ಬ್ರಹ್ಮನಿಧಿಃ ಪರಃ ॥ ೪೫ ॥
ರಾಜ್ಞೀ ರಾಜ್ಞಾ ಕೃತಾನುಜ್ಞಾ ಸಖೀಂ ಪ್ರೇಷ್ಯ ವಿಚಕ್ಷಣಾಂ ।
ಆನಿನಾಯ ಚ ತಂ ವಿಪ್ರಂ ಬ್ರಾಹ್ಮಂ ತೇಜ ಇವಾಂಗವತ್ ॥ ೪೬ ॥

---

ಸಕಲವ್ರತಗಳಲ್ಲಿಯೂ ಅಕ್ಕರೆಯುಳ್ಳವನು; ಶುಚಿಯು; ನಿರ್ಮಲಚರಿತ್ರನು; ವೇದಶಾಸ್ತ್ರಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರುವವನು.

೪೧. ಧೈರ್ಯವಂತನು; ಪುಣ್ಯತಮಗಳಾದ ಇತಿಹಾಸಗಳನ್ನು ಬಲ್ಲವನು; ಸಮದೃಷ್ಟಿಯುಳ್ಳವನಾಗಿ ಸಕಲರಿಗೂ ಬೇಕಾದವನು; ಸಕಲ ಕಲೆಗಳಲ್ಲಿಯೂ ನಿಪುಣನು; ಜ್ಯೋತಿಷಶಾಸ್ತ್ರವನ್ನು ತಿಳಿದವರಲ್ಲಿ ಸರ್ವೋತ್ತಮನು.

೪೨. ಕ್ಷಮಾಶೀಲನು; ಸತ್ಕುಲಪ್ರಸೂತನು; ಕಾರ್ಪಣ್ಯದೋಷವರ್ಜಿತನು; ಧರ್ಮಲಬ್ಧಗಳಾದ ಪದಾರ್ಥಗಳನ್ನು ಮಾತ್ರ ಅನುಭವಿಸುವನು; ಶುದ್ಧ ಮನಸ್ಸುಳ್ಳವನು; ಇಂತಹ ಸಕಲ ಸದ್ಗುಣಗಳುಳ್ಳವನು ಯಾರೂ ಎಲ್ಲಿಯೂ ನಮ್ಮ ದೃಷ್ಟಿಗೆ ಗೋಚರನಾಗಿರಲಿಲ್ಲ.

೪೩. ಇಂತು ಪಟ್ಟಣದ ಅಂತಃಪುರಗಳಲ್ಲಿರುವ ಸ್ತ್ರೀಯರೆಲ್ಲರೂ ಕ್ಷಣ ಕ್ಷಣಕ್ಕೂ ಆ ಬ್ರಾಹ್ಮಣನ ಸದ್ಗುಣಗಳನ್ನೇ ವರ್ಣಿಸಿಕೊಳ್ಳುತ್ತ ವಿನೋದ ಗಳಿಂದ ಕಾಲಕಳೆಯುತ್ತಿದ್ದರು.

೪೪. ಒಂದಾನೊಂದು ದಿನ ಸಮಯವರಿತು ದಿವೋದಾಸಮಹಾರಾಜನ ಮಡದಿಯಾದ ಲೀಲಾವತೀರಾಣಿಯು ರಾಜನಿಗೆ ಆ ಬ್ರಾಹ್ಮಣೋತ್ತಮನ ವಿಷಯವನ್ನು ವಿಜ್ಞಾಪಿಸಿದಳು.

೪೫. "ರಾಜೇಶ್ವರ! ಈ ನಗರದಲ್ಲಿ ಒಬ್ಬ ಬ್ರಾಹ್ಮಣನಿರುವನು. ಆತನು ವೃದ್ಧನೂ, ಗುಣಗಳಿಂದ ಜ್ಯೇಷ್ಠನೂ, ಒಳ್ಳೆಯ ವಿಚಕ್ಷಣನೂ, ಆಗಿರುವನು. ವೇದಸಮುದ್ರವೇ ಬೇರೊಂದು ರೂಪವನ್ನು ತಾಳಿದಂತಿರುವ ಆತನನ್ನು ತಾವು ನೋಡಲೇಬೇಕು."

೪೬. ಇಂತೆಂದ ರಾಣಿಯು ಮಹಾರಾಜನ ಅಪ್ಪಣೆಯನ್ನು ಪಡೆದುಕೊಂಡು

ರಾಜಾಪಿ ದೂರಾದಾಯಾಂತಂ ತಂ ವಿಲೋಕ್ಯ ಮಹೀಸುರಂ ।
ಯತ್ರಾಕೃತಿರ್ಗುಣಾಸ್ತತ್ರ ಜಹರ್ಷೇತಿ ವದನ್ಹೃದಿ ॥ ೪೭ ॥
ಷದ್ವೈದ್ವಿತ್ರೈರ್ನೃಪತಿನಾ ಕೃತಾಭ್ಯುತ್ಥಾನಸತ್ಕೃತಿಃ ।
ಚತುರ್ನಿಗಮಜಾಭಿಃ ಸ ತಮಾಶೀರ್ಭಿರನಂದಯತ್ ॥ ೪೮ ॥
ಕೃತಪ್ರಣಾಮೋ ರಾಜ್ಞಾ ಸ ಸಾದರಂ ದತ್ತಮಾಸನಂ ।
ಭೇಜೇಽಥ ಕುಶಲಂ ಪೃಷ್ಟಃ ಸ ರಾಜ್ಞಾ ತೇನ ಭೂಪತಿಃ ॥ ೪೯ ॥
ಪರಸ್ಪರಂ ಕುಶಲಿನೌ ಕುಶಲೌ ಚ ಕಥಾಗಮೇ ।
ಪ್ರಶ್ನೋತ್ತರಾಭ್ಯಾಂ ಸಂತುಷ್ಟೌ ದ್ವಿಜವರ್ಯಕ್ಷ್ಮಾಭೃತೌ ॥ ೫೦ ॥
ಕಥಾವಸಾನೇ ರಾಜ್ಞಾಥ ಗೇಹಂ ವಿಸಸೃಜೇ ದ್ವಿಜಃ ।
ಲಬ್ಧಮಾನಮಹಾಪೂಜಃ ಸ ಸ್ವಮಾಶ್ರಮಮಾವಿಶತ್ ॥ ೫೧ ॥
ಗತೇಽಥ ಸ್ವಾಶ್ರಮಂ ವಿಪ್ರೇ ದಿವೋದಾಸೋ ನರೇಶ್ವರಃ ।
ಲೀಲಾವತ್ಯಾಃ ಪುರೋ ವಿಪ್ರಂ ವರ್ಣಯಾಮಾಸ ಭೂರಿಶಃ ॥ ೫೨ ॥

---

ಕಾರ್ಯಕುಶಲಳಾದ ಸಖಿಯೊಬ್ಬಳನ್ನು ಕಳುಹಿಸಿ ಶರೀರವನ್ನು ಧರಿಸಿದ ಬ್ರಹ್ಮ ತೇಜಸ್ಸೋ ಎಂಬಂತೆ ತೋರುತ್ತಿದ್ದ ಆತನನ್ನು ಬರಮಾಡಿಕೊಂಡಳು.

೪೭. ರಾಜನೂ ಬ್ರಾಹ್ಮಣೋತ್ತಮನು ಬರುತ್ತಿರುವುದನ್ನು ದೂರದಿಂದಲೇ ಕಂಡು, "ಎಲ್ಲಿ ಸುಂದರರೂಪವಿರುವುದೊ, ಅಲ್ಲಿಯೇ ಸದ್ಗುಣಗಳೂ ತುಂಬಿರುವುವು" ಎಂಬುದಾಗಿ ತನ್ನ ಮನಸ್ಸಿನಲ್ಲಿಯೇ ಎಂದುಕೊಳ್ಳುತ್ತ ಸಂತುಷ್ಟನಾದನು.

೪೮. ರಾಜನು ತರುವಾಯ ಎರಡು ಮೂರು ಹೆಜ್ಜೆಗಳಷ್ಟು ಮುಂದಕ್ಕೆ ಬಂದು ಆ ವಿಪ್ರನಿಗೆ ಪ್ರತ್ಯುತ್ಥಾನ ಮತ್ತು ಅತಿಥಿಸತ್ಕಾರಗಳನ್ನು ಮಾಡಿದನು. ಆ ಬ್ರಾಹ್ಮಣನೂ ನಾಲ್ಕು ವೇದಗಳಲ್ಲಿನ ಉತ್ತಮ ಮಂತ್ರಗಳಿಂದ ಮಹಾರಾಜನನ್ನು ಆಶೀರ್ವದಿಸಿದನು.

೪೯. ಬಳಿಕ ಮಹಾರಾಜನು ಆತನಿಗೆ ನಮಸ್ಕಾರವನ್ನು ಮಾಡಿ ಆದರದಿಂದ ಉಚಿತಾಸನವನ್ನೊಪ್ಪಿಸಿದನು. ಬಳಿಕ ಇಬ್ಬರೂ ಪರಸ್ಪರ ಕುಶಲಪ್ರಶ್ನೆಗಳನ್ನು ಮಾಡಿ ತಮ್ಮ ಆಸನಗಳನ್ನಲಂಕರಿಸಿದರು.

೫೦. ಆ ಬ್ರಾಹ್ಮಣೋತ್ತಮನೂ ಮಹಾರಾಜನೂ ಒಬ್ಬರಿಗಿಂತ ಒಬ್ಬರು ಆರೋಗ್ಯಕಾಯವುಳ್ಳವರೂ, ಕಥೆಗಳನ್ನು ಹೇಳುವುದರಲ್ಲಿ ನಿಪುಣರೂ ಆದುದರಿಂದ ಪ್ರಶ್ನಪ್ರತಿವಚನಗಳಿಂದ ಪರಸ್ಪರ ಸಂತೋಷವನ್ನುಂಟುಮಾಡಿದರು.

೫೧. ಕಥಾಪ್ರಸಂಗವು ಮುಗಿದಮೇಲೆ ರಾಜನು ಆ ಬ್ರಾಹ್ಮಣನನ್ನು ಮನೆಗೆ ಹೋಗಲು ಬೀಳುಕೊಟ್ಟನು. ಆತನೂ ಸಹ ರಾಜನಿಂದ ವಿಶೇಷವಾದ ಮರ್ಯಾದೆಯನ್ನು ಹೊಂದಿದವನಾಗಿ ತನ್ನ ಆಶ್ರಮಕ್ಕೆ ಹಿಂದಿರುಗಿದನು.

೫೨. ಆ ವಿಪ್ರನು ತನ್ನ ಆಶ್ರಮಕ್ಕೆ ಹೊರಟುಹೋಗಲು, ಮಹಾರಾಜ

ಮಹಾದೇವಿ ಮಹಾಪ್ರಾಜ್ಞೇ ಲೀಲಾವತಿ ಗುಣಪ್ರಿಯೇ ।
ಯಥಾ ಶಂಸಿ ತಥಾ ವಿಪ್ರಸ್ತತೋಽಪಿ ಗುಣವತ್ತರಃ ॥ ೫೩ ॥
ಅತೀತಂ ವೇತ್ತಿ ಸಕಲಂ ವರ್ತಮಾನಮವೈತಿ ಚ ।
ಪ್ರಷ್ಟವ್ಯಃ ಪ್ರಾತರಾಹೂಯ ಭವಿಷ್ಯಂ ಕಿಂಚಿದೇಷ ವೈ ॥ ೫೪ ॥
ಮಹಾವಿಭವಸಂಭಾರೈರ್ಮಹಾಭೋಗ್ಯೈರನೇಕಧಾ ।
ವ್ಯುಷ್ಟಾಯಾಂ ಸ ನೃಪೋ ರಾತ್ರ್ಯಾಂ ಪ್ರಾತರಾಹೂತವಾನ್ದ್ವಿಜಂ ॥ ೫೫ ॥
ಸತ್ಕೃತ್ಯ ತಂ ದ್ವಿಜಂ ಭಕ್ತ್ಯಾ ದುಕೂಲಾದಿಪ್ರದಾನತಃ ।
ಏಕಾಂತೇ ತಂ ದ್ವಿಜಂ ರಾಜಾ ಪಪ್ರಚ್ಛ ನಿಜಹೃತ್ಸ್ಥಿತಂ ॥ ೫೬ ॥

ರಾಜೋವಾಚ :—

ದ್ವಿಜವರ್ಯೋ ಭವಾನೇಕಃ ಪ್ರತಿಭಾತೀತಿ ನಿಶ್ಚಿತಂ ।
ಯಥಾ ತತ್ವವತೀ ತೇ ಧೀರ್ನತಥಾನ್ಯಸ್ಯ ಮೇ ಮತಿಃ ॥ ೫೭ ॥

---

ನಾದ ದಿವೋದಾಸನು ಲೀಲಾವತಿಯ ಸಮ್ಮುಖದಲ್ಲಿ ಆತನನ್ನು ಬಹು ವಿಧವಾಗಿ ವರ್ಣಿಸಿದನು.

೫೩. "ಮಹಾದೇವಿ! ನೀನು ಬಹಳ ಬುದ್ಧಿವಂತಳು. ಲೀಲಾವತಿಯೆ! ನೀನು ಸದ್ಗುಣಗಳಿಂದ ನನಗೆ ಪ್ರಿಯಳಾಗಿರುವೆ. ನೀನು ಹೇಳಿದಂತೆಯೇ ಆ ಬ್ರಾಹ್ಮಣನು ಗುಣವಂತನಾಗಿರುವನು. ಅದಕ್ಕಿಂತಲೂ ಗುಣವಂತನೆಂದು ಹೇಳಿದರೂ ಹೇಳಬಹುದಾಗಿರುವುದು.

೫೪. ಆತನು ಕಳೆದುಹೋಗಿರುವುದೆಲ್ಲವನ್ನೂ ತಿಳಿದಿರುವನು. ಈಗ ನಡೆಯುತ್ತಿರುವುದನ್ನೂ ಚೆನ್ನಾಗಿ ಹೇಳಬಲ್ಲನು. ಬೆಳಿಗ್ಗೆ ಪುನಃ ಆತನನ್ನು ಕರೆಸಿಕೊಂಡು ಮುಂದಾಗಲಿರುವುದನ್ನು ಸೂಕ್ಷ್ಮವಾಗಿ ಕೇಳಬೇಕಾಗಿರುವುದು."

೫೫. ಇಂತು ಆ ರಾತ್ರಿಯು ಕಳೆದುಹೋಗಲು ಮಹಾರಾಜನು ತನ್ನ ವೈಭವಕ್ಕೆ ಸದೃಶವಾದ ಸಾಮಗ್ರೀವಿಶೇಷದಿಂದಲೂ, ಮಹಾರ್ಹಗಳಾದ ಭೋಗ್ಯವಸ್ತುಗಳಿಂದಲೂ ಪ್ರಾತಃಕಾಲದಲ್ಲಿ ಆ ಬ್ರಾಹ್ಮಣನನ್ನು ಕರೆಸಿಕೊಂಡನು.

೫೬. ವಸ್ತ್ರಗಳೇ ಮುಂತಾದುವುಗಳ ಸಮರ್ಪಣೆಯಿಂದ ಆ ದ್ವಿಜೋತ್ತಮನನ್ನು ಸತ್ಕರಿಸಿ ಭಕ್ತಿಯುತನಾಗಿ ಆ ರಾಜನು ಆತನನ್ನು ಏಕಾಂತಗೃಹಕ್ಕೆ ಕರೆದುಕೊಂಡು ಹೋಗಿ ತನ್ನ ಹೃದಯದಲ್ಲಿರುವ ವಿಷಯವನ್ನು ಕೇಳತೊಡಗಿದನು.

೫೭. ರಾಜನು ಹೇಳುತ್ತಾನೆ:— "ನೀನೊಬ್ಬನೇ ಬ್ರಾಹ್ಮಣೋತ್ತಮನೆಂಬುದು ನಮಗೆ ನಿಶ್ಚಯವಾಗಿ ತೋರುತ್ತಿರುವುದು. ನಿನ್ನ ಬುದ್ಧಿಯು ತತ್ವಜ್ಞಾನದಿಂದ ಕೂಡಿರುವಂತೆ ಇತರರ ಬುದ್ಧಿಗಳಿಲ್ಲವೆಂದು ನನ್ನ ಮನಸ್ಸಿಗೆ ಹೊಳೆಯುತ್ತಿರುವುದು.

ದೃಷ್ಟ್ವಾ ತ್ವಾಂ ತು ಮಹಾಪ್ರಾಜ್ಞಂ ಶಾಂತಂ ದಾಂತಂ ತಪೋನಿಧಿಂ ।
ಕಿಂಚಿತ್ಪ್ರಷ್ಟುಮನಾ ವಿಪ್ರ ತದಾಖ್ಯಾಹಿ ಯಥಾರ್ಥವತ್ ॥ ೫೮ ॥
ಶಾಸಿತೇಯಂ ಮಯಾ ಪೃಥ್ವೀ ನ ತಥಾನ್ಯೈಸ್ತು ಪಾರ್ಥಿವೈಃ ।
ಯಾವದ್ಭೂತಿ ಮಯಾ ಭುಕ್ತಾ ದಿವ್ಯಾ ಭೋಗಾ ಅನೇಕಧಾ ॥ ೫೯ ॥
ನಿಜೌರಸೇಭ್ಯೋಽಪ್ಯಧಿಕಂ ರಾತ್ರಂದಿವಮತಂದ್ರಿತಂ ।
ವಿನಿರ್ಜಿತ್ಯ ಹಠಾದ್ದುಷ್ಟಾ ಪ್ರಜೇಯಂ ಪರಿಪಾಲಿತಾ ॥ ೬೦ ॥
ದ್ವಿಜಪಾದಾರ್ಚನಾತ್ಕಿಂಚಿತ್ಸುಕೃತಂ ವೇದ್ಮಿ ನಾಪರಂ ।
ಅನೇನಾಽಪರಿಕಥ್ಯೇನ ಕಥಿತೇನೇಹ ಕಿಂ ಮಮ ॥ ೬೧ ॥
ನಿರ್ವಿಸ್ಮಯಮಿವ ಮೇ ಚೇತಃ ಸಾಂಪ್ರತಂ ಸರ್ವಕರ್ಮಸು ।
ವಿಚಾರ್ಯಾರ್ಯ ಶುಭೋದರ್ಕ ಮತಮಾಖ್ಯಾಹಿ ಸತ್ತಮ ॥ ೬೨ ॥

ದ್ವಿಜ ಉವಾಚ :—

ಅಪಿ ಸ್ವಲ್ಪತರಂ ಕೃತ್ಯಂ ಯದ್ಭವೇದ್ಭೂಭುಜಾಮಿಹ ।
ನಿಕಾಂತೇ ತತ್ತು ಪೃಷ್ಟೇನ ವಕ್ತವ್ಯಂ ಸುಧಿಯಾ ಸದಾ ॥ ೬೩ ॥

---

೫೮–೫೯. ಎಲೈ ಬ್ರಾಹ್ಮಣನೆ! ಮಹಾಪ್ರಾಜ್ಞನೂ, ಶಮದಮಾದಿ ಸದ್ಗುಣಗಳಿಂದ ಕೂಡಿದವನೂ, ತಪೋನಿಧಿಯೂ ಆದ ನಿನ್ನನ್ನು ಕಂಡು ಒಂದು ವಿಷಯವನ್ನು ಕೇಳಲಿಚ್ಛಿಸುತ್ತಿರುವೆನು. ಅದನ್ನು ಯಥಾರ್ಥವಾಗಿ ತಿಳಿಸಲು ನೀನೇ ಅರ್ಹನು. ಇಲ್ಲಿಯುವರೆಗೂ ನಾನು ಈ ಭೂಮಂಡಲವನ್ನು ಪಾಲಿಸುತ್ತಿರುವೆನು. ಹೀಗೆ ಇತರ ರಾಜರು ಯಾರೂ ರಾಜ್ಯಗಳನ್ನು ಶಾಸನಮಾಡುತ್ತಿರಲಿಲ್ಲ. ಐಶ್ವರ್ಯಪ್ರಾಪ್ತಗಳಾದ ಬಹುವಿಧಗಳಾದ ಅನೇಕ ದಿವ್ಯಭೋಗಗಳನ್ನೂ ನಾನು ಯಥೇಚ್ಛವಾಗಿ ಅನುಭವಿಸಿರುವೆನು.

೬೦. ಹಗಲುರಾತ್ರಿಗಳೆನ್ನದೆ ಜಾಗರೂಕನಾಗಿ ಪರಾಕ್ರಮದಿಂದ ಸಕಲ ದುಷ್ಟರನ್ನೂ ನಿಗ್ರಹಿಸಿ ನನ್ನ ಸ್ವಂತ ಮಕ್ಕಳಿಗಿಂತಲೂ ಹೆಚ್ಚಾಗಿ ಮಮತೆಯಿಂದ ಈ ಪ್ರಜೆಗಳನ್ನು ರಕ್ಷಿಸುತ್ತಿರುವೆನು.

೬೧–೬೨. ಬ್ರಾಹ್ಮಣರ ಪಾದಗಳ ಪೂಜೆಗಿಂತ ಉತ್ತಮವಾದ ಸುಕೃತವೆಂಬುದನ್ನು ಬೇರಾವುದನ್ನೂ ಕಾಣೆನು. ಹೇಳಿಕೊಳ್ಳಬಾರದಂತಹ ಈ ವಿಚಾರವನ್ನು ಹೇಳಿದುದರಿಂದ ಈಗ ನನಗಾಗಬೇಕಾದುದೇನು? ಈಗ ನನ್ನ ಮನಸ್ಸು ಸಕಲ ಕಾರ್ಯಗಳಲ್ಲಿಯೂ ವೈರಾಗ್ಯವನ್ನು ಹೊಂದುತ್ತಿರುವಂತೆ ತೋರುತ್ತಿರುವುದು. ಪೂಜ್ಯರಲ್ಲಿ ಅಗ್ರಗಣ್ಯನಾದ ನೀನು ಚೆನ್ನಾಗಿ ವಿಚಾರಮಾಡಿ ನನಗೆ ಉತ್ತರೋತ್ತರದಲ್ಲಿ ಶ್ರೇಯಸ್ಸನ್ನುಂಟುಮಾಡುವುದು ಯಾವುದೆಂಬುದನ್ನು ತಿಳಿಸು."

೬೩. ಬ್ರಾಹ್ಮಣನು ಹೇಳುತ್ತಾನೆ:—"ಕ್ಷತ್ರಿಯನಿಗೆ ಒದಗುವ ಯಾವ

ಅಮಾತ್ಯೇನಾಪ್ಯಪೃಷ್ಟೇನ ನ ವಕ್ತವ್ಯಂ ನೃಪಾಗ್ರತಃ ।
ಮಹಾಪಮಾನಭೀತೇನ ಸ್ತೋಕಮಪ್ಯತ್ರ ಕಿಂಚನ ॥ ೬೪ ॥
ಪೃಷ್ಟಶ್ಚೇತ್ಕಥಯಾಮಿಹ ಮಾ ತತ್ರ ಕುರು ಸಂಶಯಂ ।
ತತ್ಕೃತೇ ತವ ಗಂತಾ ವೈ ಮನೋನಿರ್ವೇದಕಾರಣಂ ॥ ೬೫ ॥
ಶೃಣು ರಾಜನ್ಮಹಾಬುದ್ಧೇ ನಾಯಥಾರ್ಥಂ ಬ್ರವೀಮ್ಯಹಂ ।
ವಿಕ್ರಾಂತೋಽಸ್ಯತಿಶೂರೋಽಸಿ ಭಾಗ್ಯವಾನಸಿ ಸರ್ವದಾ ॥ ೬೬ ॥
ಪುಣ್ಯೇನ ಯಶಸಾ ಬುದ್ಧ್ಯಾ ಸಂಪನ್ನೋಽಸ್ತಿ ಭವಾನ್ಯಥಾ ।
ಮನ್ಯೇ ತಥಾಮರಾವತ್ಯಾಂ ತ್ರಿದಶೇಶೋಽಪಿ ನೈವ ಹಿ ॥ ೬೭ ॥
ಸುಧಿಯಾ ತ್ವಾಂ ಗುರುಂ ಮನ್ಯೇ ಪ್ರಸಾದೇನ ಸುಧಾಕರಂ ।
ತೇಜಸಾಸ್ತಿ ಭವಾನರ್ಕಃ ಪ್ರತಾಪೇನಾಶುಶುಕ್ಷಣಿಃ ॥ ೬೮ ॥
ಪ್ರಭಂಜನೋ ಬಲೇನಾಸಿ ಶ್ರೀದೋಽಸಿ ಶ್ರೀಸಮರ್ಪಣೈಃ ।
ಶಾಸನೇನ ಭವಾನ್ರುದ್ರೋ ನಿರ್ಋತಿಸ್ತ್ವಂ ರಣಾಂಗಣೇ ॥ ೬೯ ॥

---

ಅಲ್ಪಕೃತ್ಯದಲ್ಲಿಯಾಗಲಿ, ಏಕಾಂತದಲ್ಲಿ ಅಭಿಪ್ರಾಯವನ್ನು ಕೇಳಲು, ಪ್ರಾಜ್ಞ ನಾದವನು ಯಾವಾಗಲೂ ನಿರ್ಭಯವಾಗಿ ಹೇಳಬೇಕು.

೬೪. ರಾಜನು ಕೇಳದಿದ್ದಾಗಲಾದರೂ, ಮಹಾಮಂತ್ರಿಯಾದರೂ ಆತನ ಇದಿರಿನಲ್ಲಿ ಯಾವುದನ್ನೂ ಹೇಳಬಾರದು. ದುಸ್ಸಾಧ್ಯವಾದ ಅಪಮಾನವುಂಟಾ ಗುವ ಭಯದಿಂದ ಅಲ್ಪವಿಷಯವನ್ನೂ ಸಹ ಕೇಳದಿದ್ದವರಿಗೆ ಹೇಳಬಾರದು.

೬೫. ಈಗ ನೀನು ಕೇಳಿರುವುದರಿಂದ ಹೇಳುತ್ತಿರುವೆನು. ನಾನು ಹೇಳುವ ವಿಷಯದಲ್ಲಿ ಸಂದೇಹಪಡಬೇಡ. ನನ್ನ ಮಾತನ್ನನುಸರಿಸಿ ನಡೆಯುವೆಯಾದರೆ ನಿನ್ನ ಮನಸ್ಸಿನ ವೈರಾಗ್ಯದ ಕಾರಣವು ನಾಶವಾಗುವುದು.

೬೬. ಮಹಾಬುದ್ಧಿಶಾಲಿಯಾದ ರಾಜನೆ! ಕೇಳು. ನಾನು ಸುಳ್ಳನ್ನು ಹೇಳುವವನಲ್ಲವು. ನೀನು ವಿಜಯಶಾಲಿಯೂ, ಅತ್ಯಂತ ಪರಾಕ್ರಮಿಯೂ, ಯಾವಾಗಲೂ ಸಕಲೈಶ್ವರ್ಯಸಮನ್ವಿತನೂ ಆಗಿರುವೆ.

೬೭. ಪುಣ್ಯದಿಂದಲೂ, ಕೀರ್ತಿಯಿಂದಲೂ, ಬುದ್ಧಿಬಲದಿಂದಲೂ, ನೀನು ಹೇಗೆ ಕೂಡಿರುವೆಯೊ, ಹಾಗೆ ಅಮರಾವತಿಯಲ್ಲಿ ದೇವತೆಗಳಿಗೆ ಒಡೆಯನಾದ ಮಹೇಂದ್ರನೂ ಸಂಪನ್ನನಾಗಿರಲಾರನೆಂದು ಯೋಚಿಸುತ್ತಿರುವೆನು.

೬೮. ಬುದ್ಧಿಶಕ್ತಿಯಲ್ಲಿ ನೀನು ಬೃಹಸ್ಪತಿಗೆ ಸಮಾನನೆಂದು ತಿಳಿಯುವೆನು. ಪ್ರಸನ್ನತೆಯಲ್ಲಿ ಚಂದ್ರನನ್ನೂ, ತೇಜಸ್ಸಿನಿಂದ ಸೂರ್ಯನನ್ನೂ, ಪರಾಕ್ರಮದಲ್ಲಿ ಅಗ್ನಿದೇವನನ್ನೂ ಹೋಲುತ್ತಿರುವೆ.

೬೯. ಬಲದಲ್ಲಿ ವಾಯುವಾಗಿರುವೆ. ಐಶ್ವರ್ಯಗಳನ್ನು ದಾನಮಾಡು ವುದರಲ್ಲಿ ಕುಬೇರನಿಗೆ ಸಮನು. ನಿಯಮನಮಾಡುವುದರಲ್ಲಿ ನೀನು ರುದ್ರನು. ಯುದ್ಧರಂಗದಲ್ಲಿ ನಿರ್ಋತಿಗೆ ಸಮಾನನಾಗಿರುವೆ.

ದುಷ್ಟಪಾಶಯಿತಾ ಪಾಶೀ ಯಮೋ ನಿಯಮನೇಽಸತಾಂ ।
ಇಂಧನಾತ್ತ್ವಂ ಮಹೇಂದ್ರೋಽಸಿ ಕ್ಷಮಯಾ ತ್ವಮಸಿ ಕ್ಷಮಾ ॥ ೨೦ ॥
ಮರ್ಯಾದಯಾ ಭವಾನಬ್ಧಿರ್ಮಹತ್ವೇ ಹಿಮವಾನಸಿ ।
ಭಾರ್ಗವೋ ರಾಜನೀತ್ಯಾಸಿ ರಾಜ್ಯೇನ ಮನುನಾ ಸಮಃ ॥ ೨೧ ॥
ಸಂತಾಪಹರ್ತಾಂಬುದವತ್ಪವಿತ್ರೋ ಗಾಂಗನಾಮವತ್ ।
ಸರ್ವೇಷಾಮೇವ ಜಂತೂನಾಂ ಕಾಶೀವ ಸುಗತಿಪ್ರದಃ ॥ ೨೨ ॥
ರುದ್ರಃ ಸಂಹಾರರೂಪೇಣ ಪಾಲನೇನ ಚತುರ್ಭುಜಃ ।
ವಿಧಿವತ್ತ್ವಂ ವಿಧಾತಾಸಿ ಭಾರತೀ ತೇ ಮುಖಾಂಬುಜೇ ॥ ೨೩ ॥
ತ್ವತ್ಪಾಣಿಪದ್ಮೇ ಕಮಲಾ ತ್ವತ್ಕ್ರೋಧೇಽಸ್ತಿ ಹಲಾಹಲಃ ।
ಅಮೃತಂ ತವ ವಾಗೇವ ತ್ವದ್ಭುಜಾವಶ್ವಿನೀಸುತೌ ॥ ೨೪ ॥
ತತ್ಕಿಂ ಯತ್ತ್ವಯಿ ಭೂಜಾನೌ ಸರ್ವದೇವಮಯೋ ಹ್ಯಸಿ ।
ತಸ್ಮಾತ್ತವ ಶುಭೋದರ್ಕೋ ಮಯಾ ಜ್ಞಾತೋಽಸ್ತಿ ತತ್ವತಃ ॥ ೨೫ ॥

---

೨೦. ದುಷ್ಟರನ್ನು ಬಂಧಿಸುವುದರಲ್ಲಿ ವರುಣನೂ, ಅಸಜ್ಜನರನ್ನು ದಂಡಿಸುವುದರಲ್ಲಿ ಯಮಧರ್ಮನೂ, ಐಶ್ವರ್ಯಮಹೋದಯದಿಂದ ಮಹೇಂದ್ರನೂ, ಸೈರಣೆಯಲ್ಲಿ ನೀನು ಭೂಮಿಗೆ ಸಮಾನನೂ ಆಗಿರುವೆ.

೨೧. ಲೋಕಮರ್ಯಾದೆಗಳನ್ನು ಅನುಸರಿಸುವುದರಲ್ಲಿ ನೀನು ಸಮುದ್ರನು. ಪೂಜ್ಯತೆಯಲ್ಲಿ ಹಿಮವಂತನು. ರಾಜನೀತಿಯ ತಿಳುವಳಿಕೆಯಲ್ಲಿ ಶುಕ್ರಸದೃಶನೂ ರಾಜ್ಯಭಾರವನ್ನು, ನಡೆಸುವುದರಲ್ಲಿ ಮನುವಿಗೆ ಸಮಾನನೂ ಆಗಿರುವೆ.

೨೨. ಮೇಘದಂತೆ ಜನರ ಸಂತಾಪಗಳನ್ನು ಕಳೆಯುತ್ತಿರುವೆ. ಗಂಗಾನದಿಯ ನಾಮದಂತೆ ಪವಿತ್ರನಾಗಿರುವೆ. ಈ ಕಾಶೀಕ್ಷೇತ್ರದಂತೆಯೇ ನೀನೂ ಸಕಲ ಪ್ರಾಣಿಗಳಿಗೂ ಸದ್ಗತಿಯನ್ನು ಕೊಡುವವನಾಗಿರುವೆ.

೨೩. ನಾಶಮಾಡುವುದರಲ್ಲಿ ರುದ್ರನೂ, ಪಾಲನಕರ್ಮದಲ್ಲಿ ಮಹಾವಿಷ್ಣುವೂ, ಶಾಸನ ಕಾರ್ಯದಲ್ಲಿ ನೀನು ಬ್ರಹ್ಮದೇವನೂ ಆಗಿರುವೆ. ಸರಸ್ವತಿಯು ನಿನ್ನ ಮುಖಕಮಲದಲ್ಲಿಯೇ ನಲಿದಾಡುತ್ತಿರುವಳು.

೨೪. ನಿನ್ನ ಕರಕಮಲದಲ್ಲಿ ಲಕ್ಷ್ಮಿಯೂ, ನಿನ್ನ ಕೋಪದಲ್ಲಿಯೇ ಹಾಲಾಹಲವಿಷವೂ, ನಿನ್ನ ಮಾತುಗಳಲ್ಲಿಯೇ ಅಮೃತವೂ, ನಿನ್ನ ಭುಜಗಳಲ್ಲಿಯೇ ಅಶ್ವಿನೀದೇವತೆಗಳೂ ವಾಸಿಸುತ್ತಿರುವರು.

೨೫. ಭೂಮಿಯಲ್ಲಿರುವ ಯತ್ಕಿಂಚಿದ್ವಸ್ತುವೂ ಸಹ ಭೂಮಂಡಲದ ಅಧಿಪತಿಯಾದ ನಿನ್ನಲ್ಲಿಯೇ ಇರುವುದು. ನೀನು ಸಕಲ ದೇವತಾಮಯನಾಗಿರುವೆ. ಆದುದರಿಂದ ನಿನಗೆ ಮುಂದೆ ಆಗಲಿರುವ ಮಂಗಳವು ಯಥಾರ್ಥವಾಗಿಯೂ ನನಗೆ ಸಮಗ್ರವಾಗಿ ತಿಳಿದಿರುವುದು.

ಆರಬ್ಧಾದ್ಯದಿನಾದ್ಭೂಪ ಬ್ರಾಹ್ಮಣೋಽಷ್ಟಾದಶೇಽಹನಿ ।
ಉದೀಚ್ಯಃ ಕಶ್ಚಿದಾಗತ್ಯ ಧ್ರುವಂ ತ್ವಾಮುಪದೇಕ್ಷ್ಯತಿ ॥ ೭೬ ॥
ತಸ್ಯ ವಾಕ್ಯಂ ತ್ವಯಾ ರಾಜನ್ಕರ್ತವ್ಯಮವಿಚಾರಿತಂ ।
ತತಸ್ತೇ ಹೃತ್ಸ್ಥಿತಂ ಸರ್ವಂ ಸೇತ್ಸ್ಯತ್ಯೇವ ಮಹಾಮತೇ ॥ ೭೭ ॥
ಇತ್ಯುಕ್ತ್ವಾಽಽಪೃಚ್ಛ್ಯ ರಾಜಾನಂ ಲಬ್ಧಾನುಜ್ಞೋ ದ್ವಿಜೋತ್ತಮಃ ।
ವಿವೇಶ ಸ್ವಾಶ್ರಮಂ ತುಷ್ಟೋ ನೃಪೋಽಪ್ಯಾಶ್ಚರ್ಯವಾನಭೂತ್ ॥ ೭೮ ॥
ಇತ್ಥಂ ವಿಘ್ನಜಿತಾ ಸರ್ವಾ ಪುರೀ ಸ್ವಾತ್ಮವಶೀಕೃತಾ ।
ಸ ಪೌರಾ ಸಾವರೋಧಾ ಚ ಸನೃಪಾ ನಿಜಮಾಯಯಾ ॥ ೭೯ ॥
ಕೃತಕೃತ್ಯಮಿವಾತ್ಮಾನಂ ತತೋ ಮತ್ವಾ ಸ ವಿಘ್ನಜಿತ್ ।
ವಿಧಾಯ ಬಹುಧಾತ್ಮಾನಂ ಕಾಶ್ಯಾಂ ಸ್ಥಿತಿಮವಾಪ ಚ ॥ ೮೦ ॥
ಯದಾಸನೋ ದಿವೋದಾಸಃ ಪ್ರಾಗಾಸೀತ್ಕುಂಭಸಂಭವ ।
ತದಾಸನಂ ನಿಜಂ ಸ್ಥಾನಮಲಂಚಕ್ರೇ ಗಣಾಧಿಪಃ ॥ ೮೧ ॥

---

೭೬. ಎಲೈ ರಾಜನೆ! ಇಂದು ಮೊದಲುಗೊಂಡು ಹದಿನೆಂಟನೆಯ ದಿನದ ಪ್ರಾತಃಕಾಲದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನು ಉತ್ತರದಿಕ್ಕಿನಿಂದ ಬಂದು ನಿನಗೆ ತತ್ತ್ವೋಪದೇಶವನ್ನು ಮಾಡುವನು. ಇದು ನಿಶ್ಚಯವು.

೭೭. ಮಹಾಮತಿಯಾದ ಭೂಪಾಲಕನೆ! ಆತನು ಹೇಳಿದ ಮಾತುಗಳನ್ನು ನೀನು ವಿಚಾರಿಸದೆಯೇ ನಂಬಿ ಅವುಗಳಂತೆ ನಡೆಯಬೇಕು. ಅದರಿಂದಲೇ ನಿನ್ನ ಮನಸ್ಸಿನಲ್ಲಿರುವ ಬಯಕೆಯೆಲ್ಲವೂ ಸಿದ್ಧಿಸುವುದು.''

೭೮. ಇಂತೆಂದು ರಾಜನನ್ನು ವಂದಿಸಿದವನಾಗಿ ಆ ಬ್ರಾಹ್ಮಣನು ಆತನ ಅನುಜ್ಞೆಯನ್ನು ಪಡೆದು ಸಂತೋಷದಿಂದ ತನ್ನ ಆಶ್ರಮವನ್ನು ಪ್ರವೇಶಿಸಿದನು. ಆ ಮಹಾರಾಜನೂ ಸಹ ಪರಮಾಶ್ಚರ್ಯಭರಿತನಾದನು.

೭೯. ಇಂತು ವಿಘ್ನೇಶ್ವರನಿಂದ ಸಕಲ ಕ್ಷೇತ್ರವೂ ವಶಗೊಳಿಸಲ್ಪಟ್ಟಿತು. ಪುರಜನರು, ಅಂತಃಪುರದ ಸ್ತ್ರೀಯರು, ಮಹಾರಾಜನು ಮೊದಲಾದವರೆಲ್ಲರೂ ತನ್ನ ಮಾಯೆಯಿಂದ ಆವೃತರಾಗಿದ್ದರು..

೮೦. ಆಗ ಗಣಪತಿಯು ತಾನು ಕೃತಾರ್ಥನಾದೆನೆಂದು ತಿಳಿದುಕೊಂಡು ಅನೇಕ ರೂಪಗಳಾಗಿ ತನ್ನ ಶಕ್ತಿಯನ್ನು ವಿಭಾಗಮಾಡಿ ಕಾಶಿಯಲ್ಲಿಯೇ ವಾಸ ಮಾಡುವವನಾದನು.

೮೧. ಕುಂಭೋದ್ಭವನಾದ ಅಗಸ್ತ್ಯನೆ! ಪೂರ್ವದಲ್ಲಿ ದಿವೋದಾಸನು ಯಾವ ಆಸನವನ್ನು ಅಲಂಕರಿಸಿದ್ದನೊ, ಅದನ್ನೇ ವಿಘ್ನೇಶ್ವರನು ತನ್ನ ಸ್ಥಾನವನ್ನಾಗಿ ಮಾಡಿಕೊಂಡು ಕಾಶಿಯಲ್ಲಿ ನೆಲಸಿದನು.

ದಿವೋದಾಸೇ ನರಪತೌ ವಿಷ್ಣುನೋಚ್ಚಾಟಿತೇ ಸತಿ ।
ಪುನರ್ನವೀಕೃತಾಯಾಂ ಚ ನಗರ್ಯಾಂ ವಿಶ್ವಕರ್ಮಣಾ ॥ ೮೨ ॥
ಸ್ವಯಮಾಗತ್ಯ ದೇವೇಶ ಮಂದರಾತ್ಸುಂದರಾಂ ಪುರೀಂ ।
ವಾರಾಣಸೀಂ ಪ್ರಥಮತಸ್ತುಷ್ಟುವೇ ಗಣನಾಯಕಂ ॥ ೮೩ ॥

ಅಗಸ್ತಿರುವಾಚ :—

ಕಥಂ ಸ್ತುತೋ ಭಗವತಾ ದೇವದೇವೇನ ವಿಘ್ನಜಿತ್ ।
ಕಥಂ ಚ ಬಹುಧಾತ್ಮಾನಂ ಸ ಚಕಾರ ವಿನಾಯಕಃ ॥ ೮೪ ॥
ಕೇನ ಕೇನ ಸ ವೈ ನಾಮ್ನಾ ಕಾಶೀಪುರ್ಯಾಂ ವ್ಯವಸ್ಥಿತಃ ।
ಇತಿ ಸರ್ವಂ ಸಮಾಸೇನ ಕಥಯಸ್ವ ಷಡಾನನ ॥ ೮೫ ॥
ಇತ್ಯುದೀರಿತಮಾಕರ್ಣ್ಯ ಕುಂಭಯೋನೇಃ ಷಡಾನನ ।
ಯಥಾವತ್ಕಥಯಾಮಾಸ ಗಣರಾಜಕಥಾಂ ಶುಭಾಂ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಗಣೇಶಮಾಯಾಪ್ರಪಂಚವರ್ಣನಂ"
ನಾಮ ಷಟ್ಪಂಚಾಶತ್ತಮೋಽಧ್ಯಾಯಃ

---

೮೨. ಬಳಿಕ ರಾಜನಾದ ದಿವೋದಾಸನು ಮಹಾ ವಿಷ್ಣುವಿನ ಮೂಲಕವಾಗಿ ನಗರದಿಂದ ಹೊರಡಿಸಲ್ಪಡಲು ಆ ನಗರವೆಲ್ಲವೂ ವಿಶ್ವಕರ್ಮನಿಂದ ಪುನಃ ನೂತನವಾಗಿ ಅಲಂಕರಿಸಲ್ಪಟ್ಟಿತು.

೮೩. ಆಗ ಮಹಾದೇವನು ಮಂದರಾಚಲವನ್ನು ಬಿಟ್ಟು ಸುಂದರ ನಗರಿಯಾದ ವಾರಾಣಸಿಯನ್ನು ಪ್ರವೇಶಿಸಿದ ಕ್ಷಣದಲ್ಲಿಯೇ ಪ್ರಥಮದಲ್ಲಿ ಗಣಪತಿಯನ್ನು ಬಹು ವಿಧವಾಗಿ ಸ್ತೋತ್ರಮಾಡಿದನು.

೮೪. ಅಗಸ್ತ್ಯನು ಹೇಳುತ್ತಾನೆ:—ದೇವದೇವನೂ, ಷಡ್ಗುಣೈಶ್ವರ್ಯಭರಿತನೂ ಆದ ಮಹೇಶ್ವರನಿಂದ ಗಜಮುಖನು ಹೇಗೆ ಸಂಸ್ತುತನಾದನು? ಆ ವಿನಾಯಕನು ತನ್ನನ್ನು ಬಹು ವಿಧವಾಗಿ ವಿಭಾಗಮಾಡಿಕೊಂಡುದು ಹೇಗೆ?

೮೫. ಕಾಶೀನಗರಿಯಲ್ಲಿ ಆತನು ಯಾವ ಯಾವ ಹೆಸರಿನಿಂದ ಸ್ಥಾಪಿತನಾಗಿರುವನು? ಎಲೈ ಷಣ್ಮುಖಸ್ವಾಮಿಯೆ! ಈ ವಿಷಯಗಳೆಲ್ಲವನ್ನೂ ವಿಸ್ತಾರವಾಗಿ ಕೇಳಲಿಚ್ಛಿಸುತ್ತಿರುವ ನನಗೆ ನಿರೂಪಿಸುವವನಾಗು.

೮೬. ಇಂತು ಕುಂಭಸಂಭವನಾಡಿದ ಮಾತುಗಳನ್ನು ಕೇಳಿ ಷಡಾನನನು ಗಣಾಧಿನಾಯಕನ ಪುಣ್ಯತಮವಾದ ಕಥೆಯನ್ನು ಆಮೂಲಾಗ್ರವಾಗಿ ಆತನಿಗೆ ಹೇಳಲುಪಕ್ರಮಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಗಣೇಶಮಾಯಾಪ್ರಪಂಚವರ್ಣನ"ವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶತ್ತಮೋಽಧ್ಯಾಯಃ

### ಢುಂಢಿವಿನಾಯಕ ಪ್ರಾದುರ್ಭಾವವರ್ಣನಂ

ಸ್ಕಂದ ಉವಾಚ :—

ವಿಶ್ವೇಶೋ ವಿಶ್ವಯಾ ಸಾರ್ಧಂ ಮಯಾ ಚ ಮುನಿಸತ್ತಮ ।
ಮಹಾಶಾಖವಿಶಾಖಾಭ್ಯಾಂ ನಂದಿಭೃಂಗಿಪುರೋಗಮಃ ॥ ೧ ॥
ನೈಗಮೇಯೇನ ಸಹಿತೋ ರುದ್ರೈಃ ಸರ್ವತ್ರ ಸಂವೃತಃ ।
ದೇವರ್ಷಿಭಿಃ ಸಮಾಯುಕ್ತಃ ಸನಕಾದ್ಯೈರಭಿಷ್ಟುತಃ ॥ ೨ ॥
ಸಮಸ್ತಾಯತನಾಧೀಶೈರ್ದಿಕ್ಪಾಲೈರಭಿನಂದಿತಃ ।
ತೀರ್ಥೈರ್ದರ್ಶಿತತೀರ್ಥಶ್ಚ ಗಂಧರ್ವೈರ್ಗೀತಮಂಗಲಃ ॥ ೩ ॥
ಕೃತಪೂಜೋಽಪ್ಸರೋಭಿಶ್ಚ ನೃತ್ಯಹಸ್ತಕಪಲ್ಲವೈಃ ।
ವಿಯತ್ಯನಾಹತೈರ್ವಾದ್ಯೈಃ ಸಮಂತಾದನುಮೋದಿತಃ ॥ ೪ ॥
ಋಷೀಣಾಂ ಬ್ರಹ್ಮನಿರ್ಘೋಷೈರ್ಬಧಿರೀಕೃತದಿಙ್ಮುಖಃ ।
ಕೃತಸ್ತುತಿಶ್ಚಾರಣೌಘೈರ್ವಿಮಾನೈರಭಿತೋ ವೃತಃ ॥ ೫ ॥

---

### ಕನ್ನಡದ ಅನುವಾದ

### ಢುಂಢಿವಿನಾಯಕ ಪ್ರಾದುರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ:—ಮುನಿಶ್ರೇಷ್ಠನೆ! ಬಳಿಕ ಪಾರ್ವತೀಸಮೇತನಾದ ವಿಶ್ವೇಶ್ವರನು ನನ್ನೊಡನೆಯೂ, ಮಹಾಶಾಖ ವಿಶಾಖರೊಡನೆಯೂ ನಂದಿ ಭೃಂಗಿಗಳು ಮುಂದೆಬರುತ್ತಿರಲು ಕಾಶಿಗೆ ಹೊರಟನು.

೨. ನೈಗಮೇಯನಿಂದ ಕೂಡಿದವನಾಗಿ ರುದ್ರರಿಂದ ಸುತ್ತಲೂ ಪರಿವೃತನಾಗಿದ್ದನು. ದೇವರ್ಷಿಗಳಿಂದ ಯುಕ್ತನಾಗಿ ಸನಕಾದಿ ಮಹಾಮುನಿಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಲಿದ್ದನು.

೩. ಸಮಸ್ತ ವಾಸಸ್ಥಾನಗಳಿಗೂ ಅಧೀಶ್ವರರಾದ ಅಷ್ಟದಿಕ್ಪಾಲಕರ ಅಭಿನಂದನೆಗಳನ್ನು ಕೇಳುತ್ತ ರೂಪುಗೊಂಡ ತೀರ್ಥಗಳೇ ದಾರಿಯನ್ನು ತೋರಿಸುತ್ತಿರಲು ಗಂಧರ್ವ ನಾಯಕರು ಮಂಗಳಗೀತಗಳನ್ನು ಹಾಡುತ್ತಿದ್ದರು.

೪. ಅಪ್ಸರಸೆಯರು ಪೂಜೆಯನ್ನು ಮಾಡುತ್ತಿದ್ದರು. ನೃತ್ಯಗಳನ್ನು ಮಾಡುತ್ತ ಕೈಗಳಿಂದ ಪುಷ್ಪಗಳನ್ನೆರಚುತ್ತಿದ್ದರು. ಆಕಾಶದಲ್ಲಿ ದೇವವಾದ್ಯಗಳು ಬಾಜಿಸುವವರಿಲ್ಲದೆಯೇ ಧ್ವನಿಗೈಯುತ್ತಿದ್ದುವು. ಇಂತು ಸರ್ವರೂ ಆತನ ಕಾಶೀ ಪ್ರವೇಶವನ್ನು ಅನುಮೋದಿಸುತ್ತಿದ್ದರು.

೫. ಮಹರ್ಷಿಗಳು ತಮ್ಮ ವೇದಘೋಷಗಳಿಂದ ಎಂಟುದಿಕ್ಕುಗಳ ಜನ

ತ್ರಿವಿಷ್ಟಪಸಧೂಮುಷ್ಟಿಭ್ರುಷ್ಟೈರ್ಲಾಜೈರಿತಸ್ತತಃ ।
ಅಭಿವೃಷ್ಟೋ ಮಹಾದೇವಃ ಸಂಪ್ರಹೃಷ್ಟತನೂರುಹಃ ॥ ೬ ॥
ದತ್ತಮಾಲ್ಯೋಪಹಾರಶ್ಚ ಬಹುವಿದ್ಯಾಧರೀಗಣೈಃ ।
ಯಕ್ಷಗುಹ್ಯಕಸಿದ್ಧೈಶ್ಚ ಖೇಚರೈರಭಿನಂದಿತಃ ॥ ೭ ॥
ಕೃತಪ್ರವೇಶಶಕುನೋ ಮೃಗೈಃ ಶಕುನಿಭಿಃ ಪುರಃ ।
ಕಿನ್ನರೀಭಿಃ ಪ್ರಹೃಷ್ಟಾಸ್ಯೈಃ ಕಿನ್ನರೈರುಪವರ್ಣಿತಃ ॥ ೮ ॥
ವಿಷ್ಣುನಾ ಚ ಮಹಾಲಕ್ಷ್ಮ್ಯಾ ಬ್ರಹ್ಮಣಾ ವಿಶ್ವಕರ್ಮಣಾ ।
ನಂದಿನಾಥ ಗಣೇಶೇನ ಆವಿಷ್ಕೃತಮಹೋತ್ಸವಃ ॥ ೯ ॥
ನಾಗಾಂಗನಾಭಿಃ ಪರಿತಃ ಕೃತನೀರಾಜನಾವಿಧಿಃ ।
ಪ್ರವಿವೇಶ ಮಹಾದೇವಃ ಪುರೀಂ ವಾರಾಣಸೀಂ ಶುಭಾಂ ॥ ೧೦ ॥
ಪಶ್ಯತಾಂ ಸರ್ವದೇವಾನಾಮವರುಹ್ಯ ವೃಷೇಂದ್ರತಃ ।
ಪರಿಷ್ವಜ್ಯ ಗಣಾಧೀಶಂ ಪ್ರೋವಾಚ ವೃಷಭಧ್ವಜಃ ॥ ೧೧ ॥

---

ರನ್ನೂ ಕಿವುಡುಮಾಡುತ್ತಿದ್ದರು. ಚಾರಣರೆಲ್ಲರೂ ಆತನನ್ನು ಸ್ತುತಿಸುತ್ತ ತಮ್ಮ ವಿಮಾನಗಳಿಂದ ಸುತ್ತುವರೆಸಿ ಬರುತ್ತಿದ್ದರು.

೬. ದೇವತೆಗಳ ಸ್ತ್ರೀಯರೆಲ್ಲರೂ ಮುಷ್ಟಿಗಳಿಂದ ಅಡಿಗಡಿಗೂ ಲಾಜಾಕ್ಷತೆಗಳನ್ನು ಮಳೆಗರೆಯುತ್ತಿರಲು ಮಹಾದೇವನ ದೇಹವು ಸಂತೋಷದಿಂದ ಪುಲಕಾಂಕಿತವಾಗುತ್ತಿದ್ದಿತು.

೭. ಬಹುಸಂಖ್ಯಾಕರಾದ ವಿದ್ಯಾಧರಿಯರ ಗಡಣಗಳು ಪುಷ್ಪಮಾಲೆಗಳನ್ನೂ ಉಪಹಾರಗಳನ್ನೂ ಸಮರ್ಪಿಸುತ್ತಿದ್ದುವು. ಯಕ್ಷರೂ, ಗುಹ್ಯಕರೂ, ಸಿದ್ಧರೂ, ಖೇಚರರೂ ಅಭಿನಂದನೆಗಳನ್ನು ಮಾಡುತ್ತಿದ್ದರು.

೮. ಶಕುನಸೂಚಕಗಳಾದ ಮೃಗಗಳು ಮುಂದುಗಡೆಯಲ್ಲಿ ಪುರಪ್ರವೇಶವನ್ನು ಮಾಡಬಹುದೆಂಬುದಾಗಿ ಶುಭಶಕುನಗಳನ್ನು ತೋರುತ್ತಿದ್ದುವು. ಸಂತೋಷದಿಂದರಳಿದ ಮುಖಗಳುಳ್ಳ ಕಿನ್ನರಿಯರಿಂದಲೂ, ಕಿನ್ನರರಿಂದಲೂ ಶಿವನು ಗುಣವರ್ಣನೆಗಳನ್ನು ಕೇಳುತ್ತಿದ್ದನು.

೯. ಮಹಾವಿಷ್ಣುವೂ, ಮಹಾಲಕ್ಷ್ಮಿಯೂ, ಬ್ರಹ್ಮದೇವನೂ, ವಿಶ್ವಕರ್ಮನೂ, ನಂದೀಶ್ವರನೂ, ಗಣಪತಿಯೂ ನಗರದಲ್ಲಿ ಮಹೋತ್ಸವವನ್ನು ಆತನಿಗಾಗಿ ಏರ್ಪಡಿಸಿದ್ದರು.

೧೦. ನಾಗಾಂಗನೆಯರು ಸುತ್ತಲೂ ಮಂಗಳಾರತಿಗಳನ್ನು ಬೆಳಗುತ್ತಿದ್ದರು. ಇಂತು ಮಹಾವೈಭವದಿಂದ ಮಹಾದೇವನು ಸರ್ವಮಾಂಗಲ್ಯಾನ್ವಿತವಾದ ವಾರಾಣಸೀ ನಗರವನ್ನು ಪ್ರವೇಶಮಾಡಿದನು.

೧೧. ಸಕಲ ದೇವತೆಗಳೂ ನೋಡುತ್ತಿರುವಂತೆಯೇ ಮಹೇಶ್ವರನು ತನ್ನ

ಯದಸಂಪ್ರಾಪ್ತವಾನಸ್ಮಿ ಪುರೀಂ ವಾರಾಣಸೀಂ ಶುಭಾಂ ।
ಮಯಾಪ್ಯತೀವ ದುಷ್ಪ್ರಾಪ್ಯಾಂ ಪ್ರಸಾದೋಽಸ್ಯ ವೈ ಶಿಶೋಃ ॥ ೧೨ ॥
ಯದ್ದುಷ್ಪ್ರಸಾದಾಂ ಹಿ ಪಿತುರಪಿ ತ್ರಿಜಗತೀತಲೇ ।
ತತ್ಸೂನುನಾ ಸುಸಾಧ್ಯಂ ಸ್ಯಾದತ್ರ ದೃಷ್ಟಾಂತತಾ ಮಯಿ ॥ ೧೩ ॥
ಅನೇನ ಗಜವಕ್ತ್ರೇಣ ಸ್ವಬುದ್ಧಿವಿಭವೈರಿಹ ।
ಕಾಶೀಪ್ರಾಪ್ತಿರ್ಯಥಾ ಮೇ ಸ್ಯಾತ್ತಥಾ ಕಿಂಚಿದನುಷ್ಠಿತಂ ॥ ೧೪ ॥
ಪುತ್ರವಾನಹಮೇವಾಸ್ಮಿ ಯಚ್ಚ ಮೇ ಚಿರಚಿಂತಿತಂ ।
ಸ್ವಪೌರುಷೇಣ ಕೃತವಾನಭಿಲಾಷಂ ಕರಸ್ಥಿತಂ ॥ ೧೫ ॥
ಇತ್ಯುಕ್ತ್ವಾ ತ್ರಿಪುರೀಹರ್ತಾ ಪುರುಹೂತಾದಿಭಿಃ ಸ್ತುತಃ ।
ಪರಿತುಷ್ಟಾವ ಸಂಹೃಷ್ಟಃ ಸ್ಪಷ್ಟಗೀರ್ಭಿರ್ಗಜಾನನಂ ॥ ೧೬ ॥

ಶ್ರೀಕಂಠ ಉವಾಚ:—

ಜಯ ವಿಘ್ನಕೃತಾಮಾದ್ಯ ಭಕ್ತನಿರ್ವಿಘ್ನಕಾರಕ ।
ಅವಿಘ್ನ ವಿಘ್ನಶಮನ ಮಹಾವಿಘ್ನೈಕವಿಘ್ನಕೃತ್ ॥ ೧೭ ॥

---

ವೃಷಭವಾಹನದಿಂದ ಕೆಳಕ್ಕಿಳಿದ ಮಹಾಗಣಪತಿಯನ್ನು ಆಲಿಂಗಿಸಿಕೊಂಡು ಹೇಳತೊಡಗಿದನು.

೧೨. ನನಗೂ ಅತ್ಯಂತ ದುಸ್ಸಾಧ್ಯವಾಗಿದ್ದ ಪವಿತ್ರವಾದ ಈ ನಗರಿಯನ್ನು ಈಗ ನಾನು ಪ್ರವೇಶಿಸಿದುದೆಲ್ಲವೂ ಈ ನನ್ನ ಬಾಲಕನಾದ ಗಣಪತಿಯ ಅನುಗ್ರಹ ದಿಂದಲೇ ಉಂಟಾಗಿರುವುದು.

೧೩. ತಂದೆಯಾದವನಿಗೆ ಮೂರು ಲೋಕಗಳಲ್ಲಿಯೂ ಯಾವುದು ಸಾಧಿಸಲು ಬರುವುದಿಲ್ಲವೊ, ಅದು ಮಗನಿಗೆ ಸುಲಭವಾಗಿಯೇ ಸಾಧ್ಯವಾಗುವುದು. ಇದಕ್ಕೆ ಈಗಿನ ನನ್ನ ವ್ಯಾಪಾರವೇ ದೃಷ್ಟಾಂತವಾಗಿರುವುದು.

೧೪. ಈ ಗಜವದನನ್ನು ತನ್ನ ಬುದ್ಧಿಯಲ್ಲಿ ನಿಶ್ಚಯಿಸಿದ ಉಪಾಯಗಳಿಂದಲೇ ನನಗೆ ಕಾಶೀವಾಸದ ಲಾಭವು ಉಂಟಾಗುವ ರೀತಿಯಲ್ಲಿ ಸಕಲ ಕಾರ್ಯವನ್ನೂ ನೆರವೇರಿಸಿರುವನು.

೧೫. ನನ್ನ ಮನಸ್ಸಿನಲ್ಲಿಯೇ ಕೇವಲ ಅಭಿಲಾಷೆಯಾಗಿ ಉಳಿದಿದ್ದುದನ್ನು ಬಹುಕಾಲದ ಮೇಲೆ ಗಣೇಶನು ಹಸ್ತಗತವಾಗುವಂತೆ ತನ್ನ ಪೌರುಷದಿಂದ ಸಾಧನೆ ಮಾಡಿದನು. ಆದುದರಿಂದ ಮಕ್ಕಳನ್ನು ಪಡೆದವರಲ್ಲಿ ನಾನೇ ಧನ್ಯನಾದೆನು.

೧೬. ಮಹೇಂದ್ರನೇ ಮುಂತಾದ ದೇವತೆಗಳಿಂದಲೂ ಸ್ತುತ್ಯನಾದ ತ್ರಿಪುರಾಂತಕನು ಇಂತು ಹೇಳಿ ಸಂತೋಷಗೊಂಡು ಸ್ಪಷ್ಟವಾಣಿಯಿಂದ ಗಜಮುಖನನ್ನು ಬಹು ವಿಧವಾಗಿ ಸ್ತೋತ್ರಮಾಡಿದನು.

೧೭. ಶಿವನು ಹೇಳುತ್ತಾನೆ:—"ವಿಘ್ನಗಳನ್ನುಂಟುಮಾಡುವವರಲ್ಲಿ

ಜಯ ಸರ್ವಗಣಾಧೀಶ ಜಯ ಸರ್ವಗಣಾಗ್ರಣೀಃ ।
ಗಣಪ್ರಣತಪಾದಾಬ್ಜ ಗಣನಾತೀತಸದ್ಗುಣ ॥ ೧೮ ॥
ಜಯ ಸರ್ವಗ ಸರ್ವೇಶ ಸರ್ವಬುದ್ಧ್ಯೇಕಶೇವಧೇ ।
ಸರ್ವಮಾಯಾಪ್ರಪಂಚಜ್ಞ ಸರ್ವಕರ್ಮಾಗ್ರಪೂಜಿತ ॥ ೧೯ ॥
ಸರ್ವಮಂಗಲಮಾಂಗಲ್ಯ ಜಯ ತ್ವಂ ಸರ್ವಮಂಗಲ ।
ಅಮಂಗಲೋಪಶಮನ ಮಹಾಮಂಗಲಹೇತುಕ ॥ ೨೦ ॥
ಜಯ ಸೃಷ್ಟಿಕೃತಾಂ ವಂದ್ಯ ಜಯ ಸ್ಥಿತಿಕೃತಾನನ ।
ಜಯ ಸಂಹೃತಿಕೃತ್ಸ್ತುತ್ಯ ಜಯ ಸತ್ಕರ್ಮಸಿದ್ಧಿದ ॥ ೨೧ ॥
ಸಿದ್ಧವಂದ್ಯಪದಾಂಭೋಜ ಜಯ ಸಿದ್ಧಿವಿಧಾಯಕ ।
ಸರ್ವಸಿದ್ಧ್ಯೇಕನಿಲಯ ಮಹಾಸಿದ್ಧ್ಯೃದ್ಧಿಸೂಚಕ ॥ ೨೨ ॥

---

ಮೊದಲಿಗನೂ, ಭಕ್ತರಿಗೆ ನಿರ್ವಿಘ್ನಗಳನ್ನುಂಟುಮಾಡುವವನೂ, ವಿಘ್ನರಹಿತನೂ, ವಿಘ್ನಗಳನ್ನು ನಾಶಗೊಳಿಸುವವನೂ, ಮಹಾವಿಘ್ನಗಳಿಗೂ ವಿಘ್ನವನ್ನುಂಟು ಮಾಡುವ ಸರ್ವೇಶ್ವರನೂ ಆದ ನಿನಗೆ ಜಯವಾಗಲಿ.

೧೮. ಸಮಸ್ತಗಣಗಳಿಗೂ ಅಧಿನಾಯಕನೂ, ಗಣಸೈನ್ಯಗಳಿಗೆ ಮುಂದಾಳುವೂ, ಗಣಗಳಿಂದ ನಮಸ್ಕರಿಸಲ್ಪಡುವ ಪಾದಕಮಲಗಳುಳ್ಳವನೂ, ಅಸಂಖ್ಯಾತಗಳಾದ ಸದ್ಗುಣಗಳಿಂದ ಭರಿತನೂ ಆದ ನಿನಗೆ ಜಯವು.

೧೯. ಸರ್ವತ್ರವ್ಯಾಪ್ತನೂ, ಸರ್ವೇಶ್ವರನೂ, ಸಕಲಬುದ್ಧಿಗಳಿಗೂ ಒಂದೇ ನೆಲೆಯಂತಿರುವವನೂ, ಈ ಮಾಯಾಪ್ರಪಂಚದ ಆದ್ಯಂತವೆಲ್ಲವನ್ನೂ ತಿಳಿದವನೂ, ಸಕಲ ಕರ್ಮಗಳಲ್ಲಿಯೂ ಅಗ್ರಪೂಜೆಗೆ ಅರ್ಹನಾದವನೂ ಆದ ನಿನಗೆ ವಿಜಯವಾಗಲಿ.

೨೦. ಸಕಲಮಂಗಳಗಳಿಗೂ ಮಂಗಳಪ್ರದನೂ, ಸರ್ವಮಂಗಳಕಾರಿಯೂ, ಅಶುಭಗಳನ್ನು ನಿರ್ಮೂಲಗೊಳಿಸುವವನೂ, ಭಕ್ತರಿಗೆ ಕೈವಲ್ಯವನ್ನು ಕೊಡುವ ಏಕಾಂತಕಾರಣನೂ ಆಗಿರುವ ನಿನಗೆ ಜಯವುಂಟಾಗಲಿ.

೨೧. ಲೋಕಸೃಷ್ಟಿಕರ್ತೃಗಳಾದ ಬ್ರಹ್ಮಾದಿಗಳಿಗೆ ವಂದ್ಯನೂ, ಸ್ಥಿತಿಕಾರಕನಾದ ವಿಷ್ಣುವಿಗೆ ನಮಸ್ಕಾರಾರ್ಹನೂ, ಸಂಹಾರವನ್ನುಮಾಡುವ ಯಮಾದಿಗಳಿಂದ ಸ್ತೋತ್ರವನ್ನು ಕೇಳುವವನೂ, ಸಕಲ ಸತ್ಕಾರ್ಯಗಳಿಗೆ ಸಿದ್ಧಿಯನ್ನು ಅನುಗ್ರಹಿಸುವವನೂ ಆದ ನಿನಗೆ ಜಯವುಂಟಾಗಲಿ.

೨೨. ಸಿದ್ಧರಿಂದ ನಮಸ್ಕೃತವಾದ ಪಾದಕಮಲವುಳ್ಳವನೂ, ಕಾರ್ಯಸಿದ್ಧಿಯನ್ನುಂಟುಮಾಡುವವನೂ, ಸರ್ವಸಿದ್ಧಿಗಳಿಗೂ ಏಕಾಯತನನೂ, ಅಣಿಮಾದಿ ಮಹಾಸಿದ್ಧಿಗಳ ಅಭ್ಯುದಯವನ್ನು ಕೊಡುವವನೂ ಆದ ನಿನಗೆ ಜಯವು.

ಅಶೇಷಗುಣನಿರ್ಮಾಣಗುಣಾತೀತಗುಣಾಗ್ರಣೀಃ ।
ಪರಿಪೂರ್ಣಚರಿತ್ರಾರ್ಥ ಜಯ ತ್ವಂ ಗುಣವರ್ಣಿತ ॥ ೨೩ ॥
ಜಯ ಸರ್ವಬಲಾಧೀಶ ಬಲಾರಾತಿಬಲಪ್ರದ ।
ಬಲಕೋಜ್ಜ್ವಲದಂತಾಗ್ರ ಬಾಲಾಽಬಾಲಪರಾಕ್ರಮ ॥ ೨೪ ॥
ಅನಂತಮಹಿಮಾಧಾರ ಧರಾಧರವಿದಾರಣ ।
ದಂತಾಗ್ರಪ್ರೋತದಿಙ್ನಾಗ ಜಯ ನಾಗವಿಭೂಷಣ ॥ ೨೫ ॥
ಯೇ ತ್ವಾಂ ನಮಂತಿ ಕರುಣಾಮಯ ದಿವ್ಯಮೂರ್ತೇ
ಸರ್ವೈನಸಾಮಪಿ ಭುವೋ ಭುವಿ ಮುಕ್ತಿಭಾಜಃ ।
ತೇಷಾಂ ಸದೈವ ಹರಸೀಹ ಮಹೋಪಸರ್ಗಾನ್
ಸ್ವರ್ಗಾಪವರ್ಗಮಪಿ ಸಂಪ್ರದದಾಸಿ ತೇಭ್ಯಃ ॥ ೨೬ ॥
ಯೇ ವಿಘ್ನರಾಜ ಭವತಾ ಕರುಣಾಕಟಾಕ್ಷೈಃ
ಸಂಪ್ರೋಕ್ಷಿತಾಃ ಕ್ಷಿತಿತಲೇ ಕ್ಷಣಮಾತ್ರಮತ್ರ ।
ತೇಷಾಂ ಕ್ಷಯಂತಿ ಸಕಲಾನ್ಯಪಿ ಕಿಲ್ಬಿಷಾಣಿ
ಲಕ್ಷ್ಮೀಃ ಕಟಾಕ್ಷಯತಿ ತಾನ್ಪುರುಷೋತ್ತಮಾನ್ಹಿ ॥ ೨೭ ॥

---

೨೩. ಸಕಲ ಸದ್ಗುಣಗಳಿಗೂ ನಿರ್ಮಾಣಭೂಮಿಯೂ, ತ್ರಿಗುಣಾತೀತನೂ, ಗುಣವಂತರಲ್ಲಿ ಅಗ್ರೇಸರನೂ, ಪರಿಪೂರ್ಣನೂ, ಸಚ್ಚಾರಿತ್ರದ ಫಲಸ್ವರೂಪನೂ, ಗುಣನಿಧಿಯೆಂದು ವರ್ಣಿಸಲ್ಪಡುವವನೂ ಆದ ನೀನು ಜಯಶೀಲನಾಗು.

೨೪. ಸಕಲಪ್ರಮಥಬಲಗಳಿಗೆ ಅಧೀಶ್ವರನೂ, ಪರಬಲಕ್ಕೆ ಶತ್ರುವೂ, ಭಕ್ತರಿಗೆ ಬಲವನ್ನುಕೊಡುವವನೂ, ಬಲಾಕಪಕ್ಷಿಗಳ ಸಾಲಿನಂತೆ ಹೊಳೆಯುತ್ತಿರುವ ದಂತವುಳ್ಳವನೂ, ಬಾಲಕನಾದರೂ ಮಹಾಬಲಿಷ್ಠರ ಪರಾಕ್ರಮವುಳ್ಳವನೂ ಆದ ನಿನಗೆ ಜಯವು.

೨೫. ಕೊನೆಯಿಲ್ಲದ ಮಹಿಮೆಗೆ ಆಧಾರನೂ, ಕ್ರೌಂಚಪರ್ವತವನ್ನು ಸೀಳಿದವನೂ, ಕೋರೆದಾಡೆಗಳಲ್ಲಿ ದಿಗ್ಗಜಗಳನ್ನೂ ಪ್ರಳಯದಲ್ಲಿ ಧರಿಸುವವನೂ, ಉದರದಲ್ಲಿ ಹಾವಿನ ಭೂಷಣವನ್ನು ಧರಿಸಿದವನೂ ಆದ ನಿನಗೆ ಮಂಗಳವಾಗಲಿ.

೨೬. ಕರುಣಾಮಯನಾದ ದಿವ್ಯರೂಪಧಾರಿಯೆ! ಯಾರು ನಿನ್ನನ್ನು ನಮಸ್ಕರಿಸುವರೊ, ಅವರು ಭೂಲೋಕದಲ್ಲಿ ಸಕಲ ಪಾತಕಗಳನ್ನುಮಾಡಿದ್ದರೂ ಇಹದಲ್ಲಿ ಮೋಕ್ಷಕ್ಕೆ ಭಾಗಿಗಳಾಗುವರು. ಈ ಲೋಕದಲ್ಲಿ ಅವರಿಗೆ ಸಂಭವಿಸುವ ಮಹಾಕಷ್ಟಗಳನ್ನು ಕೂಡ ನೀನು ಹೋಗಲಾಡಿಸುವೆ. ಅವರಿಗೆ ಸ್ವರ್ಗವನ್ನೂ ಮೋಕ್ಷಸಾಮ್ರಾಜ್ಯವನ್ನೂ ದಯೆಯಿಂದ ಅನುಗ್ರಹಿಸುವೆ.

೨೭. ಎಲೈ ವಿಘ್ನೇಶ್ವರನೆ! ನಿನ್ನ ಕರುಣಾಪೂರಿತಗಳಾದ ಕಟಾಕ್ಷಗಳಿಂದ ಯಾರು ನೋಡಲ್ಪಟ್ಟಿರುವರೊ, ಈ ಭೂಮಂಡಲದಲ್ಲಿ ಒಂದು ಕ್ಷಣಮಾತ್ರ

ಯೇ ತ್ವಾಂ ಸ್ತುವಂತಿ ನತವಿಘ್ನನಿಘಾತದಕ್ಷ
ದಾಕ್ಷಾಯಣೀಹೃದಯಪಂಕಜತಿಗ್ಮರಶ್ಮೇ ।
ಶ್ರೂಯಂತ ಏವ ತ ಇಹ ಪ್ರಥಿತಾ ನ ಚಿತ್ರಂ
ಚಿತ್ರಂ ತದತ್ರ ಗಣಪಾ ಯದಹೋಽತ ಏವ ॥ ೨೮ ॥
ಯೇ ಶೀಲಯಂತಿ ಸತತಂ ಭವತೋಽಂಘ್ರಿಯುಗ್ಮಂ
ತೇ ಪುತ್ರಪೌತ್ರಧನಧಾನ್ಯಸಮೃದ್ಧಿಭಾಜಃ ।
ಸಂಶೀಲತಾಂಘ್ರಿಕಮಲಾ ಬಹುಭೃತ್ಯವರ್ಗೈಃ
ಭೂಪಾಲಭೋಗ್ಯಕಮಲಾಂ ವಿಮಲಾಂ ಲಭಂತೇ ॥ ೨೯ ॥
ತ್ವಂ ಕಾರಣಂ ಪರಮಕಾರಣಕಾರಣಾನಾಂ
ವೇದ್ಯೋಽಸಿ ವೇದವಿದುಷಾಂ ಸತತಂ ತ್ವಮೇಕಃ ।
ತ್ವಂ ಮಾರ್ಗಣೀಯಮಸಿ ಕಿಂಚನ ಮೂಲವಾಚಾಂ
ವಾಚಾಮಗೋಚರ ಚರಾಚರ ದಿವ್ಯಮೂರ್ತೇ ॥ ೩೦ ॥

---

ವಾದರೂ ಆ ಲಾಭವನ್ನು ಪಡೆದವರ ಸಕಲದೋಷಗಳೂ ನಾಶವನ್ನು ಹೊಂದುವುವು. ಆ ಪುರುಷಶ್ರೇಷ್ಠರನ್ನು ಮಹಾಲಕ್ಷ್ಮಿಯೂ ತನ್ನ ಕಟಾಕ್ಷಗಳಿಂದ ನೋಡುತ್ತಿರುವಳು.

೨೮. ಪ್ರಣತರಾದವರ ವಿಘ್ನಗಳನ್ನು ನಾಶಗೊಳಿಸುವುದರಲ್ಲಿ ದಕ್ಷನೆ! ಪಾರ್ವತೀದೇವಿಯ ಹೃದಯಕಮಲವನ್ನರಳಿಸುವ ಸೂರ್ಯನೆ! ಯಾರು ನಿನ್ನನ್ನು ಸ್ತೋತ್ರಮಾಡುವರೊ, ಅವರು ಈ ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆಯುವರೆಂಬುದನ್ನು ಕೇಳಿರುವೆನು. ಇದೂ ವಿಚಿತ್ರವಾದುದಲ್ಲ. ಆದರೆ ಅವರೂ ಶಿವಲೋಕದಲ್ಲಿ ನಿನ್ನಂತೆಯೇ ಗಣಾಧಿಪರಾಗಿರುವರು. ಇದೇ ನಿಜವಾಗಿಯೂ ವಿಚಿತ್ರವೆನ್ನಬೇಕು.

೨೯. ಯಾರು ಸಂತತವಾಗಿ ನಿನ್ನ ಪಾದದ್ವಂದ್ವವನ್ನು ಸೇವಿಸುತ್ತಿರುವರೊ, ಅವರು ಪುತ್ರ, ಪೌತ್ರ, ಧನ, ಧಾನ್ಯಗಳೇ ಮುಂತಾದ ಸಕಲ ಪದಾರ್ಥಗಳ ಸಮೃದ್ಧಿಗೂ ಪಾತ್ರರಾಗುವರು. ಅಸಂಖ್ಯಾತರಾದ ಸೇವಕವರ್ಗದ ಜನರಿಂದ ತಮ್ಮ ಪಾದಗಳ ಪರಿಚರ್ಯೆಯನ್ನು ಮಾಡಿಸಿಕೊಳ್ಳುತ್ತಿರುವರು. ಮಹಾರಾಜರ ಉಪಭೋಗಕ್ಕೆ ಯೋಗ್ಯವಾದ ನಿರ್ಮಲವಾದ ಐಶ್ವರ್ಯವನ್ನು ಅವರು ಹೊಂದುವರು.

೩೦. ಪರಮಕಾರಣನೆ! ಭಕ್ತರ ಸ್ತೋತ್ರದ ಮಾತುಗಳಿಗೂ ನಿಲುಕದ ಮಹಾಮಹಿಮನೆ! ಮಾಯೆಯಿಂದ ಚರಾಚರಾತ್ಮಕವಾದ ಪ್ರಪಂಚವಾಗಿ ತೋರುತ್ತಿದ್ದರೂ ಪರಮಾರ್ಥದಿಂದ ದಿವ್ಯರೂಪನಾದ ಗಣಪತಿಯೆ! ಪ್ರಪಂಚಕ್ಕೆ ಕಾರಣಗಳೆನಿಸಿದ ಪ್ರಕೃತಿ, ಪರಮಾಣುಗಳು, ಮಹತ್ತತ್ವಗಳಿಗೂ ನೀನು

ವೇದಾ ವಿದಂತಿ ನ ಯಥಾರ್ಥತಯಾ ಭವಂತಂ
ಬ್ರಹ್ಮಾದಯೋಽಪಿ ನ ಚರಾಚರಸೂತ್ರಧಾರ ।
ತ್ವಂ ಪಂಸಿ ಪಾಸಿ ವಿದಧಾಸಿ ಸಮಸ್ತಮೇಕಃ
ಕಸ್ತೇ ಸ್ತುತಿವ್ಯತಿಕರೋ ಮನಸಾಪ್ಯಗಮ್ಯ ॥ ೩೧ ॥
ತ್ವದ್ದೃಷ್ಟದೃಷ್ಟಿವಿಶಿಖೈರ್ನಿಹತಾನ್ನಿಹನ್ಮಿ
ದೈತ್ಯಾನ್ಪುರಾಂಧಕಜಲಂಧರಮುಖ್ಯಕಾಂಶ್ಚ ।
ಕಸ್ಯಾಸ್ತಿ ಶಕ್ತಿರಿಹ ಯಸ್ತ್ವದೃತೇಽಪಿ ತುಚ್ಛಂ
ಪಾಂಛೇದ್ವಿಧಾತುಮಿಹ ಸಿದ್ಧಿದ ಕಾರ್ಯಜಾತಂ ॥ ೩೨ ॥
ಅನ್ವೇಷಣೇ ಢುಢಿರಯಂ ಪ್ರಥಿತೋಽಸ್ತಿ ಧಾತುಃ
ಸರ್ವಾರ್ಥಢುಂಢಿತತಯಾ ತವ ಢುಂಢಿನಾಮ ।
ಕಾಶೀ ಪ್ರವೇಶಮಪಿ ಕೋ ಲಭತೇಽತ್ರ ದೇಹೀ
ತೇಷಾಂ ವಿನಾ ತವ ವಿನಾಯಕ ಢುಂಢಿರಾಜ ॥ ೩೩ ॥

---

ಕಾರಣನಾಗಿರುವೆ. ಯಾವಾಗಲೂ ವೇದಜ್ಞರಾದವರಿಗೆ ನೀನೊಬ್ಬನೇ ವೇದ್ಯ ದೈವನಾಗಿರುವೆ. ಜಗತ್ತಿನಲ್ಲಿ ಮೊದಲನೆಯ ವಾಕ್ಕುಗಳೆನಿಸಿದ ವೇದಗಳಿಗೂ ಸಹ ನೀನೊಬ್ಬನೇ ಅನ್ವೇಷ್ಟವ್ಯನಾಗಿರುವೆ.

೩೧. ಸಕಲ ಚರಾಚರಗಳಿಗೂ ಸೂತ್ರಧಾರನಾಗಿ ಸೂಕ್ಷ್ಮನಾದುದರಿಂದ ಮನಸ್ಸಿಗೂ ಸಿಕ್ಕದ ಗಣಪತಿಯೆ! ವೇದಗಳೂ ಸಹ ನಿನ್ನನ್ನು ಯಥಾರ್ಥವಾಗಿ ತಿಳಿಯಲಾರವು. ಹಾಗೆಯೇ ಬ್ರಹ್ಮಾದಿದೇವತೆಗಳೂ ನಿನ್ನನ್ನು ಸಾಕಲ್ಯೇನ ತಿಳಿಯಲಾರರು. ನೀನೊಬ್ಬನೇ ಈ ಬ್ರಹ್ಮಾಂಡವನ್ನೆಲ್ಲ ಸಂಹರಿಸುವೆ. ರಕ್ಷಿಸುವೆ. ಸೃಷ್ಟಿಮಾಡುವೆ. ಇಂತಹ ನಿನ್ನನ್ನು ಸ್ತೋತ್ರಮಾಡುವ ವಿಷಯದಲ್ಲಿ ಯಾವ ವ್ಯವಹಾರವನ್ನವಲಂಬಿಸೋಣ?

೩೨. ನಿನ್ನ ಕ್ರೂರದೃಷ್ಟಿಯೆಂಬ ತೀಕ್ಷ್ಣಬಾಣಗಳಿಂದ ಮೊದಲೇ ಹತರಾದ ಅಂಧಕಾಸುರ, ಜಲಂಧರ ಮುಂತಾದ ರಾಕ್ಷಸರನ್ನೇ ನಾನು ಹಿಂದೆ ನಿಗ್ರಹಿಸಿದೆ. ಸಿದ್ಧಿವಿನಾಯಕನೆ! ಅತ್ಯಲ್ಪವಾದ ಕಾರ್ಯವನ್ನು ಮಾಡಬೇಕಾದರೂ ನಿನ್ನನ್ನು ದೂರೀಕರಿಸಿ ಮಾಡಬೇಕೆಂದೆಳಸುವ ಮನುಷ್ಯನಿಗೆ ಈ ಲೋಕದಲ್ಲಿ ಸಾಮರ್ಥ್ಯವು ಹೇಗೆ ಉಂಟಾಗಬೇಕು?

೩೩. ವ್ಯಾಕರಣದಲ್ಲಿ 'ಢುಢಿ' ಎಂಬ ಧಾತುವಿಗೆ ಅನ್ವೇಷಣವೆಂಬ ಅರ್ಥವು ಪ್ರಸಿದ್ಧವಾಗಿರುವುದು. ನೀನು ಪುರುಷಾರ್ಥಗಳನ್ನಪೇಕ್ಷಿಸುವ ಸಕಲ ಜನರಿಗೂ ಅನ್ವೇಷ್ಟವ್ಯನಾದ ಏಕದೈವನಾಗಿರುವೆ. ಆದುದರಿಂದಲೇ ನಿನಗೆ ಢುಂಢಿಯೆಂಬ ಹೆಸರು ವಿಖ್ಯಾತವಾಗಿರುವುದು. ಢುಂಢಿರಾಜನಾದ ವಿಘ್ನೇಶ್ವರನೆ! ನಿನ್ನನ್ನು ಸಂತೋಷಪಡಿಸಿದಲ್ಲದೆ ಯಾವ ಮಾನವನು ತಾನೆ ಕಾಶೀಕ್ಷೇತ್ರದ ಪ್ರವೇಶವನ್ನು ಪಡೆದಾನು?

ಢುಂಢೇ ಪ್ರಣಮ್ಯ ಪುರತಸ್ತವಪಾದಪದ್ಮಂ
ಯೋ ಮಾಂ ನಮಸ್ಯತಿ ಪುಮಾನಿಹ ಕಾಶಿವಾಸೀ ।
ತತ್ಕರ್ಣಮೂಲಮಧಿಗಮ್ಯ ಪುರಾದಿಶಾಮಿ
ತತ್ಕಿಂಚಿದತ್ರ ನ ಪುನರ್ಭವಮತಾಸ್ತಿ ಯೇನ ॥ ೩೪ ॥
ಸ್ನಾತ್ವಾ ನರಃ ಪ್ರಥಮತೋ ಮಣಿಕರ್ಣಿಕಾಯಾಂ
ಉದ್ಧೂಲಿತಾಂಘ್ರಿಯುಗಲಸ್ತು ಸಚೈಲಮಾಶು ।
ದೇವರ್ಷಿಮಾನವಪಿತ್ರೂನಪಿ ತರ್ಪಯಿತ್ವಾ
ಜ್ಞಾನೋದತೀರ್ಥಮಭಿಲಭ್ಯ ಭಜೇತ್ತತಸ್ತ್ವಾಂ ॥ ೩೫ ॥
ಸಾಮೋದಮೋದಕಭರೈರ್ವರಧೂಪದೀಪೈ
ರ್ಮಾಲ್ಯೈಃ ಸುಗಂಧಬಹುಲೈರನುಲೇಪನೈಶ್ಚ ।
ಸಂಪ್ರೀಣ್ಯ ಕಾಶಿನಗರೀಫಲದಾನದಕ್ಷಂ
ಪ್ರೋಕ್ತ್ವಾತ್ವಥ ಮಾಂ ಕ ಇಹ ಸಿಧ್ಯತಿ ನೈವ ಢುಂಢೇ ॥ ೩೬ ॥

---

೩೪. ಎಲೈ ಢುಂಢಿಯೆ! ಕಾಶೀನಿವಾಸಿಯಾದ ಯಾವ ಮನುಷ್ಯನು ಮೊದಲು ನಿನ್ನ ಪಾದಕಮಲಗಳಿಗೆ ನಮಸ್ಕರಿಸಿ ಬಳಿಕ ನನಗೆ ಪ್ರಣಾಮವನ್ನು ಮಾಡುವನೊ, ಅವನಿಗೆ ದೊರಕುವ ಫಲವನ್ನು ಕೇಳು. ಯಾವ ತಾರಕಮಂತ್ರದ ಪುರಶ್ಚರಣೆಯಿಂದ ಪುನರ್ಜನ್ಮವು ಇಲ್ಲದಂತಾಗುವುದೊ, ಅಂತಹ ಉತ್ತಮ ಮಂತ್ರವನ್ನು ನಾನು ಆತನ ಕಿವಿಯಬಳಿಗೆ ಹೋಗಿ ಪ್ರಾಣೋತ್ಕ್ರಮಣಕ್ಕೆ ಮೊದಲೇ ಉಪದೇಶಮಾಡುತ್ತೇನೆ.

೩೫. ಭಕ್ತೋತ್ತಮನಾದವನು ಮೊದಲು ಮಣಿಕರ್ಣಿಕೆಯಲ್ಲಿ ಸ್ನಾನವನ್ನು ಮಾಡಿ ಅದೇ ವಸ್ತ್ರದಲ್ಲಿಯೇ ನಡೆದು ಧೂಳಿಯುಂಟಿದ ಪಾದಗಳಿಂದಲೇ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ವಿಧಿವತ್ತಾದ ತರ್ಪಣಗಳನ್ನರ್ಪಿಸಿ ಜ್ಞಾನೋದಕ ತೀರ್ಥವನ್ನು ಸ್ನಾನಾದಿಗಳಿಂದ ಸೇವಿಸಿ ಬಳಿಕ ನಿನ್ನನ್ನು ಪೂಜಿಸಬೇಕು.

೩೬. ಎಲೈ ಢುಂಢಿಯೆ! ಕಾಶೀಕ್ಷೇತ್ರದ ಸೇವೆಯ ಸಂಪೂರ್ಣಫಲವನ್ನು ಕೊಡುವ ಸ್ವಾಮಿಯಾದ ನನ್ನನ್ನು ಸುವಾಸನಾಯುಕ್ತಗಳಾದ ಮೋದಕಭಾರಗಳಿಂದಲೂ, ಉತ್ತಮ ಧೂಪದೀಪಗಳಿಂದಲೂ, ಪುಷ್ಪ, ನವರತ್ನಗಳ ಮಾಲೆಗಳಿಂದಲೂ, ಸುಗಂಧಗಳನ್ನು ಸುತ್ತಲೂ ಹರಡುತ್ತಿರುವ ಲೇಪನದ್ರವ್ಯಗಳಿಂದಲೂ, ಸಂತೋಷಗೊಳಿಸಿ ಸ್ತೋತ್ರವನ್ನುಮಾಡಲು ಯಾವನು ತಾನೆ ಕ್ಷೇತ್ರಸೇವೆಯ ಫಲವನ್ನು ಪಡೆಯುವುದಿಲ್ಲ?

ತೀರ್ಥಾಂತರಾಣಿ ಚ ತತಃ ಕ್ರಮವರ್ಜಿತೋಽಪಿ
ಸಂಸಾಧಯನ್ನಿಹ ಭವತ್ಕರುಣಾಕಟಾಕ್ಷ್ಯೈಃ ।
ದೂರೀಕೃತಸ್ವಹಿತಘಾತ್ಯುಪಸರ್ಗವರ್ಗೋ
ಢುಂಢೇ ಲಭೇದವಿಕಲಂ ಫಲಮತ್ರ ಕಾಶ್ಯಾಂ ॥ ೩೭ ॥
ಯಃ ಪ್ರತ್ಯಹಂ ನಮತಿ ಢುಂಢಿವಿನಾಯಕಂ ತ್ವಾಂ
ಕಾಶ್ಯಾಂ ಪ್ರಗೇ ಪ್ರತಿಹತಾಖಿಲವಿಘ್ನಸಂಘಃ ।
ನೋ ತಸ್ಯ ಜಾತು ಜಗತೀತಲವರ್ತಿವಸ್ತು
ದುಷ್ಪ್ರಾಪಮತ್ರ ಚ ಪರತ್ರ ಚ ಕಿಂಚನಾಪಿ ॥ ೩೮ ॥
ಯೋ ನಾಮ ತೇ ಜಪತಿ ಢುಂಢಿ ವಿನಾಯಕಸ್ಯ
ತಂ ವೈ ಜಪತ್ಯನುದಿನಂ ಹೃದಿ ಸಿದ್ಧಯೋಽಷ್ಟೌ ।
ಭೋಗಾನ್ವಿಭುಜ್ಯ ವಿವಿಧಾನ್ವಿಬುಧೋಪಭೋಗ್ಯಾನ್
ನಿರ್ವಾಣಯಾ ಕಮಲಯಾ ವ್ರಿಯತೇ ಸ ಚಾಂತೇ ॥ ೩೯ ॥
ದೂರೇ ಸ್ಥಿತೋಽಪ್ಯಹರಹಸ್ತವ ಪಾದಪೀಠಂ
ಯಃ ಸಂಸ್ಮರೇತ್ಸಕಲಸಿದ್ಧಿದ ಢುಂಢಿರಾಜ ।
ಕಾಶೀಸ್ಥಿತೇರವಿಕಲಂ ಸ ಫಲಂ ಲಭೇತ
ನೈವಾನ್ಯಥಾ ನ ವಿತಥಾ ಮಮ ವಾಕ್ಕದಾಚಿತ್ ॥ ೪೦ ॥

---

೩೭–೩೮. ಢುಂಢಿರಾಜನೆ! ಇತರ ತೀರ್ಥಗಳ ಸೇವನೆಯಲ್ಲಿ ನಿಯಮಗಳನ್ನುಲ್ಲಂಘಿಸಿ ಸ್ನಾನಾದಿಗಳನ್ನು ಮಾಡಿದವನು ಇಲ್ಲಿಗೆ ಬಂದು ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರನಾಗಿ, ತನ್ನ ಆತ್ಮಹಿತಕ್ಕೆ ಘಾತಕವಾಗಿರುವ ಸಕಲ ಕಲ್ಮಷವರ್ಗವನ್ನೂ ಕಳೆದುಕೊಂಡವನಾಗಿ ಈ ಕಾಶೀಕ್ಷೇತ್ರದ ಅಖಂಡಿತವಾದ ಫಲವನ್ನು ಪಡೆಯುವನು. ಯಾವನು ಪ್ರತಿದಿವಸದ ಪ್ರಾತಃಕಾಲದಲ್ಲಿ ಢುಂಢಿವಿನಾಯಕನಾದ ನಿನಗೆ ಕಾಶೀಕ್ಷೇತ್ರದಲ್ಲಿ ನಮಸ್ಕರಿಸುವನೊ, ಅವನು ವಿಘ್ನಗಳೆಂಬ ಸಮಸ್ತ ಬಂಧನಗಳನ್ನೂ ಕಳಚಿಕೊಂಡು ಸುಖಿಸುವನು. ಅವನಿಗೆ ಅಪ್ರಾಪ್ಯವಾದ ವಸ್ತುವು ಇಡೀ ಭೂಮಂಡಲದಲ್ಲಿಯೇ ಆಗಲಿ, ಇಹದಲ್ಲಾಗಲಿ, ಪರಲೋಕಗಳಲ್ಲಿಯಾಗಲಿ ಯಾವುದೂ ಇರುವುದಿಲ್ಲ.

೩೯. ಯಾವನು ನಿನ್ನ ಢುಂಢಿವಿನಾಯಕನೆಂಬ ಹೆಸರನ್ನು ಜಪಿಸುತ್ತಿರುವನೊ, ಅವನ ಮನಸ್ಸಿನಲ್ಲಿ ಅನುದಿನವೂ ಅಷ್ಟಮಹಾಸಿದ್ಧಿಗಳೂ ಸನ್ನಿಹಿತಗಳಾಗಿರುವುವು. ಅವನು ಈ ಲೋಕದಲ್ಲಿ ದೇವತೆಗಳ ಅನುಭವಕ್ಕೆ ಯೋಗ್ಯಗಳಾದ ಅನೇಕವಿಧ ಭೋಗಗಳನ್ನು ಪಡೆದವನಾಗಿ ಕಡೆಯಲ್ಲಿ ಮೋಕ್ಷರೂಪಳಾದ ಲಕ್ಷ್ಮಿಯಿಂದ ವರಿಸಲ್ಪಡುವನು.

೪೦. ಸಕಲ ಸಿದ್ಧಿಗಳನ್ನೂ ಕೈಗೂಡಿಸುವ ಢುಂಢಿರಾಜನೆ! ಯಾವನು ದೂರದಲ್ಲಿ ನೆಲಸಿರುವನಾದರೂ ಪ್ರತಿದಿನವೂ ನಿನ್ನ ಪಾದಪೀಠವನ್ನು ಸ್ಮರಿಸು

ಜಾನೇ ವಿಘ್ನಾನಸಂಖ್ಯಾತಾನ್ವಿನಿಹಂತುಮನೇಕಧಾ ।
ಕ್ಷೇತ್ರಸ್ಯಾಸ್ಯ ಮಹಾಭಾಗ ನಾನಾರೂಪೈರಿಹ ಸ್ಥಿತಃ ॥ ೪೧ ॥
ಯಾನಿ ಯಾನಿ ಚ ರೂಪಾಣಿ ಯತ್ರ ಯತ್ರ ಚ ತೇಽನಘ ।
ತಾನಿ ತತ್ರ ಪ್ರವಕ್ಷ್ಯಾಮಿ ಶೃಣ್ವಂತ್ವೇತೇ ದಿವೌಕಸಃ ॥ ೪೨ ॥
ಪ್ರಥಮಂ ಢುಂಢಿರಾಜೋಽಸಿ ಮಮ ದಕ್ಷಿಣತೋ ಮನಾಕ್ ।
ಆಢುಂಢ್ಯ ಸರ್ವಭಕ್ತೇಭ್ಯಃ ಸರ್ವಾರ್ಥಾನ್ಸಂಪ್ರಯಚ್ಛತಿ ॥ ೪೩ ॥
ಅಂಗಾರವಾಸರವತೀಮಿಹ ಯೈಶ್ಚತುರ್ಥೀಂ
ಸಂಪ್ರಾಪ್ಯ ಮೋದಕಭರೈಃ ಪರಿಮೋದವದ್ಭಿಃ ।
ಪೂಜಾಂ ವ್ಯಧಾಯಿ ವಿವಿಧಾಂ ತವ ಗಂಧಮಾಲ್ಯೈಃ
ತಾನತ್ರ ಪುತ್ರ ವಿದಧಾಮಿ ಗಣಾನ್ಗಣೇಶ ॥ ೪೪ ॥
ಯೇ ತ್ವಾಮಿಹ ಚತುರ್ಥಿ ಸಮರ್ಚಯಂತಿ
ಢುಂಢೇ ವಿಗಾಢಮತಯಃ ಕೃತಿನಸ್ತ ಏವ ।
ಸರ್ವಾಪದಾಂ ಶಿರಸಿ ವಾಮಪದಂ ನಿಧಾಯ
ಸಂಯಗ್ಗಜಾನನ ಗಜಾನನತಾಂ ಲಭಂತೇ ॥ ೪೫ ॥

---

ತ್ತಿರುವನೋ, ಅವನು ಆಮರಣಾಂತವಾಗಿ ಕಾಶಿಯಲ್ಲಿ ನೆಲಸಿದ ಫಲವನ್ನು ಹೊಂದುವನು. ಈ ನನ್ನ ವಾಕ್ಯವು ಎಂದಿಗೂ ವಿಪರೀತಾರ್ಥವುಳ್ಳದ್ದಾಗಲಿ ವ್ಯರ್ಥವಾಗಲಿ ಆಗಲಾರದು.

೪೧. ಎಲೈ ಮಹಾಪುರುಷನೆ! ಈ ಕ್ಷೇತ್ರಕ್ಕೆ ಸಂಬಂಧಪಟ್ಟ ಅಸಂಖ್ಯಾತಗಳಾದ ವಿಘ್ನಗಳನ್ನೆಲ್ಲ ಬಹುವಿಧವಾಗಿ ನಾಶಗೊಳಿಸುವುದಕ್ಕಾಗಿಯೇ ನೀನು ಈ ಕಾಶೀಕ್ಷೇತ್ರದಲ್ಲಿ ಅನೇಕ ರೂಪಗಳನ್ನು ಧರಿಸಿ ಹಲವೆಡೆಗಳಲ್ಲಿ ನೆಲಸಿರುವೆಯೆಂಬುದನ್ನು ಚೆನ್ನಾಗಿ ನಾನು ತಿಳಿದಿರುವೆನು.

೪೨. ಎಲೈ ಪಾಪರಹಿತನೇ! ನಿನ್ನ ಯಾವ ಯಾವ ರೂಪಗಳು ಎಲ್ಲೆಲ್ಲಿ ನೆಲಸಿರುವುವೊ, ಅವುಗಳನ್ನು ಹೇಳುವೆನು. ಇಲ್ಲಿ ನೆರೆದಿರುವ ದೇವತೆಗಳೆಲ್ಲರೂ ಕೇಳುವವರಾಗಲಿ.

೪೩. ಮೊದಲು ನನಗೆ ದಕ್ಷಿಣದಿಕ್ಕಿನಲ್ಲಿ ಸಮೀಪದಲ್ಲಿಯೇ ಢುಂಢಿರಾಜನೆಂದು ಕರೆಸಿಕೊಳ್ಳಲ್ಪಡುವೆ. ನಿನ್ನನ್ನು ಹುಡುಕಿಕೊಂಡು ಬರುವ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತಿರುವೆ.

೪೪. ಮಂಗಳವಾರದ ಚತುರ್ಥಿಯ ತಿಥಿಯು ಸಂಭವಿಸಲು ನಿನಗೆ ಸಂತೋಷವನ್ನುಂಟುಮಾಡುವ ಮೋದಕಗಳ ಉಪಾಯನಗಳಿಂದಲೂ, ಗಂಧಪುಷ್ಪಮಾಲ್ಯಾದಿಗಳಿಂದಲೂ ಯಾರು ನಾನಾವಿಧವಾದ ಪೂಜೆಯನ್ನು ವಿರಚಿಸುವರೊ, ಅವರನ್ನು ನಾನು ಇಲ್ಲಿ ಶಿವಗಣಗಳನ್ನಾಗಿ ಸ್ವೀಕರಿಸುತ್ತೇನೆ.

೪೫. ಢುಂಢಿರಾಜ ಗಣಪತಿಯೆ! ಪ್ರತಿಯೊಂದು ಚತುರ್ಥಿಯಲ್ಲಿಯೂ

ಮಾಘಶುಕ್ಲಚತುರ್ಥ್ಯಾಂ ತು ನಕ್ತವ್ರತಪರಾಯಣಾಃ ।
ಯೇ ತ್ವಾಂ ಢುಂಢೇಽರ್ಚಯಿಷ್ಯಂತಿ ತೇಽರ್ಚ್ಯಾಃ ಸ್ಯುರಸುರದ್ರುಹಾಂ ॥ ೪೬ ॥
ವಿಧಾಯ ವಾರ್ಷಿಕೀಂ ಯಾತ್ರಾಂ ಚತುರ್ಥೀಂ ಪ್ರಾಪ್ಯ ತಾಪಸೀಂ ।
ಶುಕ್ಲಾಂ ಶುಕ್ಲತಿಲೈರ್ಬದ್ಧ್ವಾ ಪ್ರಾಶ್ನೀಯಾಲ್ಲಡ್ಡುಕಾನ್ನ್ರತೀ ॥ ೪೭ ॥
ಕಾರ್ಯಾ ಯಾತ್ರಾ ಪ್ರಯತ್ನೇನ ಕ್ಷೇತ್ರಸಿದ್ಧಿಮಭೀಪ್ಸುಭಿಃ ।
ತಸ್ಯಾಂ ಚತುರ್ಥ್ಯಾಂ ತ್ವತ್ಪ್ರೀತ್ಯೈ ಢುಂಢೇ ಸರ್ವೋಪಸರ್ಗಹೃತ್ ॥ ೪೮ ॥
ತಾಂ ಯಾತ್ರಾಂ ನಾತ್ರ ಯತ್ಕುರ್ಯಾನ್ನೈವೇದ್ಯಂ ತಿಲಲಡ್ಡುಕೈಃ ।
ಉಪಸರ್ಗಸಹಸ್ರೈಸ್ತು ಸ ಹಂತವ್ಯೋ ಮಮಾಜ್ಞಯಾ ॥ ೪೯ ॥
ಹೋಮಂ ತಿಲಾಜ್ಯದ್ರವ್ಯೇಣ ಯಃ ಕರಿಷ್ಯತಿ ಭಕ್ತಿತಃ ।
ತಸ್ಯಾಂ ಚತುರ್ಥ್ಯಾಂ ಮಂತ್ರಜ್ಞಸ್ತಸ್ಯ ಮಂತ್ರಃ ಪ್ರಸೇತ್ಸ್ಯತಿ ॥ ೫೦ ॥
ವೈದಿಕೋಽವೈದಿಕೋ ವಾಪಿ ಯೋ ಮಂತ್ರಸ್ತೇ ಗಜಾನನ ।
ಜಪ್ತಸ್ತ್ವತ್ಸನ್ನಿಧೌ ಢುಂಢೇ ಸಿದ್ಧಿಂ ದಾಸ್ಯತಿ ವಾಂಛಿತಾಂ ॥ ೫೧ ॥

---

ಇಲ್ಲಿರುವ ಯಾರು ನಿನ್ನನ್ನು ಪೂಜಿಸುವರೊ, ಅವರೇ ಅಖಂಡಜ್ಞಾನಸಂಪನ್ನರು. ಅವರೇ ಕೃತಕೃತ್ಯರು. ಅವರು ಸಕಲ ವಿಘ್ನಗಳ ತಲೆಯಲ್ಲಿ ತಮ್ಮ ಎಡಗಾಲನ್ನಿಕ್ಕಿ ಕೊನೆಯಲ್ಲಿ ನಿನ್ನ ಉನ್ನತಪದವಿಯನ್ನು ಪಡೆಯುವರು.

೪೬–೪೭. ಢುಂಢಿಯೆ! ಯಾರು ಮಾಘಮಾಸದ ಶುಕ್ಲ ಚತುರ್ಥಿಯ ರಾತ್ರಿಯ ವೇಳೆಯಲ್ಲಿ ವ್ರತವನ್ನು ಸ್ವೀಕರಿಸಿ ನಿನ್ನ ಅರ್ಚನೆಯನ್ನು ಮಾಡುವರೋ, ಅವರು ದೇವತೆಗಳಿಗೂ ಕೂಡ ಪೂಜನೀಯರಾಗುವರೆಂಬುದರಲ್ಲಿ ಸಂದೇಹವಿಲ್ಲ. ಮಾಘಮಾಸದ ಶುಕ್ಲಚತುರ್ಥಿಯ ದಿನದಲ್ಲಿ ವಾರ್ಷಿಕಯಾತ್ರೆಯನ್ನು ನೆರವೇರಿಸಲು ವ್ರತನಿಷ್ಠನಾದವನು ಬಿಳಿ ಎಳ್ಳಿನಿಂದ ಲಡ್ಡುಕಗಳನ್ನು ಮಾಡಿ ನಿವೇದಿಸಿ ಅವುಗಳನ್ನು ಸೇವಿಸಬೇಕು.

೪೮. ಢುಂಢಿಯೆ! ಈ ಕ್ಷೇತ್ರ ಸೇವನೆಯ ಸಂಪೂರ್ಣಫಲವನ್ನು ಅಪೇಕ್ಷಿಸುವ ಸಕಲರೂ ಪ್ರಯತ್ನದಿಂದ ಈ ಯಾತ್ರೆಯನ್ನು ಮಾಡಬೇಕು. ಇದರಿಂದ ನಿನಗೆ ಸಂತೋಷವುಂಟಾಗಿ ಅವರ ಸಕಲ ವಿಘ್ನಗಳೂ ನಾಶವನ್ನೈದುವುವು.

೪೯. ಈ ಯಾತ್ರೆಯನ್ನು ಯಾರು ನಡೆಸುವುದಿಲ್ಲವೊ, ಮತ್ತು ಎಳ್ಳಿನ ಲಡ್ಡುಕಗಳನ್ನು ಯಾರು ನೈವೇದ್ಯಮಾಡುವುದಿಲ್ಲವೊ, ಅವರನ್ನು ನೀನು ನನ್ನ ಆಜ್ಞಾನುಸಾರವಾಗಿ ಸಾವಿರಾರು ವಿಘ್ನಗಳಿಂದ ಪರಾಭವಗೊಳಿಸು.

೫೦. ಆ ಚತುರ್ಥಿಯ ದಿನದಲ್ಲಿ ಮಂತ್ರಜ್ಞನಾದ ಯಾವ ಬ್ರಾಹ್ಮಣನು ತನಗೆ ಈಪ್ಸಿತವಾದ ಮಂತ್ರದಿಂದ ಎಳ್ಳು, ತುಪ್ಪಗಳೊಡನೆ ಭಕ್ತಿಯಿಂದ ಅಗ್ನಿಯಲ್ಲಿ ಹೋಮವನ್ನು ಮಾಡುವನೊ, ಅವನಿಗೆ ಆ ಮಂತ್ರವು ಸಿದ್ಧಿಸುವುದು.

೫೧. ಢುಂಢಿವಿನಾಯಕನೆ! ವೈದಿಕಮಂತ್ರವೇ ಆಗಿರಲಿ, ಅವೈದಿಕ

ಈಶ್ವರ ಉವಾಚ :—

ಇಮಾಂ ಸ್ತುತಿಂ ಮಮ ಕೃತಾಂ ಯಃ ಪಠಿಷ್ಯತಿ ಸನ್ಮತಿಃ ।
ನ ಜಾತು ತಂ ತು ವಿಘ್ನೌಘಾಃ ಪೀಡಯಿಷ್ಯಂತಿ ನಿಶ್ಚಿತಂ ॥ ೫೨ ॥
ಢೌಂಢೀಂ ಸ್ತುತಿಮಿಮಾಂ ಪುಣ್ಯಾಂ ಯಃ ಪಠೇಡ್ಢುಂಢಿಸನ್ನಿಧೌ ।
ಸಾನ್ನಿಧ್ಯಂ ತಸ್ಯ ಸತತಂ ಭಜೇಯುಃ ಸರ್ವಸಿದ್ಧಯಃ ॥ ೫೩ ॥
ಇಮಾಂ ಸ್ತುತಿಂ ನರೋ ಜಪ್ತ್ವಾ ಪರಂ ನಿಯತಮಾನಸಃ ।
ಮಾನಸೈರಪಿ ಪಾಪೈಸ್ತೈರ್ನಾಭಿಭೂಯೇತ ಕರ್ಹಿಚಿತ್ ॥ ೫೪ ॥
ಪುತ್ರಾನ್ಕಲತ್ರಂ ಕ್ಷೇತ್ರಾಣಿ ವರಾಶ್ವಾನ್ವರಮಂದಿರಂ ।
ಪ್ರಾಪ್ನುಯಾಚ್ಚ ಧನಂ ಧಾನ್ಯಂ ಢುಂಢಿಸ್ತೋತ್ರಂ ಜಪನ್ನರಃ ॥ ೫೫ ॥
ಸರ್ವಸಂಪತ್ಕರಂ ನಾಮ ಸ್ತೋತ್ರಮೇತನ್ಮಯೇರಿತಂ ।
ಪ್ರಜಪ್ತವ್ಯಂ ಪ್ರಯತ್ನೇನ ಮುಕ್ತಿಕಾಮೇನ ಸರ್ವದಾ ॥ ೫೬ ॥
ಜಪ್ತ್ವಾ ಸ್ತೋತ್ರಮಿದಂ ಪುಣ್ಯಂ ಕ್ವಾಪಿ ಕಾರ್ಯೇ ಗಮಿಷ್ಯತಃ ।
ಪುಂಸೋ ನರಃ ಸಮೇಷ್ಯಂತಿ ನಿಯತಂ ಸರ್ವಸಿದ್ಧಯಃ ॥ ೫೭ ॥

---

ಸ್ತೋತ್ರವೇ ಆಗಿರಲಿ, ನಿನ್ನ ಸನ್ನಿಧಿಯಲ್ಲಿ ಜಪಿಸಲ್ಪಟ್ಟುದಾದರೆ ಆ ನಿನ್ನ ಮಂತ್ರವು ಭಕ್ತನಿಗೆ ಅಭೀಷ್ಟಸಿದ್ಧಿಯನ್ನು ಒದಗಿಸಿಕೊಡುವುದು.

೫೨. ಈಶ್ವರನು ಹೇಳುತ್ತಾನೆ:—ನಾನು ರಚಿಸಿರುವ ಈ ಸ್ತೋತ್ರವನ್ನು ಯಾವನು ಸದ್ಬುದ್ಧಿಯಿಂದ ಪಠಿಸುತ್ತಾನೆಯೋ, ಅವನನ್ನು ಎಂದಿಗೂ ವಿಘ್ನ ಸಮೂಹಗಳು ಪೀಡಿಸುವುದಿಲ್ಲವೆಂಬುದು ನಿಶ್ಚಯವು.

೫೩. ಪರಮಪುಣ್ಯಕಾರಕವಾದ ಈ ಢುಂಢಿರಾಜಸ್ತವವನ್ನು ಯಾವನು ಢುಂಢಿವಿನಾಯಕನ ಸನ್ನಿಧಿಯಲ್ಲಿ ಪಠನಮಾಡುವನೊ, ಸಕಲ ಸಿದ್ಧಿಗಳೂ ಅವನ ಸಾನ್ನಿಧ್ಯವನ್ನು ಎಡಬಿಡದೆ ಭಜಿಸುತ್ತಿರುವುವು.

೫೪. ಉತ್ತಮವಾದ ಈ ಸ್ತೋತ್ರವನ್ನು ಮನಸ್ಸಂಯಮಪೂರ್ವಕವಾಗಿ ಜಪಿಸಿದ ಮನುಷ್ಯನು ಎಂದಿಗೂ ಮಾನಸಿಕಗಳಾದ ಪಾತಕಗಳಿಂದ ಲೇಪವನ್ನೂ ಪರಾಭವವನ್ನೂ ಪಡೆಯುವುದಿಲ್ಲವು.

೫೫. ಈ ಢುಂಢಿಗಣಪತಿಯ ಸ್ತೋತ್ರಮಾಡಿದ ಮಾನವನು ಸತ್ಪುತ್ರರನ್ನೂ, ಹೆಂಡತಿಯನ್ನೂ, ಕ್ಷೇತ್ರವನ್ನೂ, ಉತ್ತಮಾಶ್ವಗಳನ್ನೂ, ಗೃಹವನ್ನೂ, ಧನಧಾನ್ಯ ಸಮೃದ್ಧಿಯನ್ನೂ ಪಡೆದು ಸುಖಿಸುವನು.

೫೬. ನನ್ನಿಂದ ಮಾಡಲ್ಪಟ್ಟ ಈ ಸ್ತೋತ್ರಕ್ಕೆ ಸರ್ವಸಂಪತ್ಕರ ಸ್ತೋತ್ರವೆಂದು ಹೆಸರಾಗಲಿ. ಮೋಕ್ಷಕಾಮನೆಯುಳ್ಳವನು ಈ ಸ್ತುತಿಯನ್ನು ಅಗತ್ಯವಾಗಿ ನಿತ್ಯವೂ ಪಠನಮಾಡಬೇಕು.

೫೭. ಯಾವ ಕಾರ್ಯವನ್ನಾದರೂ ಮಾಡುವಲ್ಲಿ, ಹೊರಡುವಾಗಲೂ

ಅನ್ಯಚ್ಚ ಕಥಯಾಮ್ಯತ್ರ ಶೃಣ್ವಂತ್ವೇತೇ ದಿವೌಕಸಃ ।
ಢುಂಢಿನಾ ಕ್ಷೇತ್ರರಕ್ಷಾರ್ಥಂ ಯತ್ರ ಯತ್ರ ಸ್ಥಿತಿಃ ಕೃತಾ ॥ ೫೮ ॥
ಕಾಶ್ಯಾಂ ಗಂಗಾಸಿಸಂಭೇದೇ ಸಾಮುತೋಽರ್ಕವಿನಾಯಕಃ ।
ದೃಷ್ಟೋಽರ್ಕವಾಸರೇ ಪುಂಭಿಃ ಸರ್ವತಾಪಪ್ರಶಾಂತಯೇ ॥ ೫೯ ॥
ದುರ್ಗೋನಾಮ ಗಣಾಧ್ಯಕ್ಷಃ ಸರ್ವದುರ್ಗತಿನಾಶನಃ ।
ಕ್ಷೇತ್ರಸ್ಯ ದಕ್ಷಿಣೇ ಭಾಗೇ ಪೂಜನೀಯಃ ಪ್ರಯತ್ನತಃ ॥ ೬೦ ॥
ಭೀಮಚಂಡೀಸಮೀಪೇ ತು ಭೀಮಚಂಡವಿನಾಯಕಃ ।
ಕ್ಷೇತ್ರಸ್ಯ ನೈರ್ಋತದೇಶಸ್ಥೋ ದೃಷ್ಟೋ ಹಂತಿ ಮಹಾಭಯಂ ॥ ೬೧ ॥
ಕ್ಷೇತ್ರಸ್ಯ ಪಶ್ಚಿಮೇ ಭಾಗೇ ಸ ದೇಹಲಿವಿನಾಯಕಃ ।
ಸರ್ವಾನ್ನಿವಾರಯೇದ್ವಿಘ್ನಾನ್ಭಕ್ತಾನಾಂ ನಾತ್ರ ಸಂಶಯಃ ॥ ೬೨ ॥
ಕ್ಷೇತ್ರವಾಯುವ್ಯದಿಗ್ಭಾಗೇ ಉದ್ದಂಡಾಖ್ಯೋ ಗಜಾನನಃ ।
ಉದ್ದಂಡಾನಪಿ ವಿಘ್ನೌಘಾನ್ಭಕ್ತಾನಾಂ ದಂಡಯೇತ್ಸದಾ ॥ ೬೩ ॥

---

ಈ ಪಾವನವಾದ ಸ್ತೋತ್ರವನ್ನು ಜಪಿಸಲು, ಅವನ ಮುಂದೆಯೇ ಸಕಲ ಸಿದ್ಧಿಗಳೂ ನಿಜವಾಗಿಯೂ ಹೋಗಿ ಕಾರ್ಯವನ್ನು ಕೈಗೂಡಿಸುವುವು.

೫೮. ಈ ಕ್ಷೇತ್ರದ ರಕ್ಷಣೆಗಾಗಿ ಢುಂಢಿರಾಜನು ಎಲ್ಲಿ ಎಲ್ಲಿ ಪ್ರತಿಷ್ಠಿತನಾಗಿರುವನೆಂಬ ಮತ್ತೊಂದು ವಿಷಯವನ್ನೂ ಇಲ್ಲಿ ವಿವರಿಸಿರುವೆನು. ಈ ದೇವತೆಗಳೆಲ್ಲರೂ ಸಾವಧಾನದಿಂದ ಕೇಳಲಿ.

೫೯. ಕಾಶಿಯಲ್ಲಿ ಗಂಗಾ ಮತ್ತು ಅಸಿ ನದಿಗಳ ಸಂಗಮಪ್ರದೇಶದಲ್ಲಿ ಅರ್ಕವಿನಾಯಕನೆಂಬ ಹೆಸರಿನಿಂದ ನೀನು ನೆಲಸಿರುವೆ. ಭಾನುವಾರದ ದಿವಸ ಆ ವಿನಾಯಕನ ದರ್ಶನವನ್ನು ಮಾಡಲು ತ್ರಿವಿಧತಾಪಗಳೂ ಶಮನವನ್ನು ಹೊಂದುವುವು.

೬೦. ಈ ಕ್ಷೇತ್ರದ ದಕ್ಷಿಣಭಾಗದಲ್ಲಿ ಸಕಲ ದುರ್ಗತಿಯನ್ನು ನಾಶ ಮಾಡುವ ದುರ್ಗನೆಂಬ ಹೆಸರಿನ ಗಣಪತಿಯಿರುವನು. ಆತನನ್ನು ಸಕಲರೂ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೬೧. ಈ ಪ್ರದೇಶದ ನೈರ್ಋತ್ಯಭಾಗದಲ್ಲಿ ಭೀಮಚಂಡಿಯ ಸಮೀಪದಲ್ಲಿ ಭೀಮಚಂಡನೆಂಬ ಗಣನಾಯಕನಿರುವನು. ಆತನನ್ನು ನೋಡಿದವರ ಸಕಲ ಮಹಾಭಯಗಳನ್ನೂ ನಿರ್ಮೂಲಗೊಳಿಸುವನು.

೬೨. ಕ್ಷೇತ್ರದ ಪಶ್ಚಿಮಭಾಗದಲ್ಲಿ ದೇಹಲಿ ವಿನಾಯಕನು ಪ್ರತಿಷ್ಠಿತನಾಗಿರುವನು. ಆತನು ತನ್ನ ಭಕ್ತರ ಸಕಲ ವಿಘ್ನಗಳನ್ನೂ ನಿವಾರಿಸುವನೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೬೩. ಕ್ಷೇತ್ರದ ವಾಯುವ್ಯದ ಮೂಲೆಯಲ್ಲಿ ಉದ್ದಂಡನಾಮಕನಾದ

**ಕಾಶ್ಯಾಃ ಸದೋತ್ತರಾಶಾಯಾಂ ಪಾಶಪಾಣಿರ್ವಿನಾಯಕಃ ।**
**ವಿನಾಯಕಾನ್ಪಾಶಯತಿ ಭಕ್ತ್ಯಾ ಕಾಶೀನಿವಾಸಿನಾಂ ॥ ೬೪ ॥**
**ಗಂಗಾವರಣಯೋಃ ಸಂಗೇ ರಮ್ಯಃ ಖರ್ವವಿನಾಯಕಃ ।**
**ಸರ್ವಾನ್ನಿವಾರಯೇದ್ವಿಘ್ನಾನ್ಸ್ವಭಕ್ತಾನಾಂ ಖರ್ವಯೇತ್ಸತಾಂ ॥ ೬೫ ॥**
**ಪ್ರಾಚ್ಯಾಂ ತು ಕ್ಷೇತ್ರರಕ್ಷಾರ್ಥಂ ಸಿದ್ಧಃ ಸಿದ್ಧಿವಿನಾಯಕಃ ।**
**ಪಶ್ಚಿಮೇ ಯಮತೀರ್ಥಸ್ಯ ಸಾಧಕಕ್ಷಿಪ್ರಸಿದ್ಧಿದಃ ॥ ೬೬ ॥**
**ಬಾಹ್ಯಾವರಣಗಾಶ್ಚೈತೇ ಕಾಶ್ಯಾಮಷ್ಟೌ ವಿನಾಯಕಾಃ ।**
**ಉಚ್ಚಾಟಯಂತ್ಯಭಕ್ತಾಂಶ್ಚ ಭಕ್ತಾನಾಂ ಸರ್ವಸಿದ್ಧಿದಾಃ ॥ ೬೭ ॥**
**ದ್ವಿತೀಯಾವರಣೇಚೈವ ಯೇ ರಕ್ಷಂತಿ ವಿನಾಯಕಾಃ ।**
**ಅವಿಮುಕ್ತಮಿದಂ ಕ್ಷೇತ್ರಂ ತಾನಹಂ ಕಥಯಾಮ್ಯತಃ ॥ ೬೮ ॥**
**ಸ್ವರ್ಧುನ್ಯಾಃ ಪಶ್ಚಿಮೇ ಕೂಲೇ ಉತ್ತರೇಽರ್ಕವಿನಾಯಕಾತ್ ।**
**ಲಂಬೋದರೋ ಗಣಾಧ್ಯಕ್ಷಃ ಕ್ಷಾಲಯೇದ್ವಿಘ್ನಕರ್ದಮಂ ॥ ೬೯ ॥**

---

ಗಣಪತಿಯಿರುವನು. ಭಕ್ತರ ಉದ್ದಂಡಗಳಾದ ವಿಘ್ನಕೋಟಿಗಳನ್ನೂ ಸಹ ನಿತ್ಯವೂ ಶಾಸನಮಾಡಿ ಕಳೆಯುತ್ತಿರುವನು.

೬೪. ಕಾಶಿಯ ಉತ್ತರದಿಕ್ಕಿನಲ್ಲಿ ಪಾಶಪಾಣಿಯೆಂಬ ವಿನಾಯಕನಿರುವನು. ಭಕ್ತಿಯುತರಾಗಿ ಕಾಶಿಯಲ್ಲಿ ವಾಸಮಾಡುವವರ ಕಾರ್ಯಗಳಲ್ಲಿ ಎಲ್ಲ ಅಡಚಣೆಗಳನ್ನೂ ಆತನು ದೂರಮಾಡುವನು.

೬೫. ಗಂಗಾ ವರಣಗಳ ಸಂಗಮಕ್ಷೇತ್ರದಲ್ಲಿ ಸುಂದರರೂಪನಾದ ಖರ್ವವಿನಾಯಕನು ನೆಲಸಿರುವನು. ಸತ್ಪುರುಷರಾದ ತನ್ನ ಭಕ್ತರಿಗೊದಗುವ ಅಸಂಖ್ಯಾಕಗಳಾದ ಕಾರ್ಯವಿಘ್ನಗಳನ್ನೂ ಆತನು ಕ್ಷಯಗೊಳಿಸುವನು.

೬೬. ಪೂರ್ವದಿಕ್ಕಿನಲ್ಲಿ ಕ್ಷೇತ್ರವನ್ನು ರಕ್ಷಿಸುವುದಕ್ಕಾಗಿ ಸಿದ್ಧಿವಿನಾಯಕನು ಸ್ಥಾಪಿತನಾಗಿರುವನು. ಆತನು ಯಮತೀರ್ಥದ ಪಶ್ಚಿಮದಲ್ಲಿ ನೆಲಸಿ ಸಾಧಕರಾದವರಿಗೆ ಶೀಘ್ರವಾಗಿ ಕಾರ್ಯಸಿದ್ಧಿಯನ್ನು ಅನುಗ್ರಹಿಸುವನು.

೬೭. ಈ ಎಂಟು ವಿನಾಯಕರೂ ಕಾಶೀಕ್ಷೇತ್ರದ ಬಾಹ್ಯಾವರಣದಲ್ಲಿ ನೆಲಸಿರುವರು. ಭಕ್ತರಲ್ಲದವರನ್ನು ಹೊರಕ್ಕೆ ಓಡಿಸುವವರಾಗಿ ಭಕ್ತರಿಗೆ ಸಕಲವಿಧ ಸಿದ್ಧಿಗಳನ್ನೂ ಕೊಡುತ್ತಲಿರುವರು.

೬೮. ಅವಿಮುಕ್ತವೆಂಬ ಈ ಪವಿತ್ರ ಕ್ಷೇತ್ರವನ್ನು ರಕ್ಷಿಸುತ್ತ ಎರಡನೆಯ ಆವರಣದಲ್ಲಿ ಯಾವ ವಿನಾಯಕರಿರುವರೊ, ಅವರನ್ನು ಮುಂದೆ ವಿವರಿಸುವೆನು.

೬೯. ಗಂಗಾನದಿಯ ಪಶ್ಚಿಮದಡದಲ್ಲಿ ಅರ್ಕವಿನಾಯಕನಿಗೆ ಉತ್ತರದಿಕ್ಕಿನಲ್ಲಿರುವ ಲಂಬೋದರನೆಂಬ ಗಣನಾಯಕನು ಭಕ್ತರ ಪಾಪವೆಂಬ ಕೆಸರನ್ನು ತೊಳೆಯುವನು.

ತತ್ಪಶ್ಚಿಮೇ ಕೂಟದಂತ ಉದಗ್ದುರ್ಗವಿನಾಯಕಾತ್ ।
ದುರ್ಗೋಪಸರ್ಗಸಂಹರ್ತಾ ರಕ್ಷೇತ್ ಕ್ಷೇತ್ರಮಿದಂ ಸದಾ ॥ ೨೦ ॥
ಭೀಮಚಂಡಗಣಾಧ್ಯಕ್ಷಾತ್ಕಿಂಚಿದೀಶಾನದಿಗ್ಗತಃ ।
ಕ್ಷೇತ್ರರಕ್ಷೋ ಗಣಾಧ್ಯಕ್ಷಃ ಪೂಜ್ಯಃ ಶಾಲಕಟಂಕಟಃ ॥ ೨೧ ॥
ಪ್ರಾಚ್ಯಾಂ ದೇಹಲಿವಿಘ್ನೇಶಾತ್ಕೂಶ್ಮಾಂಡಾಖ್ಯೋ ವಿನಾಯಕಃ ।
ಪೂಜನೀಯಃ ಸದಾ ಭಕ್ತೈರ್ಮಹೋತ್ಪಾತಪ್ರಶಾಂತಯೇ ॥ ೨೨ ॥
ಉದ್ದಂಡಾಖ್ಯಾದ್ಗಣಪತೇರಾಶುಶುಕ್ಷಣಿದಿಕ್ಸ್ಥಿತಃ ।
ಮಹಾಪ್ರಸಿದ್ಧಃ ಸಂಪೂಜ್ಯೋ ಭಕ್ತೈರ್ಮುಂಡವಿನಾಯಕಃ ॥ ೨೩ ॥
ಪಾತಾಲೇ ತಸ್ಯ ದೇಹೋಽಸ್ತಿ ಮುಂಡಂ ಕಾಶ್ಯಾಂ ವ್ಯವಸ್ಥಿತಂ ।
ಅತಃ ಸಂಗೀಯತೇ ಕಾಶ್ಯಾಂ ದೇವೋ ಮುಂಡವಿನಾಯಕಃ ॥ ೨೪ ॥
ಪಾಶಪಾಣೇರ್ಗಣೇಶಾನಾದ್ದಕ್ಷಿಣೇ ವಿಕಟದ್ವಿಜಂ ।
ಪೂಜಯಿತ್ವಾ ಗಣಪತಿಂ ಗಾಣಾಪತ್ಯಪದಂ ಲಭೇತ್ ॥ ೨೫ ॥

---

೨೦. ಆತನಿಗೆ ಪಶ್ಚಿಮದಲ್ಲಿಯೂ ದುರ್ಗವಿನಾಯಕನಿಗೆ ಉತ್ತರದಲ್ಲಿಯೂ ಕೂಟದಂತನೆಂಬ ವಿನಾಯಕನು ನೆಲಸಿ ದುರ್ಗಮವಾದ ಕಷ್ಟವನ್ನೂ ಪರಿಹರಿಸುತ್ತ ಈ ಕ್ಷೇತ್ರವನ್ನು ನಿತ್ಯವೂ ರಕ್ಷಿಸುತ್ತಿರುವನು.

೨೧. ಭೀಮಚಂಡನೆಂಬ ಗಣನಾಯಕನಿಗೆ ಸ್ವಲ್ಪ ಈಶಾನ್ಯದಿಕ್ಕಿನಲ್ಲಿ ಪೂಜನೀಯನಾದ ಶಾಲಕಟಂಕಟನೆಂಬ ಗಣಪತಿಯು ಕ್ಷೇತ್ರದ ರಕ್ಷಣೆಯನ್ನು ಮಾಡುತ್ತ ನೆಲಸಿರುವನು.

೨೨. ದೇಹಲಿವಿನಾಯಕನಿಗೆ ಪೂರ್ವದಿಕ್ಕಿನಲ್ಲಿ ಕೂಶ್ಮಾಂಡನಾಮಕನಾದ ವಿನಾಯಕನೊಬ್ಬನಿರುವನು. ಕ್ಷಾಮಡಾಮರಾದಿ ಮಹಾಭಯಗಳುಂಟಾದ ವೇಳೆಗಳಲ್ಲಿ ಭಕ್ತರು ಈತನನ್ನು ಸರ್ವಕಾಲದಲ್ಲಿಯೂ ಪೂಜಿಸಬೇಕು.

೨೩. ಉದ್ದಂಡಗಣಪತಿಗೆ ಆಗ್ನೇಯ ಕೋಣದಲ್ಲಿ ಮಹಾಪ್ರಸಿದ್ಧಿಯನ್ನು ಪಡೆದ ಮುಂಡ ವಿನಾಯಕನು ಪ್ರತಿಷ್ಠಿತನಾಗಿರುವನು. ಭಕ್ತರಿಗೆ ಯಾವಾಗಲೂ ಪೂಜಾರ್ಹನಾಗಿರುವನು.

೨೪. ಆತನ ದೇಹವು ಪಾತಾಲಲೋಕದಲ್ಲಿ ನೆಲಸಿರುವುದು. ತಲೆಯು ಮಾತ್ರ ಕಾಶೀ ಕ್ಷೇತ್ರದಲ್ಲಿ ಕಾಣುತ್ತಿರುವುದು. ಆದುದರಿಂದಲೇ ಕಾಶಿಯಲ್ಲಿರುವ ಈತನಿಗೆ ಮುಂಡವಿನಾಯಕನೆಂಬ ಹೆಸರು ಪ್ರಸಿದ್ಧವಾಗಿರುವುದು.

೨೫. ಪಾಶಪಾಣಿಯೆಂಬ ಗಣಪತಿಗೆ ದಕ್ಷಿಣದಲ್ಲಿ ವಿಕಟದಂತಗಣಪತಿಯಿರುವನು. ಆ ಗಣೇಶನನ್ನು ಪೂಜಿಸಲು ಮನುಷ್ಯನಿಗೆ ಗಣಾಧಿಪತ್ಯವೇ ಫಲವಾಗಿ ಒದಗುವುದರಲ್ಲಿ ಸಂದೇಹವಿಲ್ಲ.

ಖರ್ವಾಖ್ಯಾನ್ನೈರ್ಋತೇ ಭಾಗೇ ರಾಜಪುತ್ರೋ ವಿನಾಯಕಃ ।
ಭ್ರಷ್ಟರಾಜ್ಯಂ ಚ ರಾಜಾನಂ ರಾಜಾನಂ ಕುರುತೇಽರ್ಚಿತಃ ॥ ೭೬ ॥
ಗಂಗಾಯಾಃ ಪಶ್ಚಿಮೇ ಕೂಲೇ ಪ್ರಣವಾಖ್ಯೋ ಗಣಾಧಿಪಃ ।
ಅವಾಚ್ಯಾಂ ರಾಜಪುತ್ರಾಚ್ಚ ಪ್ರಣತಃ ಪ್ರಣಯೇದ್ದ್ವಿಜಂ ॥ ೭೭ ॥
ದ್ವಿತೀಯಾವರಣೇ ಕಾಶ್ಯಾಮುಷ್ಟಾವೇತೇ ವಿನಾಯಕಾಃ ।
ಉತ್ಸಾದಯೇಯುರ್ವಿಘ್ನೌಘಾನ್ಕಾಶೀಸ್ಥಿತಿನಿವಾಸಿನಾಂ ॥ ೭೮ ॥
ಕ್ಷೇತ್ರೇ ತೃತೀಯಾವರಣೇ ಕ್ಷೇತ್ರರಕ್ಷಾಕೃತಃ ಸದಾ ।
ಯೇ ವಿಘ್ನರಾಜಾಃ ಸಂತೀಹ ತೇ ವಕ್ತವ್ಯಾ ಮಯಾಧುನಾ ॥ ೭೯ ॥
ಉದಗ್ವಹಾಯಾಃ ಸ್ವರ್ಧುನ್ಯಾ ರಮ್ಯೇ ರೋಧಸಿ ವಿಘ್ನರಾಟ್ ।
ಲಂಬೋದರಾದುದೀಚ್ಯಾಂ ತು ವಕ್ರತುಂಡೋಽಘಸಂಘಹೃತ್ ॥ ೮೦ ॥
ಕೂಟದಂತಾದ್ಗಣಪತೇರುದೀಚ್ಯಾಮೇಕದಂತಕಃ ।
ಸದೋಪಸರ್ಗಸಂಸರ್ಗಾತ್ಪಾಯಾದಾನಂದಕಾನನಂ ॥ ೮೧ ॥

---

೭೬. ಖರ್ವಗಣಪತಿಗೆ ನೈರುತ್ಯದಲ್ಲಿ ರಾಜಪುತ್ರನೆಂಬ ವಿನಾಯಕನು ಶೋಭಿಸುತ್ತಿರುವನು. ರಾಜ್ಯಾಧಿಕಾರದಿಂದ ಭ್ರಷ್ಟನಾಗಿ ಅಲೆಯುತ್ತಿರುವವನು ಈತನನ್ನು ಪೂಜಿಸಲು ಪುನಃ ತನ್ನ ರಾಜ್ಯದಲ್ಲಿ ಪ್ರತಿಷ್ಠಿತನಾಗುವನು.

೭೭. ಗಂಗಾನದಿಯ ಪಶ್ಚಿಮತೀರದಲ್ಲಿ ರಾಜಪುತ್ರಗಣಪತಿಗೆ ದಕ್ಷಿಣದಲ್ಲಿ ಪ್ರಣವಗಣಪತಿಯು ನೆಲಸಿರುವನು. ಆತನು ನಮಸ್ಕಾರಮಾಡಿದವರನ್ನು ಅನಾಯಾಸವಾಗಿಯೇ ಸ್ವರ್ಗಕ್ಕೆ ಕರೆದುಕೊಂಡು ಹೋಗುವನು.

೭೮. ಕಾಶೀಕ್ಷೇತ್ರದ ಎರಡನೆಯ ಆವರಣದಲ್ಲಿ ಮೇಲೆ ಹೇಳಿದ ಎಂಟು ಗಣಪತಿಗಳೂ ಪ್ರಸನ್ನರಾಗಿರುವರು. ಕಾಶಿಪ್ರದೇಶದಲ್ಲಿ ವಾಸಿಸುತ್ತಿರುವ ಜನರ ಸಕಲ ವಿಘ್ನಸಮೂಹಗಳನ್ನೂ ಇವರು ನಾಶಮಾಡುವರು.

೭೯. ಈ ಕ್ಷೇತ್ರದ ಮೂರನೆಯ ಆವರಣದಲ್ಲಿ ನಿತ್ಯವೂ ಕ್ಷೇತ್ರದ ರಕ್ಷಣೆಯನ್ನು ಮಾಡುತ್ತಿರುವ ಯಾವ ವಿನಾಯಕರಿರುವರೊ, ಅವರನ್ನು ನಾನು ಈಗ ಹೇಳಬೇಕಾಗಿರುವುದು.

೮೦. ಉತ್ತರವಾಹಿನಿಯಾದ ಗಂಗಾನದಿಯ ಮನೋಹರವಾದ ದಡದಲ್ಲಿ ಲಂಬೋದರನಿಗೆ ಉತ್ತರದಲ್ಲಿ ವಕ್ರತುಂಡನೆಂಬ ವಿಘ್ನೇಶ್ವರನು ನೆಲಸಿ ಭಕ್ತರ ಪಾತಕಕೋಟಿಗಳನ್ನು ಪರಿಹರಿಸುತ್ತಿರುವನು.

೮೧. ಕೂಟದಂತಗಣಪತಿಗೆ ಉತ್ತರದಿಕ್ಕಿನಲ್ಲಿ ಏಕದಂತಗಣಪತಿಯಿರುವನು. ಆತನು ಆನಂದವನವೆಂಬ ಈ ಕ್ಷೇತ್ರವನ್ನು ಯಾವಾಗಲೂ ವಿಘ್ನಗಳು ಸಂಭವಿಸದಂತೆ ಪಾಲನಮಾಡುತ್ತಿರುವನು.

ಕಾಶೀಭಯಹರೋ ನಿತ್ಯನ್ಯೈಶ್ಯಾಂ ಶಾಲಕಟಂಕಟಾತ್ ।
ತ್ರಿಮುಖೋ ನಾಮ ವಿಘ್ನೇಶಃ ಕಪಿಸಿಂಹದ್ವಿಪಾನನಃ ॥ ೮೨ ॥
ಕೂಶ್ಮಾಂಡಾತ್ಪೂರ್ವದಿಗ್ಭಾಗೇ ಪಂಚಾಸ್ಯೋ ನಾಮ ವಿಘ್ನರಾಟ್ ।
ಪಂಚಾಸ್ಯಸ್ಯಂದನವರಃ ಪಾತಿ ವಾರಾಣಸೀಂ ಪುರೀಂ ॥ ೮೩ ॥
ಹೇರಂಬಾಖ್ಯಃ ಸದಾಗ್ನೇಯ್ಯಾಂ ಪೂಜ್ಯೋ ಮುಂಡವಿನಾಯಕಾತ್ ।
ಅಂಬಾವತ್ಪೂರಯೇತ್ಕಾಮಾನ್ಸರ್ವೇಷಾಂ ಕಾಶಿವಾಸಿನಾಂ ॥ ೮೪ ॥
ಅವಾಚ್ಯಾಮರ್ಚಯೇದ್ಧೀಮಾನ್ವಿಘ್ನರಾಜಂ ವಿಕಟದಂತತಃ ।
ವಿಘ್ನರಾಜಂ ಗಣಪತಿಂ ಸರ್ವವಿಘ್ನವಿನಾಶನಂ ॥ ೮೫ ॥
ವಿನಾಯಕಾದ್ರಾಜಪುತ್ರಾತ್ಕಿಂಚಿದ್ರಕ್ಷೋದಿಶಿ ಸ್ಥಿತಃ ।
ವರದಾಖ್ಯೋ ಗಣಾಧ್ಯಕ್ಷಃ ಪೂಜ್ಯೋ ಭಕ್ತವರಪ್ರದಃ ॥ ೮೬ ॥
ಯಾಮ್ಯಾಂ ಪ್ರಣವವಿಘ್ನೇಶಾದ್ಗಣೇಶೋ ಮೋದಕಪ್ರಿಯಃ ।
ಪೂಜ್ಯಃ ಪಿಶಂಗಿಲಾತೀರ್ಥೇ ದೇವನದ್ಯಾಸ್ತಟೇ ಶುಭೇ ॥ ೮೭ ॥

---

೮೨. ಶಾಲಕಟಂಕಟಗಣಪನಿಗೆ ಈಶಾನ್ಯದಿಕ್ಕಿನಲ್ಲಿ ತ್ರಿಮುಖನೆಂಬ ವಿಘ್ನೇಶ್ವರನು ನೆಲಸಿ ಕಾಶಿಯ ಸಮಸ್ತಭಯಗಳನ್ನೂ ಪರಿಹರಿಸುತ್ತಿರುವನು. ಆತನಿಗೆ ಕಪಿ, ಸಿಂಹ ಮತ್ತು ಆನೆಗಳ ಮೂರು ಮುಖಗಳಿರುವುವು.

೮೩. ಕೂಶ್ಮಾಂಡ ಗಣಪತಿಗೆ ಪೂರ್ವದಿಗ್ಭಾಗದಲ್ಲಿ ಪಂಚಾಸ್ಯನೆಂಬ ವಿಘ್ನನಾಯಕನು ನೆಲಸಿರುವನು. ಆತನು ಸಿಂಹವನ್ನು ಕಟ್ಟಿದ ರಥದಲ್ಲಿ ಕುಳಿತು ಈ ವಾರಾಣಸೀನಗರಿಯನ್ನು ಪಾಲಿಸುತ್ತಿರುವನು.

೮೪. ಮುಂಡವಿನಾಯಕನಿಗೆ ಆಗ್ನೇಯ ಮೂಲೆಯಲ್ಲಿರುವ ಹೇರಂಬ ಗಣಪತಿಯನ್ನು ನಿತ್ಯವೂ ಪೂಜಿಸಬೇಕು. ಆತನು ಅನ್ನಪೂರ್ಣಾದೇವಿಯಂತೆಯೇ ಕಾಶೀನಿವಾಸಿಗಳ ಸಕಲಾಭೀಷ್ಟಗಳನ್ನೂ ಪೂರೈಸುವನು.

೮೫. ವಿಕಟದಂತನಿಗೆ ದಕ್ಷಿಣದಲ್ಲಿ ವಿಘ್ನರಾಜನೆಂಬ ಗಣಪತಿಯನ್ನು ಬುದ್ಧಿವಂತನಾದ ಭಕ್ತನು ಪೂಜಿಸಬೇಕು. ಆತನು ಭಜಕರ ಸಕಲ ವಿಘ್ನಗಳನ್ನೂ ನಾಶನಮಾಡುವನು.

೮೬. ರಾಜಪುತ್ರಗಣೇಶ್ವರನಿಗೆ ಸ್ವಲ್ಪದೂರದಲ್ಲಿಯೇ ನೈಋತ್ಯದಿಕ್ಕಿಗೆ ವರದನೆಂಬ ಗಣಪತಿಯು ನೆಲಸಿರುವನು. ಆತನನ್ನು ಪೂಜಿಸುವ ಭಕ್ತರಿಗೆ ಸಮಸ್ತ ವರಗಳನ್ನೂ ದಯೆಪಾಲಿಸುವನು.

೮೭. ಪ್ರಣವಗಣಪತಿಯಿರುವೆಡೆಯಿಂದ ದಕ್ಷಿಣಕ್ಕೆ ಗಂಗಾನದಿಯ ನಿರ್ಮಲ ತಟದಲ್ಲಿರುವ ಪಿಶಂಗಿಲಾ ತೀರ್ಥದಲ್ಲಿ ಮೋದಕಪ್ರಿಯನೆಂಬ ಗಣಾಧಿಪತಿಯು ಸಕಲ ಕ್ಷೇತ್ರವಾಸಿಗಳಿಗೂ ಸಂಪೂಜ್ಯನಾಗಿರುವನು.

ಚತುರ್ಥಾವರಣೇ ಕಾಶ್ಯಾಂ ಭಕ್ತವಿಘ್ನವಿನಾಯಕಾಃ ।
ದ್ರಷ್ಟವ್ಯಾ ಹೃಷ್ಟಚೇತೋಭಿಃ ಸ್ಪಷ್ಟಮಷ್ಟೌ ವಿನಾಯಕಾಃ ॥ ೮೮ ॥
ವಕ್ರತುಂಡಾದುದಗ್ದಿಕ್ಸ್ಥಃ ಸ್ವಃ ಸಿಂಧೋರೋಧಸಿ ಸ್ಥಿತಃ ।
ವಿನಾಯಕೋಽಸ್ತ್ಯಭಯದಃ ಸರ್ವೇಷಾಂ ಭಯನಾಶನಃ ॥ ೮೯ ॥
ಕೌಬೇರ್ಯಾಮೇಕದಶನಾತ್ಸಿಂಹತುಂಡೋ ವಿನಾಯಕಃ ।
ಉಪಸರ್ಗಗಜಾನ್ಹಂತಿ ವಾರಾಣಸೀನಿವಾಸಿನಾಂ ॥ ೯೦ ॥
ಕೂಣಿತಾಕ್ಷೋ ಗಣಾಧ್ಯಕ್ಷಸ್ತ್ರಿತುಂಡಾದೀಶದಿಕ್ಸ್ಥಿತಃ ।
ಮಹಾಶ್ಮಶಾನಂ ಸತತಂ ಪಾಯಾದ್ದುಷ್ಟಕುದೃಷ್ಟಿತಃ ॥ ೯೧ ॥
ಪ್ರಾಚ್ಯಾಂ ಪಂಚಾಸ್ಯತಃ ಪಾಯಾತ್ಪುರೀಂ ಕ್ಷಿಪ್ರಪ್ರಸಾದನಃ ।
ಕ್ಷಿಪ್ರಪ್ರಸಾದನಾರ್ಚಾತಃ ಕ್ಷಿಪ್ರಂ ಸಿಧ್ಯಂತಿ ಸಿದ್ಧಯಃ ॥ ೯೨ ॥
ಹೇರಂಬಾದ್ವಹ್ನಿದಿಗ್ಭಾಗೇ ಚಿಂತಾಮಣಿವಿನಾಯಕಃ ।
ಭಕ್ತಚಿಂತಾಮಣಿಃ ಸಾಕ್ಷಾಚ್ಚಿಂತಿತಾರ್ಥಸಮರ್ಪಕಃ ॥ ೯೩ ॥

---

೮೮. ನಾಲ್ಕನೆಯ ಆವರಣದಲ್ಲಿಯೂ ಹೀಗೆಯೇ ಎಂಟು ವಿನಾಯಕರು ನೆಲಸಿ ಕಾಶಿಯಲ್ಲಿ ಭಕ್ತರ ವಿಘ್ನಗಳನ್ನು ನಾಶಗೊಳಿಸುತ್ತಿರುವರು. ಸಂತುಷ್ಟಾಂತರಂಗರಾದ ಭಕ್ತರು ಅವರೆಲ್ಲರನ್ನೂ ಅವಶ್ಯಕವಾಗಿ ನೋಡಬೇಕು.

೮೯. ದೇವನದಿಯಾದ ಗಂಗೆಯ ತಟದಲ್ಲಿ ವಕ್ರತುಂಡಗಣೇಶನ ಉತ್ತರದಲ್ಲಿ ಅಭಯಪ್ರದವಿನಾಯಕನಿರುವನು. ಆತನು ಸಕಲ ಜನರ ಭಯಗಳನ್ನೂ ನಾಶಮಾಡುತ್ತ ಅಲ್ಲಿ ನೆಲಸಿರುವನು.

೯೦. ಏಕದಂತನಿಗೆ ಉತ್ತರದಿಕ್ಕಿನಲ್ಲಿ ಸಿಂಹತುಂಡವಿನಾಯಕನು ನೆಲಸಿ ವಾರಾಣಸೀ ಕ್ಷೇತ್ರದಲ್ಲಿ ವಾಸಮಾಡುವವರ ಸಕಲ ಕ್ಲೇಶಗಳನ್ನೂ ನಾಶಮಾಡುವುದರಲ್ಲಿ ಸಿಂಹಕ್ಕೆ ಸಮಾನನೆನಿಸಿರುವನು.

೯೧. ತ್ರಿಮುಖಗಣಪತಿಗೆ ಈಶಾನ್ಯದಿಕ್ಕಿನಲ್ಲಿ ನೆಲಸಿರುವ ಕೂಣಿತಾಕ್ಷನೆಂಬ ಗಣನಾಯಕನು ಕ್ಷೇತ್ರದ ಮಹಾಶ್ಮಶಾನವನ್ನು ದುಷ್ಟಜನರ ಕ್ರೂರದೃಷ್ಟಿಗಳಿಂದ ನಿತ್ಯವೂ ರಕ್ಷಿಸುತ್ತ ಕಾಣುತ್ತಿರುವನು.

೯೨. ಪಂಚಮುಖ ಗಣಪತಿಯು ಪೂರ್ವದಿಗ್ಭಾಗದಲ್ಲಿ ಕ್ಷಿಪ್ರಪ್ರಸಾದ ಗಣಪತಿಯು ಈ ನಗರವನ್ನು ರಕ್ಷಿಸುತ್ತ ನೆಲಸಿರುವನು. ಕ್ಷಿಪ್ರಪ್ರಸಾದ ಗಣಪತಿಯ ಪೂಜೆಯನ್ನು ಮಾಡುವುದರಿಂದ ಶೀಘ್ರವಾಗಿಯೇ ಸಕಲ ಸಿದ್ಧಿಗಳೂ ಕೈಗೂಡುವುವು.

೯೩. ಹೇರಂಬಗಣೇಶ್ವರನಿಗೆ ಆಗ್ನೇಯದಿಕ್ಕಿನಲ್ಲಿ ಚಿಂತಾಮಣಿನಾಮಕನಾದ ವಿನಾಯಕನು ಇರುವನು. ಆತನು ನಿಜವಾಗಿಯೂ ಭಕ್ತಜನರ ಚಿಂತಾಮಣಿಯೆನಿಸಿ ಅವರು ಅಪೇಕ್ಷಿಸಿದ ಪದಾರ್ಥಗಳನ್ನೆಲ್ಲ ಒದಗಿಸುತ್ತಿರುವನು.

ವಿಘ್ನರಾಜಾದವಾಚ್ಯಾಂ ತು ದಂತಹಸ್ತೋ ಗಣೇಶ್ವರಃ ।
ಲಿಖೇದ್ವಿಘ್ನಸಹಸ್ರಾಣಿ ನೃಣಾಂ ವಾರಾಣಸೀದ್ರುಹಾಂ ॥ ೯೪ ॥
ವರದಾದ್ಯಾತುಧಾನ್ಯಾಂ ಚ ಯಾತುಧಾನಗಣಾವೃತಃ ।
ದೇವಃ ಪಿಚಂಡಿಲೋ ನಾಮ ಪುರೀಂ ರಕ್ಷೇದಹರ್ನಿಶಂ ॥ ೯೫ ॥
ದೃಷ್ಟಃ ಪಿಲಿಪಿಲಾತೀರ್ಥೇ ದಕ್ಷಿಣೋ ಮೋದಕಪ್ರಿಯಾತ್ ।
ಉದ್ದಂಡಮುಂಡೋ ಹೇರಂಬೋ ಭಕ್ತೇಭ್ಯಃ ಕಿಂ ನ ಯಚ್ಛತಿ ॥ ೯೬ ॥
ಪ್ರಾಕಾರೇ ಪಂಚಮೇ ಕಾಶ್ಯಾಂ ದ್ವಿಚತುಷ್ಕವಿನಾಯಕಾಃ ।
ಕುರ್ವಂತಿ ರಕ್ಷಾಂ ಕ್ಷೇತ್ರಸ್ಯ ಯೇ ತಾನತ್ರ ಬ್ರವೀಮ್ಯಹಂ ॥ ೯೭ ॥
ತೀರೇ ಸ್ವರ್ಗತರಂಗಿಣ್ಯಾ ಉತ್ತರೇ ಚಾಭಯಪ್ರದಾತ್ ।
ಸ್ಥೂಲದಂತೋ ಗಣೇಶಾನಃ ಸ್ಥೂಲಾಃ ಸಿದ್ಧೀರ್ದಿಶೇತ್ಸತಾಂ ॥ ೯೮ ॥
ಸಿಂಹತುಂಡಾದುದಗ್ಭಾಗೇ ಕಲಿಪ್ರಿಯವಿನಾಯಕಃ ।
ಕಲಹಂ ಕಾರಯೇನ್ನಿತ್ಯಮನ್ಯೋನ್ಯಂ ತೈರ್ಥಿಕದ್ರುಹಾಂ ॥ ೯೯ ॥

---

೯೪. ವಿಘ್ನರಾಜನ ದಕ್ಷಿಣದಿಕ್ಕಿಗೆ ದಂತಹಸ್ತನೆಂಬ ಗಣಪತಿಯು ನೆಲಸಿರುವನು. ಆತನು ವಾರಾಣಸಿಯನ್ನು ದ್ವೇಷಿಸುವ ಪಾಪಿಗಳಿಗೆ ಸಾವಿರಾರು ವಿಘ್ನಗಳೊದಗುವಂತೆ ಶಾಸನಗಳನ್ನು ಬರೆಯುತ್ತಿರುವನು.

೯೫. ವರದಗಣಪತಿಗೆ ನೈಋತ್ಯದಲ್ಲಿ ಪಿಚಂಡಿಲನಾಮಕನಾದ ಗಣಪತಿಯು ತನ್ನ ರಾಕ್ಷಸಗಣಗಳಿಂದ ಕೂಡಿದವನಾಗಿ ಈ ನಗರಿಯನ್ನು ಅಹೋರಾತ್ರಗಳಲ್ಲಿಯೂ ಜಾಗರೂಕನಾಗಿ ರಕ್ಷಿಸುತ್ತಿರುವನು.

೯೬. ಪಿಲಪಿಲಾತೀರ್ಥದ ಬಳಿಯಲ್ಲಿ ಮೋದಕಪ್ರಿಯವಿನಾಯಕನ ದಕ್ಷಿಣಕ್ಕೆ ಉದ್ದಂಡಮುಂಡನೆಂಬ ಗಣಪತಿಯು ಕಾಣುತ್ತಿರುವನು. ಆತನು ತನ್ನ ಭಕ್ತರಿಗೆ ಯಾವುದನ್ನು ತಾನೆ ಕೊಡಲಾರನು?

೯೭. ಇನ್ನು ಕಾಶೀಕ್ಷೇತ್ರದ ಐದನೆಯ ಪ್ರಾಕಾರದಲ್ಲಿ ನೆಲಸಿರುವ ಯಾವ ಎಂಟು ವಿನಾಯಕರಿರುವರೊ, ಕ್ಷೇತ್ರರಕ್ಷಣೆಯನ್ನು ಮಾಡುತ್ತಿರುವ ಅವರೆಲ್ಲರನ್ನೂ ಈಗ ವಿವರಿಸಿ ಹೇಳುವೆನು.

೯೮. ಸ್ವರ್ಗತರಂಗಿಣಿಯಾದ ಗಂಗೆಯ ತೀರದಲ್ಲಿ ಅಭಯಪ್ರದಗಣಪತಿಗೆ ಉತ್ತರದಿಕ್ಕಿನಲ್ಲಿರುವ ಸ್ಥೂಲದಂತನೆಂಬ ಗಣಪತಿಯು ಸತ್ಪುರುಷರಿಗೆ ಶಾಶ್ವತಗಳಾದ ಸಕಲ ಸಿದ್ಧಿಗಳನ್ನೂ ತೋರಿಸಿಕೊಡುತ್ತಿರುವನು.

೯೯. ಸಿಂಹತುಂಡವಿನಾಯಕನಿಗೆ ಉತ್ತರಭಾಗದಲ್ಲಿ ಕಲಿಪ್ರಿಯಗಣಪತಿಯಿರುವನು. ಈ ಕ್ಷೇತ್ರದ ಯಾತ್ರಿಕರನ್ನು ದ್ವೇಷಿಸುವ ಸಕಲ ಜನರಲ್ಲಿ ನಿತ್ಯವೂ ಪರಸ್ಪರವಾದ ಕಲಹಗಳನ್ನುಂಟುಮಾಡುತ್ತಿರುವನು.

ಕೂಣಿತಾಕ್ಷಾತ್ತಥೈಶಾನ್ಯಾಂ ಚತುರ್ದಂತೋ ವಿನಾಯಕಃ ।
ತಸ್ಯ ದರ್ಶನಮಾತ್ರೇಣ ವಿಘ್ನಸಂಘಃ ಕ್ಷಯೇತ್ಸ್ವಯಂ ॥ ೧೦೦ ॥
ಕ್ಷಿಪ್ರಪ್ರಸಾದನಾದೈಂದ್ರ್ಯಾಂ ದ್ವಿತುಂಡೋ ಗಣನಾಯಕಃ ।
ಅಗ್ರತಃ ಪೃಷ್ಠತಶ್ಚಾಪಿ ಬಿಭರ್ತಿ ಸದೃಶೀಂ ಶ್ರಿಯಂ ॥ ೧೦೧ ॥
ತಸ್ಯ ಸಂದರ್ಶನಾತ್ಪುಂಸಾಂ ಭವೇಚ್ಛ್ರೀ ಸರ್ವತೋಮುಖೀ ।
ಜ್ಯೇಷ್ಠೋ ನಾಮ ಗಣಾಧ್ಯಕ್ಷೋ ಜ್ಯೇಷ್ಠೋ ಮೇ ಪುತ್ರಸಂಪದಿ ॥೧೦೨॥
ಜ್ಯೇಷ್ಠಶುಕ್ಲಚತುರ್ದಶ್ಯಾಂ ಸಂಪೂಜ್ಯೋ ಜ್ಯೇಷ್ಠತಾಪ್ತಯೇ ।
ಸ್ಥಿತೋ ವಹ್ನಿದಿಶೋಭಾಗೇ ಚಿಂತಾಮಣಿವಿನಾಯಕಾತ್ ॥ ೧೦೩ ॥
ದಂತಹಸ್ತಾದ್ಯಮಾಶಾಯಾಂ ಪೂಜ್ಯೋ ಗಜವಿನಾಯಕಃ ।
ತಸ್ಯ ಸಂಪೂಜನಾದ್ಭಕ್ತ್ಯಾ ಗಜಾಂತಾ ಶ್ರೀರವಾಪ್ಯತೇ ॥ ೧೦೪ ॥
ಪಿಚಿಣ್ಡಿಲಾದ್ಗಣಪತೇರ್ಯಾಮ್ಯಾಂ ಕಾಲವಿನಾಯಕಃ ।
ಭಯಂ ನ ಕಾಲಕಲಿತಂ ತಸ್ಯ ಸಂಸೇವನಾನ್ನೃಣಾಂ ॥ ೧೦೫ ॥

---

೧೦೦. ಕೂಣಿತಾಕ್ಷನಿಗೆ ಈಶಾನ್ಯದಿಕ್ಕಿನಲ್ಲಿ ಚತುರ್ದಂತವಿನಾಯಕನು ನೆಲಸಿರುವನು. ಆತನ ದರ್ಶನವನ್ನು ಮಾಡಿದ ಮಾತ್ರದಿಂದಲೇ ವಿಘ್ನಸಮೂಹಗಳು ತಾವಾಗಿಯೇ ಭಕ್ತನನ್ನು ತ್ಯಜಿಸಿ ಓಡಿಹೋಗುವುವು.

೧೦೧. ಕ್ಷಿಪ್ರಪ್ರಸಾದ ವಿಘ್ನೇಶ್ವರನಿಗೆ ಪೂರ್ವದಲ್ಲಿ ದ್ವಿತುಂಡನೆಂಬ ಗಣನಾಯಕನಿರುವನು. ಆತನು ಹಿಂದುಗಡೆಯೂ ಮುಂದುಗಡೆಯೂ ಒಂದೇ ವಿಧವಾದ ಆಕಾರಸಂಪತ್ತುಳ್ಳವನಾಗಿ ಪ್ರಕಾಶಿಸುತ್ತಿರುವನು.

೧೦೨. ಆತನನ್ನು ಸಂದರ್ಶನಮಾಡಿದ ಮಾತ್ರದಿಂದಲೇ ವಿಶ್ವತೋಮುಖವಾದ ಐಶ್ವರ್ಯವು ಮನುಷ್ಯರಿಗೆ ಲಭಿಸುವುದು. ಬಳಿಕ ನನ್ನ ಪುತ್ರಸಮೂಹದಲ್ಲೆಲ್ಲ ಜ್ಯೇಷ್ಠನಾದ ಜ್ಯೇಷ್ಠವಿನಾಯಕನಿರುವನು.

೧೦೩. ಸರ್ವಜ್ಯೇಷ್ಠತ್ವವನ್ನು ಪಡೆಯಲಿಚ್ಛಿಸುವ ಮನುಷ್ಯನು ಆತನನ್ನು ಜ್ಯೇಷ್ಠಮಾಸದ ಶುಕ್ಲಚತುರ್ದಶಿಯ ದಿನದಲ್ಲಿ ಪೂಜಿಸಬೇಕು. ಈ ಗಣಪತಿಯು ಚಿಂತಾಮಣಿವಿನಾಯಕನಿಗೆ ಆಗ್ನೇಯ ದಿಗ್ಭಾಗದಲ್ಲಿ ಪ್ರತಿಷ್ಠಿತನಾಗಿರುವನು.

೧೦೪. ದಂತಹಸ್ತಗಣಪತಿಗೆ ದಕ್ಷಿಣದಲ್ಲಿ ಗಜವಿನಾಯಕನೆಂಬ ಲೋಕಪೂಜ್ಯನಾದ ವಿನಾಯಕನಿರುವನು. ಆತನನ್ನು ಭಕ್ತಿಯಿಂದ ಪೂಜಿಸಲು ಗಜವಾಹನ ಪ್ರಾಪ್ತಿಯವರೆಗಿನ ಅತುಲೈಶ್ವರ್ಯವು ಪ್ರಾಪ್ತವಾಗುವುದು.

೧೦೫. ಪಿಚಂಡಿಲಗಣಪತಿಯ ದಕ್ಷಿಣಕ್ಕೆ ಕಾಲವಿನಾಯಕನು ನೆಲಸಿರುವನು. ಆತನನ್ನು ಸೇವಿಸುವುದರಿಂದ ಮಾನವರಿಗೆ ಕಾಲಯಮನಿಂದ ಯಾವ ವಿಧವಾದ ಭಯವೂ ಉಂಟಾಗುವುದಿಲ್ಲ.

ಉದ್ದಂಡಮುಂಡಾದ್ಗಣಪಾತ್ಕೀನಾಶದಿಶಿ ಸಂಸ್ಥಿತಂ ।
ನಾಗೇಶಂ ಗಣಪಂ ದೃಷ್ಟ್ವಾ ನಾಗಲೋಕೇ ಮಹೀಯತೇ ॥ ೧೦೬ ॥
ಅಥ ಷಷ್ಠಾವರಣಗಾಃ ಪ್ರೋಚ್ಯಂತೇ ವಿಘ್ನನಾಯಕಾಃ ।
ತೇಷಾಂ ನಾಮಶ್ರವಾದೇವ ಪುಂಸಾಂ ಸಿದ್ಧಿಃ ಪ್ರಜಾಯತೇ ॥ ೧೦೭ ॥
ಮಣಿಕರ್ಣೋ ಗಣಪತಿಃ ಪ್ರಾಚ್ಯಾಂ ವಿಘ್ನವಿಘಾತಕೃತ್ ।
ಆಶಾವಿನಾಯಕೋ ವಹ್ನ್ಯಾಂ ಭಕ್ತಾಶಾಂ ಪೂರಯನ್ಸ್ಥಿತಃ ॥ ೧೦೮ ॥
ಯಾಮ್ಯಾಂ ಸೃಷ್ಟಿಗಣೇಶಶ್ಚ ಸೃಷ್ಟಿಸಂಹಾರಸೂಚಕಃ ।
ನೈರ್ಋತ್ಯಾಂ ಯಕ್ಷವಿಘ್ನೇಶಃ ಸರ್ವವಿಘ್ನಹರಃ ಪರಃ ॥ ೧೦೯ ॥
ಪ್ರತೀಚ್ಯಾಂ ಗಜಕರ್ಣಶ್ಚ ಸರ್ವೇಷಾಂ ಕ್ಷೇಮಕಾರಕಃ ।
ಚಿತ್ರಘಂಟೋ ಗಣಪತಿರ್ವಾಯವ್ಯಾಂ ಪಾಲಯೇತ್ಪುರೀಂ ॥ ೧೧೦ ॥
ಸ್ಥೂಲಜಂಘ ಉದೀಚ್ಯಾಂ ಚ ಶಮಯೇಚ್ಛಮಿನಾಮಘಂ ।
ಐಶ್ಯಾಮೈಶೀಂ ಪುರೀಂ ಪಾಯಾತ್ಸ ಮಂಗಲವಿನಾಯಕಃ ॥ ೧೧೧ ॥
ಯಮತೀರ್ಥಾದುದೀಚ್ಯಾಂ ಚ ಪೂಜ್ಯೋ ಮಿತ್ರವಿನಾಯಕಃ ।
ಸಪ್ತಮಾವರಣೇ ಯೇ ಚ ತಾಂಶ್ಚ ವಕ್ಷ್ಯೇ ವಿನಾಯಕಾನ್ ॥ ೧೧೨ ॥

---

೧೦೬. ಉದ್ದಂಡಮುಂಡಗಣಪತಿಗೆ ದಕ್ಷಿಣದಿಕ್ಕಿನಲ್ಲಿ ಸ್ಥಾಪಿತನಾಗಿರುವ ನಾಗೇಶ್ವರನೆಂಬ ಗಣಪತಿಯ ದರ್ಶನವನ್ನುಮಾಡಲು ನಾಗಲೋಕಕ್ಕೆ ಹೋಗಲು ಅಲ್ಲಿಯೂ ಸಹ ಮಹಾಪೂಜೆಯನ್ನು ಪಡೆಯುವನು.

೧೦೭. ಇನ್ನು ಆರನೆಯ ಆವರಣದಲ್ಲಿ ನೆಲಸಿರುವ ವಿಘ್ನನಾಯಕರನ್ನು ನಿರೂಪಿಸುವೆನು. ಅವರೆಲ್ಲರ ಹೆಸರುಗಳನ್ನು ಕೇಳುವುದರಿಂದಲೇ ಮನುಷ್ಯರಿಗೆ ಸಕಲಸಿದ್ಧಿಗಳೂ ಸುಲಭವಾಗಿ ಉಂಟಾಗುವುವು.

೧೦೮. ಮಣಿಕರ್ಣನೆಂಬ ಗಣಪತಿಯು ಪೂರ್ವದಿಕ್ಕಿನಲ್ಲಿದ್ದುಕೊಂಡು ಸಕಲ ವಿಘ್ನಗಳಿಗೂ ವಿಘಾತವನ್ನುಂಟುಮಾಡುತ್ತಿರುವನು. ಆಗ್ನೇಯದಲ್ಲಿರುವ ಆಶಾವಿನಾಯಕನು ಭಕ್ತರ ಅಭೀಷ್ಟಗಳನ್ನು ಸಲ್ಲಿಸುತ್ತ ನೆಲಸಿರುವನು.

೧೦೯. ದಕ್ಷಿಣದಲ್ಲಿರುವ ಸೃಷ್ಟಿಗಣಪತಿಯು ಲೋಕದ ಸೃಷ್ಟಿಸಂಹಾರಗಳನ್ನು ಸೂಚಿಸುತ್ತಿರುವನು. ನೈಋತ್ಯಮೂಲೆಯಲ್ಲಿ ಯಕ್ಷವಿಘ್ನೇಶ್ವರನು ಸರ್ವವಿಘ್ನಗಳನ್ನು ಪರಿಹರಿಸುವ ಪರದೇವತೆಯಾಗಿರುವನು.

೧೧೦. ಪಶ್ಚಿಮದಲ್ಲಿ ಗಜಕರ್ಣಗಣಪತಿಯು ಸಕಲರಿಗೂ ಕ್ಷೇಮನ್ನುಂಟುಮಾಡುತ್ತಿರುವನು.

೧೧೧. ಸ್ಥೂಲಜಂಘವಿನಾಯಕನು ಉತ್ತರದಿಕ್ಕಿನಲ್ಲಿ ಇಂದ್ರಿಯ ನಿಗ್ರಹಸಹಿತರಾದವರ ಪಾಪಗಳನ್ನು ಕಳೆಯುವನು. ಈಶಾನ್ಯದಿಕ್ಕಿನಲ್ಲಿ ಪರಮೇಶ್ವರನ ನಗರವಾದ ಈ ಕಾಶಿಯನ್ನು ಮಂಗಲವಿನಾಯಕನು ಕಾಪಾಡುತ್ತಿರುವನು.

೧೧೨. ಯಮತೀರ್ಥಕ್ಕೆ ಉತ್ತರದಲ್ಲಿ ಮಿತ್ರವಿನಾಯಕನು ಲೋಕಪೂಜ್ಯ

ಮೋದಾದ್ಯಾಃ ಪಂಚವಿಘ್ನೇಶಾಃ ಷಷ್ಠೋ ಜ್ಞಾನವಿನಾಯಕಃ ।
ಸಪ್ತಮೋ ದ್ವಾರವಿಘ್ನೇಶೋ ಮಹಾದ್ವಾರಪುರಶ್ಚರಃ ॥ ೧೧೩ ॥
ಅಷ್ಟಮಃ ಸರ್ವಕಷ್ಟೌಘನವಿಮುಕ್ತವಿನಾಯಕಃ ।
ಅವಿಮುಕ್ತೇ ಮಮ ಕ್ಷೇತ್ರೇ ಹರೇತ್ಪ್ರಣತಚೇತಸಾಂ ॥ ೧೧೪ ॥
ಷಟ್ಪಂಚಾಶದ್ಗಜಮುಖಾನೇತಾನ್ಯಃ ಸಂಸ್ಮರಿಷ್ಯತಿ ।
ದೂರದೇಶಾಂತರಸ್ಥೋಽಪಿ ಸ ಮೃತೋ ಜ್ಞಾನಮಾಪ್ನುಯಾತ್॥ ೧೧೫ ॥
ಢುಂಢಿಸ್ತುತಿಂ ಮಹಾಪುಣ್ಯಾಂ ಷಟ್ಪಂಚಾಶದ್ಗಜಾನನಾಂ ।
ಯಃ ಪಠಿಷ್ಯತಿ ಪುಣ್ಯಾತ್ಮಾ ತಸ್ಯ ಸಿದ್ಧಿಃ ಪದೇ ಪದೇ ॥ ೧೧೬ ॥
ಇಮೇ ಗಣೇಶ್ವರಾಃ ಸರ್ವೇ ಸ್ಮರ್ತವ್ಯಾ ಯತ್ರ ಕುತ್ರಚಿತ್ ।
ಮಹಾವಿಪತ್ಸಮುದ್ರಾಂತಃ ಪತಿತಂ ಪಾಂತಿ ಮಾನವಂ ॥ ೧೧೭ ॥
ಇತಿ ಸ್ತುತಿಂ ಮಹಾಪುಣ್ಯಾಂ ಶ್ರುತ್ವಾ ಚೈತಾನ್ವಿನಾಯಕಾನ್ ।
ಜಾತು ವಿಘ್ನೈರ್ನ ಬಾಧ್ಯೇತ ಪಾಪೇಭ್ಯೋಽಪಿ ಪ್ರಹೀಯತೇ ॥ ೧೧೮ ॥

---

ನಾಗಿ ನೆಲಸಿರುವನು. ಇನ್ನು ಏಳನೆಯ ಆವರಣದಲ್ಲಿ ನೆಲಸಿರುವ ವಿನಾಯಕರನ್ನು ವಿವರಿಸಿ ಹೇಳುವೆನು.

೧೧೩. ಮೋದವಿನಾಯಕನೇ ಮೊದಲಾದ ಐದು ವಿನಾಯಕರು; ಆರನೆಯವನು ಜ್ಞಾನವಿನಾಯಕನು; ಏಳನೆಯವನೇ ಪುರದ ಮಹಾದ್ವಾರದಲ್ಲಿ ಎದುರಾಗಿ ನಿಂತಿರುವ ದ್ವಾರವಿಘ್ನೇಶ್ವರನು.

೧೧೪. ಎಂಟನೆಯವನು ಭಕ್ತರ ಸಕಲ ಕಷ್ಟಸಮೂಹಗಳನ್ನು ನಾಶಮಾಡುವ ಅವಿಮುಕ್ತವಿನಾಯಕನು. ಈತನು ನನ್ನ ಕ್ಷೇತ್ರವಾದ ಅವಿಮುಕ್ತನಗರದಲ್ಲಿ ನಮಸ್ಕರಿಸಿದವರ ಪಾಪಗಳನ್ನು ಕಳೆಯುವನು.

೧೧೫. ಯಾವನು ದೂರದೇಶದಲ್ಲಿರುವವನಾದರೂ ಈ ಐವತ್ತಾರು ವಿಘ್ನೇಶ್ವರರನ್ನು ಭಕ್ತಿಯಿಂದ ಸ್ಮರಿಸುವನೊ, ಅವನು ಮರಣಕಾಲದಲ್ಲಿ ನನ್ನ ಜ್ಞಾನವನ್ನು ಹೊಂದಿ ಮುಕ್ತನಾಗುವನು.

೧೧೬. ಮಹಾಪುಣ್ಯತಮವಾದ ಈ ಢುಂಢಿವಿನಾಯಕನ ಸ್ತೋತ್ರವನ್ನೂ, ಈ ಐವತ್ತಾರು ವಿಘ್ನನಾಯಕರ ನಾಮಾವಳಿಯನ್ನೂ ಯಾವ ಪುಣ್ಯಪುರುಷನು ಪಠಿಸುತ್ತಿರುವನೊ, ಅವನ ಕಾರ್ಯಗಳು ಅಡಿಗಡಿಗೂ ಸಿದ್ಧಿಸುತ್ತಿರುವುವು.

೧೧೭. ಮನುಷ್ಯನು ಯಾವ ಸ್ಥಳದಲ್ಲಿದ್ದರೂ ಈ ಎಲ್ಲ ಗಣನಾಯಕರನ್ನು ಸ್ಮರಿಸಬೇಕು. ಅವರು ಮಹಾವಿಪತ್ತುಗಳೆಂಬ ಸಮುದ್ರದಲ್ಲಿ ಬಿದ್ದು ಮುಳುಗಿಹೋಗುತ್ತಿರುವ ಮಾನವನನ್ನು ರಕ್ಷಿಸುವರು.

೧೧೮. ಇಂತು ಮಹಾಪುಣ್ಯತಮವಾದ ಈ ಸ್ತೋತ್ರವನ್ನೂ ಈ ವಿನಾಯಕರ ಹೆಸರುಗಳನ್ನೂ ಕೇಳಿದವನು ಎಂದಿಗೂ ವಿಘ್ನಗಳಿಂದ ಬಾಧೆಗೊಳ್ಳುವುದಿಲ್ಲ ಮತ್ತು ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು.

ಇತ್ಯುಕ್ತ್ವಾ ದೇವದೇವೋಽಪಿ ಮುಹೋತ್ಸವಿತಮಾನಸಃ ।
ಕೃತಾಭಿಷೇಕೋ ಬ್ರಹ್ಮಾದ್ಯೈಸ್ತೇಭ್ಯೋ ದತ್ವಾಭಿವಾಂಛಿತಂ ॥ ೧೧೯ ॥
ಸಂಪ್ರಸಾದ್ಯ ಯಥಾಯೋಗಂ ಸರ್ವಾನುಚಿತಚಂಚುರಃ ।
ಅವಿಶದ್ರಾಜಸದನಂ ವಿಶ್ವಕರ್ಮವಿನಿರ್ಮಿತಂ ॥ ೧೨೦ ॥

ಸ್ಕಂದ ಉವಾಚ :—

ಏವಂ ಸ್ತುತೋ ಭಗವತಾ ದೇವದೇವೇನ ವಿಘ್ನಜಿತ್ ।
ಇತ್ಥಂ ಚ ಬಹುಧಾತ್ಮಾನಂ ಸ ಚಕಾರ ವಿನಾಯಕಃ ॥ ೧೨೧ ॥
ಏತಾನಿ ತಸ್ಯ ನಾಮಾನಿ ಢುಂಢಿರಾಜಸ್ಯ ಕುಂಭಜ ।
ಜಪಿತ್ವಾ ಯಾನಿ ಮನುಜೋ ಲಪ್ಸ್ಯತೇ ನಿಜವಾಂಛಿತಂ ॥ ೧೨೨ ॥
ಅನ್ಯೇಽಪಿ ತತ್ರ ವೈ ಭೇದಾಸ್ತಸ್ಯ ಢುಂಢೇರ್ಗಣೇಶಿತುಃ ।
ಭಕ್ತೈಃ ಸಮರ್ಚಿತಾ ಭಕ್ತ್ಯಾ ಹ್ಯಸಂಖ್ಯಾತಾಃ ಸಹಸ್ರಶಃ ॥ ೧೨೩ ॥
ಭಗೀರಥಗಣಾಧ್ಯಕ್ಷೋ ಹರಿಶ್ಚಂದ್ರವಿನಾಯಕಃ ।
ಕಪರ್ದಾಖ್ಯೋ ಗಣಪತಿಸ್ತಥಾ ಬಿಂದುವಿನಾಯಕಃ ॥ ೧೨೪ ॥

---

೧೧೯–೧೨೦. ಇಂತೆಂದು ನಿರೂಪಿಸಿ ದೇವತಾಸಾರ್ವಭೌಮನಾದ ಮಹೇಶ್ವರನು ಅತ್ಯಂತ ಸಂಭ್ರಮದಿಂದ ಕೂಡಿದ ಮನಸ್ಸುಳ್ಳವನಾಗಿ, ಬ್ರಹ್ಮಾದಿ ದೇವತೆಗಳಿಂದ ಪಟ್ಟಾಭಿಷೇಕವನ್ನು ಮಾಡಿಸಿಕೊಂಡು ಅವರಿಗೆ ಬೇಡಿದ ಅಭೀಷ್ಟಗಳನ್ನೆಲ್ಲ ಕರುಣಿಸಿ, ಉಚಿತಮರ್ಯಾದೆಗಳನ್ನು ಮಾಡುವುದರಲ್ಲಿ ಚತುರನಾದುದರಿಂದ ಅಲ್ಲಿ ನೆರೆದಿದ್ದವರೆಲ್ಲರಿಗೂ ಯಥಾಯೋಗ್ಯವಾದ ಉಡುಗೊರೆಗಳನ್ನಿತ್ತು ಪ್ರಸನ್ನೀಕರಿಸಿಕೊಂಡು ವಿಶ್ವಕರ್ಮನಿಂದ ರಚಿತವಾಗಿದ್ದ ಅರಮನೆಯನ್ನು ಪ್ರವೇಶಮಾಡಿದನು.

೧೨೧. ಸ್ಕಂದನು ಹೇಳುತ್ತಾನೆ:—ಇಂತು ದೇವದೇವನೂ ಭಗವಂತನೂ ಆದ ಮಹೇಶ್ವರನಿಂದ ಸ್ತುತನಾದ ಗಣಪತಿಯು ಆತ್ಮನನ್ನು ಬಹುರೂಪಗಳನ್ನಾಗಿಮಾಡಿಕೊಂಡು ಕಾಶಿಯಲ್ಲಿ ನೆಲಸಿದನು.

೧೨೨. ಎಲೈ ಅಗಸ್ತ್ಯನೆ! ಇವುಗಳೇ ಢುಂಢಿರಾಜನ ನಾಮಗಳಾಗಿರುವುವು. ಇವುಗಳನ್ನು ಜಪಿಸಿದ ಮನುಷ್ಯನು ಮನಸ್ಸಿನ ವಾಂಛಿತಗಳೆಲ್ಲವನ್ನೂ ಅನಾಯಾಸವಾಗಿ ಪಡೆಯುವನು.

೧೨೩. ಇವುಗಳಲ್ಲದೆ ಅಸಂಖ್ಯಾಕಗಳಾದ ಅನೇಕ ರೂಪಭೇದಗಳೂ ಆ ಢುಂಢಿವಿನಾಯಕನಿಗಿರುವುವು. ಅವುಗಳೆಲ್ಲವೂ ಭಕ್ತೋತ್ತಮರಿಂದ ಭಕ್ತಿಯುಕ್ತವಾದ ಪೂಜೆಯನ್ನು ಕೈಗೊಂಡಿರುವುವು.

೧೨೪. ಭಗೀರಥಗಣೇಶ್ವರನು; ಹರಿಶ್ಚಂದ್ರವಿನಾಯಕನು; ಕಪರ್ದನಾಮಕಗಣಪತಿಯೂ ಮತ್ತು ಬಿಂದುವಿನಾಯಕನು.

ಇತ್ಯಾದ್ಯಾಸ್ತತ್ರ ವಿಘ್ನೇಶಾಃ ಪ್ರತಿಭಕ್ತಪ್ರತಿಷ್ಠಿತಾಃ ।
ತೇಷಾಮಪ್ಯರ್ಚನಾತ್ಪುಂಸಾಂ ಜಾಯಂತೇ ಸರ್ವಸಂಪದಃ ॥ ೧೨೫ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ನರಃ ಶ್ರದ್ಧಾ ಸಮನ್ವಿತಃ ।
ಸರ್ವವಿಘ್ನಾನ್ಸಮುತ್ಸೃಜ್ಯ ಲಭತೇ ವಾಂಛಿತಂ ಪದಂ ॥ ೧೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಢುಂಢಿವಿನಾಯಕಪ್ರಾದುರ್ಭಾವೋ"
ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೧೨೫. ಇವರೇ ಮೊದಲಾದ ಅನೇಕ ವಿಘ್ನೇಶ್ವರರು ಆಯಾ ಭಕ್ತರಿಂದ ಪ್ರತಿಷ್ಠಿತರಾಗಿರುವರು. ಅವುಗಳ ಪೂಜೆಗಳಿಂದಲೂ ಮನುಷ್ಯರಿಗೆ ಸಕಲ ಸಂಪತ್ತುಗಳೂ ಲಭಿಸುವುವು.

೧೨೬. ಪುಣ್ಯಪ್ರದವಾದ ಈ ಅಧ್ಯಾಯವನ್ನು ಶ್ರದ್ಧಾನ್ವಿತನಾಗಿ ಕೇಳಿದ ಮನುಷ್ಯನು ಸಕಲ ವಿಘ್ನಗಳನ್ನೂ ಸುಲಭವಾಗಿ ಕಡಿಹಾದು ತನಗೆ ಅಪೇಕ್ಷಿತವಾದ ಪದವಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಡುಂಢಿವಿನಾಯಕ ಪ್ರಾದುರ್ಭಾವ ವರ್ಣನ"ವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಪಂಚಾಶತ್ತಮೋಽಧ್ಯಾಯಃ

### ದಿವೋದಾಸ ನಿರ್ವಾಣಪ್ರಾಪ್ತಿವರ್ಣನಂ

ಅಗಸ್ತ್ಯ ಉವಾಚ :—

ಕಿಂ ಚಕಾರ ಹರಃ ಸ್ಕಂದ ಮಂದರಾದ್ರಿಗತಸ್ತದಾ ।
ವಿಲಂಬಮಾಲಂಬಯತಿ ತಸ್ಮಿನ್ನಪಿ ಗಜಾನನೇ ॥ ೧ ॥

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಕಥಾಂ ಪುಣ್ಯಾಂ ಕಥ್ಯಮಾನಾಂ ಮಯಾಧುನಾ ।
ವಾರಾಣಸ್ಯೇಕವಿಷಯಾಮಶೇಷಾಘೌಘನಾಶಿನೀಂ ॥ ೨ ॥
ಕರೀಂದ್ರವದನೇ ತತ್ರ ಕ್ಷೇತ್ರವರ್ಯೇಽವಿಮುಕ್ತಕೇ ।
ವಿಲಂಬಭಾಜಿ ತ್ರ್ಯಕ್ಷೇಣ ಪ್ರೇಕ್ಷಿ ಕ್ಷಿಪ್ರಮಧೋಕ್ಷಜಃ ॥ ೩ ॥
ಪ್ರೋಕ್ತೋಽಥ ಬಹುಶಶ್ಚೇತಿ ಬಹುಮಾನಪುರಸ್ಸರಂ ।
ತಥಾ ತ್ವಮಪಿ ಮಾಕಾರ್ಷೀರ್ಯಥಾ ಪ್ರಾಕ್ಪ್ರಸ್ಥಿತೈಃ ಕೃತಂ ॥ ೪ ॥

---

### ಕನ್ನಡದ ಅನುವಾದ

#### ದೀವೋದಾಸನ ನಿರ್ವಾಣಪ್ರಾಪ್ತಿಯ ವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಅಯ್ಯಾ ಸ್ಕಂದನೆ! ಪ್ರಾಸಂಗಿಕವಾದ ಈ ಮಾತು ಹಾಗಿರಲಿ. ಇಂತು ಆ ಗಣಪತಿಯೂ ಕಾಶಿಗೆ ಹೋಗಿ ಕಾಲವಿಳಂಬವನ್ನು ಮಾಡುತ್ತಿರಲು ಮಂದರಪರ್ವತದಲ್ಲಿ ನೆಲಸಿದ್ದ ಮಹೇಶ್ವರನು ಬಳಿಕ ಏನುಮಾಡಿದನು ?

೨. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮುನಿಯೆ! ನಾನು ಮುಂದೆ ನಿರೂಪಿಸುವ ಕಥೆಯನ್ನು ಕೇಳು. ಈ ಚರಿತ್ರೆಯು ಪರಮ ಪುಣ್ಯಪ್ರದವೂ, ವಾರಾಣಸೀಕ್ಷೇತ್ರವೊಂದನ್ನೇ ಕುರಿತುದೂ, ಕೇಳುವವರ ಪಾಪಸಮೂಹವನ್ನೆಲ್ಲ ನಿಶ್ಶೇಷವಾಗಿ ನಾಶಗೊಳಿಸುವುದೂ ಆಗಿರುವುದು.

೩. ಅಂತು ಗಜಮುಖನು ಅವಿಮುಕ್ತಕ್ಷೇತ್ರವನ್ನು ಸೇರಿ ಹಿಂದಿರುಗದೆ ಕಾಲವಿಳಂಬವನ್ನು ಮಾಡುತ್ತಿರಲು, ತ್ರಿನೇತ್ರನು ಮಹಾವಿಷ್ಣುವನ್ನು ಶೀಘ್ರವಾಗಿ ಅಲ್ಲಿಗೆ ಕಳುಹಿಸಿಕೊಟ್ಟನು.

೪. "ಹಿಂದೆ ನಾನು ಕಳುಹಿಸಿಕೊಟ್ಟವರೊಬ್ಬರೂ ಹಿಂದಿರುಗಲಿಲ್ಲ. ಅವರು ಮಾಡಿದಂತೆ ನೀನು ಸರ್ವಥಾ ಮಾಡಬಾರದು" ಎಂಬುದಾಗಿ ಬಹುವಿಧಗಳಿಂದ ಆತನಿಗೆ ಎಚ್ಚರಿಕೆ ಹೇಳಿ ಬಹುಮಾನಗಳನ್ನಿತ್ತು ಕಳುಹಿಸಿದನು.

ಶ್ರೀ ವಿಷ್ಣುರುವಾಚ :—

ಉದ್ಯಮಃ ಪ್ರಾಣಿಭಿಃ ಕಾರ್ಯೋ ಯಥಾಬುದ್ಧಿ ಬಲಾಬಲಂ ।
ಪರಂ ಫಲಂತಿ ಕರ್ಮಾಣಿ ತ್ವದಧೀನಾನಿ ಶಂಕರ ॥ ೫ ॥
ಅಚೇತನಾನಿ ಕರ್ಮಾಣಿ ಸ್ವತಂತ್ರಾಃ ಪ್ರಾಣಿನೋಽಪಿ ನ ।
ತ್ವಂ ಚ ತತ್ಕರ್ಮಣಾಂ ಸಾಕ್ಷೀ ತ್ವಂ ಚ ಪ್ರಾಣಿಪ್ರವರ್ತಕಃ ॥ ೬ ॥
ಕಿಂ ತು ತ್ವತ್ಪಾದಭಕ್ತಾನಾಂ ತಾದೃಶೀ ಜಾಯತೇ ಮತಿಃ ।
ಯಯಾ ತ್ವಮೇವ ಕಥಯೇಃ ಸಾಧ್ವನೇನ ತ್ವನುಷ್ಠಿತಂ ॥ ೭ ॥
ಯತ್ಕಿಂಚಿದಿಹ ವೈ ಕರ್ಮ ಸ್ತೋಕಂ ವಾಽಸ್ತೋಕಮೇವ ವಾ ।
ತತ್ಸಿದ್ಧ್ಯತ್ಯೇವ ಗಿರಿಶ ತ್ವತ್ಪಾದಸ್ಮೃತ್ಯನುಷ್ಠಿತಂ ॥ ೮ ॥
ಸುಸಿದ್ಧಮಪಿ ವೈ ಕಾರ್ಯಂ ಸುಬುಧ್ಯಾಪಿ ಸ್ವನುಷ್ಠಿತಂ ।
ಅತಸ್ತ್ವದಸ್ಮೃತಿಕೃತಂ ವಿನಶ್ಯತ್ಯೇವ ತತ್ಕ್ಷಣಾತ್ ॥ ೯ ॥
ಶಂಭುನಾ ಪ್ರೇಷಿತೇನಾದ್ಯ ಸೂದ್ಯಮಃ ಕ್ರಿಯತೇ ಮಯಾ ।
ತ್ವದ್ಭಕ್ತಿಸಂಪತ್ತಿಮತಾಂ ಸಂಪನ್ನಪ್ರಾಯ ಏವ ಸಃ ॥ ೧೦ ॥

---

೫. ವಿಷ್ಣುವು ಹೇಳುತ್ತಾನೆ:—“ಓ ಮಹೇಶ್ವರನೆ! ತನ್ನ ಬುದ್ಧಿಗುಣಕ್ಕನುಸಾರವಾಗಿ ಬಲಾಬಲಗಳನ್ನು ವಿಚಾರಿಸಿ ಪ್ರತಿಯೊಬ್ಬ ಮನುಷ್ಯನೂ ಪ್ರಯತ್ನವನ್ನು ಮಾತ್ರ ಮಾಡಬೇಕು. ಆದರೆ ಆ ಕರ್ಮಗಳೆಲ್ಲವೂ ನಿನ್ನ ಅಧೀನದಲ್ಲಿಯೇ ಅದೃಷ್ಟಾನುಸಾರವಾಗಿ ಫಲಗಳನ್ನು ಕೊಡುವುವು.

೬. ಕರ್ಮಗಳು ಅಚೇತನಗಳು. ಪ್ರಾಣಿಗಳು ಎಂದಿಗೂ ಸ್ವತಂತ್ರಗಳಲ್ಲ. ನೀನೇ ಆ ಕರ್ಮಗಳಿಗೆ ಸಾಕ್ಷಿಭೂತನೂ ಆಗಿರುವೆ. ಅಲ್ಲದೆ ನೀನೇ ಪ್ರಾಣಿಗಳನ್ನು ಕಾರ್ಯಗಳಲ್ಲಿ ಪ್ರೇರೇಪಿಸುತ್ತಿರುವೆ.

೭. ಆದರೆ ನಿನ್ನ ಪಾದಕಮಲಗಳಲ್ಲಿ ಭಕ್ತಿಯುಳ್ಳವರಿಗಾದರೊ, ನೀನೇ ಅವರನ್ನು ಕುರಿತು “ಇವನು ಸಾಧುಕರ್ಮವನ್ನಾಚರಿಸಿದವನು” ಎಂಬ ಶ್ಲಾಘನೆಯನ್ನು ಮಾಡುವಂತಹ ಸದ್ಬುದ್ಧಿಯೇ ಉಂಟಾಗುವುದು.

೮. ಗಿರೀಶ್ವರನೆ! ಸ್ವಲ್ಪವಾಗಲಿ, ಮಹತ್ವದ್ದಾಗಲಿ, ಯಾವ ಕಾರ್ಯವನ್ನೇ ಆದರೂ, ನಿನ್ನ ಪಾದಕಮಲಗಳ ಸ್ಮರಣೆ ಮಾಡಿ ಆಚರಿಸಿದುದಾದರೆ ಅದು ಖಂಡಿತವಾಗಿಯೂ ಫಲಕಾರಿಯೇ ಆಗುವುದು.

೯. ಅಲ್ಲದೆ ಯಾವ ಕಾರ್ಯವೇ ಆಗಲಿ ಕರತಲಗತವಾಗಿದ್ದರೂ, ಕೂಲಂಕಷ ಬುದ್ಧಿಯಿಂದ ಚೆನ್ನಾಗಿ ಅನುಷ್ಠಿಸಲ್ಪಟ್ಟಿದ್ದರೂ, ನಿನ್ನ ಪಾದಸ್ಮರಣೆಯಿಲ್ಲದೆ ಮಾಡಿದುದಾದರೆ ಅದು ಆ ಕ್ಷಣದಲ್ಲಿಯೇ ನಾಶವನ್ನು ಹೊಂದುವುದು.

೧೦. ಪರಮೇಶ್ವರನಾದ ನಿನ್ನಿಂದ ಪ್ರೇರಿತನಾಗಿ ನಾನು ಈ ಕಾರ್ಯಕ್ಕೆ ಪ್ರಯತ್ನವನ್ನು ಮಾಡುತ್ತಿರುವೆನು. ನಿನ್ನ ಭಕ್ತಿಯೆಂಬ ಐಶ್ವರ್ಯವನ್ನು ಹೊಂದಿದ ನನಗೆ ಕಾರ್ಯವು ಸಿದ್ಧಿಸಿದಂತೆಯೇ ಸರಿ.

ಅತೀವ ಯದಸಾಧ್ಯಂ ಸ್ಯಾತ್ಸ್ವಬುದ್ಧಿಬಲಪೌರುಷೈಃ ।
ತತ್ಕಾರ್ಯಂ ಹಿ ಸುಸಿದ್ಧಂ ಸ್ಯಾತ್ತ್ವದನುಧ್ಯಾನತಃ ಶಿವ ॥ ೧೧ ॥
ಯಾಂತಿ ಪ್ರದಕ್ಷಿಣೀ ಕೃತ್ಯ ಯೇ ಭವಂತಂ ಭವಂ ವಿಭೋ ।
ಭವಂತಿ ತೇಷಾಂ ಕಾರ್ಯಾಣಿ ಪುರೋಭೂತಾನಿ ತೇ ಭಯಾತ್ ॥ ೧೨ ॥
ಜಾತಂ ವಿದ್ಧಿ ಮಹಾದೇವ ಕಾರ್ಯಮೇತತ್ಸುನಿಶ್ಚಿತಂ ।
ಕಾಶೀ ಪ್ರಾವೇಶಿಕಶ್ಚಿಂತ್ಯಃ ಶುಭಲಗ್ನೋದಯಃ ಪರಂ ॥ ೧೩ ॥
ಅಥವಾ ಕಾಶಿಸಂಪ್ರಾಪ್ತೌ ನ ಚಿಂತ್ಯಂ ಹಿ ಶುಭಾಶುಭಂ ।
ತದೈವ ಹಿ ಶುಭಃ ಕಾಲೋ ಯದೈವಾಪ್ಯೇತ ಕಾಶಿಕಾ ॥ ೧೪ ॥
ಶಂಭುಂ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಚ ಪುನಃ ಪುನಃ ।
ಪ್ರತಸ್ಥೇಽಥ ಸಲಕ್ಷ್ಮೀಕೋ ಮಂದರಾದ್ಗರುಡಧ್ವಜಃ ॥ ೧೫ ॥
ದೃಶೋರತಿಥಿನಾಂ ನೀತ್ವಾ ವಿಷ್ಣುರ್ವಾರಾಣಸೀಂ ತತಃ ।
ಪುಂಡರೀಕಾಕ್ಷ ಇತ್ಯಾಖ್ಯಾಂ ಸಫಲೀಕೃತವಾನ್ಮುದಾ ॥ ೧೬ ॥

---

೧೧. ಪರಮೇಶ್ವರ! ಮನುಷ್ಯನ ಅಲ್ಪಬುದ್ಧಿ, ಬಲ, ಪೌರುಷಗಳಿಗೆ ಅತ್ಯಂತ ಅಸಾಧ್ಯವಾದ ಕಾರ್ಯವಾದರೂ, ನಿನ್ನನ್ನು ಎಡಬಿಡದೆ ಧ್ಯಾನಿಸುವವರಿಗೆ ಆ ಕಾರ್ಯವೂ ಸುಲಭವಾಗಿಯೇ ಸಿದ್ಧಿಸುವುದು.

೧೨. ಸ್ವಾಮಿಯೆ! ಕಾರ್ಯಾರಂಭದಲ್ಲಿ ಯಾರು ನಿನಗೆ ಪ್ರದಕ್ಷಿಣೆಮಾಡಿ ಹೊರಡುವರೊ, ಅವರ ಕಾರ್ಯಗಳೆಲ್ಲವೂ ನಿನ್ನ ಭಯದಿಂದ ಪ್ರಯತ್ನಕ್ಕೆ ಮುಂಚೆಯೇ ಪರಿಣಾಮೋನ್ಮುಖಗಳಾಗಿರುವುವು.

೧೩. ಮಹಾದೇವ! ನಿನ್ನ ಈ ಕಾರ್ಯವು ಕೈಗೂಡಿತೆಂದೇ ತಿಳಿದುಕೊ. ನನ್ನಮಾತುಗಳು ನಿಶ್ಚಯಾತ್ಮಕಗಳು. ಇನ್ನು ಕಾಶೀನಗರದ ಪ್ರವೇಶವನ್ನು ಮಾಡಲು ಸರ್ವೋತ್ತಮವಾದ ಮುಹೂರ್ತವನ್ನು ನಿಶ್ಚಯಿಸಬೇಕಾಗಿರುವುದು.

೧೪. ಅಲ್ಲದೆ ಹೀಗೂ ಉಂಟು. ಕಾಶೀಕ್ಷೇತ್ರವನ್ನು ಸೇರುವುದಕ್ಕೆ ಶುಭಾಶುಭ ಸಮಯಗಳನ್ನು ಚಿಂತಿಸಬೇಕಾದುದಿಲ್ಲ. ಯಾವಾಗ ಕಾಶೀಕ್ಷೇತ್ರವಾಸದ ಲಾಭವಾಗುವುದೊ, ಆಗಲೇ ಶುಭಕಾಲವೊದಗಿತೆಂದು ತಿಳಿಯಬೇಕು.''

೧೫. ಇಂತೆಂದು ಮಹೇಶ್ವರನಿಗೆ ಪ್ರದಕ್ಷಿಣೆಯನ್ನುಮಾಡಿ ಮತ್ತೆ ಮತ್ತೆ ನಮಸ್ಕರಿಸಿ ಆ ಮಹಾವಿಷ್ಣುವು ಲಕ್ಷ್ಮೀಸಮೇತನಾಗಿ ಗರುಡವಾಹನನಾಗಿ ಮಂದರಾಚಲವನ್ನುಬಿಟ್ಟು ಕಾಶಿಗೆ ಹೊರಡುವವನಾದನು.

೧೬. ಆ ತರುವಾಯ ವಾರಾಣಸಿಯನ್ನು ಸೇರಿ ಆ ಹರಿಯು ಆ ನಗರಿಯು ತನ್ನ ನೇತ್ರಗಳಿಗೆ ವಿಷಯವಾಗಲು ಸಂತೋಷದಿಂದಲೂ ವಿಸ್ಮಯದಿಂದಲೂ ಅರಳಿದ ಕಣ್ಣುಗಳಿಂದ ನೋಡುತ್ತ ಪುಂಡರೀಕಾಕ್ಷನೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿಕೊಂಡವನಂತೆ ತೋರುತ್ತಿದ್ದನು.

ಗಂಗಾವರಣಯೋರ್ವಿಷ್ಣುಃ ಸಂಭೇದೇ ಸ್ವಚ್ಛಮಾನಸಃ ।
ಪ್ರಕ್ಷಾಲ್ಯ ಪಾಣಿಚರಣಂ ಸಚ್ಚೈಲಃ ಸ್ನಾತವಾನಥ ॥ ೧೭ ॥
ತದಾ ಪ್ರಭೃತಿ ತತ್ತೀರ್ಥಂ ಪಾದೋದಕಮಿತೀರಿತಂ ।
ಪಾದೌ ಯದಾದೌ ಶುಭದೌ ಕ್ಷಾಲಿತೌ ಪೀತವಾಸಸಾ ॥ ೧೮ ॥
ತತ್ರ ಪಾದೋದಕೇ ತೀರ್ಥೇ ಯೇ ಸ್ನಾಸ್ಯಂತೀಹ ಮಾನವಾಃ ।
ತೇಷಾಂ ವಿನಶ್ಯತಿ ಕ್ಷಿಪ್ರಂ ಪಾಪಂ ಸಪ್ತಭವಾರ್ಜಿತಂ ॥ ೧೯ ॥
ತತ್ರ ಶ್ರಾದ್ಧಂ ನರಃ ಕೃತ್ವಾ ದತ್ವಾ ಚೈವ ತಿಲೋದಕಂ ।
ಸಪ್ತಸಪ್ತ ತಥಾ ಸಪ್ತ ಸ್ವವಂಶ್ಯಾಂಸ್ತಾರಯಿಷ್ಯತಿ ॥ ೨೦ ॥
ಗಯಾಯಾಂ ಯಾದೃಶೀ ತೃಪ್ತಿರ್ಲಭ್ಯತೇ ಪ್ರಪಿತಾಮಹೈಃ ।
ತೀರ್ಥೇ ಪಾದೋದಕೇ ಕಾಶ್ಯಾಂ ತಾದೃಶೀ ಲಭ್ಯತೇ ಧ್ರುವಂ ॥ ೨೧ ॥
ಕೃತಪಾದೋದಕಸ್ನಾನಂ ಪೀತಪಾದೋದಕೋದಕಂ ।
ದತ್ತಪಾದೋದಪಾನೀಯಂ ನರಂ ನ ನಿರಯಃ ಸ್ಪೃಶೇತ್ ॥ ೨೨ ॥

---

೧೭. ವಿಷ್ಣುವು ಗಂಗಾ ವರಣಾನದಿಗಳ ಸಂಗಮದಲ್ಲಿ ತನ್ನ ವಾಹನದಿಂದ ಇಳಿದು ನಿರ್ಮಲಾಂತಃಕರಣನಾಗಿ ಕೈಕಾಲುಗಳನ್ನು ತೊಳೆದುಕೊಂಡು ಬಳಿಕ ಉಟ್ಟ ಬಟ್ಟೆಗಳಲ್ಲಿಯೇ ಸ್ನಾನವನ್ನುಮಾಡಿದನು.

೧೮. ಆ ದಿನದಿಂದ ಆ ತೀರ್ಥವು ಪಾದೋದಕವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಅಲ್ಲಿಯೇ ಪೀತಾಂಬರಧಾರಿಯಾದ ಮಹಾವಿಷ್ಣುವು ಲೋಕಕಲ್ಯಾಣಕಾರಕಗಳಾದ ತನ್ನ ಪಾದಗಳನ್ನು ಮೊದಲು ತೊಳೆದುಕೊಂಡನು.

೧೯. ಪಾದೋದಕವೆಂಬ ಈ ತೀರ್ಥದಲ್ಲಿ ಯಾವ ಮಾನವರು ಸ್ನಾನವನ್ನು ಮಾಡುವರೊ, ಅವರು ಏಳು ಜನ್ಮಗಳಲ್ಲಿ ಸಂಪಾದಿಸಿದ ಪಾಪವೂ ಕೂಡ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುದು.

೨೦. ಅಲ್ಲಿ ಮನುಷ್ಯರು ಶ್ರಾದ್ಧಗಳನ್ನುಮಾಡಿ ಪಿತೃದೇವತೆಗಳಿಗೆ ಪಿಂಡೋದಕಗಳನ್ನು ಸಮರ್ಪಿಸಲು ಪಿತೃಸಪ್ತಕ, ಮಾತೃಸಪ್ತಕ, ಕಾರಣಸಪ್ತಕರೆಂಬ ಇಪ್ಪತ್ತೊಂದು ಕುಲದವರನ್ನೂ ಉದ್ಧರಿಸುವರು.

೨೧. ಗಯಾಕ್ಷೇತ್ರದಲ್ಲಿ ಮಾಡಿದ ಶ್ರಾದ್ಧದಿಂದ ಪಿತೃಪಿತಾಮಹಾದಿಗಳಿಗೆ ಯಾವ ತೃಪ್ತಿಯುಂಟಾಗುವುದೊ, ಕಾಶಿಯಲ್ಲಿರುವ ಪಾದೋದಕತೀರ್ಥದಲ್ಲಿ ಮಾಡಿದ ಪಿತೃಕಾರ್ಯಗಳಿಂದಲೂ ಅಂತಹ ಸಂತೋಷವೇ ಉಂಟಾಗುವುದೆಂಬುದು ದಿಟವು.

೨೨. ಪಾದೋದಕದಲ್ಲಿ ಸ್ನಾನಮಾಡಿದವನನ್ನೂ, ಅದರ ನೀರನ್ನು ಪಾನಮಾಡಿದವನನ್ನೂ, ಅದರಿಂದ ಪಾನೀಯಗಳನ್ನುಮಾಡಿ ದಾನಮಾಡಿದವನನ್ನೂ ದುರ್ಗತಿಯು ಎಂದಿಗೂ ಮುಟ್ಟಲಾರದು.

ವಿಷ್ಣುಪಾದೋದಕೇ ತೀರ್ಥೇ ಪ್ರಾಶ್ಯ ಪಾದೋದಕಂ ಸಕೃತ್ ।
ಜಾತು ವಿಜ್ಜನನೀಸ್ತನ್ಯಂ ನ ಪಿಬೇದಿತಿ ನಿಶ್ಚಿತಂ ॥ ೨೩ ॥
ಸಚಕ್ರಶಾಲಗ್ರಾಮಸ್ಯ ಶಂಖೇನ ಸ್ನಾಪಿತಸ್ಯ ಚ ।
ಅದ್ಭಿಃ ಪಾದೋದಕಸ್ಯಾಂಬು ಪಿಬನ್ನಮೃತತಾಂ ವ್ರಜೇತ್ ॥ ೨೪ ॥
ವಿಷ್ಣುಪಾದೋದಕೇ ತೀರ್ಥೇ ವಿಷ್ಣುಪಾದೋದಕಂ ಪಿಬೇತ್ ।
ಯದಿ ತತ್ಸುಧಯಾ ಕಿಂ ನು ಬಹುಕಾಲೀನಯಾ ತಯಾ ॥ ೨೫ ॥
ಕಾಶ್ಯಾಂ ಪಾದೋದಕೇ ತೀರ್ಥೇ ಯೈಃ ಕೃತಾ ನೋದಕಕ್ರಿಯಾಃ ।
ಜನ್ಮೈವ ವಿಫಲಂ ತೇಷಾಂ ಜಲಬುದ್ಬುದಸಶ್ರಿಯಾಂ ॥ ೨೬ ॥
ಕೃತನಿತ್ಯಕ್ರಿಯೋ ವಿಷ್ಣುಃ ಸಲಕ್ಷ್ಮೀಕಃ ಸಕಾಶ್ಯಪಿ ।
ಉಪಸಂಹೃತ್ಯ ತಾಂ ಮೂರ್ತಿಂ ತ್ರೈಲೋಕ್ಯವ್ಯಾಪಿನೀಂ ತಥಾ ॥ ೨೭ ॥
ವಿಧಾಯ ದಾರ್ಷದೀಂ ಮೂರ್ತಿಂ ಸ್ವಹಸ್ತೇನಾದಿಕೇಶವಃ ।
ಸ್ವಯಂ ಸಂಪೂಜಯಾಮಾಸ ಸರ್ವಸಿದ್ಧಿಸಮೃದ್ಧಿದಾಂ ॥ ೨೮ ॥

---

೨೩. ವಿಷ್ಣುಪಾದೋದಕ ತೀರ್ಥದಲ್ಲಿ ಒಮ್ಮೆಯಾದರೂ ಜಲವನ್ನು ಪಾನ ಮಾಡಲು ಆ ಮನುಷ್ಯನು ಮತ್ತೆ ಎಂದಿಗೂ ತಾಯಿಯ ಸ್ತನ್ಯವನ್ನು ಪಾನ ಮಾಡುವುದಿಲ್ಲವೆಂಬುದು ನಿಶ್ಚಯ.

೧೪. ಈ ಪಾದೋದಕತೀರ್ಥದ ನೀರನ್ನು ತೆಗೆದುಕೊಂಡು ಶಂಖದಿಂದ ಚಕ್ರಾಂಕಿತವಾದ ಸಾಲಗ್ರಾಮಕ್ಕೆ ಅಭಿಷೇಕಮಾಡಿ ಆ ತೀರ್ಥವನ್ನು ಸೇವನೆ ಮಾಡಲು ಮಾನವನು ಅಮರತ್ವವನ್ನು ಹೊಂದುವನು.

೨೫. ವಿಷ್ಣುಪಾದೋದಕವೆಂಬ ತೀರ್ಥದಲ್ಲಿ ಸಾಕ್ಷಾತ್ತಾಗಿ ವಿಷ್ಣುವಿನ ಪಾದಗಳನ್ನು ತೊಳೆದ ನೀರನ್ನೇ ಪಾನಮಾಡಬೇಕು. ಆ ಜಲವು ಲಭಿಸಿದವನಿಗೆ ಬಹಳಕಾಲದ ಹಿಂದೆ ಸಮುದ್ರಮಥನದಿಂದುಂಟಾದ ಅಮೃತದಿಂದ ತಾನೆ ಆಗಬೇಕಾದುದೇನು ?

೨೬. ಕಾಶೀಕ್ಷೇತ್ರದ ಪಾದೋದಕತೀರ್ಥದಲ್ಲಿ ಯಾರು ಜಲತರ್ಪಣಾದಿಗಳನ್ನು ಮಾಡುವುದಿಲ್ಲವೊ, ಅವರ ಜನ್ಮವೇ ನಿರರ್ಥಕವೆಂದು ಹೇಳಬೇಕು. ಅವರ ಐಶ್ವರ್ಯವೂ ಸಹ ನೀರಿನ ಮೇಲಿನ ಗುಳ್ಳೆಯಂತೆ ಕ್ಷಣಭಂಗುರವಾಗಿರುವುದು.

೨೭. ಇಂತು ವಿಷ್ಣುವು ಲಕ್ಷ್ಮೀಸಮೇತನಾಗಿ ಅಲ್ಲಿ ಗರುಡನೊಡನೆ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಮೂರುಲೋಕಗಳನ್ನೂ ವ್ಯಾಪಿಸುವಂತಹ ತನ್ನ ವಿರಾಡ್ರೂಪವನ್ನು ಉಪಸಂಹಾರಮಾಡಿಕೊಂಡನು.

೨೮. ಆದಿಕೇಶವನು ಒಂದು ರೂಪದಿಂದ ಕಲ್ಲಿನ ಮೂರ್ತಿಯಾಗಿ ಅಲ್ಲಿಯೇ ನೆಲಸಿ ತಾನೇ ತನ್ನ ಕೈಗಳಿಂದ ಆ ಸಕಲ ಸಿದ್ಧಿಗಳನ್ನು ಸಮೃದ್ಧಿಗೊಳಿಸುವ ಆ ಮೂರ್ತಿಯನ್ನು ಚೆನ್ನಾಗಿ ಅರ್ಚನೆಮಾಡಿದನು.

ಆದಿಕೇಶವನಾಮ್ನೀಂ ತಾಂ ಶ್ರೀಮೂರ್ತಿಂ ಪಾರಮೇಶ್ವರೀಂ ।
ಸಂಪೂಜ್ಯ ಮರ್ತ್ಯೋ ವೈಕುಂಠಂ ಮನ್ಯತೇ ಸ್ವಗೃಹಾಂಗಣಂ ॥ ೨೯ ॥
ಶ್ವೇತದ್ವೀಪ ಇತಿ ಖ್ಯಾತಂ ತತ್ಸ್ಥಾನಂ ಕಾಶಿಸೀಮನಿ ।
ಶ್ವೇತದ್ವೀಪೇ ವಸಂತ್ಯೇವ ನರಾಸ್ತನ್ಮೂರ್ತಿಸೇವಕಾಃ ॥ ೩೦ ॥
ಕ್ಷೀರಾಬ್ಧಿಸಂಜ್ಞಂ ತತ್ರಾನ್ಯತ್ತೀರ್ಥಂ ಕೇಶವತೋಽಗ್ರತಃ ।
ಕೃತೋದಕಕ್ರಿಯಸ್ತತ್ರ ವಸೇತ್ ಕ್ಷೀರಾಬ್ಧಿರೋಧಸಿ ॥ ೩೧ ॥
ತತ್ರ ಶ್ರಾದ್ಧಂ ನರಃ ಕೃತ್ವಾ ಗಾಂ ದತ್ವಾ ಸ ಪಯಸ್ವಿನೀಂ ।
ಯಥೋಕ್ತಸರ್ವಾಭರಣಾಂ ಕ್ಷೀರೋದೇ ವಾಸಯೇತ್ಪಿತೄನ್ ॥ ೩೨ ॥
ಏಕೋತ್ತರಶತಂ ವಶ್ಯಾನ್ನಯೇತ್ಪಾಯಸಕರ್ದಮಂ ।
ಕ್ಷೀರೋದರೋಧಃ ಪುಣ್ಯಾತ್ಮಾ ಭಕ್ತ್ಯಾ ತತ್ರೈಕಧೇನುದಃ ॥ ೩೩ ॥
ವಹ್ನೀಶ್ಚ ನೈಚಿಕೀರ್ದತ್ವಾ ಶ್ರದ್ಧಯಾತ್ರ ಸದಕ್ಷಿಣಾಃ ।
ಶಯ್ಯೋತ್ತರಾಂಶ್ಚ ಪ್ರತ್ಯೇಕಂ ಪಿತೄಂಸ್ತತ್ರ ಸುವಾಸಯೇತ್ ॥ ೩೪ ॥

---

೨೯. ಪರಮೇಶ್ವರನ ಸರ್ವಲಕ್ಷಣಲಕ್ಷಿತವಾದ ಆದಿಕೇಶವನೆಂಬ ಆ ಮೂರ್ತಿಯನ್ನು ಪೂಜೆಮಾಡಿದ ಮನುಷ್ಯನು ಸಕಲೈಶ್ವರ್ಯಭರಿತನಾಗಿ ವೈಕುಂಠವನ್ನೇ ತನ್ನ ಮನೆಯ ಅಂಗಳವನ್ನಾಗಿ ತಿಳಿಯುವನು.

೩೦. ಕಾಶೀಕ್ಷೇತ್ರದ ಎಲ್ಲೆಯಲ್ಲಿರತಕ್ಕ ಆ ಪ್ರದೇಶವು ಶ್ವೇತದ್ವೀಪವೆಂದು ಪ್ರಖ್ಯಾತಿಯನ್ನು ಪಡೆದಿರುವುದು. ಆ ಮೂರ್ತಿಯನ್ನು ಸೇವಿಸುವ ಮನುಷ್ಯರೆಲ್ಲರೂ ಶ್ವೇತದ್ವೀಪದಲ್ಲಿಯೇ ವಾಸಮಾಡುವರು.

೩೧. ಆ ಆದಿಕೇಶವನ ಇದಿರಿನಲ್ಲಿಯೇ ಕ್ಷೀರಾಬ್ಧಿತೀರ್ಥವೆಂಬ ಮತ್ತೊಂದು ತೀರ್ಥವಿರುವುದು. ಅದರಲ್ಲಿ ಸ್ನಾನ ಸಂಧ್ಯಾವಂದನಾದಿಗಳನ್ನು ಮಾಡಲು ಮಾನವನು ಕ್ಷೀರಸಮುದ್ರದ ದಡದಲ್ಲಿಯೇ ವಾಸಮಾಡುವನು.

೩೨. ಅಲ್ಲಿ ಶ್ರಾದ್ಧಗಳನ್ನುಮಾಡಿ ಹಾಲುಕರೆಯುತ್ತಿರುವ ಆಕಳನ್ನು ಶಾಸ್ತ್ರೋಕ್ತರೀತಿಯಿಂದಲಂಕರಿಸಿ ದಾನಮಾಡಿದ ಮನುಷ್ಯನು ತನ್ನ ಪಿತೃಗಳನ್ನು ಕ್ಷೀರಸಾಗರದಲ್ಲಿ ವಾಸಗೊಳಿಸುವನು.

೩೩. ಅಲ್ಲಿ ಒಂದು ಆಕಳನ್ನು ದಾನಮಾಡಿದ ಪುಣ್ಯಪುರುಷನು ತನ್ನ ಭಕ್ತಿಯ ಬಲದಿಂದ ವಂಶದ ನೂರೊಂದು ಪಿತೃಗಳನ್ನೂ ಕ್ಷೀರಸಾಗರದ ದಡದಲ್ಲಿರುವ ಪಾಯಸಕರ್ದಮಕ್ಕೆ ಕಳುಹಿಸಿಕೊಡುವನು.

೩೪. ಯಾವನು ಶ್ರದ್ಧಾನ್ವಿತನಾಗಿ ಅನೇಕ ಉತ್ತಮ ಗೋವುಗಳನ್ನು ದಕ್ಷಿಣೆಯೊಡನೆ ದಾನಮಾಡುವನೊ, ಅವನು ಪಿತೃಗಳಲ್ಲಿ ಒಬ್ಬೊಬ್ಬರನ್ನೂ ಸಕಲಭೋಗಗಳಿಂದ ಕೂಡಿರುವರನ್ನಾಗಿಮಾಡಿ ಕ್ಷೀರಸಮುದ್ರದಲ್ಲಿ ವಾಸಮಾಡಲು ಕಳುಹಿಸುವನು.

ಕ್ಷೀರೋದಾದ್ದಕ್ಷಿಣೇ ತತ್ರ ಶಂಖತೀರ್ಥಮನುತ್ತಮಂ ।
ತತ್ರಾಪಿ ಸಂತರ್ಪ್ಯ ಪಿತೄನ್ವಿಷ್ಣುಲೋಕೇ ಮಹೀಯತೇ ॥ ೩೫ ॥
ತದ್ಯಾಮ್ಯಾಂ ಚಕ್ರತೀರ್ಥಂ ಚ ಪಿತೄಣಾಮಪಿ ದುರ್ಲಭಂ ।
ತತ್ರಾಪಿ ವಿಹಿತಶ್ರಾದ್ಧೋ ಮುಚ್ಯತೇ ಪೈತೃಕಾದೃಣಾತ್ ॥ ೩೬ ॥
ತತ್ಸನ್ನಿಧೌ ಗದಾತೀರ್ಥಂ ವಿಷ್ವಗ್ವ್ಯಾಧಿನಿಬರ್ಹಣಂ ।
ತಾರಣಂ ಚ ಪಿತೄಣಾಂ ವೈ ತಾರಣಂ ಚೈನಸಾಂ ಕ್ಷಯೇ ॥ ೩೭ ॥
ಪದ್ಮತೀರ್ಥಂ ತದಗ್ರೇ ತು ತತ್ರ ಸ್ನಾತ್ವಾ ನರೋತ್ತಮಃ ।
ಪಿತೄನ್ಸಂತರ್ಪ್ಯ ವಿಧಿನಾ ಪದ್ಮಯಾ ನೈವ ಹೀಯತೇ ॥ ೩೮ ॥
ತತ್ರೈವ ಚ ಮಹಾಲಕ್ಷ್ಮ್ಯಾಸ್ತೀರ್ಥಂ ತ್ರೈಲೋಕ್ಯವಿಶ್ರುತಂ ।
ಸ್ವಯಂ ಯತ್ರ ಮಹಾಲಕ್ಷ್ಮೀಃ ಸ್ನಾತಾ ತ್ರೈಲೋಕ್ಯಹರ್ಷದಾ ॥ ೩೯ ॥
ತತ್ರ ತೀರ್ಥೇ ಕೃತಸ್ನಾನೋ ದತ್ವಾ ರತ್ನಾನಿ ಕಾಂಚನಂ ।
ಪಟ್ಟಾಂಬರಾಣಿ ವಿಪ್ರೇಭ್ಯೋ ನ ಲಕ್ಷ್ಮ್ಯಾ ಪರಿಹೀಯತೇ ॥ ೪೦ ॥

---

೩೫. ಕ್ಷೀರೋದತೀರ್ಥದ ದಕ್ಷಿಣದಿಕ್ಕಿನಲ್ಲಿ ಸರ್ವೋತ್ತಮವಾದ ಶಂಖ ತೀರ್ಥವು ನೆಲಸಿರುವುದು. ಅಲ್ಲಿಯೂ ಪಿತೃಗಳಿಗೆ ತರ್ಪಣಗಳನ್ನು ಕೊಡಲು ಮನುಷ್ಯನು ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೩೬. ಅದಕ್ಕೂ ದಕ್ಷಿಣದಲ್ಲಿ ಪಿತೃಗಳಿಗೂ ಅತ್ಯಂತದುರ್ಲಭವಾದ ಚಕ್ರ ತೀರ್ಥವಿರುವುದು. ಅಲ್ಲಿಯೂ ಶ್ರಾದ್ಧಕರ್ಮವನ್ನುಮಾಡಿದವನು ಪಿತೃಗಳ ಋಣದಿಂದ ಮುಕ್ತನಾಗುವನು.

೩೭. ಅದಕ್ಕೆ ಇದಿರಿನಲ್ಲಿಯೇ ಗದಾತೀರ್ಥವು ನೆಲಸಿ ಮಾನಸಿಕವಾದ ಸಕಲ ವ್ಯಥೆಗಳನ್ನೂ ನಾಶಮಾಡುವುದಾಗಿರುವುದು. ಸಕಲಪಿತೃಗಳಿಗೂ ನರಕೋತ್ತಾ ರಣಕ್ಕೆ ಸಾಧನವೂ, ಪಾಪರಾಶಿಯ ನಾಶಕ್ಕೆ ಕಾರಣವೂ ಆಗಿರುವುದು.

೩೮. ಅದರ ಇದಿರಿನಲ್ಲಿಯೆ ಪದ್ಮತೀರ್ಥವಿರುವುದು. ಅಲ್ಲಿ ಯಾವ ಮನು ಷ್ಯೋತ್ತಮನು ಸ್ನಾನವನ್ನುಮಾಡಿ ವಿಧಿಪ್ರಕಾರವಾಗಿ ಪಿತೃತರ್ಪಣಗಳನ್ನರ್ಪಿ ಸುವನೊ, ಅವನೆಂದಿಗೂ ಐಶ್ವರ್ಯವಿಹೀನನಾಗುವುದಿಲ್ಲ.

೩೯. ಅಲ್ಲಿಯೇ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಮಹಾಲಕ್ಷ್ಮೀ ತೀರ್ಥವಿರುವುದು. ಮುನ್ನು ಅದರಲ್ಲಿ ಮೂರುಲೋಕಗಳಿಗೂ ಸಂತೋಷ ದಾಯಕಿಯಾದ ಮಹಾಲಕ್ಷ್ಮಿಯು ತಾನೇ ಸ್ನಾನವನ್ನು ಮಾಡಿದಳು.

೪೦. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ನವರತ್ನಗಳನ್ನೂ, ಚಿನ್ನವನ್ನೂ, ಪಟ್ಟೆಯ ವಸ್ತ್ರಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದ ಮನುಷ್ಯನು ಎಂದಿಗೂ ಐಶ್ವರ್ಯದ ಕ್ಷಯವನ್ನನುಭವಿಸುವುದಿಲ್ಲ.

ಯತ್ರ ಯತ್ರ ಹಿ ಜಾಯೇತ ತತ್ರ ತತ್ರ ಸಮೃದ್ಧಿಭಾಕ್ ।
ಪಿತರೋಽಪಿ ಹಿ ಸಶ್ರೀಕಾಸ್ತಸ್ಯ ಸ್ಯುಸ್ತೀರ್ಥಗೌರವಾತ್ ॥ ೪೧ ॥
ತತ್ರಾಸ್ತಿ ಹಿ ಮಹಾಲಕ್ಷ್ಮ್ಯಾ ಮೂರ್ತಿಸ್ತ್ರೈಲೋಕ್ಯವಂದಿತಾ ।
ತಾಂ ಪ್ರಣಮ್ಯ ನರೋ ಭಕ್ತ್ಯಾ ನ ರೋಗೀ ಜಾಯತೇ ಕ್ವಚಿತ್ ॥ ೪೨ ॥
ನಭಸ್ಯ ಬಹುಲಾಷ್ಟಮ್ಯಾಂ ಕೃತ್ವಾ ಜಾಗರಣಂ ನಿಶಿ ।
ಸಮಭ್ಯರ್ಚ್ಯ ಮಹಾಲಕ್ಷ್ಮೀಂ ವ್ರತೀ ವ್ರತಫಲಂ ಲಭೇತ್ ॥ ೪೩ ॥
ತಾರ್ಕ್ಷ್ಯತೀರ್ಥಂ ಹಿ ತತ್ರಾಸ್ತಿ ತಾರ್ಕ್ಷ್ಯಕೇಶವಸನ್ನಿಧೌ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಸಂಸಾರಾಹಿಂ ನ ಪಶ್ಯತಿ ॥ ೪೪ ॥
ತದಗ್ರೇ ನಾರದಂ ತೀರ್ಥಂ ಮಹಾಪಾತಕನಾಶನಂ ।
ಬ್ರಹ್ಮವಿದ್ಯೋಪದೇಶಂ ಚ ಪ್ರಾಪ್ತವಾನ್ಯತ್ರ ನಾರದಃ ॥ ೪೫ ॥
ತತ್ರ ಸ್ನಾತೋ ನರಃ ಸಂಯಗ್ಬ್ರಹ್ಮವಿದ್ಯಾಮವಾಪ್ನುಯಾತ್ ।
ಕೇಶವಾತ್ತೇನ ತತ್ಪ್ರೋಕ್ತಃ ಕಾಶ್ಯಾಂ ನಾರದಕೇಶವಃ ॥ ೪೬ ॥

---

೪೧. ಆ ತೀರ್ಥಮಹತ್ತ್ವದ ಪ್ರಭಾವದಿಂದ ಅವನು ಎಲ್ಲಿ ಎಲ್ಲಿ ಜನ್ಮಗಳನ್ನು ಪಡೆದರೂ ಅಲ್ಲಿ ಸರ್ವೈಶ್ವರ್ಯಸಮನ್ವಿತನಾಗುವನು. ಅವನ ಪಿತೃಗಳೂ ಸಂಪದ್ಯುಕ್ತರಾಗಿ ಸುಖದಿಂದಿರುವರು.

೪೨. ಅಲ್ಲಿ ಮೂರುಲೋಕಗಳ ನಿವಾಸಿಗಳಿಂದಲೂ ನಮಸ್ಕೃತವಾದ ಮಹಾಲಕ್ಷ್ಮಿಯ ಮೂರ್ತಿಯೊಂದಿರುವುದು. ಅದಕ್ಕೆ ಭಕ್ತಿಯಿಂದ ನಮಸ್ಕರಿಸಿದ ಮಾನವನು ಎಂದಿಗೂ ರೋಗಾದ್ಯುಪದ್ರವಗಳನ್ನು ಅನುಭವಿಸುವುದಿಲ್ಲ.

೪೩. ಭಕ್ತನು ಭಾದ್ರಪದಮಾಸದ ಕೃಷ್ಣಪಕ್ಷದ ಅಷ್ಟಮಿಯ ತಿಥಿಯಲ್ಲಿ ರಾತ್ರಿಯಲ್ಲಿ ಜಾಗರಣೆಯನ್ನುಮಾಡಿ ಮಹಾಲಕ್ಷ್ಮಿಯ ಪೂಜೆಯನ್ನು ಮಾಡಲು ವ್ರತಾಚರಣೆಯ ಸಂಪೂರ್ಣಫಲವನ್ನು ಪಡೆಯುವನು.

೪೪. ಅಲ್ಲಿರುವ ತಾರ್ಕ್ಷ್ಯಕೇಶವನ ಸನ್ನಿಧಿಯಲ್ಲಿ ತಾರ್ಕ್ಷ್ಯತೀರ್ಥವಿರುವುದು. ಅದರಲ್ಲಿ ಮನುಷ್ಯನು ಭಕ್ತಿಯಿಂದ ಸ್ನಾನವನ್ನುಮಾಡಲು ಸಂಸಾರವೆಂಬ ಕಾಳಸರ್ಪವನ್ನು ಮುಂದಾವಾಗಲೂ ನೋಡಲಾರನು.

೪೫. ಅದರ ಇದಿರಿನಲ್ಲಿಯೇ ಮಹಾಪತಕಗಳನ್ನೂ ನಾಶಗೊಳಿಸುವ ನಾರದ ತೀರ್ಥವಿರುವುದು. ಆ ಪ್ರದೇಶದಲ್ಲಿಯೇ ನಾರದನು ಮಹಾವಿಷ್ಣುವಿನಿಂದ ಬ್ರಹ್ಮವಿದ್ಯೆಯ ಉಪದೇಶವನ್ನು ಪಡೆದನು.

೪೬. ಅದರಲ್ಲಿ ಸ್ನಾನಮಾಡಿದ ಮನುಷ್ಯನು ಕೇಶವನ ಅನುಗ್ರಹದಿಂದ ಸಾಂಗವಾದ ಬ್ರಹ್ಮವಿದ್ಯೆಯನ್ನು ಪಡೆಯುವನು. ಆದುದರಿಂದಲೇ ಕಾಶಿಯಲ್ಲಿರುವ ಆತನಿಗೆ ನಾರದ ಕೇಶವನೆಂಬ ಹೆಸರಾಗಿರುವುದು.

ಅರ್ಚಯಿತ್ವಾ ನರೋ ಭಕ್ತ್ಯಾ ದೇವಂ ನಾರದಕೇಶವಂ ।
ಜನನ್ಯಾ ಜಾಠರಂ ಪೀಠಮಧ್ಯಾಸ್ತೇ ನ ಕದಾಚನ ॥ ೪೭ ॥
ಪ್ರಹ್ಲಾದತೀರ್ಥಂ ತಸ್ಯಾಗ್ರೇ ಯತ್ರ ಪ್ರಹ್ಲಾದಕೇಶವಃ ।
ತತ್ರ ಶ್ರಾದ್ಧಾದಿಕಂ ಕೃತ್ವಾ ವಿಷ್ಣುಲೋಕೇ ಮಹೀಯತೇ ॥ ೪೮ ॥
ಅಂಬರೀಷಮಹಾತೀರ್ಥಮಘಘ್ನಂ ತಸ್ಯ ಸನ್ನಿಧೌ ।
ತತ್ರೌದಕೀಂ ಕ್ರಿಯಾಂ ಕುರ್ವನ್ನಿಷ್ಕಾಲುಷ್ಯಂ ಲಭೇನ್ನರಃ ॥ ೪೯ ॥
ಆದಿತ್ಯಕೇಶವಃ ಪೂಜ್ಯ ಆದಿಕೇಶವಪೂರ್ವತಃ ।
ತಸ್ಯ ಸಂದರ್ಶನಾದೇವ ಮುಚ್ಯತೇ ಚೋಽಘಪಾತಕೈಃ ॥ ೫೦ ॥
ದತ್ತಾತ್ರೇಯೇಶ್ವರಂ ತೀರ್ಥಂ ತತ್ರೈವಾದಿಗದಾಧರಃ ।
ಪಿತೄನ್ಸಂತರ್ಪ್ಯ ತತ್ರೈವ ಜ್ಞಾನಯೋಗಮವಾಪ್ನುಯಾತ್ ॥ ೫೧ ॥
ಭೃಗುಕೇಶವಪೂರ್ವೇಣ ತೀರ್ಥಂ ವೈ ಭಾರ್ಗವಂ ಪರಂ ।
ತತ್ರ ಸ್ನಾತೋ ನರಃ ಪ್ರಾಜ್ಞೋ ಭವೇದ್ಭಾರ್ಗವವತ್ಸುಧೀಃ ॥ ೫೨ ॥
ತತ್ರ ವಾಮನತೀರ್ಥಂ ಚ ಪ್ರಾಚ್ಯಾಂ ವಾಮನಕೇಶವಾತ್ ।
ಪೂಜಯಿತ್ವಾ ಚ ತಂ ವಿಷ್ಣುಂ ವಸೇದ್ವಾಮನಸನ್ನಿಧೌ ॥ ೫೩ ॥

---

೪೭. ದೇವೇಶ್ವರನಾದ ನಾರದಕೇಶವನನ್ನು ಭಕ್ತಿಯಿಂದ ಪೂಜಿಸಿದ ನರನು ಪುನಃ ಜನನಿಯ ಜಠರವೆಂಬ ಆಸನದಲ್ಲಿ ಎಂದಿಗೂ ಕುಳಿತುಕೊಳ್ಳುವುದಿಲ್ಲ.

೪೮. ಅದರ ಸಮೀಪದಲ್ಲಿಯೇ ಪ್ರಹ್ಲಾದತೀರ್ಥವಿರುವುದು. ಅದರ ತೀರದಲ್ಲಿ ಪ್ರಹ್ಲಾದಕೇಶವನಿರುವನು. ಅಲ್ಲಿ ಪಿತೃಶ್ರಾದ್ಧಾದಿ ಸತ್ಕ್ರಿಯೆಗಳನ್ನು ಮಾಡಿದ ಮನುಷ್ಯನು ವಿಷ್ಣುಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು.

೪೯. ಆ ತೀರ್ಥದ ಸನ್ನಿಧಿಯಲ್ಲಿ ಪಾಪಾಪನೋದಕವಾದ ಅಂಬರೀಷ ತೀರ್ಥವೆಂಬ ಮಹಾತೀರ್ಥವೊಂದಿರುವುದು. ಅಲ್ಲಿ ಸ್ನಾನಸಂಧ್ಯಾದಿಗಳನ್ನು ಮಾಡಲು ಮಾನವನು ಕಲ್ಮಷರಹಿತನಾಗುವನು.

೫೦. ಆದಿಕೇಶವನಿಗೆ ಪೂರ್ವದಿಕ್ಕಿನಲ್ಲಿರುವ ಆದಿತ್ಯಕೇಶವನು ಭಕ್ತರಿಗೆ ಪೂಜನೀಯನಾಗಿರುವನು. ಆತನ ಸಂದರ್ಶನವನ್ನು ಮಾಡುವುದರಿಂದಲೇ ಭಕ್ತನ ಮಹಾಪಾತಕಗಳೂ ಬಿಟ್ಟುಹೋಗುವುವು.

೫೧. ಅದರ ಬಳಿಯಲ್ಲಿಯೇ ದತ್ತಾತ್ರೇಯ ಮಹೇಶ್ವರನ ತೀರ್ಥವಿರುವುದು. ಅಲ್ಲಿಯೇ ಆದಿಗದಾಧರನು ನೆಲಸಿರುವನು. ಅಲ್ಲಿ ಪಿತೃತರ್ಪಣಗಳನ್ನುಕೊಡಲು ಮನುಷ್ಯನು ಜ್ಞಾನಯೋಗದ ಸಿದ್ಧಿಯನ್ನು ಪಡೆಯುವನು.

೫೨. ಭೃಗುಕೇಶವನಿಗೆ ಪೂರ್ವದಿಕ್ಕಿಗೆ ಉತ್ತಮವಾದ ಭಾರ್ಗವತೀರ್ಥ ವಿರುವುದು. ಅದರಲ್ಲಿ ಸ್ನಾನಮಾಡಿದ ನರನು ಭೃಗುಪುತ್ರನಾದ ಶುಕ್ರಾಚಾರ್ಯ ನಂತೆಯೇ ಬುದ್ಧಿವಂತನೂ ವಿವೇಕಿಯೂ ಆಗುವನು.

೫೩. ಅಲ್ಲಿಯೇ ವಾಮನಕೇಶವನಿಗೆ ಪೂರ್ವಕ್ಕೆ ವಾಮನತೀರ್ಥವಿರುವುದು.

ನರನಾರಾಯಣಂ ತೀರ್ಥಂ ನರನಾರಾಯಣಾತ್ಪರಃ ।
ತತ್ರ ತೀರ್ಥೇ ಕೃತಸ್ನಾನೋ ನರೋ ನಾರಾಯಣೋ ಭವೇತ್ ॥ ೫೮ ॥
ಯಜ್ಞವಾರಾಹತೀರ್ಥಂ ಚ ತದಗ್ರೇ ಪಾಪನಾಶನಂ ।
ಪ್ರತಿಮಜ್ಜನತಸ್ತತ್ರ ರಾಜಸೂಯಕ್ರತೋಃ ಫಲಂ ॥ ೫೯ ॥
ವಿದಾರನಾರಸಿಂಹಾಖ್ಯಂ ತತ್ರ ತೀರ್ಥಂ ಸುನಿರ್ಮಲಂ ।
ಸ್ನಾತೋ ವಿದಾರಯೇತ್ತತ್ರ ಪಾಪಂ ಜನ್ಮಶತಾರ್ಜಿತಂ ॥ ೬೦ ॥
ಗೋಪೀಗೋವಿಂದತೀರ್ಥಂ ಚ ಗೋಪೀಗೋವಿಂದ ಪೂರ್ವತಃ ।
ಸ್ನಾತ್ವಾ ತತ್ರ ಸಮಭ್ಯರ್ಚ್ಯ ವಿಷ್ಣುಂ ವಿಷ್ಣುಪ್ರಿಯೋ ಭವೇತ್ ॥ ೬೧ ॥
ತೀರ್ಥಂ ಲಕ್ಷ್ಮೀನೃಸಿಂಹಾಖ್ಯಂ ಗೋಪೀಗೋವಿಂದದಕ್ಷಿಣೇ ।
ನ ಲಕ್ಷ್ಮ್ಯಾ ತ್ಯಜ್ಯತೇ ಕ್ವಾಪಿ ತತ್ತೀರ್ಥಪರಿಮಜ್ಜನಾತ್ ॥ ೬೨ ॥
ತದಗ್ರೇ ಶೇಷತೀರ್ಥಂ ಚ ಶೇಷಮಾಧವಸನ್ನಿಧೌ ।
ತರ್ಪಿತಾನಾಂ ಪಿತೄಣಾಂ ಚ ಯತ್ರ ತೃಪ್ತಿರ್ನ ಶಿಷ್ಯತೇ ॥ ೬೩ ॥

---

ಮಹಾವಿಷ್ಣುವಿನ ಆ ಮೂರ್ತಿಯನ್ನು ಪೂಜಿಸಲು ವಾಮನರೂಪಿಯಾದ ಆತನ ಸನ್ನಿಧಿಯಲ್ಲಿಯೇ ಭಕ್ತನು ವಾಸಮಾಡುತ್ತಿರುವನು.

೫೮. ನರನಾರಾಯಣರ ಮುಂದುಗಡೆಯಲ್ಲಿಯೇ ನರನಾರಾಯಣತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾವನ್ನುಮಾಡಿದ ನರನು ನಾರಾಯಣನಾಗಿಯೇ ನಿಂತುಬಿಡುವನು.

೫೯. ಅದರ ಇದಿರಾಗಿ ಪಾಪನಾಶಕವಾದ ಯಜ್ಞವರಾಹತೀರ್ಥವು ನೆಲಸಿರುವುದು. ಅದರಲ್ಲಿಮಾಡಿದ ಒಂದೊಂದು ಸ್ನಾನದಿಂದಲೂ ಒಂದೊಂದು ರಾಜಸೂಯಮಹಾಯಜ್ಞವನ್ನು ಮಾಡಿದ ಫಲ ವುಲಭಿಸುವುದು.

೬೦. ಅಲ್ಲಿಯೇ ವಿದಾರನಾರಸಿಂಹನಾಮಕವಾದ ತೀರ್ಥವು ಅತಿಸ್ವಚ್ಛಜಲದಿಂದ ಶೋಭಿಸುತ್ತಿರುವುದು. ಆದರಲ್ಲಿ ಸ್ನಾನವನ್ನು ಮಾಡಿದವನು ನೂರು ಜನ್ಮಗಳಲ್ಲಿ ಸಂಪಾದಿಸಿರುವ ಪಾತಕಗಳನ್ನೂ ಕಿತ್ತು ಬಿಸುಡುವನು.

೬೧. ಗೋಪೀಗೋವಿಂದನ ಪೂರ್ವಕ್ಕೆ ಗೋಪೀಗೋವಿಂದ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿಯಾಗಿ ಗೋವಿಂದನನ್ನು ಪೂಜಿಸಿದ ಮನುಷ್ಯನು ಮಹಾವಿಷ್ಣುವಿಗೆ ಅತ್ಯಂತಪ್ರಿಯನಾಗುವನು.

೬೨. ಆ ಗೋಪೀಗೋವಿಂದಸ್ವಾಮಿಯ ದಕ್ಷಿಣದಿಕ್ಕಿನಲ್ಲಿ ಲಕ್ಷ್ಮೀನೃಸಿಂಹನ ಹೆಸರಿನ ತೀರ್ಥವೊಂದಿರುವುದು, ಅದರಲ್ಲಿ ಸಂಪೂರ್ಣಸಚೇಲಸ್ನಾನವನ್ನು ಮಾಡಲು ಎಂದಿಗೂ ಮಹಾವಿಭವದ ನಾಶವುಂಟಾಗುವುದಿಲ್ಲ.

೬೩. ಅದಕ್ಕೆ ಇದಿರಾಗಿ ಶೇಷಮಾಧವನಿರುವನು. ಆತನ ಸನ್ನಿಧಿಯಲ್ಲಿ ಶೇಷತೀರ್ಥವಿರುವುದು. ಅದರಲ್ಲಿ ತರ್ಪಣಗಳನ್ನುಪಡೆದ ಪಿತೃದೇವತೆಗಳ ತೃಪ್ತಿಯು ಅಕ್ಷಯವಾಗಿರುವುದೆಂದು ಹೇಳುವರು.

ಶಂಖಮಾಧವತೀರ್ಥಂ ಚ ತದವಾಚ್ಯಾಂ ಸುನಿರ್ಮಲಂ ।
ಕೃತೋದಕೋ ನರಸ್ತತ್ರ ಭವೇತ್ಪಾಪೋಽಪಿ ನಿರ್ಮಲಃ ॥ ೬೦ ॥
ತದಗ್ರೇ ಚ ಹಯಗ್ರೀವಂ ತೀರ್ಥಂ ಪರಮಪಾವನಂ ।
ತತ್ರ ಸ್ನಾತ್ವಾ ಹಯಗ್ರೀವಂ ಕೇಶವಂ ಪರಿಪೂಜ್ಯ ಚ ॥ ೬೧ ॥
ಪಿಂಡಂ ಚ ತತ್ರ ನಿರ್ವಾಪ್ಯ ಹಯಗ್ರೀವಸ್ಯ ಸನ್ನಿಧೌ ।
ಹಯಗ್ರೀವೀಂ ಶ್ರಿಯಂ ಪ್ರಾಪ್ಯ ಸ ಮುಚ್ಯೇತ ಸಪೂರ್ವಜಃ ॥ ೬೨ ॥
ಸ್ಕಂದ ಉವಾಚ:—
ಪ್ರಸಂಗತೋ ಮಯ್ಯೈತಾನಿ ತೀರ್ಥಾನಿ ಕಥಿತಾನಿ ತೇ ।
ಭೂಮೌ ತಿಲಾಂತರಾಯಾಂ ಯತ್ತತ್ರ ತೀರ್ಥಾನ್ಯನೇಕಶಃ ॥ ೬೩ ॥
ಉದ್ದಿಷ್ಟಾನಾಂ ತು ತೀರ್ಥಾನಾಮೇತೇಷಾಂ ಕಲಶೋದ್ಭವ ।
ನಾಮಮಾತ್ರಮಪಿ ಶ್ರುತ್ವಾ ನಿಷ್ಪಾಪೋ ಜಾಯತೇ ನರಃ ॥ ೬೪ ॥
ಇದಾನೀಂ ಪ್ರಸ್ತುತಂ ವಿಪ್ರ ಶೃಣು ವಕ್ಷ್ಯಾಮಿ ತೇಽಗ್ರತಃ ।
ವೈಕುಂಠನಾಥೋ ಯಚ್ಚಕ್ರೇ ಶಂಖಚಕ್ರಗದಾಧರಃ ॥ ೬೫ ॥

---

೬೦. ಅದರ ದಕ್ಷಿಣಕ್ಕೆ ನಿರ್ಮಲೋದಕದಿಂದ ಕೂಡಿದ ಶಂಖಮಾಧವ ತೀರ್ಥವು ನೆಲಸಿರುವುದು. ಅದರಲ್ಲಿ ಸ್ನಾನವನ್ನುಮಾಡಿದ ಮಾತ್ರದಿಂದಲೇ ಎಂತಹ ಪಾಪಿಯಾದ ಮನುಷ್ಯನೂ ಪರಿಶುದ್ಧನಾಗುವನು.

೬೧–೬೨. ಅದರ ಇದಿರಿನಲ್ಲಿ ಪರಮಪವಿತ್ರವಾದ ಹಯಗ್ರೀವತೀರ್ಥ ವಿರುವುದು. ಅದರಲ್ಲಿ ಸ್ನಾನವನ್ನು ಮಾಡಿ ಅಲ್ಲಿ ನೆಲಸಿರುವ ವಿಷ್ಣುವಿನ ಹಯ ಗ್ರೀವರೂಪವನ್ನು ಪೂಜೆಮಾಡಿ, ಆ ಹಯಗ್ರೀವಕೇಶವನ ಸನ್ನಿಧಿಯಲ್ಲಿ ಪಿತೃ ಗಳನ್ನುದ್ದೇಶಿಸಿ ಪಿಂಡಪ್ರದಾನವನ್ನುಮಾಡಲು, ಮನುಷ್ಯನು ಈ ಲೋಕದಲ್ಲಿ ಕುಬೇರನ ಐಶ್ವರ್ಯವನ್ನು ಪಡೆದು ದೇಹವನ್ನು ತ್ಯಜಿಸಿದಮೇಲೆ ತನ್ನ ಪೂರ್ವಜ ರೊಡನೆ ಮೋಕ್ಷಕ್ಕೂ ಭಾಗಿಯಾಗುವನು.

೬೩. ಸ್ಕಂದನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯನೆ! ಇಂತು ಪ್ರಸಂಗ ವಶದಿಂದ ನಿನಗೆ ಕಾಶಿಯಲ್ಲಿರುವ ಕೆಲವು ತೀರ್ಥಗಳನ್ನು ನಿರೂಪಿಸಿರುವನು. ಆ ಪ್ರದೇಶದ ಒಂದೊಂದು ಎಳ್ಳಿನ ಕಾಳಿನ ಪ್ರಮಾಣದ ಭೂಮಿಯಲ್ಲಿಯೂ ಅಸಂಖ್ಯಾಕ ತೀರ್ಥಗಳೂ, ಶಿವಲಿಂಗಗಳೂ ಇರುವುವು.

೬೪. ಕಲಶಭವನೆ! ಈಗ ನಾನು ನಿರೂಪಿಸಿರುವ ಈ ತೀರ್ಥಗಳ ಹೆಸರು ಗಳನ್ನು ಕೇಳಿದ ಮಾತ್ರದಿಂದಲೂ ಮನುಷ್ಯನು ತನ್ನ ಪಾತಕಗಳನ್ನು ಕಳೆದು ಕೊಳ್ಳುವನು.

೬೫. ಓ ಬ್ರಾಹ್ಮಣೋತ್ತಮ! ಇನ್ನು ಪ್ರಸ್ತುತವಾದ ವಿಚಾರವನ್ನು ನಿನ್ನ ಮುಂದೆ ತಿಳಿಸುವೆನು, ಕೇಳು. ಶಂಖಚಕ್ರಗದಾಪಾಣಿಯೂ ವೈಕುಂಠಪತಿಯೂ ಆದ ಮಹಾವಿಷ್ಣುವು ಬಳಿಕ ಏನುಮಾಡಿದನೆಂಬುದನ್ನು ಹೇಳುವೆನು.

ತಸ್ಯಾಂ ಮೂರ್ತೌ ಸಮಾವೇಶ್ಯ ವೈಶ್ವವ್ಯಾಮಥ ಕೇಶವಃ ।
ಶಂಭೋಃ ಕಾರ್ಯೇ ಕೃತಮನಾ ಅಂಶಾಂಶಾಂಶೇನ ನಿರ್ಗತಃ ॥ ೭೬ ॥

ಅಗಸ್ತ್ಯ ಉವಾಚ :—

ಅಂಶಾಂಶಾಂಶೇನ ನಿಶ್ಚಕ್ರೇ ಕುತೋ ಭೋಶ್ಚಕ್ರಪಾಣಿನಾ ।
ಕ್ವ ನಿರ್ಗತಂ ಚ ಹರಿಣಾ ಪ್ರಾಪ್ಯ ಕಾಶೀಂ ಷಡಾನನ ॥ ೭೭ ॥

ಸ್ಕಂದ ಉವಾಚ :—

ಸಾಮಸ್ತ್ಯೇನ ಯದರ್ಥಂ ನ ನಿರ್ಗತಿಂ ವಿಷ್ಣುನಾ ಮುನೇ ।
ಬ್ರುವೇ ತತ್ಕಾರಣಮಿತಿ ಕ್ಷಣಮಾತ್ರಂ ನಿಶಾಮಯ ॥ ೭೮ ॥
ಸಂಪ್ರಾಪ್ಯ ಪುಣ್ಯಸಂಭಾರೈಃ ಪ್ರಾಜ್ಞೋ ವಾರಾಣಸೀಂ ಪುರೀಂ ।
ನ ತ್ಯಜೇತ್ಸರ್ವಭಾವೇನ ಮಹಾಲಾಭೈರಪೀರಿತಃ ॥ ೭೯ ॥
ಅತಃ ಪ್ರತಿಕೃತಿಃ ಸ್ವೀಯಾ ತತ್ರ ಕಾಶ್ಯಾಂ ಮುರಾರಿಣಾ ।
ಪ್ರತಿತಷ್ಠೇ ಕಲಶಜ ಸ್ತೋಕಾಂಶೇನ ಚ ನಿರ್ಗತಂ ॥ ೮೦ ॥

---

೭೬. ಇಂತು ಆ ವಿಗ್ರಹದಲ್ಲಿ ಮಹಾವಿಷ್ಣುವು ತನ್ನ ವಿಶ್ವವ್ಯಾಪಕವಾದ ಶರೀರವನ್ನು ಸಂಕೋಚಗೊಳಿಸಿ ಆವಾಹನೆಮಾಡಿ ಮಹೇಶ್ವರನ ಕಾರ್ಯವನ್ನು ಸಾಧನೆಮಾಡುವ ಮನಸ್ಸಿನಿಂದ ಅಂತರ್ಯಾಮಿಯಾದ ತನ್ನ ಆಯುಧಗಳನ್ನು ಧರಿಸಿದ ಚತುರ್ಭುಜಾಂಶದಿಂದ ಹೊರಕ್ಕೆ ಬಂದನು.

೭೭. ಅಗಸ್ತ್ಯನು ಕೇಳುತ್ತಾನೆ:—ಎಲೈ ಸ್ಕಂದನೆ! ಚಕ್ರಪಾಣಿಯಾದ ವಿಷ್ಣುವು ಈ ವಿಧವಾಗಿ ಅಂಶಾಂಶದಿಂದ ಹೊರಕ್ಕೆ ಬರಲು ಕಾರಣವೇನು? ಷಣ್ಮುಖಸ್ವಾಮಿಯೆ! ಕಾಶೀಕ್ಷೇತ್ರವನ್ನು ಸೇರಿದ ಶ್ರೀಹರಿಯು ಪುನಃ ಎಲ್ಲಿಗೆ ಹೊರಟುಹೋದನು?

೭೮. ಸ್ಕಂದನು ಹೇಳುತ್ತಾನೆ:—ಮುನಿಯೆ! ಮಹಾವಿಷ್ಣುವು ಸರ್ವಾಂಶದಿಂದ ಏಕೆ ಹೊರಟು ಹೋಗಲಿಲ್ಲವೆಂಬುದಕ್ಕೆ ಕಾರಣವನ್ನು ತಿಳಿಸುವೆನು. ಒಂದು ಕ್ಷಣಕಾಲ ಸಾವಧಾನಮನಸ್ಕನಾಗಿ ಕೇಳು.

೭೯. ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದ ಫಲವಾಗಿ ವಾರಾಣಸೀ ಕ್ಷೇತ್ರವನ್ನು ಸೇರಿದ ಯಾವ ಬುದ್ಧಿವಂತನಾದರೂ ಎಂತಹ ಮಹಾಲಾಭಗಳಿಂದ ಪ್ರಲೋಭಿತನಾದರೂ ಆ ಕ್ಷೇತ್ರವನ್ನು ಸರ್ವಾತ್ಮನಾ ತ್ಯಜಿಸಲು ಇಷ್ಟಪಡುವುದಿಲ್ಲ.

೮೦. ಆದುದರಿಂದಲೇ ಮುರವೈರಿಯಾದ ಶ್ರೀಹರಿಯು ಕಾಶೀಕ್ಷೇತ್ರದಲ್ಲಿ ತನ್ನ ಮೂರ್ತಿಯೊಂದನ್ನು ಸ್ಥಾಪಿಸಿ ತಾನು ಅಲ್ಪಾಂಶದಿಂದಲೇ ಕಾಶಿಯನ್ನು ಬಿಟ್ಟು ಹೊರಟನು.

ಕಿಂಚಿತ್ಕಾಲ್ಯಾ ಉದೀಚ್ಯಾಂ ಚ ಗತ್ವಾ ದೇವೇಸ ಚಕ್ರಿಣಾ ।
ಸ್ವಸ್ಥಿತ್ಯೈಃ ಕಲ್ಪಿತಂ ಸ್ಥಾನಂ ಧರ್ಮಕ್ಷೇತ್ರಮಿತೀರಿತಂ ॥ ೭೧ ॥
ತತಸ್ತು ಸೌಗತಂ ರೂಪಂ ಶಿಶ್ರಾಯ ಶ್ರೀಪತಿಃ ಸ್ವಯಂ ।
ಅತೀವ ಸುಂದರತರಂ ತ್ರೈಲೋಕ್ಯಸ್ಯಾಪಿ ಮೋಹನಂ ॥ ೭೨ ॥
ಶ್ರೀಃ ಪರಿವ್ರಾಜಕಾ ಜಾತಾ ನಿತರಾಂ ಸುಭಗಾಕೃತಿಃ ।
ಯಾಮಾಲೋಕ್ಯ ಜಗತ್ಸರ್ವಂ ಚಿತ್ರನ್ಯಸ್ತಮಿವಾಸ್ಥಿತಂ ॥ ೭೩ ॥
ವಿಸ್ಮಯೋನಿಂ ಜಗದ್ಧಾತ್ರೀಂ ನ್ಯಸ್ತಹಸ್ತಾಗ್ರಪುಸ್ತಕಾಂ ।
ಗುರುತ್ಮಾನಪಿ ತಚ್ಛಿಷ್ಯೋ ಜಾತೋ ಲೋಕೋತ್ತರಾಕೃತಿಃ ॥ ೭೪ ॥
ಅತ್ಯದ್ಭುತಮಹಾಪ್ರಾಜ್ಞೋ ನಿಸ್ಪೃಹಃ ಸರ್ವವಸ್ತುಷು ।
ಗರುಶುಶ್ರೂಷಣಪರೋ ನ್ಯಸ್ತಹಸ್ತಾಗ್ರಪುಸ್ತಕಃ ॥ ೭೫ ॥
ಅಪೃಚ್ಛತ್ಪರಮಂ ಧರ್ಮಂ ಸಂಸಾರವಿನಿಮೋಚಕಂ ।
ಆಚಾರ್ಯವರ್ಯಂ ಸೌಮ್ಯಾಸ್ಯಂ ಪ್ರಸನ್ನಾತ್ಮಾನಮುತ್ತಮಂ ॥ ೭೬ ॥

---

೭೧. ಚಕ್ರಾಯುಧಪಾಣಿಯಾದ ಆ ದೇವನು ಕಾಶೀಕ್ಷೇತ್ರದ ಸ್ವಲ್ಪ ಉತ್ತರದಿಕ್ಕಿಗೆ ಹೋದವನಾಗಿ ತಾನು ನೆಲಸಿರುವುದಕ್ಕಾಗಿ ಧರ್ಮಕ್ಷೇತ್ರವೆಂದು ಪ್ರಖ್ಯಾತಿಯನ್ನು ಪಡೆದಿರುವ ಸ್ಥಾನವೊಂದನ್ನು ಕಲ್ಪಿಸಿಕೊಂಡನು.

೭೨. ಬಳಿಕ ಆ ಶ್ರೀಮನ್ನಾರಾಯಣನು ತಾನೇ ಅತ್ಯಂತ ಸುಂದರವೂ ಮೂರುಲೋಕಗಳಿಗೂ ಮೋಹವನ್ನುಂಟುಮಾಡುವುದೂ ಆದ ಒಬ್ಬ ಬೌದ್ಧ ಸನ್ಯಾಸಿಯ ರೂಪವನ್ನು ಸ್ವೀಕರಿಸಿದನು.

೭೩. ಮಹಾಲಕ್ಷ್ಮಿಯೂ ಒಬ್ಬ ಭಿಕ್ಷಿಣಿಯಾಗಿ ಆತನನ್ನನುಸರಿಸಿದಳು. ಆಕೆಯೂ ಅತ್ಯಂತ ಸುರುಚಿರ ರೂಪವುಳ್ಳವಳಾಗಿದ್ದಳು. ಆಕೆಯನ್ನು ನೋಡಿದ ಮಾತ್ರದಿಂದಲೇ ಲೋಕದ ಸಕಲ ಜನರೂ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ಆಶ್ಚರ್ಯದಿಂದ ನಿಶ್ಚೇಷ್ಟರಾಗಿ ನಿಲ್ಲುತ್ತಿದ್ದರು.

೭೪. ಆ ಸನ್ಯಾಸಿನಿಯು ಅತ್ಯದ್ಭುತವಾದ ಬುದ್ಧಿಸೂಕ್ಷ್ಮತೆಯುಳ್ಳವಳಾಗಿ, ಸಕಲಪದಾರ್ಥಗಳಲ್ಲಿಯೂ ಆಶಾರಹಿತಳಾಗಿ, ಕೇವಲ ಗುರುಶುಶ್ರೂಷೆಯಲ್ಲಿಯೇ ನಿರತಳಾಗಿ ಯಾವಾಗಲೂ ಕೈಗಳಲ್ಲಿ ಪುಸ್ತಕವನ್ನು ಹಿಡಿದಿರುತ್ತಿದ್ದಳು.

೭೫. ಲೋಕಕ್ಕೆ ಕಾರಣಳೂ, ಲೋಕಪಾಲಕಿಯೂ ಆದ ಆಕೆಯು ಕೈಗಳಲ್ಲಿ ಪುಸ್ತಕವನ್ನು ಹಿಡಿದಿರುವುದನ್ನು ಕಂಡು ಗರುಡನೂ ಸಹ ಲೋಕೋತ್ತರವಾದ ಸೌಂದರ್ಯದಿಂದ ಕೂಡಿದವನಾಗಿ ಅವರ ಶಿಷ್ಯನಾಗಿ ವೇಷವನ್ನು ಧರಿಸಿದನು.

೭೬. ಪ್ರಸನ್ನವಾದ ಮುಖಭಾವವುಳ್ಳವನೂ, ಸರ್ವೋತ್ತಮನೂ ಆದ ಆಚಾರ್ಯನನ್ನು ಕುರಿತು ಸಂಸಾರದ ಕ್ಲೇಶವನ್ನು ಕಳೆಯುವುದಕ್ಕೆ ಕಾರಣವಾದ ಪರಮಧರ್ಮವನ್ನು ಪ್ರಶ್ನೆಮಾಡುತ್ತಿದ್ದನು.

ಧರ್ಮಾರ್ಥಶಾಸ್ತ್ರಕುಶಲಂ ಜ್ಞಾನವಿಜ್ಞಾನಶಾಲಿನಂ ।
ಸುಸ್ವರಂ ಸುಪದವ್ಯಕ್ತಸುಸ್ನಿಗ್ಧಮೃದುಭಾಷಿಣಂ ॥ ೭೭ ॥
ಸ್ತಂಭನೋಚ್ಚಾಟನಾಕೃಷ್ಟಿವಶೀಕರ್ಮಾದಿಕೋವಿದಂ ।
ವ್ಯಾಖ್ಯಾನಸಮಯಾಕೃಷ್ಟಪಕ್ಷಿರೋಮಾಂಚಕಾರಿಣಂ ॥ ೭೮ ॥
ಪೀತತದ್ಗೀತಪೀಯೂಷಮೃಗಪೂಗೌರುಪಾಸಿತಂ ।
ಮಹಾಮೋದಭರಾಕ್ರಾಂತವಾತಚಾಂಚಲ್ಯಹಾರಿಣಂ ॥ ೭೯ ॥
ವೃಕ್ಷೈರಪಿ ಪತತ್ಪುಷ್ಪಚ್ಛಲೈಃ ಕೃತಸಮರ್ಚನಂ ।
ತತಃ ಪ್ರೋವಾಚ ಪುಣ್ಯಾತ್ಮಾ ಪುಣ್ಯಕೀರ್ತಿಃ ಸ ಸೌಗತಃ ॥ ೮೦ ॥
ಶಿಷ್ಯಂ ವಿನಯಕೀರ್ತಿಂ ತಂ ಮಹಾವಿನಯಭೂಷಣಂ ॥ ೮೧ ॥

ಪುಣ್ಯಕೀರ್ತಿರುವಾಚ :—

ತ್ವಯಾ ವಿನಯಕೀರ್ತೇ ಯೋ ಧರ್ಮಃ ಪೃಷ್ಟಃ ಸನಾತನಃ ।
ವಕ್ಷ್ಯಾಮ್ಯಹಮಶೇಷೇಣ ಶೃಣುಷ್ವ ತ್ವಂ ಮಹಾಮತೇ ॥ ೮೨ ॥

---

೭೭. ಆ ಗುರುವೂ, ಧರ್ಮಸೂಕ್ಷ್ಮಗಳಲ್ಲಿಯೂ ಶಾಸ್ತ್ರಾರ್ಥನಿಶ್ಚಯದಲ್ಲಿಯೂ ಕುಶಲನಾಗಿದ್ದನು. ಜ್ಞಾನವಿಜ್ಞಾನಗಳೆರಡನ್ನೂ ಪಡೆದವನು. ಮಧುರಧ್ವನಿಯುಳ್ಳವನಾಗಿ ಸ್ಪಷ್ಟವಾದ ಪದಸಮೂಹದಿಂದ ವಿಷಯವನ್ನು ಸ್ನೇಹದಿಂದಲೂ ಮಾರ್ದವದಿಂದಲೂ ಬೋಧನೆಮಾಡುತ್ತಿದ್ದನು.

೭೮. ಸ್ತಂಭನ, ಉಚ್ಚಾಟನ, ಆಕರ್ಷಣ, ವಶೀಕರಣಗಳೇ ಮುಂತಾದ ವಾಮಾಚರಣಗಳಲ್ಲಿಯೂ ಪಂಡಿತನಾಗಿದ್ದನು. ತಾನು ವ್ಯಾಖ್ಯಾನವನ್ನು ನಡೆಸುವ ಸಮಯದಲ್ಲಿ ಆಕರ್ಷಿಸಲ್ಪಟ್ಟ ಪಕ್ಷಿಗಳಿಗೂ ಕೂಡ ರೋಮಾಂಚವನ್ನುಂಟು ಮಾಡುತ್ತಿದ್ದನು.

೭೯. ಆತನ ಮಾತುಗಳೆಂಬ ಅಮೃತವನ್ನು ಪಾನಮಾಡುತ್ತಿದ್ದ ಮೃಗಗಳು ಆತನನ್ನು ಉಪಾಸನೆಮಾಡುತ್ತಿದ್ದುವು. ವಾಯುವೂ ಆತನ ಮಾತುಗಳ ಮೋಹದ ಭಾರದಿಂದ ಆಕ್ರಾಂತವಾಗಿ ತನಗೆ ಸಹಜವಾದ ಚಾಂಚಲ್ಯವನ್ನು ತ್ಯಜಿಸಿದ್ದಿತು.

೮೦–೮೧. ವೃಕ್ಷಗಳು ಹೂವುಗಳನ್ನುದುರಿಸುವ ನೆವದಿಂದ ಆತನಿಗೆ ಪೂಜೆಯನ್ನು ಮಾಡುತ್ತಿದ್ದುವು. ಒಮ್ಮೆ ಪುಣ್ಯಾತ್ಮನಾದ ಪುಣ್ಯಕೀರ್ತಿಯೆಂಬ ಹೆಸರಿನ ಆ ಬೌದ್ಧಗುರುವು ಅತ್ಯಂತವಿನಯದಿಂದಲಂಕೃತನಾದ ವಿನಯಕೀರ್ತಿಯೆಂಬ ತನ್ನ ಶಿಷ್ಯನನ್ನು ಕುರಿತು ಇಂತು ಹೇಳತೊಡಗಿದನು.

೮೨. ಪುಣ್ಯಕೀರ್ತಿಯು ಹೇಳುತ್ತಾನೆ:—ಎಲೈ ವಿನಯಕೀರ್ತಿಯೆ! ನೀನು ಸನಾತನವಾದ ಧರ್ಮದ ವಿಷಯವಾಗಿ ಯಾವ ಪ್ರಶ್ನೆಯನ್ನು ಮಾಡಿದೆಯೊ, ಅದನ್ನು ಸಂಪೂರ್ಣವಾಗಿ ತಿಳಿಸುವೆನು. ಮಹಾಪ್ರಾಜ್ಞನಾದ ನೀನು ಶ್ರದ್ಧೆಯಿಂದ ಕೇಳು.

ಅನಾದಿಸಿದ್ಧಃ ಸಂಸಾರಃ ಕರ್ತೃಕರ್ಮವಿವರ್ಜಿತಃ ।
ಸ್ವಯಂ ಪ್ರಾದುರ್ಭವೇದೇಷ ಸ್ವಯಮೇವ ವಿಲೀಯತೇ ॥ ೪೩ ॥
ಬ್ರಹ್ಮಾದಿಸ್ತಂಬಪರ್ಯಂತಂ ಯಾವದ್ದೇಹನಿಬಂಧನಂ ।
ಆತ್ಮೈವೈಕೇಶ್ವರಸ್ತತ್ರ ನ ದ್ವಿತೀಯಸ್ತದೀಶಿತಾ ॥ ೪೪ ॥
ಯದ್ವದ್ಬ್ರಹ್ಮವಿಷ್ಣುರುದ್ರಾದ್ಯಾಸ್ತಥಾಖ್ಯಾ ದೇಹಿಸಾಮಿಮಾಃ ।
ಆಖ್ಯಾ ಯಥಾಸ್ಮದಾದೀನಾಂ ಪುಣ್ಯಕೀರ್ತ್ಯಾದಿರುಚ್ಯತೇ ॥ ೪೫ ॥
ದೇಹೋ ಯಥಾಸ್ಮದಾದೀನಾಂ ಸ್ವಕಾಲೇನ ವಿಲೀಯತೇ ।
ಬ್ರಹ್ಮಾದಿಮಶಕಾಂತಾನಾಂ ಸ್ವಕಾಲಾಲ್ಲೀಯತೇ ತಥಾ ॥ ೪೬ ॥
ವಿಚಾರ್ಯಮಾಣೇ ದೇಹೇಸ್ಮಿನ್ನಕಿಂಚಿದಧಿಕಂ ಕ್ವಚಿತ್ ।
ಆಹಾರೋ ಮೈಥುನಂ ನಿದ್ರಾ ಭಯಂ ಸರ್ವತ್ರ ಯತ್ಸಮಂ ॥ ೪೭ ॥
ನಿಜಾಹಾರಪರೀಮಾಣಂ ಪ್ರಾಪ್ಯ ಸರ್ವೋಽಪಿ ದೇಹಭೃತ್ ।
ಸದೃಶೀಮೇವ ಸಂತೃಪ್ತಿಂ ಪ್ರಾಪ್ನುಯಾನ್ನಧಿಕೇತರಾಂ ॥ ೪೮ ॥

---

೪೩. ಈ ಸಂಸಾರವು ಕರ್ತೃಕರ್ಮಾದಿ ಭೇದಗಳಿಂದ ವರ್ಜಿತವಾಗಿ ಅನಾದಿಸಿದ್ಧವಾಗಿರುವುದು. ಇದು ಸ್ವಭಾವದಿಂದ ತಾನೇ ಉಂಟಾಗುವುದು. ಮತ್ತು ನಿಷ್ಕಾರಣವಾಗಿ ತಾನೇ ಲಯವನ್ನೂ ಹೊಂದುವುದು.

೪೪. ಬ್ರಹ್ಮನೇ ಮೊದಲಾಗಿ ಹುಲ್ಲುಕಡ್ಡಿಯವರೆಗಿನ ದೇಹಗಳಿಂದ ಕೂಡಿದ ಈ ಸಮಸ್ತ ಪ್ರಪಂಚಕ್ಕೂ ಸ್ವಭಾವವೊಂದೇ ನಿಯಾಮಕವಾಗಿರುವುದೇ ಹೊರತು ಅದನ್ನು ನಿಯಮನಮಾಡುವ ಈಶ್ವರನು ಬೇರೊಬ್ಬನಿಲ್ಲ.

೪೫. ಪುರಾಣ ಪ್ರಸಿದ್ಧರಾದ ಬ್ರಹ್ಮವಿಷ್ಣು ಮಹೇಶ್ವರರ ವಿಷಯವನ್ನು ಹೇಳುವೆನು. ಈ ನನ್ನ ದೇಹಸಂಘಾತಕ್ಕೆ ಪುಣ್ಯಕೀರ್ತಿಯೆಂಬ ಹೆಸರಿನ ವ್ಯವಹಾರವಿದ್ದಂತೆಯೇ ಇತರ ದೇಹಗಳಿಗೂ ಬ್ರಹ್ಮನೇ ಮೊದಲಾದ ಹೆಸರುಗಳೂ ಇರುವುವೆಂದು ತಿಳಿಯಬೇಕು.

೪೬. ನನ್ನಂತಹ ಮಾನವರ ಶರೀರಗಳು ಕಾಲಕ್ರಮದಲ್ಲಿ ಹೇಗೆ ನಾಶವನ್ನು ಹೊಂದುವುವೊ, ಹಾಗೆಯೇ ಬ್ರಹ್ಮನಿಂದ ಮೊದಲುಗೊಂಡು ಸಣ್ಣ ನುಸಿಯವರೆಗಿನ ಸಮಸ್ತದೇಹಗಳೂ ತಮ್ಮ ತಮ್ಮ ಕಾಲವೊದಗಿದಾಗ ನಾಶವಾಗುವುವು.

೪೭. ತೀವ್ರವಾಗಿ ವಿಚಾರವನ್ನುಮಾಡಲು ಈ ಮನುಷ್ಯದೇಹದಲ್ಲಿ ಮೃಗಾದಿಗಳ ದೇಹಗಳಿಗಿಂತ ಯಾವ ವಿಧವಾದ ಆಧಿಕ್ಯವೂ ಕಾಣುವುದಿಲ್ಲ. ಆಹಾರ, ಸ್ತ್ರೀಸಂಗ, ನಿದ್ರೆ, ಭಯ ಮುಂತಾದುವುಗಳು ಸಕಲಪ್ರಾಣಿಗಳಿಗೂ ಸಮಾನವಾಗಿರುವುವು.

೪೮. ಯಾವ ದೇಹ ಧಾರಿಯೇ ಆದರೂ ತನ್ನ ದೇಹಕ್ಕೆ ಬೇಕಾಗುವಷ್ಟು

ಯಥಾ ವಿತೃಷಿತಾಃ ಸ್ಯಾಮ ಪೀತ್ವಾ ಪೇಯಂ ಮುದಾ ವಯಂ ।
ತೃಷಿತಾಸ್ತು ತಥಾನ್ಯೇಽಪಿ ನ ವಿಶೇಷೋಽಲ್ಪಕೋಽಧಿಕಃ ॥ ೮೯ ॥
ಸಂತು ನಾರ್ಯಃ ಸಹಸ್ರಾಣಿ ರೂಪಲಾವಣ್ಯಭೂಮಯಃ ।
ಪರಂ ನಿಧುವನೇ ಕಾಲೇ ಹ್ಯೇಕೈವೇಹೋಪಯುಜ್ಯತೇ ॥ ೯೦ ॥
ಅಶ್ವಾಃ ಪರಃ ಶತಾಃ ಸಂತು ಸಂತ್ವನೇಕೇಽಷ್ವನೇಕಪಾಃ ।
ಅಧಿರೋಹೇ ತಥಾಪ್ಯೇಕೋ ನದ್ವಿತೀಯಸ್ತಥಾತ್ಮನಃ । ॥ ೯೧ ॥
ಪರ್ಯಂಕಶಾಯಿನಾಂ ಸ್ವಾಪೇ ಸುಖಂ ಯದುಪಪದ್ಯತೇ ।
ತದೇವ ಸೌಖ್ಯಂ ನಿದ್ರಾಯಾಮಿಹ ಭೂಶಾಯಿನಾಮಪಿ ॥ ೯೨ ॥
ಯಥೈವ ಮರಣಾದ್ಭೀತಿರಸ್ಮದಾದಿವಪುಷ್ಮತಾಂ ।
ಬ್ರಹ್ಮಾದಿಕೀಟಕಾಂತಾನಾಂ ತಥಾ ಮರಣತೋ ಭಯಂ ॥ ೯೩ ॥
ಸರ್ವೇ ತನುಭೃತಸ್ತುಲ್ಯಾ ಯದಿ ಬುಧ್ಯಾ ವಿಚಾರ್ಯತೇ ।
ಇದಂ ನಿಶ್ಚಿತ್ಯ ಕೇನಾಪಿ ನೋ ಹಿಂಸ್ಯಃ ಕೋಽಪಿ ಕುತ್ರಚಿತ್ ॥ ೯೪ ॥

---

ಆಹಾರವನ್ನು ಹೊಂದಿದರೆ ಒಂದೇ ವಿಧವಾದ ಸಂತೋಷವನ್ನು ಪಡೆಯುವನು. ಪ್ರಾಣಿಭೇದವನ್ನನುಸರಿಸಿ ಸಂತೋಷಗಳಲ್ಲಿ ನ್ಯೂನಾಧಿಕಭಾವವಿಲ್ಲ.

೮೯. ನಾವು ಬಾಯಾರಿದಾಗ ಸಂತೋಷದಿಂದ ಪಾನೀಯಗಳನ್ನು ಕುಡಿದು ಬಾಯಾರಿಕೆಯನ್ನು ಹೋಗಲಾಡಿಸಿಕೊಳ್ಳುವೆವೊ, ಹಾಗೆಯೇ ಬಾಯಾರಿದ ಇತರ ಜೀವಿಗಳೂ ಪ್ರವರ್ತಿಸುವುವು. ಇದರಲ್ಲಿ ಹೆಚ್ಚು ಕಡಿಮೆಯೆನ್ನಲು ಯಾವ ವಿಶೇಷಕಾರಣವೂ ಕಾಣಲಿಲ್ಲ.

೯೦–೯೧. ರೂಪಲಾವಣ್ಯಗಳ ನಿಧಿಗಳೆನಿಸಿದ ಸಾವಿರಾರು ಮಡದಿಯರನ್ನು ಹೊಂದಿದ್ದರೂ, ಮನುಷ್ಯನು ಮೈಥುನಕಾಲದಲ್ಲಿ ಒಬ್ಬಳನ್ನು ಮಾತ್ರವೇ ಅನುಭವಿಸಬಹುದೇ ಹೊರತು ಅದರಲ್ಲಿಯೂ ಸುಖದ ನ್ಯೂನಾತಿರೇಕಗಳಿಗೆ ಅವಕಾಶವಿಲ್ಲ. ನೂರಾರು ಉತ್ತಮಾಶ್ವಗಳಿರಲಿ; ಅಸಂಖ್ಯಾಕಗಳಾದ ಆನೆಗಳಿರಲಿ; ಒಂದನ್ನು ಮಾತ್ರ ಹತ್ತಿಕೊಂಡು ಓಡಾಡಬಹುದೇ ಹೊರತು ಎರಡುವಾಹನಗಳನ್ನು ಒಮ್ಮೆಯೇ ಏರಿ ಎರಡರಷ್ಟು ಸುಖವನ್ನು ಹೊಂದಲಾಗುವುದಿಲ್ಲ.

೯೨. ಹಂಸತೂಲಿಕಾಪರ್ಯಂಕಗಳಲ್ಲಿ ಮಲಗುವ ಐಶ್ವರ್ಯವಂತರಿಗೆ ನಿದ್ರೆಯಿಂದ ಯಾವ ಸುಖವುಂಟಾಗುವುದೊ, ಬಡವರಿಗೆ ಭೂಮಿಯಲ್ಲಿ ಮಲಗುವುದರಿಂದಲೂ ಅದೇ ಸೌಖ್ಯವೇ ಲಭಿಸುವುದು.

೯೩. ನಮ್ಮಂತಹ ದೇಹಧಾರಿಗಳಿಗೆ ಮರಣದ ಭಯವು ಹೇಗೆ ಬಲವತ್ತರವಾಗಿರುವುದೊ, ಹಾಗೆಯೇ ಬ್ರಹ್ಮನಾದಿಯಾಗಿ ಕ್ರಿಮಿಕೀಟಗಳವರೆಗೂ ಮರಣದ ದೆಸೆಯಿಂದ ಭಯವು ಸರ್ವರಿಗೂ ಸಾಮಾನ್ಯವೇ ಆಗಿರುವುದು.

೯೪. ಇಂತು ಬುದ್ಧಿಯಿಂದ ವಿಚಾರಮಾಡಿ ನೋಡಿದರೆ ಸಕಲ ದೇಹ-

ಧರ್ಮೋ ಜೀವದಯಾತುಲ್ಯೋ ನ ಕ್ವಾಪಿ ಜಗತೀತಲೇ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಾ ಜೀವದಯಾ ನೃಭಿಃ ॥ ೯೫ ॥
ಏಕಸ್ಮಿನ್ರಕ್ಷಿತೇ ಜೀವೇ ತ್ರೈಲೋಕ್ಯಂ ರಕ್ಷಿತಂ ಭವೇತ್ ।
ಘಾತಿತೇ ಘಾತಿತಂ ತದ್ವತ್ತಸ್ಮಾದ್ರಕ್ಷೇನ್ನ ಘಾತಯೇತ್ ॥ ೯೬ ॥
ಅಹಿಂಸಾ ಪರಮೋ ಧರ್ಮ ಇಹೋಕ್ತಃ ಪೂರ್ವಸೂರಿಭಿಃ ।
ತಸ್ಮಾನ್ನ ಹಿಂಸಾ ಕರ್ತವ್ಯಾ ನರೈರ್ನರಕಭೀರುಭಿಃ ॥ ೯೭ ॥
ನ ಹಿಂಸಾಸದೃಶಂ ಪಾಪಂ ತ್ರೈಲೋಕ್ಯೇ ಸ ಚರಾಚರೇ ।
ಹಿಂಸಕೋ ನರಕಂ ಗಚ್ಛೇತ್ಸ್ವರ್ಗಂ ಗಚ್ಛೇದಹಿಂಸಕಃ ॥ ೯೮ ॥
ಸಂತಿ ದಾನಾನ್ಯನೇಕಾನಿ ಕಿಂ ತೈಸ್ತುಚ್ಛಫಲಪ್ರದೈಃ ।
ಅಭೀತಿದಾನಸದೃಶಂ ಪರಮೇಕಮಪೀಹ ನ ॥ ೯೯ ॥
ಇಹ ಚತ್ವಾರಿ ದಾನಾನಿ ಪ್ರೋಕ್ತಾನಿ ಪರಮರ್ಷಿಭಿಃ ।
ವಿಚಾರ್ಯ ನಾನಾಶಾಸ್ತ್ರಾಣಿ ಶರ್ಮಣೋಽತ್ರ ಪರತ್ರ ಚ ॥ ೧೦೦ ॥

---

ಗಳೂ ಸಮಾನರೇ ಆಗಿರುವರು. ಇದನ್ನು ನಿಶ್ಚಯವಾಗಿ ತಿಳಿದ ಮನುಷ್ಯನು ಯಾವನೂ ಬೇರೆ ಯಾವ ಪ್ರಾಣಿಯನ್ನು ಯಾವ ವಿಧವಾಗಿಯೂ ಹಿಂಸೆಮಾಡ ಕೂಡದು.

೯೫. ಈ ಭೂಮಂಡಲದಲ್ಲಿ ಜೀವದಯೆಗೆ ಸಮಾನವಾದ ಧರ್ಮವು ಬೇರೆಯಾವುದೂ ಇಲ್ಲವು. ಆದುದರಿಂದ ಮನುಷ್ಯರು ಸರ್ವಪ್ರಯತ್ನದಿಂದಲೂ ಜೀವಿಗಳಲ್ಲಿ ದಯೆಯನ್ನು ತೋರಿಸಬೇಕು.

೯೬. ಒಂದು ಪ್ರಾಣಿಯನ್ನು ರಕ್ಷಿಸಲು ಮೂರುಲೋಕಗಳನ್ನೂ ರಕ್ಷಿಸಿದಂತಾಗುವುದು. ಹಾಗೆಯೇ ಒಂದಕ್ಕೆ ಹಿಂಸೆಯನ್ನುಮಾಡಲು ಲೋಕಗಳ ಹಿಂಸೆಯೂ ಆಗುವುದು. ಆದುದರಿಂದ ಸಕಲ ಜೀವಿಗಳನ್ನೂ ರಕ್ಷಿಸಬೇಕೇ ಹೊರತು ಹಿಂಸಿಸಬಾರದು.

೯೭. ಪೂರ್ವಕಾಲದ ಮಹಾಪ್ರಾಜ್ಞರೂ ಕೂಡ ಅಹಿಂಸೆಯೇ ಸರ್ವೋತ್ತಮಧರ್ಮವೆಂದು ಹೇಳಿರುವರು. ಆದುದರಿಂದ ನರಕವಾಸಾದಿ ದುರ್ಗತಿಗಳಿಗೆ ಹೆದರುವ ಮಾನವರು ಎಂದಿಗೂ ಪ್ರಾಣಿಹಿಂಸೆಯನ್ನು ಮಾಡಬಾರದು.

೯೮. ಚರಾಚರಾತ್ಮಕವಾದ ಈ ಬ್ರಹ್ಮಾಂಡದಲ್ಲಿ ಹಿಂಸೆಗೆ ಸಮಾನವಾದ ಪಾತಕವು ಮತ್ತೊಂದಿಲ್ಲವು. ಪ್ರಾಣಿಹಿಂಸೆಯನ್ನು ಮಾಡಿದವನು ನರಕವನ್ನೂ ಹಿಂಸೆಮಾಡದವನು ಸ್ವರ್ಗವನ್ನೂ ಸೇರುವರು.

೯೯. ಶಾಸ್ತ್ರಗಳಲ್ಲಿ ಅನೇಕ ವಿಧಗಳಾದ ದಾನಗಳು ಹೇಳಲ್ಪಟ್ಟಿರುವುವು. ಆದರೆ ತುಚ್ಛಫಲವನ್ನು ಕೊಡುವ ಅವುಗಳಿಂದ ಲಭಿಸುವುದೇನು? ಅಭಯದಾನಕ್ಕೆ ಸದೃಶವಾದ ದಾನವು ಅವುಗಳಲ್ಲಿ ಬೇರೆಯಾವುದೂ ಇಲ್ಲವು.

೧೦೦. ಮಹಾಮುನಿವರ್ಯರೆಲ್ಲರೂ ನಾನಾವಿಧಗಳಾದ ಶಾಸ್ತ್ರಗಳನ್ನೆಲ್ಲ

ಭೀತೇಭ್ಯಶ್ಚಾಭಯಂ ದೇಯಂ ವ್ಯಾಧಿತೇಭ್ಯಸ್ತಥೌಷಧಂ ।
ದೇಯಾ ವಿದ್ಯಾರ್ಥಿನಾಂ ವಿದ್ಯಾಂ ದೇಯಮನ್ನಂ ಕ್ಷುಧಾತುರೇ ॥ ೧೦೧ ॥
ಅವಿಚಿಂತ್ಯ ಪ್ರಭಾವಂ ಹಿ ಮಣಿಮಂತ್ರೌಷಧೀಬಲಂ ।
ತದಭ್ಯಸ್ಯಂ ಪ್ರಯತ್ನೇನ ನಾನಾರ್ಥೋಪಾರ್ಜನಾಯ ವೈ ॥ ೧೦೨ ॥
ಅರ್ಥಾನುಪಾರ್ಜ್ಯ ಬಹುಶೋ ದ್ವಾದಶಾಯತನಾನಿ ವೈ ।
ಪರಿತಃ ಪರಿಪೂಜ್ಯಂತಿ ಕಿಮನ್ಯೈರಿಹ ಪೂಜಿತೈಃ ॥ ೧೦೩ ॥
ಪಂಚಕರ್ಮೇಂದ್ರಿಯಾಣ್ಯೇವ ಪಂಚಬುದ್ಧೀಂದ್ರಿಯಾಣಿ ಚ ।
ಮನೋ ಬುದ್ಧಿರಿಹ ಪ್ರೋಕ್ತಂ ದ್ವಾದಶಾಯತನಂ ಶುಭಂ ॥ ೧೦೪ ॥
ಇಹೈವ ಸ್ವರ್ಗನರಕೌ ಪ್ರಾಣಿನಾಂ ನಾನ್ಯತಃ ಕ್ವಚಿತ್ ।
ಸುಖಂ ಸ್ವರ್ಗಃ ಸಮಾಖ್ಯಾತೋ ದುಃಖಂ ನರಕ ಏವ ಹಿ ॥ ೧೦೫ ॥

---

ಕೂಲಂಕಷವಾಗಿ ವಿಚಾರಮಾಡಿ ಇಹಪರಗಳೆರಡರಲ್ಲಿಯೂ ಸುಖವನ್ನು ಕೊಡುವ ದಾನಗಳು ನಾಲ್ಕುಮಾತ್ರವೆಂದು ಹೇಳಿರುವರು.

೧೦೧. ಭಯಗೊಂಡು ಬಂದವನಿಗೆ ಅಭಯವನ್ನು ನೀಡಬೇಕು. ರೋಗಾರ್ತನಾದವನಿಗೆ ಉಚಿತೌಷಧವನ್ನು ದಾನಮಾಡಬೇಕು. ವಿದ್ಯಾರ್ಥಿಗಳಾಗಿ ಬಂದ ಶಿಷ್ಯರಿಗೆ ವಿದ್ಯೆಯನ್ನು ಕಲಿಸಿಕೊಡಬೇಕು. ಹಸಿದು ಬಂದವನಿಗೆ ಅನ್ನವನ್ನು ಸಮರ್ಪಿಸಬೇಕು.

೧೦೨. ಅನೇಕ ವಿಧಗಳಾದ ಐಶ್ವರ್ಯಗಳನ್ನು ಪಡೆಯಲು ಮನುಷ್ಯನು ಅಚಿಂತ್ಯಮಹಿಮೆಗಳಿಂದ ಕೂಡಿದ ಮಣಿ, ಮಂತ್ರ, ಓಷಧಿಗಳನ್ನು ಸ್ವಾಧೀನಪಡಿಸಿಕೊಳ್ಳುವ ವಿದ್ಯೆಗಳನ್ನು ಪ್ರಯತ್ನದಿಂದಲಾದರೂ ಅಭ್ಯಾಸಮಾಡಬೇಕು.

೧೦೩. ಅವುಗಳಿಂದ ಬಹುವಿಧಗಳಾದ ಐಶ್ವರ್ಯಗಳನ್ನು ಸಂಪಾದಿಸಿ ದ್ವಾದಶಾಯತನಗಳೆನಿಸಿದ ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗಳನ್ನು ಸರ್ವಪ್ರಕಾರಗಳಿಂದಲೂ ತೃಪ್ತಿಗೊಳಿಸಲು ಪ್ರಯತ್ನಿಸಬೇಕು. ಮಹೇಶ್ವರನೇ ಮುಂತಾದ ಇತರ ದೇವತೆಗಳನ್ನು ಸಂತೋಷಗೊಳಿಸುವುದರಿಂದ ಏನು ಲಭಿಸುವುದು ?

೧೦೪. ವಾಕ್ಪಾಣಿಪಾದಪಾಯೂಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು, ಶ್ರೋತ್ರತ್ವಗಕ್ಷಿರಸನಘ್ರಾಣಗಳೆಂಬ ಐದು ಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗಳಿಗೇ ಇಲ್ಲಿ ಸಂತೋಷಪ್ರದವಾದ ದ್ವಾದಶಾಯತನವೆಂಬ ಹೆಸರಾಗಿರುವುದು.

೧೦೫. ಪ್ರಾಣಿಗಳಿಗೆ ಸ್ವರ್ಗನರಕಗಳು ಇಲ್ಲಿಯೇ ಇರುವುವಲ್ಲದೆ ಸ್ಥಳಾಂತರಗಳಲ್ಲೆಲ್ಲಿಯೂ ಇಲ್ಲವು. ಇಂದ್ರಿಯಾದಿಗಳಿಂದುಂಟಾಗುವ ಸುಖವೇ ಸ್ವರ್ಗವೆಂದೂ ದುಃಖವೇ ನರಕವೆಂದೂ ಕರೆಯಲ್ಪಡುವುವು.

ಸುಖೇಷು ಭುಜ್ಯಮಾನೇಷು ಯತ್ಸ್ಯಾದ್ದೇಹವಿಸರ್ಜನಂ ।
ಅಯಮೇವ ಪರೋ ಮೋಕ್ಷೋ ನ ಮೋಕ್ಷೋಽನ್ಯಃ ಕ್ವಚಿತ್ಪುನಃ ॥
ವಾಸನಾಸಹಿತಕ್ಲೇಶಸ್ಸಮುಚ್ಛೇದೇ ಸತಿ ಧ್ರುವಂ ।
ವಿಜ್ಞಾನೋ ಪರಮೋ ಮೋಕ್ಷೋ ವಿಜ್ಞೇಯಸ್ತತ್ತ್ವಚಿಂತಕೈಃ ॥ ೧೦೭ ॥
ಪ್ರಾಮಾಣಿಕೀ ಶ್ರುತಿರಿಯಂ ಪ್ರೋಚ್ಯತೇ ವೇದವಾದಿಭಿಃ ।
ನ ಹಿಂಸ್ಯಾತ್ಸರ್ವಭೂತಾನಿ ನಾನ್ಯಾ ಹಿಂಸಾ ಪ್ರವರ್ತಿಕಾ ॥ ೧೦೮ ॥
ಅಗ್ನೀಷೋಮೀಯಮಿತಿ ಯಾ ಭ್ರಾಮಿಕಾ ಸಾಽಸತಾಮಿಹ ।
ನ ಸಾ ಪ್ರಮಾಣಂ ಜ್ಞಾತೄಣಾಂ ಪಶ್ವಾಲಂಬನಕಾರಿಕಾ ॥ ೧೦೯ ॥
ವೃಕ್ಷಾಂಶ್ಛಿತ್ವಾ ಪಶೂನ್ಹತ್ವಾ ಕೃತ್ವಾ ರುಧಿರಕರ್ದಮಂ ।
ದಗ್ಧ್ವಾ ವಹ್ನೌ ತಿಲಾಜ್ಯಾದಿ ಚಿತ್ರಂ ಸ್ವರ್ಗೋಽಭಿಲಷ್ಯತೇ ॥ ೧೧೦ ॥
ಇತ್ಯೇವಂ ಧರ್ಮಜಿಜ್ಞಾಸಾಂ ಪುಣ್ಯಕೀರ್ತೌ ಪ್ರಕುರ್ವತಿ ।
ಪಾರಂಪರ್ಯೇಣ ತಚ್ಛ್ರುತ್ವಾ ಪೌರಾ ಯಾತ್ರಾಂ ಪ್ರಚಕ್ರಿರೇ ॥ ೧೧೧ ॥

---

೧೦೬. ಸುಖಗಳನ್ನೇ ಅನುಭವಿಸುತ್ತ ಈ ದೇಹವನ್ನು ಬಿಟ್ಟುಬಿಡುವುದೇ ಪರಾತ್ಪರವಾದ ಮೋಕ್ಷವೆನಿಸುವುದು. ಇದನ್ನುಳಿದು ಮತ್ತೆಲ್ಲಿಯೂ ಬೇರೆ ಮೋಕ್ಷವೆಂಬ ಅವಸ್ಥಾಂತರವಿಲ್ಲ.

೧೦೭. ಸಂಸಾರದಶೆಗೆ ಕಾರಣವಾದ ಸಂಸ್ಕೃತಿಯು ಸಹಿತಗಳಾದ ಅವಿದ್ಯೆ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಕ್ಲೇಶಗಳನ್ನು ನಿರ್ಮೂಲಗೊಳಿಸಲು ಸಮಸ್ತವಿಶೇಷ ಜ್ಞಾನವೂ ನಾಶವಾಗುವ ಶೂನ್ಯಸ್ಥಿತಿಯನ್ನೇ ತತ್ತ್ವಜ್ಞಾನಿಗಳಾದವರು ಮೋಕ್ಷವೆಂದು ತಿಳಿದಿರುವರು.

೧೦೮. ವೇದವಾದಿಗಳೂ ಕೂಡ "ಯಾವ ಪ್ರಾಣಿಗಳನ್ನೂ ಹಿಂಸೆಮಾಡಬಾರದು" ಎಂಬುದಾಗಿ ವೇದವಚನವನ್ನು ಪ್ರಮಾಣವನ್ನಾಗಿ ಹೇಳುತ್ತಿರುವರು. ಮನುಷ್ಯನನ್ನು ಹಿಂಸಾಕೃತ್ಯಗಳಲ್ಲಿ ಪ್ರೇರೇಪಿಸುವ ಮತ್ತೊಂದು ವಾಕ್ಯವೂ ವೇದಗಳಲ್ಲಿಲ್ಲ.

೧೦೯. "ಅಗ್ನೀಷೋಮೀಯಪಶುವನ್ನು ಕೊಲ್ಲಬೇಕು" ಮುಂತಾದ ವಾಕ್ಯಗಳು ದುಷ್ಟಜನರನ್ನು ಭ್ರಾಂತಿಗೊಳಿಸುವುದಕ್ಕಾಗಿಯೇ ಬರೆಯಲ್ಪಟ್ಟವುಗಳು. ಪಶುಹಿಂಸೆಗಳಲ್ಲಿ ಪ್ರೇರೇಪಿಸುವ ಆ ವಾಕ್ಯಗಳು ಪಂಡಿತರಾದವರಿಗೆ ಪ್ರಮಾಣಗಳಾಗಲಾರವು.

೧೧೦. ಮರಗಳನ್ನು ಕಡಿದುಹಾಕಿ, ಪಶುಗಳನ್ನು ಕೊಂದು, ರಕ್ತಮಾಂಸಗಳ ಕೆಸರನ್ನುಮಾಡಿ, ಅಗ್ನಿಯಲ್ಲಿ ಎಳ್ಳು, ತುಪ್ಪಗಳೇ ಮುಂತಾದ ಪದಾರ್ಥಗಳನ್ನು ಸುಟ್ಟು, ಸ್ವರ್ಗವನ್ನು ಅಪೇಕ್ಷಿಸುವುದು ನಮಗೆ ಅತ್ಯಂತಾಶ್ಚರ್ಯವನ್ನುಂಟುಮಾಡುತ್ತಿರುವುದು.

೧೧೧. ಈ ವಿಧವಾಗಿ ಪುಣ್ಯಕೀರ್ತಿಯು ಧರ್ಮಜಿಜ್ಞಾಸೆಯನ್ನು ನಡೆಸು

ಪರಿವ್ರಾಜಿಕಯಾಪ್ಯೇವಂ ಸಮಾಪೃಷ್ಟಾಃ ಪುರಾಂಗನಾಃ ।
ತಯಾ ವಿಜ್ಞಾನಕೌಮುದ್ಯಾ ಸರ್ವವಿದ್ಯಾವಿದಗ್ಧಯಾ ॥ ೧೧೨ ॥
ತತಸ್ತಾಸಾಂ ಪುರಸ್ತಾತ್ಸಾ ಬೌದ್ಧಧರ್ಮಾನವೀವದತ್ ।
ದೃಷ್ಟಾರ್ಥಪ್ರತ್ಯಯಕರಾನ್ದೇಹಸೌಖ್ಯೈಕಸಾಧನಾನ್ ॥ ೧೧೩ ॥

ವಿಜ್ಞಾನಕೌಮುದ್ಯುವಾಚ :—

ಆನಂದಂ ಬ್ರಹ್ಮಣೋ ರೂಪಂ ಶ್ರುತ್ಯೈವಂ ಯನ್ನಿಗದ್ಯತೇ ।
ತತ್ತಥೈವೇಹ ಮಂತವ್ಯಂ ಮಿಥ್ಯಾ ನಾನಾತ್ಮಕಲ್ಪನಾ ॥ ೧೧೪ ॥
ಯಾವತ್ಸ್ವಸ್ಥಮಿದಂ ವರ್ಷ್ಮ ಯಾವನ್ನೇಂದ್ರಿಯವಿಕ್ಲವಃ ।
ಯಾವಜ್ಜರಾ ಚ ದೂರೋಽಸ್ತಿ ತಾವತ್ಸೌಖ್ಯಂ ಪ್ರಸಾಧಯೇತ್ ॥ ೧೧೫ ॥
ಅಸ್ವಾಸ್ಥ್ಯೇಂದ್ರಿಯವೈಕಲ್ಯೇ ವಾರ್ಧಕೇ ತು ಕುತಃ ಸುಖಂ ।
ಶರೀರಮಪಿ ದಾತವ್ಯಮರ್ಥಿಭ್ಯೋಽತಃ ಸುಖೇಪ್ಸುಭಿಃ ॥ ೧೧೬ ॥

---

ತ್ತಿರಲು ಆ ವಿಷಯವನ್ನು ಕರ್ಣಾಕರ್ಣಿಯಾಗಿ ಕೇಳಿ ಕಾಶೀನಗರದ ಜನರೂ ಆ ಉಪದೇಶಗಳನ್ನು ಕೇಳಲು ಅಲ್ಲಿಗೆ ಯಾತ್ರೆಗಳನ್ನು ಮಾಡತೊಡಗಿದರು.

೧೧೨. ಹೀಗೆಯೇ ಆ ಭಿಕ್ಷಿಣಿಯೂ ಪಟ್ಟಣದ ಸ್ತ್ರೀಯರನ್ನೆಲ್ಲ ತನ್ನ ಮಾತುಗಳಿಂದ ಆಕರ್ಷಿಸುತ್ತಿದ್ದಳು. ಅವಳು ವಿಜ್ಞಾನದಲ್ಲಿ ಚಂದ್ರನಂತೆ ಆಹ್ಲಾದಕರಳೂ, ಸಕಲ ವಿದ್ಯೆಗಳಲ್ಲಿ ಪಾರಂಗತಳೂ ಆಗಿದ್ದಳು.

೧೧೩. ಆ ಪುರಸ್ತ್ರೀಯರ ಸಮ್ಮುಖದಲ್ಲಿ ಆಕೆಯೂ ಇಂದ್ರಿಯಗೋಚರ ಗಳಾದ ವಿಷಯುಗಳೇ ಪರಮಾರ್ಥಗಳೆಂದೂ ದೇಹದ ಸೌಖ್ಯವನ್ನು ಸಾಧಿಸುವುದೇ ಪರಮಪ್ರಯೋಜನವೆಂದೂ ಹೇಳುವ ಬೌದ್ಧಧರ್ಮಗಳನ್ನೇ ಅನುವಾದಮಾಡು ತ್ತಿದ್ದಳು.

೧೧೪. ವಿಜ್ಞಾನಕೌಮುದಿಯು ಹೇಳುತ್ತಾಳೆ:—ಆನಂದವೇ ಬ್ರಹ್ಮನ ಸ್ವರೂಪವೆಂದು ವೇದಗಳಲ್ಲಿ ಹೇಳಿದೆಯಲ್ಲವೆ. ಇದೇ ನಿಜವೆಂದು ಎಲ್ಲರೂ ತಿಳಿದುಕೊಳ್ಳಬೇಕು. ಜೀವನಾನಾತ್ವಾದಿ ಕಲ್ಪನೆಯೂ ಜನನಮರಣರೂಪವಾದ ಸಂಸಾರವೂ ಕೇವಲ ಔಪಾಧಿಕವಾದುದರಿಂದ ಮಿಥ್ಯೆಯಾಗಿರುವುದು.

೧೧೫. ಈ ಶರೀರವು ಎಲ್ಲಿಯವರೆಗೆ ನಿರುಪದ್ರವವಾಗಿರುವುದೊ, ಎಲ್ಲಿಯ ವರೆಗೆ ಇಂದ್ರಿಯಗಳು ಶಿಥಿಲಗಳಾಗುವುದಿಲ್ಲವೊ, ಎಲ್ಲಿಯವರೆಗೆ ಮುಪ್ಪು ದೂರದಲ್ಲಿಯೇ ಇರುವುದೊ, ಅಷ್ಟರಲ್ಲಿಯೇ ಸೌಖ್ಯವನ್ನು ಸಾಧಿಸಿಕೊಳ್ಳಬೇಕು.

೧೧೬. ದೇಹವ್ಯಾಧಿ, ಇಂದ್ರಿಯಶೈಥಿಲ್ಯ ಮತ್ತು ವಾರ್ಧಕ್ಯಗಳು ಸಂಭ ವಿಸಿದಾಗ ಹೇಗೆ ಸುಖವನ್ನನುಭವಿಸಬಹುದು? ಆದುದರಿಂದ ಸುಖದಲ್ಲಿ ಅಭಿ ಲಾಷೆಯುಳ್ಳವರು ಯಾಚಕರಿಗೆ ತಮ್ಮ ದೇಹವನ್ನೂ ಸಹ ದಾನಮಾಡಬೇಕು.

ಯಾಚಮಾನಮನೋವೃತ್ತಿಪ್ರೀಣನೇ ಯಸ್ಯ ನೋ ಜನಿಃ ।
ತೇನ ಭೂರ್ಭಾರವತ್ಯೇಷಾ ಸಮುದ್ರಾಗದ್ರುಮೈರ್ನ ಹಿ ॥ ೧೧೭ ॥
ಸತ್ವರೋಗತ್ವರೋ ದೇಹಃ ಸಂಚಯಾಃ ಸಪರಿಕ್ಷಯಾಃ ।
ಇತಿ ವಿಜ್ಞಾಯ ವಿಜ್ಞಾತಾ ದೇಹೇ ಸೌಖ್ಯಂ ಪ್ರಸಾದಯೇತ್ ॥ ೧೧೮ ॥
ಶ್ವವಾಯಸಕೃಮೀಣಾಂ ಚ ಪ್ರಾಂತೇ ಭೋಜ್ಯಮಿದಂ ವಪುಃ ।
ಭಸ್ಮಾಂತಂ ತಚ್ಛರೀರಂ ಚ ವೇದೇ ಸತ್ಯಂ ಪ್ರಪದ್ಯತೇ ॥ ೧೧೯ ॥
ಮುಧಾ ಜಾತಿವಿಕಲ್ಪೋಽಯಂ ಲೋಕೇಷು ಪರಿಕಲ್ಪ್ಯತೇ ।
ಮಾನುಷ್ಯೇ ಸತಿ ಸಾಮಾನ್ಯೇ ಕೋಽಧಮಃ ಕೋಽಥ ಚೋತ್ತಮಃ॥೧೨೦॥
ಬ್ರಹ್ಮಾದಿಸೃಷ್ಟಿರೇಷೇತಿ ಪ್ರೋಚ್ಯತೇ ವೃದ್ಧಪೂರುಷೈಃ ।
ತಸ್ಯ ಸ್ರಷ್ಟುಃ ಸುತೌ ದಕ್ಷಮರೀಚೀ ಚೇತಿ ವಿಶ್ರುತೌ ॥ ೧೨೧ ॥
ಮರೀಚಿನಾ ಕಶ್ಯಪೇನ ದಕ್ಷಕನ್ಯಾಃ ಸುಲೋಚನಾಃ ।
ಧರ್ಮ್ಯೇಣ ಕಿಲ ಮಾರ್ಗೇಣ ಪರಿಣೀತಾಸ್ತ್ರಯೋದಶ ॥ ೧೨೨ ॥

---

೧೧೭. ಯಾಚಿಸುವವರ ಮನಸ್ಸಿನ ಕೋರಿಕೆಗಳನ್ನು ಪೂರ್ತಿಗೊಳಿಸುವುದಕ್ಕಾಗಿಯೇ ಯಾವನ ಜನನವಾಗಿಲ್ಲವೊ, ಅವನೇ ಭೂಮಿಗೆ ಭಾರಪ್ರಾಯನೇ ಹೊರತು ಸಮುದ್ರಗಳೂ, ಪರ್ವತಗಳೂ ಮಹಾವೃಕ್ಷಗಳೂ ಭಾರವಾಗಲಾರವು.

೧೧೮. ಈ ದೇಹವು ಜರಾವ್ಯಾಧಿಗಳೆಂಬ ಪರಿಣಾಮಗಳುಳ್ಳದ್ದಾಗಿರುವುದು. ಸಂಪಾದಿಸಿದ ಪದಾರ್ಥಗಳೆಲ್ಲವೂ ನಾಶಸಹಿತಗಳೇ ಆಗಿರುವುವು. ಇಂತೆಂದು ಮೇಧಾವಿಯಾದ ಮನುಷ್ಯನು ಚೆನ್ನಾಗಿ ತಿಳಿದುಕೊಂಡು ದೇಹವು ದೃಢವಾಗಿರುವಾಗಲೇ ಸೌಖ್ಯವನ್ನು ಸಾಧಿಸಬೇಕು.

೧೧೯. ಶರೀರವು ಕೊನೆಯಲ್ಲಿ ನಾಯಿಗಳಿಗೊ, ವಾಯಸಗೃಧ್ರಗಳಿಗೊ, ಭೋಜನಸಾಮಗ್ರಿಯಾಗುವುದು. ಶರೀರವು ಭಸ್ಮಾಂತವಾದುದೆಂಬುದಾಗಿ ವೇದಗಳಲ್ಲಿ ಹೇಳಿರುವ ವಾಕ್ಯವು ಸತ್ಯವೇ ಆಗಿರುವುದು.

೧೨೦. ಲೋಕದಲ್ಲಿ ಜಾತ್ಯಾದಿಗಳ ವಿಭಾಗವನ್ನಂಗೀಕರಿಸಿ ಜನರನ್ನು ಉಚ್ಚನೀಚರೆಂಬ ಭೇದಬುದ್ಧಿಯಿಂದ ಕಾಣುವುದು ವ್ಯರ್ಥವೇ ಸರಿ, ಎಲ್ಲರಿಗೂ ಮನುಷ್ಯಜಾತಿಯೊಂದೇ ಸಾಧಾರಣವಾಗಿರಲು ಅಧಮನು ಯಾರು? ಉತ್ತಮನು ಯಾರು ?

೧೨೧. ವೃದ್ಧರಾದ ಜ್ಞಾನಿಗಳು ಈ ಜಗತ್ತೆಲ್ಲವೂ ಬ್ರಹ್ಮಾದಿದೇವತೆಗಳು ಮಾಡಿದ ಸೃಷ್ಟಿಯೆಂದು ಹೇಳುವರು. ಸೃಷ್ಟಿಕರ್ತನಾದ ಆ ಚತುರ್ಮುಖನ ಮಕ್ಕಳೇ ದಕ್ಷನು ಮತ್ತು ಮರೀಚಿಯೆಂಬುದಾಗಿಯೂ ಕೇಳಿರುವೆವು.

೧೨೨. ಮರೀಚಿ, ಕಾಶ್ಯಪರಿಬ್ಬರೂ ಸುಂದರಿಯರಾದ ದಕ್ಷಬ್ರಹ್ಮನ ಹದಿಮೂರು ಕನ್ಯೆಯರನ್ನು ಧರ್ಮಾನುಸಾರವಾದ ಕ್ರಮದಿಂದ ಮದುವೆಯಾದರಷ್ಟೆ!

ಅಪೀದಾನೀಂತನೈರ್ಮರ್ತ್ಯೈರಲ್ಪಬುದ್ಧಿಪರಾಕ್ರಮೈಃ ।
ಅಯಂ ಗಮ್ಯಸ್ತ್ವಗಮ್ಯೋಽಯಂ ವಿಚಾರಃ ಕ್ರಿಯತೇ ಮುಧಾ ॥ ೧೨೩ ॥
ಸುಖಬಾಹೂರುಪಜ್ಜಾನಂ ತಂ ಚಾತುರ್ವರ್ಣ್ಯಮಿಹೋದಿತಂ ।
ಕಲ್ಪನೇಯಂ ಕೃತಾ ಪೂರ್ವೈರ್ನ ಘಟೇತ ವಿಚಾರತಃ ॥ ೧೨೪ ॥
ಏಕಸ್ಯಾಂ ಚ ತನೌ ಜಾತಾ ಏಕಸ್ಮಾದ್ಯದಿ ವಾ ಕ್ವಚಿತ್ ।
ಚತ್ವಾರಸ್ತನಯಾಸ್ತತ್ಕಿಂ ಭಿನ್ನವರ್ಣತ್ವಮಾಪ್ನುಯುಃ ॥ ೧೨೫ ॥
ವರ್ಣಾವರ್ಣವಿವೇಕೋಽಯಂ ತಸ್ಮಾನ್ನ ಪ್ರತಿಭಾಸತೇ ।
ಅತೋ ಭೇದೋ ನ ಮಂತವ್ಯೋ ಮಾನುಷ್ಯೇ ಕೇನಚಿತ್ಕ್ವಚಿತ್ ॥ ೧೨೬ ॥
ವಿಜ್ಞಾನಕೌಮುದೀವಾಣೀಮಿತ್ಯಾಕರ್ಣ್ಯ ಪುರಾಂಗನಾಃ ।
ಭರ್ತೃಶುಶ್ರೂಷಣವತೀಂ ನಿಜಹುರ್ಮತಿಮುತ್ತಮಾಂ ॥ ೧೨೭ ॥

---

೧೨೩. ಮಹಾಬುದ್ಧಿಗಳೂ ಬ್ರಹ್ಮನಿಗೆ ಸಮಾನರೂ ಆದ ಇವರಲ್ಲಿಯೇ ಇಂತು ಭ್ರಾತೃಕನ್ಯಾ-ಪಿತೃವ್ಯರ ವಿವಾಹಗಳು ನಡೆದಿರಲು ಈ ಕಾಲದಲ್ಲಿ ಅಲ್ಪ ಬುದ್ಧಿಪರಾಕ್ರಮವಂತರಾದ ಮನುಷ್ಯರು "ಇವನು ಸಂಬಂಧಕ್ಕೆ ಯೋಗ್ಯನು, ಇವನು ಅಯೋಗ್ಯನು" ಎಂಬುದಾಗಿ ವಿಚಾರಮಾಡುವುದು ನಿಷ್ಪ್ರಯೋಜನವೇ ಸರಿ.

೧೨೪. ವಿರಾಟ್ಪುರುಷನ ಮುಖದಿಂದ ಬ್ರಾಹ್ಮಣರೂ, ಬಾಹುಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಹುಟ್ಟಿದ ರೆಂಬುದಾಗಿ ವೇದಗಳಲ್ಲಿ ಚಾತುರ್ವರ್ಣ್ಯವನ್ನು ವಿವರಿಸಿರುವರು. ವಿಚಾರಮಾಡಿ ನೋಡಲು ಹಿಂದಿನವರ ಕಲ್ಪನೆಯೆಂದು ಇವನ್ನು ಕರೆಯಬೇಕೇ ಹೊರತು ಎಂದಿಗೂ ಸಮಂಜಸವಾಗಲಾರದು.

೧೨೫. ಒಂದು ಶರೀರದಲ್ಲಿಯೇ ಹುಟ್ಟಿದವರಲ್ಲಿಯಾಗಲಿ, ಒಬ್ಬ ತಂದೆ ಯಿಂದಲೇ ಹುಟ್ಟಿದವರಲ್ಲಿಯಾಗಲಿ, ನಾಲ್ಕು ಮಕ್ಕಳುಗಳಿರಲು ಅವರು ಬೇರೆ ವರ್ಣಗಳವರೆಂದು ಹೇಗೆ ಹೇಳಬಹುದು?

೧೨೬. ಆದುದರಿಂದ ಈ ವರ್ಣ, ವರ್ಣಬಾಹಿರರೆಂಬಿವೇ ಮೊದಲಾದ ವಿಭಾಗವು ಸಮಂಜಸವಾಗಿ ತೋರುವುದಿಲ್ಲ. ಆದುದರಿಂದ ಸಕಲರನ್ನೂ ಒಂದು ಮನುಷ್ಯಜಾತಿಯವರೆಂದೇ ಸಾಮಾನ್ಯವಾಗಿ ತಿಳಿಯಬೇಕೇ ಹೊರತು ಭೇದ ಬುದ್ಧಿಯನ್ನು ಮಾಡಬಾರದು.

೧೨೭. ಇಂತು ವಿಜ್ಞಾನಕೌಮುದಿಯ ಈ ವಿಧವಾದ ಮಾತುಗಳನ್ನು ಕೇಳಿ ಗಂಡನ ಶುಶ್ರೂಷೆಯಲ್ಲಿಯೇ ನಿರತರಾಗಿದ್ದ ಆ ಪುರಸ್ತ್ರೀಯರೆಲ್ಲರೂ ತಮ್ಮ ಪೂರ್ವದ ಉತ್ತಮವಾದ ಆಸ್ತಿಕ್ಯಬುದ್ಧಿಯನ್ನು ತ್ಯಜಿಸಿದರು.

ಅಭ್ಯಾಸ್ಯಾಕರ್ಷಣೀಂ ವಿದ್ಯಾಂ ವಶೀಕೃತಿಮತೀಮಪಿ ।
ಪುರುಷಾಃ ಸಫಲೀಚಕ್ರುಃ ಪರದಾರೇಷು ಮೋಹಿತಾಃ ॥ ೧೨೮ ॥
ಅಂತಃಪುರಚರಾ ನಾರ್ಯಸ್ತಥಾ ರಾಜಕುಮಾರಕಾಃ ।
ಪೌರಾಃ ಪುರಾಂಗನಾಃಶ್ಚಾಪಿ ಸರ್ವೇ ತಾಭ್ಯಾಂ ವಿಮೋಹಿತಾಃ ॥ ೧೨೯ ॥
ವಂಧ್ಯಾನಾಂ ಚಾಪಿ ವಂಧ್ಯಾತ್ವಂ ಸಾ ಪರಿವ್ರಾಜಿಕಾ ಹರತ್ ।
ತೈಸ್ತೈಶ್ಚ ಕರ್ಮಣೋಪಾಯೈರಸೌ ಭಾಗ್ಯವತೀಃ ಸ್ತ್ರಿಯಃ ॥ ೧೩೦ ॥
ಸೌಭಾಗ್ಯಭಾಗ್ಯಸಂಪನ್ನಾ ವ್ಯಧಾದ್ವಿಜ್ಞಾನಕೌಮುದೀ ।
ಕಸ್ಯೈಚಿದಂಜನಂ ದತ್ತಂ ಕಸ್ಯೈಚಿತ್ತಿಲಕೌಷಧಂ ॥ ೧೩೧ ॥
ವಶೀಕರಣಮಂತ್ರೈಶ್ಚ ತಥಾ ಬಹ್ವ್ಯೋಽಪಿ ದೀಕ್ಷಿತಾಃ ।
ಮಂತ್ರಾಂಜಪೇಯುಃ ಕಾಶ್ಚಿಚ್ಚ ಯಂತ್ರಾಣ್ಯಾಲಿಖಂತಿ ಚ ॥ ೧೩೨ ॥
ಕಾಶ್ಚಿಜ್ಜುಹ್ವತಿ ಕುಂಡಾಗ್ನೌ ನಾನಾದ್ರವ್ಯಾಣಿ ನಿಶ್ಚಲಾಃ ।
ಏವಂ ಸರ್ವೇಷು ಪೌರೇಷು ನಿಜಧರ್ಮೇಷು ಸರ್ವಥಾ ।
ಪರಾಙ್ಮುಖೇಷು ಜಾತೇಷು ಪ್ರೋಲ್ಲಲಾಸ ವೃಷೇತರಃ ॥ ೧೩೩ ॥

---

೧೨೮. ಆ ಬೌದ್ಧಸನ್ಯಾಸಿಯಿಂದ ಆಕರ್ಷಣ ವಿದ್ಯೆಯನ್ನು ವಶೀಕರಣ ಬುದ್ಧಿಯನ್ನೂ ತಿಳಿದು ಆ ನಗರದ ಪುರುಷರೆಲ್ಲರೂ ಪರಸ್ತ್ರೀಯರಲ್ಲಿ ಮೋಹಿತ ರಾಗಿ ತಮ್ಮ ವಿದ್ಯೆಯ ಅಭ್ಯಾಸವನ್ನು ಸಫಲಮಾಡಿಕೊಂಡರು.

೧೨೯. ಅಂತಃಪುರಗಳೊಳಗೇ ಸ್ತ್ರೀಯರು, ರಾಜಪುತ್ರರು, ಪುರಜನರಲ್ಲಿ ಪುರುಷರು, ಸ್ತ್ರೀಯರು—ಎಲ್ಲರೂ ಈ ಎರಡು ವಿದ್ಯೆಗಳಿಂದ ಮೋಹಿತರಾಗಿ ಪರಸ್ಪರ ಸಂಬಂಧಗಳನ್ನು ಜಾತಿಕುಲಭೇದಗಳಿಲ್ಲದೆ ನಡೆಸುತ್ತಿದ್ದರು.

೧೩೦–೧೩೧. ಆ ಭಿಕ್ಷುಣಿಯು ಬಂಜೆಯರ ಬಂಜೆತನವನ್ನೂ ಹೋಗ ಲಾಡಿಸಿದಳು. ತಮ್ಮ ಪುರುಷರೊಂದಿಗೆ ಸೌಹಾರ್ದವಿಲ್ಲದೆ ಕ್ಲೇಶಪಡುತ್ತಿದ್ದ ಸ್ತ್ರೀಯರಿಗೆಲ್ಲ ಉಚಿತ ಕರ್ಮಗಳಿಂದಲೂ ಉಪಾಯಗಳಿಂದಲೂ, ಆ ವಿಜ್ಞಾನ ಕೌಮುದಿಯು ಸೌಭಾಗ್ಯವೆಂಬ ಭಾಗ್ಯವನ್ನು ಒದಗಿಸಿಕೊಟ್ಟಳು. ಒಬ್ಬಳಿಗೆ ಅಂಜನವನ್ನು ಕೊಟ್ಟಳು. ಮತ್ತೊಬ್ಬಳಿಗೆ ತಿಲಕವನ್ನಿಡಲು ಔಷಧವೊಂದನ್ನು ಕೊಟ್ಟಳು.

೧೩೨. ವಶೀಕರಣ ಮಂತ್ರಗಳನ್ನುಪದೇಶಿಸಿ ಅನೇಕ ಸ್ತ್ರೀಯರನ್ನು ಅವು ಗಳಲ್ಲಿಯೇ ದೀಕ್ಷೆಗೊಳ್ಳುವಂತೆ ಮಾಡಿದಳು. ಕೆಲವರು ಮಂತ್ರಗಳನ್ನು ಜಪಿಸು ತ್ತಿದ್ದರು. ಕೆಲವರು ಯಂತ್ರಗಳನ್ನು ಬರೆಯುತ್ತಿದ್ದರು.

೧೩೩. ಕೆಲಮಂದಿ ಸ್ತ್ರೀಯರು ನಿಶ್ಚಲಮನಸ್ಸಿನಿಂದ ಹೋಮಕುಂಡದ ಅಗ್ನಿಯಲ್ಲಿ ಹೋಮಗಳನ್ನು ಮಾಡುತ್ತಿದ್ದರು. ಈ ರೀತಿಯಾಗಿ ಕಾಶೀನಗರದ ಸಕಲ ಜನರೂ ಸರ್ವಪ್ರಕಾರದಿಂದಲೂ ತಮ್ಮ ತಮ್ಮ ವರ್ಣಾಶ್ರಮಧರ್ಮ

ಸಿದ್ಧಯೋ ಕೃಷ್ಟಪಚ್ಯಾದ್ಯಾ ಸಪ್ಪಾ ಏನಃಪ್ರವೇಶನಾತ್ ।
ಆಸೀತ್ಕುಂಠಿತಸಾಮರ್ಥ್ಯೋ ನೃಪೋಽಪಿ ಸ ಮಹಾಜನ್ಮಹಾಕ್ ॥೧೩೪॥
ದೂರಸ್ಥಿತೋಽಪಿ ವಿಘ್ನೇಶೋ ನೃಪಂ ನಿರ್ವಿಣ್ಣಮಾನಸಂ ।
ಚಕಾರ ರಾಜ್ಯಕರಣೇ ಢುಂಢಿರಾಜೋ ರಿಪುಂಜಯಂ ॥ ೧೩೫ ॥
ಅಜೀಗಣಾದ್ದಿವೋದಾಸೋಽಷ್ಟಾದಶದಿನಾವಧಿಂ ।
ಕದಾ ಗಂತಾ ಸ ವೈ ವಿಪ್ರೋ ಯೋ ಮಾಂ ಸಮುಪದೇಕ್ಷ್ಯತಿ ॥ ೧೩೬ ॥
ಇತ್ಥಮಷ್ಟಾದಶೇ ಪ್ರಾಪ್ತೇ ದಿವಸೇ ದಿವಸೇಶ್ವರೇ ।
ಪ್ರಾಪ್ತೇ ಮಧ್ಯಂ ನಭೋ ಭಾಗಂ ದ್ವಾರಂ ಪ್ರಾಪ್ತೋ ದ್ವಿಜೋತ್ತಮಃ ॥
ಸ ಏವ ಪುಣ್ಯಕೀರ್ತ್ಯಾಖ್ಯೋ ಧರ್ಮಕ್ಷೇತ್ರಾದಧೋಕ್ಷಜಃ ।
ದ್ವಿಜವೇಷಂ ಸಮಾಲಂಬ್ಯ ಸಮಾಯಾತೋ ನೃಪಾಂತಿಕಂ ॥ ೧೩೮ ॥
ದ್ವಿತ್ರೈಃ ಪವಿತ್ರೈರ್ಬಹುಧಾ ಜಯಜೀವೇತಿ ವಾದಿಭಿಃ ।
ಸಮೇತಃ ಸ ಇತೋ ವಿಪ್ರೋ ಮೂರ್ತಿಮಾನಿವ ಪಾವಕಃ ॥ ೧೩೯ ॥

---

ಗಳನ್ನು ಬಿಟ್ಟು ಆಸ್ತಿಕ್ಯಪರಾಙ್ಮುಖರಾಗಲು ಅಧರ್ಮವು ಎಲ್ಲೆಲ್ಲಿಯೂ ವೃದ್ಧಿಯಾಗತೊಡಗಿತು.

೧೩೪. ಪಾಪದ ಪ್ರವೇಶದಿಂದ ವ್ಯವಸಾಯೋತ್ಪನ್ನಗಳಾದ ಸಕಲ ಧಾನ್ಯಗಳ ಸಿದ್ಧಿಗಳೂ ನಾಶವಾದುವು. ಮಹಾಜನರೂ ಸಹ ಮೆಲ್ಲಮೆಲ್ಲಗೆ ಕ್ರಮವಾಗಿ ಸಾಮರ್ಥ್ಯವಿಲ್ಲದವರಾಗುತ್ತ ಬಂದರು.

೧೩೫. ವಿಘ್ನೇಶ್ವರನಾದ ಢುಂಢಿರಾಜನು ದೂರದಲ್ಲಿದ್ದರೂ ಶತ್ರುಸಂಹಾರಕನಾಗಿದ್ದ ಆ ರಾಜನಿಗೆ ರಾಜ್ಯಾಧಿಕಾರದಲ್ಲಿ ವೈರಾಗ್ಯವುಂಟಾಗುವಂತೆ ಮನಸ್ಸಿನಲ್ಲಿ ಬದಲಾವಣೆಯನ್ನು ಮಾಡುತ್ತಿದ್ದನು.

೧೩೬. ದಿವೋದಾಸನೂ ಸಹ "ನನಗೆ ಉತ್ತಮೋಪದೇಶವನ್ನು ಮಾಡುವ ಆ ಬ್ರಾಹ್ಮಣಶ್ರೇಷ್ಠನು ಯಾವಾಗ ಬರುವನೊ" ಎಂಬ ಯೋಚನೆಯನ್ನೇ ಮಾಡುತ್ತ ವಿಘ್ನೇಶ್ವರನು ಹೋದದಿವಸದಿಂದ ಹದಿನೆಂಟುದಿವಸದ ಅವಧಿಯನ್ನು ಕಾಯುತ್ತಿದ್ದನು.

೧೩೭. ಇಂತು ಹದಿನೆಂಟನೆಯ ದಿವಸವು ಪ್ರಾಪ್ತವಾಗಿ ಸೂರ್ಯನು ತಲೆಯಮೇಲಕ್ಕೆ ಬರುವ ಮಧ್ಯಾಹ್ನ ಸಮಯವಾಗಲು ಆ ರಾಜನ ಅರಮನೆಯ ಬಾಗಿಲಿನಲ್ಲಿ ಒಬ್ಬ ಬ್ರಾಹ್ಮಣೋತ್ತಮನು ಬಂದು ನಿಂತನು.

೧೩೮. ಆ ಬ್ರಾಹ್ಮಣನೇ ಧರ್ಮಕ್ಷೇತ್ರದಿಂದ ಬಂದ ಪುಣ್ಯಕೀರ್ತಿಯೆಂಬ ಹೆಸರನ್ನು ತಳೆದಿದ್ದ ಶ್ರೀಮನ್ನಾರಾಯಣನು; ಬ್ರಾಹ್ಮಣನ ವೇಷವನ್ನು ಧರಿಸಿಕೊಂಡು ಆ ಮಹಾರಾಜನ ಸಮೀಪಕ್ಕೆ ಬಂದು ನಿಂತನು.

೧೩೯. ಜಯಕಾರಗಳನ್ನು ಮಾಡುತ್ತಿರುವ ಇಬ್ಬರು ಮೂವರು ಪರಿಶುದ್ಧ

ವಿಲೋಕ್ಯ ತಂ ಸಮಾಯಾಂತಂ ದೂರಾದುತ್ಕಂಠಿತೋ ನೃಪಃ ।
ಮೇನೇ ಭವೇದ್ಗುರುರಯಂ ಯುಕ್ತೋ ಮದುಪದೇಶನೇ ॥ ೧೪೦ ॥
ಅಭಿಗಮ್ಯ ಚ ತಂ ರಾಜಾ ಪ್ರಣಮ್ಯ ಚ ಪುನಃ ಪುನಃ ।
ಗೃಹೀತಸ್ವಸ್ತಿವಚಸೋ ನಿನಾಯಾಂತಃಪುರಂ ದ್ವಿಜಂ ॥ ೧೪೧ ॥
ಮಧುಪರ್ಕೇಣ ವಿಧಿನಾ ತಂ ಸಂಪೂಜ್ಯ ಜನಾಧಿಪಃ ।
ವ್ಯಪೇತಾಧ್ವಶ್ರಮಂ ಸ್ವಸ್ಥಂ ಪ್ರೋಲ್ಲಸನ್ಮುಖಪಂಕಜಂ ॥ ೧೪೨ ॥
ನಿವೇದ್ಯ ಖಾದ್ಯವಸ್ತೂನಿ ಕೃತಕೃತ್ಯಕ್ರಿಯಾವಿಧಿಂ ।
ಪರಿತೃಪ್ತಂ ಸುಖಾಸೀನಂ ಪಪ್ರಚ್ಛ ಬ್ರಾಹ್ಮಣಂ ನೃಪಃ ॥ ೧೪೩ ॥

ರಾಜೋವಾಚ :—

ಖಿನ್ನೋಽಸ್ಮಿ ವಿಪ್ರವರ್ಯಾಹಂ ರಾಜ್ಯಭಾರಂ ಸಮುದ್ವಹನ್ ।
ಖೇದೋ ನಾಸ್ತ್ಯೇವ ಹಿ ಪರಂ ವೈರಾಗ್ಯಮಿವ ಜಾಯತೇ ॥ ೧೪೪ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಮೇ ನಿರ್ವೃತಿರ್ಭವೇತ್ ।
ಪಕ್ಷ್ಯದ್ವಯ್ಯೇವ ಯಾತೇತಿ ಮಮ ಚಿಂತಯತೋ ದ್ವಿಜ ॥ ೧೪೫ ॥

---

ರಾದ ಶಿಷ್ಯರನ್ನು ಕೂಡಿಕೊಂಡು ಆ ಬ್ರಾಹ್ಮಣನು ರೂಪುಗೊಂಡ ಅಗ್ನಿಯಂತೆ ತೇಜಸ್ಸುಳ್ಳವನಾಗಿ ರಾಜದ್ವಾರದಲ್ಲಿ ಬಂದನು.

೧೪೦. ತೀವ್ರವಾದ ಆಶೆಯಿಂದ ಕಾತರಿಸುತ್ತಿದ್ದ ಮಹಾರಾಜನು ಬರುತ್ತಿದ್ದ ಆತನನ್ನು ದೂರದಿಂದಲೇ ನೋಡಿ "ಈತನೇ ನನಗೆ ಉಪದೇಶವನ್ನು ಮಾಡಲು ಬಂದಿರುವ ಗುರುವಾಗಿರಬಹುದು" ಎಂಬುದಾಗಿ ಚಿಂತಿಸಿದನು.

೧೪೧. ಆ ರಾಜನು ಬ್ರಾಹ್ಮಣನ ಇದಿರಾಗಿ ಹೋಗಿ ಸ್ವಾಗತಿಸಿ ಮತ್ತೆ ಮತ್ತೆ ನಮಸ್ಕಾರಗಳನ್ನುಮಾಡಿ ಆತನ ಆಶೀರ್ವಾದಗಳನ್ನು ತಲೆಯಲ್ಲಿ ಧರಿಸಿ ತನ್ನ ಅಂತಃಪುರಕ್ಕೆ ಬಿಜಮಾಡಿಸಿದನು.

೧೪೨–೧೪೩. ಬಳಿಕ ಮಹಾರಾಜನು ಅತಿಥಿಸತ್ಕಾರವಿಧಿಯನ್ನನುಸರಿಸಿ ಆತನಿಗೆ ಮಧುಪರ್ಕವನ್ನರ್ಪಿಸಿ ಆತನ ದಾರಿಯ ಆಯಾಸವನ್ನು ಕಳೆದನು. ಇಂತು ಸುಖಾಸೀನನಾಗಿ ಪ್ರಸನ್ನವಾದ ಮುಖಕಮಲವುಳ್ಳವನೂ, ಸಂಧ್ಯಾವಂದನಾದಿ ಕಾಲಕೃತ್ಯಗಳನ್ನು ಮಾಡಿದವನೂ, ಸ್ವಸಂತುಷ್ಟನೂ ಆದ ಆ ಬ್ರಾಹ್ಮಣೋತ್ತಮನಿಗೆ ಬಹು ಬಗೆಯ ಉಪಹಾರಗಳನ್ನು ನಿವೇದನೆಮಾಡಿ ರಾಜನು ಅವನನ್ನು ಪ್ರಶ್ನಿಸಿದನು.

೧೪೪–೧೪೫. ರಾಜನು ಹೇಳುತ್ತಾನೆ:—ಬ್ರಾಹ್ಮಣೋತ್ತಮನೆ! ಈ ರಾಜ್ಯಾಧಿಕಾರದ ಭಾರವನ್ನು ಬಹುಕಾಲದಿಂದ ಹೊತ್ತು ಖಿನ್ನನಾಗಿರುವೆನು. ನನಗೆ ಯಾವ ವಿಧವಾದ ದುಃಖವೂ ಇಲ್ಲದಿದ್ದರೂ ಮನಸ್ಸಿನಲ್ಲಿ ವೈರಾಗ್ಯಭಾವವು ಉಂಟಾಗುತ್ತಿರುವುದು. ಈಗ ಏನು ಮಾಡಲಿ? ಎಲ್ಲಿಗೆ ಹೋಗಲಿ? ಯಾವುದರಿಂದ ನನಗೆ

ಅಸೀಮಂ ಸುಖಸಂತಾನಂ ಭುಕ್ತಂ ರಾಜ್ಯಂ ಮಯಾ ದ್ವಿಜ ।
ಪರಿಕ್ಷೀಣವಿಪಕ್ಷಂ ಚ ತ್ರ್ಯಕ್ಷೈಶ್ವರ್ಯಮಿವ ಸ್ಫುಟಂ ॥ ೧೪೬ ॥
ಸ್ವಸಾಮರ್ಥ್ಯಾದಹಂ ಜಾತಃ ಪರ್ಜನ್ಯಾಗ್ನ್ಯನಿಲಾತ್ಮಕಃ ।
ಪ್ರಜಾಶ್ಚ ಪಾಲಿತಾಃ ಸಂಯುಕ್ತಸ್ಪುತ್ರಾ ಇವ ನಿಜೌರಸಾಃ ॥ ೧೪೭ ॥
ತರ್ಪಿತಾಶ್ಚಾಪಿ ಭೂದೇವಾ ವಸುಭಿಶ್ಚ ದಿನೇ ದಿನೇ ।
ಏಕಮೇವಾಪರಾದ್ಧಂ ಚ ಮಯಾ ರಾಜ್ಯಂ ಪ್ರಶಾಸತಾಂ ॥ ೧೪೮ ॥
ದೇವಾಸ್ತೃಣೀಕೃತಾಃ ಸರ್ವೇ ಸ್ವತಪೋಬಲದರ್ಪತಃ ।
ತಚ್ಚ ಪ್ರಜೋಪಕಾರಾರ್ಥಂ ನ ಸ್ವಾರ್ಥಂ ಭವತಾ ಶಪೇ ॥ ೧೪೯ ॥
ಅಧುನಾ ಗುರುರೋಧಿತ್ವಂ ಮಮ ಭಾಗ್ಯೋದಯಾಗತಃ ।
ರಾಜ್ಯಂ ತು ಪ್ರಕರೋಮ್ಯೇವಂ ನ್ಯಕ್ಕೃತಾಂತಕಸಾಧ್ವಸಂ ॥ ೧೫೦ ॥
ಅಕಾಲಕಾಲಕಲನಂ ಮಮ ರಾಜ್ಯೇ ನ ಕುತ್ರಚಿತ್ ।
ಜರಾವ್ಯಾಧಿದರಿದ್ರೇಭ್ಯೋ ಮಮ ರಾಜ್ಯೇಽಪಿ ನೋ ಭಯಂ ॥ ೧೫೧ ॥

---

ಸೌಖ್ಯವು ಲಭಿಸುವುದು? ವಿಪ್ರಶ್ರೇಷ್ಠನೆ! ಈ ರೀತಿಯಾಗಿ ನಾನು ಚಿಂತಿಸುತ್ತಿರುವಂತೆಯೇ ಒಂದು ತಿಂಗಳ ಕಾಲವು ಕಳೆದುಹೋಯಿತು.

೧೪೬. ವಿಪ್ರನೆ! ನಿರತಿಶಯವೂ, ಸುಖಗಳ ಸಂತಾನಬೀಜವೂ, ಶತ್ರುಕಂಟಕರಹಿತವೂ, ಮಹೇಶ್ವರನ ಐಶ್ವರ್ಯಕ್ಕೆ ಸದೃಶವೂ ಎನಿಸಿದ ರಾಜ್ಯವನ್ನು ಈವರೆಗೂ ಅನುಭವಿಸಿರುವೆನು.

೧೪೭. ನನ್ನ ಸಾಮರ್ಥ್ಯದಿಂದಲೇ ಇಂದ್ರ, ಅಗ್ನಿ, ವಾಯುಗಳ ಅಂಶಗಳಿಂದ ಜನಿಸಿರುವೆನು. ಪ್ರಜೆಗಳೆಲ್ಲರನ್ನೂ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆಯೇ ಪ್ರೀತಿಯಿಂದ ಸಂರಕ್ಷಿಸಿರುವೆನು.

೧೪೮. ಬ್ರಾಹ್ಮಣರನ್ನೂ ಪ್ರತಿದಿನದಲ್ಲಿಯೂ ಧನಾದಿಗಳ ದಾನದಿಂದ ತೃಪ್ತಿಗೊಳಿಸಿರುವೆನು. ಇಂತು ರಾಜ್ಯವನ್ನು ಶಾಸನಮಾಡುತ್ತಿರುವ ನನ್ನಿಂದ ಒಂದೇ ಒಂದು ಅಪರಾಧವು ನಡೆದಿರುವುದು.

೧೪೯. ನನ್ನ ತಪಸ್ಸಿನ ಬಲದ ಮದದಿಂದ ಸಕಲದೇವತೆಗಳನ್ನೂ ಹುಲ್ಲಿಗೂ ಕಡೆಯಾಗಿ ಕಂಡಿರುವೆನು. ಅದನ್ನೂ ಸಹ ಪ್ರಜೆಗಳ ಉಪಕಾರಕ್ಕಾಗಿಯೇ ಮಾಡಿರುವೆನೆಂದೂ ಸ್ವಾರ್ಥಕ್ಕಾಗಿಯಲ್ಲವೆಂದೂ ನಿನ್ನಾಣೆಗೂ ಹೇಳುವೆನು.

೧೫೦. ಇಂದು ನೀನು ನನ್ನ ಪುಣ್ಯೋದಯದಿಂದ ಲಭಿಸಿರುವೆ. ನೀನೇ ನನಗೆ ಆಚಾರ್ಯನಾಗು. ಈ ರಾಜ್ಯದೊಳಗೆಲ್ಲಿಯೂ ಯಮಧರ್ಮರಾಜನ ಭಯವಿಲ್ಲದಿರುವಂತೆ ಮಾಡಬೇಕೆಂದಿಚ್ಛೆಸುವೆನು.

೧೫೧. ಅಕಾಲಮರಣವೆಂಬುದು ನನ್ನ ರಾಜ್ಯದಲ್ಲಿ ಯಾರಿಗೂ ಎಲ್ಲಿಯೂ ಸಂಭವಿಸಬಾರದು. ಮುಪ್ಪು, ವ್ಯಾಧಿ, ದಾರಿದ್ರ್ಯಗಳಿಂದ ಯಾರಿಗೂ ಭಯವುಂಟಾಗಬಾರದು.

ಕೋಽಪಿ ಧರ್ಮೇತರಾಂ ವೃತ್ತಿಂ ನ ಶ್ರಯೇನ್ಮಯಿ ಶಾಸತಿ ।
ಧರ್ಮೇ ದಯಾ ಜನಾಃ ಸರ್ವೇ ಸರ್ವೇ ಸಂತಿ ಸುಖೋದಯಾಃ ॥೧೫೨॥
ಸದ್ವಿದ್ಯಾವ್ಯಸನಾಃ ಸರ್ವೇ ಸರ್ವೇ ಸನ್ಮಾರ್ಗಚಂಚುರಾಃ ।
ಅಥವಾ ಯದಿ ಕಲ್ಪಾಂತಂ ತಿಷ್ಠೇದಾಯುಸ್ತತೋಽಪಿ ಕಿಂ ॥ ೧೫೩ ॥
ಸರ್ವೇ ಭೋಗ್ಯಸ್ತಥಾಭಾಂತಿ ಯಥಾ ಚರ್ವಿತಚರ್ವಣಂ ।
ಕಿಂ ಪಿಷ್ಟಪೇಷಣೇನಾತ್ರ ರಾಜ್ಯೇನ ದ್ವಿಜಪುಂಗವ ॥ ೧೫೪ ॥
ಕಿಮುಪ್ಯುಪದಿಶ ಪ್ರಾಜ್ಞ ಗರ್ಭವಾಸೋಪಶಾಂತಯೇ ।
ಅಥವಾ ತ್ವಾಂ ಪ್ರಪನ್ನಸ್ಯ ಮಮ ಕಿಂ ಚಿಂತನೈರಿತಃ ॥ ೧೫೫ ॥
ಯದೇವ ಕಥಯಸ್ಯದ್ಯ ತತ್ಕರಿಷ್ಯಾಮ್ಯಸಂಶಯಂ ।
ತ್ವದ್ವಿಲೋಕನಮಾತ್ರೇಣ ಸರ್ವ ಏವ ಮನೋರಥಾಃ ॥ ೧೫೬ ॥
ಅನ್ಯೇಷಾಮಪಿ ಜಾಯಂತೇ ಜಾತಪ್ರಾಯಾ ಮಮೈವ ತು ।
ಜಾನೇ ದೇವವಿರೋಧೇನ ಕೇ ಕೇ ನ ಪ್ರಲಯಂ ಗತಾಃ ॥ ೧೫೭ ॥

---

೧೫೨. ನಾನು ರಾಜ್ಯವನ್ನಾಳುತ್ತಿರಲು ಯಾವನೂ ಧರ್ಮವಿರುದ್ಧವಾದ ಆಚಾರಗಳಲ್ಲಿ ಪ್ರವರ್ತಿಸಬಾರದು. ಸಕಲಜನರೂ ಧರ್ಮದಲ್ಲಿಯೇ ನಿರತರಾಗಿರುವರು. ಸಕಲರೂ ಸುಖಮಾತ್ರವನ್ನೇ ಅನುಭವಿಸುತ್ತಿರುವರು.

೧೫೩. ಸಮಸ್ತಜನರೂ ಉತ್ತಮ ವಿದ್ಯೆಗಳ ಆರ್ಜನೆಯಲ್ಲಿಯೇ ಅಭಿಲಾಷೆಯುಳ್ಳವರೂ ಸದಾಚಾರಣಗಳಲ್ಲಿಯೇ ಆಸಕ್ತರೂ ಆಗಿರುವರು. ಆದರೂ ಕಲ್ಪಾಂತ್ಯದವರೆಗೂ ನನ್ನ ಆಯುಷ್ಯವಿರುವುದರಿಂದಾದರೂ ಏನಾದೀತು?

೧೫೪. ಸಕಲ ಭೋಗ್ಯವಸ್ತುಗಳೂ ಅನುಭವಿಸುವ ವೇಳೆಯಲ್ಲಿ ಚರ್ವಿತಚರ್ವಣಗಳಾಗಿ ತೋರುತ್ತಿರುವುವು. ಎಲೈ ಬ್ರಾಹ್ಮಣೋತ್ತಮನೆ! ಹಿಟ್ಟನ್ನೇ ಕುಟ್ಟಿದಂತೆ ನಿಷ್ಫಲವಾದ ಈ ರಾಜ್ಯಭಾರದ ಪ್ರಯಾಸದಿಂದ ಪ್ರಯೋಜನವಾದರೂ ಏನು?

೧೫೫. ಮಹಾಪ್ರಾಜ್ಞನೆ! ಪುನಃ ತಾಯಿಯ ಗರ್ಭದಲ್ಲಿ ವಾಸಮಾಡದಿರುವಂತೆ ಯಾವುದಾದರೂ ಒಂದು ಉಪಾಯವನ್ನು ನನಗೆ ಉಪದೇಶಮಾಡು. ಅಥವಾ ನಿನ್ನನ್ನು ಶರಣುಹೊಕ್ಕಿರುವ ನನಗೆ ಇನ್ನುಮೇಲೆ ಯಾವುದರ ಚಿಂತೆಯೇಕೆ?

೧೫೬—೧೫೭. ಇಂದು ನೀನು ಹೇಗೆ ಉಪದೇಶಮಾಡುವೆಯೋ, ಹಾಗೆಯೆ ನಿಸ್ಸಂದೇಹವಾಗಿಯೂ ನಡೆಸುವೆನು. ನಿನ್ನನ್ನು ನೋಡಿದ ಮಾತ್ರದಿಂದಲೇ ಇತರ ಮಾನವರಿಗೂ ಸಕಲಮನೋರಥಗಳೂ ಸಿದ್ಧಿಸುವುವೆಂದಮೇಲೆ ನನ್ನ ಅಭಿಲಾಷೆಗಳೂ ಪೂರ್ತಿಗೊಂಡಂತೆಯೇ ತಿಳಿಯುವೆನು. ದೇವತೆಗಳಲ್ಲಿ ವಿರೋಧವನ್ನು ಸಾಧಿಸಿದ ಕಾರಣದಿಂದ ಯಾರು ಯಾರು ನಾಶವನ್ನು ಹೊಂದಲಿಲ್ಲ? ಇದನ್ನು ನಾನು ಚೆನ್ನಾಗಿ ತಿಳಿದಿರುವೆನು.

ಅವಂತೋಽಪಿ ಪ್ರಜಾಃ ಸ್ವೀಯಾ ನಿಜಧರ್ಮಮನುವ್ರತಾಃ ।
ಪುರಾ ತೇ ತ್ರಿಪುರಾಃ ಶೂರಾಃ ಶಿವಭಕ್ತಿಪರಾ ಅಪಿ ॥ ೧೫೮ ॥
ಧರಾಮಯಂ ರಥಂ ಕೃತ್ವಾ ಧನುಃ ಕೃತ್ವಾ ಹಿಮಾಚಲಂ ।
ವೇದಾಂಶ್ಚ ವಾಜಿನಂ ಕೃತ್ವಾ ಗುಣಂ ಕೃತ್ವಾ ಚ ವಾಸುಕಿಂ ॥ ೧೫೯ ॥
ವಿರಿಂಚಿಂ ಸಾರಥಿಂ ಕೃತ್ವಾ ಕೃತ್ವಾ ವಿಷ್ಣುಂ ಚ ಪತ್ರಿಣಂ ।
ರಥಚಕ್ರೇ ಪುಷ್ಪವಂತೌ ಪ್ರತೋದಂ ಪ್ರಣವಾತ್ಮಕಂ ॥ ೧೬೦ ॥
ತಾರಾಗ್ರಹಮಯಾನ್ಕೀಲಾನ್ವರೂಥಂ ಗಗನಾತ್ಮಕಂ ।
ಧ್ವಜದಂಡಂ ಸುಮೇರುಂ ಚ ಪ್ರಾಂಶುಕಲ್ಪತರೂಂ ಧ್ವಜಂ ॥ ೧೬೧ ॥
ಯೋಕ್ತ್ರಾಣಿ ಚಕ್ಷುಃ ಶ್ರವಸಶ್ಛಂದಾಂಸ್ಯಂಗಾನಿ ರಕ್ಷಕಾನ್ ।
ಭಲ್ಲಂ ಕಾಲಾಗ್ನಿರುದ್ರಾಖ್ಯಂ ಪುಂಖೀಕೃತ್ಯ ಪ್ರಭಂಜನಂ ।
ಹರೇಣೈಕೇಷುಪಾತೇನ ಲೀಲಯಾ ಭಸ್ಮಸಾತ್ಕೃತಾಃ ॥ ೧೬೨ ॥
ಬಲಿರ್ಯಜ್ವಕೃತಾಂ ಶ್ರೇಷ್ಠಃ ಕೃತ್ವಾ ಕಪಟಖರ್ವತಾಂ ।
ಪಾತಾಲಂ ಗಮಿತಃ ಪೂರ್ವಂ ಹರಿಣಾ ವಿಕ್ರಮೈಸ್ತ್ರಿಭಿಃ ॥ ೧೬೩ ॥
ವೃತ್ರವಾನಪಿ ವೈ ವೃತ್ರಃ ಸುತ್ರಾಮ್ಣಾ ವಿನಿಷೂದಿತಃ ॥ ೧೬೪ ॥

---

೧೫೮. ತಮ್ಮ ಪ್ರಜೆಗಳನ್ನು ಸುಖದಿಂದ ರಕ್ಷಿಸುತ್ತಿದ್ದರೂ, ತಮ್ಮ ಧರ್ಮದಲ್ಲಿಯೇ ಸ್ಥಿರವಾಗಿ ನೆಲಸಿರುವವರಾದರೂ, ಶಿವಭಕ್ತಿಯಲ್ಲಿ ಅಗ್ರಗಣ್ಯರಾದರೂ, ಶೂರರಾದ ತ್ರಿಪುರಾಸುರರು ಹಿಂದೇನಾದರು ?

೧೫೯–೧೬೨. ಭೂಮಿಯನ್ನೇ ರಥವನ್ನಾಗಿಯೂ, ಹಿಮಾಚಲಪರ್ವತವನ್ನೇ ಬಿಲ್ಲನ್ನಾಗಿಯೂ, ನಾಲ್ಕುವೇದಗಳನ್ನೇ ಕುದುರೆಗಳನ್ನಾಗಿಯೂ, ವಾಸುಕಿಯನ್ನೇ ಬಿಲ್ಲಿನ ಹೆದೆಯನ್ನಾಗಿಯೂ, ಬ್ರಹ್ಮದೇವನನ್ನೇ ಸಾರಥಿಯಾಗಿಯೂ, ಮಹಾವಿಷ್ಣುವನ್ನೇ ಬಾಣವನ್ನಾಗಿಯೂ, ಸೂರ್ಯಚಂದ್ರರನ್ನೇ ರಥದ ಚಕ್ರಗಳನ್ನಾಗಿಯೂ, ಓಂಕಾರವನ್ನೇ ಚಾವಟಿಯನ್ನಾಗಿಯೂ, ಗ್ರಹನಕ್ಷತ್ರಗಳನ್ನು ಕೀಲುಗಳನ್ನಾಗಿಯೂ, ಆಕಾಶವನ್ನೇ ಮೇಲ್ಹಾವಣಿಯಾಗಿಯೂ ಮೇರುಪರ್ವತವನ್ನೇ ಧ್ವಜದಂಡವನ್ನಾಗಿಯೂ, ಉನ್ನತ ಕಲ್ಪವೃಕ್ಷವನ್ನೇ ಧ್ವಜವನ್ನಾಗಿಯೂ, ಸರ್ಪಗಳನ್ನೇ ಕಡಿವಾಣಗಳನ್ನಾಗಿಯೂ, ಛಂದಸ್ಸುಗಳನ್ನೇ ಅಂಗರಕ್ಷಕರನ್ನಾಗಿಯೂ, ಪ್ರಳಯಾಗ್ನಿಸದೃಶನಾದ ರುದ್ರನನ್ನೇ ಭಲ್ಲಾಯುಧವನ್ನಾಗಿಯೂ, ವಾಯುದೇವನನ್ನೇ ಬಾಣದ ಗರಿಗಳನ್ನಾಗಿಯೂ, ಮಾಡಿಕೊಂಡ ಮಹೇಶ್ವರನ ಲೀಲಾವಿಜೃಂಭಿತವಾದ ಒಂದು ಬಾಣದಿಂದಲೇ ಮೂವರೂ ಕ್ಷಣಮಾತ್ರದಲ್ಲಿ ಭಸ್ಮೀಭೂತರಾದರು.

೧೬೩. ಪೂರ್ವದಲ್ಲಿ ಮಹಾವಿಷ್ಣುವು ಕಪಟ ವಾಮನಬ್ರಹ್ಮಚಾರಿಯ ವೇಷವನ್ನು ತಾಳಿ ಮೂರು ಪಾದಗಳ ಪ್ರದೇಶವನ್ನಾಕ್ರಮಿಸುವ ನೆಪದಿಂದ ಯಜ್ಞಕರ್ತೃಗಳಲ್ಲಿ ಶ್ರೇಷ್ಠನೆನಿಸಿದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದನು.

೧೬೪–೧೬೫. ವೃತ್ರಾಸುರನು ಸ್ವಧರ್ಮದಲ್ಲಿಯೇ ಆಸಕ್ತನಾಗಿದ್ದರೂ

ದಧೀಚಿರಪಿ ವಿಪ್ರೇಂದ್ರೋ ದೇವೈರಸ್ಥಿಕೃತೇ ಹತಃ ।
ಪೂರ್ವವೈರಮನುಸ್ಮೃತ್ಯ ಜಾಯಾರ್ಥಂ ಯುಜ್ಯತೋ ಹರೇಃ ।
ಕುಶಾಸ್ತ್ರೈರ್ನಿರ್ಜಿತಸ್ಯಾಜೌ ತೇನೈವ ಚ ದಧೀಚಿನಾ ॥ ೧೬೫ ॥
ಶಿವಭಕ್ತಸ್ಯ ಬಾಣಸ್ಯ ದೋಃಸಹಸ್ರಂ ಪುರಾ ಹರಿಃ ।
ಚಿಚ್ಛೇದ ಸಂಖ್ಯೇ ಕಿಂ ತೇನಾಪರಾದ್ಧಂ ಸಾಧುವರ್ತಿನಾ ॥ ೧೬೬ ॥
ತಸ್ಮಾದ್ಬಲಿಭಿಃ ದೇವೈರ್ವಿರೋಧೋ ಭದ್ರಾಯ ನ ಭವೇದ್ದೈವತ್ಯೈಃ ಸಹ ।
ದೇವೇಭ್ಯೋ ಮಧ್ಭಯಂ ನಾಸ್ತಿ ಸತ್ಪಥೀನಸ್ಯ ವೈ ಮನಾಕ್ ॥ ೧೬೭ ॥
ಯಜ್ಞೈರ್ದೇವತ್ವಮಾಪನ್ನಾ ಗೀರ್ವಾಣಾ ವಾಸವಾದಯಃ ।
ಯಜ್ಞೈರ್ದಾನೈಸ್ತಪೋಭಿಶ್ಚ ತೇಭ್ಯೋಽಪ್ಯಾಧಿಕ್ಯಮಸ್ತಿ ಮೇ ॥ ೧೬೮ ॥
ಅಸ್ತು ನ್ಯೂನತ್ವಮಾಧಿಕ್ಯಂ ಕಿಮನೇನಾಧುನಾ ಮಮ ।
ಇಂದ್ರಿಯೋಪರಮಃ ಪ್ರಾಪ್ತಃ ಸುಖದಸ್ತವ ದರ್ಶನಾತ್ ॥ ೧೬೯ ॥

---

ಮಹೇಂದ್ರನಿಂದ ನಿಗ್ರಹವನ್ನನುಭವಿಸಿದನು. ಬ್ರಾಹ್ಮಣೋತ್ತಮನಾದ ದಧೀಚಿಯೂ ಸಹ ಅಸ್ತ್ರಕ್ಕಾಗಿ ಬೆನ್ನುಮೂಳೆಯನ್ನು ಪಡೆಯಲೆಳಸಿದ ದೇವತೆಗಳಿಂದ ಹತನಾದನು. ವಿಜಯವನ್ನು ಪಡೆಯಲು ಮಹಾವಿಷ್ಣುವು ಯುದ್ಧವನ್ನು ಮಾಡುತ್ತಿರುವಾಗ ಒಮ್ಮೆ ಆತನು ದಧೀಚಿಮಹರ್ಷಿಯ ದರ್ಭೆಯ ಅಸ್ತ್ರದಿಂದ ಯುದ್ಧದಲ್ಲಿ ಪರಾಜಯವನ್ನು ಹೊಂದಿದನು. * ಆ ಹಿಂದಿನ ವೈರವನ್ನು ಸ್ಮರಿಸಿಕೊಂಡು ಈಗ ದೇವತೆಗಳು ಆತನನ್ನು ಸಂಹರಿಸಿದರು.

೧೬೬–೧೬೭. ಪೂರ್ವದಲ್ಲಿ ಶಿವಭಕ್ತನಾದ ಬಾಣಾಸುರನ ಒಂದುಸಾವಿರ ತೋಳುಗಳನ್ನು ಯುದ್ಧದಲ್ಲಿ ಕಡಿದುಹಾಕಲಿಲ್ಲವೆ. ಸರ್ವಪ್ರಕಾರದಿಂದಲೂ ಸಾಧುವರ್ತನೆಯಲ್ಲಿಯೇ ಇದ್ದ ಆತನಿಂದ ಹರಿಗೆ ಯಾವ ಅಪರಾಧವುಂಟಾಯಿತು? ಆದುದರಿಂದ ಬಲಿಷ್ಠರಾದ ದೇವತೆಗಳೊಡನೆ ವಿರೋಧವನ್ನು ಕಟ್ಟಿಕೊಳ್ಳಲು ನಮಗೆ ಸೌಖ್ಯವುಂಟಾಗುವುದಿಲ್ಲ. ಸದಾಚಾರದಲ್ಲಿಯೇ ನಡೆದುಕೊಂಡು ಬರುತ್ತಿರುವ ನನಗೆ ಆ ದೇವತೆಗಳಿಂದ ಸ್ವಲ್ಪವೂ ಭಯವಿಲ್ಲ.

೧೬೮. ಮಹೇಂದ್ರನೇ ಮೊದಲಾದ ದೇವತೆಗಳು ಯಜ್ಞಗಳ ಫಲವಾಗಿಯೇ ದೇವತ್ವವನ್ನು ಹೊಂದಿರುವರು. ಯಜ್ಞಗಳು, ದಾನಗಳು ಮತ್ತು ಸಂಪತ್ತುಗಳ ವಿಷಯದಲ್ಲಿ ಅವರಿಗಿಂತಲೂ ನನಗೆ ಹೆಚ್ಚಿನ ಪುಣ್ಯವಿರುವುದು.

೧೬೯. ಆ ಪುಣ್ಯದ ಹೆಚ್ಚು ಕಡಿಮೆಗಳ ಮಾತಂತಿರಲಿ. ಈಗ ನನಗೆ ಅದರಿಂದಾಗಬೇಕಾದುದೇನು? ನಿನ್ನ ದರ್ಶನದಿಂದ ಈಗ ನನಗೆ ಇಂದ್ರಿಯ ಭೋಗ್ಯಗಳಾದ ವಿಷಯಗಳಲ್ಲಿ ವೈರಾಗ್ಯವುಂಟಾಗಿರುವುದು.

---

* ಈ ಚರಿತ್ರೆಯನ್ನು ಇದೇ ಖಂಡದ ಪೂರ್ವಾರ್ಧದ ಮುಪ್ಪತ್ತೆರಡನೆಯ ಅಧ್ಯಾಯದಲ್ಲಿ ನೋಡಿ.

ಇದಾನೀಂ ದಿಶ ಮೇ ತಾತ ಕರ್ಮನಿರ್ಮೂಲನಕ್ಷಮಂ ।
ಉಪಾಯಂ ತ್ವಮುಪಾಯಜ್ಞ ಯೇನ ನಿರ್ವೃತಿಮಾಪ್ನುಯಾಂ ॥ ೧೭೦ ॥

ಸ್ಕಂದ ಉವಾಚ:—

ಗಣೇಶಾವೇಶವಶತೋ ರಾಜ್ಞೇತಿ ಯದುದೀರಿತಂ ।
ತದಾಕರ್ಣ್ಯ ಹೃಷೀಕೇಶಃ ಪ್ರಾಹ ಬ್ರಾಹ್ಮಣವೇಷಭೃತ್ ॥ ೧೭೧ ॥

ಶ್ರೀ ವಿಷ್ಣುರುವಾಚ:—

ಸಾಧು ಸಾಧು ಮಹಾಪ್ರಾಜ್ಞ ನೃಪಚೂಡಾಮಣೇಽನಘ ।
ಮಯಾ ಯದುಪದೇಷ್ಟವ್ಯಂ ತತ್ತ್ವಯೈವ ನಿರೂಪಿತಂ ॥ ೧೭೨ ॥
ತ್ವಮಾದಾವೇವ ನಿರ್ವೃತ್ತಃ ಪರಂ ಮೇ ಮಾನದೋ ಹ್ಯಸಿ ।
ಕ್ಷಾಲಿತೇಂದ್ರಿಯಪಂಕಶ್ಚ ಸುತಪಃ ಸ್ವಚ್ಛವಾರಿಭಿಃ ॥ ೧೭೩ ॥
ಯದುಕ್ತಂ ಭವತಾ ಭೂತ ತತ್ಸರ್ವಂ ತಥ್ಯಮೇವ ಹಿ ।
ತವ ಶಕ್ತಿಂ ಚ ಜಾನಾಮಿ ವಿರಕ್ತಿಂ ಚ ಮಹಾಮತೇ ॥ ೧೭೪ ॥
ನ ಭವತ್ಸದೃಶೋ ರಾಜಾ ಭುವಿ ಭೂತೋ ಭವಿಷ್ಯತಿ ।
ರಾಜ್ಯಂ ಭೋಕ್ತುಂ ತ್ವಯಾಜ್ಞಾಯಿ ಯುಕ್ತಂ ಯತ್ತು ಮುಮುಕ್ಷಸಿ ॥

---

೧೭೦. ಸರ್ವೋಪಾಯಗಳನ್ನೂ ತಿಳಿದ ಪೂಜ್ಯನೆ! ಈಗ ಕರ್ಮಬಂಧನವನ್ನು ನಿರ್ಮೂಲಗೊಳಿಸುವುದೂ, ನನಗೆ ಸಂತೋಷವನ್ನುಂಟುಮಾಡುವುದೂ ಆದ ಒಂದು ಉಪಾಯವನ್ನು ಈಗ ನನಗೆ ಉಪದೇಶಮಾಡು.

೧೭೧. ಸ್ಕಂದನು ಹೇಳುತ್ತಾನೆ:—ಇಂತು ವಿಘ್ನೇಶ್ವರನಿಂದ ಆವಿಷ್ಟನಾಗಿ ಮಹಾರಾಜನು ಹೇಳಿದ ಮಾತುಗಳನ್ನು ಕೇಳಿ ಬ್ರಾಹ್ಮಣವೇಷಧಾರಿಯಾದ ನಾರಾಯಣನು ಹೇಳತೊಡಗಿದನು.

೧೭೨. ಮಹಾವಿಷ್ಣುವು ಹೇಳುತ್ತಾನೆ:—"ಮಹಾಬುದ್ಧಿಶಾಲಿಯೆ! ಮಹಾರಾಜವಂಶದ ಚೂಡಾಮಣಿಯೆ! ಪಾಪರಹಿತನೆ! ನಿನ್ನ ಪ್ರಶ್ನೆಯು ಬಹಳ ಸಾಧುವಾಗಿರುವುದು. ನಾನು ಯಾವುದನ್ನು ಉಪದೇಶಮಾಡಬೇಕೆಂದಿದ್ದೆನೊ, ಅದನ್ನು ನೀನೇ ಸೂಕ್ಷ್ಮವಾಗಿ ನಿರೂಪಿಸಿರುವೆಯಲ್ಲವೆ.

೧೭೩. ನೀನು ಮೊದಲೇ ವೈರಾಗ್ಯವನ್ನು ಹೊಂದಿದವನಾಗಿ ನನಗೆ ಅಪರಿಮಿತವಾದ ಆನಂದವನ್ನುಂಟುಮಾಡುತ್ತಿರುವೆ. ಉತ್ತಮತಪಸ್ಸೆಂಬ ನಿರ್ಮಲೋದಕದಿಂದ ಇಂದ್ರಿಯಲೋಲುಪತೆಯೆಂಬ ಕೆಸರನ್ನು ತೊಳೆದುಕೊಂಡಿರುವೆ.

೧೭೪. ಭೂಪಾಲಕನೆ! ನೀನು ಹೇಳಿದುದೆಲ್ಲವೂ ವಾಸ್ತವವಾಗಿಯೇ ಇರುವುದು. ಮಹಾಮತಿಯೆ! ನಿನ್ನ ಅಪಾರವಾದ ತಪಶ್ಶಕ್ತಿಯನ್ನೂ ವೈರಾಗ್ಯವನ್ನೂ ನಾನು ಚೆನ್ನಾಗಿ ತಿಳಿದಿರುವೆನು.

೧೭೫. ನಿನಗೆ ಸಮಾನನಾದ ರಾಜನು ಭೂಲೋಕದಲ್ಲಿ ಹಿಂದೆಂದೂ

ವಿರೋಧೇಽಪಿ ಹಿ ದೇವಾನಾಂ ತ್ವಯಾ ನಾಪಕೃತಂ ಕ್ವಚಿತ್ ।
ಧರ್ಮೇತರಪ್ರವೇಶಶ್ಚ ತವರಾಷ್ಟ್ರೇಽಪಿ ನೋ ಭವತ್ ॥ ೧೭೬ ॥
ಪ್ರವರ್ತಿತಾಭಿರ್ಭವತಾ ಪ್ರಜಾಭಿರ್ಯದನುಷ್ಠಿತಂ ।
ಧರ್ಮೋ ಧರ್ಮಂ ಸ್ವಧರ್ಮಜ್ಞ ತೇನ ತೃಪ್ತಾ ದಿವೌಕಸಃ ॥ ೧೭೭ ॥
ಏಕ ಏವ ಹಿ ತೇ ದೋಷೋ ಹೃದಿ ಮೇ ಪ್ರತಿಭಾಸತೇ ।
ಕಾಶ್ಯಾ ವಿಶ್ವೇಶ್ವರೋ ದೂರಂ ಯತ್ಕೃತೋ ಭವತಾ ಕಿಲ ॥ ೧೭೮ ॥
ಮಹಾಂತಮಪರಾಧಂ ತೇ ಜಾನೇ ಭೂಜಾನಿಸತ್ತಮ ।
ಇಮಂ ತತ್ಪಾಪಶಾಂತ್ಯೈ ಚ ವಚ್ಮ್ಯುಪಾಯಂ ಮಹತ್ತರಂ ॥ ೧೭೯ ॥
ಸಂಖ್ಯಾಸ್ತಿ ಯಾವತೀ ದೇಹೇ ದೇಹಿನೋ ರೋಮಸಂಭವಾ ।
ತಾವಂತೋಽಪ್ಯಪರಾಧಾ ವೈ ಯಾಂತಿ ಲಿಂಗಪ್ರತಿಷ್ಠಯಾ ॥ ೧೮೦ ॥
ಏಕಂ ಪ್ರತಿಷ್ಠಿತಂ ಯೇನ ಲಿಂಗಮತ್ರೇಹ ಭಕ್ತಿತಃ ।
ತೇನಾತ್ಮನಾ ಸಮಂ ವಿಶ್ವಂ ಜಗದೇತತ್ಪ್ರತಿಷ್ಠಿತಂ ॥ ೧೮೧ ॥

---

ಇರಲಿಲ್ಲ. ಮುಂದೆಯೂ ಹುಟ್ಟಲಾರನು. ರಾಜ್ಯಾಧಿಕಾರವನ್ನು ಹೇಗೆ ಅನುಭವಿಸಬೇಕೆಂಬುದನ್ನು ನೀನೊಬ್ಬನೇ ತಿಳಿದಿರುವೆ. ಈಗ ಅದನ್ನು ಬಿಡಲೆಳಸಿರುವುದೂ ಯುಕ್ತವೇ ಆಗಿರುವುದು.

೧೭೬. ದೇವತೆಗಳಲ್ಲಿ ನಿನಗೆ ವಿರೋಧವಿದ್ದರೂ ಅವರಿಗೆ ನೀನು ಯಾವ ವಿಧವಾದ ಅಪಕಾರವನ್ನೂ ಮಾಡಲಿಲ್ಲ. ನಿನ್ನ ರಾಜ್ಯದಲ್ಲಿ ಅಧರ್ಮದ ಪ್ರವೇಶವೂ ಎಂದೂ ಆಗಿರುವುದಿಲ್ಲ.

೧೭೭. ರಾಜಧರ್ಮಗಳನ್ನರಿತವನೆ! ನಿನ್ನಿಂದ ಧರ್ಮಮಾರ್ಗದಲ್ಲಿಯೇ ಪ್ರವರ್ತಿತರಾದ ಪ್ರಜೆಗಳಿಂದ ಯಾವ ಧರ್ಮವು ಆಚರಿಸಲ್ಪಡುತ್ತಿರುವುದೊ, ಅದರಿಂದಲೇ ಸಕಲ ದೇವತೆಗಳೂ ತೃಪ್ತಿಯನ್ನು ಹೊಂದಿರುವರು.

೧೭೮. ನಿನ್ನಲ್ಲಿ ಒಂದೇ ಒಂದು ದೋಷವಿರುವುದೆಂದು ನನ್ನ ಹೃದಯದಲ್ಲಿ ತೋರುತ್ತಿರುವುದು. ನೀನು ವಿಶ್ವೇಶ್ವರನನ್ನು ಕಾಶೀಕ್ಷೇತ್ರದಿಂದ ದೂರಕ್ಕೆ ಕಳುಹಿಸಿರುವುದೊಂದೇ ನಿನ್ನ ಅಪರಾಧವು.

೧೭೯. ಭೂಪಾಲಕೋತ್ತಮನೆ! ಇದು ಮಹತ್ತರ ಅಪರಾಧವೆಂಬುದನ್ನು ನಾನು ತಿಳಿದಿರುವೆನು. ಈ ಪಾತಕದ ಪ್ರಶಮನಕ್ಕಾಗಿ ಸರ್ವೋತ್ತಮವಾದ ಒಂದು ಉಪಾಯವನ್ನು ನಿನಗೆ ಈಗ ಹೇಳುವೆನು.

೧೮೦. ಮನುಷ್ಯನ ದೇಹದಲ್ಲಿರುವ ಕೂದಲುಗಳ ಸಂಖ್ಯೆಯೆಷ್ಟಿರುವುದೊ, ಅಷ್ಟು ಅಪರಾಧಗಳೂ ಕೂಡ ಒಂದು ಶಿವಲಿಂಗವನ್ನು ಪ್ರತಿಷ್ಠೆಮಾಡುವುದರಿಂದ ನಾಶವನ್ನು ಹೊಂದುವುವು.

೧೮೧. ಈಶ್ವರನ ಭಕ್ತಿಯುಳ್ಳವನಾಗಿ ಇಲ್ಲಿ ಯಾವನು ಒಂದು ಲಿಂಗ

ರತ್ನಾಕರೇ ರತ್ನಸಂಖ್ಯಾ ಸಂಖ್ಯಾವಿದ್ಭಿರಪೀಷ್ಯತೇ ।
ಲಿಂಗಪ್ರತಿಷ್ಠಾಪುಣ್ಯಸ್ಯ ನ ತು ಸಂಖ್ಯೇತಿ ಲಿಖ್ಯತೇ ॥ ೧೮೨ ॥
ತಸ್ಮಾತ್ಸರ್ವಪ್ರಯತ್ನೇನ ಕುರು ಲಿಂಗಂ ಪ್ರತಿಷ್ಠಿತಂ ।
ತಯಾ ಲಿಂಗಪ್ರತಿಷ್ಠಿತ್ಯಾ ಕೃತಕೃತ್ಯೋ ಭವಿಷ್ಯಸಿ ॥ ೧೮೩ ॥
ಇತ್ಯುಕ್ತ್ವಾ ಬ್ರಾಹ್ಮಣೋ ದಧ್ಯೌ ಕ್ಷಣಂ ನಿಶ್ಚಲಮಾನಸಃ ।
ಉವಾಚ ಚ ಪ್ರಹೃಷ್ಟಾಸ್ಯೋ ರಾಜಾನಂ ಪಾಣಿನಾ ಸ್ಪೃಶನ್ ॥ ೧೮೪ ॥

ಶ್ರೀ ವಿಷ್ಣುರುವಾಚ :—

ಅನ್ಯಚ್ಚ ಕಿಂಚಿತ್ಪಶ್ಯಾಮಿ ಭೂಪಾಲ ಜ್ಞಾನಚಕ್ಷುಷಾ ।
ಶೃಣುಷ್ವಾವಹಿತೋ ಭೂತ್ವಾ ತದಪಿ ಪ್ರಾಜ್ಞಸತ್ತಮ ॥ ೧೮೫ ॥
ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಸಿ ಮಹತಾಮಪಿ ।
ಜಪ್ಯಂ ಚ ತವ ನಾಮೇಹ ಶಾಪಃ ಶುಭಫಲೇಪ್ಸುನಾ ॥ ೧೮೬ ॥
ದಿವೋದಾಸ ತ್ವದಭ್ಯಾಶಾದಪಿ ಧನ್ಯತರಾ ವಯಂ ।
ತೇಽಪಿ ಧನ್ಯತರಾ ಮರ್ತ್ಯಾ ಯೇ ಪ್ರದಾಖ್ಯಾಂ ಪ್ರಚಕ್ಷತೇ ॥ ೧೮೭ ॥

---

ವನ್ನಾದರೂ ಪ್ರತಿಷ್ಠೆಮಾಡುವನೊ, ಅವನಿಂದ ತನ್ನ ಆತ್ಮನೊಡಗೂಡಿದ ಸಕಲ ಜಗತ್ತೂ ಪ್ರತಿಷ್ಠಿತವಾಗಿರುವುದೆಂದು ತಿಳಿಯಬೇಕು.

೧೮೨. ಗಣಿತ ಶಾಸ್ತ್ರದಲ್ಲಿ ನಿಪುಣರಾದವರು ಸಮುದ್ರದಲ್ಲಿರುವ ರತ್ನಗಳ ಸಂಖ್ಯೆಯನ್ನಾದರೂ ನಿರ್ಣಯಿಸಬಹುದು. ಒಂದು ಲಿಂಗವನ್ನು ಪ್ರತಿಷ್ಠಿಸಿದ ಪುಣ್ಯದ ಯೋಗ್ಯತೆಯನ್ನು ನಿರ್ಣಯಿಸಿ ಬರೆಯಲು ಯಾರಿಗೂ ಸಾಧ್ಯವಿಲ್ಲ.

೧೮೩. ಆದುದರಿಂದ ನೀನು ಸರ್ವಪ್ರಕಾರದಿಂದಲೂ ಒಂದು ಶಿವಲಿಂಗದ ಪ್ರತಿಷ್ಠಾಮಹೋತ್ಸವವನ್ನು ಮಾಡು. ಆ ಲಿಂಗದ ಪ್ರತಿಷ್ಠಾಕಾರ್ಯದಿಂದ ನೀನು ಕೃತಕೃತ್ಯನಾಗಿ ಸಂತೋಷಗೊಳ್ಳುವೆ.''

೧೮೪. ಇಂತೆಂದು ಹೇಳಿ ಆ ಬ್ರಾಹ್ಮಣನ ನಿಶ್ಚಲವಾದ ಮನಸ್ಸಿನಿಂದ ಒಂದು ಕ್ಷಣದವರೆಗೂ ಧ್ಯಾನಾಸಕ್ತನಾಗಿದ್ದು ಸಂತೋಷದಿಂದ ಕೂಡಿದ ಮುಖವುಳ್ಳವನಾಗಿ ರಾಜನನ್ನು ಕೈಯಿಂದ ತಡವುತ್ತ ಹೇಳತೊಡಗಿದನು.

೧೮೫. ವಿಷ್ಣುವು ಹೇಳುತ್ತಾನೆ:—ಭೂಪಾಲಕನೆ! ನನ್ನ ಜ್ಞಾನದೃಷ್ಟಿಯಿಂದ ಮತ್ತೊಂದು ವಿಷಯವನ್ನು ನೋಡಿದೆನು. ಬುದ್ಧಿವಂತರಲ್ಲಿ ಅಗ್ರಗಣ್ಯನಾದ ನೀನು ಸಾವಧಾನಚಿತ್ತದಿಂದ ಅದನ್ನೂ ಕೇಳು.

೧೮೬. ನೀನು ಧನ್ಯನಾಗಿರುವೆ. ನೀನೇ ಕೃತಕೃತ್ಯನು. ಮಹಾತ್ಮರಿಗೂ ಸಹ ಪೂಜ್ಯತಮನಾಗಿರುವೆ. ಈ ಲೋಕದಲ್ಲಿ ಶುಭಫಲಗಳನ್ನಪೇಕ್ಷಿಸುವವನು ಪ್ರತಿ ದಿನದ ಪ್ರಾತಃಕಾಲದಲ್ಲಿಯೂ ನಿನ್ನ ನಾಮವನ್ನು ಜಪಿಸಬೇಕು.

೧೮೭. ದಿವೋದಾಸನೆ! ನಿನ್ನ ಸಮೀಪದಲ್ಲಿರುವುದರಿಂದ ನಾವೂ ಸಹ

ಸ್ಮಾಯಂ ಸ್ಮಾಯಂ ಜಗೌ ವಿಪ್ರೋ ಮೌಲಿಮಾಂದೋಲಯನ್ಮುಹುಃ ।
ಹೃದ್ಯೇವ ಬಹುಶೋ ಹೃಷ್ಟಃ ಸಂಪ್ರಹೃಷ್ಟತನೂರುಹಃ ॥ ೧೮೮ ॥
ಅಹೋ ಭಾಗ್ಯೋದಯಶ್ಚಾಸ್ಯ ಅಹೋ ನೈರ್ಮಲ್ಯಮಸ್ಯ ವೈ ।
ಯದೇನಮನಿಶಂ ಧ್ಯಾಯೇದ್ಧ್ಯೇಯೋ ವಿಶ್ವೇಶ್ವರೋಽಖಿಲಃ ॥ ೧೮೯ ॥
ಅಹೋ ಉದರ್ಕ ಏತಸ್ಯ ನ ಕೈಶ್ಚಿತ್ಪ್ರತಿಪದ್ಯತೇ ।
ಅಸ್ಮಾಕಮಪಿ ಯದ್ದೂರಮುದವೀಯಸ್ತದಸ್ಯ ಯತ್ ॥ ೧೯೦ ॥
ಹೃದ್ಯಾಲೋಚ್ಯೇತಿ ವಿಪ್ರೋಽಥ ವರ್ಣಯಿತ್ವಾ ಕ್ಷಿತೀಶ್ವರಂ ।
ಆವಿಶ್ಚಕಾರ ತತ್ಸರ್ವಂ ಯತ್ಸಮಾಧಾವಲೋಕಯತ್ ॥ ೧೯೧ ॥

ಬ್ರಾಹ್ಮಣ ಉವಾಚ :–

ರಾಜಂಸ್ತವಾದ್ಯ ಫಲಿತೋ ಮನೋರಥಮಹಾದ್ರುಮಃ ।
ಅನೇನೈವ ಶರೀರೇಣ ತ್ವಂ ಗಂತಾಸಿ ಪರಂ ಪದಂ ॥ ೧೯೨ ॥
ಯಥಾ ವಿಶ್ವೇಶ್ವರೋ ನಿತ್ಯಂ ತ್ವಾಮೇವ ಹೃದಿ ಶೀಲಯೇತ್ ।
ತಥಾಸ್ಮದಾದೀನಪಿ ನ ದ್ವಿಜಾಂಸ್ತ್ವತ್ಪಾದಲೋಚನಾನ್ ॥ ೧೯೩ ॥

---

ಧನ್ಯರೇ ಆಗಿರುವೆವು. ಭೂಮಂಡಲದಲ್ಲಿ ಯಾರು ನಿನ್ನ ನಾಮವನ್ನು ಜಪಿಸುತ್ತಿರುವರೊ, ಅವರೂ ಸಹ ಧನ್ಯರೆಂದೇ ಹೇಳಬೇಕು.

೧೮೮. ಇಂತೆಂದು ಆ ಬ್ರಾಹ್ಮಣನು ಮತ್ತೆ ಮತ್ತೆ ಮುಗುಳ್ನಗೆಯಿಂದ ಕೂಡಿದವನಾಗಿ ತಲೆಯನ್ನಲ್ಲಾಡಿಸುತ್ತ ಹೇಳಿದನು. ಆತನು ಮನಸ್ಸಿನಲ್ಲಿಯೇ ಬಹು ವಿಧವಾದ ಆನಂದವನ್ನು ಹೊಂದಿ ಹರ್ಷದಿಂದ ಮೈನವಿರೇಳುತ್ತಿರಲು ಕಂಗೊಳಿಸುತ್ತಿದ್ದನು.

೧೮೯. "ಆಶ್ಚರ್ಯ! ಈತನ ಪೂರ್ವಜನ್ಮಗಳ ಭಾಗ್ಯೋದಯವೆಷ್ಟಿರಬಹುದು! ಈತನ ಚಿತ್ತಶುದ್ಧಿಯೂ ಎಷ್ಟರದು! ಸಕಲ ಜೀವರಿಗೂ ಧ್ಯೇಯನಾದ ವಿಶ್ವೇಶ್ವರನೇ ಈತನನ್ನು ನಿರಂತರವೂ ಧ್ಯಾನಿಸುತ್ತಿರುವನು.

೧೯೦. ಈತನ ಮುಂದಿನ ಸದ್ಗತಿಯೂ ಮತ್ತೆ ಯಾರಿಗೂ ಲಭಿಸಲಾರದು. ನಮಗೂ ಸಹ ಯಾವುದು ದೂರದಲ್ಲಿರುವುದೊ, ಆ ಪದವಿಯು ಈತನಿಗೆ ಸುಲಭವಾಗಿಯೇ ಲಭಿಸುವುದು."

೧೯೧. ಆ ಬ್ರಾಹ್ಮಣೋತ್ತಮನು ಇಂತು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ತನ್ನಲ್ಲಿಯೇ ಆ ಮಹಾರಾಜನನ್ನು ಶ್ಲಾಘಿಸುತ್ತ ತಾನು ಸಮಾಧಿಸ್ಥಿತಿಯಲ್ಲಿ ಕಂಡ ವಿಷಯವೆಲ್ಲವನ್ನೂ ವರ್ಣಿಸತೊಡಗಿದನು.

೧೯೨. ಬ್ರಾಹ್ಮಣನು ಹೇಳುತ್ತಾನೆ:—"ಎಲೈ ರಾಜನೆ! ಇಂದಿಗೆ ನಿನ್ನ ಮನೋರಥವೆಂಬ ಮಹಾವೃಕ್ಷವು ಫಲವನ್ನು ಕೊಡುವುದಾಯಿತು. ಈ ದೇಹದಿಂದಲೇ ನೀನು ಪರಮಪದವನ್ನು ಸೇರುವವನಾಗಿರುವೆ.

೧೯೩. ವಿಶ್ವೇಶ್ವರನು ನಿನ್ನನ್ನು ಹೇಗೆ ನಿರಂತರವಾಗಿ ತನ್ನ ಹೃದಯ

ಕೃತಲಿಂಗಪ್ರತಿಷ್ಠಂ ತ್ವಾಂ ಸಪ್ತಮೇ ಹ್ಯದ್ಯ ವಾಸರಾತ್ ।
ದಿವ್ಯಂ ವಿಮಾನಮಾಗತ್ಯ ನೇತುಮೇಷ್ಯತಿ ಶಾಂಭವಂ ॥ ೧೯೪ ॥
ರಾಜಂಸ್ತ್ವಂ ವೇತ್ಸಿ ಕಸ್ಯಾಯಂ ವಿಪಾಕಃ ಸುಕೃತಸ್ಯ ತೇ ।
ವಾರಾಣಸ್ಯಾಃ ಪುರಃ ಸಂಯಕ್ಸ್ವೇವನಾದಿತ್ಯವೈಮ್ಯಹಂ ॥ ೧೯೫ ॥
ಏಕಮಪ್ಯತ್ರ ಯಃ ಪಾಯಾದ್ವಾರಾಣಸ್ಯಾಂ ಸ್ಥಿತಂ ಜನಂ ।
ತಸ್ಯಾಪ್ಯೇವಂ ವಿಪಾಕೋಽಸ್ತಿ ದೇಹಾಂತೇ ರಾಜಸತ್ತಮ ॥ ೧೯೬ ॥
ಇತಿ ಕೃತ್ವಾ ಸ ರಾಜರ್ಷಿರ್ದಿವೋದಾಸಃ ಪ್ರತಾಪವಾನ್ ।
ಬ್ರಾಹ್ಮಣಸ್ಯ ಸ ಶಿಷ್ಯಾಯ ಪ್ರಾದಾತ್ಪ್ರೀತೋಽಭಿವಾಂಛಿತಂ ॥ ೧೯೭ ॥
ಅಥ ಸಂಪ್ರೀಣಿತಂ ವಿಪ್ರಂ ಪ್ರಣಮ್ಯ ಚ ಮುಹುರ್ಮುಹುಃ ।
ಪ್ರೋವಾಚ ರಾಜಾ ಸಂಹೃಷ್ಟಸ್ತಾರಿತೋಽಸ್ಮಿ ಭವಾರ್ಣವಾತ್ ॥ ೧೯೮ ॥
ಬ್ರಾಹ್ಮಣೋಽಪಿ ಪ್ರಹೃಷ್ಟಾತ್ಮಾ ಪರಿಪೂರ್ಣಮನೋರಥಃ ।
ಸಮಾಪೃಚ್ಛ್ಯ ಮಹೀನಾಥಂ ಸ್ವೇಷ್ಟಂ ವೇಷ್ಟಂ ಜಗಾಮ ಹ ॥ ೧೯೯ ॥

---

ದಲ್ಲಿಯೇ ಚಿಂತಿಸುತ್ತಿರುವನೊ, ಹಾಗೆ ಆತನ ಪಾದಗಳಲ್ಲಿಯೇ ಏಕಾಗ್ರದೃಷ್ಟಿಯುಳ್ಳ ಬ್ರಾಹ್ಮಣರಾದ ನಮ್ಮನ್ನೂ ಸ್ಮರಿಸುವುದಿಲ್ಲ.

೧೯೪. ಶಿವಲಿಂಗದ ಪ್ರತಿಷ್ಠೆಯನ್ನು ನೆರವೇರಿಸಿದ ನಿನ್ನನ್ನು ಇಂದಿನಿಂದ ಏಳನೆಯ ದಿನದಲ್ಲಿ ಪರಮೇಶ್ವರನ ಲೋಕಕ್ಕೆ ಕರೆದುಕೊಂಡುಹೋಗಲು ಒಂದು ದಿವ್ಯವಾದ ವಿಮಾನವು ಇಳಿದು ಬರುವುದು.

೧೯೫. ಮಹಾರಾಜನೆ! ಈ ಪುಣ್ಯವು ನೀನು ಮಾಡಿದ ಯಾವ ಪುಣ್ಯದ ಫಲವೆಂಬುದನ್ನು ನೀನೇ ಬಲ್ಲೆಯಷ್ಟೆ! ನಾನಾದರೊ ಇದೆಲ್ಲವೂ ನಿನ್ನ ವಾರಾಣಸೀ ನಗರಸಂರಕ್ಷಣೆಯ ಫಲವೆಂದೇ ತಿಳಿದಿರುವೆನು.

೧೯೬. ರಾಜೇಶ್ವರ! ವಾರಾಣಸೀಕ್ಷೇತ್ರದಲ್ಲಿ ವಾಸಿಸುವ ಒಬ್ಬ ಮನುಷ್ಯನನ್ನೂ ಯಾವನು ಪರಿಪಾಲಿಸುವನೊ, ಅವನಿಗೂ ದೇಹಾವಸಾನವಾದ ಮೇಲೆ ಈ ವಿಧವಾದ ಕರ್ಮವಿಪಾಕವೇ ಲಭಿಸುವುದು.''

೧೯೭. ಇಂತೆಂದ ಮಾತುಗಳನ್ನು ಕೇಳಿ ಪರಾಕ್ರಮಶಾಲಿಯೂ, ರಾಜರ್ಷಿಯೂ ಆದ ಆ ದಿವೋದಾಸನು ಸುಪ್ರೀತನಾಗಿ ಶಿಷ್ಯಸಹಿತನಾದ ಆ ಬ್ರಾಹ್ಮಣನಿಗೆ ಬೇಡಿದ ಪದಾರ್ಥಗಳೆಲ್ಲವನ್ನೂ ಕೊಟ್ಟನು.

೧೯೮. ಸಂತೋಷಗೊಂಡ ಆ ಬ್ರಾಹ್ಮಣನಿಗೆ ಪುನಃಪುನಃ ಸಾಷ್ಟಾಂಗ ಪ್ರಣಾಮಗಳನ್ನು ಮಾಡುತ್ತ ರಾಜನು ಹರ್ಷದಿಂದ ''ನೀನು ನನ್ನನ್ನು ಸಂಸಾರ ಸಮುದ್ರದಿಂದ ಕಡೆಹಾಯಿಸಿದೆ'' ಎಂದು ಹೇಳಿದನು.

೧೯೯. ಬ್ರಾಹ್ಮಣನೂ ಸಹ ತನ್ನ ಮನೋರಥವು ಈಡೇರಿದುದರಿಂದ ಸಂತುಷ್ಟಾಂತರಂಗನಾಗಿ ಮಹಾರಾಜನನ್ನು ಬೀಳ್ಕೊಂಡು ತನ್ನ ವಾಸಸ್ಥಳಕ್ಕೆ ಹೊರಟುಹೋದನು.

ವಿಲೋಕ್ಯ ಕಾಶೀಂ ಪರಿತೋ ಮಾಯಾದ್ವಿಜವಪುರ್ಹರಿಃ ।
ಭೂಯೋ ಭೂಯೋ ವಿಚಾರ್ಯಾಪಿ ಕಿಮತ್ರಾತೀವಪಾವನಂ ॥ ೨೦೦ ॥
ಸ್ಥಾನಂ ಯಚ್ಚಾಹಮಧ್ಯಾಸ್ಯ ನಿಜಭಕ್ತಾನಶೇಷತಃ ।
ನೇಷ್ಯಾಮಿ ಪರಮಂ ಧಾಮ ವಿಶ್ವೇಶಾನುಗ್ರಹಾತ್ಪರಾತ್ ॥ ೨೦೧ ॥
ಸಂಪ್ರಧಾರ್ಯೇತಿ ಭಗವಾನ್ದೃಷ್ಟ್ವಾ ಪಾಂಚನದಂ ಹ್ರದಂ ।
ತತ್ರ ಕೃತ್ವಾ ವಿಧಿಸ್ನಾನಂ ತತಸ್ತತ್ರೈವ ಸಂಸ್ಥಿತಃ ॥ ೨೦೨ ॥
ಪ್ರತೀಕ್ಷಮಾಣೋ ಲಕ್ಷ್ಮೀಶೋ ಮಂಕ್ಷು ತ್ರ್ಯಕ್ಷಸಮಾಗಮಂ ।
ತಾರ್ಕ್ಷ್ಯಂ ಪ್ರಸ್ಥಾಪಯಾಂಚಕ್ರೇ ರಾಜವೃತ್ತಾಂತವೇದಿನಂ ॥ ೨೦೩ ॥
ದಿವೋದಾಸೋಽಪಿ ರಾಜೇಂದ್ರೋ ವಿಪ್ರೇಂದ್ರಂ ಪರಿವರ್ಣಯನ್ ।
ಆಹೂಯ ಪ್ರಕೃತೀಂ ಸರ್ವಾಂ ಸಾಮಾತ್ಯಾನ್ಮಂಡಲೇಶ್ವರಾನ್ ॥ ೨೦೪ ॥
ಅಧ್ಯಕ್ಷಾನಪಿ ಸರ್ವಾಂಶ್ಚ ಕೋಶಾಶ್ವೇಭಾದಿದೇಶಿತಾನ್ ।
ಪುತ್ರಾನ್ಪಂಚಶತಾನ್ಪ್ರಾಗ್ರ್ಯಃ ಸುತಂ ಚ ಸಮರಂಜಯಂ ॥ ೨೦೫ ॥

---

೨೦೦. ಬಳಿಕ ಮಾಯಾಬ್ರಾಹ್ಮಣವೇಷಧಾರಿಯಾದ ಮಹಾವಿಷ್ಣುವು ಕಾಶೀಕ್ಷೇತ್ರವನ್ನು ಚೆನ್ನಾಗಿ ಶೋಧಿಸಿ ನೋಡಿ, "ಈ ಕ್ಷೇತ್ರದಲ್ಲಿ ಪರಮಪವಿತ್ರವಾದ ಪ್ರದೇಶವು ಯಾವುದು" ಎಂಬುದಾಗಿ ಮತ್ತೆ ಮತ್ತೆ ವಿಚಾರಮಾಡಿದನು.

೨೦೧. "ಯಾವ ಸ್ಥಳವನ್ನು ಆಕ್ರಮಿಸಿ ವಿಶ್ವೇಶ್ವರನ ಅಪಾರವಾದ ಅನುಗ್ರಹದಿಂದ ನನ್ನ ಸಮಸ್ತ ಭಕ್ತರನ್ನೂ ಸರ್ವೋತ್ತಮವಾದ ಕೈಲಾಸಪದವಿಗೆ ಕರೆದುಕೊಂಡುಹೋಗಲನುವಾಗುವುದು ?"

೨೦೨. ಇಂತೆಂದು ಮನಸ್ಸಿನಲ್ಲಿಯೇ ಯೋಚಿಸುತ್ತ ಪಾಂಚನದವೆಂಬ ತೀರ್ಥವನ್ನು ನೋಡಿದವನಾಗಿ ಅಲ್ಲಿ ನಿಯಮಪೂರ್ವಕವಾಗಿ ಸ್ನಾನವನ್ನು ಮಾಡಿಕೊಂಡು ಅದನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡನು.

೨೦೩. ಶೀಘ್ರದಲ್ಲಿಯೇ ಮಹೇಶ್ವರನ ಆಗಮನವನ್ನು ನಿರೀಕ್ಷಿಸುತ್ತ ಆ ಮಹಾವಿಷ್ಣುವು ದಿವೋದಾಸರಾಜನ ವೃತ್ತಾಂತವೆಲ್ಲವನ್ನೂ ತಿಳಿದ ಗರುಡನನ್ನು ಆತನಲ್ಲಿಗೆ ಕಳುಹಿಸಿಕೊಟ್ಟನು.

೨೦೪. ರಾಜೇಶ್ವರನಾದ ದಿವೋದಾಸನೂ ಆ ಬ್ರಾಹ್ಮಣಶ್ರೇಷ್ಠನನ್ನು ಬಹುವಿಧವಾಗಿ ಹೊಗಳುತ್ತ ಸಕಲ ಪೌರಜನರನ್ನೂ, ಮಂತ್ರಿಗಳನ್ನೂ, ಸಾಮಂತರಾಜರನ್ನೂ ಕರೆದು ದೊಡ್ಡ ಸಭೆಯೊಂದನ್ನು ನಡೆಸಿದನು.

೨೦೫–೨೦೮. ಕೋಶ, ಅಶ್ವಬಲ, ಗಜಬಲಗಳನ್ನು ವಿಚಾರಣೆಯಲ್ಲಿಟ್ಟಿರುವ ಸಕಲ ಅಧ್ಯಕ್ಷರನ್ನೂ, ತನ್ನ ಐನೂರು ಮಕ್ಕಳನ್ನೂ, ಅವರಲ್ಲಿ ಜ್ಯೇಷ್ಠಪುತ್ರನಾದ ಸಮರಂಜಯನೆಂಬುವನನ್ನೂ, ಪುರೋಹಿತನನ್ನೂ, ಪ್ರತೀಹಾರಿ

ಪುರೋಹಿತಂ ಪ್ರತೀಹಾರಮೃತ್ವಿಜೋ ಗಣಕಾನ್ದ್ವಿಜಾನ್ ।
ಸಾಮಂತಾನ್ರಾಜಪುತ್ರಾಂಶ್ಚ ಸೂಪಕಾರಾಂಶ್ಚಿಕಿತ್ಸಕಾನ್ ॥ ೨೦೬ ॥
ವೈದೇಶಿಕಾನಪಿ ಬಹೂನ್ನಾನಾಕಾರ್ಯಸಮಾಗತಾನ್ ।
ಸಾಂತಃಪುರಾಂ ಚ ಮಹಿಷೀಂ ವೃದ್ಧಗೋಪಾಲಬಾಲಕಾನ್ ॥ ೨೦೭ ॥
ಸರ್ವಾನ್ಪ್ರೋವಾಚ ಹೃಷ್ಟಾತ್ಮಾ ಪ್ರಬದ್ಧಕರಸಂಪುಟಃ ।
ಯಥಾ ಸ ಬ್ರಾಹ್ಮಣಃ ಪ್ರಾಹ ದಿನಸಪ್ತಾವಧಿಸ್ಥಿತಂ ॥ ೨೦೮ ॥
ಆಶ್ಚರ್ಯಂ ತೇಷು ಶೃಣ್ವತ್ಸು ವಿಷಣ್ಣವದನೇಷು ಚ ।
ಸ್ವಯಂ ರಾಜಗೃಹಂ ನೀತ್ವಾ ಕುಮಾರಂ ಸಮರಂಜಯಂ ॥ ೨೦೯ ॥
ಅಭಿಷಿಚ್ಯ ಮಹಾಬುದ್ಧಿಃ ಪೌರಾನ್ಜಾನಪದಾನಪಿ ।
ಪ್ರಸಾದೀಕೃತ್ಯ ಪುಣ್ಯಾತ್ಮಾ ಪುನಃ ಕಾಶೀಮಗಾನ್ನೃಪಃ ॥ ೨೧೦ ॥
ಆಗತ್ಯ ಕಾಶೀಂ ಮೇಧಾವೀ ಸ ಭೂಪಾಲೋ ರಿಪುಂಜಯಃ ।
ಪ್ರಾಸಾದಂ ಕಾರಯಾಮಾಸ ಸ್ವರ್ಧುನ್ಯಾಃ ಪಶ್ಚಿಮೇ ತಟೇ ॥ ೨೧೧ ॥

---

ಯನ್ನೂ, ಋತ್ವಿಜರನ್ನೂ, ಜ್ಯೋತಿಷ್ಯದಲ್ಲಿ ನಿಪುಣರಾದ ಬ್ರಾಹ್ಮಣರನ್ನೂ, ಸಾಮಂತರಾಜರನ್ನೂ, ರಾಜಪುತ್ರರನ್ನೂ, ಅಡಿಗೆಯವರನ್ನೂ, ವೈದ್ಯಶ್ರೇಷ್ಠರನ್ನೂ, ಅನೇಕ ಕಾರ್ಯಗಳಿಗಾಗಿ ತನ್ನ ದೇಶಕ್ಕೆ ಬಂದಿರುವ ಪರದೇಶಗಳ ಜನರನ್ನೂ, ಅಂತಃಪುರಸ್ತ್ರೀಯರೊಡಗೂಡಿದ ಪಟ್ಟಮಹಿಷಿಯನ್ನೂ, ಗೋಪಾಲಕರಲ್ಲಿ ವೃದ್ಧರನ್ನೂ, ಬಾಲಕರನ್ನೂ, ಎಲ್ಲರನ್ನೂ ಸಭಾಮಂಟಪದಲ್ಲಿ ಒಟ್ಟುಗೂಡಿಸಿ ಸಂತುಷ್ಟಹೃದಯನಾಗಿ ಕೈಗಳನ್ನು ಮುಗಿದುಕೊಂಡು ಆ ಬ್ರಾಹ್ಮಣನು ತನಗೆ ಹೇಳಿದ ಏಳು ದಿನಗಳ ಭೂಲೋಕವಾಸದ ಅವಧಿಯ ವಿಷಯವನ್ನು ಅವರಿಗೆ ತಿಳಿಸಿದರು.

೨೦೯. ಆಶ್ಚರ್ಯಕರವಾದ ಈ ವಿಷಯವನ್ನು ಕೇಳಿ ಅವರೆಲ್ಲರೂ ದುಃಖಸೂಚಕಗಳಾದ ಮುಖಗಳುಳ್ಳವರಾಗಿರುವಲ್ಲಿ ತಾನೇ ಜ್ಯೇಷ್ಠಪುತ್ರನಾದ ಸಮರಂಜಯನನ್ನು ರಾಜಗೃಹಕ್ಕೆ ಕರೆದುಕೊಂಡು ಹೋದನು.

೨೧೦. ಮಹಾಪ್ರಾಜ್ಞನಾದ ಆ ದಿವೋದಾಸನು ಆತನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಪುರಜನರನ್ನೂ ದೇಶದ ಜನರನ್ನೂ ಆತನ ಆಳ್ವಿಕೆಯಲ್ಲಿಗುವಂತೆ ಪ್ರಸನ್ನಚಿತ್ತರನ್ನಾಗಿ ಮಾಡಿದ ಬಳಿಕ ಪುಣ್ಯಾತ್ಮನಾದ ಆ ದೊರೆಯು ಪುನಃ ಕಾಶೀಕ್ಷೇತ್ರವನ್ನು ಸೇರಿದನು.

೨೧೧. ಬುದ್ಧಿಕುಶಲನೂ, ಶತ್ರುಂಜಯನೂ ಆದ ಆ ಭೂಪಾಲಕನು ಕಾಶೀನಗರಕ್ಕೆ ಬಂದು ಗಂಗಾನದಿಯ ಪಶ್ಚಿಮತೀರದಲ್ಲಿ ಉತ್ತಮವಾದ ಪ್ರಾಸಾದವೊಂದನ್ನು ನಿರ್ಮಾಣಮಾಡಿಸಿದನು.

ರಿಪೂನ್ಪ್ರಮುಥ್ಯ ಸಮರೇ ಯಾವತೀ ಶ್ರೀರುಪಾರ್ಜಿತಾ ।
ತಾವತ್ಯಾ ಸ ಹಿ ಭೂಪಾಲಃ ಶಿವಾಲಯಮಚೀಕ್ಲೃಪತ್ ॥ ೨೧೨ ॥
ಭೂಪಾಲಲಕ್ಷ್ಮೀರಖಿಲಾ ಯತ್ತತ್ರವಿನಿಯೋಜಿತಾ ।
ಭೂಪಾಲಶ್ರೀರಿತಿಖ್ಯಾತಾ ತತಃ ಸಾ ಭೂರಭೂಚ್ಛುಭಾ ॥ ೨೧೩ ॥
ದಿವೋದಾಸೇಶ್ವರಂ ಲಿಂಗಂ ಪ್ರತಿಷ್ಠಾಪ್ಯ ರಿಪುಂಜಯಃ ।
ಕೃತಕೃತ್ಯಮಿವಾತ್ಮಾನಮಮನ್ಯತ ನರೇಶ್ವರಃ ॥ ೨೧೪ ॥
ಅಥೈಕಸ್ಮಿನ್ದಿನೇ ರಾಜಾ ತಲ್ಲಿಂಗಂ ವಿಧಿಪೂರ್ವಕಂ ।
ಸಮಭ್ಯರ್ಚ್ಯ ನಮಸ್ಕೃತ್ಯ ಯಾವತ್ತುಷ್ಟಾವ ತುಷ್ಟಿದಂ ॥ ೨೧೫ ॥
ತಾವನ್ನಭೋಽಂಗಣಾದಾಶು ದಿವ್ಯಂ ಯಾನಮವಾತರತ್ ।
ಪಾರ್ಷದೈಃ ಪರಿತಃ ಕೀರ್ಣಂ ಶೂಲಖಟ್ವಾಂಗಪಾಣಿಭಿಃ ॥ ೨೧೬ ॥
ಅತ್ಯಾದಿತ್ಯಾಗ್ನಿತೇಜೋಭಿರ್ಭಾಲನೇತ್ರೈಃ ಕಪರ್ದಿಭಿಃ ।
ಶುದ್ಧಸ್ಫಟಿಕಸಂಕಾಶೈರಂಗೈರ್ದೀಪ್ತನಭೋಽಂಗಣೈಃ ॥ ೨೧೭ ॥

---

೨೧೨. ಶತ್ರುಗಳನ್ನು ಯುದ್ಧಗಳಲ್ಲಿ ಪರಾಜಯಗೊಳಿಸಿ ಎಷ್ಟು ಐಶ್ವರ್ಯವನ್ನು ಸಂಪಾದಿಸಿದ್ದನೊ, ಅದೆಲ್ಲವನ್ನೂ ವಿನಿಯೋಗಿಸಿ ಆ ಮಹಾರಾಜನು ಉತ್ತಮವಾದ ಶಿವಾಲಯವೊಂದನ್ನು ಕಟ್ಟಿಸಿದನು.

೨೧೩. ಅಲ್ಲಿ ಭೂಪಾಲಕನ ಸಕಲೈಶ್ವರ್ಯವೂ ದೇವಾಲಯ ನಿರ್ಮಾಣದಲ್ಲಿ ನಿಯೋಜಿತವಾದುದರಿಂದ ಪವಿತ್ರವಾದ ಆ ಪ್ರದೇಶವೆಲ್ಲವೂ ಅಂದಿನಿಂದ ಭೂಪಾಲಶ್ರೀಯೆಂಬುದಾಗಿಯೇ ಪ್ರಸಿದ್ಧಿಯನ್ನು ಪಡೆಯಿತು.

೨೧೪. ಶತ್ರುಸಂಹಾರಕನಾದ ಆ ಮಹಾರಾಜನು ದಿವೋದಾಸೇಶ್ವರವೆಂಬ ಲಿಂಗವನ್ನು ಪ್ರತಿಷ್ಠೆಗೊಳಿಸಿ ತಾನು ಕೃತಕೃತ್ಯನಾದೆನೆಂದು ಸಂತೋಷಗೊಂಡನು.

೨೧೫. ಬಳಿಕ ಒಂದಾನೊಂದು ದಿನ ಆ ಲಿಂಗಕ್ಕೆ ವಿಧಿಪೂರ್ವಕವಾಗಿ ಷೋಡಶೋಪಚಾರಯುಕ್ತವಾದ ಪೂಜೆಯನ್ನು ಮಾಡಿ ನಮಸ್ಕರಿಸಿ ಆ ದಿವೋದಾಸನು ಸಕಲ ಸಂತೋಷಗಳನ್ನೀಯುವ ಮಹೇಶ್ವರನನ್ನು ಸ್ತೋತ್ರಮಾಡಿದನು.

೨೧೬. ಅಷ್ಟರಲ್ಲಿಯೇ ಆಕಾಶದಿಂದ ಶೂಲ, ಖಟ್ವಾಂಗಗಳನ್ನು ಕೈಗಳಲ್ಲಿ ಧರಿಸಿದ ಪಾರ್ಷದಗಣಗಳಿಂದ ಸುತ್ತುವರೆಯಲ್ಪಟ್ಟ ದಿವ್ಯವಾದ ವಿಮಾನವೊಂದು ಆತನಿದ್ದಲ್ಲಿಗೆ ವೇಗವಾಗಿ ಇಳಿದು ಬಂದಿತು.

೨೧೭. ಆ ಪಾರ್ಷದರು ಸೂರ್ಯ ಮತ್ತು ಅಗ್ನಿಗಳನ್ನೇ ತಮ್ಮ ತೇಜಸ್ಸಿನಿಂದ ಧಿಕ್ಕರಿಸುತ್ತ, ಹಣೆಗಣ್ಣುಗಳಿಂದಲೂ, ಜಟಾಜೂಟಗಳಿಂದಲೂ, ಕೂಡಿದವರಾಗಿ ಶುದ್ಧ ಸ್ಫಟಿಕದಂತೆ ಹೊಳೆಯುತ್ತಿರುವ ತಮ್ಮ ದೇಹಗಳ ಕಾಂತಿಯಿಂದ ಆಕಾಶವನ್ನೆಲ್ಲ ಬೆಳಗುತ್ತಿದ್ದರು.

ವಿಭೂಷಾ ಹಿ ಫಣಾರತ್ನಜ್ಯೋತಿಃ ಪೂಜಿತವಿಗ್ರಹೈಃ ।
ನಿತ್ಯಪ್ರಕಾಶಸಂತ್ರಸ್ತತಮಃ ಶ್ರಿತಶಿರೋಧರೈಃ ॥ ೨೧೮ ॥
ಚಾಮರವ್ಯಗ್ರಹಸ್ತಾಗ್ರರುದ್ರಕನ್ಯಾಶತಾವೃತಂ ।
ಅಥ ಪಾರಿಷದೈ ರಾಜಾ ದಿವ್ಯಸ್ರಗನುಲೇಪನೈಃ ॥ ೨೧೯ ॥
ದಿವ್ಯೈರ್ದುಕೂಲನೇಪಥ್ಯೈರಲಂಚಕ್ರೇ ಮುದಾನ್ವಿತೈಃ ।
ತ್ರಿನೇತ್ರೀಕೃತಸದ್ಭಾಲಂ ಶ್ಯಾಮೀಕೃತಶಿರೋಧರಂ ॥ ೨೨೦ ॥
ಸುಗೌರೀಕೃತಸರ್ವಾಂಗಂ ಕಪರ್ದೀಕೃತಮೌಲಿಜಂ ।
ಚತುರ್ಭುಜೀಕೃತತನುಂ ಭೂಷಣೀಕೃತಪನ್ನಗಂ ॥ ೨೨೧ ॥
ಚಂದ್ರಾರ್ಧೀಕೃತಮೂರ್ಧಾನಂ ನಿನ್ಯುಸ್ತಂ ಪಾರ್ಷದಾ ದಿವಂ ॥ ೨೨೨ ॥
ತದಾಪ್ರಭೃತಿ ತತ್ತೀರ್ಥಂ ಭೂಪಾಲಶ್ರೀರಿತಿ ಶ್ರುತಂ ।
ತತ್ರ ಶ್ರಾದ್ಧಾದಿಕಂ ಕೃತ್ವಾ ದಾನಂ ದತ್ವಾ ಸ್ವಶಕ್ತಿತಃ ॥ ೨೨೩ ॥
ದಿವೋದಾಸೇಶ್ವರಂ ದೃಷ್ಟ್ವಾ ಸಮಭ್ಯರ್ಚ್ಯ ಚ ಭಕ್ತಿತಃ ।
ರಾಜ್ಞಃಶ್ಲಾಖ್ಯಾಯಿಕಾಂ ಶ್ರುತ್ವಾ ನ ನರೋ ಗರ್ಭಮಾವಿಶೇತ್ ॥ ೨೨೪ ॥

---

೨೧೮. ಭೂಷಣಗಳಾಗಿ ಧರಿಸಿದ ಹಾವುಗಳ ಹೆಡೆ ರತ್ನಗಳ ಕಾಂತಿಯಿಂದ ಆವೃತಗಳಾದ ದೇಹಗಳಿಂದಲೂ, ನಿತ್ಯವಾದ ತಮ್ಮತೇಜಸ್ಸಿಗೆ ಹೆದರಿ ಮರೆಮಾಚಿದ ಕತ್ತಲೆಯಂತೆ ಕತ್ತಿನಲ್ಲಿ ಕಾಣುತ್ತಿರುವ ನೀಲಲಾಂಛನಗಳಿಂದಲೂ ಒಪ್ಪುತ್ತಿದ್ದರು.

೨೧೯–೨೨೨. ಆ ವಿಮಾನವು ಚಾಮರಗಳನ್ನು ಜಾಗರೂಕತೆಯಿಂದ ಹಿಡಿದ ಕೈಗಳುಳ್ಳ ನೂರಾರು ರುದ್ರಕನ್ಯೆಯರಿಂದ ಕೂಡಿದ್ದಿತು. ಆಗಲಾ ಪಾರ್ಷದ ಗಣಗಳು ರಾಜನನ್ನು ದಿವ್ಯ ಪುಷ್ಪಗಳಿಂದಲೂ, ಗಂಧಾದಿಲೇಪನಗಳಿಂದಲೂ, ದಿವ್ಯವಸ್ತ್ರಗಳನ್ನುಡಿಸುವುದರಿಂದಲೂ, ಸಂತೋಷದಿಂದ ಅಲಂಕರಿಸಿದರು. ಭಾಲದಲ್ಲಿ ಮೂರನೆಯ ಕಣ್ಣನ್ನು ತಿದ್ದಿ, ಕತ್ತಿನಲ್ಲಿ ನೀಲಕಳಂಕವನ್ನು ಧರಿಸಿ, ಚಂದನದಿಂದ ಸರ್ವಾಂಗಗಳಲ್ಲಿಯೂ ಗೌರಕಾಂತಿಯನ್ನು ತಳೆದು, ತಲೆಗೂದಲುಗಳನ್ನು ಜಟಾಜೂಟವಾಗಿ ಕಟ್ಟಿ, ದೇಹದಲ್ಲಿ ಚತುರ್ಭುಜಗಳುಳ್ಳವನೂ, ಸರ್ಪಭೂಷಣಗಳನ್ನೇ ಧರಿಸಿದವನೂ, ತಲೆಯ ಮೇಲೆ ಅರ್ಧಚಂದ್ರನುಳ್ಳವನೂ ಆದ, ಆ ದಿವೋದಾಸ ಮಹಾರಾಜನನ್ನು ಪಾರ್ಷದರು ವಿಮಾನದಲ್ಲಿ ಕುಳ್ಳಿರಿಸಿ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದರು.

೨೨೩–೨೨೪. ಅಂದು ಮೊದಲಾಗಿ ಆ ತೀರ್ಥವು ಭೂಪಾಲಶ್ರೀತೀರ್ಥವೆಂದು ಪ್ರಸಿದ್ಧವಾಗಿರುವುದು. ಅಲ್ಲಿ ಪಿತೃಶ್ರಾದ್ಧಾದಿ ಕಾರ್ಯಗಳನ್ನು ನೆರವೇರಿಸಿ, ತನ್ನ ಶಕ್ತ್ಯನುಸಾರವಾಗಿ ದಾನಗಳನ್ನಿತ್ತು, ದಿವೋದಾಸೇಶ್ವರನನ್ನು ಕಂಡು ಭಕ್ತಿಯುಕ್ತನಾಗಿ ಪೂಜೆಯನ್ನುಮಾಡಿ, ಆ ಮಹಾರಾಜನ ಚರಿತ್ರೆಯನ್ನು

ಆಖ್ಯಾನಮೇತನ್ನೃಪತೇರ್ದಿವೋದಾಸಸ್ಯ ಪಾವನಂ ।
ಪಠಿತ್ವಾ ಪಾಠಯಿತ್ವಾಪಿ ನರಃ ಪಾಪೈಃ ಪ್ರಮುಚ್ಯತೇ ॥ ೨೨೫ ॥
ದಿವೋದಾಸಶುಭಾಖ್ಯಾನಂ ಶ್ರುತ್ವಾ ಯಃ ಸಮರಂ ವಿಶೇತ್ ।
ನ ಜಾತು ಜಾಯತೇ ತಸ್ಯ ಭಯಂ ವೈರಿಕೃತಂ ಕ್ವಚಿತ್ ॥ ೨೨೬ ॥
ದಿವೋದಾಸಕಥಾ ಪುಣ್ಯಾ ಮಹೋತ್ಪಾತನಿಕೃಂತನೀ ।
ಪಠನೀಯಾ ಪ್ರಯತ್ನೇನ ಸರ್ವವಿಘ್ನೋಪಶಾಂತಯೇ ॥ ೨೨೭ ॥
ನಾವೃಷ್ಟಿರ್ಜಾಯತೇ ತತ್ರ ನಾಕಾಲಮರಣಾದ್ಭಯಂ ।
ದೈವೋದಾಸೀ ಕಥಾ ಯತ್ರ ಸರ್ವಪಾತಕನಾಶಿನೀ ॥ ೨೨೮ ॥
ಅಸ್ಯಾಖ್ಯಾನಸ್ಯ ಪಠನಾದ್ವಿಷ್ಣೋರಿವ ಮನೋರಥಾಃ ।
ಸಂಪೂರ್ಣತಾಂ ಗಮಿಷ್ಯಂತಿ ಶಂಭೋಶ್ಚಿಂತಿತಕಾರಿಣಃ ॥ ೨೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದಿವೋದಾಸನಿರ್ವಾಣಪ್ರಾಪ್ತಿವರ್ಣನಂ" ನಾಮಾಷ್ಟಪಂಚಾಶತ್ತಮೋऽಧ್ಯಾಯಃ

---

ಕೇಳಲು ಯಾವ ಮಾನವನೂ ಪುನಃ ತಾಯಿಯ ಗರ್ಭದಲ್ಲಿ ದುಃಖವನ್ನನುಭವಿಸುವುದಿಲ್ಲ.

೨೨೫. ದಿವೋದಾಸರಾಜನ ಈ ಆಖ್ಯಾನವು ಪರಮಪವಿತ್ರವಾದುದು. ಇದನ್ನು ಪಠನಮಾಡಿದ ಮಾನವನೂ, ಇತರರಿಗೆ ಪುರಾಣರೂಪವಾಗಿ ಹೇಳಿಸಿದವನೂ ಸಕಲಪಾತಕಗಳಿಂದಲೂ ಮುಕ್ತರಾಗುವರು.

೨೨೬. ದಿವೋದಾಸನ ಪವಿತ್ರಚರಿತ್ರೆಯನ್ನು ಕೇಳಿ ಯಾವ ಕ್ಷತ್ರಿಯನು ಯುದ್ಧರಂಗವನ್ನು ಪ್ರವೇಶಿಸುವನೊ, ಅವನಿಗೆಂದಿಗೂ ಸ್ವಲ್ಪವಾದರೂ ಶತ್ರುಗಳ ಕಡೆಯಿಂದ ಭಯವೆಂಬುದುಂಟಾಗುವುದಿಲ್ಲ.

೨೨೭. ಈ ದಿವೋದಾಸನ ಕಥೆಯು ಪುಣ್ಯಪ್ರದವೂ, ಮಹಾಪಾತಕಗಳನ್ನು ನಾಶಗೊಳಿಸುವುದೂ ಆಗಿರುವುದು. ಸಕಲ ಕಾರ್ಯಗಳಲ್ಲಿಯೂ ವಿಘ್ನಗಳನ್ನು ದೂರಗೊಳಿಸಲು ಪ್ರತಿಯೊಬ್ಬನೂ ಇದನ್ನು ಅವಶ್ಯಕವಾಗಿ ಪಠನಮಾಡಬೇಕು.

೨೨೮. ಯಾವ ದೇಶದಲ್ಲಿ ದಿವೋದಾಸಮಹಾರಾಜನ ಚರಿತ್ರೆಯು ಪುರಾಣರೂಪವಾಗಿ ಹೇಳಲ್ಪಡುತ್ತಿರುವುದೊ, ಸಕಲಪಾತಕಗಳನ್ನೂ ನಾಶಗೊಳಿಸುವ ಆ ಕಥೆಯ ಮಹಿಮೆಯಿಂದ ಆ ದೇಶದಲ್ಲಿ ಅನಾವೃಷ್ಟಿಯುಂಟಾಗುವುದಿಲ್ಲ. ಜನರಿಗೆ ಎಂದಿಗೂ ಅಕಾಲಮೃತ್ಯುವಿನಿಂದ ಭಯವುಂಟಾಗಲಾರದು.

೨೨೯. ಮಹೇಶ್ವರನ ಮನಸ್ಸಿನಲ್ಲಿದ್ದ ಕಾರ್ಯವನ್ನು ಕೈಗೂಡಿಸಿದ ಮಹಾವಿಷ್ಣುವಿನ ಮನೋರಥಗಳೆಲ್ಲವೂ ಸಿದ್ಧಿಸಿದಂತೆಯೇ, ಈ ಉಪಾಖ್ಯಾನವನ್ನು ಕೇಳಿದ ಮತ್ತು ಪಠನಮಾಡಿದ ಮನುಷ್ಯರ ಇಷ್ಟಾರ್ಥಗಳೂ ನೆರವೇರುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ದಿವೋದಾಸನ ನಿರ್ವಾಣಪ್ರಾಪ್ತಿವರ್ಣನ"ವೆಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥೈಕೋನಷಷ್ಟಿತಮೋಽಧ್ಯಾಯಃ

### ಪಂಚನದಾವಿರ್ಭಾವವರ್ಣನಂ

ಅಗಸ್ತ್ಯ ಉವಾಚ :—

ಸರ್ವಜ್ಞ ಹೃದಯಾನಂದ ಗೌರೀಚುಂಬಿತಮೂರ್ಧಜ ।
ತಾರಕಾಂತಕ ಷಡ್ವಕ್ತ್ರ ತಾರಿಣೇ ಭದ್ರಕಾರಿಣೇ ॥ ೧ ॥
ಸರ್ವಜ್ಞಾನನಿಧೇ ತುಭ್ಯಂ ನಮಃ ಸರ್ವಜ್ಞಸೂನವೇ ।
ಸರ್ವಥಾ ಜಿತಮಾರಾಯ ಕುಮಾರಾಯ ಮಹಾತ್ಮನೇ ॥ ೨ ॥
ಕಾಮಾರಿಮರ್ಧನಾರೀಶಂ ವೀಕ್ಷ್ಯ ಕಾಮಕೃತಂ ಕಿಲ ।
ಯೋ ಜಿಗಾಯ ಕುಮಾರೋಽಪಿ ಮಾರಂ ತಸ್ಮೈ ನಮೋಸ್ತು ತೇ ॥ ೩ ॥
ಯದುಕ್ತಂ ಭವತಾ ಸ್ಕಂದ ಮಾಯಾದ್ವಿಜವಪುರ್ಹರಿಃ ।
ಕಾಶ್ಯಾಂ ಪಂಚನದಂ ತೀರ್ಥಮಧ್ಯಾಸಾತೀವ ಪಾವನಂ ॥ ೪ ॥
ಭೂರ್ಭುವಃ ಸ್ವಃ ಪ್ರದೇಶೇಷು ಕಾಶೀ ಪರಮಪಾವನಂ ।
ತತ್ರಾಪಿ ಹರಿಣಾಜ್ಞಾಯಿ ತೀರ್ಥಂ ಪಂಚನದಂ ಪರಂ ॥ ೫ ॥

---

### ಕನ್ನಡದ ಅನುವಾದ

#### ಪಂಚನದಾವಿರ್ಭಾವವರ್ಣನ

೧-೨. ಅಗಸ್ತ್ಯನು ಹೇಳುತ್ತಾನೆ:—ಸರ್ವಜ್ಞನಾದ ಮಹಾದೇವನ ಹೃದಯಕ್ಕೆ ಆನಂದವನ್ನುಂಟುಮಾಡುವವನೂ, ಗೌರಿಯು ಮುದ್ದಿಡುವ ತಲೆಗೂದಲುಳ್ಳವನೂ, ತಾರಕಾಸುರನನ್ನು ನಿಗ್ರಹಿಸಿದವನೂ, ಷಡಾನನನೂ, ಸಂಸಾರದಿಂದ ಕಡೆಹಾಯಿಸುವವನೂ, ಮಂಗಳವನ್ನುಂಟುಮಾಡುವವನೂ, ಅಷ್ಟಾದಶವಿದ್ಯೆಗಳ ನಿಧಿಯೂ, ಪರಮೇಶ್ವರನ ಪುತ್ರನೂ, ಕಾಮವನ್ನು ಸಂಪೂರ್ಣವಾಗಿ ಜಯಿಸಿದವನೂ, ಕುಮಾರಸ್ವಾಮಿಯೂ, ಮಹಾತ್ಮನೂ ಆದ ನಿನಗೆ ನಮಸ್ಕರಿಸುವೆನು.

೩. ಕಾಮವೈರಿಯೆನಿಸಿದ ಶಿವನೂ ಕಾಮದ ಫಲವಾಗಿಯೇ ಅರ್ಧನಾರೀಶ್ವರನಾದುದನ್ನು ಕಂಡು ಶಿಶುವಾದರೂ ಮನ್ಮಥನನ್ನು ಜಯಿಸಿದ ನಿನಗೆ ನಮಸ್ಕಾರವನ್ನು ಮಾಡುತ್ತಿರುವೆನು.

೪. ಎಲೈ ಸ್ಕಂದನೆ! ಹಿಂದೆ ಶ್ರೀಹರಿಯು ಮಾಯಾಬ್ರಾಹ್ಮಣನ ವೇಷವನ್ನು ಧರಿಸಿದವನಾಗಿ ದಿವೋದಾಸನಿಗೆ ಉಪದೇಶವನ್ನು ಮಾಡಿ ಕಾಶೀಕ್ಷೇತ್ರದಲ್ಲಿ ಪರಮಪವಿತ್ರವಾದ ಪಂಚನದ ತೀರ್ಥವನ್ನು ಸೇರಿ ನಿಂತನೆಂದು ಹೇಳಿದೆಯಲ್ಲವೆ.

೫. ಮೂರು ಲೋಕಗಳಲ್ಲಿಯೂ ಕಾಶೀಕ್ಷೇತ್ರವೇ ಪರಮಪವಿತ್ರವಾದ ಪ್ರದೇಶವೆಂದು ವಿಖ್ಯಾತವಾಗಿರುವುದು. ಆದರಲ್ಲಿಯೂ ಪಂಚನದ ತೀರ್ಥವೇ ಸರ್ವೋತ್ತಮವೆಂದು ಶ್ರೀ ಹರಿಯು ನಿಶ್ಚಯಿಸಿದನು.

ಕುತಃ ಪಂಚನದಂ ನಾಮ ತಸ್ಯ ತೀರ್ಥಸ್ಯ ಷಣ್ಮುಖ ।
ಕುತಶ್ಚ ಸರ್ವತೀರ್ಥೇಭ್ಯಸ್ತದಾಸೀತ್ಪಾವನಂ ಪರಂ ॥ ೬ ॥
ಕಥಂ ಚ ಭಗವಾನ್ವಿಷ್ಣುರಂತರಾತ್ಮಾ ಜಗತ್ಪತಿಃ ।
ಸರ್ವೇಷಾಂ ಜಗತಾಂ ಪಾತಾ ಕರ್ತಾ ಹರ್ತಾ ಚ ಲೀಲಯಾ ॥ ೭ ॥
ಅರೂಪೋ ರೂಪವಾನಾಸನ್ನೋ ಹ್ಯವ್ಯಕ್ತೋ ವ್ಯಕ್ತತಾಂ ಗತಃ ।
ನಿರಾಕಾರೋಽಪಿ ಸಾಕಾರೋ ನಿಷ್ಪ್ರಪಂಚಃ ಪ್ರಪಂಚಭಾಕ್ ॥ ೮ ॥
ಅಜನ್ಮಾನೇಕಜನ್ಮಾ ಚ ಸ್ವನಾಮ್ನಾ ಸ್ಫುಟನಾಮಭೃತ್ ।
ನಿರಾಲಂಬೋಽಖಿಲಾಲಂಬೋ ನಿರ್ಗುಣೋಽಪಿ ಗುಣಾಸ್ಪದಂ ॥ ೯ ॥
ಅಹೃಷೀಕೋ ಹೃಷೀಕೇಶೋಽಪ್ಯಸಂಘ್ರಿರಪಿ ಸರ್ವಗಃ ।
ಉಪಸಂಹೃತ್ಯ ರೂಪಂ ಸ್ವಂ ಸರ್ವವ್ಯಾಪೀ ಜನಾರ್ದನಃ ॥ ೧೦ ॥
ಸ್ಥಿತಃ ಸಾರ್ವಾತ್ಮ್ಯಭಾವೇನ ತೀರ್ಥೇ ಪಂಚನದೇ ಪರೇ ।
ಏತದಾಖ್ಯಾಹಿ ಷಡ್ವಕ್ತ್ರ ಪಂಚವಕ್ತ್ರಾದ್ಯಥಾಶ್ರುತಂ ॥ ೧೧ ॥

---

೬. ಷಣ್ಮುಖನೇ! ಆ ತೀರ್ಥಕ್ಕೆ ಪಂಚನದವೆಂಬ ನಾಮವು ಹೇಗೆ ಸಂಭವಿಸಿತು? ಮತ್ತು ಕಾಶಿಯಲ್ಲಿರುವ ಸಮಸ್ತ ತೀರ್ಥಗಳಲ್ಲಿಯೂ ಅದು ಪರಮ ಪಾವನವೆನಿಸಲು ಕಾರಣವೇನು?

೭. ಷಡ್ಗುಣೈಶ್ವರ್ಯಭರಿತನೂ, ಜೀವರ ಅಂತರಾತ್ಮನೂ, ಜಗನ್ನಾಥನೂ ಆದ ಮಹಾವಿಷ್ಣುವು ಸಕಲ ಲೋಕಗಳನ್ನೂ ಲೀಲಾಮಾತ್ರದಿಂದಲೇ ಪಾಲಿಸುವನು, ಸೃಷ್ಟಿಮಾಡುವನು ಮತ್ತು ಸಂಹರಿಸುವನು.

೮. ರೂಪರಹಿತನಾದರೂ ವ್ಯಕ್ತರೂಪವನ್ನು ಧರಿಸಿರುವನು. ಅವ್ಯಕ್ತನಾದರೂ ಜನರ ನೇತ್ರಗಳಿಗೆ ವ್ಯಕ್ತನಾಗಿರುವನು. ಸ್ವತಃ ನಿರಾಕಾರನಾದರೂ ಆಕಾರಸಹಿತನಾಗಿರುವನು. ಜನನಮರಣರೂಪವಾದ ಪ್ರಪಂಚದ ಸಂಪರ್ಕವಿಲ್ಲದಿದ್ದರೂ ಪ್ರಪಂಚದಲ್ಲಿಯೇ ನೆಲಸಿರುವನು.

೯. ಜನ್ಮರಹಿತನಾದರೂ ಅನೇಕ ಅವತಾರಗಳನ್ನೆತ್ತಿರುವನು. ನಾಮನಿರೂಪ್ಯನಲ್ಲದಿದ್ದರೂ ನಾರಾಯಣಾದಿ ಸ್ಪಷ್ಟನಾಮಗಳನ್ನು ಧರಿಸಿರುವನು. ತನಗೆ ಯಾವ ಆಲಂಬನವಿಲ್ಲದಿದ್ದರೂ ತಾನೇ ಬ್ರಹ್ಮಾಂಡಕ್ಕೆ ಆಲಂಬನವಾಗಿರುವನು. ಗುಣಾತೀತನಾದರೂ ಗುಣಗಳಿಗೆ ಆಶ್ರಯನಾಗಿರುವನು.

೧೦-೧೧. ಇಂದ್ರಿಯಹೀನನಾದರೂ ಇಂದ್ರಿಯಾಧಿಷ್ಠಾತೃವೆನಿಸಿರುವನು. ಪಾದಹೀನನಾದರೂ ಸರ್ವವ್ಯಾಪ್ತನಾಗಿರುವನು. ಇಂತಹ ಸರ್ವವ್ಯಾಪಿಯಾದ ಪರಮಾತ್ಮನು ತನ್ನ ಸ್ವರೂಪವನ್ನು ಸಂಕೋಚಗೊಳಿಸಿಕೊಂಡು ಉತ್ತಮವಾದ ಪಂಚನದತೀರ್ಥದಲ್ಲಿ ತನ್ನ ಸಾರ್ವಾತ್ಮ್ಯವನ್ನು ತೋರುತ್ತ ನಿಂತಿರುವನು. ಓ ಷಣ್ಮುಖನೇ! ಈ ತೀರ್ಥದ ಚರಿತ್ರೆಯನ್ನು ಪರಮೇಶ್ವರನಿಂದ ನೀನು ಕೇಳಿರುವಂತೆಯೇ ಯಥಾವತ್ತಾಗಿ ನನಗೆ ನಿರೂಪಿಸುವವನಾಗು.

ಸ್ಕಂದ ಉವಾಚ :—

ಕಥಯಾಮಿ ಕಥಾಮೇತಾಂ ಸಮುಸ್ಮೃತ್ಯ ಮಹೇಶ್ವರಂ ।
ಸರ್ವಾಘೌಘಪ್ರಶಮನೀಂ ಸರ್ವಶ್ರೇಯೋವಿಧಾಯಿನೀಂ ॥ ೧೨ ॥
ಯಥಾ ಪಂಚನದಂ ತೀರ್ಥಂ ಕಾಶ್ಯಾಂ ಪ್ರಥಿತಿಮಾಗತಂ ।
ಯನ್ನಾಮಗ್ರಹಣಾದೇವ ಪಾಪಂ ಯಾತಿ ಸಹಸ್ರಧಾ ॥ ೧೩ ॥
ಪ್ರಯಾಗೋಽಪಿ ಹಿ ತೀರ್ಥೇಶೋ ಯತ್ರ ಸಾಕ್ಷಾತ್ಸ್ವಯಂ ಸ್ಥಿತಃ ।
ಪಾಪಿನಾಂ ಪಾಪಸಂಘಾತಂ ಪ್ರಸಹ್ಯ ನಿಜತೇಜಸಾ ॥ ೧೪ ॥
ಹರಂತಿ ಸರ್ವತೀರ್ಥಾನಿ ಪ್ರಯಾಗಸ್ಯ ಬಲೇನ ಹಿ ।
ತಾನಿ ಸರ್ವಾಣಿ ತೀರ್ಥಾನಿ ಮಾಘೇ ಮಕರಗೇ ರವೌ ॥ ೧೫ ॥
ಪ್ರತ್ಯಬ್ದಂ ನಿರ್ಮಲಾನಿ ಸ್ಯುಸ್ತೀರ್ಥರಾಜಸಮಾಗಮಾತ್ ।
ಪ್ರಯಾಗಶ್ಚಾಪಿ ತೀರ್ಥೇಂದ್ರಃ ಸರ್ವತೀರ್ಥಾರ್ಪಿತಂ ಮಲಂ ॥ ೧೬ ॥
ಮಹಾಘಿನಾಂ ಮಹಾಘಂ ಚ ಹರೇತ್ಪಾಂಚನದಾದ್ಬಲಾತ್ ।
ಯಂ ಸಂಚಯತಿ ಪಾಪೌಘಮಾವರ್ಷಂ ತೀರ್ಥನಾಯಕಃ ।
ತಮೇಕಮಜ್ಜನಾದೂರ್ಜೇ ತ್ಯಜೇತ್ಪಂಚನದೇ ಧ್ರುವಂ ॥ ೧೭ ॥

---

೧೨. ಸ್ಕಂದನು ಹೇಳುತ್ತಾನೆ:—ಪ್ರಥಮದಲ್ಲಿ ಮಹೇಶ್ವರನಿಗೆ ನಮಸ್ಕಾರ ಮಾಡಿ ಸಕಲ ಪಾತಕಸಮೂಹಗಳನ್ನು ಶಮನಮಾಡುವುದೂ, ಸರ್ವಶ್ರೇಯಸ್ಸುಗಳನ್ನು ಕೈಗೂಡಿಸುವುದೂ ಆದ ಈ ಸತ್ಕಥೆಯನ್ನು ಹೇಳುವೆನು.

೧೩. ಕಾಶೀಕ್ಷೇತ್ರದಲ್ಲಿ ಪಂಚನದ ತೀರ್ಥವು ಹೇಗೆ ಪ್ರಸಿದ್ಧಿಯನ್ನು ಪಡೆಯಿತೆಂಬುದನ್ನು ತಿಳಿಸುವೆನು. ಆ ತೀರ್ಥದ ನಾಮವನ್ನುಚ್ಚರಿಸುವುದರಿಂದಲೇ ಪಾಪರಾಶಿಯೆಲ್ಲವೂ ಸಹಸ್ರಚ್ಛಿದ್ರಗಳಾಗಿ ಮಾಯವಾಗುವುದು.

೧೪. ಅಲ್ಲದೆ ಪ್ರಯಾಗತೀರ್ಥವೆಂಬುದರಲ್ಲಿ ಮಹೇಶ್ವರನೇ ಸಾಕ್ಷಾತ್ತಾಗಿ ನೆಲೆಗೊಂಡಿರುವನು. ಈ ಪ್ರಯಾಗತೀರ್ಥದ ಬಲದಿಂದಲೇ ಅಲ್ಲಿರುವ ಸಕಲ ತೀರ್ಥಗಳೂ ಪಾಪಿಗಳ ಪಾಪರಾಶಿಯೆಲ್ಲವನ್ನೂ ತಮ್ಮ ತೇಜಸ್ಸಿನಿಂದ ಆಕ್ರಮಿಸಿ ನಾಶಗೊಳಿಸುತ್ತಿರುವುವು.

೧೫. ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯನ್ನು ಪ್ರವೇಶಿಸಲು ಆ ತೀರ್ಥಗಳೆಲ್ಲವೂ ಪ್ರತಿವರ್ಷದಲ್ಲಿಯೂ ಈ ತೀರ್ಥರಾಜನನ್ನು ಸೇವಿಸುವುದರಿಂದಲೇ ತಮ್ಮ ಪಾಪಗಳನ್ನು ಕಳೆದುಕೊಂಡು ನಿರ್ಮಲಗಳಾಗುವುವು.

೧೬. ಉತ್ತಮ ತೀರ್ಥವೆನಿಸಿದ ಪ್ರಯಾಗತೀರ್ಥವೂ ಸಹ ಸಕಲ ತೀರ್ಥಗಳೂ ತನ್ನಲ್ಲರ್ಪಿಸಿದ ಪಾಪರಾಶಿಯನ್ನೂ, ಮಹಾಪಾತಕಿಗಳು ಸ್ನಾನದಿಂದ ತನ್ನಲ್ಲಿ ಬಿಟ್ಟ ಪಾತಕಗಳನ್ನೂ ಪಂಚನದತೀರ್ಥದ ಬಲದಿಂದ ಕಳೆದುಕೊಳ್ಳುವುದು.

೧೭. ತೀರ್ಥಶ್ರೇಷ್ಠವೆನಿಸಿದ ಪ್ರಯಾಗವು ವರ್ಷದ ಆದ್ಯಂತವೂ ಯಾವ

ಯಥಾ ಪಂಚನದೋತ್ಪತ್ತಿಸ್ತಥಾ ಚ ಕಥಯಾಮ್ಯಹಂ ।
ನಿಶಾಮಯ ಮಹಾಭಾಗ ಮಿತ್ರಾವರುಣನಂದನ ॥ ೧೮ ॥
ಪುರಾ ವೇದಶಿರಾನಾಮ ಮುನಿರಾಸೀನ್ಮಹಾತಪಾಃ ।
ಭೃಗುವಂಶಸಮುತ್ಪನ್ನೋ ಮೂರ್ತೋ ವೇದ ಇವಾಪರಃ ॥ ೧೯ ॥
ತಪಸ್ಯತಸ್ತಸ್ಯ ಮುನೇಃ ಪುರೋ ದೃಗ್ಗೋಚರಂ ಗತಾ ।
ಶುಚಿರಪ್ಸರಸಾಂಶ್ರೇಷ್ಠಾ ರೂಪಲಾವಣ್ಯಶಾಲಿನೀ ॥ ೨೦ ॥
ತಸ್ಯಾ ದರ್ಶನಮಾತ್ರೇಣ ಪರಿಕ್ಷುಬ್ಧಂ ಮುನೇರ್ಮನಃ ।
ಚಸ್ಕಂದ ಸ ಮುನಿಸ್ತೂರ್ಣಂ ಸಾಥ ಭೀತಾ ವರಾಂಗನಾ ॥ ೨೧ ॥
ದೂರಾದೇವ ನಮಸ್ಕೃತ್ಯ ತಮೃಷಿಂ ಸಾಭ್ಯಭಾಷತ ।
ಅತೀವ ವೇಪಮಾನಾಂಗೀ ಶುಚಿಸ್ತಚ್ಛಾಪಭೀತಿತಃ ॥ ೨೨ ॥
ನಾಪರಾದ್ಧೋಽಸ್ಮ್ಯಹಂ ಕಿಂಚಿನ್ಮಹೋಗ್ರತಪಸಾಂ ನಿಧೇ ।
ಕ್ಷಂತವ್ಯಂ ಮೇ ಕ್ಷಮಾಧಾರ ಕ್ಷಮಾರೂಪಾಸ್ತಪಸ್ವಿನಃ ॥ ೨೩ ॥

---

ಪಾಪರಾಶಿಯನ್ನು ಸಂಗ್ರಹಿಸುವುದೊ, ಆದನ್ನೆಲ್ಲ ಕಾರ್ತೀಕಮಾಸದಲ್ಲಿ ಒಂದು ಸ್ನಾನವನ್ನು ಮಾಡುವುದರಿಂದಲೇ ಪಂಚನದತೀರ್ಥದಲ್ಲಿ ಕಳೆದುಕೊಳ್ಳುವುದೆಂಬುದು ನಿಜವು.

೧೮. ಈ ಪಂಚನದತೀರ್ಥವು ಹೇಗೆ ಉದ್ಭವಿಸಿದುದೆಂಬ ಚರಿತ್ರೆಯನ್ನು ನಾನು ನಿನಗೆ ಹೇಳುವೆನು. ಮಹಾತ್ಮನೂ, ಮಿತ್ರಾವರುಣರ ಕುಮಾರನೂ ಆದ ಎಲೈ ಅಗಸ್ತ್ಯನೆ! ಸಾವಧಾನದಿಂದ ಕೇಳು.

೧೯. ಪೂರ್ವಕಾಲದಲ್ಲಿ ಮಹಾತಪಸ್ಸಂಪನ್ನನಾದ ವೇದಶಿರನೆಂಬ ಮಹಾಮುನಿಯೊಬ್ಬನಿದ್ದನು. ಆತನು ಭೃಗುವಂಶದಲ್ಲಿ ಜನಿಸಿದವನಾಗಿ ಪಾರ್ಥಿವ ದೇಹವನ್ನು ಧರಿಸಿದ ದೇವತೆಯಂತೆ ತೋರುತ್ತಿದ್ದನು.

೨೦. ತಪಸ್ಸನ್ನು ಮಾಡುತ್ತಿದ್ದ ಆತನ ಸಮ್ಮುಖದಲ್ಲಿ ಒಮ್ಮೆ ಅಪ್ಸರಸ್ತ್ರೀಯರಲ್ಲಿ ಉತ್ತಮಳೂ ರೂಪಲಾವಣ್ಯಗಳಿಂದ ಮನೋಹರಳೂ ಆದ ಶುಚಿಯೆಂಬುವಳು ಸುಳಿದಾಡುತ್ತ ಕಾಣಿಸಿಕೊಂಡಳು.

೨೧. ಆಕೆಯನ್ನು ನೋಡಿದ ಮಾತ್ರದಿಂದಲೇ ಆ ಮುನಿಯ ಅಂತರಂಗವು ಅಲ್ಲಕಲ್ಲೋಲಗೊಂಡಿತು. ಅದರ ಪರಿಣಾಮವಾಗಿ ಆತನ ವೀರ್ಯವು ಸ್ಖಲಿಸಿತು. ಅದನ್ನು ಕಂಡು ಆ ಅಪ್ಸರಸ್ತ್ರೀಯು ಬಹುವಾಗಿ ಭಯಗೊಂಡಳು.

೨೨. ಮತ್ತು ದೂರದಿಂದಲೇ ನಮಸ್ಕರಿಸಿ ಮೈಯು ನಡುಗುತ್ತಿರಲು ಆ ಮಹಾಮುನಿಯ ಶಾಪದಿಂದ ಭೀತಳಾಗಿ ಆತನನ್ನು ಕುರಿತು ಶುಚಿಯು ಹೇಳತೊಡಗಿದಳು.

೨೩. "ಉಗ್ರತಪಸ್ಸಿಗೆ ನಿಧಿಯಾದ ವೇದಶಿರನೆ! ನಾನು ನಿನ್ನ ವಿಷಯದಲ್ಲಿ

ಮುನೀನಾಂ ಮಾನಸಂ ಪ್ರಾಯೋ ಯತ್ಪದ್ಮಾದಪಿ ತನ್ಮೃದು ।
ಸ್ತ್ರಿಯಃ ಕಠೋರಹೃದಯಾಃ ಸ್ವರೂಪೇಣೈವ ಸತ್ತಮ ॥ ೨೪ ॥
ಇತಿ ಶ್ರುತ್ವಾ ವಚಸ್ತಸ್ಯಾಃ ಶುಚೇರಪ್ಸರಸೋ ಮುನಿಃ ।
ವಿವೇಕಸೇತುನಾಸ್ತಂಭೀನ್ಮಹಾರೋಷನದೀರಯಂ ॥ ೨೫ ॥
ಉವಾಚ ಚ ಪ್ರಸನ್ನಾತ್ಮಾ ಶುಚೇ ಶುಚಿರಸಿ ಧ್ರುವಂ ।
ನ ಮೇಽಲ್ಪೋಽಪಿ ಹಿ ದೋಷೋಽತ್ರ ನ ತೇ ದೋಷೋಽಸ್ತಿ ಸುಂದರಿ ॥
ವಹ್ನಿಸ್ವರೂಪಾ ಲಲನಾ ನವನೀತಸಮಃ ಪುಮಾನ್ ।
ಅನಭಿಜ್ಞಾ ವಂದತೀತಿ ವಿಚಾರಾನ್ಮಹದಂತರಂ ॥ ೨೭ ॥
ಸ್ನಿಹ್ಯೇದುದ್ಧೃತಸಾರೋಽಪಿ ವಹ್ನೇಃ ಸಂಸ್ಪರ್ಶಮಾಪ್ಯ ವೈ ।
ಚಿತ್ರಂ ಸ್ತ್ರ್ಯಾಖ್ಯಾ ಸಮಾಧಾನಾತ್ಪುಮಾನ್ಸ್ನಿಹ್ಯತಿದೂರತಃ ॥ ೨೮ ॥

---

ಯಾವ ಅಪರಾಧವನ್ನೂ ಮಾಡಿದವಳಲ್ಲ. ನೀನು ಸಹನೆಯೆಂಬ ಗುಣಕ್ಕೆ ನೆಲೆಮನೆಯಾಗಿರುವುದರಿಂದ ನನ್ನನ್ನು ಕ್ಷಮಿಸು. ತಪಸ್ಸಂಪನ್ನರೆಲ್ಲರೂ ಕ್ಷಮಾವಂತರೇ ಅಲ್ಲವೆ.

೨೪. ಮುನಿಗಳ ಮನಸ್ಸೆಂಬುದು ಕಮಲಕ್ಕಿಂತಲೂ ಪ್ರಾಯಿಕವಾಗಿ ಮೃದುವಾಗಿಯೇ ಇರುವುದು. ಪ್ರಾಜ್ಞನೆ! ಆದರೆ ಸ್ತ್ರೀಯರಾದರೊ, ಸ್ವರೂಪದಿಂದಲೇ ಕಠೋರಹೃದಯವುಳ್ಳವರಾಗಿರುವರು.''

೨೫. ಇಂತೆಂದ ಅಪ್ಸರಸ್ತ್ರೀಯಾದ ಶುಚಿಯ ಮಾತುಗಳನ್ನು ಕೇಳಿ ಆತನು ತನ್ನಲ್ಲಿ ಮೊದಲು ಉದ್ಭವಿಸಿದ ಉಗ್ರವಾದ ಕೋಪವೆಂಬ ನದಿಯ ವೇಗವನ್ನು ವಿವೇಕವೆಂಬ ಅಣೆಕಟ್ಟಿನಿಂದ ತಡೆದು ನಿಲ್ಲಿಸಿದನು.

೨೬. ಬಳಿಕ ಆತನು ಸುಪ್ರಸನ್ನವಾದ ಅಂತಃಕರಣವುಳ್ಳವನಾಗಿ ಪ್ರತ್ಯುತ್ತರವನ್ನು ಹೇಳಿದನು. ''ಎಲೈ ಶುಚಿಯೆ! ನೀನು ನಿಜವಾಗಿಯೂ ಶುಚಿರ್ಭೂತಳೇ ಆಗಿರುವೆ. ಸುಂದರಿ! ಈ ವಿಷಯದಲ್ಲಿ ನನ್ನಲ್ಲಿಯೂ ಕಿಂಚಿತ್ತಾದರೂ ದೋಷವಿಲ್ಲ; ನಿನ್ನಲ್ಲಿಯೂ ಇಲ್ಲ.

೨೭. ಸ್ತ್ರೀಯರು ಸಾಧಾರಣವಾಗಿ ಬೆಂಕಿಯ ಸ್ವಭಾವದವರು. ಅವಳ ಸಮೀಪದಲ್ಲಿ ಪುರುಷನು ಬೆಣ್ಣೆಯಂತಾಗುವನು. ಅಥವಾ ಇದನ್ನು ಹೇಳುವವರೂ ವಿಚಾರಹೀನರೆಂದೇ ನಿಶ್ಚಯಿಸಬೇಕು. ಏಕೆಂದರೆ ಇಲ್ಲಿನ ದೃಷ್ಟಾಂತ ದಾರ್ಷ್ಟಾಂತಗಳಲ್ಲಿಯೂ ಅನುಲ್ಲಂಘ್ಯವಾದ ಒಂದು ಅಂತರವು ಕಾಣಬರುವುದು.

೨೮. ಮಜ್ಜಿಗೆಯಿಂದ ತೆಗೆದ ಸಾರಭೂತವಾದ ಬೆಣ್ಣೆಯು ಅಗ್ನಿಯ ಸಂಯೋಗದಿಂದಲೇ ಸ್ನೇಹಮಯವಾಗುವುದು. ಆದರೆ ಸ್ತ್ರೀಯೆಂಬ ಪದಾರ್ಥದ ವಿಷಯದಲ್ಲಿ ಮನುಷ್ಯನು ದೂರದಲ್ಲಿದ್ದರೂ ಸ್ನೇಹಭರಿತನಾಗುವನು. ಇಂತು ಈ ಸಾಮ್ಯಕಥನದಲ್ಲಿ ವೈಷಮ್ಯವು ಕಂಡುಬರುತ್ತಿರುವುದು.

ಅತಃ ಶುಚೇ ನ ಭೇತವ್ಯಂ ತ್ವಯಾ ಶುಚಿಮನೋಗತೇ ।
ಅತರ್ಕಿತೋಪಸ್ಥಿತಯಾ ತ್ವಯಾ ಚ ಸ್ಖಲಿತಂ ಮಯಾ ॥ ೨೯ ॥
ಸ್ಖಲನಾನ್ನ ತಥಾ ಹಾನಿರಕಾಮಾತ್ತಪಸೋ ಮುನೇಃ ।
ಯಥಾ ಕ್ಷಣಂ ವಶೀಕರಣಾದ್ಧಾನಿಃ ಕೋಪಪರಯಾದರೇಃ ॥ ೩೦ ॥
ಕೋಪಾತ್ತಪಃ ಕ್ಷಯಂ ಯಾತಿ ಸಂಚಿತಂ ಯತ್ಸುಕೃಚ್ಛ್ರತಃ ।
ಯಥಾಭ್ರಪಟಲಂ ಪ್ರಾಪ್ಯ ಪ್ರಕಾಶಃ ಪುಷ್ಪವಂತಯೋಃ ॥ ೩೧ ॥
ಅನರ್ಥಕಾರಿಣಃ ಕ್ರೋಧಾತ್ಕೋಽರ್ಥಾನಾಂ ಪರಿಜೃಂಭಣಂ ।
ಕ್ವ ವಾ ಖಲಜನೋತ್ಸೇಧಾತ್ಸಾಧೂನಾಂ ಪರಿವರ್ಧನಂ ॥ ೩೨ ॥
ಅಮರ್ಷೇ ಕರ್ಷತಿ ಮನೋ ಮನೋ ಭೂಸಂಭವಃ ಕುತಃ ।
ವಿಧುಂತುದೇ ದುತತ್ಯುಚ್ಚೈರ್ವಿಧುಂ ಕುತ್ರಾಸ್ತಿ ಕೌಮುದೇ ॥ ೩೩ ॥
ಜ್ವಲತೋ ರೋಷದಾವಾಗ್ನೇಃ ಕ್ವ ವಾ ಶಾಂತಿತರೋಃ ಸುಖಂ ।
ದೃಷ್ಟಾ ಕೇನಾಪಿ ಕಿಂ ಕ್ವಾಪಿ ಸಿಂಹಾತ್ಕಲಭಸುಸ್ಥತಾ ॥ ೩೪ ॥

---

೨೯. ನಿರ್ಮಲಮನಸ್ಕಳಾದ ಶುಚಿಯೆ! ಆದುದರಿಂದ ನೀನು ಭಯಪಡಬೇಕಾದ ಕಾರಣವಿಲ್ಲ. ನೀನೂ ಉದ್ದೇಶಪುರ್ವಕವಾಗಿ ಇಲ್ಲಿಗೆ ಬಂದವಳಲ್ಲ. ನನಗೂ ಸ್ವಾಭಾವಿಕವಾಗಿಯೇ ರೇತಃಸ್ಖಲನವುಂಟಾಯಿತು.

೩೦. ವೈರಿಯ ವಿಷಯದಲ್ಲಿ ಕೋಪವನ್ನು ತಾಳಲು ಒಂದು ಕ್ಷಣವಾದರೂ ಮನಸ್ಸನ್ನು ಸಡಿಲಿಸುವುದರಿಂದ ಮುನಿಯ ತಪಸ್ಸಿಗೆ ಎಷ್ಟು ಹಾನಿಯುಂಟಾಗುವುದೊ, ಅಷ್ಟು ಹಾನಿಯು ಆಶಾಜನಿತವಲ್ಲದ ರೇತಃಸ್ಖಲನದಿಂದ ಎಂದಿಗೂ ಉಂಟಾಗಲಾರದು.

೩೧. ಮೇಘಜಾಲವು ಆವರಿಸಲು ಸೂರ್ಯಚಂದ್ರರ ಪ್ರಕಾಶಗಳು ಕ್ಷಣಮಾತ್ರದಲ್ಲಿ ಹೇಗೆ ಮಂದವಾಗುವುವೋ, ಹಾಗೆಯೇ ಕೋಪದಿಂದ ಬಹುಕಷ್ಟದಿಂದಾರ್ಜಿತವಾದ ತಪಸ್ಸೂ ಸಹ ಕ್ಷಯವನ್ನು ಹೊಂದುವುದು.

೩೨–೩೩. ಸರ್ವಾನರ್ಥಗಳಿಗೆ ಮೂಲಕಾರಣವಾದ ಕ್ರೋಧವುಳ್ಳ ಮನುಷ್ಯನಿಗೆ ಯಾವ ಪುರುಷಾರ್ಥಗಳು ತಾನೆ ಲಭಿಸುವುವು? ದುಷ್ಟಜನರಿಗೇ ಔನ್ನತ್ಯ ಮತ್ತು ಮರ್ಯಾದೆಗಳು ನಡೆಯುತ್ತಿರುವ ಸ್ಥಳದಲ್ಲಿ ಸಾಧುಗಳ ಏಳಿಗೆಯು ಎಂತು ನಡೆದೀತು? ಕೋಪವೆಂಬುದು ಮನಸ್ಸನ್ನು ಆವರಿಸಲು ಅದರಲ್ಲಿ ಕಾಮವಾಸನೆಯು ಹೇಗೆ ಉಂಟಾಗುವುದು. ಕೇತುವು ಚಂದ್ರನ ಪೂರ್ಣಮಂಡಲವನ್ನು ಗ್ರಾಸಮಾಡಿರಲು ಬೆಳದಿಂಗಳುಂಟಾಗುವ ಸಂಭವವೆಲ್ಲಿಯದು?

೩೪. ಕೋಪವೆಂಬ ಬೆಂಕಿಯು ಕಾಳ್ಕಿಚ್ಚಾಗಿ ಮನಸ್ಸಿನೊಳಗೆಲ್ಲ ಉರಿಯುತ್ತಿರಲು ಶಾಂತಿಯೆಂಬ ವೃಕ್ಷವು ಸುಖವಾಗಿರುವುದೆಂತು? ಯಾರಿಂದಲಾದರೂ ಸಿಂಹದ ಹಿಡಿತಕ್ಕೆ ಸಿಕ್ಕಿದ ಆನೆಯ ಮರಿಯು ಸ್ವಸ್ಥವಾಗಿದ್ದುದು ಕಾಣಲ್ಪಟ್ಟಿತೆ?

ತಸ್ಮಾತ್ಸರ್ವಪ್ರಯತ್ನೇನ ಪ್ರತೀಪಃ ಪ್ರತಿಘಾತುಕಃ ।
ಚತುರ್ವರ್ಗಸ್ಯ ದೇಹಸ್ಯ ಪರಿಹೇಯೋ ವಿಪಶ್ಚಿತಾ ॥ ೩೫ ॥
ಇದಾನೀಂ ಶೃಣು ಕಲ್ಯಾಣಿ ಕರ್ತವ್ಯಂ ಯತ್ತ್ವಯಾ ಶುಚೇ ।
ಅಮೋಘಬೀಜಾ ಹಿ ವಯಂ ತದ್ಬೀಜಮುರರೀಕುರು ॥ ೩೬ ॥
ಏತಸ್ಮಿನ್ರಕ್ಷಿತೇ ವೀರ್ಯೇ ಪರಿಸ್ಕನ್ನೇ ತ್ವದೀಕ್ಷಣಾತ್ ।
ತ್ವಯಾ ತವ ಭವಿತ್ರ್ಯೇಕಂ ಕನ್ಯಾರತ್ನಂ ಮಹಾಶುಚಿ ॥ ೩೭ ॥
ಇತ್ಯುಕ್ತಾ ತೇನ ಮುನಿನಾ ಪುನರ್ಜಾತೇವ ಸಾಪ್ಸರಾಃ ।
ಮಹಾಪ್ರಸಾದ ಇತ್ಯುಕ್ತ್ವಾ ಮುನೇಃ ಶುಕ್ರಮುಜೀಗಿಲತ್ ॥ ೩೮ ॥
ಅಥ ಕಾಲೇನ ದಿವ್ಯಸ್ತ್ರೀ ಕನ್ಯಾರತ್ನಮಜೀಜನತ್ ।
ಅತೀವ ನಯನಾನಂದಿ ನಿದಾನಂ ರೂಪಸಂಪದಾಂ ॥ ೩೯ ॥
ತಸ್ಯೈವ ವೇದಶಿರಸ ಆಶ್ರಮೇ ತಾಂ ನಿಧಾಯ ಸಾ ।
ಶುಚಿರಪ್ಸರಸಾಂ ಶ್ರೇಷ್ಠಾ ಜಗಾಮ ಚ ಯಥೇಪ್ಸಿತಂ ॥ ೪೦ ॥

---

೩೫. ಆದುದರಿಂದ ಬುದ್ಧಿವಂತನಾದವನು ಧರ್ಮಾರ್ಥಕಾಮಮೋಕ್ಷ ರೂಪವಾದ ಧರ್ಮದೇಹವನ್ನು ನಾಶಗೊಳಿಸುವ ಶತ್ರುವಾದ ಕ್ರೋಧವನ್ನು ಸರ್ವ ಪ್ರಕಾರದಿಂದಲೂ ಹೇಯವೆಂದು ತಿಳಿದು ದೂರಮಾಡಬೇಕು.

೩೬. ಎಲೌ ಶುಚಿಯೆ! ಸೌಭಾಗ್ಯವತಿಯಾದ ನೀನು ಈಗ ಮಾಡಬೇಕಾಗಿರುವ ಕಾರ್ಯವನ್ನು ಹೇಳುವೆನು, ಕೇಳು. ನಾವು ವ್ಯರ್ಥವಲ್ಲದ ಬೀಜವುಳ್ಳವರು. ಆದುದರಿಂದ ನೀನು ಈ ವೀರ್ಯವನ್ನು ಗರ್ಭದಲ್ಲಿ ಧರಿಸು.

೩೭. ನಿನ್ನನ್ನು ನೋಡಿದುದರಿಂದಲೇ ಸ್ಖಲಿತವಾದ ಈ ವೀರ್ಯವನ್ನು ನೀನೇ ರಕ್ಷಿಸಲು ನಿನ್ನ ಉದರದಲ್ಲಿ ಅತ್ಯಂತ ನಿರ್ಮಲವಾದ ಕನ್ಯಾರತ್ನವೊಂದು ಜನಿಸುವುದು.

೩೮. ಇಂತೆಂದು ಆ ಮಹಾಮುನಿಯು ಹೇಳಲು ತನಗೆ ಪುನರ್ಜನ್ಮ ವುಂಟಾಯಿತೆಂದು ತಿಳಿದು ಆ ಅಪ್ಸರಸ್ತ್ರೀಯು ಮಹಾಪ್ರಸಾದವೆಂದು ಸ್ವೀಕರಿಸಿ ಆತನ ವೀರ್ಯವನ್ನು ಧಾರಣಮಾಡಿದಳು.

೩೯. ಬಳಿಕ ಉಚಿತಕಾಲದಲ್ಲಿ ನೋಡಿದವರ ಮನಸ್ಸಿನ ಆನಂದದ ಖನಿಯೆಂಬಂತೆ ರೂಪಲಾವಣ್ಯಗಳಿಂದ ಕೂಡಿದ ಒಂದು ಕನ್ಯಾಮಣಿಯನ್ನು ಅಪ್ಸರಸ್ತ್ರೀಯಾದ ಆ ಶುಚೀದೇವಿಯು ಪ್ರಸವಿಸಿದಳು.

೪೦. ಅಪ್ಸರೋತ್ತಮೆಯಾದ ಆಕೆಯು ಆ ಹೆಣ್ಣುಮಗುವನ್ನು ತಂದೆಯಾದ ವೇದಶಿರಮಹಾಮುನಿಯ ಆಶ್ರಮದಲ್ಲಿಯೇ ಬಿಟ್ಟು ತನಗೆ ಇಷ್ಟಬಂದಲ್ಲಿಗೆ ಹೊರಟುಹೋದಳು.

ತಾಂ ಚ ವೇದಶಿರಾಃ ಕನ್ಯಾಂ ಸ್ನೇಹೇನ ಸಮವರ್ಧಯತ್ ।
ಕ್ಷೀರೇಣ ಸ್ವಾಶ್ರಮಸ್ಥಾಯಾ ಹರಿಣ್ಯಾ ಹರಿಣೇಕ್ಷಣಾಂ ॥ ೪೧ ॥
ಮುನಿರ್ನಾಮ ದದೌ ತಸ್ಯೈ ಧೂತಪಾಪೇತಿ ಚಾರ್ಥವತ್ ।
ಯನ್ನಾಮೋಚ್ಚಾರಣೇನಾಪಿ ಕಂಪತೇ ಪಾತಕಾವಲೀ ॥ ೪೨ ॥
ಸರ್ವಲಕ್ಷಣಶೋಭಾಢ್ಯಾಂ ಸರ್ವಾವಯವಸುಂದರೀಂ ।
ಮುನಿಸ್ತತ್ಯಾಜ ನೋತ್ಸಂಗಾತ್ಕ್ಷಣಮಾತ್ರಮಪಿ ಕ್ವಚಿತ್ ॥ ೪೩ ॥
ದಿನೇ ದಿನೇ ವರ್ಧಮಾನಾಂ ತಾಂ ಪಶ್ಯನ್ಮುಮುದೇ ಭೃಶಂ ।
ಕ್ಷೀರನೀರಧಿವದ್ರಮ್ಯಾಂ ನಿಶಿ ಚಾಂದ್ರಮಸೀಂ ಕಲಾಂ ॥ ೪೪ ॥
ಅಥಾಷ್ಟವಾರ್ಷಿಕೀಂ ದೃಷ್ಟ್ವಾ ತಾಂ ಕನ್ಯಾಂ ಸ ಮುನೀಶ್ವರಃ ।
ಕಸ್ಮೈ ದೇಯೇತಿ ಸಂಚಿಂತ್ಯ ತಾಮೇವ ಸಮಪೃಚ್ಛತ ॥ ೪೫ ॥

ವೇದಶಿರ ಉವಾಚ :—

ಅಯಿ ಪುತ್ರಿ ಮಹಾಭಾಗೇ ಧೂತಪಾಪೇ ಶುಭೇಕ್ಷಣೇ ।
ಕಸ್ಮೈ ದದ್ಯಾಂ ವರಾಯ ತ್ವಾಂ ತ್ವಮೇವಾಖ್ಯಾಹಿ ತಂ ವರಂ ॥ ೪೬ ॥

---

೪೧. ಆ ವೇದಶಿರನೂ ವಾತ್ಸಲ್ಯವುಳ್ಳವನಾಗಿ ಜಿಂಕೆಯ ಕಣ್ಣುಗಳುಳ್ಳ ಆ ಸ್ತ್ರೀಶಿಶುವನ್ನು ತನ್ನ ಆಶ್ರಮದಲ್ಲಿ ಓಡಾಡುತ್ತಿದ್ದ ಒಂದು ಹೆಣ್ಣುಜಿಂಕೆಯ ಹಾಲಿನಿಂದಲೇ ಪೋಷಿಸಿ ಬೆಳೆಸುತ್ತಿದ್ದನು.

೪೨. ಆ ಮುನಿಯೇ ಆ ಮಗುವಿಗೆ ಧೂತಪಾಪೆ ಎಂಬ ಸಾರ್ಥಕವಾದ ಹೆಸರನ್ನೂ ಇಟ್ಟನು. ಆ ಹೆಸರಿನ ಉಚ್ಚಾರಣೆಯನ್ನು ಮಾಡುವುದರಿಂದಲೇ ಸಮಸ್ತ ಪಾತಕಗಳ ರಾಶಿಯೂ ಭಯದಿಂದ ನಡುಗುವುದು.

೪೩. ಮುನಿಯು, ಸಕಲ ಸಾಮುದ್ರಿಕ ಶುಭಲಕ್ಷಣಗಳಿಂದ ಶೋಭಿಸುವವಳೂ, ಸರ್ವಾಂಗಸುಂದರಿಯೂ ಆದ ಆ ಕನ್ಯೆಯನ್ನು ಎಂದೂ ಒಂದು ಕ್ಷಣವಾದರೂ ತನ್ನ ತೊಡೆಯಿಂದ ಕೆಳಗೆ ಬಿಡುತ್ತಿರಲಿಲ್ಲ.

೪೪. ಕ್ಷೀರಸಮುದ್ರದಂತೆ ನಯನಮನೋಹರಳಾಗಿ ಶುಕ್ಲಪಕ್ಷದ ರಾತ್ರಿಗಳಲ್ಲಿ ಅಭಿವೃದ್ಧಿಯನ್ನು ಹೊಂದುತ್ತಿರುವ ಚಂದ್ರಮಂಡಲದಂತೆ ದಿನದಿನಕ್ಕೂ ಪ್ರವರ್ಧಮಾನಳಾಗುತ್ತಿರುವ ಆ ಕನ್ನೆಯನ್ನು ಕಂಡು ವೇದಶಿರಮುನಿಯು ಹೆಚ್ಚುಹೆಚ್ಚಾಗಿ ಆನಂದಪಡುತ್ತಿದ್ದನು.

೪೫. ಇಂತು ದಿನಗಳು ಕಳೆದು ಗರ್ಭಾಷ್ಟಮವರ್ಷದ ವಯಸ್ಸನ್ನು ತಾಳಿದ ಆ ಕನ್ಯಾರತ್ನವನ್ನು ಕಂಡು ಮುನಿವರ್ಯನು ಈಕೆಯನ್ನು ಯಾರಿಗೆ ವಿವಾಹ ಮಾಡಿಕೊಡಬೇಕೆಂಬುದಾಗಿ ತನ್ನಲ್ಲಿಯೇ ಚಿಂತಿಸುತ್ತ ಒಂದು ದಿನ ಆ ಹುಡುಗಿಯನ್ನೇ ಕೇಳಿದನು.

೪೬. ವೇದಶಿರನು ಹೇಳುತ್ತಾನೆ:—"ಪುತ್ರಿ, ಧೂತಪಾಪೆಯೆ! ನೀನು

ಅತಿಸ್ನೇಹಾರ್ದ್ರಚಿತ್ತಸ್ಯ ಜನೇತುಶ್ಚೇತಿ ಭಾಷಿತಂ ।
ನಿಶಮ್ಯ ಧೂತಪಾಪಾ ಸಾ ಪ್ರೋವಾಚ ಚ ವಿನತಾನನಾ ॥ ೪೭ ॥

ಧೂತಪಾಪೋವಾಚ :—

ಜನೇತರ್ಯದ್ಯಹಂ ದೇಯಾ ಸುಂದರಾಯ ವರಾಯ ತೇ ।
ತದಾ ತಸ್ಮೈ ಪ್ರಯಚ್ಛತ್ವಂ ಯಮಹಂ ಕಥಯಾಮಿ ತೇ ॥ ೪೮ ॥
ತುಭ್ಯಂ ಚ ರೋಚತೇ ತಾತ ಶೃಣೋತ್ವವಹಿತೋ ಭವಾನ್ ।
ಸರ್ವೇಭ್ಯೋಽತಿಪವಿತ್ರೋ ಯೋ ಯಃ ಸರ್ವೇಷಾಂ ಸಮಸ್ಕೃತಃ ॥ ೪೯ ॥
ಸರ್ವೇ ಯಮಭಿಲಷ್ಯಂತಿ ಯಸ್ಮಾತ್ಸರ್ವಸುಖೋದಯಃ ।
ಕದಾಚಿದ್ಯೋ ನ ನಶ್ಯೇತ ಯಃ ಸದೈವಾನುವರ್ತತೇ ॥ ೫೦ ॥
ಇಹಾಮುತ್ರಾಪಿ ಯೋ ರಕ್ಷೇನ್ಮಹಾಪದುದಯಾದ್ಧ್ರುವಂ ।
ಸರ್ವೇ ಮನೋರಥಾ ಯಸ್ಮಾತ್ಪರಿಪೂರ್ಣಾ ಭವಂತಿ ಹಿ ॥ ೫೧ ॥
ದಿನೇ ದಿನೇ ಚ ಸೌಭಾಗ್ಯಂ ವರ್ಧತೇ ಯಸ್ಯ ಸನ್ನಿಧೌ ।
ನೈರಂತರ್ಯೇಣ ಯತ್ಸೇವಾಂ ಕುರ್ವತೋ ನ ಭಯಂ ಕ್ವಚಿತ್ ॥ ೫೨ ॥

---

ಮಹಾಭಾಗ್ಯವಂತಳು. ಮಂಗಳ ಸ್ವರೂಪಳು. ನಿನ್ನನ್ನು ಯಾವ ವರನಿಗೆ ಕೊಡಲಿ? ಇದನ್ನು ನೀನೇ ವಿಚಾರಿಸಿ ಉಚಿತ ವರನನ್ನು ನನಗೆ ಹೇಳು.''

೪೭. ಇಂತು ತನ್ನಲ್ಲಿ ಅತ್ಯಂತ ಸ್ನೇಹದಿಂದ ಕರಗಿದ ಮನಸ್ಸುಳ್ಳ ತಂದೆ ಯಾಡಿದ ಮಾತನ್ನು ಕೇಳಿ ಆ ಧೂತಪಾಪೆಯು ಭಕ್ತಿಲಜ್ಜೆಗಳಿಂದ ಬಾಗಿದ ಮುಖ ವುಳ್ಳವಳಾಗಿ ತಂದೆಗೆ ಹೇಳತೊಡಗಿದಳು.

೪೮. ಧೂತಪಾಪೆಯು ಹೇಳುತ್ತಾಳೆ:—''ತಂದೆಯೆ! ನನ್ನನ್ನು ಸರ್ವಾಂಗ ಸುಂದರನಾದ ವರನಿಗೆ ಕೊಡಬೇಕೆಂಬುದೇ ನಿನ್ನ ಅಭಿಲಾಷೆಯಾಗಿದ್ದರೆ ನಾನು ನಿನಗೆ ವಿವರಿಸುವ ವರನಿಗೇ ನನ್ನನ್ನು ದಾನಮಾಡು.

೪೯–೫೨. ಪಿತನೆ! ಅವನು ನಿನಗೂ ಸರ್ವಥಾ ಸಮ್ಮತನೇ ಆಗಿರುವನು. ನನ್ನ ಮಾತನ್ನು ಸಾವಧಾನಚಿತ್ತದಿಂದ ಕೇಳು. ಯಾವನು ಸಕಲ ಪವಿತ್ರವಸ್ತು ಗಳಿಗೂ ಪವಿತ್ರನೊ, ಯಾವನು ಸಕಲರಿಂದಲೂ ವಂದಿತನೊ, ಎಲ್ಲರೂ ಯಾವಾತನನ್ನು ಅಪೇಕ್ಷಿಸುವರೊ, ಯಾವನಿಂದ ಸಕಲಸುಖಗಳೂ ಉಂಟಾಗು ವುವೊ, ಯಾವನು ಎಂದಿಗೂ ನಾಶವನ್ನು ಹೊಂದಲಾರನೊ, ಯಾವನು ಶಶ್ವದೇಕಪ್ರಕಾರನಾಗಿರುವನೊ, ಯಾವನು ನಮ್ಮನ್ನು ಇಹಲೋಕದಲ್ಲಿಯೂ ಪರಲೋಕಗಳಲ್ಲಿಯೂ ಸಂರಕ್ಷಿಸುವನೊ, ಯಾವನಿಂದ ನಿಜವಾಗಿಯೂ ಮಹಾ ಸಂಕಟಗಳೂ ಕಳೆಯುವುವೊ, ಯಾವನ ಸೇವೆಯಿಂದ ನಮ್ಮ ಸಕಲ ಮನೋರಥ ಗಳೂ ಪರಿಪೂರ್ಣಗಳಾಗುವುವೊ, ಯಾವನ ಸನ್ನಿಧಿಮಾತ್ರದಿಂದಲೇ ದಿನದಿನಕ್ಕೂ ಸಮಸ್ತ ಸೌಭಾಗ್ಯಗಳೂ ವೃದ್ಧಿಯನ್ನು ಹೊಂದುವುವೊ, ಯಾವನ ಸೇವೆಯನ್ನು

ಯನ್ನಾಮಗ್ರಹಣಾದೇವ ಕೋಽಪಿ ಬಾಧಾಂ ನ ಕುರ್ವತೇ ।
ಯದಾಧಾರೇಣ ತಿಷ್ಠಂತಿ ಭುವನಾನಿ ಚತುರ್ದಶ ॥ ೩೩ ॥
ಏವಮಾದ್ಯಾ ಗುಣಾ ಯಸ್ಯ ವರಸ್ಯ ಪರಚೇಷ್ಟಿತಂ ।
ತಸ್ಮೈ ಪ್ರಯಚ್ಛ ಮಾಂ ತಾತ ಮಮ ತೇಽಪೀಹ ಶರ್ಮಣೇ ॥ ೩೪ ॥
ಏತಚ್ಛ್ರುತ್ವಾ ಪಿತಾ ತಸ್ಯಾ ಭೃಶಂ ಮುದಮವಾಪ ಹ ।
ಧನ್ಯೋಽಸ್ಮಿ ಧನ್ಯಾ ಮೇ ಪೂರ್ವೇ ಏಷಾಮೇಷಾ ಸುತಾನ್ವಯೇ ॥ ೩೫ ॥
ಧ್ರುವಾ ಹಿ ಧೂತಪಾಪಾಸೌ ಯಸ್ಯಾ ಈದೃಗ್ವಿಧಾ ಮತಿಃ ।
ಈದೃಗ್ವಿಧೈರ್ಗುಣಗಣೈರ್ಗರಿಷ್ಠೋ ಕೋಽತ್ರ ವೈ ಭವೇತ್ ॥ ೩೬ ॥
ಅಥವಾ ಸ ಕಥಂ ಲಭ್ಯೋ ವಿನಾ ಪುಣ್ಯಭರೋದಯಂ ।
ಇತಿ ಕ್ಷಣಂ ಸಮಾಧಾಯ ಮನಃ ಸ ಮುನಿಪುಂಗವಃ ॥ ೩೭ ॥
ಜ್ಞಾನೇನ ತಂ ಸಮಾಲೋಚ್ಯ ವರಮೀದೃಗ್ಗುಣೋದಯಂ ।
ಧನ್ಯಾಂ ಕನ್ಯಾಂ ಬಭಾಷೇಽಥ ಶೃಣು ವತ್ಸೇ ಶುಭೈಷಿಣಿ ॥ ೩೮ ॥

---

ನಿರಂತರವಾಗಿ ಮಾಡುವ ಜನರಿಗೆ ಎಂದೂ ಭಯವುಂಟಾಗುವುದಿಲ್ಲವೊ, ಯಾವನ ನಾಮವನ್ನು ಸ್ಮರಿಸುವುದರಿಂದಲೇ ನಮ್ಮನ್ನು ಯಾರೂ ಬಾಧಿಸುವುದಿಲ್ಲವೊ, ಯಾವನ ಆಧಾರದ ಮೇಲೆಯೇ ಹದಿನಾಲ್ಕು ಲೋಕಗಳೂ ಪ್ರತಿಷ್ಠಿತಗಳಾಗಿರುವುವೊ, ಅಂತಹ ಸಕಲ ಸದ್ಗುಣಗಳೂ ಯಾವ ವರನಲ್ಲಿ ನೆಲಸಿರುವುವೊ, ಯಾವನು ಇಂತಹ ಲೀಲಾವಿನೋದವುಳ್ಳವನಾಗಿರುವನೊ, ಅಂತಹ ವರನಿಗೆ ನನ್ನನ್ನು ದಾನಮಾಡಲು ನನಗೂ ನಿನಗೂ ಇಹದಲ್ಲಿಯೂ ಪರದಲ್ಲಿಯೂ ಸೌಖ್ಯವುಂಟಾಗುವುದರಲ್ಲಿ ಸಂದೇಹವಿಲ್ಲ.''

೩೫. ಈ ಮಾತುಗಳನ್ನು ಕೇಳಿ ತಂದೆಯಾದ ವೇದಶಿರನು ಬಹುವಾಗಿ ಆನಂದಪಟ್ಟು, '' ನಾನೇ ಧನ್ಯನಾದವನು. ನಮ್ಮ ವಂಶದಲ್ಲಿ ಜನಿಸಿದ ಈ ಕನ್ಯಾರತ್ನದಿಂದ ನನ್ನ ಪೂರ್ವ ಪಿತೃಗಳೆಲ್ಲರೂ ಧನ್ಯರಾದರು'' ಎಂಬುದಾಗಿ ತನ್ನಲ್ಲಿಯೇ ಹೇಳಿಕೊಂಡನು.

೩೬. '' ಈ ವಿಧವಾದ ಉತ್ತಮಬುದ್ಧಿಯುಳ್ಳ ಈ ಕನ್ಯೆಯು ನಿಜವಾಗಿಯೂ ಪಾಪರಹಿತಳೇ ಆಗಿರುವಳು. ಈಕೆಯು ನಿರೂಪಿಸಿದ ಗುಣರಾಶಿಗಳಿಂದಲೂ ಗೌರವದಿಂದಲೂ ಕೂಡಿದ ವರನು ಯಾವನು ತಾನೆ ಈ ಭೂಲೋಕದಲ್ಲಿ ಲಭಿಸುವನು ?

೩೭. ಅಲ್ಲದೆ ಅಂತಹ ಉತ್ತಮವರನಿದ್ದರೂ ನಮ್ಮ ವಿಶೇಷಭಾಗ್ಯೋದಯದಿಂದಲ್ಲದೆ ಹೇಗೆ ಸಿಕ್ಕುವನು ?'' ಇಂತೆಂದು ಆ ಮುನಿಶ್ರೇಷ್ಠನು ತನ್ನಲ್ಲಿಯೇ ಕಳವಳಗೊಳ್ಳುತ್ತ ನಿಮಿಷಮಾತ್ರದಲ್ಲಿಯೇ ಸಮಾಧಾನವನ್ನು ತಂದುಕೊಂಡನು.

೩೮. ಬಳಿಕ ಇಂತಹ ಸದ್ಗುಣಗಳಿಂದ ಭೂಷಿತನಾದ ವರನು ಯಾವನಿರ

ಪಿತೋವಾಚ :—
ವರಸ್ಯ ಯೇ ತ್ವಯಾ ಪ್ರೋಕ್ತಾ ಗುಣಾ ಏತೇ ವಿಚಕ್ಷಣೇ ।
ಏಷಾಂ ಗುಣಾನಾಮಾಧಾರೋ ವರೋಽಸ್ತೀತಿ ವಿನಿಶ್ಚಿತಂ ॥ ೫೯ ॥
ಪರಂ ಸ ಸುಖಮಾಲಭ್ಯೋ ನ ನಿತರಾಂ ಸುಭಗಾಕೃತಿಃ ।
ತಪಃಪಣೇನ ಸ ಕ್ರಯ್ಯಃ ಸುತೀರ್ಥವಿಪಣೌ ಕ್ವಚಿತ್ ॥ ೬೦ ॥
ನಾರ್ಥಭಾರೈಃ ಸ ಸುಲಭೋ ನ ಕೌಲೀನ್ಯೇನ ಕನ್ಯಕೇ ।
ನ ವೇದಶಾಸ್ತ್ರಾಭ್ಯಸನೈರ್ನಚೈಶ್ವರ್ಯಬಲೇನ ವೈ ॥ ೬೧ ॥
ನ ಸೌಂದರ್ಯೇಣ ವಪುಷಾ ನ ಬುದ್ಧ್ಯಾ ನ ಪರಾಕ್ರಮೈಃ ।
ಏಕಯೈವ ಮನಃಶುದ್ಧ್ಯಾ ಕರಣಾನಾಂ ಜಯೇನ ಚ ॥ ೬೨ ॥
ಮಹಾತಪಃಸಹಾಯೇನ ದಮದಾನದಯಾಯುಜಾ ।
ಲಭ್ಯತೇ ಸ ಮಹಾಪ್ರಾಜ್ಞೋ ನಾನ್ಯಥಾ ಸದೃಶಃ ಪತಿಃ ॥ ೬೩ ॥

---

ಬಹುದೆಂದು ಜ್ಞಾನದೃಷ್ಟಿಯಿಂದಲೇ ನೋಡಿದವನಾಗಿ ಧನ್ಯತಮಳಾದ ತನ್ನ ಕನ್ಯೆಯನ್ನು ಕುರಿತು "ಶುಭಾಭಿಲಾಷೆಯುಳ್ಳ ಮಗಳೆ! ಕೇಳು" ಎಂದು ಹೇಳಲು ಪ್ರಾರಂಭಿಸಿದನು.

೫೯. ತಂದೆಯು ಹೇಳುತ್ತಾನೆ:—"ಜ್ಞಾನಸಂಪನ್ನಳೆ! ವರನಿಗಿರಬೇಕಾದ ಯಾವಯಾವ ಸದ್ಗುಣಗಳನ್ನು ನೀನು ನಿರೂಪಿಸಿದೆಯೊ, ಅವುಗಳಿಗೆಲ್ಲ ಆಧಾರ ಭೂತನಾದ ವರನೊಬ್ಬನಿರುವನೆಂಬುದು ನಿಶ್ಚಯವೇ!

೬೦. ಆದರೆ ಆತನು ಸುಲಭವಾಗಿ ದೊರೆಯತಕ್ಕವನಲ್ಲ. ಸರ್ವಕಾಲ ದಲ್ಲಿಯೂ ಸೌಂದರ್ಯರೂಪವುಳ್ಳ ಆತನನ್ನು ಉತ್ತಮ ತೀರ್ಥಗಳೆಂಬ ಅಂಗಡಿ ಬೀದಿಯಲ್ಲಿ ತಪಸ್ಸೆಂಬ ಹಣವನ್ನು ಕೊಟ್ಟು ಕೊಂಡುಕೊಳ್ಳಬೇಕಾಗಿರುವುದು.

೬೧. ಪುತ್ರಿಯೆ! ಆತನನ್ನು ಬಹಳವಾದ ಹಣದಿಂದ ಒಪ್ಪಿಸುವಂತಿಲ್ಲ. ಆತನು ಯಾವ ಸತ್ಕುಲಪ್ರಸೂತೆಯಾದ ಕನ್ಯೆಗೂ ಅಷ್ಟರಿಂದಲೇ ಒಲಿಯುವನಲ್ಲ. ವೇದಶಾಸ್ತ್ರಗಳ ಅಭ್ಯಾಸದಿಂದಾಗಲಿ ಐಶ್ವರ್ಯಬಲದಿಂದಾಗಲಿ ಆತನು ಸಿಕ್ಕಲಾರನು.

೬೨. ಸುಂದರರೂಪದಿಂದಾಗಲಿ, ಅಂಗಸೌಷ್ಠವದಿಂದಾಗಲಿ, ಬುದ್ಧಿ ಚಾತುರ್ಯದಿಂದಾಗಲಿ, ಪರಾಕ್ರಮದಿಂದಾಗಲಿ ಆತನು ಒಲಿಯುವುದಿಲ್ಲ. ಆದರೆ ಇಂದ್ರಿಯಜಯಪೂರ್ವಕವಾದ ಶುದ್ಧಮನಸ್ಸೊಂದೇ ಆತನನ್ನು ಪಡೆ ಯಲು ಸಾಧ್ಯವಾಗಿರುವುದು.

೬೩. ಸರ್ವಜ್ಞನಾದ ಆತನೇ ನಿನಗೆ ಸದೃಶನಾದ ಪತಿಯು. ಇಂದ್ರಿಯ ನಿಗ್ರಹ, ದಾನ, ದಯೆಗಳೊಡಗೂಡಿದ ಮಹಾ ತಪಸ್ಸಿನ ಫಲವಾಗಿಯೇ ಆತನು ದೊರಕುವನೇ ಹೊರತು ಬೇರೆಯಾವುದರಿಂದಲೂ ಲಭ್ಯನಲ್ಲ.

ಇತಿ ಶ್ರುತ್ವಾಥ ಸಾ ಕನ್ಯಾ ಪಿತರಂ ಪ್ರಣಿಪತ್ಯ ಚ ।
ಅನುಜ್ಞಾಂ ಪ್ರಾರ್ಥಯಾಮಾಸ ತಪಸೇ ಕೃತನಿಶ್ಚಯಾ ॥ ೬೪ ॥
ಸ್ಕಂದ ಉವಾಚ :–
ಕೃತಾನುಜ್ಞಾ ಜನಿತ್ರಾ ಸಾ ಕ್ಷೇತ್ರೇ ಪರಮಪಾವನೇ ।
ತತಸ್ತತಾಪ ಪರಮಂ ಯದಸಾಧ್ಯಂ ತಪಸ್ವಿಭಿಃ ॥ ೬೫ ॥
ಕ್ವ ಸಾ ಬಾಲಾತಿಮೃದ್ವಂಗೀ ಕ್ವ ಚ ತತ್ತಾದೃಶಂ ತಪಃ ।
ಕಠೋರವರ್ಷ್ಮಸಂಸಾಧ್ಯಮಹೋ ಸಚ್ಚೇತಸೋ ಧೃತಿಃ ॥ ೬೬ ॥
ಧಾರಾಸಾರಾಸು ವರ್ಷಾಸು ಮಹಾವಾತವತೀಷ್ವಲಂ ।
ಶಿಲಾಸು ಸಾವಕಾಶಾಸು ಸಾ ಬಹ್ವೀರನಯನ್ನಿಶಾಃ ॥ ೬೭ ॥
ಶ್ರುತ್ವಾ ಗರ್ಜರವಂ ಘೋರಂ ದೃಷ್ಟ್ವಾ ವಿದ್ಯುಚ್ಚಮತ್ಕೃತೀಃ ।
ಆಸಾರಸೀಕರೈಃಕ್ಲಿನ್ನಾ ನ ಚಕಂಪೇ ಮನಾಕ್ಚ ಸಾ ॥ ೬೮ ॥
ತಡಿತ್ಸ್ಫುರಂತೀ ತ್ವಸಕೃತ್ತಮಿಸ್ರಾಸು ತಪೋವನೇ ।
ಯಾತಾಯಾತಂ ಕರೋತೀವ ದ್ರಷ್ಟುಂ ತತ್ತಪಸಃ ಸ್ಥಿತಿಂ ॥ ೬೯ ॥

---

೬೪. ಈ ಮಾತುಗಳನ್ನು ಕೇಳಿ ಆ ಕನ್ಯೆಯು ತಂದೆಗೆ ಪೊಡಮಟ್ಟು ತಪಸ್ಸನ್ನು ಮಾಡಲು ದೃಢನಿಶ್ಚಯವನ್ನು ಮಾಡಿದವಳಾಗಿ ಅಪ್ಪಣೆಯನ್ನು ಕೊಡಬೇಕೆಂದು ಪ್ರಾರ್ಥಿಸಿದಳು.

೬೫. ಸ್ಕಂದನು ಹೇಳುತ್ತಾನೆ:—ತಂದೆಯಾದ ವೇದಶಿರನಿಂದ ಅನುಜ್ಞೆಯನ್ನು ಬಹಳ ಕಷ್ಟದಿಂದ ಪಡೆದು ಆಕೆಯು ಪರಮಪವಿತ್ರವಾದ ಅವಿಮುಕ್ತ ಕ್ಷೇತ್ರವನ್ನು ಸೇರಿ ಆಜನ್ಮತಪಸ್ವಿಗಳಿಗೂ ಅಸಾಧ್ಯವೆನಿಸಿದ ಘೋರ ತಪಸ್ಸನ್ನು ಮಾಡಲುಪಕ್ರಮಿಸಿದಳು.

೬೬. ಅತ್ಯಂತ ಮೃದುವಾದ ಆ ಎಳೆಗುವರಿಯ ಶರೀರವೆಲ್ಲಿ ? ಕಠಿನ ಶರೀರವುಳ್ಳವರಿಗೂ ದುಶ್ಚರವೆನಿಸಿದ ಉಗ್ರತಪಸ್ಸೆಲ್ಲಿ? ಆಹಾ! ಆಕೆಯ ಸದ್ಬುದ್ಧಿಯ ದಾರ್ಢ್ಯವನ್ನು ಹೇಗೆ ವಿವರಿಸೋಣ!

೬೭. ಝುಂಝಾಮಾರುತಗಳಿಂದ ಕೂಡಿದ ಮಹಾ ವೃಷ್ಟಿಗಳು ಒಂದೇ ಸವನೆ ಸುರಿಯುತ್ತಿರಲು ಕುಳಿತುಕೊಳ್ಳುವಷ್ಟರಮಟ್ಟಿನ ಅವಕಾಶವುಳ್ಳ ಕಗ್ಗಲ್ಲು ಮೇಲೆಯೇ ಆಕೆಯು ಅನೇಕ ರಾತ್ರಿಗಳನ್ನು ಕಳೆದಳು.

೬೮. ಮೇಘಗಳ ಭಯಂಕರ ಘರ್ಜನೆಗಳನ್ನು ಕೇಳಿದರೂ, ಮಿಂಚಿನ ಬಳ್ಳಿಗಳ ಚಮತ್ಕಾರಗಳನ್ನು ಕಂಡರೂ, ಮಳೆಯ ಹನಿಗಳಿಂದ ತೊಯ್ದ ದೇಹವುಳ್ಳವಳಾದರೂ ಆ ಕನ್ಯೆಯು ಸ್ವಲ್ಪವಾದರೂ ಸ್ಥಳದಿಂದ ಕದಲಲಿಲ್ಲ.

೬೯. ಆ ತಪೋವನವನ್ನಾವರಿಸಿದ ಕಗ್ಗತ್ತಲೆಯಲ್ಲಿ ಕ್ಷಣಕ್ಷಣಕ್ಕೂ ಹೊಳೆದು ಮಾಯವಾಗುತ್ತಿರುವ ಮಿಂಚಿನ ಬಳ್ಳಿಯು ಆಕೆಯ ತಪಸ್ಸಿನ ಅಭಿವೃದ್ಧಿಯನ್ನೇ ಪರಿಶೀಲಿಸಲು ಬಂದು ಹೋಗುತ್ತಿರುವಂತೆ ತೋರುತ್ತಿತ್ತು.

ತಪರ್ತುರೇವ ಸಾಕ್ಷಾಚ್ಚ ಕುಮಾರೀಕೃತಪಾತ್ಕಿಲ ।
ಪಂಚಾಗ್ನೀನ್ಪರಿಧಾಯಾತ್ರ ತಪಸ್ಯತಿ ತಪೋವನೇ ॥ ೭೦ ॥
ಜಲಾಭಿಲಾಷಿಣೀ ಬಾಲಾ ನ ಮನಾಗಪಿ ಸಾಪಿಬತ್ ।
ಕುಶಾಗ್ರತೋಯಸ್ಪೃಷತಂ ಪಂಚಾಗ್ನಿಪರಿತಾಪಿತಾ ॥ ೭೧ ॥
ರೋಮಾಂಚಕಂಚುಕವತೀ ವೇಪಮಾನತನುಚ್ಛವಾ ।
ಪರ್ಯಕ್ಷಿಪತ್ಕ್ಷಪಾಃ ಕ್ಷಾಮಾ ತಪಸಾ ಹೈಮನೀಶ್ಚ ಸಾ ॥ ೭೨ ॥
ನಿಶೀಥಿನೀಷು ಶಿಶಿರೇ ಶ್ರಯಂತೀ ಸಾರಸಂ ರಸಂ ।
ಮೇನೇ ಸಾ ಸಾರಸೈಃ ಕೇಯಮುದ್ಯತಾದ್ಯೇತಿ ಪದ್ಮಿನೀ ॥ ೭೩ ॥
ಮನಸ್ವಿನಾಮಪಿ ಮನೋ ರಾಗತಾಂ ಸೃಜತೇ ಮಧೌ ।
ತದೋಷ್ಠಪಲ್ಲವಾದ್ರಾಗೋ ಜಹ್ರೇ ಮಾಕಂದಪಲ್ಲವೈಃ ॥ ೭೪ ॥
ವಸಂತೇ ನಿವಸಂತೀ ಸಾ ವನೇ ಬಾಲಾಚಲಂ ಮನಃ ।
ಚಕ್ರೇ ತಪಸ್ಯಪಿ ಶ್ರುತ್ವಾ ಕೋಕಿಲಾಕಾಕಲೀರವಂ ॥ ೭೫ ॥

---

೭೦. ಗ್ರೀಷ್ಮಋತುವೇ ವ್ಯಾಜಾಂತರದಿಂದ ಕುಮಾರಿಯ ರೂಪವನ್ನು ಧರಿಸಿ ಬಂದಿದೆಯೆಂಬಂತೆ ಕಾಣುತ್ತಿದ್ದ ಆಕೆಯು ಬೇಸಿಗೆಯಲ್ಲಿ ಆ ತಪೋವನ ಮಧ್ಯದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದಳು.

೭೧. ತೀವ್ರವಾದ ಬಾಯಾರಿಕೆಯುಂಟಾದರೂ ಆ ಬಾಲಿಕೆಯು ಸ್ವಲ್ಪವಾದರೂ ಜಲಪಾನವನ್ನು ಮಾಡಲಿಲ್ಲ. ಪಂಚಾಗ್ನಿಗಳಿಂದ ತಪ್ತವಾದ ದೇಹವುಳ್ಳವಳಾಗಿದ್ದರೂ ಕುಶಾಗ್ರಕ್ಕೆ ಅಂಟಿಕೊಂಡು ಬರುವಷ್ಟು ನೀರಿನ ಹನಿಯನ್ನಾದರೂ ಸೇವಿಸಲಿಲ್ಲ.

೭೨. ಆಕೆಯು ಮೈನವಿರನ್ನೇ ಕುಪ್ಪಸವನ್ನಾಗಿ ಮಾಡಿಕೊಂಡಳು. ಅಡಿಗಡಿಗೂ ಸ್ಫುರಿಸುತ್ತಿರುವ ಚರ್ಮವುಳ್ಳವಳಾಗಿ, ತಪಸ್ಸಿನಿಂದ ಕೃಶವಾದ ಶರೀರವುಳ್ಳ ಆ ಬಾಲೆಯು ಹೇಮಂತಋತುವಿನ ರಾತ್ರಿಗಳನ್ನೆಲ್ಲ ಕಳೆದಳು.

೭೩. ಶಿಶಿರಋತುವಿನ ರಾತ್ರಿಗಳಲ್ಲಿ ಆಕೆಯು ಕಂಠದವರೆಗೂ ಸರೋವರದ ಜಲದಲ್ಲಿ ನಿಂತು ತಪಸ್ಸನ್ನಾಚರಿಸುತ್ತಿರಲು ಅಲ್ಲಿದ್ದ ಸಾರಸಪಕ್ಷಿಗಳೆಲ್ಲವೂ ಆಕೆಯ ಮುಖವನ್ನು ಕಂಡು ಹೊಸದಾಗಿ ಅರಳಿದ ಕಮಲವೆಂದೇ ಭ್ರಮಿಸಿದುವು.

೭೪. ಮನೋನಿಗ್ರಹಪರರಾದವರಿಗೂ ಮನಸ್ಸಿನಲ್ಲಿ ಕಾಮವಿಕಾರವನ್ನುಂಟು ಮಾಡುವ ವಸಂತ ಕಾಲವು ಪ್ರಾಪ್ತವಾಗಲು ಮಾವಿನ ಚಿಗುರುಗಳು ಆಕೆಯ ತುಟಿಗಳಿಂದ ರಕ್ತವರ್ಣವನ್ನು ಅಪಹರಿಸಿದುವು.

೭೫. ಇಂತು ವಸಂತಸಮಯವುಂಟಾಗಲು ಆಕೆಯು ಕೋಗಿಲೆಗಳ ಮಧುರಧ್ವನಿಯಿಂದ ಚಂಚಲಿತವಾದ ಮನಸ್ಸನ್ನೂ ಸಹ ತಪಶ್ಚರಣೆಯಲ್ಲಿಯೇ ಏಕಾಗ್ರವನ್ನಾಗಿ ಮಾಡಿಕೊಂಡು ತಪೋವನದಲ್ಲಿ ವಾಸಮಾಡುತ್ತಿದ್ದಳು.

ಬಂಧುಜೀವೇಽಧರರುಚಿಂ ಕಲಹಂಸೇ ಕಲಾ ಗತಿಃ ।
ನಿಕ್ಷೇಪಮಿವ ಸಾ ಕ್ಷಿಪ್ತ್ವಾ ಶರದ್ಯಾಸೀತ್ತಪೋರತಾ ॥ ೭೬ ॥
ಅಪಾಸ್ತಭೋಗಸಂಪರ್ಕಾ ಭೋಗಿನಾಂ ವೃತ್ತಿಮಾಶ್ರಿತಾ ।
ಕ್ಷುದುದ್ಬೋಧನಿರೋಧಾಯ ಧೂತಪಾಪಾ ತಪಸ್ವಿನೀ ॥ ೭೭ ॥
ಕ್ಷಣೇನ ಮಣಿವಲ್ಲೀಢಾ ಕೃಶಾಪ್ಯಾಯಾದನರ್ಘತಾಂ ।
ತಥಾಪಿ ತಪಸಾ ಕ್ಷಾಮಾ ದಿದೀಪೇ ತತ್ತನುಸ್ತರಾಂ ॥ ೭೮ ॥
ನಿರೀಕ್ಷ್ಯ ತಾಂ ತಪಸ್ಯಂತೀಂ ವಿಧಿಃ ಸಂಶುದ್ಧಮಾನಸಾಂ ।
ಉಪೇತ್ಯೋವಾಚ ಸುಪ್ರಜ್ಞೇ ಪ್ರಸನ್ನೋಽಸ್ಮಿ ವರಂ ವೃಣು ॥ ೭೯ ॥
ಸಾ ಚತುರ್ವಕ್ತ್ರಮಾಲೋಕ್ಯ ಹಂಸಯಾನೋಪರಿಸ್ಥಿತಂ ।
ಪ್ರಣಮ್ಯ ಪ್ರಾಂಜಲಿಃ ಪ್ರೀತಾ ಪ್ರೋವಾಚಾಥ ಪ್ರಜಾಪತಿಂ ॥ ೮೦ ॥

ಧೂತಪಾಪೋವಾಚ :—

ಪಿತಾಮಹ ವರೋ ಮಹ್ಯಂ ಯದಿ ದೇಯೋ ವರಪ್ರದ ।
ಸರ್ವೇಭ್ಯಃ ಪಾವನೇಭ್ಯೋಽಪಿ ಕುರು ಮಾಮತಿಪಾವನೀಂ ॥ ೮೧ ॥

---

೭೬. ಶರತ್ಕಾಲದಲ್ಲಿ ಆ ಬಾಲೆಯು ತನ್ನ ತುಟಿಗಳ ಕೆಂಪನ್ನು ಬಂಧೂಕ ವೃಕ್ಷಕ್ಕೂ, ಒಯ್ಯಾರದ ನಡೆಯನ್ನು ಕಲಹಂಸಗಳಿಗೂ, ವಿಭಾಗಮಾಡಿಕೊಟ್ಟಂತೆ ಕಾಣುತ್ತ ತಾನು ಮಾತ್ರ ತಪಸ್ಸಿನಲ್ಲಿಯೇ ನಿರತಳಾಗಿದ್ದಳು.

೭೭. ಭೋಗಿಗಳ (ಸೌಖ್ಯಗಳ–ಹೆಡೆಗಳ) ಸಂಪರ್ಕವನ್ನು ದೂರಮಾಡಿದ್ದರೂ ಆ ತಪಸ್ವಿನಿಯಾದ ಧೂತಪಾಪೆಯು ಹಸಿವಿನ ಬಾಧೆಯನ್ನು ತಡೆಗಟ್ಟುವುದಕ್ಕಾಗಿ ಭೋಗಿಗಳ (ಕಾಮುಕರ–ಹಾವುಗಳ) ವೃತ್ತಿಯನ್ನೇ ಆಶ್ರಯಿಸಿ ಕೇವಲ ವಾಯುಭಕ್ಷಣವನ್ನೇ ಮಾಡುತ್ತಿದ್ದಳು.

೭೮. ಶಾಣದಿಂದ (ನಾರುಡೆಯಿಂದ–ಸಾಣೆಗಲ್ಲಿನಿಂದ) ಉಜ್ಜಲ್ಪಟ್ಟ ಆಕೆಯ ದೇಹವು ಕೃಶವಾಗಿದ್ದರೂ ರತ್ನದಂತೆ ಅಮೂಲ್ಯವಾದುದಾಯಿತು. ಮತ್ತು ತಪಸ್ಸಿನಿಂದ ಆಕೆಯ ದೇಹವು ಕ್ಷಯಿಸಿದಂತೆಲ್ಲ ಹೆಚ್ಚು ಹೆಚ್ಚಾಗಿ ಕಾಂತಿಯುಕ್ತವಾಗತೊಡಗಿತು.

೭೯. ಇಂತು ಉಗ್ರತಪಸ್ಸಿನಲ್ಲಿಯೇ ನಿರತಳಾಗಿರುವ ಆಕೆಯನ್ನು ಕಂಡು ಬ್ರಹ್ಮದೇವನು ಆಕೆಯ ಪರಿಶುದ್ಧ ಮನಸ್ಸಿಗೆ ಸಂತೋಷಗೊಂಡು ಪ್ರತ್ಯಕ್ಷನಾಗಿ "ಪ್ರಾಜ್ಞಳೆ! ನಿನಗೆ ಪ್ರಸನ್ನನಾಗಿರುವೆನು; ಬೇಕಾದ ವರವನ್ನು ಕೇಳಿಕೊ" ಎಂಬುದಾಗಿ ಹೇಳಿದನು.

೮೦. ಆಕೆಯು ಹಂಸಯಾನಾರೂಢನೂ, ಪ್ರಜಾಪತಿಯೂ ಆದ ಚತುರ್ಮುಖನು ಎದುರಿನಲ್ಲಿದ್ದುದನ್ನು ಕಂಡು ಸುಪ್ರೀತಳಾಗಿ ನಮಸ್ಕಾರವನ್ನು ಮಾಡಿ ಅಂಜಲಿಬಂಧವನ್ನು ಮಾಡಿಕೊಂಡು ವಿಜ್ಞಾಪಿಸತೊಡಗಿದಳು.

೮೧. ಧೂತಪಾಪೆಯು ಹೇಳುತ್ತಾಳೆ:—ವರಪ್ರದನಾದ ಪಿತಾಮಹನೆ!

ಸ್ರಷ್ಟಾ ತದಿಷ್ಟಮಾಕರ್ಣ್ಯ ನಿತರಾಂ ತುಷ್ಟಮಾನಸಃ ।
ಪ್ರತ್ಯುವಾಚಾಥ ತಾಂ ಬಾಲಾಂ ವಿಮಲಾಂ ವಿಮಲೈಷಿಣೀಂ ॥ ೮೨ ॥

ಬ್ರಹ್ಮೋವಾಚ:—

ಧೂತಪಾಪೇ ಪವಿತ್ರಾಣಿ ಯಾನಿ ಸಂತ್ಯತ್ರ ಸರ್ವತಃ ।
ತೇಭ್ಯಃ ಪವಿತ್ರಮತುಲಂ ತವೋಧಿ ವರತೋ ಮಮ ॥ ೮೩ ॥
ತಿಸ್ರಃ ಕೋಟ್ಯೋಽರ್ಧಕೋಟೀ ಚ ಸಂತಿ ತೀರ್ಥಾನಿ ಕನ್ಯಕೇ ।
ದಿವಿ ಭುವ್ಯಂತರಿಕ್ಷೇ ಚ ಪಾವನಾನ್ಯುತ್ತರೋತ್ತರಂ ॥ ೮೪ ॥
ತಾನಿ ಸರ್ವಾಣಿ ತೀರ್ಥಾನಿ ತ್ವತ್ತನೌ ಪ್ರತಿಲೋಮ ವೈ ।
ವಸಂತು ಮಮ ವಾಕ್ಯೇನ ಭವ ಸರ್ವಾತಿಪಾವನೀ ॥ ೮೫ ॥
ಇತ್ಯುಕ್ತ್ವಾಂತರ್ದಧೇ ವೇಧಾಃ ಸಾಪಿ ನಿರ್ಧೂತಕಲ್ಮಷಾ ।
ಧೂತಪಾಪೋಟಜಂ ಪ್ರಾಪ್ತಾಽಥೋ ವೇದಶಿರಸಃ ಪಿತುಃ ॥ ೮೬ ॥

---

ನನಗೆ ವರವನ್ನು ಕೊಡುವುದಾಗಿದ್ದರೆ ಸಮಸ್ತ ಪವಿತ್ರವಸ್ತುಗಳಿಗಿಂತಲೂ ನಾನು ಅತಿ ಪವಿತ್ರಳಾಗಿರುವಂತೆ ವರವನ್ನನುಗ್ರಹಿಸು.

೮೨. ಆಕೆಯ ಅಭೀಪ್ಸಿತವನ್ನು ಕೇಳಿ ಸಂತುಷ್ಟಾಂತರಂಗನಾದ ಬ್ರಹ್ಮದೇವನು ನಿರ್ಮಲಳೂ ನಿರ್ಮಲೇಚ್ಛೆಯುಳ್ಳವಳೂ ಆದ ಆಕೆಯನ್ನು ಕುರಿತು ಪ್ರತ್ಯುತ್ತರವನ್ನು ಹೇಳತೊಡಗಿದನು.

೮೩. ಬ್ರಹ್ಮನು ಹೇಳುತ್ತಾನೆ:—ಎಲೌ ಧೂತಪಾಪೆಯೆ! ಈ ಭೂಮಂಡಲದೊಳಗೆಲ್ಲ ಯಾವಯಾವ ಪವಿತ್ರ ವಸ್ತುಗಳಿರುವುವೊ, ಅವುಗಳಿಗಿಂತ ಅಪ್ರತಿಮವಾದ ನೈರ್ಮಲ್ಯವನ್ನು ನೀನು ನನ್ನ ವರದ ಫಲವಾಗಿ ಪಡೆಯುವವಳಾಗು.

೮೪. ಓ ಬಾಲಕಿಯೆ! ಬ್ರಹ್ಮಾಂಡದಲ್ಲಿ ಮೂರೂವರೆಕೋಟಿ ಸಂಖ್ಯೆಯುಳ್ಳ ತೀರ್ಥಗಳಿರುವುವು. ಇವುಗಳೆಲ್ಲವೂ ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ವಿಸ್ತರಿಸಿರುವುವುಗಳಾಗಿ ಒಂದಕ್ಕಿಂತ ಒಂದು ಪವಿತ್ರಗಳಾಗಿರುವುವು.

೮೫. ಆ ತೀರ್ಥಗಳೆಲ್ಲವೂ ನಿನ್ನ ದೇಹದ ಒಂದೊಂದು ರೋಮಕೂಪದಲ್ಲಿಯೂ ನನ್ನ ವರದಿಂದ ಅಡಗಿಹೋಗಲಿ. ಇಂತು ಆ ತೀರ್ಥಗಳೆಲ್ಲವನ್ನೂ ಒಳಕೊಂಡು ಸಕಲ ಪವಿತ್ರ ವಸ್ತುಗಳಲ್ಲಿಯೂ ಪಾವನೆಯಾಗು.

೮೬. ಇಂತೆಂದು ವರವನ್ನಿತ್ತು ಬ್ರಹ್ಮದೇವನು ಅಂತರ್ಧಾನವನ್ನು ಹೊಂದಿದನು. ಆಕೆಯೂ ಸಮಸ್ತ ಕಲ್ಮಷಗಳನ್ನೂ ಕಳೆದುಕೊಂಡು ತಂದೆಯಾದ ವೇದಶಿರಸ್ಸಿನ ಆಶ್ರಮಕ್ಕೆ ಹಿಂದಿರುಗಿ ಬಂದಳು.

ಕದಾಚಿತ್ತಾಂ ಸಮಾಲೋಕ್ಯ ಖೇಲಂತೀಮುಟಜಾಜಿರೇ ।
ಧರ್ಮಸ್ತತ್ತಪಸಾ ಕೃಷ್ಟಃ ಪ್ರಾರ್ಥಯಾಮಾಸ ಕನ್ಯಕಾಂ ॥ ೮೭ ॥
ಧರ್ಮ ಉವಾಚ :—
ಪೃಥುಶ್ರೋಣಿ ವಿಶಾಲಾಕ್ಷಿ ಕ್ಷಾಮೋದರಿ ಶುಭಾನನೇ ।
ಕ್ರೀತಃ ಸ್ವರೂಪಸಂಪತ್ತ್ಯಾ ತ್ವಯಾಹಂ ದೇಹಿ ಮೇ ರಹಃ ॥ ೮೮ ॥
ನಿತರಾಂ ಬಾಧತೇ ಕಾಮಸ್ತ್ವತ್ಕೃತೇ ಮಾಂ ಸುಲೋಚನೇ ।
ಅಜ್ಞಾತನಾಮ್ನಾ ಸಾ ತೇನ ಪ್ರಾರ್ಥಿತೇತ್ಯಸಕೃದಗ್ರತಃ ॥ ೮೯ ॥
ಉವಾಚ ಸಾ ಪಿತಾ ದಾತಾ ತಂ ಪ್ರಾರ್ಥಯ ಸುದುರ್ಮತೇ ।
ಪಿತೃಪ್ರದೇಯಾ ಯತ್ಕನ್ಯಾ ಶ್ರುತಿರೇಷಾ ಸನಾತನೀ ॥ ೯೦ ॥
ನಿಶಮ್ಯೇತಿ ವಚೋ ಧರ್ಮೋ ಭಾವಿನೋಽರ್ಥಸ್ಯ ಗೌರವಾತ್ ।
ಪುನರ್ನಿರ್ಬಂಧಯಾಂಚಕ್ರೇಽಪಧೃತಿರ್ಧೃತಿಶಾಲಿನೀಂ ॥ ೯೧ ॥
ಧರ್ಮ ಉವಾಚ :—
ನ ಪ್ರಾರ್ಥಯೇಽಹಂ ಸುಭಗೇ ಪಿತರಂ ತವ ಸುಂದರಿ ।
ಗಾಂಧರ್ವೇಣ ವಿವಾಹೇನ ಕುರು ಮೇ ತ್ವಂ ಸಮೀಹಿತಂ ॥ ೯೨ ॥

---

೮೭. ಒಂದಾನೊಂದು ದಿನ ಪರ್ಣಶಾಲೆಯ ಅಂಗಳದಲ್ಲಿ ಆಡುತ್ತಿದ್ದ ಆಕೆಯನ್ನು ಕಂಡು ಧರ್ಮರಾಜನು ಆಕೆಯ ತಪಸ್ಸಿನಿಂದ ಸೆಳೆಯಲ್ಪಟ್ಟವನಾಗಿ ಆ ಕನ್ಯೆಯನ್ನು ಇಂತು ಪ್ರಾರ್ಥಿಸಿದನು.

೮೮. ಧರ್ಮನು ಹೇಳುತ್ತಾನೆ:—"ಭಾರವಾದ ಶ್ರೋಣಿಭಾಗವೂ, ಆಯತ ನೇತ್ರಗಳೂ, ಬಡವಾದ ನಡುವೂ, ಪ್ರಸನ್ನವಾದ ಮುಖವೂ ಉಳ್ಳ ಕನ್ಯಾರತ್ನವೆ! ನಿನ್ನ ಸರ್ವಾಂಗಸೌಂದರ್ಯದಿಂದ ನಾನು ವಿಕ್ರೀತನಾಗಿರುವೆನು. ನನಗೆ ಏಕಾಂತವನ್ನು ಕೊಡುವವಳಾಗು.

೮೯–೯೦. ಚಾರುನೇತ್ರಳೆ! ನಿನ್ನ ಕಾರಣವಾಗಿ ಮನ್ಮಥನು ನನ್ನನ್ನು ಬಹುವಾಗಿ ಬಾಧಿಸುತ್ತಿರುವನು." ಹೆಸರು ಕುಲಗಳನ್ನರಿಯದ ಆತನು ಇಂತು ಮತ್ತೆ ಮತ್ತೆ ಅಂಗಸಂಗವನ್ನು ಪ್ರಾರ್ಥಿಸುತ್ತಿರಲು ಆ ಕನ್ಯಾರತ್ನವು ಆತನಿಗೆ ಇಂತೆಂದಳು. "ಎಲೈ ದುರ್ಬುದ್ಧಿಯೆ! ತಂದೆಯೇ ನನ್ನನ್ನು ದಾನಮಾಡಲು ಅಧಿಕಾರಿಯಾದವನು. ನೀನು ಆತನನ್ನೇ ಪ್ರಾರ್ಥಿಸು. ಕನ್ಯೆಯು ತಂದೆಯ ದಾನಕ್ಕೆ ಒಳಪಟ್ಟಿರುವಳೆಂಬ ಪುರಾತನವಾದ ಪ್ರವಾದವನ್ನು ನೀನು ಇದುವರೆಗೂ ಕೇಳಿದುದಿಲ್ಲವೆ?"

೯೧. ಇಂತೆಂದ ಆ ಹುಡುಗಿಯ ಮಾತುಗಳನ್ನು ಕೇಳಿ ಮುಂದಾಗಲಿರುವ ಕಾರ್ಯದ ಗೌರವದಿಂದ ಚೋದಿತನಾಗಿ ಲಜ್ಜೆಯನ್ನೂ ತ್ಯಜಿಸಿ ಧೈರ್ಯಶಾಲಿನಿಯಾದ ಆಕೆಯನ್ನು ಮತ್ತೆ ನಿರ್ಬಂಧಪಡಿಸಿದನು.

೯೨. ಧರ್ಮನು ಹೇಳುತ್ತಾನೆ:—ಸೌಭಾಗ್ಯಯುಕ್ತಳಾದ ಸುಂದರಿಯೆ!

ಇತಿ ನಿರ್ಬಂಧವದ್ವಾಕ್ಯಂ ಸಾ ನಿಶಮ್ಯ ಕುಮಾರಿಕಾ ।
ಪಿತುಃ ಕನ್ಯಾಫಲಂ ದಿತ್ಸುಃ ಪುನರಾಹೇತಿ ತಂ ದ್ವಿಜಂ ॥ ೯೩ ॥
ಅರೇ ಜಡಮತೇ ಮಾ ತ್ವಂ ಪುನರ್ಬ್ರೂಹೀತಿ ಯಾಹ್ಯತಃ ।
ಇತ್ಯುಕ್ತೋಽಪಿ ಕುಮಾರ್ಯಾ ಸ ನಾತಿಷ್ಠನ್ಮದನಾತುರಃ ॥ ೯೪ ॥
ತತಃ ಶಶಾಪ ತಂ ಬಾಲಾ ಪ್ರಬಲಾ ತಪಸೋ ಬಲಾತ್ ।
ಜಡೋಽಸಿ ನಿತರಾಂ ಯಸ್ಮಾಜ್ಜಲಾಧಾರೋ ನದೋ ಭವ ॥ ೯೫ ॥
ಇತಿ ಶಪ್ತಸ್ತಯಾ ಸೋಽಥ ತಾಂ ಶಶಾಪ ಕ್ರುಧಾನ್ವಿತಃ ।
ಕಠೋರ ಹೃದಯೇ ತ್ವಂ ತು ಶಿಲಾ ಭವ ಸುದುರ್ಮತೇ ॥ ೯೬ ॥

ಸ್ಕಂದ ಉವಾಚ :—

ಇತ್ಯನ್ಯೋಽನ್ಯಸ್ಯ ಶಾಪೇನ ಮುನೇ ಧರ್ಮೋ ನದೋಽಭವತ್ ।
ಅವಿಮುಕ್ತೇ ಮಹಾಕ್ಷೇತ್ರೆ ಖ್ಯಾತೋ ಧರ್ಮನದೋ ಮಹಾನ್ ॥ ೯೭ ॥

---

ನಾನು ನಿನ್ನ ತಂದೆಯನ್ನು ಪ್ರಾರ್ಥಿಸುವವನಲ್ಲ. ನೀನೇ ಗಾಂಧರ್ವವಿಧಿಯನ್ನನುಸರಿಸಿ ನನ್ನ ಇಷ್ಟಾರ್ಥವನ್ನು ಸಫಲಗೊಳಿಸು.

೯೩. ಇತೆಂದ ಬಲಾತ್ಕಾರದ ಮಾತುಗಳನ್ನು ಕೇಳಿ ಆ ಕನ್ಯೆಯು ಪುನಃ ಪುನಃ ಆ ಧರ್ಮರಾಜನನ್ನು ಕುರಿತು, "ಕನ್ಯೆಯು ದಾನಮಾಡಲೆಳಸುವ ತಂದೆಗೆ ಅಧೀನಳಾದವಳು" ಎಂಬುದಾಗಿ ಬಹುವಿಧವಾಗಿ ಹೇಳಿದಳು.

೯೪. "ಎಲೈ ಮಂದಬುದ್ಧಿಯೆ! ಇಂತಹ ಮಾತುಗಳನ್ನಿಲ್ಲಿ ಪುನಃ ಆಡಬೇಡ; ಇಲ್ಲಿಂದ ಹೊರಟುಹೋಗು" ಎಂಬುದಾಗಿ ಗದ್ದರಿಸಿದಳು. ಆದರೂ ಆ ಕನ್ಯೆಯ ಮೋಹದಿಂದ ಕಾಮಾತುರನಾದ ಧರ್ಮರಾಜನು ಕದಲಲಿಲ್ಲ.

೯೫. ಅದನ್ನು ಕಂಡು ಧೂತಪಾಪೆಯು ಬಾಲಕಿಯಾದರೂ ತನ್ನ ತಪಸ್ಸಿನ ಬಲದಿಂದ ಪ್ರಬಲಳಾಗಿ, "ನೀನು ಎಷ್ಟುಹೇಳಿದರೂ ಕೇಳದ ಜಡನಾಗಿರುವುದರಿಂದ ಜಲಾಧಾರವಾದ ನದಿಯಾಗು" ಎಂಬುದಾಗಿ ಶಾಪವನ್ನಿತ್ತಳು.

೯೬. ಈ ಶಾಪವನ್ನು ಕೇಳಿ ಅವಳಲ್ಲಿ ಕೋಪಗೊಂಡ ಧರ್ಮರಾಜನೂ, "ಎಲೌ ದುಷ್ಟಬುದ್ಧಿಯುಳ್ಳವಳೆ! ಹಲವು ವಿಧವಾದ ನನ್ನ ಪ್ರಾರ್ಥನೆಯನ್ನು ಅಂಗೀಕರಿಸದ ಕಠಿನ ಹೃದಯಳಾದ ನೀನು ಕಲ್ಲಾಗಿಹೋಗು" ಎಂದು ಶಪಿಸಿದನು.

೯೭. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮುನಿಯೆ! ಇಂತು ಇಬ್ಬರೂ ಪರಸ್ಪರರಿಗೆ ಶಾಪಗಳನ್ನೀಯಲು ಧರ್ಮನು ನದಿಯಾದನು. ಇಂದಿಗೂ ಸಹ ಅವಿಮುಕ್ತಮಹಾಕ್ಷೇತ್ರದಲ್ಲಿ ಧರ್ಮನು ಧರ್ಮನದವೆಂದು ವಿಶಾಲವಾದ ಕೀರ್ತಿಯನ್ನು ಪಡೆದಿರುವನು.

ಸಾಪ್ಯಾಹ ಪಿತರಂ ತ್ರಸ್ತಾ ಸ್ವಶಿಲಾತ್ವಸ್ಯ ಕಾರಣಂ ।
ಧ್ಯಾನೇನ ಧರ್ಮಂ ವಿಜ್ಞಾಯ ಮುನಿಃ ಕನ್ಯಾಮಥಾಬ್ರವೀತ್ ॥ ೯೮ ॥
ಮಾಭೈಃ ಪುತ್ರಿ ಕರಿಷ್ಯಾಮಿ ತವ ಸರ್ವಂ ಶುಭೋದಯಂ ।
ತಚ್ಛಾಪೋ ನಾನ್ಯಥಾ ಭೂಯಾಚ್ಚಂದ್ರಕಾಂತಶಿಲಾ ಭವ ॥ ೯೯ ॥
ಚಂದ್ರೋದಯಮನುಪ್ರಾಪ್ಯ ದ್ರವೀಭೂತತನಿಸ್ತತಃ ।
ಧುನೀಭವ ಸುತೇ ಸಾಧ್ವಿ ಧೂತಪಾಪೇತಿ ವಿಶ್ರುತಾ ॥ ೧೦೦ ॥
ಸ ಚ ಧರ್ಮನದಃ ಕನ್ಯೇ ತವ ಭರ್ತಾ ಸುಶೋಭನಃ ।
ತೈರ್ಗುಣೈಃ ಪರಿಪೂರ್ಣಾಂಗೋ ಯೇ ಗುಣಾಃ ಪ್ರಾರ್ಥಿತಾಸ್ತ್ವಯಾ ॥
ಅನ್ಯಚ್ಚ ಶೃಣು ಸದ್ಬುದ್ಧೇ ಮಮಾಪಿ ತಪಸೋ ಬಲಾತ್ ।
ದ್ವೈರೂಪ್ಯಂ ಭವತೋರ್ಭಾವಿ ಪ್ರಾಕೃತಂ ಚ ದ್ರವಂ ಚ ವೈ ॥ ೧೦೨ ॥
ಇತ್ಯಾಶ್ವಾಸ್ಯ ಪಿತಾ ಕನ್ಯಾಂ ಧೂತಪಾಪಾಂ ಪರಂತಪ ।
ಚಂದ್ರಕಾಂತಶಿಲಾಭೂತಾಮನುಜಗ್ರಾಹ ಬುದ್ಧಿಮಾನ್ ॥ ೧೦೩ ॥

---

೯೮. ಆ ಕನ್ಯೆಯೂ ಭಯದಿಂದ ನಡುಗುತ್ತ ತನಗೆ ಶಿಲಾಪ್ರಾಪ್ತಿರೂಪವಾದ ಶಾಪವು ಬರುವುದಕ್ಕೆ ಕಾರಣವನ್ನೆಲ್ಲ ತಂದೆಗೆ ವಿಸ್ತರಿಸಿದಳು. ಆ ಮುನಿಯು ಕ್ಷಣಕಾಲ ಧ್ಯಾನಾಸಕ್ತನಾಗಿದ್ದು ದಿವ್ಯಜ್ಞಾನದಿಂದ ಬಂದವನು ಧರ್ಮರಾಜನೆಂಬುದನ್ನರಿತು ಮಗಳನ್ನು ಕುರಿತು ಹೇಳತೊಡಗಿದನು.

೯೯. "ಪುತ್ರಿಯೆ! ನೀನು ಹೆದರಬೇಡ. ನಿನಗೆ ಎಲ್ಲವೂ ಉತ್ತರೋತ್ತರದಲ್ಲಿ ಶುಭವುಂಟಾಗುವಂತೆ ಮಾಡುವೆನು. ಆತನ ಶಾಪವು ಎಂದಿಗೂ ವ್ಯರ್ಥವಾಗತಕ್ಕದ್ದಲ್ಲವು. ಆದುದರಿಂದ ನೀನು ಚಂದ್ರಕಾಂತಶಿಲೆಯಾಗಿರು.

೧೦೦. ಸಾಧ್ವಿಯಾದ ಮಗಳೆ! ಚಂದ್ರೋದಯವುಂಟಾಗಲು ನೀನು ಕರಗಿ ನೀರಾದ ದೇಹವುಳ್ಳವಳಾಗಿ ಧೂತಪಾಪೆಯೆಂಬ ಹೆಸರಿನಿಂದಲೇ ನದಿಯಾಗಿ ಪ್ರಸಿದ್ಧಿಯನ್ನು ಪಡೆಯುವೆ.

೧೦೧. ಕನ್ಯಾರತ್ನವೆ! ಆ ಧರ್ಮನದನೇ ನಿನಗೆ ಪತಿಯಾಗಿ ಮಂಗಳವನ್ನುಂಟುಮಾಡುವನು. ಆ ಧರ್ಮರಾಜನೇ ನೀನು ಹಿಂದೆ ಹೇಳಿದ ಸಕಲ ಸದ್ಗುಣಗಳಿಂದಲೂ ಕೂಡಿದ ಉತ್ತಮ ವರನಾಗಿರುವನು.

೧೦೨. ಬುದ್ಧಿಯುಕ್ತಳೆ! ಮತ್ತೊಂದು ವಿಷಯವನ್ನು ಕೇಳು. ನನ್ನ ತಪಸ್ಸಿನ ಬಲದಿಂದ ನಿನಗೆ ಎರಡು ರೂಪಗಳುಂಟಾಗುವುವು. ಪಾಂಚಭೌತಿಕವಾದ ಈ ದೇಹವೇ ಒಂದು. ಎರಡನೆಯದೇ ನದಿಯ ಸ್ವರೂಪವು.

೧೦೩. ಶತ್ರುಸಂಹಾರಕನಾದ ಅಗಸ್ತ್ಯನೆ! ಇಂತೆಂದು ಆ ತಂದೆಯು ಮಗಳಾದ ಧೂತಪಾಪೆಯನ್ನು ಸಂತೈಸಿ ಮಹಾಪ್ರಾಜ್ಞನಾದುದರಿಂದ ಚಂದ್ರಕಾಂತಶಿಲೆಯ ರೂಪವನ್ನು ತಳೆದಿದ್ದ ಆಕೆಯನ್ನು ಅನುಗ್ರಹಿಸಿದನು.

ತದಾರಭ್ಯ ಮುನೇ ಕಾಶ್ಯಾಂ ಖ್ಯಾತೋ ಧರ್ಮನದೋ ಹ್ರದಃ ।
ಧರ್ಮೋ ದ್ರವಸ್ವರೂಪೇಣ ಮಹಾಪಾತಕನಾಶನಃ ॥ ೧೦೪ ॥
ಧುನೀ ಚ ಧೂತಪಾಪಾ ಸಾ ಸರ್ವತೀರ್ಥಮಯೀ ಶುಭಾ ।
ಹರೇನ್ಮಹಾಘಸಂಘಾತಾನ್ಕೂಲಜಾನಿವ ಪಾದಪಾನ್ ॥ ೧೦೫ ॥
ತತ್ರ ಧರ್ಮನದೇ ತೀರ್ಥೇ ಧೂತಪಾಪಾ ಸಮನ್ವಿತೇ ।
ಯದಾ ನ ಸ್ವರ್ಧುನೀ ತತ್ರ ತದಾ ಬ್ರಧ್ನಸ್ತಪೋ ವ್ಯಧಾತ್ ॥ ೧೦೬ ॥
ಗಭಸ್ತಿಮಾಲೀ ಭಗವಾನ್ ಗಭಸ್ತೀಶ್ವರಸನ್ನಿಧೌ ।
ಶೀಲಯನ್ಮಂಗಲಾಂ ಗೌರೀಂ ತಪ ಉಗ್ರಂ ಚಚಾರ ಹ ॥ ೧೦೭ ॥
ನಾಮ್ನಾ ಮಯೂಖಾದಿತ್ಯಸ್ಯ ತೀರ್ಥೇ ತತ್ರ ತಪಸ್ಯತಃ ।
ಕಿರಣೇಭ್ಯಃ ಪ್ರವವೃತೇ ಮಹಾಸ್ವೇದೋಽತಿಖೇದತಃ ॥ ೧೦೮ ॥
ಕಿರಣೇಭ್ಯಃ ಪ್ರವೃತ್ತಾಯ ಮಹಾಸ್ವೇದಸ್ಯ ಸಂತತಿಃ ।
ತತಃ ಸಾ ಕಿರಣಾ ನಾಮ ಜಾತಾ ಪುಣ್ಯಾ ತರಂಗಿಣೀ ॥ ೧೦೯ ॥

---

೧೦೪. ಮುನಿವರ್ಯನೆ! ಆ ದಿನ ಮೊದಲಾಗಿ ಕಾಶೀಕ್ಷೇತ್ರದಲ್ಲಿ ಧರ್ಮನದವೆಂಬ ಸರೋವರವು ವಿಖ್ಯಾತವಾಗಿರುವುದು. ಅದರಲ್ಲಿ ಸಕಲ ಮಹಾ ಪಾತಕಗಳನ್ನೂ ಹದಗೆಡಿಸುವ ಧರ್ಮವೇ ನೀರಿನ ರೂಪದಿಂದ ನೆಲಸಿರುವುದು.

೧೦೫. ಧೂತಪಾಪೆಯೆಂಬ ನದಿಯೂ ಸಕಲ ತೀರ್ಥಗಳ ಸಾರವನ್ನು ಪಡೆದು ಮಂಗಳಪ್ರದೆಯಾಗಿ ಪ್ರವಾಹದ ಭರದಿಂದ ದಡಗಳಲ್ಲಿರುವ ವೃಕ್ಷಗಳನ್ನು ಕೊಚ್ಚಿಕೊಂಡು ಹೋಗುವಂತೆ ಸ್ನಾನಮಾಡಿದವರ ಸಕಲ ಪಾಪಕೋಟಿಗಳನ್ನೂ ಅಪಹರಿಸುವುದು.

೧೦೬. ಪೂರ್ವದಲ್ಲಿ ಅಲ್ಲಿ ಗಂಗಾನದಿಯು ಪ್ರವಹಿಸುತ್ತಿರಲಿಲ್ಲ. ಆ ಕಾಲ ದಲ್ಲಿ ಧೂತಪಾಪೆಯಿಂದ ಕೂಡಿದ ಆ ಧರ್ಮನದ ತೀರ್ಥದಲ್ಲಿ ಸೂರ್ಯದೇವನು ಬಹಳಕಾಲ ತಪಸ್ಸನ್ನು ಮಾಡಿದನು.

೧೦೭. ಕಿರಣರಾಶಿಗಳುಳ್ಳ ಆ ಭಗವಂತನು ಗಭಸ್ತೀಶ್ವರನ ಸನ್ನಿಧಿಯಲ್ಲಿ ಸರ್ವಮಂಗಳೆಯಾದ ಗೌರಿದೇವಿಯನ್ನೇ ಧ್ಯಾನಿಸುತ್ತ ಉಗ್ರವಾದ ತಪಸ್ಸ ನ್ನಾಚರಿಸಿದನು.

೧೦೮. ಮಯೂಖಾದಿತ್ಯನಾಮಕವಾದ ತೀರ್ಥದಲ್ಲಿ ಆತನು ತಪಸ್ಸನ್ನು ಮಾಡುತ್ತಿರಲು ತಪಸ್ಸಿನ ಕ್ಲೇಶಗಳನ್ನನುಭವಿಸುತ್ತಿದ್ದ ಆತನ ಕಿರಣಗಳಿಂದ ದೇಹದಲ್ಲಿ ಹೆಚ್ಚಾದ ಬೆವರಿನ ಹನಿಗಳು ಕಾಣಿಸಿಕೊಂಡುವು.

೧೦೯. ಕಿರಣಗಳಿಂದ ದ್ಭವಿಸಿದ ಸ್ವೇದೋದಕದ ಬಿಂದುಗಳ ಧಾರೆಯು ಸುರಿಯುತ್ತಿರಲು ಅವುಗಳಿಂದ ಕಿರಣೆಯೆಂಬ ಪವಿತ್ರವಾದ ನದಿಯುಂಟಾಯಿತು.

ಮಹಾಪಾಪಾಂಧತಮಸಂ ಕಿರಣಾಖ್ಯಾ ತರಂಗಿಣೀ ।
ಧ್ವಂಸಯೇತ್ಸ್ನಾನಮಾತ್ರೇಣ ಮಿಲಿತಾ ಧೂತಪಾಪಯಾ ॥ ೧೧೦ ॥
ಆದೌ ಧರ್ಮನದಃ ಪುಣ್ಯೋ ಮಿಶ್ರಿತೋ ಧೂತಪಾಪಯಾ ।
ಯಯಾ ಧೂತಾನಿ ಪಾಪಾನಿ ಸರ್ವತೀರ್ಥೀಕೃತಾತ್ಮನಾ ॥ ೧೧೧ ॥
ತತೋಽಪಿ ಮಿಲಿತಾಗತ್ಯ ಕಿರಣಾ ರವಿಣೈಧಿತಾ ।
ಯನ್ನಾಮಸ್ಮರಣಾದೇವ ಮಹಾಮೋಹೋಽಂಧತಾಂ ವ್ರಜೇತ್ ॥ ೧೧೨ ॥
ಕಿರಣಾ ಧೂತಪಾಪೇ ಚ ತಸ್ಮಿನ್ಧರ್ಮನದೇ ಶುಭೇ ।
ಸ್ರವಂತ್ಯೌ ಪಾಪಸಂಹರ್ತ್ರ್ಯೌ ವಾರಾಣಸ್ಯಾಂ ಶುಭದ್ರವೇ ॥ ೧೧೩ ॥
ತತೋ ಭಾಗೀರಥೀ ಪ್ರಾಪ್ತಾ ತೇನ ದೈಲೀಪಿನಾ ಸಹ ।
ಭಾಗೀರಥೀ ಸಮಾಯಾತಾ ಯಮುನಾ ಚ ಸರಸ್ವತೀ ॥ ೧೧೪ ॥
ಕಿರಣಾ ಧೂತಪಾಪಾ ಚ ಪುಣ್ಯತೋಯಾ ಸರಸ್ವತೀ ।
ಗಂಗಾ ಚ ಯಮುನಾ ಚೈವ ಪಂಚನದ್ಯೋಽತ್ರ ಕೀರ್ತಿತಾಃ ॥ ೧೧೫ ॥

---

೧೧೦. ಕಿರಣಾಖ್ಯವಾದ ಆ ನದಿಯೂ ಧೂತಪಾಪೆಯೊಡನೆ ಸೇರುವುದಾಗಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಮಹಾ ಪಾತಕಗಳೆಂಬ ಗಾಢಾಂಧಕಾರವನ್ನು ಧ್ವಂಸಮಾಡುತ್ತಿರುವುದು.

೧೧೧. ಮೊದಲು ಸಕಲ ತೀರ್ಥಗಳ ಸಾರವನ್ನೊಳಕೊಂಡು ಸಮಸ್ತ ಪಾತಕಗಳನ್ನೂ ನಾಶಗೊಳಿಸುವ ಧೂತಪಾಪೆಯು ಪುಣ್ಯನದಿಯಾದ ಧರ್ಮನದವನ್ನು ಸೇರುವುದು.

೧೧೨. ಬಳಿಕ ಮುಂದಕ್ಕೆ ಹರಿಯುತ್ತಿರುವ ಆ ನದಿಯನ್ನು ಸೂರ್ಯದೇವನಿಂದುದ್ಭವಿಸಿದ ಕಿರಣಾನದಿಯು ಬಂದು ಸೇರುವುದು. ಆ ನದಿಯ ಹೆಸರನ್ನು ಸ್ಮರಿಸುವುದರಿಂದಲೇ ಸಂಸಾರದ ಮಹಾಮೋಹವು ತನ್ನ ಕಾರ್ಯವನ್ನುಮಾಡಲು ಅಶಕ್ತವಾಗುವುದು.

೧೧೩. ಇಂತು ವಾರಾಣಸಿಯಲ್ಲಿ ಕಿರಣೆಯೂ, ಧೂತಪಾಪೆಯೂ, ಪವಿತ್ರವೂ ಪುಣ್ಯೋದಕಸಮನ್ವಿತವೂ ಆದ ಆ ಧರ್ಮನದತೀರ್ಥದಲ್ಲಿ ಪ್ರವಹಿಸುತ್ತ ಸ್ನಾನಮಾಡಿದವರ ಸಕಲಪಾತಕಗಳನ್ನೂ ನಾಶಮಾಡುತ್ತಿರುವುವು.

೧೧೪. ಬಳಿಕ ಕಾಲಾನಂತರದಲ್ಲಿ ಭಗೀರಥನನ್ನನುಸರಿಸಿದ ಗಂಗೆಯೂ ಅಲ್ಲಿಗೆ ಬಂದಳು. ಆ ಭಾಗೀರಥಿಯನ್ನೇ ಅನುಸರಿಸಿ ಯಮುನಾನದಿಯೂ ಸರಸ್ವತಿಯೂ ಅಲ್ಲಿ ಬಂದು ಸೇರುವವರಾದರು.

೧೧೫. ಆದುದರಿಂದ ಈ ತೀರ್ಥದಲ್ಲಿ ಕಿರಣಾ, ಧೂತಪಾಪಾ, ಪುಣ್ಯೋದಕವುಳ್ಳ ಸರಸ್ವತಿ ಗಂಗಾ ಮತ್ತು ಯಮುನೆಯರೆಂಬ ಐದು ನದಿಗಳೂ ಸನ್ನಿಹಿತಗಳಾಗಿರುವುವೆಂದು ಪ್ರಸಿದ್ಧವಾಗಿರುವುದು.

ಅತಃ ಪಂಚನದಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ।
ತತ್ರಾಪ್ಲುತೋ ನ ಗೃಹ್ಣೀಯಾದ್ದೇಹಂ ನಾಪಾಂಚಭೌತಿಕಂ ॥ ೧೧೬ ॥
ಅಸ್ಮಿನ್ಪಂಚನದೀನಾಂ ಚ ಸಂಭೇದೇಽಘೌಘಭೇದಿನಿ ।
ಸ್ನಾನಮಾತ್ರಾತ್ಪ್ರಯಾತ್ಯೇವ ಭಿತ್ವಾ ಬ್ರಹ್ಮಾಂಡಮಂಡಪಂ ॥ ೧೧೭ ॥
ತೀರ್ಥಾನಿ ಸಂತಿ ಭೂಯಾಂಸಿ ಕಾಶ್ಯಾಮತ್ರ ಪದೇ ಪದೇ ।
ನ ಪಂಚನದತೀರ್ಥಸ್ಯ ಕೋಟ್ಯಂಶೇನ ಸಮಾನ್ಯಪಿ ॥ ೧೧೮ ॥
ಪ್ರಯಾಗೇ ಮಾಘಮಾಸೇ ತು ಸಕೃತ್ಸ್ನಾತಸ್ಯ ಯತ್ಫಲಂ ।
ತತ್ಫಲಂ ಸ್ಯಾದ್ದಿನೈಕೇನ ಕಾಶ್ಯಾಂ ಪಂಚನದೇ ಧ್ರುವಂ ॥ ೧೧೯ ॥
ಸ್ನಾತ್ವಾ ಪಂಚನದೇ ತೀರ್ಥೇ ಕೃತ್ವಾ ಚ ಪಿತೃತರ್ಪಣಂ ।
ಬಿಂದುಮಾಧವಮಭ್ಯರ್ಚ್ಯ ನ ಭೂಯೋ ಜನ್ಮಭಾಗ್ಭವೇತ್ ॥ ೧೨೦ ॥
ಯಾವತ್ಸಂಖ್ಯಾಸ್ತಿಲಾ ದತ್ತಾಃ ಪಿತೃಭ್ಯೋ ಜಲತರ್ಪಣೇ ।
ಪುಣ್ಯೇ ಪಂಚನದೇ ತೀರ್ಥೇ ತೃಪ್ತಿಃ ಸ್ಯಾತ್ತಾವದಾಬ್ದಿಕೀ ॥ ೧೨೧ ॥

---

೧೧೬. ಈ ಐದುನದಿಗಳ ಸಂಗಮುಸ್ಥಾನವಾದ ತೀರ್ಥವು ಪಂಚನದವೆಂಬ ಹೆಸರಿನಿಂದ ಮೂರುಲೋಕಗಳಲ್ಲಿಯೂ ಕೀರ್ತಿಯನ್ನು ಪಡೆದಿರುವುದು. ಆ ನೀರಿನಲ್ಲಿ ಮುಳುಗಿ ಸ್ನಾನಮಾಡಿದ ಮನುಷ್ಯನು ಪುನಃ ಪಾಂಚಭೌತಿಕವಾದ ದೇಹವನ್ನು ಪಡೆಯುವುದಿಲ್ಲ.

೧೧೭. ಪಾಪರಾಶಿಗಳನ್ನು ನಿರ್ಮೂಲವಾಗಿ ಕೆಡಿಸುವ ಈ ಐದು ನದಿಗಳ ಸಂಗಮದಲ್ಲಿ ಯಾವನು ಸ್ನಾನವನ್ನು ಮಾಡುವನೊ, ಅಷ್ಟರ ಮಾತ್ರದಿಂದಲೇ ಅವನು ಬ್ರಹ್ಮಾಂಡವನ್ನು ಭೇದಿಸಿಕೊಂಡು ಮೋಕ್ಷವನ್ನು ಪಡೆಯುವನು.

೧೧೮. ಈ ಕಾಶೀಕ್ಷೇತ್ರದಲ್ಲಿ ಅಡಿಗಡಿಗೂ ಅಸಂಖ್ಯಾಕಗಳಾದ ತೀರ್ಥಗಳಿರುವುವು. ಆದರೆ ಅವುಗಳಲ್ಲಿ ಯಾವುವೂ ಈ ಪಂಚನದ ತೀರ್ಥದ ಕೋಟ್ಯಂಶಕ್ಕೂ ಸಮಾನಗಳಾಗಿರುವುದಿಲ್ಲ.

೧೧೯. ಪ್ರಯಾಗಕ್ಷೇತ್ರದಲ್ಲಿ ಮಾಘಮಾಸದಲ್ಲೆಲ್ಲ ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಲು ಯಾವ ಫಲವು ಲಭಿಸುವುದೊ, ಅದನ್ನೇ ಕಾಶಿಯಲ್ಲಿರುವ ಪಂಚನದ ತೀರ್ಥದ ಒಂದೇ ದಿವಸದ ಸೇವನೆಯಿಂದ ಪಡೆಯಬಹುದೆಂಬುದು ನಿಶ್ಚಯವು.

೧೨೦. ಪಂಚನದತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು, ಪಿತೃದೇವತೆಗಳಿಗೆ ತರ್ಪಣಗಳನ್ನರ್ಪಿಸಿ, ಬಿಂದುಮಾಧವಸ್ವಾಮಿಯ ಪೂಜೆಯನ್ನುಮಾಡಿದ ಮನುಷ್ಯನು ಪುನಃ ಜನ್ಮಕ್ಕೆ ಭಾಗಿಯಾಗುವುದಿಲ್ಲ.

೧೨೧. ಪವಿತ್ರತಮವಾದ ಪಂಚನದತೀರ್ಥದಲ್ಲಿ ಪಿತೃಗಳಿಗೆ ತರ್ಪಣಗಳನ್ನರ್ಪಿಸುವ ಜಲದಲ್ಲಿ ಎಷ್ಟು ಎಳ್ಳಿನ ಕಾಳುಗಳಿರುವುವೊ, ಅಷ್ಟು ವರ್ಷಗಳವರೆಗೂ ಅವರಿಗೆ ತಮ್ಮ ಲೋಕದಲ್ಲಿ ಸಂತೋಷವುಂಟಾಗುವುದು.

ಶ್ರದ್ಧಯಾ ಯೈಃ ಕೃತಂ ಶ್ರಾದ್ಧಂ ತೀರ್ಥೇ ಪಂಚನದೇ ಶುಭೇ ।
ತೇಷಾಂ ಪಿತಾಮಹಾ ಮುಕ್ತಾ ನಾನಾಯೋನಿಗತಾ ಅಪಿ ॥ ೧೨೨ ॥
ಯಮಲೋಕೇ ಪಿತೃಗಣೈರ್ಗಾಥೇಯಂ ಪರಿಗೀಯತೇ ।
ಮಹಿಮಾನಂ ಪಾಂಚನದಂ ದೃಷ್ಟ್ವಾ ಶ್ರಾದ್ಧವಿಧಾನತಃ ॥ ೧೨೩ ॥
ಅಸ್ಮಾಕಮಪಿ ವಂಶ್ಯೋಽತ್ರ ಕಶ್ಚಿಚ್ಛ್ರಾದ್ಧಂ ಕರಿಷ್ಯತಿ ।
ಕಾಶ್ಯಾಂ ಪಂಚನದಂ ಪ್ರಾಪ್ಯ ಯೇನ ಮುಚ್ಯಾಮಹೇ ವಯಂ ॥ ೧೨೪ ॥
ಇಯಂ ಗಾಥಾ ಪ್ರತಿದಿನಂ ಶ್ರಾದ್ಧದೇವಸ್ಯ ಸನ್ನಿಧೌ ।
ಪಿತೃಭಿಃ ಪರಿಗೀಯೇತ ಕಾಶ್ಯಾಂ ಪಂಚನದಂ ಪ್ರತಿ ॥ ೧೨೫ ॥
ತತ್ರ ಪಂಚನದೇ ತೀರ್ಥೇ ಯತ್ಕಿಂಚಿದ್ದೀಯತೇ ವಸು ।
ಕಲ್ಪಕ್ಷಯೇಽಪಿ ನ ಭವೇತ್ತಸ್ಯ ಪುಣ್ಯಸ್ಯ ಸಂಕ್ಷಯಃ ॥ ೧೨೬ ॥
ವಂಧ್ಯಾಪಿ ವರ್ಷಪರ್ಯಂತಂ ಸ್ನಾತ್ವಾ ಪಂಚನದೇ ಹ್ರದೇ ।
ಸಮರ್ಚ್ಯ ಮಂಗಲಾಂ ಗೌರೀಂ ಪುತ್ರಂ ಜನಯತಿ ಧ್ರುವಂ ॥ ೧೨೭ ॥

---

೧೨೨. ಯಾರು ಶ್ರದ್ಧಾನ್ವಿತರಾಗಿ ಪವಿತ್ರವಾದ ಪಂಚನದತೀರ್ಥದಲ್ಲಿ ಪಿತೃಶ್ರಾದ್ಧಗಳನ್ನು ನೆರವೇರಿಸುವರೊ, ಅವರ ಪಿತಾಮಹರು ತಮ್ಮ ಪಾಪಗಳ ಫಲವಾಗಿ ಯಾವ ಯೋನಿಗಳಲ್ಲಿ ಜನ್ಮಗಳನ್ನು ಪಡೆದಿದ್ದರೂ ಮುಕ್ತರಾಗುವರು.

೧೨೩. ಶ್ರಾದ್ಧಗಳನ್ನುಮಾಡುವ ವಿಚಾರದಲ್ಲಿ ಪಂಚನದತೀರ್ಥದ ಮಹಾ ಮಹಿಮೆಯನ್ನು ಕಂಡು ಯಮಲೋಕದಲ್ಲಿರುವ ಪಿತೃಗಣಗಳೂ ಹೀಗೆಂದು ತಮ್ಮಲ್ಲಿಯೇ ಗಾದೆಯನ್ನು ಹೇಳಿಕೊಳ್ಳುತ್ತಿರುವರು.

೧೨೪. ನಮ್ಮ ವಂಶದಲ್ಲಿಯೂ ಯಾವನಾದರೂ ಒಬ್ಬ ಮಹಾತ್ಮನು ಹುಟ್ಟಿ ಕಾಶೀಕ್ಷೇತ್ರದ ಪಂಚನದತೀರ್ಥದಲ್ಲಿ ಶ್ರಾದ್ಧವನ್ನು ಮಾಡಬಹುದು. ಅದರಿಂದ ನಾವು ಮೋಕ್ಷವನ್ನು ಪಡೆಯುವೆವು.

೧೨೫. ಈ ರೀತಿಯಾದ ಪ್ರವಾದವು ಪ್ರತಿದಿನದಲ್ಲಿಯೂ ಯಮಧರ್ಮ ರಾಜನ ಸನ್ನಿಧಿಯಲ್ಲಿ ಕಾಶಿಯ ಪಂಚನದತೀರ್ಥದ ವಿಷಯವಾಗಿ ಪಿತೃಗಳಿಂದ ಗಾನಮಾಡಲ್ಪಡುತ್ತಿರುವುದು.

೧೨೬. ಆ ಪಂಚನದ ತೀರ್ಥದಲ್ಲಿ ಎಷ್ಟೇ ಅಲ್ಪವಾದ ಧನವನ್ನು ದಾನ ಮಾಡಿದರೂ, ಅದರ ಪುಣ್ಯವು ಕಲ್ಪಾಂತ್ಯವು ಸಂಭವಿಸುವ ಕಾಲವೊದಗಿದರೂ ನಾಶವನ್ನು ಹೊಂದುವುದಿಲ್ಲ.

೧೨೭. ಹುಟ್ಟುಬಂಜೆಯಾದವಳೂ ಸಹ ಒಂದು ವರ್ಷದವರೆಗೂ ಈ ಪಂಚನದ ತೀರ್ಥದಲ್ಲಿ ಸ್ನಾನವನ್ನುಮಾಡಿ ನಿತ್ಯವೂ ಮಂಗಳಗೌರಿಯನ್ನು ಪೂಜಿಸಲು ಸತ್ಪುತ್ರನನ್ನು ಪಡೆಯುವಳೆಂಬುದರಲ್ಲಿ ಸಂದೇಹವಿಲ್ಲ.

ಜಲೈಃ ಪಾಂಚನದೈಃ ಪುಣ್ಯೈರ್ವಾಸಸಾ ಪರಿಶೋಧಿತೈಃ ।
ಮಹಾಫಲಮವಾಪ್ನೋತಿ ಸ್ನಪಯಿತ್ವೇಷ್ಟದೇವತಾಮ್ ॥ ೧೨೮ ॥
ಪಂಚಾಮೃತಾನಾಂ ಕಲಶೈರಷ್ಟೋತ್ತರಶತೋನ್ಮಿತೈಃ ।
ತುಲಿತೋಽಧಿಕತಾಂ ಯಾತೋ ಬಿಂದುಃ ಪಂಚನದಾಂಭಸಃ ॥ ೧೨೯ ॥
ಪಂಚಕೂರ್ಚೇನ ಪೀತೇನ ಯಾತ್ರಾ ಶುದ್ಧಿರುದಾಹೃತಾ ।
ಸಾ ಶುದ್ಧಿಃ ಶ್ರದ್ಧಯಾ ಪ್ರಾಶ್ಯ ಬಿಂದುಂ ಪಾಂಚನದಾಂಭಸಃ ॥ ೧೩೦ ॥
ಭವೇದವಭೃತಸ್ನಾನಾದ್ರಾಜಸೂಯಾಶ್ವಮೇಧಯೋಃ ।
ಯತ್ಫಲಂ ತಚ್ಛತಗುಣಂ ಸ್ನಾನಾತ್ಪಾಂಚನದಾಂಭಸಾ ॥ ೧೩೧ ॥
ರಾಜಸೂಯಾಶ್ವಮೇಧೌ ಚ ಭವೇತಾಂ ಸ್ವರ್ಗಸಾಧನಂ ।
ಆಬ್ರಹ್ಮಘಟಿಕಾದ್ವಂದ್ವಂ ಮುಕ್ತ್ಯೈ ಪಾಂಚನದಾಪ್ಲುತಿಃ ॥ ೧೩೨ ॥
ಸ್ವರ್ಗರಾಜ್ಯಾಭಿಷೇಕೋಽಪಿ ನ ಸತಾಂ ಸಮ್ಮತಃ ಸತಾಂ ।
ಅಭಿಷೇಕಃ ಪಾಂಚನದೋ ಯಥಾನಲ್ಪಸುಖಪ್ರದಃ ॥ ೧೩೩ ॥

---

೧೨೮. ಪಂಚನದತೀರ್ಥದ ಪುಣ್ಯೋದಕವನ್ನು ಬಟ್ಟೆಯಲ್ಲಿ ಶೋಧಿಸಿ ಅದರಿಂದ ತನ್ನ ಇಷ್ಟದೇವತೆಗೆ ಅಭಿಷೇಕವನ್ನುಮಾಡಿದ ಮಾನವನು ಮಹಾ ಫಲಗಳನ್ನೂ ಸುಲಭವಾಗಿಯೇ ಪಡೆಯುವನು.

೧೨೯. ಒಂದುನೂರೆಂಟು ಪಂಚಾಮೃತ ಕಳಶಗಳಿಗೆ ಈ ಪಂಚನದತೀರ್ಥದ ಒಂದು ಬಿಂದುವು ಸಮಾನವೆನಿಸುವುದು. ಅಥವಾ ತೀರ್ಥೋದಕದ ಬಿಂದುವೇ ಹೆಚ್ಚಿನ ಮಹಿಮೆಯುಳ್ಳದೆಂದರೂ ಒಪ್ಪುವುದು.

೧೩೦. ಭೂಮಿಯಲ್ಲಿ ಪಂಚಗವ್ಯವನ್ನು ಪ್ರಾಶನಮಾಡಲು ಯಾವ ದೇಹ ಶುದ್ಧಿಯುಂಟಾಗುವುದೆಂದು ಶಾಸ್ತ್ರೋಕ್ತವಾಗಿರುವುದೊ, ಆ ಶುದ್ಧಿಯೇ ಪಂಚ ನದ ತೀರ್ಥದ ಜಲದ ಒಂದು ಬಿಂದುವನ್ನು ಮಾತ್ರ ಶ್ರದ್ಧೆಯಿಂದ ಸೇವಿಸಿದವನಿಗೆ ಲಭಿಸುವುದು.

೧೩೧. ರಾಜಸೂಯ ಮತ್ತು ಅಶ್ವಮೇಧಗಳೆಂಬ ಯಜ್ಞಗಳನ್ನು ಸಾಂಗ ವಾಗಿ ನೆರವೇರಿಸಿ ಅವಭೃಥಸ್ನಾನವನ್ನು ಮಾಡಿದುದರಿಂದ ಯಾವ ಫಲವು ಲಭಿಸು ವುದೊ, ಆ ಫಲವೇ ಶತಗುಣಿತವಾಗಿ ಪಂಚನದತೀರ್ಥದಲ್ಲಿ ಒಂದೇ ಸ್ನಾನವನ್ನು ಮಾಡುವುದರಿಂದ ಲಭಿಸುವುದು.

೧೩೨. ರಾಜಸೂಯಾಶ್ವಮೇಧಗಳೂ ಸಹ ಬ್ರಹ್ಮನ ಕಾಲಪರಿಮಿತಿಯಲ್ಲಿ ಎರಡು ಘಳಿಗೆಗಳವರೆಗೆ ಮಾತ್ರ ಸ್ವರ್ಗಭೋಗಗಳನ್ನನುಭವಿಸಲು ಸಾಧನ ಗಳಾಗಿರುವುವು. ಆದರೆ ಪಂಚನದ ತೀರ್ಥದಲ್ಲಿಮಾಡಿದ ಸ್ನಾನವು ಶಾಶ್ವತವಾದ ಮೋಕ್ಷಪದವಿಯನ್ನೇ ಕೈಗೂಡಿಸಿಕೊಡುವುದು.

೧೩೩. ಸಜ್ಜನರಿಗೆ ಅಪಾರವಾದ ಸೌಖ್ಯವನ್ನುಂಟುಮಾಡುವ ಪಂಚನದ ಸ್ನಾನದಷ್ಟು ಸ್ವರ್ಗರಾಜ್ಯದ ಪಟ್ಟಾಭಿಷೇಕವೂ ಸಹ ಸಭಿಮತವಾದುದಲ್ಲ.

ವರಂ ವಾರಾಣಸೀಂ ಪ್ರಾಪ್ಯ ಭೃತ್ಯಃ ಪಂಚನದೋಕ್ಸಿಣಾಂ ।
ನಾನ್ಯತ್ರ ಸೇವಕೀಭೂತಭೂಪಕೋಟಿರ್ನರೇಶ್ವರಃ ॥ ೧೩೪ ॥
ಯೈರ್ನ ಪಂಚನದೇ ಸ್ನಾತಂ ಕಾರ್ತಿಕೇ ಪಾಪಹಾರಿಣಿ ।
ತೇಽದ್ಯಾಪಿ ಗರ್ಭೇ ತಿಷ್ಠಂತಿ ಪುನಸ್ತೇ ಗರ್ಭವಾಸಿನಃ ॥ ೧೩೫ ॥
ಕೃತೇ ಧರ್ಮನದಂ ನಾಮ ತ್ರೇತಾಯಾಂ ಧೂತಪಾಪಕಂ ।
ದ್ವಾಪರೇ ಬಿಂದುತೀರ್ಥಂ ಚ ಕಲೌ ಪಂಚನದಂ ಸ್ಮೃತಂ ॥ ೧೩೬ ॥
ಶತಂ ಸಮಾಸ್ತಪಸ್ತಪ್ತ್ವಾ ಕೃತೇ ಯತ್ಪ್ರಾಪ್ಯತೇ ಫಲಂ ।
ತತ್ಕಾರ್ತಿಕೇ ಪಂಚನದೇ ಸಕೃತ್ಸ್ನಾನೇನ ಲಭ್ಯತೇ ॥ ೧೩೭ ॥
ಇಷ್ಟಾಪೂರ್ತೇಷು ಧರ್ಮೇಷು ಯಾವಜ್ಜನ್ಮಕೃತೇಷು ಯತ್ ।
ಅನ್ಯತ್ರ ಸ್ಯಾತ್ಫಲಂ ತತ್ಸ್ಯಾದೂರ್ಜೇ ಧರ್ಮನದಾಪ್ಲವಾತ್ ॥ ೧೩೮ ॥
ನ ಧೂತಪಾಪಸದೃಶಂ ತೀರ್ಥಂ ಕ್ವಾಪಿ ಮಹೀತಲೇ ।
ಯದೇಕಸ್ನಾನತೋ ನಶ್ಯೇದಘಂ ಜನ್ಮತ್ರಯಾರ್ಜಿತಂ ॥ ೧೩೯ ॥

---

೧೩೪. ವಾರಾಣಸೀಕ್ಷೇತ್ರವನ್ನು ಹೊಂದಿದವನ ಭೃತ್ಯನಾಗಿಯಾದರೂ ಪಂಚನದ ತೀರ್ಥದಲ್ಲಿ ಅವರೊಡನೆ ಸ್ನಾನವನ್ನುಮಾಡುವುದು ಶ್ರೇಷ್ಠವೇ ಹೊರತು ಇತರ ಸ್ಥಳಗಳಲ್ಲಿ ಕೋಟಿ ಸಾಮಂತರಾಜರು ಭೃತ್ಯರಾಗಿರುವ ಚಕ್ರವರ್ತಿ ಪದವಿಯೂ ತುಚ್ಛವೆಂದೇ ಹೇಳಬೇಕು.

೧೩೫. ಕಾರ್ತಿಕಮಾಸವು ಪ್ರಾಪ್ತವಾಗಲು ಸಮಸ್ತಪಾಪಪರಿಹಾರಕವಾದ ಪಂಚನದ ತೀರ್ಥದಲ್ಲಿ ಯಾರು ಸ್ನಾನಮಾಡಿರುವುದಿಲ್ಲವೊ, ಅವರೇ ಇಂದಿನ ವರೆಗೂ ಗರ್ಭವಾಸವನ್ನು ಮರಳಿ ಮರಳಿ ಅನುಭವಿಸುತ್ತಿರುವರು, ಮುಂದೆಯೂ ಗರ್ಭವಾಸಿಗಳಾಗಿಯೇ ಇರುವರು.

೧೩೬. ಈ ತೀರ್ಥೋತ್ತಮವು ಕೃತಯುಗದಲ್ಲಿ ಧರ್ಮನದವೆಂದೂ, ತ್ರೇತಾಯುಗದಲ್ಲಿ ಧೂತಪಾಪವೆಂದೂ, ದ್ವಾಪರದಲ್ಲಿ ಬಿಂದುತೀರ್ಥವೆಂದೂ, ಕಲಿಯುಗದಲ್ಲಿ ಪಂಚನದವೆಂದೂ ವಿವಿಧ ಹೆಸರುಗಳನ್ನು ಪಡೆದಿರುವುದು.

೧೩೭. ಕೃತಯುಗದಲ್ಲಿ ಒಂದು ನೂರು ವರ್ಷಗಳ ತಪಸ್ಸನ್ನು ಮಾಡುವುದರಿಂದ ಯಾವ ಫಲವು ಲಭಿಸುವುದೊ, ಅದನ್ನೇ ಕಾರ್ತಿಕಮಾಸದಲ್ಲಿ ಪಂಚನದ ತೀರ್ಥದ ಒಂದು ಸ್ನಾನದಿಂದಲೇ ಪಡೆಯಬಹುದು.

೧೩೮. ಇತರ ಕ್ಷೇತ್ರಗಳಲ್ಲಿ ಯಾವಜ್ಜೀವವೂ ಇಷ್ಟಾಪೂರ್ತಾದಿ ಅನೇಕ ಧರ್ಮಕಾರ್ಯಗಳನ್ನು ಮಾಡುವುದರಿಂದ ಯಾವ ಫಲವುಂಟೊ, ಅದೇ ಕಾರ್ತಿಕ ಮಾಸದಲ್ಲಿ ಧರ್ಮನದ ತೀರ್ಥದ ಸ್ನಾನದಿಂದ ಲಭಿಸುವುದು.

೧೩೯. ಈ ಧೂತಪಾಪಕ್ಕೆ ಸಮಾನವಾದ ತೀರ್ಥವು ಭೂಮಂಡಲದಲ್ಲೆಲ್ಲಿಯೂ ದೊರಕುವುದಿಲ್ಲ. ಇದರಲ್ಲಿ ಮಾಡಿದ ಒಂದು ಸ್ನಾನದಿಂದಲೇ ಮೂರು ಜನ್ಮಗಳಲ್ಲಿ ಶೇಖರಿಸಿದ ಪಾತಕಗಳೂ ನಶವಾಗುವುವು.

ಬಿಂದುತೀರ್ಥೇ ನರೋ ದತ್ವಾ ಕಾಂಚನಂ ಕೃಷ್ಣಲೋನ್ಮಿತಂ ।
ನ ದರಿದ್ರೋ ಭವೇತ್ಕ್ವಾಪಿ ನ ಸ್ವರ್ಣೇನ ವಿಯುಜ್ಯತೇ ॥ ೧೪೦ ॥
ಗೋಭೂತಿಲಹಿರಣ್ಯಾಶ್ವವಾಸೋಽನ್ನಸ್ರಗ್ವಿಭೂಷಣಂ ।
ಯತ್ಕಿಂಚಿದ್ಬಿಂದುತೀರ್ಥೇಽತ್ರ ದತ್ವಾಕ್ಷಯಮವಾಪ್ನುಯಾತ್ ॥ ೧೪೧ ॥
ಏಕಾಮಪ್ಯಾಹುತಿಂ ದತ್ವಾ ಸಮಿದ್ಧೇಽಗ್ನೌ ವಿಧಾನತಃ ।
ಪುಣ್ಯೇ ಧರ್ಮನದೇ ತೀರ್ಥೇ ಕೋಟಿಹೋಮಫಲಂ ಲಭೇತ್ ॥ ೧೪೨ ॥
ನ ಪಂಚನದತೀರ್ಥಸ್ಯ ಮಹಿಮಾನಮನಂತಕಂ ।
ಕೋಽಪಿ ವರ್ಣಯಿತುಂ ಶಕ್ತಶ್ಚತುರ್ವರ್ಗಶುಭೌಕಸಃ ॥ ೧೪೩ ॥
ಶ್ರುತ್ವಾಖ್ಯಾನಮಿದಂ ಪುಣ್ಯಂ ಶ್ರಾವಯಿತ್ವಾಪಿ ಭಕ್ತಿತಃ ।
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ॥ ೧೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಪಂಚನದಾವಿರ್ಭಾವವರ್ಣನಂ" ನಾಮೈಕೋನಷಷ್ಟಿತಮೋಽಧ್ಯಾಯಃ

---

೧೪೦. ಬಿಂದು ತೀರ್ಥದಲ್ಲಿ ಒಂದು ಗುಲಗಂಜಿಯ ಪ್ರಮಾಣದ ಚಿನ್ನವನ್ನಾದರೂ ಯಾವನು ದಾನಮಾಡುವನೊ, ಅವನು ಎಂದಿಗೂ ದರಿದ್ರನಾಗುವುದಿಲ್ಲ. ಅವನಿಗೆ ಚಿನ್ನವೂ ಇಲ್ಲದಂತಾಗುವುದಿಲ್ಲ.

೧೪೧. ಈ ಬಿಂದು ತೀರ್ಥದಲ್ಲಿ ಗೋವು, ಭೂಮಿ, ತಿಲ, ಸ್ವರ್ಣ, ಅಶ್ವ, ವಸ್ತ್ರ, ಅನ್ನ, ಪುಷ್ಪ, ಭೂಷಣಗಳೇ ಮುಂತಾದ ಯಾವ ಪದಾರ್ಥಗಳನ್ನು ದಾನ ಮಾಡಿದರೂ ಅಕ್ಷಯಫಲದಾಯಕವಾಗುವುದು.

೧೪೨. ಪುಣ್ಯಕ್ಷೇತ್ರವಾದ ಧರ್ಮನದದಲ್ಲಿ ವಿಧ್ಯುಕ್ತರೀತಿಯಿಂದ ಅಗ್ನಿಯನ್ನು ಆಧಾನಮಾಡಿ ಅದರಲ್ಲಿ ಒಂದೇ ಆಹುತಿಯನ್ನು ಕೊಟ್ಟರೂ ಸಹ ಒಂದು ಕೋಟಿ ಹೋಮಗಳನ್ನುಮಾಡಿದ ಫಲವು ಲಭಿಸುವುದು.

೧೪೩. ಧರ್ಮಾದಿ ಚತುರ್ವಿಧಪುರುಷಾರ್ಥಗಳೆಂಬ ಶುಭಫಲಗಳನ್ನು ಕೊಡುವ ಏಕಸಾಧನವಾದ ಪಂಚನದತೀರ್ಥದ ಅಪಾರವಾದ ಮಹಿಮೆಯನ್ನು ವರ್ಣಿಸಲು ಯಾವನೂ ಶಕ್ತನಲ್ಲ.

೧೪೪. ಈ ಆಖ್ಯಾನವನ್ನು ಕೇಳಿದರೂ, ಭಕ್ತಿಯುಕ್ತನಾಗಿ ಇತರರಿಗೆ ಶ್ರವಣಮಾಡಿಸಿದರೂ ಮಾನವನು ಸಕಲ ಪಾತಕಗಳಿಂದಲೂ ಪರಿಶುದ್ಧವಾದ ಅಂತಃಕರಣವುಳ್ಳವನಾಗಿ ವಿಷ್ಣುಲೋಕದಲ್ಲಿ ಉತ್ತಮಸ್ಥಾನವನ್ನುಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಪಂಚನದಾವಿರ್ಭಾವವರ್ಣನ"ವೆಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಟಿತಮೋಽಧ್ಯಾಯಃ

### ಬಿಂದುಮಾಧವಾವಿರ್ಭಾವವರ್ಣನಂ

ಸ್ಕಂದ ಉವಾಚ :—

ಉಕ್ತಾ ಪಂಚನದೋತ್ಪತ್ತಿರ್ಮಿತ್ರಾವರುಣನಂದನ ।
ಇದಾನೀಂ ಕಥಯಿಷ್ಯಾಮಿ ಮಾಧವಾವಿಷ್ಕೃತಿಂ ಪರಾಂ ॥ ೧ ॥
ಯಾಂ ಶ್ರುತ್ವಾ ಶ್ರದ್ಧಯಾ ಧೀಮಾನ್ಪಾಪೇಭ್ಯೋ ಮುಚ್ಯತೇ ಕ್ಷಣಾತ್ ।
ನ ಚ ಶ್ರಿಯಾ ವಿಯುಜ್ಯೇತ ಸಂಯುಜ್ಯೇತ ವೃಷೇಣ ಚ ॥ ೨ ॥
ಆಗತ್ಯ ಮಂದರಾದದ್ರೇರುಪೇಂದ್ರಶ್ಚಂದ್ರಶೇಖರಂ ।
ಆಪೃಚ್ಛ್ಯ ತಾರ್ಕ್ಷ್ಯರಥಗಃ ಕ್ಷಣಾದ್ವಾರಾಣಸೀಂ ಪುರೀಂ ॥ ೩ ॥
ದಿವೋದಾಸಂ ಮಹೀಪಾಲಂ ಸಮುಚ್ಚಾಟ್ಯ ಸ್ವಮಾಯಯಾ ।
ಸ್ಥಿತ್ವಾ ಪಾದೋದಕೇ ತೀರ್ಥೇ ಕೇಶವಾಖ್ಯಸ್ವರೂಪತಃ ॥ ೪ ॥
ಮಹಿಮಾನಂ ಪರಂ ಕಾಶ್ಯಾಂ ವಿಚಾರ್ಯ ಸುವಿಚಾರ್ಯ ಚ ।
ದೃಷ್ಟ್ವಾ ಪಂಚನದಂ ತೀರ್ಥಂ ಪರಾಂ ಮುದಮವಾಪ ಹ ॥ ೫ ॥

---

### ಕನ್ನಡದ ಅನುವಾದ

#### ಬಿಂದುಮಾಧವಾವಿರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ:—ಮಿತ್ರಾವರುಣರ ಪುತ್ರನಾದ ಅಗಸ್ತ್ಯನೆ! ಪಂಚನದತೀರ್ಥದ ಉತ್ಪತ್ತಿಯ ಪ್ರಕಾರವನ್ನು ನಿನಗೆ ಹೇಳಿರುವೆನು. ಇನ್ನು ಶ್ರೀಮನ್ನಾರಾಯಣನು ಆವಿರ್ಭವಿಸಿದ ವಿಷಯವನ್ನು ವಿವರಿಸುವೆನು.

೨. ಈ ಚರಿತ್ರೆಯನ್ನು ಕೇಳಲು ಬುದ್ಧಿವಂತನಾದ ಮಾನವನು ಒಂದು ಕ್ಷಣದಲ್ಲಿಯೇ ತನ್ನ ಪಾಪಗಳನ್ನು ಕಳೆದುಕೊಳ್ಳುವನು. ಎಂದಿಗೂ ಐಶ್ವರ್ಯ ಹೀನನಾಗುವುದಿಲ್ಲ. ಉತ್ತರೋತ್ತರವಾದ ಅಭಿವೃದ್ಧಿಯನ್ನೇ ಪಡೆಯುತ್ತಿರುವನು.

೩. ಹಿಂದೆ ಹೇಳಿದಂತೆ ಮಹಾವಿಷ್ಣುವು ಪರಮೇಶ್ವರನ ಅನುಜ್ಞೆಯನ್ನು ಶಿರಸಾವಹಿಸಿ ಮಂದರಪರ್ವತವನ್ನು ಬಿಟ್ಟು ಗರುಡನೆಂಬ ರಥವನ್ನೇರಿ ನಿಮಿಷ ಮಾತ್ರದಲ್ಲಿಯೇ ವಾರಾಣಸೀಕ್ಷೇತ್ರವನ್ನು ಸೇರಿದನು.

೪. ಅವನು ತನ್ನ ಮಾಯೆಯನ್ನು ಹೊಗಗೆಡಹಿ ದಿವೋದಾಸಮಹಾರಾಜನನ್ನು ಅಲ್ಲಿಂದ ಹೊರಡಿಸಿ ಪಾದೋದಕತೀರ್ಥದ ಸಮೀಪದಲ್ಲಿಯೇ ಆದಿಕೇಶವನಾಗಿ ಮೂರ್ತೀಭವಿಸಿ ನೆಲಸಿದನು.

೫. ಕಾಶೀಕ್ಷೇತ್ರದ ಅಸದೃಶವಾದ ಮಹಿಮೆಯನ್ನು ಪುನಃ ಪುನಃ ತನ್ನಲ್ಲಿಯೇ ವಿಚಾರಮಾಡಿಕೊಳ್ಳುತ್ತ ಆ ಹರಿಯು ಪಂಚನದತೀರ್ಥವನ್ನು ಕಂಡು ಅಪರಿಮಿತವಾದ ಸಂತೋಷವನ್ನು ಹೊಂದಿದನು.

ಉವಾಚ ಚ ಪ್ರಸನ್ನಾತ್ಮಾ ಪುಂಡರೀಕವಿಲೋಚನಃ ।
ಅಗಣ್ಯಾ ಅಪಿ ವೈಕುಂಠಗುಣಾ ವಿಗಣಿತಾ ಮಯಾ ॥ ೬ ॥
ಕ್ವ ಕ್ಷೀರನೀರಧೌ ಸಂತಿ ತಾವಂತೋ ನಿರ್ಮಲಾ ಗುಣಾಃ ।
ಯಾವಂತೋ ವಿಜಯಂತೇಽತ್ರ ಕಾಶ್ಯಾಂ ಪಂಚನದೇ ಹ್ರದೇ ॥ ೭ ॥
ಶ್ವೇತದ್ವೀಪೇಽಪಿ ಸಾಮಗ್ರೀ ಕ್ವ ಗುಣಾನಾಂ ಗರೀಯಸೀ ।
ಈದೃಶೀ ಯಾದೃಶೀ ಕಾಶ್ಯಾಂ ಧೂತಪಾಪೇಽಸ್ತಿ ಪಾವನೀ ॥ ೮ ॥
ಮುದೇ ಕೌಮೋದಕೀಸ್ಪರ್ಶಸ್ತಥಾ ನ ಮಮ ಜಾಯತೇ ।
ಧೂತಪಾಪಾಂಬುಸಂಪರ್ಕೋ ಯಥಾ ಭವತಿ ಸರ್ವಥಾ ॥ ೯ ॥
ನ ಕ್ಷೀರನೀರಧಿಜಯಾ ಸುಖಂ ಮೇ ಶ್ಲಿಷ್ಟಗಾತ್ರಯಾ ।
ತಥಾ ಭವೇದ್ಯಥಾತ್ರಸ್ಯಾತ್ಸಂಸ್ಪೃಷ್ಟಯಾ ಧೂತಪಾಪಯಾ ॥ ೧೦ ॥
ಇತ್ಥಂ ಪಂಚನದೇ ತೀರ್ಥೇ ಕ್ಷೀರನೀರಧಿಜಾಧವಃ ।
ಸಂಪ್ರೇಷ್ಯ ತಾರ್ಕ್ಷ್ಯಂ ತ್ರ್ಯಕ್ಷಾಗ್ರೇ ವೃತ್ತಾಂತಂ ವಿನಿವೇದಿತುಂ ॥ ೧೧ ॥

---

೬. ಕಮಲದಳಗಳಂತೆ ವಿಶಾಲನೇತ್ರಗಳುಳ್ಳ ಆ ಶ್ರೀಹರಿಯು ಪ್ರಸನ್ನವಾದ ಮನಸ್ಸುಳ್ಳವನಾಗಿ ಇಂತೆಂದು ಹೇಳಿದನು. "ವೈಕುಂಠದಲ್ಲಿರುವ ಸದ್ಗುಣಗಳು ಸಾಮಾನ್ಯರಿಗೆ ಗಣನಾತೀತಗಳೆನಿಸಿದ್ದರೂ ನಾನು ಅವುಗಳನ್ನು ಗಣನೆ ಮಾಡಿರುವೆನು.

೭. ಕಾಶೀಕ್ಷೇತ್ರದ ಈ ಪಂಚನದತೀರ್ಥದಲ್ಲಿ ಎಷ್ಟು ಪವಿತ್ರಗುಣಗಳು ವಿಜೃಂಭಿಸುತ್ತಿರುವುವೊ, ಅಷ್ಟು ಗುಣಗಳು ಕ್ಷೀರಸಮುದ್ರದಲ್ಲಿಯೂ ಎಲ್ಲಿರುವುವು?

೮. ಕಾಶಿಯಲ್ಲಿ ಧೂತಪಾಪತೀರ್ಥದಲ್ಲಿ ಯಾವ ಪ್ರಮಾಣದ ಪವಿತ್ರ ಗುಣಗಳ ರಾಶಿಯಿರುವುದೊ, ಅಷ್ಟು ಗುಣಗಳ ಅಪಾರವಾದ ಸಾಮಗ್ರಿಯು ಶ್ವೇತದ್ವೀಪದಲ್ಲಿ ಸಹ ಕಾಣಲಾರದು.

೯. ಈ ಧೂತಪಾಪತೀರ್ಥದ ನೀರಿನ ಸಂಪರ್ಕದಿಂದ ನನಗೆ ಎಷ್ಟು ಸಂತೋಷವುಂಟಾಗುವುದೊ, ಅಷ್ಟು ಆನಂದವು ಗದೆಯಾದ ಕೌಮೋದಕಿಯ ಸ್ಪರ್ಶದಿಂದಲೂ ಉಂಟಾಗುವುದಿಲ್ಲ.

೧೦. ಧೂತಪಾಪದ ನೀರನ್ನು ಸ್ಪರ್ಶಮಾಡುವುದರಿಂದ ನನಗೆ ಎಷ್ಟು ಸುಖವುಂಟಾಗುವುದೊ, ಕ್ಷೀರಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಯನ್ನು ಆಲಿಂಗಿಸುವುದರಿಂದಲೂ ಅಷ್ಟು ಉಂಟಾಗುವುದಿಲ್ಲ.

೧೧–೧೩. ಇಂತು ಮಹಾಲಕ್ಷ್ಮಿಯ ರಮಣನಾದ ಶ್ರೀಮನ್ನಾರಾಯಣನು ಪಂಚನದತೀರ್ಥದಲ್ಲಿ ನೆಲಸಿ, ಗರುಡನನ್ನು ಕರೆದು ಆನಂದವನದಲ್ಲಿ ದಿವೋದಾಸನ ವೃತ್ತಾಂತವೆಲ್ಲವನ್ನೂ ಮಹೇಶ್ವರನಲ್ಲಿ ಬಿನ್ನವಿಸುವಂತೆ ಹೇಳಿ

ಆಸಂಪಕಾಸನಭವಂ ದಿವೋದಾಸಕ್ಷಮಾಪತೇಃ ।
ಸಂವರ್ಣಯಸ್ಸುಗಣಗ್ರಾಮಂ ಪುಣ್ಯಂ ಪಂಚನದೋದ್ಭವಂ ॥ ೧೨ ॥
ಸುಖೋಪವಿಷ್ಟಃ ಸಂಹೃಷ್ಟಃ ಸುದೃಷ್ಟಿರ್ವಿಷ್ಟರಶ್ರವಾಃ ।
ದೃಷ್ಟವಾಂಸ್ತಪಸಾ ಜುಷ್ಟಮುಪುಷ್ಟಾಂಗಂ ತಪೋಧನಂ ॥ ೧೩ ॥
ಸ ಋಷಿಸ್ತಂ ಸಮಭ್ಯೇತ್ಯ ಪುಂಡರೀಕಾಕ್ಷಮಚ್ಯುತಂ ।
ಉಪೋಪವಿಷ್ಟಕಮಲಂ ವನಮಾಲಾವಿರಾಜಿತಂ ॥ ೧೪ ॥
ಶಂಖಪದ್ಮಗದಾಚಕ್ರಚಂಚತ್ಕರಚತುಷ್ಟಯಂ ।
ಕೌಸ್ತುಭೋದ್ಭಾಸಿತೋರಸ್ಕಂ ಪೀತಕೌಶೇಯವಾಸಸಂ ॥ ೧೫ ॥
ಸುನೀಲೇಂದೀವರರುಚಿಂ ಸುಸ್ನಿಗ್ಧಮಧುರಾಕೃತಿಂ ।
ನಾಭೀಹ್ರದಲಸತ್ಪದ್ಮಂ ಸುಪಾಟಲರದಚ್ಛದಂ ॥ ೧೬ ॥
ದಾಡಿಮೀಬೀಜದಶನಂ ಕಿರೀಟದ್ಯೋತಿತಾಂಬರಂ ।
ದೇವೇಂದ್ರವಂದಿತಪದಂ ಸನಕಾದಿಪರಿಷ್ಟುತಂ ॥ ೧೭ ॥

---

ಕಳುಹಿಸಿ, ಪಂಚನದ ತೀರ್ಥದ ಪಾವನವಾದ ಸದ್ಗುಣಗಳನ್ನೇ ವರ್ಣಿಸುತ್ತ ದೀರ್ಘದರ್ಶಿಯಾದುದರಿಂದ ಸಂತೋಷಗೊಂಡು ಅಲ್ಲಿಯೇ ಸುಖವಾಗಿ ಬಿಡಾರವನ್ನು ಮಾಡಿಕೊಂಡಿದ್ದನು. ಒಮ್ಮೆ ಕೇವಲ ತಪಸ್ಸಂಪನ್ನನೂ ಕೃಶವಾದ ಶರೀರವುಳ್ಳವನೂ ಆದ ತಾಪಸೋತ್ತಮನೊಬ್ಬನನ್ನು ಕಂಡನು.

೧೪. ಆ ಮಹರ್ಷಿಯು ಸಮೀಪಕ್ಕೆ ಬಂದು ತಾವರೆಯೆಲೆಯಂತೆ ವಿಶಾಲಗಳಾದ ನೇತ್ರಗಳುಳ್ಳ ಅಚ್ಯುತನನ್ನು ಕಂಡನು. ಶ್ರೀಹರಿಯು ಉಚಿತವಾದ ಪದ್ಮಾಸನವನ್ನು ಹಾಕಿಕೊಂಡು ತುಳಸೀದಳಗಳ ವನಮಾಲೆಯಿಂದ ಶೋಭಿಸುತ್ತಿದ್ದನು.

೧೫. ತನ್ನ ನಾಲ್ಕು ಭುಜಗಳಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದನು. ಕೌಸ್ತುಭಮಣಿಯಿಂದ ವಕ್ಷಸ್ಥಳವು ಪ್ರಕಾಶಿಸುತ್ತಿರಲು ರೇಷ್ಮೆಯ ಪೀತಾಂಬರವನ್ನುಟ್ಟು ಕಂಗೊಳಿಸುತ್ತಿದ್ದನು.

೧೬. ನೀಲವರ್ಣದಿಂದ ಕೂಡಿದ ಕನ್ನೈದಿಲೆಯನ್ನು ಹೋಲುವ ದೇಹವುಳ್ಳವನಾಗಿ ಪುಷ್ಟವೂ ಸುಂದರವೂ ಆದ ಅವಯವಗಳನ್ನು ಹೊಂದಿ, ನಾಭಿಯೆಂಬ ಸರೋವರದಲ್ಲಿ ಪದ್ಮವು ಉದ್ಭವಿಸಿರಲು ಉತ್ತಮವಾದ ಪಾಟಲಪುಷ್ಪಗಳಂತಿರುವ ತುಟಿಗಳುಳ್ಳವನಾಗಿದ್ದನು.

೧೭. ದಾಳಿಂಬೆಯ ಬೀಜಗಳಂತೆ ನಯವಾದ ಹಲ್ಲುಗಳ ಸಾಲುಗಳಿಂದಲೂ, ಆಕಾಶವನ್ನೇ ಬೆಳಗುತ್ತಿರುವ ರತ್ನಖಚಿತವಾದ ಕಿರೀಟದಿಂದಲೂ, ದೇವೇಂದ್ರನಿಂದ ನಮಸ್ಕೃತಗಳಾದ ಪಾದಗಳಿಂದಲೂ ಮೆರೆಯುತ್ತಿದ್ದ ಆತನನ್ನು ಸನಕಾದಿ ಮಹಾಮುನಿಗಳು ಸ್ತುತಿಸುತ್ತಿದ್ದರು.

ಉವಾಚ ಚ ಪ್ರಸನ್ನಾತ್ಮಾ ಪುಂಡರೀಕವಿಲೋಚನಃ ।
ಅಗಣ್ಯಾ ಅಪಿ ವೈಕುಂಠಗುಣಾ ವಿಗಣಿತಾ ಮಯಾ ॥ ೬ ॥
ಕ್ವ ಕ್ಷೀರನೀರಧೌ ಸಂತಿ ತಾವಂತೋ ನಿರ್ಮಲಾ ಗುಣಾಃ ।
ಯಾವಂತೋ ವಿಜಯಂತೇಽತ್ರ ಕಾಶ್ಯಾಂ ಪಂಚನದೇ ಹ್ರದೇ ॥ ೭ ॥
ಶ್ವೇತದ್ವೀಪೇಽಪಿ ಸಾಮಗ್ರೀ ಕ್ವ ಗುಣಾನಾಂ ಗರೀಯಸೀ ।
ಈದೃಶೀ ಯಾದೃಶೀ ಕಾಶ್ಯಾಂ ಧೂತಪಾಪೇಽಸ್ತಿ ಪಾವನೀ ॥ ೮ ॥
ಮುದೇ ಕೌಮೋದಕೀಸ್ಪರ್ಶಸ್ತಥಾ ನ ಮಮ ಜಾಯತೇ ।
ಧೂತಪಾಪಾಂಬುಸಂಪರ್ಕೋ ಯಥಾ ಭವತಿ ಸರ್ವಥಾ ॥ ೯ ॥
ನ ಕ್ಷೀರನೀರಧಿಜಯಾ ಸುಖಂ ಮೇ ಶ್ಲಿಷ್ಟಗಾತ್ರಯಾ ।
ತಥಾ ಭವೇದ್ಯಥಾತ್ರಸ್ಯಾತ್ಸ್ಪೃಷ್ಟಯಾ ಧೂತಪಾಪಯಾ ॥ ೧೦ ॥
ಇತ್ಥಂ ಪಂಚನದೇ ತೀರ್ಥೇ ಕ್ಷೀರನೀರಧಿಜಾಧವಃ ।
ಸಂಪ್ರೇಷ್ಯ ತಾರ್ಕ್ಷ್ಯಂ ತ್ರ್ಯಕ್ಷಾಗ್ರೇ ವೃತ್ತಾಂತಂ ವಿನಿವೇದಿತುಂ ॥ ೧೧ ॥

---

೬. ಕಮಲದಳಗಳಂತೆ ವಿಶಾಲನೇತ್ರಗಳುಳ್ಳ ಆ ಶ್ರೀಹರಿಯು ಪ್ರಸನ್ನವಾದ ಮನಸ್ಸುಳ್ಳವನಾಗಿ ಇಂತೆಂದು ಹೇಳಿದನು. "ವೈಕುಂಠದಲ್ಲಿರುವ ಸದ್ಗುಣಗಳು ಸಾಮಾನ್ಯರಿಗೆ ಗಣನಾತೀತಗಳೆನಿಸಿದ್ದರೂ ನಾನು ಅವುಗಳನ್ನು ಗಣನೆ ಮಾಡಿರುವೆನು.

೭. ಕಾಶೀಕ್ಷೇತ್ರದ ಈ ಪಂಚನದತೀರ್ಥದಲ್ಲಿ ಎಷ್ಟು ಪವಿತ್ರಗುಣಗಳು ವಿಜೃಂಭಿಸುತ್ತಿರುವುವೊ, ಅಷ್ಟು ಗುಣಗಳು ಕ್ಷೀರಸಮುದ್ರದಲ್ಲಿಯೂ ಎಲ್ಲಿರುವುವು?

೮. ಕಾಶಿಯಲ್ಲಿ ಧೂತಪಾಪತೀರ್ಥದಲ್ಲಿ ಯಾವ ಪ್ರಮಾಣದ ಪವಿತ್ರ ಗುಣಗಳ ರಾಶಿಯಿರುವುದೊ, ಅಷ್ಟು ಗುಣಗಳ ಅಪಾರವಾದ ಸಾಮಗ್ರಿಯು ಶ್ವೇತದ್ವೀಪದಲ್ಲಿ ಸಹ ಕಾಣಲಾರದು.

೯. ಈ ಧೂತಪಾಪತೀರ್ಥದ ನೀರಿನ ಸಂಪರ್ಕದಿಂದ ನನಗೆ ಎಷ್ಟು ಸಂತೋಷವುಂಟಾಗುವುದೊ, ಅಷ್ಟು ಆನಂದವು ಗದೆಯಾದ ಕೌಮೋದಕಿಯ ಸ್ಪರ್ಶದಿಂದಲೂ ಉಂಟಾಗುವುದಿಲ್ಲ.

೧೦. ಧೂತಪಾಪದ ನೀರನ್ನು ಸ್ಪರ್ಶಮಾಡುವುದರಿಂದ ನನಗೆ ಎಷ್ಟು ಸುಖವುಂಟಾಗುವುದೊ, ಕ್ಷೀರಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಯನ್ನು ಆಲಿಂಗಿಸುವುದರಿಂದಲೂ ಅಷ್ಟು ಉಂಟಾಗುವುದಿಲ್ಲ.

೧೧–೧೩. ಇಂತು ಮಹಾಲಕ್ಷ್ಮಿಯ ರಮಣನಾದ ಶ್ರೀಮನ್ನಾರಾಯಣನು ಪಂಚನದತೀರ್ಥದಲ್ಲಿ ನೆಲಸಿ, ಗರುಡನನ್ನು ಕರೆದು ಆನಂದವನದಲ್ಲಿ ದಿವೋದಾಸನ ವೃತ್ತಾಂತವೆಲ್ಲವನ್ನೂ ಮಹೇಶ್ವರನಲ್ಲಿ ಬಿನ್ನವಿಸುವಂತೆ ಹೇಳಿ

ಆನಂದಕಾನನಭವಂ ದಿವೋದಾಸಕ್ಷಮಾಪತೇಃ ।
ಸಂವರ್ಣಯನ್ಸ್ವಗುಣಗ್ರಾಮಂ ಪುಣ್ಯಂ ಪಂಚನದೋದ್ಭವಂ ॥ ೧೨ ॥
ಸುಖೋಪವಿಷ್ಟಃ ಸಂಹೃಷ್ಟಃ ಸುದೃಷ್ಟಿರ್ವಿಷ್ಟರಶ್ರವಾಃ ।
ದೃಷ್ಟವಾಂಸ್ತಪಸಾ ಜುಷ್ಟಮುಪುಷ್ಟಾಂಗಂ ತಪೋಧನಂ ॥ ೧೩ ॥
ಸ ಋಷಿಸ್ತಂ ಸಮಭ್ಯೇತ್ಯ ಪುಂಡರೀಕಾಕ್ಷಮಚ್ಯುತಂ ।
ಉಪೋಪವಿಷ್ಟಕಮಲಂ ವನಮಾಲಾವಿರಾಜಿತಂ ॥ ೧೪ ॥
ಶಂಖಪದ್ಮಗದಾಚಕ್ರಚಂಚತ್ಕರಚತುಷ್ಟಯಂ ।
ಕೌಸ್ತುಭೋದ್ಭಾಸಿತೋರಸ್ಕಂ ಪೀತಕೌಶೇಯವಾಸಸಂ ॥ ೧೫ ॥
ಸುನೀಲೇಂದೀವರರುಚಿಂ ಸುಸ್ನಿಗ್ಧಮಧುರಾಕೃತಿಂ ।
ನಾಭೀಹ್ರದಲಸತ್ಪದ್ಮಂ ಸುಪಾಟಲರದಚ್ಛದಂ ॥ ೧೬ ॥
ದಾಡಿಮೀಬೀಜದಶನಂ ಕಿರೀಟದ್ಯೋತಿತಾಂಬರಂ ।
ದೇವೇಂದ್ರವಂದಿತಪದಂ ಸನಕಾದಿಪರಿಷ್ಟುತಂ ॥ ೧೭ ॥

---

ಕಳುಹಿಸಿ, ಪಂಚನದ ತೀರ್ಥದ ಪಾವನವಾದ ಸದ್ಗುಣಗಳನ್ನೇ ವರ್ಣಿಸುತ್ತ ದೀರ್ಘದರ್ಶಿಯಾದುದರಿಂದ ಸಂತೋಷಗೊಂಡು ಅಲ್ಲಿಯೇ ಸುಖವಾಗಿ ಬಿಡಾರ ವನ್ನು ಮಾಡಿಕೊಂಡಿದ್ದನು. ಒಮ್ಮೆ ಕೇವಲ ತಪಸ್ಸಂಪನ್ನನೂ ಕೃಶವಾದ ಶರೀರವುಳ್ಳವನೂ ಆದ ತಾಪಸೋತ್ತಮನೊಬ್ಬನನ್ನು ಕಂಡನು.

೧೪. ಆ ಮಹರ್ಷಿಯು ಸಮೀಪಕ್ಕೆ ಬಂದು ತಾವರೆಯೆಲೆಯಂತೆ ವಿಶಾಲ ಗಳಾದ ನೇತ್ರಗಳುಳ್ಳ ಅಚ್ಯುತನನ್ನು ಕಂಡನು. ಶ್ರೀಹರಿಯು ಉಚಿತವಾದ ಪದ್ಮಾಸನವನ್ನು ಹಾಕಿಕೊಂಡು ತುಳಸೀದಳಗಳ ವನಮಾಲೆಯಿಂದ ಶೋಭಿಸು ತ್ತಿದ್ದನು.

೧೫. ತನ್ನ ನಾಲ್ಕು ಭುಜಗಳಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದನು. ಕೌಸ್ತುಭಮಣಿಯಿಂದ ವಕ್ಷಸ್ಥಳವು ಪ್ರಕಾಶಿಸುತ್ತಿರಲು ರೇಷ್ಮೆಯ ಪೀತಾಂಬರವನ್ನುಟ್ಟು ಕಂಗೊಳಿಸುತ್ತಿದ್ದನು.

೧೬. ನೀಲವರ್ಣದಿಂದ ಕೂಡಿದ ಕನ್ನೈದಿಲೆಯನ್ನು ಹೋಲುವ ದೇಹವುಳ್ಳ ವನಾಗಿ ಪುಷ್ಟವೂ ಸುಂದರವೂ ಆದ ಅವಯವಗಳನ್ನು ಹೊಂದಿ, ನಾಭಿಯೆಂಬ ಸರೋವರದಲ್ಲಿ ಪದ್ಮವು ಉದ್ಭವಿಸಿರಲು ಉತ್ತಮವಾದ ಪಾಟಲಪುಷ್ಪಗಳಂತಿರುವ ತುಟಿಗಳುಳ್ಳವನಾಗಿದ್ದನು.

೧೭. ದಾಳಿಂಬೆಯ ಬೀಜಗಳಂತೆ ನಯವಾದ ಹಲ್ಲುಗಳ ಸಾಲುಗಳಿಂದಲೂ, ಆಕಾಶವನ್ನೇ ಬೆಳಗುತ್ತಿರುವ ರತ್ನಖಚಿತವಾದ ಕಿರೀಟದಿಂದಲೂ, ದೇವೇಂದ್ರ ನಿಂದ ನಮಸ್ಕೃತಗಳಾದ ಪಾದಗಳಿಂದಲೂ ಮೆರೆಯುತ್ತಿದ್ದ ಆತನನ್ನು ಸನಕಾದಿ ಮಹಾಮುನಿಗಳು ಸ್ತುತಿಸುತ್ತಿದ್ದರು.

ದಿವ್ಯರ್ಷಿಭಿರ್ನಾರದಾದ್ಯೈಃ ಪರಿಗೀತಮಹೋದಯಂ ।
ಪ್ರಹ್ಲಾದಾದ್ಯೈರ್ಭಾಗವತೈಃ ಪರಿನಂದಿತಮಾನಸಂ ॥ ೧೮ ॥
ಧೃತಶಾರ್ಙ್ಗಧನುರ್ದಂಡಂ ದಂಡಿತಾಖಿಲದಾನವಂ ।
ಮಧುಕೈಟಭಹಂತಾರಂ ಕಂಸವಿಧ್ವಂಸಸೂಚಕಂ ॥ ೧೯ ॥
ಕೈವಲ್ಯಂ ಯತ್ಪರಂ ಬ್ರಹ್ಮ ನಿರಾಕಾರಮಗೋಚರಂ ।
ತಂ ಪುಂಮೂರ್ತ್ಯಾ ಪರಿಣತಂ ಭಕ್ತಾನಾಂ ಭಕ್ತಿಹೇತುತಃ ॥ ೨೦ ॥
ವೇದಾ ವಿದುರ್ಯದಾಕಾರಂ ನೈವೋಪನಿಷದೋದಿತಂ ।
ಬ್ರಹ್ಮಾದ್ಯಾ ನ ಚ ಗೀರ್ವಾಣಾಶ್ಚಕ್ರೇ ನೇತ್ರಾತಿಥಿಂ ಸ ತಂ ॥ ೨೧ ॥
ಪ್ರಣನಾಮ ಮುದಾಯುಕ್ತಃ ಕ್ಷಿತಿವಿನ್ಯಸ್ತಮಸ್ತಕಃ ।
ಸ ಋಷಿಸ್ತಂ ಹೃಷೀಕೇಶಮಗ್ನಿಬಿಂದುರ್ಮಹಾತಪಾಃ ॥ ೨೨ ॥

---

೧೮. ನಾರದನೇ ಮೊದಲಾದ ದೇವರ್ಷಿಗಳು ಆತನ ಅಸಂಖ್ಯಗಳಾದ ಲೀಲೆಗಳನ್ನು ಗಾನಮಾಡುತಿದ್ದರು. ಪ್ರಹ್ಲಾದನೇ ಮುಂತಾದ ಭಗವದ್ಭಕ್ತರು ಇದಿರಿನಲ್ಲಿ ನಿಂತು ಆತನ ಮನಸ್ಸನ್ನು ಸಂತೋಷಗೊಳಿಸುತ್ತಿದ್ದರು.

೧೯. ಶಾರ್ಙ್ಗವೆಂಬ ಉತ್ತಮಧನುಸ್ಸಿನ ದಂಡವನ್ನು ಕೈಯಲ್ಲಿ ಹಿಡಿದಿದ್ದನು. ಸಮಸ್ತ ರಾಕ್ಷಸರನ್ನೂ ದಂಡಿಸುವ ಪರಾಕ್ರಮಿಯು. ಮಧುಕೈಟಭರನ್ನು ಸಂಹರಿಸಿ ಕಂಸನನ್ನು ಧ್ವಂಸಮಾಡುವುದನ್ನು ಸೂಚಿಸುವಂತಿದ್ದನು.

೨೦. ಪರಾತ್ಪರವಾದ ಯಾವ ಬ್ರಹ್ಮವಸ್ತುವು ರೂಪರಹಿತವೂ ಅವಾಙ್ಮನಸಗೋಚರವೂ ಆಗಿ ಕೇವಲ ಸತ್ಪದಾರ್ಥವಾಗಿರುವುದೊ, ಅದೇ ಭಕ್ತರ ಭಕ್ತಿಯೆಂಬ ಕಾರಣದಿಂದ ಮೂರ್ತಿಗೊಂಡಂತೆ ಶ್ರೀ ಹರಿಯು ತೋರುತ್ತಿದ್ದನು.*

೨೧. ಕೇವಲ ಉಪನಿಷದ್ವಾಕ್ಯಗಳಿಂದಲೇ ಪ್ರತಿಪಾದ್ಯನಾದ ಯಾವನ ರೂಪವನ್ನು ಕರ್ಮಕಾಂಡಾತ್ಮಕಗಳಾದ ವೇದಗಳೂ ಅರಿಯಲಾರವೊ,† ಬ್ರಹ್ಮಾದಿ ದೇವತೆಗಳೂ ಯಾವನನ್ನು ಸಂಪೂರ್ಣವಾಗಿ ತಿಳಿಯಲಾರರೊ, ಅಂತಹ ಪರಮಾತ್ಮನನ್ನು ಆ ಮಹಾಮುನಿಯು ತನ್ನ ನೇತ್ರಗಳಿಗೆ ವಿಷಯವನ್ನಾಗಿ ಮಾಡಿಕೊಂಡನು.

೨೨. ಮಹಾತಪಸ್ಸಂಪನ್ನನಾದ ಅಗ್ನಿಬಿಂದುನಾಮಕನಾದ ಆ ಮಹರ್ಷಿಯು ಇಂದ್ರಿಯ ನಿಯಾಮಕನಾದ ಶ್ರೀಮನ್ನಾರಾಯಣನನ್ನು ಕಂಡು ಸಂತೋಷಗೊಂಡವನಾಗಿ ತಲೆಯನ್ನು ಈಡಾಡಿ ಸಾಷ್ಟಾಂಗನಮಸ್ಕಾರವನ್ನು ಮಾಡಿದನು.

---

* ಜಲವೆಂಬುದು ನಿಯತಾಕಾರವುಳ್ಳ ವಸ್ತುವಲ್ಲದಿದ್ದರೂ ಅಧಿಕಶೈತ್ಯದಿಂದ ಆಕಾರಸಹಿತವಾದ ಮಂಜಿನಗಡ್ಡೆಯಾಗಿ ಹೇಗೆ ಪರಿಣಮಿಸುವುದೋ, ಹಾಗೆಯೇ ನೀರೂಪವೂ ನಿರಂಜನವೂ ಆದ ಬ್ರಹ್ಮವಸ್ತುವು ಉಪಾಸಕನ ಮನೋವೃತ್ತಿಯನ್ನನುಸರಿಸಿ ರೂಪುಗೊಂಡಂತೆ ತೋರುತ್ತಿರುವುದು.

† "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಎಂಬ ವಾಕ್ಯದಂತೆ ಆತ್ಮೈಕ್ಯಬೋಧಕಗಳಾದ ಉಪನಿಷದ್ವಾಕ್ಯಗಳಿಂದಲೇ ಬ್ರಹ್ಮಜ್ಞಾನವಾಗುವುದಲ್ಲದೆ ಪ್ರತ್ಯಕ್ಷಭೇದವನ್ನನುಸರಿಸಿ ಸ್ವರ್ಗಾದಿಪ್ರಾಪ್ತಿಗಳನ್ನು ದೊರಕಿಸುವ ಕರ್ಮಕಾಂಡವಾಕ್ಯಗಳಿಂದಾಗಲಾರದೆಂದು ತಿಳಿಯಬೇಕು.

ತುಷ್ಟಾವ ಪರಯಾ ಭಕ್ತ್ಯಾ ಮೌಲಿಬದ್ಧಕರಾಂಜಲಿಃ ।
ಅಧ್ಯಸ್ತವಿಸ್ತೀರ್ಣಶಿಲಂ ಬಲಿಧ್ವಂಸಿನಮಚ್ಯುತಂ ॥ ೨೩ ॥
ತತ್ರ ಪಂಚನದಾಭ್ಯಾಶೇ ಮಾರ್ಕಂಡೇಯಾದಿಸೇವಿತೇ ।
ಗೋವಿಂದಮಗ್ನಿಬಿಂದುಃ ಸ ಸ್ತುತವಾಂಸ್ತುಷ್ಟಮಾನಸಃ ॥ ೨೪ ॥

ಅಗ್ನಿಬಿಂದುರುವಾಚ :—

ಓಂ ನಮಃ ಪುಂಡರೀಕಾಕ್ಷ ಬಾಹ್ಯಾಂತಃ ಶೌಚದಾಯಿನೇ ।
ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ॥ ೨೫ ॥
ನಮಾಮಿ ತೇ ಪದದ್ವಂದ್ವಂ ಸರ್ವದ್ವಂದ್ವನಿವಾರಕಂ ।
ನಿರ್ದ್ವಂದ್ವಯಾ ಧಿಯಾ ವಿಷ್ಣೋ ಜಿಷ್ಣ್ವಾದಿಸುರವಂದಿತ ॥ ೨೬ ॥
ಯಂ ಸ್ತೋತುಂ ನಾಧಿಗಚ್ಛಂತಿ ವಾಚೋ ವಾಚಸ್ಪತೇರಪಿ ।
ತಮಿಾಷ್ಟೇ ಕ ಇಹ ಸ್ತೋತುಂ ಭಕ್ತಿರತ್ರ ಬಲೀಯಸೀ ॥ ೨೭ ॥

---

೨೩. ಇಂತು ವಿಶಾಲವಾದ ಶಿಲೆಯಲ್ಲಿ ಪ್ರತಿಷ್ಠಿತನಾಗಿ ಬಲಿಯನ್ನು ತುಳಿದ ಅಚ್ಯುತನನ್ನು ಕಂಡು ತಲೆಯಲ್ಲಿ ಕೈಗಳನ್ನು ಜೋಡಿಸಿಕೊಡು ಅನ್ಯಾದೃಶವಾದ ಭಕ್ತಿಯಿಂದ ಕೂಡಿ ಸ್ತೋತ್ರಮಾಡತೊಡಗಿದನು.

೨೪. ಮಾರ್ಕಂಡೇಯನೇ ಮುಂತಾದ ಮಹರ್ಷಿಗಳಿಂದ ಸೇವಿತವಾದ ಪಂಚನದತೀರ್ಥದ ಸಮಿಾಪದಲ್ಲಿ ಸಂತುಷ್ಟಾಂತರಂಗನಾದ ಅಗ್ನಿಬಿಂದು ಮಹಾ ಮುನಿಯು ಗೋವಿಂದನನ್ನು ಸ್ತುತಿಸಲು ಉಪಕ್ರಮಿಸಿದನು.

೨೫. ಅಗ್ನಿಬಿಂದುವು ಹೇಳುತ್ತಾನೆ:—ಕಮಲನೇತ್ರನೂ ನಾಮಸ್ಮರಣೆಯ ಮಾತ್ರದಿಂದಲೇ ದೇಹದ ಒಳಗೂ ಹೊರಗೂ ಶೌಚವನ್ನುಂಟುಮಾಡುವವನೂ* ಆದ ನಿನಗೆ ನಮಸ್ಕಾರವು. ನೀನೇ ಅನಂತಗಳಾದ ತಲೆಗಳಿಂದಲೂ, ನೇತ್ರ ಗಳಿಂದಲೂ, ಪಾದಗಳಿಂದಲೂ ಶೋಭಿಸುತ್ತಿರುವ ವಿಶ್ವರೂಪವನ್ನು ತಳೆದ ಅನಾದಿಪುರುಷನಾಗಿರುವೆ.

೨೬. ಸರ್ವವ್ಯಾಪಿಯೆ! ಮಹೇಂದ್ರಾದಿ ದೇವತೆಗಳಿಂದ ನಮಸ್ಕೃತನೆ! ಸುಖ–ದುಃಖ, ರಾಗ–ದ್ವೇಷಗಳೇ ಮೊದಲಾದ ದ್ವಂದ್ವಗಳಿಂದ ಕೂಡಿದ ಸಂಸಾರವನ್ನು ನಾಶಗೊಳಿಸುವ ನಿನ್ನ ಪಾದಯುಗಳವನ್ನು ಅನನ್ಯವಾದ ಬುದ್ಧಿ ಯಿಂದ ನಮಸ್ಕರಿಸುವೆನು.

೨೭. ಯಾವನನ್ನು ಸ್ತೋತ್ರಮಾಡಲು ಬೃಹಸ್ಪತಿಯ ವಾಗ್ವೈಖರಿಯೂ ಸಾಲದಾಗಿದೆಯೊ, ಅಂತಹ ನಿನ್ನನ್ನು ಸ್ತುತಿಸಲು ನಾನು ಎಷ್ಟುಮಾತ್ರದವನು? ಈ ನನ್ನ ಸ್ತೋತ್ರಮಾಡುವ ಉದ್ಯಮಕ್ಕೆ ಭಕ್ತಿಯೇ ಬಲವಾದ ಕಾರಣವಾಗಿ ರುವುದು.

---

* ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥ ಸ್ಮೃತಿ.

ಅಪಿ ಯೋ ಭಗವಾನೀಶೋ ಮನಃಪ್ರಾಚಾಮಗೋಚರಃ ।
ಸ ಮಾದೃಶೈರಲ್ಪಧೀಭಿಃ ಕಥಂ ಸ್ತುತ್ಯೋ ವಚಃ ಪರಃ ॥ ೨೮ ॥
ಯಂ ವಾಚೋ ನ ವಿಶಂತೀಶಂ ಮನಸೀಹ ಮನೋ ನ ಯಂ ।
ಮನೋಗಿರಾಮತೀತಂ ತಂ ಕಃ ಸ್ತೋತುಂ ಶಕ್ತಿಮಾಪ್ನುಯಾತ್ ॥ ೨೯ ॥
ಯಸ್ಯ ನಿಃಶ್ವಸಿತಂ ವೇದಾಃ ಸಷಡಂಗಪದಕ್ರಮಾಃ ।
ತಸ್ಯ ದೇವಸ್ಯ ಮಹಿಮಾ ಮಹಾನ್ಕೈರವಗಮ್ಯತೇ ॥ ೩೦ ॥
ಅತಂದ್ರಿತಮನೋಬುದ್ಧೀಂದ್ರಿಯಾ ಯಂ ಸನಕಾದಯಃ ।
ಧ್ಯಾಯಂತೋಽಪಿ ಹೃದಾಕಾಶೇ ನ ವಿಂದಂತಿ ಯಥಾರ್ಥತಃ ॥ ೩೧ ॥
ನಾರದಾದ್ಯೈರ್ಮುನಿವರ್ಯೈರಾಬಾಲಬ್ರಹ್ಮಚಾರಿಭಿಃ ।
ಗೀಯಮಾನಚರಿತ್ರೋಽಪಿ ನ ಸಂಯಗ್ಯೋಽಧಿಗಮ್ಯತೇ ॥ ೩೨ ॥
ತಂ ಸೂಕ್ಷ್ಮರೂಪಮಜಮವ್ಯಯಮೇಕಮಾದ್ಯಂ
ಬ್ರಹ್ಮಾದ್ಯಗೋಚರಮಜೇಯಮನಂತಶಕ್ತಿಂ ।

---

೨೮. ಯಾವನು ಷಡ್ಗುಣೈಶ್ವರ್ಯಭರಿತನೂ, ಸರ್ವನಿಯಾಮಕನೂ ಆಗಿರುವನೊ, ಪುರಾತನರಾದ ಬ್ರಹ್ಮಾದಿಗಳ ಮನಸ್ಸಿಗೂ ಸಿಕ್ಕಲಾರದವನಾಗಿ ಅನಿರ್ವಾಚ್ಯಸ್ವರೂಪನಾಗಿರುವನೊ, ಅಂತಹ ದೇವದೇವನು ಮಂದಪ್ರಜ್ಞರಾದ ನನ್ನಂತಹ ಪಾಮರಮಾನವರಿಂದ ಹೇಗೆ ಸ್ತುತ್ಯನಾಗುವನು?

೨೯. ಯಾವನನ್ನು ಮಾತುಗಳೂ ಸಮೀಪಸಲಾರವೊ, ಮನಸ್ಸೂ ಸಹ ತಿಳಿಯಲು ಅಶಕ್ತವಾಗಿರುವುದೊ, ಅಂತಹ ವಾಙ್ಮನಸ್ಸುಗಳಿಗೆ ಅತೀತನಾದ ಪರಮಾತ್ಮನನ್ನು ಸ್ತೋತ್ರಮಾಡಲು ಹೇಗೆ ತಾನೆ ಯಾವ ಮನುಷ್ಯನಾದರೂ ಶಕ್ತನಾಗಬಲ್ಲನು?

೩೦. ಶಿಕ್ಷಾದಿ ಷಡಂಗಗಳಿಂದಲೂ, ಪದಕ್ರಮಾದಿ ಪಾಠಗಳಿಂದಲೂ ಕೂಡಿದ ವೇದಗಳೇ ಯಾವನಿಂದ ನಿಃಶ್ವಾಸರೂಪವಾಗಿ ಅನಾಯಾಸದಿಂದಲೇ ಹೊರಟಿರುವುವೊ, ಅಂತಹ ದೇವೋತ್ತಮನ ಅಪಾರವಾದ ಮಹಿಮೆಯನ್ನು ವರ್ಣಿಸಲು ಯಾರಿಗೆ ಸಾಧ್ಯ?

೩೧–೩೨. ಅಕುಂಠಿತಗಳಾದ ಮನಸ್ಸು, ಬುದ್ಧಿ, ಇಂದ್ರಿಯಶಕ್ತಿಗಳುಳ್ಳ ಸನಕಾದಿ ಮುನಿಗಳೇ ಯಾವನನ್ನು ನಿರಂತರವೂ ಹೃದಯಾಕಾಶದಲ್ಲಿ ಧ್ಯಾನಿಸುತ್ತಿದ್ದರೂ ಯಥಾರ್ಥಸ್ವರೂಪವನ್ನು ತಿಳಿಯಲಾರರೊ, ಆ ಪರಮಾತ್ಮನು ಆಜನ್ಮ ಬ್ರಹ್ಮಚಾರಿಗಳಾದ ನಾರದನೇ ಮುಂತಾದ ಮುನಿಶ್ರೇಷ್ಠರಿಂದ ಗಾನಮಾಡಲ್ಪಡುತ್ತಿರುವ ಮಹಾಮಹಿಮೆಯುಳ್ಳವನಾದರೂ, ಅವರೂ ಸಹ ಆತನ ಸ್ವರೂಪವನ್ನು ನಿಶ್ಚಿತವಾಗಿ ತಿಳಿದವರಲ್ಲ.

೩೩. ಅಂತಹ ಸೂಕ್ಷ್ಮರೂಪನೂ, ಜನನರಹಿತನೂ, ನಾಶವಿಲ್ಲದವನೂ,

ನಿತ್ಯಂ ನಿರಾಮಯಮಮೂರ್ತಮಚಿಂತ್ಯಮೂರ್ತಿಂ
ಕಸ್ತ್ವಾಂ ಚರಾಚರ ಚರಾಚರಭಿನ್ನವೇತ್ತಿ ॥ ೩೩ ॥
ಏಕೈಕಮೇವ ತವ ನಾಮ ಹರೇಸ್ಮರಾರೇ
ಜನ್ಮಾರ್ಜಿತಾಘಮಘಿನಾಂ ಚ ಮಹಾಪದಾಢ್ಯಂ ।
ಪಪ್ಯಾತ್ಫಲಂ ಚ ಮಹಿತಂ ಮಹತೋ ಮಖಸ್ಯ
ಜಪ್ತಂ ಮುಕುಂದ ಮಧುಸೂದನ ಮಾಧವೇತಿ ॥ ೩೪ ॥
ನಾರಾಯಣೇತಿ ನರಕಾರ್ಣವತಾರಣೇತಿ
ದಾಮೋದರೇತಿ ಮಧುಹೇತಿ ಚತುರ್ಭುಜೇತಿ ।
ವಿಶ್ವಂಭರೇತಿ ವಿರಜೇತಿ ಜನಾರ್ದನೇತಿ
ಕ್ವಾಸ್ತೀಹ ಜನ್ಮ ಜಪತಾಂ ಕ್ವ ಕೃತಾಂತಭೀತಿಃ ॥ ೩೫ ॥
ಯೇ ತ್ವಾಂ ತ್ರಿವಿಕ್ರಮ ಸದಾ ಹೃದಿ ಶೀಲಯಂತಿ
ಕಾದಂಬನೀರುಚಿರರೋಚಿಷಮಂಬುಜಾಕ್ಷಂ ।
ಸೌದಾಮಿನೀವಿಲಸಿತಾಂಶುಕವೀತಮೂರ್ತೇ
ತೇಽಪಿ ಸ್ಪೃಶಂತಿ ತವ ಕಾಂತಿಮಚಿಂತ್ಯರೂಪಾಂ ॥ ೩೬ ॥

---

ಲೋಕೈಕನಾಥನೂ, ಪುರಾಣಪುರುಷನೂ, ಬ್ರಹ್ಮಾದಿಗಳಿಗೂ ಗೋಚರನಲ್ಲದವನೂ, ಅಜಿತನೂ, ಅನಂತಶಕ್ತ್ಯನ್ವಿತನೂ, ಶಾಶ್ವತನೂ, ವಿಕಾರರಹಿತನೂ, ಪ್ರಾಕೃತಶರೀರವಿಲ್ಲದವನೂ, ಅಂಚಿತ್ಯವಾದ ರೂಪವುಳ್ಳವನೂ, ತನ್ನ ಮಾಯೆಯಿಂದಲೇ ಚರಾಚರಾತ್ಮಕವಾದ ಪ್ರಪಂಚದ ರೂಪವನ್ನು ತಳೆದು ಪರಮಾರ್ಥತಃ ಚರಾಚರಗಳಿಗೆ ಭಿನ್ನನೂ ಆದ* ನಿನ್ನನ್ನು ಯಾರುತಾನೆ ತಿಳಿಯಲು ಸಮರ್ಥರಾದಾರು?

೩೪. ಮುರಧ್ವಂಸಿಯೆ! ನಿನ್ನ ಅನಂತ ನಾಮಗಳಲ್ಲಿ ಒಂದೊಂದೂ ಸಹ ಪಾಪಿಗಳು ಜನ್ಮಾಂತರಗಳಲ್ಲಿ ಆರ್ಜಿಸಿದ ಪಾತಕಗಳನ್ನು ಕಳೆದು ಉತ್ತಮ ಪದವಿಯನ್ನು ದೊರಕಿಸಿಕೊಡುವುದು. ಮುಕುಂದ, ಮಧುಸೂದನ, ಮಾಧವ ಮುಂತಾದ ನಿನ್ನ ನಾಮಗಳ ಜಪವು ಬಹಳ ಕಷ್ಟಸಾಧ್ಯಗಳಾದ ಅಶ್ವಮೇಧಾದಿ ಮಹಾಯಜ್ಞಗಳ ಉತ್ತಮ ಫಲವನ್ನೂ ಸುಲಭವಾಗಿಯೇ ಒದಗಿಸುವುದು.

೩೫. ನಾರಾಯಣನೆಂದೂ, ನರಕಸಮುದ್ರತಾರಕನೆಂದೂ, ದಾಮೋದರನೆಂದೂ, ಮಧುಸೂದನನೆಂದೂ, ಚತುರ್ಭುಜನೆಂದೂ, ಲೋಕರಕ್ಷಕನೆಂದೂ, ರಜೋಗುಣರಹಿತನೆಂದೂ, ಜನಾರ್ದನನೆಂದೂ ಜಪಿಸುತ್ತಿರುವ ನಿನ್ನ ಭಕ್ತರಿಗೆ ಪುನರ್ಜನ್ಮಗಳಾಗಲಿ, ಯಮನ ಭಯವಾಗಲೀ ಹೇಗೆ ಸಂಭವಿಸುವುವು?

೩೬. ಶ್ರೀವತ್ಸಚಿಹ್ನಿತವಕ್ಷವುಳ್ಳವನೆ! ಭಕ್ತರ ಪಾತಕಗಳನ್ನು ಪರಿಹರಿಸು

---

* "ಇಂದ್ರೋ ಮಾಯಾಭಿಃ ಪುರುರೂಪ ಈಯತೇ", "ಬ್ರಹ್ಮ ವಾ ಇದಮಗ್ರ ಆಸೀತ್— ತತ್ಸರ್ವಮಭವತ್" ಮುಂತಾದ ಶ್ರುತಿವಾಕ್ಯಗಳ ಬಲದಿಂದ ಸಚ್ಚಿದಾನಂದಾತ್ಮಕವಾದ ಬ್ರಹ್ಮವಸ್ತುವೆ, ಮಾಯಾವರಣದ ಕಾರಣದಿಂದ ಪ್ರಪಂಚವಾಗಿ ತೋರುತ್ತಿರುವುದು.

ಶ್ರೀವತ್ಸಲಾಂಛನ ಹರೇಽಚ್ಯುತ ಕೈಟಭಾರೇ
ಗೋವಿಂದ ತಾರ್ಕ್ಷ್ಯರಥ ಕೇಶವ ಚಕ್ರಪಾಣೇ ।
ಲಕ್ಷ್ಮೀಪತೇ ದನುಜಸೂದನ ಶಾರ್ಙ್ಗಪಾಣೇ
ತ್ವದ್ಭಕ್ತಿಭಾಜಿ ನ ಭಯಂ ಕ್ವಚಿದಸ್ತಿ ಪುಂಸಿ ॥ ೩೭ ॥
ಯೈರರ್ಚಿತೋಽಸಿ ಭಗವಂಸ್ತುಲಸೀಪ್ರಸೂನೈಃ
ದೂರೀಕೃತೈಣಮದಸೌರಭದಿವ್ಯಗಂಧೈಃ ।
ತಾನರ್ಚಯಂತಿ ದಿವಿ ದೇವಗಣಾಃ ಸಮಸ್ತಾ
ಮಂದಾರದಾಮಭಿರಲಂ ವಿಮಲಸ್ವಭಾವಾನ್ ॥ ೩೮ ॥
ಯದ್ವಾಚಿ ನಾಮ ತವ ಕಾಮದಮಬ್ಜನೇತ್ರ
ಯಚ್ಛ್ರೋತ್ರಯೋಸ್ತವ ಕಥಾ ಮಧುರಾಕ್ಷರಾಣಿ ।
ಯಚ್ಚಿತ್ತಭಿತ್ತಿಲಿಖಿತಂ ಭವತೋಽಸ್ತಿ ರೂಪಂ
ನೀರೂಪ ಭೂಪಪದವೀ ನ ಹಿ ತೈರ್ದುರಾಪಾ ॥ ೩೯ ॥

---

ವವನೆ! ನಾಶರಹಿತನೆ! ಕೈಟಭಮರ್ದನನೆ! ಗೋವಿಂದನೆ! ಗರುಡವಾಹನನೆ! ಕೇಶವನೆ! ಚಕ್ರಾಯುಧಪಾಣಿಯೆ! ಲಕ್ಷ್ಮೀರಮಣನೆ! ರಾಕ್ಷಸಸಂಹಾರಕನೆ! ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದವನೆ! ನಿನ್ನ ಭಕ್ತಿಗೆ ಭಾಜನನಾದ ಮಾನವನಿಗೆ ಸ್ವಲ್ಪವೂ ಎಲ್ಲಿಯೂ ಭಯವೆಂಬುದಿಲ್ಲ.

೩೭. ತ್ರಿವಿಕ್ರಮನೆ! ಮೇಘಮಾಲೆಯನ್ನು ಹೋಲುವ ನೀಲವರ್ಣ ವಿಶಿಷ್ಟನೂ, ಕಮಲನೇತ್ರನೂ, ಮಿಂಚಿನ ಹೊಳಪಿನಿಂದ ಕೂಡಿದ ಪೀತಾಂಬರ ವನ್ನುಟ್ಟಿರುವವನೂ, ಆದ ನಿನ್ನನ್ನು ಯಾವಾಗಲೂ ಯಾರು ಹೃದಯದಲ್ಲಿ ಧ್ಯಾನಿಸುತ್ತಿರುವರೊ, ಸಗುಣೋಪಾಸಕರಾದ ಅವರೂ ಸಹ ನಿರ್ಗುಣೋಪಾಸಕ ರಂತೆಯೇ ನಿನ್ನ ಅವಾಙ್ಮಾನಸಗೋಚರವಾದ ಚಿದ್ರೂಪವನ್ನು ಸಾಕ್ಷಾತ್ಕರಿಸಿ ಕೊಳ್ಳುವರು.

೩೮. ಭಗವಂತನೆ! ಕಸ್ತೂರಿಯ ಸುವಾಸನೆಯುಳ್ಳ ದಿವ್ಯಗಂಧರಹಿತಗಳಾ ಗಿದ್ದರೂ ಉತ್ತಮತುಲಸೀದಳಗಳಿಂದ ಯಾರು ನಿನ್ನನ್ನು ಪೂಜಿಸುತ್ತಾರೆಯೊ, ನಿರ್ಮಲಾಂತಃಕರಣರಾದ ಅವರನ್ನು ಸ್ವರ್ಗಲೋಕದಲ್ಲಿ ಸಕಲ ದೇವತಾಗಣ ಗಳೂ ಸೇರಿ ಕಲ್ಪವೃಕ್ಷದ ಪುಷ್ಪಗಳಿಂದ ಯಾವಾಗಲೂ ಪೂಜಿಸುತ್ತಿರುವರು.

೩೯. ಕಮಲಗಳಂತೆ ವಿಶಾಲಗಳಾದ ನೇತ್ರಗಳುಳ್ಳ ಸ್ವಾಮಿಯೆ! ಯಾವನ ಮಾತುಗಳಲ್ಲಿ ಸಕಲಾಭೀಷ್ಟಪ್ರದವಾದ ನಿನ್ನ ನಾಮಸ್ಮರಣೆಯಿರುವುದೋ, ಯಾವನ ಕಿವಿಗಳಲ್ಲಿ ನಿನ್ನ ಸತ್ಕಥೆಯ ಲಲಿತಪದಗಳು ಬೀಳುತ್ತಿರುವುವೊ, ಯಾವನ ಮನಸ್ಸೆಂಬ ಪಟದಲ್ಲಿ ನಿನ್ನ ಸುಂದರರೂಪವು ಚಿತ್ರಿತವಾಗಿರುವುದೊ, ಅವರಿಗೆ ಅನಿರ್ವಾಚ್ಯವಾದ ಬ್ರಹ್ಮಪದವಿಯೂ ಸಹ ಅಲಭ್ಯವಾದುದಲ್ಲವು.

ಯೇ ತ್ವಾಂ ಭಜಂತಿ ಸತತಂ ಭುವಿ ಶೇಷಶಾಯಿನ್
ತಾನ್ಶ್ರೀಪತೇ ಪಿತೃಪತೀಂದ್ರಕುಬೇರಮುಖ್ಯಾಃ ।
ವೃಂದಾರಕಾ ದಿವಿ ಸದೈವ ಸಭಾಜಯಂತಿ
ಸ್ವರ್ಗಾಪವರ್ಗಸುಖಸಂತತಿದಾನದಕ್ಷ ॥ ೪೦ ॥
ಯೇ ತ್ವಾಂ ಸ್ತುವಂತಿ ಸತತಂ ದಿವಿ ತಾನ್ಸ್ತುವಂತಿ
ಸಿದ್ಧಾಪ್ಸರೋಽಮರಗಣಾ ಲಸದಬ್ಜಪಾಣೇ ।
ವಿಶ್ರಾಣಯತ್ಯಖಿಲಸಿದ್ಧಿದ ಕೋ ವಿನಾ ತ್ವಾಂ
ನಿರ್ವಾಣಚಾರುಕಮಲಾಂ ಕಮಲಾಯತಾಕ್ಷ ॥ ೪೧ ॥
ತ್ವಂ ಹಂಸಿ ಪಾಸಿ ಸೃಜಸಿ ಕ್ಷಣತಃ ಸ್ವಲೀಲಾ
ಲೀಲಾವಪುರ್ಧರ ವಿರಿಂಚಿನತಾಂಘ್ರಿಯುಗ್ಮ ।
ವಿಶ್ವಂ ತ್ವಮೇವ ಪರವಿಶ್ವಪತಿಸ್ತ್ವಮೇವ
ವಿಶ್ವಸ್ಯ ಬೀಜಮಸಿ ತತ್ಪ್ರಣತೋಽಸ್ಮಿ ನಿತ್ಯಂ ॥ ೪೨ ॥
ಸ್ತೋತಾ ತ್ವಮೇವ ದನುಜೇಂದ್ರರಿಪೋ ಸ್ತುತಿಸ್ತ್ವಂ
ಸ್ತುತ್ಯಸ್ತ್ವಮೇವ ಸಕಲಾಂ ಹಿ ಭವಾನಿಹೈಕಃ ।

---

೪೦. ಆದಿಶೇಷನಮೇಲೆ ಮಲಗಿರುವ ಲಕ್ಷ್ಮೀರಮಣನೆ! ಸ್ವರ್ಗಮೋಕ್ಷಗಳನ್ನೊಳಗೊಂಡ ಸಕಲ ಸೌಖ್ಯಪರಂಪರೆಗಳನ್ನೂ ಭಜಕರಿಗೆ ಕೊಡುವುದರಲ್ಲಿ ನಿಸ್ಸೀಮನಾದ ನಿನ್ನನ್ನು ಯಾರು ಭಜಿಸುವರೊ, ಅವರನ್ನು ಯಮ, ಮಹೇಂದ್ರ, ಕುಬೇರರೇ ಮೊದಲಾದ ದೇವತೆಗಳೆಲ್ಲರೂ ನಿರಂತರವೂ ಸ್ವರ್ಗಲೋಕದಲ್ಲಿ ಸುಮ್ಮಾನಮಾಡುತ್ತಿರುವರು.

೪೧. ಪದ್ಮಹಸ್ತನೆ! ಪದ್ಮಾಯತಲೋಚನನೆ! ಸಕಲ ಸಿದ್ಧಿಪ್ರದನಾದ ನಿನ್ನನ್ನು ನಿತ್ಯವೂ ಯಾರು ಸ್ತೋತ್ರಮಾಡುವರೊ, ಅವರನ್ನು ಸ್ವರ್ಗವಾಸಿಗಳಾದ ಸಿದ್ಧರೂ, ಅಪ್ಸರರೂ, ಇತರ ದೇವಸಮೂಹಗಳೂ ಸ್ತೋತ್ರಮಾಡುವರು. ನಿನ್ನನ್ನುಳಿದು ಬೇರೆ ಯಾರು ಭಕ್ತರಿಗೆ ಮನೋಹರಳಾದ ಮೋಕ್ಷಲಕ್ಷ್ಮಿಯನ್ನು ಕೈಗೂಡಿಸಿಕೊಡಲು ಶಕ್ತರಾಗಿರುವರು?

೪೨. ನೀನೇ ಕಾಲಗತಿಯನ್ನನುಸರಿಸಿ ನಿನ್ನ ಲೀಲಾವಿಭೂತಿಯಾದ ಪ್ರಪಂಚವನ್ನು ನಾಶಮಾಡುವೆ; ಕಾಪಾಡುವೆ; ಸೃಷ್ಟಿಮಾಡುವೆ. ಲೀಲೆಯಿಂದಲೇ ಅನೇಕ ಅವತಾರಗಳನ್ನು ಎತ್ತುತ್ತಿರುವೆ. ಬ್ರಹ್ಮನಿಂದ ವಂದಿತವಾದ ಚರಣದ್ವಂದ್ವವುಳ್ಳವನೆ! ಪರಾತ್ಪರನೆ! ನೀನೇ ಬ್ರಹ್ಮಾಂಡವು. ನೀನೇ ಅದಕ್ಕೆ ನಿಯಾಮಕನು. ನೀನೇ ಅದರ ವಿಸ್ತಾರಕ್ಕೆ ಬೀಜರೂಪನಾಗಿರುವೆ. ನಿನಗೆ ನಿತ್ಯವೂ ಶರಣಾಗತನಾಗಿರುವೆನು.

೪೩. ರಾಕ್ಷಸ ಶ್ರೇಷ್ಠರನ್ನು ನಿಗ್ರಹಿಸಿದವನೆ! ಸರ್ವವ್ಯಾಪಿಯೆ! ಸಂಸಾರ

ತ್ವತ್ತೋ ನ ಕಿಂಚಿದಪಿ ಭಿನ್ನಮುದೈಮಿ ವಿಷ್ಣೋ
ತೃಷ್ಣಾಂ ಸದಾ ಕೃಣುಹಿ ಮೇ ಭವ ಜಾಂಭವಾರೇ ॥ ೪೩ ॥
ಇತಿ ಸ್ತುತ್ವಾ ಹೃಷೀಕೇಶಮಗ್ನಿಬಿಂದುರ್ಮಹಾತಪಾಃ ।
ತಸ್ಥೌ ತೂಷ್ಣೀಂ ತತೋ ವಿಷ್ಣುರುವಾಚ ವರದೋ ಮುನಿಂ ॥ ೪೪ ॥

ಶ್ರೀ ವಿಷ್ಣುರುವಾಚ :—
ಅಗ್ನಿಬಿಂದೋ ಮಹಾಪ್ರಾಜ್ಞ ಮಹತಾಂ ತಪಸಾಂ ನಿಧೇ ।
ವರಂ ವರಯ ಸುಪ್ರೀತಸ್ತವಾದೇಯಂ ನ ಕಿಂಚನ ॥ ೪೫ ॥

ಅಗ್ನಿಬಿಂದುರುವಾಚ :—
ಯದಿ ಪ್ರೀತೋಽಸಿ ಭಗವನ್ವೈಕುಂಠೇಶ ಜಗತ್ಪತೇ ।
ಕಮಲಾಕಾಂತ ತದ್ದೇಹಿ ಯದಿಹ ಪ್ರಾರ್ಥಯಾಮ್ಯಹಂ ॥ ೪೬ ॥
ಕೃತಾನುಜ್ಞೋಽಥ ಹರಿಣಾ ಭ್ರೂಭಂಗೇನ ಸ ತಾಪಸಃ ।
ಕೃತಪ್ರಣಾಮೋ ಹೃಷ್ಟಾತ್ಮಾ ವರಯಾಮಾಸ ಕೇಶವಂ ॥ ೪೭ ॥

---

ದೂರನೆ! ನೀನೇ ಸ್ತೋತ್ರಮಾಡುವವನು. ನೀನೇ ಸ್ತೋತ್ರವು. ಸ್ತೋತ್ರಕ್ಕೆ ವಿಷಯನಾಗಿರುವವನೂ ನೀನೇ. ನೀನೊಬ್ಬನೇ ಈ ಸಮಸ್ತ ಬ್ರಹ್ಮಾಂಡವೂ ಆಗಿರುವೆ. ನಿನ್ನ ಅಂಶವಿಲ್ಲದ ನಿನಗಿಂತ ಭಿನ್ನವಾಗಿರುವ ಯಾವೊಂದು ಪದಾರ್ಥವನ್ನೂ ಕಾಣಲಾರದವನಾಗಿರುವೆನು. ನನಗೆ ಸಂಸಾರದಲ್ಲಿರುವ ಗಾಢಾನುರಾಗವನ್ನು ನಾಶಮಾಡು.''

೪೪. ಇಂತೆಂದು ಮಹಾತಪಸ್ವಿಯಾದ ಅಗ್ನಿಬಿಂದುವು ಮಹಾವಿಷ್ಣುವನ್ನು ಸ್ತೋತ್ರಮಾಡಿ ಸುಮ್ಮನೆ ನಿಂತುಕೊಳ್ಳಲು ಶ್ರೀಮನ್ನಾರಾಯಣನು ವರವನ್ನು ಕೊಡಲೆಳಸಿ ಮುನಿಯನ್ನು ಕುರಿತು ಹೇಳತೊಡಗಿದನು.

೪೫. ವಿಷ್ಣುವು ಹೇಳುತ್ತಾನೆ:—ಅಗ್ನಿಬಿಂದುವೆ! ನೀನು ಮಹಾಬುದ್ಧಿಶಾಲಿಯಾಗಿರುವೆ. ಮಹತ್ತರವಾದ ತಪಸ್ಸಿನ ನೆಲೆಯಾಗಿರುವೆ. ನಿನಗೆ ಬೇಕಾದ ವರವನ್ನು ಕೇಳು. ನಿನ್ನಲ್ಲಿ ನಾನು ಸುಪ್ರೀತನಾಗಿರುವೆನು. ನಿನಗೆ ಕೊಡಬಾರದ ವಸ್ತುವು ಭೂಲೋಕದಲ್ಲಿ ಯಾವುದೂ ಇಲ್ಲವು.

೪೬. ಅಗ್ನಿಬಿಂದುವು ಹೇಳುತ್ತಾನೆ:—ವೈಕುಂಠನಾಯಕನೂ, ಲೋಕೇಶ್ವರನೂ, ಕಮಲಾಕಾಂತನೂ, ಆದ ಭಗವಂತನೆ! ನೀನು ನನ್ನ ತಪಸ್ಸಿನಿಂದ ಸಂತೋಷಗೊಂಡಿರುವೆಯಾದರೆ ಈಗ ನಾನು ಪ್ರಾರ್ಥಿಸುವ ವರವನ್ನು ಕೊಡುವವನಾಗು.

೪೭. ಕಣ್ಣುಹುಬ್ಬುಗಳ ಸಂಜ್ಞೆಯಿಂದಲೇ ಶ್ರೀಹರಿಯ ಅಪ್ಪಣೆಯನ್ನು ಪಡೆದು ಆ ತಪಸ್ವಿಯು ಸಂತುಷ್ಟ ಮನಸ್ಸಿನಿಂದ ಪ್ರಣಾಮಮಾಡಿ ಕೇಶವನಲ್ಲಿ ವರವನ್ನು ಬೇಡಿದನು.

ಭಗವನ್ಸರ್ವಗೋಽಪೀಹ ತಿಷ್ಠ ಪಂಚನದೇ ಹ್ರದೇ ।
ಹಿತಾಯ ಸರ್ವಜಂತೂನಾಂ ಮುಮುಕ್ಷೂಣಾಂ ವಿಶೇಷತಃ ॥ ೪೮ ॥
ಲಕ್ಷ್ಮೀಶೇನ ವರೋ ಮಹ್ಯಮೇಷ ದೇಯೋಽವಿಚಾರತಃ ।
ನಾನ್ಯಂ ವರಂ ವೃಣೋಮೀಹೇಽಹಂ ಭಕ್ತಿಂ ಚ ತ್ವತ್ಪದಾಂಬುಜೇ ॥ ೪೯ ॥
ಇತಿ ಶ್ರುತ್ವಾ ವರಂ ತಸ್ಯಾಗ್ನಿಬಿಂದೋರ್ಮಧುಸೂದನಃ ।
ಪ್ರೀತಃ ಪರೋಪಕಾರಾರ್ಥಂ ತಥೇತ್ಯಾಹಾಬ್ಧಿಜಾಪತಿಃ ॥ ೫೦ ॥

ಶ್ರೀ ವಿಷ್ಣುರುವಾಚ :—

ಅಗ್ನಿಬಿಂದೋ ಮುನಿಶ್ರೇಷ್ಠ ಸ್ಥಾಸ್ಯಾಮ್ಯಹಮಿಹ ಧ್ರುವಮ್ ।
ಕಾಶೀಭಕ್ತಿಮತಾಂ ಪುಂಸಾಂ ಮುಕ್ತಿಮಾರ್ಗಂ ಸಮಾದಿಶನ್ ॥ ೫೧ ॥
ಮುನೇ ಪುನಃ ಪ್ರಸನ್ನೋಽಸ್ಮಿ ವರಂ ಬ್ರೂಹಿ ದದಾಮಿ ತೇ ।
ಅತೀವ ಮಮ ಭಕ್ತೋಽಸಿ ಭಕ್ತಿಸ್ತೇಽಸ್ತು ದೃಢಾ ಮಯಿ ॥ ೫೨ ॥
ಆದಾವೇವ ಹಿ ತಿಷ್ಠಾಸುರಹಮತ್ರ ತಪೋನಿಧೇ ।
ತತಸ್ತ್ವಯಾ ಸಮಭ್ಯರ್ಥಿ ಸ್ಥಾಸ್ಯಾಮ್ಯತ್ರ ಸದೈವ ಹಿ ॥ ೫೩ ॥

---

೪೮. ಭಗವಂತನೆ! ಸಕಲ ಪ್ರಾಣಿಗಳಿಗೂ, ವಿಶೇಷವಾಗಿ ಮುಮುಕ್ಷು ಗಳಾದ ಭಕ್ತರಿಗೂ ಹಿತವನ್ನುಂಟುಮಾಡಲು ಈ ಪಂಚನದತೀರ್ಥದಲ್ಲಿ (ಸರ್ವವ್ಯಾಪಿಯಾಗಿದ್ದರೂ) ನಿನ್ನ ವಿಶೇಷಸಾನ್ನಿಧ್ಯವನ್ನು ಅನುಗ್ರಹಿಸು.

೪೯. ಲಕ್ಷ್ಮೀಕಾಂತನಾದ ನೀನು ಈ ವರವನ್ನು ಮನಃಪೂರ್ವಕವಾಗಿ ನನಗೆ ಕೊಡಬೇಕು. ನಿನ್ನ ಪಾದಕಮಲಗಳಲ್ಲಿ ನನಗೆ ಅಚಲವಾದ ಭಕ್ತಿಯನ್ನು ಕೊಡು. ಇವುಗಳಲ್ಲದೆ ಬೇರೆ ಯಾವ ವರವನ್ನೂ ನಾನು ಬೇಡುವುದಿಲ್ಲ.

೫೦. ಮಧುಸೂದನನಾದ ಶ್ರೀಕಾಂತನು ಅಗ್ನಿಬಿಂದುವು ಕೇವಲ ಪರೋಪ ಕಾರ ಬುದ್ಧಿಯಿಂದಲೇ ಪ್ರಾರ್ಥಿಸಿಕೊಂಡ ಈ ವರವನ್ನು ಕೇಳಿ ಸುಪ್ರೀತನಾಗಿ ಹಾಗೆಯೇ ಆಗಲೆಂದು ಅನುಗ್ರಹಿಸಿದನು.

೫೧. ವಿಷ್ಣುವು ಹೇಳುತ್ತಾನೆ:—"ಮುನಿಶ್ರೇಷ್ಠನಾದ ಅಗ್ನಿಬಿಂದುವೆ! ನಿನ್ನ ಪ್ರಾರ್ಥನೆಯನ್ನಂಗೀಕರಿಸಿ ನಾನು ಕಾಶೀಕ್ಷೇತ್ರದಲ್ಲಿ ಭಕ್ತಿಯುಕ್ತರಾದ ಸಕಲ ಮನುಷ್ಯರಿಗೂ ಮೋಕ್ಷಮಾರ್ಗವನ್ನುಪದೇಶಿಸುತ್ತ ಇಲ್ಲಿಯೇ ಶಾಶ್ವತ ವಾಗಿ ನೆಲಸಿರುವೆನು.

೫೨. ಮಹಾಮುನಿಯೆ! ಪರಹಿತಕಾರಕವಾದ ನಿನ್ನ ಬೇಡಿಕೆಯಿಂದ ಮತ್ತೂ ಪ್ರಸನ್ನನಾಗಿರುವೆನು. ಇನ್ನೊಂದು ವರುವನ್ನು ಕೇಳು. ಅದನ್ನೂ ಕೊಡುವೆನು. ನೀನು ನನ್ನ ಅತ್ಯಂತ ಅಂತರಂಗ ಭಕ್ತನಾಗಿರುವೆ. ನಿನಗೆ ನನ್ನಲ್ಲಿ ದೃಢವಾದ ಭಕ್ತಿಯಿರುವುದು.

೫೩. ತಪೋನಿಧಿಯೆ! ಮೊದಲೇ ನಾನು ಇಲ್ಲಿ ನೆಲಸಬೇಕೆಂಬ ಅಭಿಲಾಷೆ

ಪ್ರಾಪ್ಯ ಕಾಶೀಂ ಸುದುರ್ಮೇಧಾಃ ಕಸ್ತ್ಯಜೇದ್ ಜ್ಞಾನವಾನ್ಯದಿ ।
ಅನರ್ಘ್ಯಂ ಪ್ರಾಪ್ಯ ಮಾಣಿಕ್ಯಂ ಹಿತ್ವಾ ಕಾಚಂ ಕ ಹೀಯತೇ ॥ ೫೪ ॥
ಅಲ್ಪೀಯಸಾ ಶ್ರಮೇಣೇಹ ವಪುಷೋ ವ್ಯಯಮಾತ್ರತಃ ।
ಅವಶ್ಯಂ ಸತ್ವರಸ್ಯಾಶು ಯಥಾ ಮುಕ್ತಿಸ್ತಥಾ ಕ್ವ ಹಿ ॥ ೫೫ ॥
ವಿನಿಮಯ್ಯ ಜರಾಜೀರ್ಣಂ ದೇಹಂ ಪಾರ್ಥಿವಮತ್ರ ವೈ ।
ಪ್ರಾಜ್ಞಾಃ ಕಿಮು ನ ಗೃಹ್ಣೀಯುರಮೃತಂ ನೈರ್ಜರಂ ವಪುಃ ॥ ೫೬ ॥
ನ ತಪೋಭಿರ್ನ ವಾ ದಾನೈರ್ನ ಯಜ್ಞೈರ್ಬಹುದಕ್ಷಿಣೈಃ ।
ಅನ್ಯತ್ರ ಲಭ್ಯತೇ ಮೋಕ್ಷೋ ಯಥಾ ಕಾಶ್ಯಾಂ ತನುವ್ಯಯಾತ್ ॥ ೫೭ ॥
ಅಪಿ ಯೋಗಂ ಹಿ ಯುಂಜಾನಾ ಯೋಗಿನೋ ಯತಮಾನಸಾಃ ।
ನೈಕೇನ ಜನ್ಮನಾ ಮುಕ್ತಾಃ ಕಾಶ್ಯಾಂ ಮುಕ್ತಾ ವಪುರ್ವ್ಯಯಾತ್ ॥ ೫೮ ॥
ಇದಮೇವ ಮಹಾದಾನಮಿದಮೇವ ಮಹತ್ತಪಃ ।
ಇದಮೇವ ವ್ರತಂ ಶ್ರೇಷ್ಠಂ ಯತ್ಕಾಶ್ಯಾಂ ಮ್ರಿಯತೇ ತನುಃ ॥ ೫೯ ॥

---

ಯುಳ್ಳವನಾಗಿದ್ದೆನು. ಮೇಲಾಗಿ ನೀನೂ ಸಹ ಅದನ್ನೇ ಪ್ರಾರ್ಥಿಸಿರುವೆ. ಆದುದರಿಂದ ನಿಜವಾಗಿಯೂ ನಾನು ಯಾವಾಗಲೂ ಇಲ್ಲಿಯೇ ಸನ್ನಿಹಿತನಾಗಿರುವೆನು.

೫೪. ದುರ್ಬುದ್ಧಿಯಾದವನ ಹೊರತು, ಜ್ಞಾನಿಯಾಗಿ ಕಾಶೀಕ್ಷೇತ್ರವನ್ನು ಸೇರಿದ ಯಾವ ಮನುಷ್ಯನೂ ಬಿಟ್ಟುಹೋಗುವುದಿಲ್ಲ. ಅಮೂಲ್ಯವಾದ ಮಾಣಿಕ್ಯವನ್ನು ತಿರಸ್ಕರಿಸಿ ಯಾರುತಾನೆ ಗಾಜಿನ ಚೂರನ್ನು ಅಪೇಕ್ಷಿಸುವರು ?

೫೫–೫೭. ಅತ್ಯಲ್ಪವಾದ ಶ್ರಮದಿಂದಲೇ ಇಲ್ಲಿ ಶರೀರವನ್ನು ತ್ಯಜಿಸುವುದರಿಂದಲೇ ಕ್ಷಿಪ್ರವಾದ ಮುಕ್ತಿಯು ದೊರೆಯುವಂತೆ ಮತ್ತೆ ಯಾವ ಕ್ಷೇತ್ರದಲ್ಲಿ ದೊರೆಯುವುದು ? ವಾರ್ಧಕ್ಯದಿಂದ ಶಿಥಿಲವಾದ ಪಾಂಚಭೌತಿಕ ದೇಹವನ್ನು ಇಲ್ಲಿ ಕಳೆದುಕೊಂಡ ಮಹಾಪ್ರಾಜ್ಞರು ಮರಣರಹಿತವಾದ ದಿವ್ಯದೇಹವನ್ನು ಪಡೆಯದಿರುವರೆ? ಕಾಶಿಯಲ್ಲಿ ದೇಹವನ್ನು ಬಿಡುವ ಸುಲಭೋಪಾಯದಿಂದ ಮೋಕ್ಷಪದವಿಯು ಸಿಕ್ಕುವಂತೆ ಇತರ ಕ್ಷೇತ್ರಗಳಲ್ಲಿ ಕಷ್ಟಸಾಧ್ಯಗಳಾದ ತಪಸ್ಸುಗಳಿಂದಲೂ, ದಾನಗಳಿಂದಲೂ, ಬಹುದಕ್ಷಿಣೆಗಳಿಂದ ಕೂಡಿದ ಯಜ್ಞಯಾಗಾದಿಗಳಿಂದಲೂ ಸಿಕ್ಕಲಾರದು.

೫೮. ಮನಸ್ಸನ್ನು ಸಂಯಮನಮಾಡಿಕೊಂಡು ಯೋಗಾಭ್ಯಾಸದಲ್ಲಿಯೇ ನಿರತರಾಗಿರುವ ಯೋಗಿಗಳೂ ಅನೇಕ ಜನ್ಮಗಳ ಸಾಧನೆಯಿಂದ ಪಡೆಯಲಾರದ ಮೋಕ್ಷವನ್ನು ಕಾಶಿಯಲ್ಲಿ ಒಂದುಸಲ ದೇಹತ್ಯಾಗದಿಂದಲೇ ಸಾಧಿಸಿಕೊಳ್ಳುವರು.

೫೯. ಈ ಕಾಶಿಯಲ್ಲಿ ದೇಹವನ್ನು ಬಿಡುವುದೇ ಮಹಾದಾನವು. ಇದೇ ಮಹತ್ತರವಾದ ತಪಸ್ಸು. ಇದೇ ಸರ್ವೋತ್ತಮವಾದ ವ್ರತಾಚರಣೆಯು.

ಸ ಏವ ವಿದ್ವಾನ್ಜಗತಿ ಸ ಏವ ವಿಜಿತೇಂದ್ರಿಯಃ ।
ಸ ಏವ ಪುಣ್ಯವಾನ್ಧನ್ಯೋ ಲಬ್ಧ್ವಾ ಕಾಶೀಂ ನ ಯಸ್ತ್ಯಜೇತ್ ॥ ೬೦ ॥
ತಾವತ್ಸ್ಥಾಸ್ಯಾಮ್ಯಹಂ ಚಾತ್ರ ಯಾವತ್ಕಾಶೀ ಮುನೇ ತ್ವಿಹ ।
ಪ್ರಲಯೇಽಪಿ ನ ನಾಶೋಽಸ್ಯಾಃ ಶಿವಶೂಲಾಗ್ರಸುಸ್ಥಿತೇಃ ॥ ೬೧ ॥
ಇತ್ಯಾಕರ್ಣ್ಯ ಗಿರೋ ವಿಷ್ಣೋರಗ್ನಿಬಿಂದುರ್ಮಹಾಮುನಿಃ ।
ಪ್ರಹೃಷ್ಟರೋಮಾ ಪ್ರೋವಾಚ ಪುನರನ್ಯಂ ವರಂ ವೃಣೇ ॥ ೬೨ ॥
ಮಾಪತೇ ಮಮ ನಾಮ್ನಾತ್ರ ತೀರ್ಥೇ ಪಂಚನದೇ ಶುಭೇ ।
ಅಭಕ್ತೇಭ್ಯೋಽಪಿ ಭಕ್ತೇಭ್ಯಃ ಸ್ಥಿತೋ ಮುಕ್ತಿಂ ಸದಾ ದಿಶ ॥ ೬೩ ॥
ಯೇಽತ್ರ ಪಂಚನದೇ ಸ್ನಾತ್ವಾ ಗತ್ವಾ ದೇಶಾಂತರೇಷ್ವಪಿ ।
ನರಾಃ ಪಂಚತ್ವಮಾಪನ್ನಾ ಮುಕ್ತಿಂ ತೇಭ್ಯೋಽಪಿ ವೈ ದಿಶ ॥ ೬೪ ॥
ಯೇ ತು ಪಂಚನದೇ ಸ್ನಾತ್ವಾ ತ್ವಾಂ ಭಜಿಷ್ಯಂತಿ ಮಾನವಾಃ ।
ಚಲಾಚಲಾಪಿ ದ್ವೈರೂಪಾ ಮಾ ತ್ಯಾಕ್ಷೀಚ್ಛ್ರೀಶ್ಚ ತಾನ್ನರಾನ್ ॥ ೬೫ ॥

---

೬೦. ಯಾವನು ಕಾಶೀಕ್ಷೇತ್ರವನ್ನು ಹೊಂದಿ ಪುನಃ ಬಿಟ್ಟುಹೋಗುವುದಿಲ್ಲವೊ, ಅವನೇ ಲೋಕದಲ್ಲಿ ವಿದ್ವನ್ಮಣಿಯು. ಅವನೇ ಜಿತೇಂದ್ರಿಯನು. ಅವನೇ ಪುಣ್ಯವಂತನು. ಧನ್ಯತಮನಾದವನು.

೬೧. ಮುನಿಯೆ! ಈ ಕಾಶೀಕ್ಷೇತ್ರವಿರುವವರೆಗೂ ನಾನೂ ಇಲ್ಲಿಯೇ ನೆಲಸಿರುವೆನು. ಶಿವನ ತ್ರಿಶೂಲದ ಕೊನೆಯಲ್ಲಿ ನೆಲಸಿರುವ ಈ ಕ್ಷೇತ್ರಕ್ಕೆ ಪ್ರಳಯಕಾಲದಲ್ಲಿಯೂ ನಾಶವಿಲ್ಲವಷ್ಟೆ."

೬೨. ಇಂತೆಂದ ಮಹಾವಿಷ್ಣುವಿನ ನುಡಿಗಳನ್ನು ಕೇಳಿ ಮಹಾಮುನಿಯಾದ ಅಗ್ನಿಬಿಂದುವು ಸಂತೋಷದಿಂದ ಮೈನವಿರೇಳುತ್ತಿರಲು ಹೇಳತೊಡಗಿದನು. "ಸ್ವಾಮಿಯೆ! ಪುನಃ ಮತ್ತೊಂದು ವರವನ್ನು ಬೇಡುವೆನು.

೬೩. ರಮಾಕಾಂತನೆ! ಪವಿತ್ರವಾದ ಈ ಪಂಚನದತೀರ್ಥದಲ್ಲಿ ನೀನು ನನ್ನ ಹೆಸರಿನಿಂದಲೇ ನೆಲಸಿ ಭಕ್ತರಲ್ಲದವರಿಗೂ, ಭಕ್ತರಿಗೂ ಯಾವಾಗಲೂ ಮೋಕ್ಷವನ್ನು ತೋರಿಸುತ್ತಿರು.

೬೪. ಯಾವ ಮಾನವರು ಈ ಪಂಚನದ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ದೇಶಾಂತರಗಳಿಗೆ ಹೋಗಿ ಅಲ್ಲಿಯೇ ಮರಣವನ್ನು ಹೊಂದುವರೊ, ಅವರಿಗೂ ಸಹ ನೀನು ಮೋಕ್ಷಮಾರ್ಗವನ್ನು ತೋರಿಸಿಕೊಡು.

೬೫. ಯಾರು ಪಂಚನದದಲ್ಲಿ ಸ್ನಾನವನ್ನು ಮಾಡಿ ನಿನ್ನನ್ನು ಪೂಜಿಸುವರೊ, ಆ ಮನುಷ್ಯರಿಗೆ ಚಂಚಲಗಳಾದ ಐಹಿಕಭೋಗಗಳೂ ಶಾಶ್ವತವಾದ ಮೋಕ್ಷಲಕ್ಷ್ಮಿಯೂ ಎಂದಿಗೂ ಎಡೆಬಿಡದಿರಲಿ.

ಶ್ರೀ ವಿಷ್ಣುರುವಾಚ :—

ಏವಮಸ್ತ್ವಗ್ನಿಬಿಂದೋಽತ್ರ ಭವತಾ ಯದ್ವೃತಂ ಮುನೇ ।
ತ್ವನ್ನಾಮ್ನೋಽರ್ಧೇನ ಮೇ ನಾಮ ಮಯಾ ಸಹ ಭವಿಷ್ಯತಿ ॥ ೬೬ ॥
ಬಿಂದುಮಾಧವ ಇತ್ಯಾಖ್ಯಾ ಮಮ ತ್ರೈಲೋಕ್ಯವಿಶ್ರುತಾ ।
ಕಾಶ್ಯಾಂ ಭವಿಷ್ಯತಿ ಮುನೇ ಮಹಾಪಾಪೌಘಘಾತಿನೀ ॥ ೬೭ ॥
ಯೇ ಮಾಮತ್ರ ನರಾಃ ಪುಣ್ಯಾಃ ಪುಣ್ಯೇ ಪಂಚನದೇ ಪ್ರದೇ ।
ಸದಾ ಸಪರ್ಯಯಿಷ್ಯಂತಿ ತೇಷಾಂ ಸಂಸಾರಭೀಃ ಕುತಃ ॥ ೬೮ ॥
ವಸುಸ್ವರೂಪಿಣೀ ಲಕ್ಷ್ಮೀರ್ಲಕ್ಷ್ಮೀರ್ನಿರ್ವಾಣಸಂಜ್ಞಿಕಾ ।
ತತ್ಪಾರ್ಶ್ವಗೇ ಸದಾ ಯೇಷಾಂ ಹೃದಿ ಪಂಚನದೇ ಹ್ಯಹಂ ॥ ೬೯ ॥
ಯೈರ್ನ ಪಂಚನದಂ ಪ್ರಾಪ್ಯ ವಸುಭಿಃ ಪ್ರೀಣಿತಾ ದ್ವಿಜಾಃ ।
ಅಸುಲಭ್ಯವಿಪತ್ತೀನಾಂ ತೇಷಾಂ ತದ್ವಸು ರೋದಿತಿ ॥ ೭೦ ॥
ತ ಏವ ಧನ್ಯಾ ಲೋಕೇಽಸ್ಮಿನ್ಕೃತಕೃತ್ಯಾಸ್ತ ಏವ ಹಿ ।
ಪ್ರಾಪ್ಯ ಯೈರ್ಮಮ ಸಾನ್ನಿಧ್ಯಂ ವಸುವೋ ಮಮ ಸಾತ್ಕೃತಾಃ ॥ ೭೧ ॥

---

೬೬. ವಿಷ್ಣುವು ಹೇಳುತ್ತಾನೆ:— ಅಗ್ನಿಬಿಂದುಮಹರ್ಷಿಯೆ! ನೀನು ಬೇಡಿಕೊಂಡ ವರದಂತೆಯೇ ಎಲ್ಲವೂ ನಡೆಯಲಿ. ಇಲ್ಲಿರುವ ನನ್ನ ಮೂರ್ತಿಯ ಹೆಸರು ನಿನ್ನ ಹೆಸರಿನ ಅರ್ಧದಿಂದಲೂ ನನ್ನ ಹೆಸರಿನಿಂದಲೂ ಕೂಡಿರುವುದು.

೬೭. ಮಹಾಮುನಿಯೆ! ಕಾಶಿಯಲ್ಲಿ ನನಗೆ ಉಂಟಾಗಿರುವ ಬಿಂದುಮಾಧವನೆಂಬ ಈ ನಾಮವು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿ ಮಹಾಪಾತಕಗಳನ್ನೂ ನಾಶಗೊಳಿಸುವ ಮಹಿಮೆಯುಳ್ಳದ್ದಾಗುವುದು.

೬೮. ಪುಣ್ಯವಂತರಾದ ಯಾವ ನರರು ಪವಿತ್ರವಾದ ಈ ಪಂಚನದತೀರ್ಥದಲ್ಲಿ ಯಾವಾಗಲೂ ನನ್ನನ್ನು ಸೇವಿಸುತ್ತಿರುವರೊ, ಅವರಿಗೆ ಸಂಸಾರದ ಭಯವೆಲ್ಲಿಯದು?

೬೯. ಪಂಚನದದಲ್ಲಿ ನೆಲಸಿರುವ ನನ್ನ ರೂಪವು ಯಾರ ಹೃದಯದಲ್ಲಿ ದೃಢವಾಗಿರುವುದೊ, ಅವರಿಗೆ ಧನರೂಪವಾದ ಲಕ್ಷ್ಮಿಯೂ, ಮೋಕ್ಷಲಕ್ಷ್ಮಿಯೂ ಯಾವಾಗಲೂ ಪಾರ್ಶ್ವವರ್ತಿಗಳಾಗಿಯೇ ಇರುವರು.

೭೦. ಯಾರು ಪಂಚನದವನ್ನು ಹೊಂದಿ ಆ ತೀರ್ಥದಲ್ಲಿ ಬ್ರಾಹ್ಮಣರನ್ನು ಸಂತೋಷಗೊಳಿಸುವುದಿಲ್ಲವೊ, ಅವರ ಐಶ್ವರ್ಯವೆಲ್ಲವೂ ಶೀಘ್ರವಾಗಿಯೇ ವಿಪತ್ತಿಗೊಳಗಾಗಿ ನಾಶವಾಗುವುದು.

೭೧. ಯಾರು ನನ್ನ ಸಾನ್ನಿಧ್ಯವನ್ನು ಹೊಂದಿ ತಮ್ಮ ಸರ್ವಸ್ವವನ್ನೂ ನನ್ನಲ್ಲಿಯೇ ಅರ್ಪಿಸುವರೊ, ಅವರೇ ಈ ಲೋಕದಲ್ಲಿ ಧನ್ಯರಾದವರು. ಅವರೇ ಕೃತಕೃತ್ಯರು.

ಬಿಂದುತೀರ್ಥಮಿದಂ ನಾಮ ತವ ನಾಮ್ನಾ ಭವಿಷ್ಯತಿ ।
ಅಗ್ನಿಬಿಂದೋ ಮುನಿಶ್ರೇಷ್ಠ ಸರ್ವಪಾತಕನಾಶನಂ ॥ ೭೨ ॥
ಕಾರ್ತಿಕೇ ಬಿಂದುತೀರ್ಥೇ ಯೋ ಬ್ರಹ್ಮಚರ್ಯಪರಾಯಣಃ ।
ಸ್ನಾಸ್ಯತ್ಯನುದಿತೇ ಭಾನೌ ಭಾನುಜಾತ್ತಸ್ಯ ಭೀಃ ಕೃತಃ ॥ ೭೩ ॥
ಅಪಿ ಪಾಪಸಹಸ್ರಾಣಿ ಕೃತ್ವಾ ಮೋಹೇನ ಮಾನವಃ ।
ಊರ್ಜೇ ಧರ್ಮನದೇ ಸ್ನಾತೋ ನಿಷ್ಪಾಪೋ ಜಾಯತೇ ಕ್ಷಣಾತ್ ॥೭೪॥
ಯಾವತ್ಸ್ವಸ್ಥೋಽಸ್ತಿ ದೇಹೋಽಯಂ ಯಾವನ್ನೇಂದ್ರಿಯವಿಕ್ಲವಃ ।
ತಾವದ್ವ್ರತಾನಿ ಕುರ್ವೀತ ಯತೋ ದೇಹಫಲಂ ವ್ರತಂ ॥ ೭೫ ॥
ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ।
ಉಪವಾಸೇನ ದೇಹೋಽಯಂ ಸಂಶೋಧ್ಯೋಽಶುಚಿಭಾಜನಃ ॥ ೭೬ ॥
ಕೃಚ್ಛ್ರಚಾಂದ್ರಾಯಣಾದೀನಿ ಕರ್ತವ್ಯಾನಿ ಪ್ರಯತ್ನತಃ ।
ಅಶುಚಿಃ ಶುಚಿತಾಮೇತಿ ಕಾಯೋ ಯದ್ವ್ರತಧಾರಣಾತ್ ॥ ೭೭ ॥

---

೭೨. ಈ ತೀರ್ಥವು ಇನ್ನುಮೇಲೆ ನಿನ್ನ ಹೆಸರಿನಿಂದ ಬಿಂದುತೀರ್ಥವೆಂದು ಕರೆಯಲ್ಪಡುವುದು. ಮುನಿವರ್ಯನಾದ ಅಗ್ನಿಬಿಂದುವೆ! ಇದು ಸ್ನಾನಮಾಡುವವರ ಸಮಸ್ತ ಪಾತಕಗಳನ್ನೂ ಕಳೆಯುವುದು.

೭೩. ಕಾರ್ತಿಕಮಾಸದಲ್ಲಿ ಯಾವನು ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತ ಸೂರ್ಯೋದಯವಾಗುವುದಕ್ಕೆ ಮುಂಚೆಯೇ ಬಿಂದುತೀರ್ಥದಲ್ಲಿ ಸ್ನಾನವನ್ನು ಮಾಡುವನೊ, ಅವನಿಗೆ ಸೂರ್ಯಪುತ್ರನಾದ ಯಮನ ಭಯವೆಲ್ಲಿಯದು?

೭೪. ಮೋಹದಿಂದ ಮನುಷ್ಯನು ಸಾವಿರಾರು ಪಾತಕಗಳನ್ನು ಮಾಡಿದ್ದರೂ ಒಂದುಸಲ ಕಾರ್ತಿಕಮಾಸದಲ್ಲಿ ಪಶ್ಚಾತ್ತಾಪಯುಕ್ತನಾಗಿ ಧರ್ಮತೀರ್ಥದಲ್ಲಿ ಸ್ನಾನವನ್ನು ಮಾಡಲು ಕ್ಷಣಮಾತ್ರದಲ್ಲಿಯೇ ನಿಷ್ಕಳಂಕನಾಗುವನು.

೭೫. ಈ ದೇಹವು ಎಲ್ಲಿಯವರೆಗೆ ನೀರೋಗವಾಗಿರುವುದೊ, ಇಂದ್ರಿಯಗಳು ಶಿಥಿಲಗಳಾಗುವುದಿಲ್ಲವೊ, ಅಷ್ಟರಲ್ಲಿಯೇ ವ್ರತಾಚರಣಾದಿಗಳೆಲ್ಲವನ್ನೂ ಮುಗಿಸಿಕೊಳ್ಳಬೇಕು. ವ್ರತಾಚರಣೆಯಿಂದಲೇ ದೇಹಧಾರಣೆಯು ಸಾರ್ಥಕವೆನಿಸಿರುವುದು.

೭೬. ಒಂದೇ ಭೋಜನದಿಂದಾಗಲಿ, ಅಯಾಚಿತವಾಗಿ ಲಭಿಸಿದ ರಾತ್ರಿಯ ಅನ್ನದಿಂದಾಗಲಿ, ಉಪವಾಸದಿಂದಾಗಲಿ ಅಶುಚಿಪದಾರ್ಥಗಳ ಮೂಟೆಯಾದ ಈ ಶರೀರವನ್ನು ಚೆನ್ನಾಗಿ ಶುದ್ಧಿಮಾಡಬೇಕು.

೭೭. ದೇಹದಂಡನೆಗಾಗಿ ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನು ಅವಶ್ಯಕವಾಗಿಯೂ ಕೈಗೊಳ್ಳಬೇಕು. ಈ ಪ್ರಾಯಶ್ಚಿತ್ತವ್ರತಗಳ ಆಚರಣೆಯಿಂದ ಅಶುಚಿಭಾಂಡವಾದ ದೇಹವು ಶುಚಿಯಾಗುವುದು.

ವ್ರತೈಃ ಸಂಶೋಧಿತೇ ದೇಹೇ ಧರ್ಮೋ ವಸತಿ ನಿಶ್ಚಲಃ ।
ಅರ್ಥಕಾಮೌ ಸನಿರ್ವಾಣೌ ತತ್ರ ಯತ್ರ ವೃಷಸ್ಥಿತಿಃ ॥ ೭೮ ॥
ತಸ್ಮಾದ್ವ್ರತಾನಿ ಸತತಂ ಚರಿತವ್ಯಾನಿ ಮಾನವೈಃ ।
ಧರ್ಮಸಾನ್ನಿಧ್ಯಕರ್ತೄಣಿ ಚತುರ್ವರ್ಗಫಲೇಪ್ಸುಭಿಃ ॥ ೭೯ ॥
ಸದಾ ಕರ್ತುಂ ನ ಶಕ್ನೋತಿ ವ್ರತಾನಿ ಯದಿ ಮಾನವಃ ।
ಚಾತುರ್ಮಾಸ್ಯಮನುಪ್ರಾಪ್ಯ ತದಾ ಕುರ್ಯಾತ್ಪ್ರಯತ್ನತಃ ॥ ೮೦ ॥
ಭೂಶಯ್ಯಾ ಬ್ರಹ್ಮಚರ್ಯಂ ಚ ಕಿಂಚಿದ್ಭಕ್ಷ್ಯನಿಷೇವಣಂ ।
ಏಕಭಕ್ತಾದಿನಿಯಮೋ ನಿತ್ಯದಾನಂ ಸ್ವಶಕ್ತಿತಃ ॥ ೮೧ ॥
ಪುರಾಣಶ್ರವಣಂ ಚೈವ ತದರ್ಥಾಚರಣಂ ಪುನಃ ।
ಅಖಂಡದೀಪೋದ್ಬೋಧಶ್ಚ ಮಹಾಪೂಜೇಷ್ಟದೈವತೇ ॥ ೮೨ ॥
ಪ್ರಭೂತಾಂಕುರಬೀಜಾಢ್ಯೇ ದೇಶೇ ಚಾಪಿ ಗತಾಗತಂ ।
ಯತ್ನೇನ ವರ್ಜಯೇದ್ಧೀಮಾನ್ಮಹಾಧರ್ಮವಿವೃದ್ಧಯೇ ॥ ೮೩ ॥

---

೭೮. ವ್ರತಗಳಿಂದ ಪರಿಶುದ್ಧವಾದ ದೇಹದಲ್ಲಿ ಧರ್ಮವು ಸ್ಥಿರವಾಗಿ ನೆಲಸುವುದು. ಧರ್ಮವು ನಿಂತಿರುವೆಡೆಯಲ್ಲಿಯೇ ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಮಿಕ್ಕ ಮೂರು ಪುರುಷಾರ್ಥಗಳೂ ಒಡಗೂಡಿರುವುವು.

೭೯. ಆದುದರಿಂದ ಮಾನವರು ಸರ್ವಕಾಲಗಳಲ್ಲಿಯೂ ವ್ರತಗಳನ್ನಾಚರಿಸುತ್ತಿರಬೇಕು. ಚತುರ್ವರ್ಗಗಳ ಫಲಗಳನ್ನಪೇಕ್ಷಿಸುವವರಿಗೆ ಅವುಗಳೇ ಧರ್ಮದ ಸಾನ್ನಿಧ್ಯವನ್ನುಂಟುಮಾಡಿ ಕೊಡುವುವು.

೮೦. ಯಾವ ಮನುಷ್ಯನಿಗಾದರೂ ನಿರಂತರವೂ ವ್ರತಗಳನ್ನಾಚರಿಸಲು ಅನುಕೂಲಗಳಿಲ್ಲದಿದ್ದರೆ ವರ್ಷಕ್ಕೊಂದು ಚಾತುರ್ಮಾಸ್ಯದಲ್ಲಾದರೂ ಪ್ರಯತ್ನ ಪೂರ್ವಕವಾಗಿ ಮಾಡಲೇಬೇಕು.

೮೧. ವ್ರತದ ನಿಯಮಗಳನ್ನು ಹೇಳುವೆನು. ಭೂಮಿಯಲ್ಲಿ ಶಯನ, ಸ್ತ್ರೀಸಂಗ ಪರಿತ್ಯಾಗ, ಊಟದಲ್ಲಿ ಯಾವುದಾದರೂ ಭಕ್ಷ್ಯವನ್ನು ಬಿಟ್ಟುಬಿಡುವುದು, ಒಂದೇ ಹೊತ್ತಿನ ಊಟದ ನಿಯಮ, ತನ್ನ ಶಕ್ತಿಯನ್ನನುಸರಿಸಿ ನಿತ್ಯವೂ ದಾನಗಳನ್ನು ಕೊಡುತ್ತಿರುವುದು.

೮೨. ಪುರಾಣಗಳನ್ನು ಕೇಳುವುದು, ಅವುಗಳ ಉಪದೇಶಗಳನ್ನು ಆಚರಣೆಯಲ್ಲಿ ತಂದುಕೊಳ್ಳುವುದು, ಅಖಂಡದೀಪವನ್ನು ಹೊತ್ತಿಸುವುದು, ಇಷ್ಟದೇವತೆಗೆ ಉತ್ತಮರೀತಿಯಿಂದ ಪೂಜೆಯನ್ನು ಮಾಡುವುದು, ಇವು ಕಾರ್ಯಗಳು.

೮೩. ಇನ್ನು ವರ್ಜನೀಯಗಳನ್ನು ಹೇಳುವೆನು. ಬುದ್ಧಿಶಾಲಿಯಾದ ಮನುಷ್ಯನು ತನ್ನ ಧರ್ಮವನ್ನು ಅಭಿವೃದ್ಧಿಗೊಳಿಸುವ ಉದ್ದೇಶದಿಂದ ಬಹಳವಾಗಿ ಬೀಜಗಳಿಂದಲೂ, ಮೊಳಕೆಗಳಿಂದಲೂ ಕೂಡಿರುವ ನೆಲದಲ್ಲಿ ಓಡಾಡುವುದನ್ನು ಪ್ರಯತ್ನದಿಂದ ಬಿಟ್ಟುಬಿಡಬೇಕು.

ಅಸಂಭಾಷ್ಯಾ ನ ಸಂಭಾಷ್ಯಾಶ್ಚಾತುರ್ಮಾಸ್ಯವ್ರತಸ್ಥಿತೈಃ ।
ಮೌನಂ ಚಾಪಿ ಸದಾ ಕಾರ್ಯಂ ತಥ್ಯಂ ವಕ್ತವ್ಯಮೇವ ವಾ ॥ ೮೪ ॥
ನಿಷ್ಪಾವಾಂಶ್ಚ ಮಸೂರಾಂಶ್ಚ ಕೋದ್ರವಾನ್ವರ್ಜಯೇದ್ವ್ರತೀ ।
ಸದಾ ಶುಚಿಭಿರಾಸ್ಥೇಯಂ ಸ್ಪ್ರಷ್ಟವ್ಯೋ ನಾವ್ರತೀ ಜನಃ ॥ ೮೫ ॥
ದಂತಕೇಶಾಂಬರಾದೀನಿ ನಿತ್ಯಂ ಶೋಧ್ಯಾನಿ ಯತ್ನತಃ ।
ಅನಿಷ್ಟಚಿಂತಾ ನೋ ಕಾರ್ಯಾ ವ್ರತಿನಾ ಹೃದ್ಯಪಿ ಕ್ವಚಿತ್ ॥ ೮೬ ॥
ದ್ವಾದಶಸ್ವಪಿ ಮಾಸೇಷು ವ್ರತಿನೋ ಯತ್ಫಲಂ ಭವೇತ್ ।
ಚಾತುರ್ಮಾಸ್ಯವ್ರತಭೃತಾಂ ತತ್ಫಲಂ ಸ್ಯಾದಖಂಡಿತಂ ॥ ೮೭ ॥
ಚತುರ್ಷ್ವಪಿ ಚ ಮಾಸೇಷು ನ ಸಾಮರ್ಥ್ಯಂ ವ್ರತೇ ಯದಿ ।
ತದೋರ್ಜೇ ವ್ರತಿನಾ ಭಾವ್ಯಮಪ್ಯಬ್ದಫಲಮಿಚ್ಛತಾ ॥ ೮೮ ॥
ಅವ್ರತಃ ಕಾರ್ತಿಕೋ ಯೇಷಾಂ ಗತೋ ಮೂಢಧಿಯಾಮಿಹ ।
ತೇಷಾಂ ಪುಣ್ಯಸ್ಯ ಲೇಶೋಽಪಿ ನ ಭವೇತ್ಸೂಕರಾತ್ಮನಾಂ ॥ ೮೯ ॥

---

೮೪. ಚಾತುರ್ಮಾಸ್ಯವ್ರತವನ್ನಂಗೀಕರಿಸಿದವರು ಸವ್ಯವಹಾರಕ್ಕೆ ಅನರ್ಹರಾದ ಪತಿತಾದಿಗಳೊಡನೆ ಸಂಭಾಷಣೆಯನ್ನು ಮಾಡಬಾರದು. ಯಾವಾಗಲೂ ಮೌನವನ್ನೇ ಸಾಧಿಸಬೇಕು. ಅಥವಾ ಸತ್ಯವನ್ನೇ ನುಡಿಯಬೇಕು.

೮೫. ಮರದಲ್ಲಿ ಕೇರಿದ ಧಾನ್ಯಗಳನ್ನೂ, ಕಡಲೆ ಮತ್ತು ಕೋದ್ರವ ಧಾನ್ಯಗಳನ್ನೂ ಚಾತುರ್ಮಾಸ್ಯವ್ರತಿಯು ತ್ಯಜಿಸಬೇಕು. ಮತ್ತು ಯಾವಾಗಲೂ ಪರಿಶುದ್ಧನಾಗಿದ್ದು ಮೈಲಿಗೆಯವರನ್ನು ಎಂದಿಗೂ ಮುಟ್ಟಬಾರದು.

೮೬. ಪ್ರತಿದಿನವೂ ನಿಯಮದಿಂದ ಹಲ್ಲುಗಳನ್ನೂ, ಕೂದಲನ್ನೂ, ಬಟ್ಟೆಗಳನ್ನೂ ಶೋಧಿಸುತ್ತಿರಬೇಕು. ವ್ರತಿಯಾದವನು ಹೃದಯದಲ್ಲಿಯೂ ಸಹ ಯಾರಿಗೂ ಯಾವ ವಿಧವಾದ ಅನಿಷ್ಟದ ಚಿಂತನೆಯನ್ನೂ ಮಾಡಬಾರದು.

೮೭. ಹನ್ನೆರಡು ತಿಂಗಳುಗಳಲ್ಲಿಯೂ ವ್ರತವನ್ನಾಚರಿಸುವುದರಿಂದ ಯಾವ ಫಲವು ಲಭಿಸುವುದೊ, ಅಖಂಡವಾಗಿ ಒಂದು ಚಾತುರ್ಮಾಸ್ಯವನ್ನು ನಡೆಸುವುದರಿಂದಲೂ ಆ ಫಲವೇ ಕೈಗೂಡುವುದರಲ್ಲಿ ಸಂಶಯವಿಲ್ಲ.

೮೮. ನಾಲ್ಕುಮಾಸಗಳಲ್ಲಿಯೂ ಏಕಪ್ರಕಾರವಾಗಿ ವ್ರತವನ್ನಾಚರಿಸಲು ಸಾಮರ್ಥ್ಯವಿಲ್ಲದವನು ವರ್ಷದ ಫಲವನ್ನಪೇಕ್ಷಿಸಿದಲ್ಲಿ ಕಾರ್ತಿಕದ ಒಂದು ಮಾಸದಲ್ಲಿಯಾದರೂ ವ್ರತಿಯಾಗಿರಲೇಬೇಕು.

೮೯. ಯಾವ ಮೂಢಮಾನವರು ಯಾವ ವಿಧವಾದ ನಿಯಮಗಳನ್ನೂ ಅನುಸರಿಸದೆ ಕಾರ್ತಿಕಮಾಸವನ್ನು ವ್ಯರ್ಥವಾಗಿ ಕಳೆಯುವರೊ, ಅವರು ಹಂದಿಗಳಿಗೆ ಸಮಾನರಾದವರೇ ಹೊರತು ಅವರಿಗೆಂದಿಗೂ ಪುಣ್ಯದ ಲೇಶಾಂಶವೂ ಲಭಿಸಲಾರದು.

ಕೃಚ್ಛ್ರಂ ವಾ ಚಾತಿಕೃಚ್ಛ್ರಂ ವಾ ಪ್ರಾಜಾಪತ್ಯಮಥಾಪಿ ವಾ ।
ಸಂಪ್ರಾಪ್ತೇ ಕಾರ್ತಿಕೇ ಮಾಸಿ ಕುರ್ಯಾಚ್ಛಕ್ತ್ಯಾತಿಪುಣ್ಯವಾನ್ ॥ ೯೦ ॥
ಏಕಾಂತರಂ ವ್ರತಂ ಕುರ್ಯಾತ್ತ್ರಿರಾತ್ರವ್ರತಮೇವ ವಾ ।
ಪಂಚರಾತ್ರಂ ಸಪ್ತರಾತ್ರಂ ಸಂಪ್ರಾಪ್ತೇ ಕಾರ್ತಿಕೇ ವ್ರತೀ ॥ ೯೧ ॥
ಪಕ್ಷವ್ರತಂ ವಾ ಕುರ್ವೀತ ಮಾಸೋಪೋಷಣಮೇವ ವಾ ।
ನೋರ್ಜೋ ವಂಧ್ಯೋ ವಿಧಾತವ್ಯೋ ವ್ರತಿನಾ ಕೇನಚಿತ್ಕ್ವಚಿತ್ ॥ ೯೨ ॥
ಶಾಕಾಹಾರಂ ಪಯೋಽಽಹಾರಂ ಫಲಾಹಾರಮಥಾಪಿ ವಾ ।
ಚರೇದ್ಯವಾನ್ನಾಹಾರಂ ವಾ ಸಂಪ್ರಾಪ್ತೇ ಕಾರ್ತಿಕೇ ವ್ರತೀ ॥ ೯೩ ॥
ನಿತ್ಯಂ ನೈಮಿತ್ತಿಕಂ ಸ್ನಾನಂ ಕುರ್ಯಾದೂರ್ಜೇ ವ್ರತೀ ನರಃ ।
ಬ್ರಹ್ಮಚರ್ಯಂ ಚರೇದೂರ್ಜೇ ಮಹಾವ್ರತಫಲಾರ್ಥವಾನ್ ॥ ೯೪ ॥
ಬಾಹುಲಂ ಬ್ರಹ್ಮಚರ್ಯೇಣ ಯಃ ಕ್ಷಿಪೇಚ್ಛುಚಿಮಾನಸಃ ।
ಸಮಸ್ತಂ ಹಾಯನಂ ತೇನ ಬ್ರಹ್ಮಚರ್ಯಂ ಕೃತಂ ಭವೇತ್ ॥ ೯೫ ॥

---

೯೦. ಕಾರ್ತಿಕಮಾಸವು ಪ್ರಾಪ್ತವಾಗಲು ಪುಣ್ಯವಂತನಾದವನು ಕೃಚ್ಛ್ರದಿಂದಾಗಲಿ, ಅತಿಕೃಚ್ಛ್ರದಿಂದಾಗಲಿ, ಪ್ರಾಜಾಪತ್ಯದಿಂದಾಗಲಿ ತನ್ನ ಶಕ್ತಿಯನ್ನನುಸರಿಸಿ ತಿಂಗಳನ್ನು ಕಳೆಯಬೇಕು.

೯೧. ವ್ರತಿಯಾದವನು ಕಾರ್ತಿಕದಲ್ಲಿ ಒಂದು ದಿನವಾಗಲಿ, ಮೂರು ದಿವಸವಾಗಲಿ, ಐದು ದಿವಸವಾಗಲಿ, ಏಳು ದಿವಸವಾಗಲಿ ವ್ರತವನ್ನು ಆಚರಿಸಬೇಕು.

೯೨. ಪಕ್ಷವ್ರತವನ್ನಾಗಲಿ ಮಾಡಬೇಕು. ಮಾಸದ ಪೂರ್ತಿಯನ್ನೂ ಉಪವಾಸದಿಂದಲಾದರೂ ಕಳೆಯಬಹುದು. ಯಾವ ವ್ರತಿಯೂ ಎಂದಿಗೂ ಕಾರ್ತಿಕಮಾಸವನ್ನು ನಿಷ್ಪ್ರಯೋಜನವಾಗಿ ಕಳೆಯಬಾರದು.

೯೩. ಕಾರ್ತಿಕಮಾಸದ ವ್ರತವನ್ನು ಕೈಗೊಂಡವನು ಶಾಕಗಳನ್ನಾಗಲಿ, ಹಾಲನ್ನಾಗಲಿ, ಫಲಗಳನ್ನಾಗಲಿ, ಯವಾನ್ನವನ್ನಾಗಲಿ ಸ್ವೀಕರಿಸುತ್ತ ಇತರ ಆಹಾರಗಳನ್ನು ತ್ಯಜಿಸಬೇಕು.

೯೪. ಕಾರ್ತಿಕಮಾಸದಲ್ಲಿ ವ್ರತವನ್ನು ಹಿಡಿದವನು ದೈನಂದಿನಗಳೂ ನೈಮಿತ್ತಿಕಗಳೂ ಆದ ಸ್ನಾನಗಳನ್ನು ಮಾಡುತ್ತಿರಬೇಕು. ಈ ಮಹಾವ್ರತದ ಫಲವನ್ನು ಅಪೇಕ್ಷಿಸುವವನು ಮಾಸಪರ್ಯಂತವೂ ಬ್ರಹ್ಮಚರ್ಯವನ್ನು ಕಾಪಾಡಿಕೊಂಡಿರಬೇಕು.

೯೫. ಯಾವನು ನಿರ್ಮಲಮನಸ್ಕನಾಗಿ ಕಾರ್ತಿಕಮಾಸವನ್ನು ಬ್ರಹ್ಮಚರ್ಯವ್ರತದಲ್ಲಿ ಕಳೆಯುವನೊ, ಅವನು ವರ್ಷವೆಲ್ಲವನ್ನೂ ಬ್ರಹ್ಮಚರ್ಯದಲ್ಲಿಯೇ ಕಳೆದಂತೆಯೇ ಗಣಿಸಲ್ಪಡುವನು.

ಯಸ್ತು ಕಾರ್ತಿಕಿಕಂ ಮಾಸಮುಪವಾಸೈಃ ಸಮಾಪಯೇತ್ ।
ಅಪ್ಯಬ್ದಮಪಿ ತೇನೇಹ ಭವೇತ್ಸರ್ವ್ಯುಪೋಷಿತಂ ॥ ೯೬ ॥
ಶಾಕಾಹಾರಪಯೋಽಹಾರೈರೂರ್ಜೋ ಯೈರತಿವಾಹಿತಃ ।
ಅಖಂಡಿತಾ ಶರತ್ತೇನ ತದಾಹಾರೇಣ ಯಾಪಿತಾ ॥ ೯೭ ॥
ಪತ್ರಭೋಜೀ ಭವೇದೂರ್ಜೇ ಕಾಂಸ್ಯಂ ತ್ಯಾಜ್ಯಂ ಪ್ರಯತ್ನತಃ ।
ಯೋ ವ್ರತೀ ಕಾಂಸ್ಯಭೋಜೀ ಸ್ಯಾನ್ನ ತದ್ವ್ರತಫಲಂ ಲಭೇತ್ ॥ ೯೮ ॥
ಕಾಂಸ್ಯಸ್ಯ ನಿಯಮೇ ದದ್ಯಾತ್ಕಾಂಸ್ಯಂ ಸರ್ಪಿಃಪ್ರಪೂರಿತಂ ।
ಊರ್ಜೇ ನ ಭಕ್ಷಯೇತ್ ಕ್ಷೌದ್ರಮತಿಕ್ಷುದ್ರಗತಿಪ್ರದಂ ॥ ೯೯ ॥
ಮಧುತ್ಯಾಗೇ ಘೃತಂ ದದ್ಯಾತ್ಪಾಯಸಂ ಚ ಸಶರ್ಕರಂ ।
ಅಭ್ಯಂಗೇಽಭ್ಯವಹಾರೇ ಚ ತೈಲಮೂರ್ಜೇ ವಿವರ್ಜಯೇತ್ ॥ ೧೦೦ ॥
ಭೂಯಾತ್ಸ ನಾರಕೀ ದೇಹೀ ತತ್ರಾಭ್ಯಂಗಾದ್ಯತೋಽನಘ ।
ತೈಲತ್ಯಾಗೇ ತಿಲಂ ದದ್ಯಾದ್ದ್ರೋಣಮಾತ್ರಾನ್ಸಕಾಂಚನಾನ್ ॥ ೧೦೧ ॥

---

೯೬. ಯಾವ ಮನುಷ್ಯನು ಈ ಒಂದು ಮಾಸವನ್ನು ಉಪವಾಸಗಳಿಂದ ಕಳೆಯುವನೊ, ಅವನಿಂದ ವರ್ಷವೆಲ್ಲವೂ ಉಪವಾಸಗಳಲ್ಲಿಯೇ ಕಳೆಯಲ್ಪಟ್ಟಂತೆಯೇ ಆಗುವುದು.

೯೭. ಯಾರು ಸೊಪ್ಪುಗಳಿಂದಾಗಲಿ, ಹಾಲಿನ ಆಹಾರದಿಂದಾಗಲಿ ಕಾರ್ತಿಕಮಾಸವನ್ನು ಕಳೆಯುವರೊ, ಅವರು ವರ್ಷವನ್ನೆಲ್ಲ ಅದೇ ಆಹಾರದಿಂದಲೇ ಕಳೆದ ಪುಣ್ಯವನ್ನು ಪಡೆಯುವರು.

೯೮. ಕಾರ್ತಿಕಮಾಸದಲ್ಲಿ ಪ್ರತಿಯೊಬ್ಬ ಮಾನವನೂ ಎಲೆಗಳಲ್ಲಿಯೇ ಭೋಜನವನ್ನುಮಾಡಬೇಕು. ಕಂಚಿನ ತಟ್ಟೆಗಳನ್ನು ಖಂಡಿತವಾಗಿಯೂ ತ್ಯಜಿಸಬೇಕು. ಯಾವನು ಕಂಚಿನ ಪಾತ್ರೆಯಲ್ಲಿ ಭೋಜನವನ್ನು ಮಾಡುವನೊ, ಅವನಿಗೆ ವ್ರತಾಚರಣೆಯ ಫಲವು ಲಭಿಸುವುದಿಲ್ಲ.

೯೯. ಕಂಚಿನ ಪಾತ್ರೆಯ ಈ ನಿಯಮವನ್ನು ಕೈಗೊಂಡವನು ತುಪ್ಪದಿಂದ ತುಂಬಿರುವ ಕಂಚಿನ ಪಾತ್ರೆಯನ್ನು ದಾನಮಾಡಬೇಕು. ಕಾರ್ತಿಕದಲ್ಲಿ ಜೇನುತುಪ್ಪವನ್ನು ಸೇವಿಸಬಾರದು. ಅದು ಅತ್ಯಂತ ನೀಚವಾದ ಗತಿಗೆ ಸೆಳೆಯುವುದು.

೧೦೦. ಮಧುವನ್ನು ತ್ಯಾಗಮಾಡಿದವನು ಘೃತವನ್ನೂ ಸಕ್ಕರೆವೆರಸಿದ ಪಾಯಸವನ್ನೂ ದಾನಮಾಡಬೇಕು. ಈ ಮಾಸದಲ್ಲಿ ಅಭ್ಯಂಗನದಲ್ಲಾಗಲಿ ಅಡಿಗೆಯಲ್ಲಾಗಲಿ ಎಣ್ಣೆಯನ್ನುಪಯೋಗಿಸಬಾರದು.

೧೦೧. ನಿಷ್ಕಲ್ಮಷನಾದ ಅಗಸ್ತ್ಯನೆ! ಆ ತಿಂಗಳಲ್ಲಿ ಅಭ್ಯಂಜನದಲ್ಲಿಯೂ ಅಡಿಗೆಯಲ್ಲಿಯೂ ಎಣ್ಣೆಯನ್ನುಪಯೋಗಿಸುವುದರಿಂದ ಮನುಷ್ಯನು ನರಕವಾಸವನ್ನನುಭವಿಸುವನು. ತೈಲತ್ಯಾಗವನ್ನುಮಾಡಿದುದರ ಸೂಚಕವಾಗಿ ಒಂದು ಕೊಳಗದಳತೆಯ ಎಳ್ಳನ್ನು ಚಿನ್ನದ ದಕ್ಷಿಣೆಯೊಡನೆ ದಾನಮಾಡಬೇಕು.

ಕಾರ್ತಿಕೇ ಮತ್ಸ್ಯಭೋಜೀ ಯಃ ಸ ತೈಮಿಂಗಿಲಂ ಯೋನಿಮೃಚ್ಛತಿ ।
ಬಾಹುಲೇ ಮಾಂಸಭೋಜೀ ಯಃ ಸ ಕೃಮಿಃ ಪೂಯಶೋಣಿತೇ॥ ೧೦೨ ॥
ಮಾಂಸಾಶಿನೋಽಪಿ ಯೇ ಭೂಪಾಸ್ತ್ಯಜೇಯುಸ್ತೇಽಪಿ ಕಾರ್ತಿಕೇ ।
ಮತ್ಸ್ಯಮಾಂಸಾನಿ ತ್ಯಾಜ್ಯಾನಿ ಕಾರ್ತಿಕೇ ವ್ರತತತ್ಪರೈಃ ॥ ೧೦೩ ॥
ಮತ್ಸ್ಯಮಾಂಸಾದನಾದ್ದೋಷಾದ್ಪಹಿರ್ಭವತಿ ನಿಶ್ಚಿತಂ ।
ನಿಯಮೋ ಮತ್ಸ್ಯಮಾಂಸಾನಾಂ ದದ್ಯಾತ್ಕಾರ್ತಿಕಿಕೇ ವ್ರತೀ ।
ಕೂಷ್ಮಾಂಡಾನಿ ಸಮಾಷಾಣಿ ದಶಸ್ವರ್ಣಯುತಾನ್ಯಪಿ ॥ ೧೦೪ ॥
ಕಾರ್ತಿಕೇ ಮೌನಭೋಜೀ ಯಃ ಸೋಽಶ್ನಾತ್ಯಮೃತಮೇವ ಹಿ ।
ಸುಘಂಟಾಂ ಸತಿಲಾಂ ಮೌನೀ ಸ ಹಿರಣ್ಯಾಂ ಪ್ರದಾಪಯೇತ್ ॥ ೧೦೫ ॥
ಕಾರ್ತಿಕೇ ಲವಣಂ ತ್ಯಕ್ತ್ವಂ ಯೇನ ವ್ರತಭೃತಾ ಸತಾ ।
ತ್ಯಕ್ತಾಃ ಸರ್ವೇ ರಸಾಸ್ತೇನ ತತ್ತ್ಯಾಗೀ ಗಾಂ ಪ್ರದಾಪಯೇತ್ ॥ ೧೦೬ ॥
ಭೂಶಯ್ಯಾಂ ಕಾರ್ತಿಕೇ ಕುರ್ವನ್ನ ಭುವಂ ಸಂಸ್ಪೃಶೇದ್ವ್ರತೀ ।
ಪರ್ಯಂಕಂ ಭೂಶಯೋ ದದ್ಯಾತ್ಸತೂಲಂ ಸೋಪಧಾನಕಂ ॥ ೧೦೭ ॥

---

೧೦೨. ಯಾವನು ಕಾರ್ತಿಕಮಾಸದಲ್ಲಿ ಮತ್ಸ್ಯಾಹಾರವನ್ನು ಸೇವಿಸುವನೊ, ಅವನು ತಿಮಿ, ತಿಮಿಂಗಿಲಗಳ ಜನ್ಮವನ್ನು ತಾಳುವನು. ಮಾಂಸಭೋಜನವನ್ನು ಮಾಡಿದವನು ಕೀವುರಕ್ತಗಳಲ್ಲಿ ಕ್ರಿಮಿಯಾಗಿ ಜನಿಸುವನು.

೧೦೩. ಸಾಧಾರಣವಾಗಿ ಮಾಂಸಾಹಾರವನ್ನು ಸ್ವೀಕರಿಸುವ ರಾಜರೂ ಸಹ ಆ ಮಾಸದಲ್ಲಿ ಅದನ್ನು ತ್ಯಜಿಸುವರು. ಯಾವ ಮನುಷ್ಯನಾದರೂ ಮತ್ಸ್ಯ ಮಾಂಸಗಳನ್ನು ವರ್ಜಿಸಿದ ಹೊರತು ವ್ರತತತ್ಪರನಾಗಲಾರನು.

೧೦೪. ಮತ್ಸ್ಯಮಾಂಸಗಳನ್ನು ತಿಂದ ದೋಷದಿಂದ ಮನುಷ್ಯನು ಸಹವಾಸದೂರನಾಗುವುದು ನಿಶ್ಚಯವು. ಈ ನಿಯಮವನ್ನು ಸ್ವೀಕರಿಸಿದವನು ಮತ್ಸ್ಯವನ್ನೂ ಮಾಂಸವನ್ನೂ ದಾನಮಾಡಬೇಕು. ಅವುಗಳೊಂದಿಗೆ ಕುಂಬಳಕಾಯಿಗಳನ್ನೂ ಹತ್ತು ಸುವರ್ಣದಕ್ಷಿಣೆಯೊಡಗೊಂಡ ಉದ್ದು ಧಾನ್ಯವನ್ನೂ ಕೊಡಬೇಕು.

೧೦೫. ಕಾರ್ತಿಕಮಾಸದಲ್ಲಿ ಮೌನದಿಂದ ಊಟವನ್ನು ಮಾಡುವವನು ಅಮೃತವನ್ನೇ ಸೇವಿಸುವನು. ಮೌನವ್ರತದ ಸಾಫಲ್ಯಕ್ಕಾಗಿ ಒಳ್ಳೆಯ ಘಂಟೆಯನ್ನೂ ಎಳ್ಳನ್ನೂ ಹಿರಣ್ಯದ್ರವ್ಯದೊಡನೆ ದಾನಮಾಡಬೇಕು.

೧೦೬. ಕಾರ್ತಿಕದಲ್ಲಿ ಯಾವ ಸತ್ಪುರುಷನು ಭೋಜನದಲ್ಲಿ ಉಪ್ಪನ್ನು ತ್ಯಜಿಸುವನೊ, ಅವನು ಸರ್ವರಸಗಳನ್ನೂ ತ್ಯಜಿಸಿದವನಾಗುವನು. ಈ ವ್ರತವನ್ನು ಕೈಕೊಂಡವನು ಗೋದಾನವನ್ನು ಮಾಡಬೇಕು.

೧೦೭. ಭೂಮಿಯಲ್ಲಿ ಮಲಗುವವನು ಕಾರ್ತಿಕ ವ್ರತದ ಫಲವಾಗಿ ಪುನಃ

ದೀಪಂ ಯಃ ಕಾರ್ತಿಕೇ ದದ್ಯಾದಖಂಡಂ ಘೃತವರ್ತಿಕಂ ।
ಮೋಹಾಂಧತಮಸಂ ಪ್ರಾಪ್ಯ ಸ ನ ಗಚ್ಛತಿ ದುರ್ಗತಿಂ ॥ ೧೦೮ ॥
ಯಃ ಕುರ್ಯಾತ್ಕಾರ್ತಿಕೇ ಮಾಸೇ ರಜನ್ಯಾಂ ದೀಪಕೌಮುದೀಂ ।
ತಾಮಿಸ್ರಂ ಚಾಂಧತಾಮಿಸ್ರಂ ಸ ಸ ಪಶ್ಯೇತ್ಕದಾಚನ ॥ ೧೦೯ ॥
ಪಾಪಾಂಧಕಾರಸಂಕೃದ್ಧಃ ಕಾರ್ತಿಕೇ ದೀಪದಾನತಃ ।
ಕ್ರೋಧಾಂಧಕಾರಿತಮುಖಂ ಭಾಸ್ಕರೀಂ ಸ ನ ವೀಕ್ಷ್ಯತೇ ॥ ೧೧೦ ॥
ಸ ಉದ್ದ್ಯೋತಮಯಂ ಪಶ್ಯೇತ್ತ್ರೈಲೋಕ್ಯಂ ಸಚರಾಚರಂ ।
ಪ್ರಬೋಧಯೇನ್ಮಮಾಗ್ರೇ ಯೋ ದೀಪಂ ಸೋಜ್ಜ್ವಲವರ್ತಿಕಂ ॥ ೧೧೧ ॥
ಪಂಚಾಮೃತಾನಾಂ ಕಲಶೈರೂರ್ಜೇ ಮಾಂ ಸ್ನಾಪಯೇನ್ನರಃ ।
ಕ್ಷೀರಾಬ್ಧಿ ತಟಮಾಸಾದ್ಯ ವಸೇತ್ಕಲ್ಪಂ ಸ ಪುಣ್ಯವಾನ್ ॥ ೧೧೨ ॥
ಪ್ರತಿಕ್ಷಪಂ ಕಾರ್ತಿಕಿಕೇ ಕುರ್ವನ್ಜ್ಯೋತ್ಸ್ನಾಂ ಪ್ರದೀಪಜಾಂ ।
ಮಮಾಗ್ರೇ ಭಕ್ತಿಸಂಯುಕ್ತೋ ಗರ್ಭಧ್ವಾಂತಂ ನ ಸಂವಿಶೇತ್ ॥ ೧೧೩ ॥

---

ಭೂಲೋಕದ ಸಂಪರ್ಕವನ್ನು ಹೊಂದುವುದಿಲ್ಲ. ಭೂಶಯನವ್ರತಿಯಾದವನು ಮಂಚವೊಂದನ್ನು ಹಾಸಿಗೆ ತಲೆದಿಂಬುಗಳೊಡನೆ ದಾನಮಾಡಬೇಕು.

೧೦೮. ತುಪ್ಪದ ಬತ್ತಿಯಿಂದ ಕೂಡಿದ ಅಖಂಡದೀಪವನ್ನು ಯಾವನು ಕಾರ್ತಿಕಮಾಸದಲ್ಲಿ ಬೆಳಗಿಸುವನೊ, ಅವನು ಸಂಸಾರಮೋಹವೆಂಬ ಅಂಧಕಾರ ದಲ್ಲಿ ಬಿದ್ದು ದುರ್ಗತಿಯನ್ನು ಹೊಂದುವುದಿಲ್ಲ.

೧೦೯. ಯಾವನು ಕಾರ್ತಿಕಮಾಸದ ಕತ್ತಲೆಯ ರಾತ್ರಿಯಲ್ಲಿ ದೀಪಗಳ ಸಾಲುಗಳಿಂದ ಬೆಳದಿಂಗಳನ್ನುಂಟುಮಾಡುವನೊ, ಅವನು ಎಂದಿಗೂ ತಮಿಸ್ರ, ಅಂಧತಮಿಸ್ರಗಳೆಂಬ ನರಕಗಳನ್ನು ನೋಡುವುದಿಲ್ಲ.

೧೧೦. ಕಾರ್ತಿಕಮಾಸದಲ್ಲಿ ದೀಪದಾನವನ್ನುಮಾಡಲು ಪಾಪವೆಂಬ ಕಗ್ಗತ್ತಲೆಗೆ ವೈರಿಯಾಗುವನು. ಆ ಮಾನವನು ಕೋಪದಿಂದ ಕಪ್ಪಾದ ಯಮ ಧರ್ಮನ ಮುಖವನ್ನು ನೋಡುವುದಿಲ್ಲ.

೧೧೧. ಯಾವನು ನನ್ನ ಸನ್ನಿಧಿಯಲ್ಲಿ ಬತ್ತಿಯಿಂದ ಕೂಡಿದ ಉಜ್ಜ್ವಲ ವಾದ ದೀಪವನ್ನು ಬೆಳಗಿಸುವನೊ, ಅವನು ಸ್ಥಾವರ ಜಂಗಮಾತ್ಮಕವಾದ ಈ ಬ್ರಹ್ಮಾಂಡವೆಲ್ಲವನ್ನೂ ಚಿನ್ಮಯವಾದದ್ದಾಗಿಯೇ ಕಾಣುವನು.

೧೧೨. ಕಾರ್ತಿಕಮಾಸದಲ್ಲಿ ನನಗೆ (ಬಿಂದುಮಾಧವನಿಗೆ) ಪಂಚಾಮೃತ ಗಳ ಕಳಶಗಳಿಂದ ಅಭಿಷೇಕಗಳನ್ನುಮಾಡಿಸಿದ ಪುಣ್ಯವಂತನಾದ ಮನುಷ್ಯನು ಕ್ಷೀರಸಮುದ್ರದ ದಡವನ್ನು ಸೇರಿ ಕಲ್ಪಾಂತ್ಯದವರೆಗೂ ಅಲ್ಲಿಯೇ ಸೌಖ್ಯದಿಂದ ವಾಸಮಾಡುತ್ತಿರುವನು.

೧೧೩. ಕಾರ್ತಿಕಮಾಸದ ಪ್ರತಿಯೊಂದು ರಾತ್ರಿಯಲ್ಲಿಯೂ ನನ್ನ ಸನ್ನಿಧಿ

ಆಜ್ಯವರ್ತಿಕಮೂರ್ಜೇ ಯೋ ದೀಪಂ ಮೇಽಗ್ರೇ ಪ್ರಬೋಧಯೇತ್ ।
ಬುದ್ಧಿಭ್ರಂಶಂ ನ ಚಾಪ್ನೋತಿ ಮಹಾಮೃತ್ಯುಭಯೇ ಸತಿ ॥ ೧೧೪ ॥
ಕಾರ್ತಿಕೇ ಮಾಸಿ ಮೇ ಯಾತ್ರಾ ಯೈಃ ಕೃತಾ ಭಕ್ತಿತತ್ಪರೈಃ ।
ಬಿಂದುತೀರ್ಥೇ ಕೃತಸ್ನಾನೈಸ್ತೇಷಾಂ ಮುಕ್ತಿರ್ನ ದೂರತಃ ॥ ೧೧೫ ॥
ವ್ರತಿನಃ ಕಾರ್ತಿಕೇ ಮಾಸಿ ಸ್ನಾತಸ್ಯ ವಿಧಿವನ್ಮಮ ।
ದಾಮೋದರ ಗೃಹಾಣಾರ್ಘ್ಯಂ ದನುಜೇಂದ್ರನಿಷೂದನ ॥ ೧೧೬ ॥
ಸ್ನಾನೇ ನೈಮಿತ್ತಿಕೇ ಕೃಷ್ಣ ಕಾರ್ತಿಕೇ ಪಾಪಶೋಷಣೇ ।
ಗೃಹಾಣಾರ್ಘ್ಯಂ ಮಯಾ ದತ್ತಂ ರಾಧಯಾ ಸಹಿತೋ ಭವಾನ್ ॥ ೧೧೭ ॥
ಇಮೌ ಮಂತ್ರೌ ಸಮುಚ್ಚಾರ್ಯ ಯೋಽರ್ಘ್ಯಂ ಮಹ್ಯಂ ಪ್ರಯಚ್ಛತಿ ।
ಸುವರ್ಣರತ್ನಪುಷ್ಪಾಂಬುಯುಜಾ ಶಂಖೇನ ಪುಣ್ಯವಾನ್ ॥ ೧೧೮ ॥
ಸುವರ್ಣಪೂರ್ಣಪೃಥಿವೀ ಸಂಕಲ್ಪೋದಕಪೂರ್ವಕಂ ।
ತೇನ ದತ್ತಾ ಭವೇತ್ಸಮ್ಯಕ್ಸುಪಾತ್ರಾಯ ಸುಪರ್ವಣಿ ॥ ೧೧೯ ॥

---

ಯಲ್ಲಿ ದೀಪಮಾಲಿಕೆಯಿಂದ ಯಾವನು ಭಕ್ತಿಯುಕ್ತನಾಗಿ ಬೆಳಕನ್ನುಂಟುಮಾಡುವನೊ, ಅವನು ಪುನಃ ಗರ್ಭವಾಸವೆಂಬ ಅಂಧಕಾರವನ್ನು ಪ್ರವೇಶಿಸುವುದಿಲ್ಲ.

೧೧೪. ಆ ಮಾಸದಲ್ಲಿ ಯಾವನು ತುಪ್ಪದ ಬತ್ತಿಯ ದೀಪವನ್ನು ನನ್ನ ಇದಿರಿನಲ್ಲಿ ಹೊತ್ತಿಸಿಡುವನೊ, ಅವನಿಗೆ ಮರಣವು ಸನ್ನಿಹಿತವಾದ ಭಯಸ್ಥಾನದಲ್ಲಿಯೂ ಬುದ್ಧಿಭ್ರಂಶವುಂಟಾಗುವುದಿಲ್ಲವು.

೧೧೫. ಯಾವ ಮಾನವರು ಕಾರ್ತಿಕಮಾಸದಲ್ಲಿ ಭಕ್ತಿತತ್ಪರರಾಗಿ ಬಿಂದುತೀರ್ಥದಲ್ಲಿ ಸ್ನಾನವನ್ನುಮಾಡಿಕೊಂಡು ನನ್ನ ಮಹಾಯಾತ್ರೆಯನ್ನು ನಡೆಸುವರೊ, ಅವರಿಗೆ ಮೋಕ್ಷವು ಅನತಿದೂರದಲ್ಲಿಯೇ ಇರುವುದು.

೧೧೬. ದಾಮೋದರನೆ! ರಾಕ್ಷಸಶ್ರೇಷ್ಠಸಂಹಾರಕನೆ! ಕಾರ್ತಿಕಮಾಸದ ವ್ರತವನ್ನು ಕೈಕೊಂಡು ವಿಧ್ಯುಕ್ತರೀತಿಯಿಂದ ಸ್ನಾನವನ್ನುಮಾಡಿದ ನನ್ನ ಅರ್ಘ್ಯವನ್ನು ಸ್ವೀಕರಿಸು.

೧೧೭. ಕೃಷ್ಣನೆ! ಸಕಲಪಾತಕಗಳನ್ನು ನಾಶಗೊಳಿಸುವ ಕಾರ್ತಿಕಮಾಸದ ನಿಮಿತ್ತದಿಂದ ಸ್ನಾನಮಾಡಿದ ನನ್ನ ಈ ಅರ್ಘ್ಯವನ್ನು ರಾಧೆಯಿಂದೊಡಗೂಡಿದ ನೀನು ಸ್ವೀಕರಿಸು.

೧೧೮–೧೧೯. ಈ ಎರಡು ಮಂತ್ರಗಳನ್ನು ಪಠಿಸುತ್ತ ಚಿನ್ನ, ನವರತ್ನಗಳು, ಪುಷ್ಪಗಳು ಮತ್ತು ತೀರ್ಥೋದಕಗಳಿಂದ ಕೂಡಿದ ಶಂಖದಿಂದ ಯಾವ ಪುಣ್ಯವಂತನು ನನಗೆ ಅರ್ಘ್ಯಗಳನ್ನು ಕೊಡುವನೊ, ಅವನಿಗೆ ಉತ್ತಮಪರ್ವಕಾಲದಲ್ಲಿ ಸತ್ಪಾತ್ರನಾದವನಿಗೆ ಸಂಕಲ್ಪಪೂರ್ವಕವಾಗಿ ಸುವರ್ಣಮಯವಾದ ಭೂಮಂಡಲವನ್ನೇ ದಾನಮಾಡಿದ ಪುಣ್ಯವು ಲಭಿಸುವುದು.

ಏಕಾದಶೀಂ ಸಮಾಸಾದ್ಯ ಪ್ರಬೋಧಕರಣೀಂ ಮಮ ।
ಬಿಂದುತೀರ್ಥಕೃತಸ್ನಾನೋ ರಾತ್ರೌ ಜಾಗರಣಾನ್ವಿತಃ ॥ ೧೨೦ ॥
ದೀಪಾನ್ಪ್ರಬೋಧ್ಯ ಬಹುಶೋ ಮಾಮಲಂಕೃತ್ಯ ಶಕ್ತಿತಃ ।
ತೌರ್ಯತ್ರಿಕವಿನೋದೇನ ಪುರಾಣಶ್ರವಣಾದಿಭಿಃ ॥ ೧೨೧ ॥
ಮಹಾಮಹೋತ್ಸವಂ ಕೃತ್ವಾ ಯಾವತ್ಪೂರ್ಣಾತಿಥಿರ್ಭವೇತ್ ।
ತತ್ರಾನ್ನದಾನಂ ಬಹುಶಃ ಕೃತ್ವಾ ಮತ್ಪ್ರೀತಯೇ ನರಃ ॥ ೧೨೨ ॥
ಮಹಾಪಾತಕಯುಕ್ತೋಽಪಿ ಸ ವಿಶೇತ್ಪ್ರಮದೋದರಂ ।
ಬಿಂದುಮಾಧವನಾಮಾನಂ ಯೋ ಮಾಮತ್ರ ಸಮರ್ಚಯೇತ್ ॥ ೧೨೩ ॥
ಬಿಂದುತೀರ್ಥಕೃತಸ್ನಾನೋ ನಿರ್ವಾಣಂ ಸ ಹಿ ವಿಂದತಿ ।
ಆದಿಮಾಧವನಾಮಾಹಂ ಪೂಜ್ಯಃ ಸತ್ಯಯುಗೇ ಮುನೇ ॥ ೧೨೪ ॥
ಅನಂತಮಾಧವೋ ಜ್ಞೇಯಸ್ತ್ರೇತಾಯಾಂ ಸರ್ವಸಿದ್ಧಿದಃ ।
ಶ್ರೀದಮಾಧವಸಂಜ್ಞೋಽಹಂ ದ್ವಾಪರೇ ಪರಮಾರ್ಥಕೃತ್ ॥ ೧೨೫ ॥

---

೧೨೦. ಆ ಮಾಸದ ಶುಕ್ಲಪಕ್ಷದ ಏಕಾದಶಿಯ ದಿನವೇ ನನಗೆ ಉತ್ಥಾನೈಕಾದಶಿಯೆನಿಸುವುದು. ಆ ದಿನವು ಪ್ರಾಪ್ತವಾಗಲು ಮಾನವನು ಬಿಂದುತೀರ್ಥದಲ್ಲಿ ಸ್ನಾನವನ್ನುಮಾಡಿ ರಾತ್ರಿಯಲ್ಲಿ ಜಾಗರಣೆಯನ್ನುಮಾಡಬೇಕು.

೧೨೧. ದ್ವಾದಶಿಯ ಪ್ರಾತಃಕಾಲದಲ್ಲಿ ಅಸಂಖ್ಯಾಕಗಳಾದ ದೀಪಗಳನ್ನು ಬೆಳಗಿಸಿ ಶಕ್ತ್ಯನುಸಾರವಾಗಿ ನನ್ನ ಮೂರ್ತಿಯನ್ನಲಂಕರಿಸಿ, ಮಂಗಳವಾದ್ಯಗಳ ಘೋಷಗಳಿಂದಲೂ, ಪುರಾಣ ಶ್ರವಣಾದಿ ಸತ್ಕಾಲಕ್ಷೇಪಗಳಿಂದಲೂ ಸೂರ್ಯೋದಯವನ್ನು ನಿರೀಕ್ಷಿಸಬೇಕು.

೧೨೨. ಇಂತು ಪೌರ್ಣಮಿಯ ತಿಥಿಯು ಬರುವವರೆಗೂ ಅತ್ಯಂತ ವೈಭವ ಮಹೋತ್ಸವವನ್ನು ನಡೆಸಬೇಕು. ಅಂದಿನ ದಿನದಲ್ಲಿ ನನ್ನ ಸಂತೋಷಕ್ಕಾಗಿ ಭಕ್ತನಾದವನು ಸಕಲ ಮಾನವರಿಗೂ ಅನ್ನದಾನವನ್ನು ಮಾಡಬೇಕು.

೧೨೩–೧೨೪. ಅಂತಹ ಮನುಷ್ಯನು ಮಹಾಪಾತಕಗಳನ್ನು ಮಾಡಿದವನಾದರೂ ಪುನಃ ಸ್ತ್ರೀಯ ಜಠರವನ್ನು ಪ್ರವೇಶಿಸುವುದಿಲ್ಲ. ಬಿಂದುತೀರ್ಥದಲ್ಲಿ ಸ್ನಾನವನ್ನುಮಾಡಿ ಬಿಂದುಮಾಧವ ನಾಮಕನಾದ ನನ್ನನ್ನು ಇಲ್ಲಿ ಯಾವನು ಪೂಜಿಸುವನೊ, ಅವನು ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು. ಮಹಾಮುನಿಯಾದ ಅಗ್ನಿಬಿಂದುವೆ! ಸತ್ಯಯುಗದಲ್ಲಿ ನನ್ನನ್ನು ಆದಿಮಾಧವನೆಂಬ ಹೆಸರಿನಿಂದ ಪೂಜಿಸಬೇಕು.

೧೨೫. ತ್ರೇತಾಯುಗದಲ್ಲಿ ನಾನು ಸಕಲಾಭೀಷ್ಟಗಳನ್ನು ಕೊಡುವ ಅನಂತಮಾಧವನೆಂದು ತಿಳಿಯಬೇಕು. ದ್ವಾಪರದಲ್ಲಿ ಪರಮಪುರುಷಾರ್ಥಗಳನ್ನು ಕೈಗೂಡಿಸುವ ಶ್ರೀದಮಾಧವನೆಂಬ ಹೆಸರುಳ್ಳವನಾಗಿರುವೆನು.

ಕಲೌ ಕಲಿಮಲಧ್ವಂಸೀ ಜ್ಞೇಯೋಽಹಂ ಬಿಂದುಮಾಧವಃ ।
ಕಲೌ ಕಲ್ಮಷಸಂಪನ್ನಾ ನ ಮಾಂ ವಿಂದಂತಿ ಮಾನವಾಃ ॥ ೧೨೬ ॥
ಮಮೈವ ಮಾಯಯಾ ಮೂಢಾ ಭೇದವಾದಪರಾಯಣಾಃ ।
ಮಮ ಭಕ್ತಿಂ ಪ್ರಕುರ್ವಾಣಾ ಯೇ ವಿಶ್ವೇಶಂ ದ್ವಿಷಂತಿ ವೈ ॥ ೧೨೭ ॥
ವಿದ್ವಿಷೋ ಮಮ ತೇ ಜ್ಞೇಯಾಃ ಪಿಶಾಚಪದಗಾಮಿನಃ ।
ಪೈಶಾಚೀಂ ಯೋನಿಮಾಪ್ಯಾಪಿ ಕಾಲಭೈರವಶಾಸನಾತ್ ॥ ೧೨೮ ॥
ತ್ರಿಂಶದ್ವರ್ಷಸಹಸ್ರಾಣಿ ಉಷಿತ್ವಾ ದುಃಖಸಾಗರೇ ।
ವಿಶ್ವೇಶಾನುಗ್ರಹಾದೇವ ತತೋ ಮೋಕ್ಷಮವಾಪ್ನುಯುಃ ॥ ೧೨೯ ॥
ತಸ್ಮಾದ್ದ್ವೇಷೋ ನ ಕರ್ತವ್ಯೋ ವಿಶ್ವೇಶೇ ಪರಮಾತ್ಮನಿ ।
ವಿಶ್ವೇಶದ್ವೇಷಿಣಾಂ ಪುಂಸಾಂ ಪ್ರಾಯಶ್ಚಿತ್ತಂ ಯತೋ ನ ಹಿ ॥ ೧೩೦ ॥
ಮನಸಾಪಿ ಹಿ ವಿಶ್ವೇಶಂ ವಿದ್ವಿಷಂತೀಹ ಯೇಽಧಮಾಃ ।
ಅಧ್ಯಾಸತೇಽಂಧತಾಮಿಸ್ರಂ ಮೃತಾಸ್ತೇಽನ್ಯತ್ರ ಸಂತತಂ ॥ ೧೩೧ ॥

---

೧೨೬. ಕಲಿಯುಗದಲ್ಲಿ ಕಲಿಕಲ್ಮಷಗಳನ್ನೆಲ್ಲ ಧ್ವಂಸಮಾಡುವ ನಾನು ಬಿಂದುಮಾಧವನೆಂಬ ಹೆಸರುಳ್ಳವನೆಂದು ತಿಳಿಯಬೇಕು. ಕಲಿಕಾಲದಲ್ಲಿ ಕಲ್ಮಷಗಳಿಂದ ಕೂಡಿದ ಅಂತಃಕರಣಗಳುಳ್ಳ ಮಾನವರು ನನ್ನನ್ನು ಯಥಾರ್ಥವಾಗಿ ತಿಳಿಯಲಾರರು.

೧೨೭–೧೨೯. ಸರ್ವಮೋಹಕವಾದ ನನ್ನ ಮಾಯೆಯಿಂದಲೇ ಭ್ರಾಂತರಾಗಿ ಜೀವೇಶ್ವರರ ಭೇದಗಳನ್ನು ಅನುವಾದಮಾಡುವುದರಲ್ಲಿಯೇ ನಿರತರಾಗಿರುವರು. ನನ್ನಲ್ಲಿಯೇ ಭಕ್ತಿಯನ್ನು ಮಾಡುತ್ತ ಯಾರು ಮಹೇಶ್ವರನನ್ನು ದ್ವೇಷಿಸುವರೊ, ಅವರು ನನಗೂ ದ್ವೇಷ್ಯರೆಂದೇ ತಿಳಿಯಬೇಕು. ಅವರು ಪಿಶಾಚಪದವಿಯನ್ನು ಹೊಂದುವರು. ಪಿಶಾಚಜನ್ಮವನ್ನು ಪಡೆದಿದ್ದರೂ ಕಾಲಭೈರವನ ಅಪ್ಪಣೆಯಂತೆ ಮೂವತ್ತುಸಾವಿರ ವರ್ಷಗಳವರೆಗೂ ದುಃಖಸಮುದ್ರದಲ್ಲಿ ಮುಳುಗಿದವರಾಗಿ ಬಳಿಕ ವಿಶ್ವೇಶ್ವರನ ಅನುಗ್ರಹದಿಂದಲೇ ಮೋಕ್ಷವನ್ನು ಪಡೆಯುವರು.

೧೩೦. ಆದುದರಿಂದ ಸರ್ವರಿಗೂ ಅಂತರಾತ್ಮನಾದ ವಿಶ್ವೇಶ್ವರನಲ್ಲಿ ದ್ವೇಷವನ್ನು ಮಾಡಬಾರದು. ವಿಶ್ವೇಶ್ವರನನ್ನು ದ್ವೇಷಿಸುವ ಮಾನವರಿಗೆ ಯಾವ ಪ್ರಾಯಶ್ಚಿತ್ತವನ್ನೂ ಶಾಸ್ತ್ರಗಳಲ್ಲಿ ಹೇಳಿರುವುದಿಲ್ಲ.

೧೩೧. ಮನುಷ್ಯಾಧಮರು ಮನಸ್ಸಿನಲ್ಲಿಯೇ ಮಹಾದೇವನನ್ನು ದ್ವೇಷಿಸಿದರೂ ಕೂಡ ಮೃತರಾದ ಮೇಲೆ ಪರಲೋಕಗಳಲ್ಲಿ ಅಂಧತಮಿಸ್ರವೆಂಬ ನರಕದಲ್ಲಿ ಶಾಶ್ವತವಾದ ವಾಸವನ್ನನುಭವಿಸುವರು.

ಶಿವನಿಂದಾಪರಾ ಯೇ ಚ ಯೇ ಪಾಶುಪತನಿಂದಕಾಃ ।
ವಿದ್ವಿಷೋ ಮಮ ತೇ ಜ್ಞೇಯಾಃ ಪತಂತೋ ನರಕೇಽಶುಚೌ ॥ ೧೩೨ ॥
ಅಷ್ಟಾವಿಂಶತಿಕೋಟೀಷು ನರಕೇಷು ಕ್ರಮೇಣ ಹಿ ।
ಕಲ್ಪಂ ಕಲ್ಪಂ ವಸೇಯುಸ್ತೇ ಯೇ ವಿಶ್ವೇಶ್ವರನಿಂದಕಾಃ ॥ ೧೩೩ ॥
ವಿಶ್ವೇಶಾನುಗ್ರಹಂ ಪ್ರಾಪ್ಯ ಮುನೇಽಹಮಪಿ ಮುಕ್ತಿದಃ ।
ಮದ್ಭಕ್ತೈಸ್ತದ್ವಿಶೇಷೇಣ ಸೇವ್ಯೋ ವಿಶ್ವೇಶ್ವರೋಽನಿಶಂ ॥ ೧೩೪ ॥
ಇಯಂ ವಾರಾಣಸೀ ಜ್ಞೇಯಾ ಮುನೇ ಪಾಶುಪತಸ್ಥಲೀ ।
ತಸ್ಮಾತ್ಪಶುಪತಿಃ ಸೇವ್ಯಃ ಕಾಶ್ಯಾಂ ನಿಃಶ್ರೇಯಸಾರ್ಥಿಭಿಃ ॥ ೧೩೫ ॥
ಅತ್ರ ಪಂಚನದೇ ತೀರ್ಥೇ ಸ್ನಾತಿ ವಿಶ್ವೇಶ್ವರಃ ಸ್ವಯಂ ।
ಊರ್ಜೇ ಸದೈವ ಸಗಣಃ ಸಸ್ಕಂದಃ ಸಪರಿಚ್ಛದಃ ॥ ೧೩೬ ॥
ಬ್ರಹ್ಮಾ ಸವೇದಃ ಸಮುಖೋ ಬ್ರಹ್ಮಾಣ್ಯಾದ್ಯಾಶ್ಚ ಮಾತರಃ ।
ಸಪ್ತಾಬ್ಧಯಃ ಸಸರಿತಃ ಸ್ನಾಂತ್ಯೂರ್ಜೇ ಧೂತಪಾಪಕೇ ॥ ೧೩೭ ॥

---

೧೩೨. ಯಾರು ಶಿವನಿಂದೆಯನ್ನು ಮಾಡುವರೊ, ಅಥವಾ ಶಿವಭಕ್ತರ ನಿಂದೆಯನ್ನು ಮಾಡುವರೊ, ಅವರನ್ನು ನನ್ನ ಶತ್ರುಗಳೆಂದೇ ತಿಳಿಯಬೇಕು. ಅವರೆಲ್ಲರೂ ಕಶ್ಮಲಯುತವಾದ ನರಕದಲ್ಲಿ ಬೀಳುವರು.

೧೩೩. ವಿಶ್ವೇಶ್ವರನನ್ನು ನಿಂದಿಸುವ ಜೀವರು ಶಾಸ್ತ್ರೋಕ್ತಗಳಾಗಿರುವ ಇಪ್ಪತ್ತೆಂಟುಕೋಟಿ ನರಕಗಳಲ್ಲಿಯೂ ಕ್ರಮವಾಗಿ ಒಂದೊಂದರಲ್ಲಿಯೂ ಒಂದೊಂದು ಬ್ರಹ್ಮಕಲ್ಪದ ಕಾಲದವರೆಗೂ ಯಾತನೆಗಳನ್ನನುಭವಿಸುವರು.

೧೩೪. ಅಗ್ನಿಬಿಂದುವೆ! ವಿಶ್ವೇಶ್ವರನ ಅನುಗ್ರಹದಿಂದಲೇ ನಾನೂ ಸಹ ಜೀವರಿಗೆ ಮೋಕ್ಷಪ್ರದನಾಗಿರುವೆನು. ಆದುದರಿಂದ ನನ್ನ ಭಕ್ತರಾದವರು ವಿಶ್ವೇಶ್ವರನನ್ನು ಅಹೋರಾತ್ರಗಳಲ್ಲಿಯೂ ಅವಶ್ಯಕವಾಗಿ ಸೇವಿಸಬೇಕು.

೧೩೫. ಮುನಿವರ್ಯನೆ! ಈ ವಾರಾಣಸೀಕ್ಷೇತ್ರವು ಪಶುಪತಿಯ ಏಕಾಂತ ಸ್ಥಳವೆಂದು ತಿಳಿಯಬೇಕು. ಆದುದರಿಂದ ಮೋಕ್ಷಾಭಿಲಾಷಿಗಳಾದವರು ಕಾಶಿಯಲ್ಲಿ ಪಶುಪತಿಯನ್ನೇ ಉಪಾಸನೆಮಾಡಬೇಕು.

೧೩೬. ಕಾರ್ತಿಕಮಾಸವು ಪ್ರಾಪ್ತವಾಗಲು ಈ ಪಂಚನದ ತೀರ್ಥದಲ್ಲಿ ವಿಶ್ವೇಶ್ವರನು ತಾನೇ ನಿತ್ಯವೂ ಗಣಗಳಿಂದಲೂ, ಷಣ್ಮುಖನಿಂದಲೂ, ಪರಿವಾರದವರಿಂದಲೂ ಕೂಡಿಕೊಂಡು ಪ್ರಾತಃಸ್ನಾನವನ್ನು ಮಾಡುವನು.

೧೩೭. ವೇದಗಳಿಂದಲೂ ಯಜ್ಞಗಳಿಂದಲೂ ಕೂಡಿದ ಬ್ರಹ್ಮದೇವನೂ, ಬ್ರಾಹ್ಮಿಯೇ ಮುಂತಾದ ಸಪ್ತಮಾತೃಗಳೂ, ಏಳುಸಮುದ್ರಗಳ ಅಧಿಪತಿಗಳೂ, ನದ್ಯಭಿಮಾನಿದೇವತೆಗಳೂ ಎಲ್ಲರೂ ಕಾರ್ತಿಕಮಾಸದಲ್ಲಿ ಧೂತಪಾಪತೀರ್ಥದಲ್ಲಿ ಸ್ನಾನಮಾಡುವರು.

ಸಚೇತನಾಹಿ ಯಾವಂತಸ್ತ್ರೈಲೋಕ್ಯೇ ದೇಹಧಾರಿಣಃ ।
ತಾವಂತಃ ಸ್ನಾತುಮಾಯಾಂತಿ ಕಾರ್ತಿಕೇ ಧೂತಪಾಪಕೇ ॥ ೧೩೮ ॥
ಯೈರ್ನ ಪಂಚನದೇ ಸ್ನಾತಂ ಪ್ರಾಪ್ಯ ಕಾರ್ತಿಕಿಕಂ ಶುಭಂ ।
ಜಲಬುದ್ಬುದವತ್ತೇಷಾಂ ವೃಥಾ ಜನ್ಮ ಶರೀರಿಣಾಂ ॥ ೧೩೯ ॥
ಆನಂದಕಾನನಂ ಪುಣ್ಯಂ ಪುಣ್ಯಂ ಪಾಂಚನದಂ ತತಃ ।
ತತೋಽಪಿ ಮಮ ಸಾನ್ನಿಧ್ಯಮಗ್ನಿಬಿಂದೋ ಮಹಾಮುನೇ ॥ ೧೪೦ ॥
ಅನೇನೈವಾನುಮಾನೇನ ವಿದ್ಧಿ ಪಂಚನದಸ್ಯ ವೈ ।
ಮಹಿಮಾನಂ ಮಹಾಪ್ರಾಜ್ಞ ಸರ್ವತೀರ್ಥೋತ್ತಮೋತ್ತಮಂ ॥ ೧೪೧ ॥
ಶ್ರುತ್ವಾಪಿ ಯಂ ಮಹಾಪ್ರಾಜ್ಞೋ ಮಹಾಪಾಪೈಃ ಪ್ರಮುಚ್ಯತೇ ।
ವಿಷ್ಣೋರ್ಮುಖಾದಿತಿ ಶ್ರುತ್ವಾ ಸೋಽಗ್ನಿಬಿಂದುರ್ಮಹಾಮುನಿಃ॥ ೧೪೨ ॥
ಪುನಃ ಪ್ರಣಮ್ಯ ಪಪ್ರಚ್ಛ ಬಿಂದುಮಾಧವಮಚ್ಯುತಂ ॥ ೧೪೩ ॥

ಅಗ್ನಿಬಿಂದುರುವಾಚ :—

ಭಗವನ್ಶ್ರೋತುಮಿಚ್ಛಾಮಿ ಬಿಂದುಮಾಧವ ತದ್ವದ ।
ಕತಿಧಾ ತವ ರೂಪಾಣಿ ಕಾಶ್ಯಾಂ ಸಂತಿ ಜನಾರ್ದನ ॥ ೧೪೪ ॥

---

೧೩೮. ಮೂರು ಲೋಕಗಳಲ್ಲಿಯೂ ದೇಹಧಾರಿಗಳಾದ ಜೀವರು ಎಷ್ಟು ಇರುವರೊ, ಅವರೆಲ್ಲರೂ ಕಾರ್ತಿಕಮಾಸದ ಸ್ನಾನವನ್ನು ಧರ್ಮನದ ತೀರ್ಥದಲ್ಲಿ ಮಾಡಲು ಬಂದು ಸೇರುವರು.

೧೩೯. ಪವಿತ್ರವಾದ ಕಾರ್ತಿಕಮಾಸವನ್ನುಹೊಂದಿದರೂ ಯಾರು ಪಂಚನದ ತೀರ್ಥದಲ್ಲಿ ಸ್ನಾನವನ್ನು ಮಾಡುವುದಿಲ್ಲವೊ, ದೇಹಧಾರಣವನ್ನು ಮಾಡಿದ ಆ ಜೀವರ ಜನ್ಮವು ನೀರಿನಮೇಲೆ ಎದ್ದ ಗುಳ್ಳೆಯಂತೆ ವ್ಯರ್ಥವಾದುದೇ ಸರಿ.

೧೪೦. ಆನಂದವನಕ್ಷೇತ್ರವೇ ಪುಣ್ಯಪ್ರದವು. ಅದರಲ್ಲಿಯೂ ಪಂಚನದ ತೀರ್ಥವು ಶ್ರೇಷ್ಠವು. ಮಹಾ ಮುನಿಯಾದ ಅಗ್ನಿಬಿಂದುವೆ! ಅದಕ್ಕಿಂತಲೂ ಬಿಂದುಮಾಧವನಾದ ನನ್ನ ಸನ್ನಿಧಿಯು ಸರ್ವೋತ್ತಮವಾದುದು.

೧೪೧. ಮಹಾ ಪ್ರಾಜ್ಞನೆ! ಈ ಅನುಮಾನದಿಂದಲೇ ಪಂಚನದ ತೀರ್ಥದ ಅಪಾರವಾದ ಮಹಿಮೆಯನ್ನೂ ಅದು ಸಕಲ ತೀರ್ಥಗಳಲ್ಲಿಯೂ ಉತ್ತಮೋತ್ತಮವೆಂಬುದನ್ನೂ ನೀನೇ ಊಹಿಸಿಕೊಳ್ಳಬಹುದು.

೧೪೨–೧೪೩. ಈ ತೀರ್ಥದ ಮಹಿಮೆಯನ್ನು ಕೇಳುವುದರಿಂದಲೇ ಬುದ್ಧಿವಂತನಾದ ಮನುಷ್ಯನು ಮಹಾಪಾತಕಗಳಿಂದ ಮುಕ್ತನಾಗುವನು.'' ಇಂತೆಂದು ಮಹಾ ಮುನಿಯಾದ ಅಗ್ನಿಬಿಂದುವು ಶ್ರೀಮನ್ನಾರಾಯಣನ ಮುಖದಿಂದ ಕೇಳಿ ಬಿಂದುಮಾಧವನಿಗೆ ಮತ್ತೆ ಪ್ರಣಾಮವನ್ನು ಮಾಡಿ ಪ್ರಶ್ನಿಸಿದನು.

೧೪೪. ಅಗ್ನಿಬಿಂದುವು ಹೇಳುತ್ತಾನೆ:— ಷಡ್ಗುಣೈಶ್ವರ್ಯಾನ್ವಿತನಾದ

ಭವಿಷ್ಯಾಣ್ಯಪಿ ಕಾನೀಹ ತಾನಿ ಮೇ ಕಥಯಾಚ್ಯುತ ।
ಯಾನಿ ಸಂಪೂಜ್ಯ ತೇ ಭಕ್ತಾಃ ಪ್ರಾಪ್ಸ್ಯಂತಿ ಕೃತಕೃತ್ಯತಾಂ ॥ ೧೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಬಿಂದುಮಾಧವಾವಿರ್ಭಾವವರ್ಣನಂ" ನಾಮ ಷಷ್ಟಿತಮೋಽಧ್ಯಾಯಃ

---

ಬಿಂದುಮಾಧವ ರೂಪಿಯಾದ ಜನಾರ್ದನನೆ! ಈ ಕಾಶೀಕ್ಷೇತ್ರದಲ್ಲಿ ನಿನ್ನ ರೂಪಗಳು ಎಷ್ಟು ವಿಧಗಳಾಗಿರುವುವೆಂದು ಕೇಳಲು ಕುತೂಹಲವುಳ್ಳವನಾಗಿರುವೆನು. ಅದನ್ನು ನನಗೆ ತಿಳಿಸು.

೧೪೫. ಅಚ್ಯುತನೆ! ಮುಂದೆ ಹುಟ್ಟುವ ನಿನ್ನ ಭಕ್ತರು ಕೃತಕೃತ್ಯತೆಯನ್ನು ಪಡೆಯುವುದಕ್ಕಾಗಿ ಉಪಾಸನೆಮಾಡಲು ನೀನು ಭವಿಷ್ಯತ್ಕಾಲದಲ್ಲಿ ಯಾವ ರೂಪಗಳನ್ನು ಧರಿಸಿ ನೆಲಸುವೆಯೊ, ಅವುಗಳನ್ನೂ ನನಗೆ ವಿಸ್ತರಿಸಿ ಹೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಬಿಂದುಮಾಧವಾವಿರ್ಭಾವವರ್ಣನ"ವೆಂಬ ಅರುವತ್ತನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

## ಅಥೈಕಷಷ್ಟಿತಮೋಽಧ್ಯಾಯಃ

### ಬಿಂದುಮಾಧವಾವಿರ್ಭಾವಃ–ಮಾಧವಾಗ್ನಿಬಿಂದುಸಂವಾದಃ–ವೈಷ್ಣವತೀರ್ಥಮಾಹಾತ್ಮ್ಯವರ್ಣನಂ

ಅಗಸ್ತ್ಯ ಉವಾಚ: –

ಷಡಾಸ್ಯ ಮಾಧವಾಖ್ಯಾನಂ ಶ್ರುತಂ ಮೇ ಪಾಪನಾಶನಂ ।
ಮಹಿಮಾಪಿ ಶ್ರುತಃ ಶ್ರೇಯಾನ್ಸಮ್ಯಕ್ಪಂಚನದಸ್ಯ ವೈ || ೧ ||
ಯದಗ್ನಿಬಿಂದುನಾಪೃಚ್ಛಿ ಮಾಧವೋ ದೈತ್ಯಸೂದನಃ ।
ತಸ್ಯೋತ್ತರಂ ಸಮಾಖ್ಯಾಹಿ ಯಥಾ ಖ್ಯಾತಂ ಮಧುದ್ವಿಷಾ || ೨ ||

ಸ್ಕಂದ ಉವಾಚ :–

ಶೃಣ್ವಗಸ್ತ್ಯಮಹರ್ಷೇ ತ್ವಂ ವಕ್ಷ್ಯಮಾನಂ ಮಯಾಧುನಾ ।
ಮಾಧವೇನ ಯಥಾಚಕ್ಷಿ ಮುನಯೇ ಚಾಗ್ನಿಬಿಂದವೇ || ೩ ||

ಬಿಂದುಮಾಧವ ಉವಾಚ :–

ಆದೌ ಪಾದೋದಕೇ ತೀರ್ಥೇ ವಿದ್ಧಿ ಮಾಮಾದಿಕೇಶವಂ ।
ಅಗ್ನಿಬಿಂದೋ ಮಹಾಪ್ರಾಜ್ಞ ಭಕ್ತಾನಾಂ ಮುಕ್ತಿದಾಯಕಂ || ೪ ||
ಅವಿಮುಕ್ತೇಽಮೃತೇ ಕ್ಷೇತ್ರೇ ಯೇಽರ್ಚಯಂತ್ಯಾದಿಕೇಶವಂ ।
ತೇಽಮೃತತ್ವಂ ಭಜಂತ್ಯೇವ ಸರ್ವದುಃಖವಿವರ್ಜಿತಾಃ || ೫ ||

---

### ಕನ್ನಡದ ಅನುವಾದ

#### ಬಿಂದುಮಾಧವಾವಿರ್ಭಾವ-ಮಾಧವಾಗ್ನಿಬಿಂದುಸಂವಾದ–ವೈಷ್ಣವತೀರ್ಥಮಾಹಾತ್ಮ್ಯವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಷಡಾನನನೆ! ಪಾಪನಾಶಕವಾದ ಬಿಂದುಮಾಧವನ ಚರಿತ್ರೆಯನ್ನು ಕೇಳಿದೆನು. ಸರ್ವಶ್ರೇಯಸ್ಕಾರಕವಾದ ಪಂಚನದ ತೀರ್ಥದ ಮಹಿಮೆಯೂ ಚೆನ್ನಾಗಿ ನನ್ನಿಂದ ಶ್ರುತವಾಯಿತು.

೨. ದೈತ್ಯನಿಷೂದನನಾದ ಶ್ರೀಮನ್ನಾರಾಯಣನು ಅಗ್ನಿಬಿಂದುಮಹರ್ಷಿಗೆ ಹೇಳಿದ ಉತ್ತರವನ್ನು ಈಗ ನನಗೆ ಯಥಾವತ್ತಾಗಿ ತಿಳಿಸು.

೩. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮಹಾಮುನಿಯೆ! ಶ್ರೀ ಹರಿಯು ಮುನಿವರ್ಯನಾದ ಅಗ್ನಿಬಿಂದುವಿಗೆ ನಿರೂಪಿಸಿದುದನ್ನು ವಿವರಿಸುವೆನು. ನನ್ನ ಮಾತುಗಳನ್ನು ಕೇಳು.

೪. ಬಿಂದುಮಾಧವನು ಹೇಳುತ್ತಾನೆ:—ಮಹಾ ಬುದ್ಧಿಶಾಲಿಯಾದ ಅಗ್ನಿಬಿಂದುವೆ! ಮೊದಲು ನಾನು ಪಾದೋದಕ ತೀರ್ಥದಲ್ಲಿ ಭಕ್ತರಿಗೆ ಮೋಕ್ಷವನ್ನು ಕೊಡುವವನಾಗಿ ಆದಿಕೇಶವನೆಂಬ ಹೆಸರಿನಿಂದ ನೆಲಸಿರುವೆನು.

೫. ಶಾಶ್ವತವಾದ ಈ ಅವಿಮುಕ್ತ ಕ್ಷೇತ್ರದಲ್ಲಿ ಯಾರು ಆದಿಕೇಶವನನ್ನು

ಸಂಗಮೇಶಂ ಮಹಾಲಿಂಗಂ ಪ್ರತಿಷ್ಠಾಪ್ಯಾದಿಕೇಶವಃ ।
ದರ್ಶನಾದಘಹಂ ನೄಣಾಂ ಭುಕ್ತಿಂ ಮುಕ್ತಿಂ ದಿಶೇತ್ಸದಾ ॥ ೬ ॥
ಯಾಮ್ಯಾಂ ಪಾದೋದಕಚ್ಛ್ವೇತದ್ವೀಪತೀರ್ಥಂ ಮಹತ್ತರಂ ।
ತತ್ರಾಹಂ ಜ್ಞಾನದೋ ನೄಣಾಂ ಜ್ಞಾನಕೇಶವಸಂಜ್ಞಕಃ ॥ ೭ ॥
ಶ್ವೇತದ್ವೀಪೇ ನರಃ ಸ್ನಾತ್ವಾ ಜ್ಞಾನಕೇಶವಸನ್ನಿಧೌ ।
ನ ಜ್ಞಾನಾದ್ಭ್ರಶ್ಯತೇ ಕ್ವಾಪಿ ಜ್ಞಾನಕೇಶವಪೂಜನಾತ್ ॥ ೮ ॥
ತಾರ್ಕ್ಷ್ಯಕೇಶವನಾಮಾಹಂ ತಾರ್ಕ್ಷ್ಯತೀರ್ಥೇ ನರೋತ್ತಮೈಃ ।
ಪೂಜನೀಯಃ ಸದಾ ಭಕ್ತ್ಯಾ ತಾರ್ಕ್ಷ್ಯವತ್ತೇ ಪ್ರಿಯಾ ಮಮ ॥ ೯ ॥
ತತ್ರೈವ ನಾರದೇ ತೀರ್ಥೇಽಸ್ಮ್ಯಹಂ ನಾರದಕೇಶವಃ ।
ಬ್ರಹ್ಮವಿದ್ಯೋಪದೇಷ್ಟಾ ಚ ತತ್ತೀರ್ಥಪ್ಲುತವರ್ತ್ಮನಾಂ ॥ ೧೦ ॥
ಪ್ರಹ್ಲಾದತೀರ್ಥಂ ತತ್ರೈವ ನಾಮ್ನಾ ಪ್ರಹ್ಲಾದಕೇಶವಃ ।
ಭಕ್ತೈಃ ಸಮರ್ಚನೀಯೋಽಹಂ ಮಹಾಭಕ್ತಿಸಮೃದ್ಧಯೇ ॥ ೧೧ ॥

---

ಪೂಜಿಸುವರೊ, ಅವರು ಸಕಲ ದುಃಖಗಳಿಂದಲೂ ವರ್ಜಿತರಾಗಿ ನಾಶರಹಿತವಾದ ವೈಕುಂಠಲೋಕವನ್ನೇ ಸೇರುವರು.

೬. ಸಂಗಮೇಶ್ವರನೆಂಬ ಮಹಾಲಿಂಗವನ್ನು ಪ್ರತಿಷ್ಠೆಮಾಡಿದ ಆದಿಕೇಶವನು ದರ್ಶನಮಾತ್ರದಿಂದಲೇ ಮನುಷ್ಯರ ಪಾಪಗಳನ್ನು ಕಳೆದು ಐಹಿಕ ಭೋಗಗಳನ್ನೂ ಮೋಕ್ಷವನ್ನೂ ಯಾವಾಗಲೂ ಅನುಗ್ರಹಿಸುತ್ತಿರುವನು.

೭. ಈ ಪಾದೋದಕ ತೀರ್ಥಕ್ಕೆ ದಕ್ಷಿಣದಿಕ್ಕಿನಲ್ಲಿ ಮಹಾ ಫಲದಾಯಕವಾದ ಶ್ವೇತದ್ವೀಪತೀರ್ಥವಿರುವುದು. ಅಲ್ಲಿ ನಾನು ಜ್ಞಾನಕೇಶವನೆಂಬ ಹೆಸರುಳ್ಳವನಾಗಿ ಭಕ್ತರಿಗೆ ಜ್ಞಾನಪ್ರದನಾಗಿರುವೆನು.

೮. ಜ್ಞಾನಕೇಶವನ ಇದಿರಿನಲ್ಲಿರುವ ಶ್ವೇತದ್ವೀಪ ತೀರ್ಥದಲ್ಲಿ ಸ್ನಾನವನ್ನು ಮಾಡಿ ಜ್ಞಾನಕೇಶವನನ್ನು ಪೂಜಿಸಲು ಮನುಷ್ಯನಿಗೆ ಸಮ್ಯಜ್ಜ್ಞಾನವೆಂದಿಗೂ ತಿರೋಹಿತವಾಗುವುದಿಲ್ಲ.

೯. ತಾರ್ಕ್ಷ್ಯತೀರ್ಥದಲ್ಲಿ ನಾನು ತಾರ್ಕ್ಷ್ಯಕೇಶವನೆಂದು ಪ್ರಸಿದ್ಧನಾಗಿರುವೆನು. ಮನುಷ್ಯೋತ್ತಮರಾದವರು ನಿರಂತರವೂ ನನ್ನನ್ನು ಭಕ್ತಿಯುಕ್ತರಾಗಿ ಪೂಜಿಸಲು ಗರುಡನಂತೆಯೇ ನನಗೆ ಅತ್ಯಂತ ಪ್ರಿಯರಾಗುವರು.

೧೦. ಅದರ ಸಮೀಪದಲ್ಲಿಯೇ ನಾರದ ತೀರ್ಥವಿರುವುದು. ಅಲ್ಲಿ ನಾನು ನಾರದ ಕೇಶವನಾಗಿ ಪ್ರತಿಷ್ಠಿತನಾಗಿರುವೆನು. ಆ ತೀರ್ಥದಲ್ಲಿ ಮುಳುಗಿದ ದೇಹವುಳ್ಳವರಿಗೆ ನಾನು ಬ್ರಹ್ಮವಿದ್ಯೆಯನ್ನು ಉಪದೇಶಮಾಡುವೆನು.

೧೧. ಅಲ್ಲಿಯೇ ಇರುವ ಪ್ರಹ್ಲಾದ ತೀರ್ಥದಲ್ಲಿ ನಾನು ಪ್ರಹ್ಲಾದಕೇಶವನಾಗಿರುವೆನು. ಭಕ್ತರು ನನ್ನನ್ನು ವೈಭವದಿಂದ ಅರ್ಚಿಸಲು ಮುಕ್ತಿದಾಯಕವಾದ ಭಕ್ತಿಯ ಉತ್ತರೋತ್ತರಾಭಿವೃದ್ಧಿಯನ್ನು ಕೊಡುವೆನು.

ತೀರ್ಥೇಽಂಬರೀಷೇ ತತ್ರಾಹಂ ನಾಮ್ನೈವಾದಿತ್ಯಕೇಶವಃ ।
ಪಾತಕಧ್ವಾಂತನಿಚಯಂ ಧ್ವಂಸಯಾಮೀಕ್ಷಣಾದಪಿ ॥ ೧೨ ॥
ದತ್ತಾತ್ರೇಯೇಶ್ವರಾದ್ಯಾಮ್ಯಾಮಹಮಾದಿಗದಾಧರಃ ।
ಹರಾಮಿ ತತ್ರ ಭಕ್ತಾನಾಂ ಸಂಸಾರಗದಸಂಚಯಂ ॥ ೧೩ ॥
ತತ್ರೈವ ಭಾರ್ಗವೇ ತೀರ್ಥೇ ಭೃಗುಕೇಶವನಾಮತಃ ।
ಕಾಶೀನಿವಾಸಿನಃ ಪುಂಸೋ ಬಿಭರ್ಮಿ ಚ ಮನೋರಥೈಃ ॥ ೧೪ ॥
ವಾಮನಾಖ್ಯೇ ಮಹಾತೀರ್ಥೇ ಮನಃಪ್ರಾರ್ಥಿತದೇ ಶುಭೇ ।
ಪೂಜ್ಯೋಽಹಂ ಶುಭಮಿಚ್ಛದ್ಭಿರ್ನಾಮ್ನಾ ವಾಮನಕೇಶವಃ ॥ ೧೫ ॥
ನರನಾರಾಯಣೇ ತೀರ್ಥೇ ನರನಾರಾಯಣಾತ್ಮಕಂ ।
ಭಕ್ತಾಃ ಸಮರ್ಚ್ಯ ಮಾಂ ಸ್ಯುರ್ವೈ ನರನಾರಾಯಣಾತ್ಮಕಾಃ ॥ ೧೬ ॥
ತೀರ್ಥೇ ಯಜ್ಞವರಾಹಾಖ್ಯೇ ಯಜ್ಞವಾರಾಹಸಂಜ್ಞಕಃ ।
ನರೈಃ ಸಮರ್ಚನೀಯೋಽಹಂ ಸರ್ವಯಜ್ಞಫಲೇಪ್ಸುಭಿಃ ॥ ೧೭ ॥
ವಿದಾರನರಸಿಂಹೋಽಹಂ ಕಾಶೀವಿಘ್ನವಿದಾರಣಃ ।
ತನ್ನಾಮ್ನಿ ತೀರ್ಥೇ ಸಂಸೇವ್ಯಸ್ತೀರ್ಥೋಪದ್ರವಶಾಂತಯೇ ॥ ೧೮ ॥

---

೧೨. ಅಂಬರೀಷ ತೀರ್ಥದಲ್ಲಿ ನಾನು ಆದಿತ್ಯಕೇಶವನಾಗಿರುವೆನು. ಒಂದು ಕ್ಷಣ ಮಾತ್ರವಾದರೂ ನನ್ನನ್ನು ಸೇವಿಸಿದವರಿಗೆ ಪಾತಕಗಳೆಂಬ ಅಂಧಕಾರ ಸಮೂಹವನ್ನೆಲ್ಲ ಧ್ವಂಸಗೊಳಿಸುವೆನು.

೧೩. ದತ್ತಾತ್ರೇಯೇಶ್ವರನಿಗೆ ದಕ್ಷಿಣದಲ್ಲಿ ನಾನು ಆದಿಗದಾಧರನಾಗಿ ನೆಲಸಿರುವೆನು. ಅಲ್ಲಿ ಸೇವಿಸಿದ ಭಕ್ತರ ಸಂಸಾರ ಕ್ಲೇಶರಾಶಿಯನ್ನೆಲ್ಲ ಪರಿಹರಿಸುವೆನು.

೧೪. ಭಾರ್ಗವತೀರ್ಥದಲ್ಲಿ ಭೃಗುಕೇಶವನಾಮಕನಾಗಿರುವೆನು. ಕಾಶೀನಿವಾಸಿಯಾದ ಮನುಷ್ಯನ ಸಕಲ ಮನೋರಥಗಳನ್ನೂ ಪೂರ್ಣಗೊಳಿಸುವೆನು.

೧೫. ಸ್ನಾನಮಾಡಿದವರ ಅಭೀಪ್ಸಿತಗಳನ್ನು ಕೈಗೂಡಿಸುವ ವಾಮನವೆಂಬ ತೀರ್ಥದಲ್ಲಿ ವಾಮನಕೇಶವನೆಂಬ ಹೆಸರಿನಿಂದ ನೆಲೆಗೊಂಡಿರುವ ನನ್ನನ್ನು ಮಂಗಳಾಕಾಂಕ್ಷಿಗಳಾದ ಎಲ್ಲರೂ ಪೂಜಿಸಬೇಕು.

೧೬. ನರನಾರಾಯಣತೀರ್ಥದಲ್ಲಿ ನರನಾರಾಯಣರೂಪದಿಂದಿರುವ ನನ್ನನ್ನು ಭಕ್ತರು ಪೂಜಿಸಲು ನರನಾರಾಯಣರ ಸಾರೂಪ್ಯವನ್ನೇ ಪಡೆಯುವರು.

೧೭. ಯಜ್ಞವರಾಹ ತೀರ್ಥದಲ್ಲಿ ನಾನು ಯಜ್ಞವರಾಹರೂಪದಿಂದಿರುವೆನು. ಸಕಲ ಯಜ್ಞಗಳನ್ನು ಸಾಂಗವಾಗಿ ನೆರವೇರಿಸಿದ ಫಲವನ್ನು ಪಡೆಯಬೇಕಾದರೆ ಮನುಷ್ಯರು ನನ್ನನ್ನು ಅಲ್ಲಿ ಷೋಡಶೋಪಚಾರಗಳಿಂದ ಪೂಜಿಸಬೇಕು.

೧೮. ಕಾಶೀಕ್ಷೇತ್ರದ ಸಕಲ ವಿಘ್ನಗಳನ್ನೂ ನಾಶಮಾಡುವವನಾಗಿ ನಾನು

ಗೋಪೀಗೋವಿಂದತೀರ್ಥೇ ತು ಗೋಪೀಗೋವಿಂದಸಂಜ್ಞಕಂ ।
ಸಮರ್ಚ್ಯ ಮಾಂ ಸರೋ ಭಕ್ತ್ಯಾ ಮಮ ಮಾಯಾಂ ನ ಸಂಸ್ಪೃಶೇತ್ ॥
ಮುನೇ ಲಕ್ಷ್ಮೀನೃಸಿಂಹೋಽಸ್ಮಿ ತೀರ್ಥೇ ತಸ್ಮಿನ್ನಿ ಪಾವನೇ ।
ದಿಶಾಮಿ ಭಕ್ತಿಯುಕ್ತೇಭ್ಯಃ ಸದಾ ನೈಃಶ್ರೇಯಸೀಂ ಶ್ರಿಯಂ ॥ ೨೦ ॥
ಶೇಷಮಾಧವನಾಮಾಹಂ ಶೇಷತೀರ್ಥೇಽಘಹಾರಿಣಿ ।
ವಿಶ್ರಾಣಯಾಮ್ಯಶೇಷಾಂಶ್ಚ ವಿಶೇಷಾನ್ಭಕ್ತಚಿಂತಿತಾನ್ ॥ ೨೧ ॥
ಶಂಖಮಾಧವತೀರ್ಥೇ ಚ ಸ್ನಾತ್ವಾ ಮಾಂ ಶಂಖಮಾಧವಂ ।
ಶಂಖೋದಕೇನ ಸಂಸ್ನಾಪ್ಯ ಭವೇಚ್ಛಂಖನಿಧೇಃ ಪತಿಃ ॥ ೨೨ ॥
ಹಯಗ್ರೀವೇ ಮಹಾತೀರ್ಥೇ ಮಾಂ ಹಯಗ್ರೀವಕೇಶವಂ ।
ಪ್ರಣಮ್ಯ ಪ್ರಾಪ್ನುಯಾನ್ನೂನಂ ತದ್ವಿಷ್ಣೋಃ ಪರಮಂ ಪದಂ ॥ ೨೩ ॥

---

ವಿದಾರಣನರಸಿಂಹನೆಂಬ ಹೆಸರಿನಿಂದ ಅದೇ ಹೆಸರಿನ ತೀರ್ಥದ ಬಳಿಯಲ್ಲಿ ನೆಲಸಿರುವೆನು. ತೀರ್ಥಸೇವೆಗಳ ವಿಘ್ನಗಳ ಉಪಶಾಂತಿಗಾಗಿ ಭಕ್ತರು ನನ್ನನ್ನು ಸೇವಿಸಬೇಕು.

೧೯. ಗೋಪೀಗೋವಿಂದತೀರ್ಥದಲ್ಲಿ ನಾನು ಗೋಪೀಗೋವಿಂದನೆಂದೇ ಪ್ರಸಿದ್ಧನಾಗಿರುವೆನು. ನನ್ನನ್ನು ಭಕ್ತಿಯಿಂದ ಪೂಜಿಸಿದ ನರನು ನನ್ನ ಮಾಯೆಯ ಬಂಧನಕ್ಕೆ ಸಿಕ್ಕಲಾರನು.

೨೦. ಅಗಸ್ತ್ಯಮುನಿಯೆ! ನಾನು ಲಕ್ಷ್ಮೀನೃಸಿಂಹತೀರ್ಥದಲ್ಲಿ ಅದೇ ಹೆಸರಿನಿಂದ ಪ್ರತಿಷ್ಠಿತನಾಗಿರುವೆನು. ಪವಿತ್ರವಾದ ಆ ತೀರ್ಥದಲ್ಲಿ ಭಕ್ತಿಯುಕ್ತರಾದವರಿಗೆ ನಾನು ಯಾವಾಗಲೂ ಮೋಕ್ಷರೂಪವಾದ ಐಶ್ವರ್ಯವನ್ನು ಕೊಡುತ್ತಿರುವೆನು.

೨೧. ಪಾಪಾಪಹಾರಕವಾದ ಶೇಷತೀರ್ಥದಲ್ಲಿ ನಾನು ಶೇಷಮಾಧವನೆಂಬ ಹೆಸರಿನಿಂದಿರುವೆನು. ನನ್ನ ಭಕ್ತರು ಮನಸ್ಸಿನಲ್ಲಿ ಕೋರುವ ಸಕಲ ಅಭೀಪ್ಸಿತಗಳನ್ನೂ ನೆರವೇರಿಸುತ್ತಿರುವೆನು.

೨೨. ಶಂಖಮಾಧವ ತೀರ್ಥದಲ್ಲಿರುವ ಶಂಖಮಾಧವನಾಮಕಮೂರ್ತಿಯನ್ನು ತೀರ್ಥಸ್ನಾತರಾದ ಯಾವ ಭಕ್ತರು ಶಂಖೋದಕದಿಂದ ಅಭಿಷೇಕ ಮಾಡುವರೊ, ಅವರು ಶಂಖ ಸಂಖ್ಯೆಯ (ಒಂದು ಲಕ್ಷಕೋಟಿಗಳ) ಐಶ್ವರ್ಯಕ್ಕೆ ಅಧಿಪತಿಗಳಾಗುವರು.

೨೩. ಹಯಗ್ರೀವನೆಂಬ ಮಹಾತೀರ್ಥದಲ್ಲಿ ಹಯಗ್ರೀವಕೇಶವನೆನಿಸಿರುವ ನನ್ನನ್ನು ಭಕ್ತಿಯಿಂದ ನಮಸ್ಕರಿಸಿದವರಿಗೆ ಖಂಡಿತನಾಗಿಯೂ ಮಹಾವಿಷ್ಣುವಿನ ಪರಮಪದವಾದ ವೈಕುಂಠದಲ್ಲಿ ವಾಸವು ಲಭಿಸುವುದು.

ಭೀಷ್ಮಕೇಶವನಾಮಾಹಂ ವೃದ್ಧಕಾಲೇಶಪಶ್ಚಿಮೇ ।
ಉಪಸರ್ಗಾನ್ಹರೇ ಭೀಷ್ಮಾನ್ಸೇವಿತೋ ಭಕ್ತಿಯುಕ್ತಿತಃ ॥ ೨೪ ॥
ನಿರ್ವಾಣಕೇಶವಶ್ಚಾಹಂ ಭಕ್ತನಿರ್ವಾಣಸೂಚಕಃ ।
ಲೋಲಾರ್ಕಾದುತ್ತರೇ ಭಾಗೇ ಲೋಲತ್ವಂ ಚೇತಸೋ ಹರೇ ॥ ೨೫ ॥
ವಂದ್ಯಸ್ತ್ರಿಲೋಕಸುಂದರ್ಯಾ ಯಾಮ್ಯಾಂ ಯೋ ಮಾಂ ಸಮರ್ಚಯೇತ್।
ಕಾಶ್ಯಾಂ ಖ್ಯಾತಂ ತ್ರಿಭುವನಕೇಶವಂ ನ ಸ ಗರ್ಭಭಾಕ್ ॥ ೨೬ ॥
ಜ್ಞಾನವಾಪ್ಯಾಃ ಪುರೋಭಾಗೇ ವಿದ್ಧಿ ಮಾಂ ಜ್ಞಾನಮಾಧವಂ ।
ತತ್ರ ಮಾಂ ಭಕ್ತಿತೋಽಭ್ಯರ್ಚ್ಯ ಜ್ಞಾನಂ ಪ್ರಾಪ್ನೋತಿ ಶಾಶ್ವತಂ ॥ ೨೭ ॥
ಶ್ವೇತಮಾಧವಸಂಜ್ಞೋಽಹಂ ವಿಶಾಲಾಕ್ಷ್ಯಾಃ ಸಮೀಪತಃ ।
ಶ್ವೇತದ್ವೀಪೇಶ್ವರಂ ರೂಪಂ ಕುರ್ಯಾಂ ಭಕ್ತ್ಯಾ ಸಮರ್ಚಿತಃ ॥ ೨೮ ॥
ಉದಗ್ದಶಾಶ್ವಮೇಧಾತ್ತು ಪ್ರಯಾಗಾಖ್ಯಂ ಚ ಮಾಧವಂ ।
ಪ್ರಯಾಗತೀರ್ಥೇ ಸುಸ್ನಾತೋ ದೃಷ್ಟ್ವಾ ಪಾಪೈಃ ಪ್ರಮುಚ್ಯತೇ ॥ ೨೯ ॥

---

೨೪. ವೃದ್ಧಕಾಳೇಶ್ವರನಿಗೆ ಪಶ್ಚಿಮದಲ್ಲಿ ನಾನು ಭೀಷ್ಮಕೇಶವನೆಂಬ ಹೆಸರಿನಿಂದ ಕೂಡಿರುವೆನು. ಭಕ್ತಿಭಾವದಿಂದ ಸೇವಿಸಿದವರ ಅತಿಘೋರಗಳಾದ ಕಷ್ಟಗಳನ್ನೂ ಅನಾಯಾಸವಾಗಿಯೇ ಪರಿಹರಿಸುವೆನು.

೨೫. ನಿರ್ವಾಣಕೇಶವನಾಗಿ ನಾನು ಭಕ್ತರಿಗೆ ಮೋಕ್ಷಮಾರ್ಗವನ್ನು ತೋರಿಸಿಕೊಡುತ್ತ ಲೋಲಾರ್ಕನಿಗೆ ಉತ್ತರದಲ್ಲಿ ನೆಲಸಿ ಅವರ ಮನಸ್ಸಿನ ಚಪಲತೆಯನ್ನು ಪರಿಹರಿಸುತ್ತಿರುವೆನು.

೨೬. ತ್ರಿಲೋಕಸುಂದರಿಯ ದಕ್ಷಿಣದಲ್ಲಿ ನಾನು ತ್ರಿಭುವನ ಕೇಶವನೆಂಬ ಹೆಸರಿನಿಂದ ಲೋಕವಂದ್ಯನಾಗಿರುವೆನು. ಕಾಶೀಕ್ಷೇತ್ರದಲ್ಲಿ ಪ್ರಸಿದ್ಧವಾದ ನನ್ನ ಈ ಮೂರ್ತಿಯನ್ನು ಅರ್ಚನೆಮಾಡಿದವನು ಪುನಃ ತಾಯಿಯ ಗರ್ಭದಲ್ಲಿ ವಾಸ ಮಾಡುವುದಿಲ್ಲ.

೨೭. ಜ್ಞಾನವಾಪಿಯ ಮುಂದುಗಡೆಯಲ್ಲಿ ನಾನು ಜ್ಞಾನಮಾಧವರೂಪ ದಿಂದಿರುವೆನೆಂದು ತಿಳಿ. ಅಲ್ಲಿ ನನ್ನನ್ನು ಭಕ್ತಿಯಿಂದ ಪೂಜಿಸಲು ಮನುಷ್ಯನು ಅಖಂಡವಾದ ಜ್ಞಾನವನ್ನು ಪಡೆಯುವನು.

೨೮. ವಿಶಾಲಾಕ್ಷಿಯ ಸಮೀಪದಲ್ಲಿ ನಾನು ಶ್ವೇತಮಾಧವನೆಂದು ಕರೆ ಯಲ್ಪಡುತ್ತಿರುವೆನು. ಭಕ್ತಿಯಿಂದ ಪೂಜಿತನಾದರೆ ನನ್ನ ಭಕ್ತನನ್ನು ಶ್ವೇತ ದ್ವೀಪದ ಅಧಿಪತಿಯರೂಪವುಳ್ಳವನನ್ನಾಗಿಯೇ ಮಾಡುವೆನು.

೨೯. ದಶಾಶ್ವಮೇಧತೀರ್ಥಕ್ಕೆ ಉತ್ತರದಲ್ಲಿ ನಾನು ಪ್ರಯಾಗಮಾಧವ ನೆಂಬ ಹೆಸರಿನಿಂದಿರುವೆನು. ಪ್ರಯಾಗತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ನನ್ನ ದರ್ಶನವನ್ನು ಪಡೆದವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಪ್ರಯಾಗಗಮನೇ ಪುಂಸಾಂ ಯತ್ಫಲಂ ತಪಸಿ ಶ್ರುತಂ ।
ತತ್ಫಲಂ ಸ್ಯಾದ್ದಶಗುಣಮತ್ರ ಸ್ನಾತ್ವಾ ಮಮಾಗ್ರತಃ ॥ ೩೦ ॥
ಗಂಗಾಯಮುನಯೋಃ ಸಂಗೇ ಯತ್ಪುಣ್ಯಂ ಸ್ನಾನಕಾರಿಣಾಂ ।
ಕಾಶ್ಯಾಂ ಮತ್ಸನ್ನಿಧಾವತ್ರ ತತ್ಪುಣ್ಯಂ ಸ್ಯಾದ್ದಶೋತ್ತರಂ ॥ ೩೧ ॥
ದಾನಾನಿ ರಾಹುಗ್ರಸ್ತೇಽರ್ಕೇ ದದತಾಂ ಯತ್ಫಲಂ ಲಭೇತ್ ।
ಕುರುಕ್ಷೇತ್ರೇ ಹಿ ಯತ್ಕಾಶ್ಯಾಮತ್ರೈವ ಸ್ಯಾದ್ದಶಾಧಿಕಂ ॥ ೩೨ ॥
ಗಂಗೋತ್ತರವಹಾ ಯತ್ರ ಯಮುನಾ ಪೂರ್ವವಾಹಿನೀ ।
ತತ್ಸಂಭೇದಂ ನರಃ ಪ್ರಾಪ್ಯ ಮುಚ್ಯತೇ ಬ್ರಹ್ಮಹತ್ಯಯಾ ॥ ೩೩ ॥
ವಪನಂ ತತ್ರ ಕರ್ತವ್ಯಂ ಪಿಂಡದಾನಂ ಚ ಭಾವತಃ ।
ದೇಯಾನಿ ತತ್ರ ದಾನಾನಿ ಮಹಾಫಲಮಭೀಪ್ಸುನಾ ॥ ೩೪ ॥
ಗುಣಾಃ ಪ್ರಜಾಪತಿಕ್ಷೇತ್ರೇ ಯೇ ಸರ್ವೇ ಸಮುದೀರಿತಾಃ ।
ಅವಿಮುಕ್ತೇ ಮಹಾಕ್ಷೇತ್ರೇಽಸಂಖ್ಯಾತಾಶ್ಚ ಭವಂತಿ ಹಿ ॥ ೩೫ ॥

---

೩೦. ತಪಸ್ಸನ್ನು ಮಾಡುವ ಮನುಷ್ಯನು ಪ್ರಯಾಗಕ್ಷೇತ್ರವನ್ನು ಸೇರುವುದರಿಂದ ಯಾವ ಫಲವನ್ನು ಪಡೆಯುವನೊ, ಅದರ ಹತ್ತರಷ್ಟು ಫಲವನ್ನು ನನ್ನ ಮುಂದಿರುವ ಈ ತೀರ್ಥದ ಸ್ನಾನದಿಂದ ಪಡೆಯುವನು.

೩೧. ಗಂಗಾಯಮುನಾನದಿಗಳ ಸಂಗಮದಲ್ಲಿ ಸ್ನಾನಮಾಡಿದವರಿಗೆ ಯಾವ ಪುಣ್ಯವು ಶಾಸ್ತ್ರಗಳಲ್ಲಿ ಉಕ್ತವಾಗಿದೆಯೊ, ಅದಕ್ಕೂ ಹತ್ತರಷ್ಟು ಮಿಗಿಲಾದ ಪುಣ್ಯವು ಕಾಶೀಕ್ಷೇತ್ರದಲ್ಲಿ ನನ್ನ ಸನ್ನಿಧಿಯಲ್ಲಿ ಸ್ನಾನಮಾಡಿದವರಿಗೆ ಲಭಿಸುವುದು.

೩೨. ಸೂರ್ಯನು ರಾಹುಗ್ರಸ್ತನಾಗಿರಲು ಕುರುಕ್ಷೇತ್ರದಲ್ಲಿ ದಾನಗಳನ್ನು ಮಾಡುವವರಿಗೆ ಯಾವ ಫಲವುಂಟೊ, ಅದಕ್ಕೂ ದಶಗುಣಿತವಾದ ಫಲವು ಕಾಶೀ ದಶಾಶ್ವಮೇಧತೀರ್ಥಸ್ನಾನದಿಂದ ಲಭಿಸುವುದು.

೩೩. ಗಂಗಾನದಿಯು ಉತ್ತರವಾಹಿನಿಯೂ ಯಮುನೆಯು ಪೂರ್ವವಾಹಿನಿಯೂ ಆಗಿ ಈ ಎರಡು ನದಿಗಳೂ ಸೇರುವ ಸ್ಥಳವನ್ನು ಸೇರಿದ ಮನುಷ್ಯನು ಬ್ರಹ್ಮಹತ್ಯೆಯಿಂದಲೂ ಮುಕ್ತನಾಗುವನು.

೩೪. ಆ ಸಂಗಮದಲ್ಲಿ ಯಾತ್ರಿಕನು ಮುಂಡನವನ್ನು ಮಾಡಿಸಿಕೊಂಡು ಭಕ್ತಿಯಿಂದ ಪಿತೃದೇವತೆಗಳಿಗೆ ಪಿಂಡಗಳನ್ನರ್ಪಿಸಬೇಕು. ಉತ್ತಮಗತಿಯನ್ನು ಅಪೇಕ್ಷಿಸುವ ಮನುಷ್ಯನು ಅಲ್ಲಿ ಅನೇಕ ವಿಧಗಳಾದ ದಾನಗಳನ್ನು ಕೊಡಬೇಕು.

೩೫. ಬ್ರಹ್ಮಾವರ್ತಕ್ಷೇತ್ರದಲ್ಲಿ ಸ್ನಾನದಾನಾದಿಗಳಿಂದ ಯಾವ ಪುಣ್ಯಗಳು ಲಭಿಸುವುವೊ, ಅವುಗಳೆಲ್ಲವೂ ಅಸಂಖ್ಯಾಕಗಳಾಗಿ ಅವಿಮುಕ್ತವೆಂಬ ಮಹಾ ಕ್ಷೇತ್ರದಲ್ಲಿ ನೆಲಸಿರುವುವು.

ಪ್ರಯಾಗೇಶಂ ಮಹಾಲಿಂಗಂ ತತ್ರ ತಿಷ್ಠತಿ ಕಾಮದಂ ।
ತತ್ಸಾನ್ನಿಧ್ಯಾಚ್ಚ ತತ್ತೀರ್ಥಂ ಕಾಮದಂ ಪರಿಕೀರ್ತಿತಂ ॥ ೩೬ ॥
ಕಾಶ್ಯಾಂ ಮಾಘಃ ಪ್ರಯಾಗೇ ಯೈರ್ನ ಸ್ನಾತೋ ಮಕರಾರ್ಕಗಃ ।
ಅರುಣೋದಯಮಾಸಾದ್ಯ ತೇಷಾಂ ನಿಃಶ್ರೇಯಸಾಂ ಕುತಃ ॥ ೩೭ ॥
ಕಾಶ್ಯುದ್ಭವೇ ಪ್ರಯಾಗೇ ಯೇ ತಪಸಿ ಸ್ನಾಂತಿ ಸಂಯತಾಃ ।
ದಶಾಶ್ವಮೇಧಜನಿತಂ ಫಲಂ ತೇಷಾಂ ಭವೇದ್ಧ್ರುವಂ ॥ ೩೮ ॥
ಪ್ರಯಾಗಮಾಧವಂ ಭಕ್ತ್ಯಾ ಪ್ರಯಾಗೇಶಂ ಚ ಕಾಮದಂ ।
ಪ್ರಯಾಗೇ ತಪಸಿ ಸ್ನಾತ್ವಾ ಯೇಽರ್ಚಯಂತ್ಯನ್ವಹಂ ಸದಾ ॥ ೩೯ ॥
ಧನಧಾನ್ಯಸುತರ್ದ್ಧೀಸ್ತೇ ಲಬ್ಧ್ವಾ ಭೋಗಾನ್ಮನೋರಮಾನ್ ।
ಭುಕ್ತ್ವೇಹ ಪರಮಾನಂದಂ ಪರಂ ಮೋಕ್ಷಮವಾಪ್ನುಯುಃ ॥ ೪೦ ॥

---

೩೬. ಅಲ್ಲಿ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವ ಪ್ರಯಾಗೇಶ್ವರ ನಾಮಕವಾದ ಮಹಾಲಿಂಗವು ಪ್ರತಿಷ್ಠಿತವಾಗಿರುವುದು. ಆ ಲಿಂಗದ ಸಾನ್ನಿಧ್ಯ ದಿಂದಲೇ ಆ ತೀರ್ಥವು ಕಾಮಿತಫಲಪ್ರದವೆನಿಸಿರುವುದು.*

೩೭. ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ಸಮಯವಾದ ಮಾಘಮಾಸದಲ್ಲಿ ಯಾರು ಕಾಶಿಯಲ್ಲಿ ಪ್ರತಿ ಸೂರ್ಯೋದಯದ ಸಮಯ ದಲ್ಲಿಯೂ ಸ್ನಾನಮಾಡುವುದಿಲ್ಲವೊ, ಅವರಿಗೆ ಮೋಕ್ಷವೆಲ್ಲಿಯದು ?

೩೮. ಮಾಘಮಾಸದಲ್ಲಿ ಕಾಶೀಕ್ಷೇತ್ರದಲ್ಲಿರುವ ಪ್ರಯಾಗತೀರ್ಥದಲ್ಲಿ ಯಾರು ಸಂಯತೇಂದ್ರಿಯರಾಗಿ ಸ್ನಾನವನ್ನು ಮಾಡುವರೊ, ಅವರಿಗೆ ಹತ್ತು ಅಶ್ವಮೇಧಗಳ ಪುಣ್ಯವು ಲಭಿಸುವುದು ನಿಶ್ಚಯವು.

೩೯–೪೦. ಪ್ರಯಾಗತೀರ್ಥದಲ್ಲಿ ಸ್ನಾನವನ್ನು ಮಾಡಿ ನಿತ್ಯವೂ ಪ್ರಯಾಗ ಮಾಧವನನ್ನೂ, ಕಾಮಪ್ರದನಾದ ಪ್ರಯಾಗೇಶ್ವರನನ್ನೂ ಯಾರು ಸಂತೋಷ ದಿಂದ ಪೂಜಿಸುವರೊ, ಆ ಭಕ್ತರು ಈ ಲೋಕದಲ್ಲಿ ಧನಧಾನ್ಯ ಸಮೃದ್ಧಿಯನ್ನೂ ಸಂತೋಷಕರಗಳಾದ ಇತರ ಭೋಗಗಳನ್ನೂ, ಅಪರಿಮಿತಾನಂದವನ್ನೂ ಹೊಂದಿ ದೇಹಾವಸಾನದಲ್ಲಿ ಮೋಕ್ಷವನ್ನು ಪಡೆಯುವರು.

---

* ಈ ಸಂದರ್ಭದಲ್ಲಿ ಪ್ರಾಜ್ಞರು ವಿಚಾರಿಸಬೇಕಾದ ಅಂಶವೊಂದಿರುವುದು. ಗಂಗಾ ಯಮುನೆಯರ ಸಂಗಮದಲ್ಲಿಯೇ ಲೋಕಪ್ರಸಿದ್ಧವಾದ ಪ್ರಯಾಗಕ್ಷೇತ್ರವಿರುವುದು. ಇದರ ವಿಷಯವಾಗಿಯೇ ಈ ಶ್ಲೋಕವಿರುವುದಾದರೆ ಹಿಂದಿನ "ಗಂಗೋತ್ತರವಹಾ ಯತ್ರ" ಎಂಬ ೩೩ ನೆಯ ಶ್ಲೋಕವೂ ಮುಂದೆ ಬರುವ "ಕಾಶ್ಯುದ್ಭವೇ ಪ್ರಯಾಗೇ" ಎಂಬ ೩೮ ನೆಯ ಶ್ಲೋಕವೂ ಅಸಂಬದ್ಧಗಳಾಗುವುವು. ಏಕೆಂದರೆ ಪ್ರಯಾಗದಲ್ಲಿ ಗಂಗಯು ದಕ್ಷಿಣವಾಹಿನಿಯಾಗಿರುವುದು. ಅದನ್ನು ಕಾಶೀಕ್ಷೇತ್ರಸ್ಥನೆಂದೂ ಹೇಳಲಾಗುವುದಿಲ್ಲ.

ಇವೆರಡು ಶ್ಲೋಕಗಳನ್ನೂ ಸಮನ್ವಯಮಾಡಲು ಕಾಶೀಕ್ಷೇತ್ರದಲ್ಲಿರುವ ಪ್ರಯಾಗತೀರ್ಥವನ್ನೇ ಕುರಿತು ಈ ಶ್ಲೋಕವು ಹೇಳಲ್ಪಟ್ಟಿರುವುದಾದರೆ ಹಿಂದಿನ ೩೩ ನೆಯ ಶ್ಲೋಕದ "ತತ್ಸಂಭೇದಂ ನರಃ ಪ್ರಾಪ್ಯ" ಎಂಬ ವಾಕ್ಯವು ಅಸಮಂಜಸವಾಗುವುದು. ಏಕೆಂದರೆ ಈ ಪ್ರಯಾಗತೀರ್ಥದಲ್ಲಿ ಗಂಗಾ ಯಮುನೆಯರ ಸಂಗಮವಿರುವುದಿಲ್ಲ.

ಮಾಘೇ ಸರ್ವಾಣಿ ತೀರ್ಥಾನಿ ಪ್ರಯಾಗಮಭಿಯಾಂತಿ ಹಿ ।
ಪ್ರಾಚ್ಯುದೀಚೀಪ್ರತೀಚೀತೋ ದಕ್ಷಿಣಾಧಸ್ತಥೋರ್ಧ್ವತಃ ॥ ೪೧ ॥
ಕಾಶೀಸ್ಥಿತಾನಿ ತೀರ್ಥಾನಿ ಮುನೇ ಯಾಂತಿ ನ ಕುತ್ರಚಿತ್ ।
ಯದಿ ಯಾಂತಿ ತದಾಯಾಂತಿ ತೀರ್ಥತ್ರಯಮನುತ್ತಮಂ ॥ ೪೨ ॥
ಆಯಾಂತ್ಯೂರ್ಜೇ ಪಂಚನದೇ ಪ್ರಾತಃ ಪ್ರಾತರ್ಮಮಾಂತಿಕಂ ।
ಮಹಾಘೌಘಪ್ರಶಮನೇ ಮಹಾಶ್ರೇಯೋವಿಧಾಯಿನೀ ॥ ೪೩ ॥
ಪ್ರಾಪ್ಯ ಮಾಘಮಘಾರಿಂ ಚ ಪ್ರಯಾಗೇಶಸಮೀಪತಃ ।
ಪ್ರಾತಃ ಪ್ರಯಾಗೇ ಸಂಸ್ನಾಂತಿ ಸರ್ವತೀರ್ಥಾನಿ ಮಾಮನು ॥ ೪೪ ॥
ಸಮಾಸಾದ್ಯ ಚ ಮಧ್ಯಾಹ್ನಮಭಿಯಾಂತಿ ಚ ನಿತ್ಯಶಃ ।
ಸಂಸ್ನಾತುಂ ಸರ್ವತೀರ್ಥಾನಿ ಮುಕ್ತಿದಾಂ ಮಣಿಕರ್ಣಿಕಾಂ ॥ ೪೫ ॥
ಕಾಶ್ಯಾಂ ರಹಸ್ಯಂ ಪರಮಮೇತತ್ತೇ ಕಥಿತಂ ಮುನೇ ।
ಯಥಾ ತೀರ್ಥತ್ರಯೀ ಶ್ರೇಷ್ಠಾ ಸ್ವಸ್ವಕಾಲೇ ವಿಶೇಷತಃ ॥ ೪೬ ॥

---

೪೧. ಮಾಘಮಾಸದಲ್ಲಿ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಮೇಲು, ಕೆಳಗು ಮುಂತಾದ ಸಕಲ ದಿಕ್ಕುಗಳಿಂದಲೂ ಭೂಮಂಡಲದ ಎಲ್ಲ ತೀರ್ಥಗಳೂ ಈ ಪ್ರಯಾಗತೀರ್ಥದಲ್ಲಿ ಒಟ್ಟುಗೂಡುವುವು.

೪೨. ಅಗ್ನಿಬಿಂದುವೆ! ಕಾಶಿಯಲ್ಲಿರುವ ತೀರ್ಥಗಳಾದರೊ, ಬೇರೆ ಎಲ್ಲಿಗೂ ಹೋಗುವುದಿಲ್ಲ. ಅಥವಾ ಹೋಗುವುವೆಂದರೂ ಸರ್ವೋತ್ತಮಗಳೆನಿಸಿದ ಮೂರು ತೀರ್ಥಗಳಲ್ಲಿಯೆ ಸಮಾವಿಷ್ಟಗಳಾಗುವುವು.

೪೩. ಕಾರ್ತಿಕಮಾಸದಲ್ಲಿ ಪ್ರತಿದಿನದ ಪ್ರಾತಃಕಾಲದಲ್ಲಿಯೂ ನನ್ನ ಸಮ್ಮುಖದಲ್ಲಿರುವ ಮಹಾಪಾತಕನಿವಾರಕವೂ, ಉತ್ತಮಶ್ರೇಯೋದಾಯಕವೂ ಆದ ಪಂಚನದತೀರ್ಥದಲ್ಲಿ ಸನ್ನಿಹಿತಗಳಾಗುವುವು.

೪೪. ಪಾಪನಿರ್ಮೂಲನಕರವಾದ ಮಾಘಮಾಸವು ಪ್ರಾಪ್ತವಾಗಲು ಪ್ರಯಾಗೇಶ್ವರನ ಸಮೀಪದಲ್ಲಿರುವ ಪ್ರಯಾಗತೀರ್ಥದಲ್ಲಿ ಸಕಲ ತೀರ್ಥಗಳೂ ನನ್ನನ್ನನುಸರಿಸಿಯೇ ಪ್ರಾತಃಕಾಲದಲ್ಲಿ ಸ್ನಾನಮಾಡುವುವು.

೪೫. ಅಲ್ಲದೆ ಪ್ರತಿದಿವಸದ ಮಧ್ಯಾಹ್ನದ ವೇಳೆಯಲ್ಲಿಯೂ ಸರ್ವತೀರ್ಥಗಳೂ ಮುಕ್ತಿದಾಯಕವಾದ ಮಣಿಕರ್ಣಿಕೆಯಲ್ಲಿ ಸ್ನಾನಮಾಡಲು ಬರುತ್ತಿರುವುವು.

೪೬. ಮಹಾಮುನಿಯೆ! ಕಾಶೀಕ್ಷೇತ್ರದಲ್ಲಿ ಆಯಾ ಕಾಲಗಳಲ್ಲಿ ಈ ಮೂರು ತೀರ್ಥಗಳೂ ಶ್ರೈಷ್ಠ್ಯವನ್ನು ಪಡೆಯುವ ಕ್ರಮವನ್ನೊಳಕೊಂಡ ಈ ರಹಸ್ಯವನ್ನು ನಿನಗೆ ನಿರೂಪಿಸಿರುವೆನು.

ಅನ್ಯದ್ರಹಸ್ಯಂ ವಕ್ಷ್ಯಾಮಿ ನ ವಾಚ್ಯಂ ಯತ್ರ ಕುತ್ರಚಿತ್ ।
ಅಭಕ್ತೇಷು ಸದಾ ಗೋಪ್ಯಂ ನ ಗೋಪ್ಯಂ ಭಕ್ತಿಮಜ್ಜನೇ ॥ ೪೭ ॥
ಕಾಶ್ಯಾಂ ಸರ್ವಾಣಿ ತೀರ್ಥಾನ್ಯೇಕೈಕಾದುತ್ತರೋತ್ತರಂ ।
ಮಹೈನಾಂಸಿ ಪ್ರಹಂತ್ಯೇವ ಪ್ರಹಸ್ಯ ನಿಜತೇಜಸಾ ॥ ೪೮ ॥
ಏತದೇವ ರಹಸ್ಯಂ ತೇ ವಾರಾಣಸ್ಯಾ ಉದೀರ್ಯತೇ ।
ಉತ್‌ಕ್ಷಿಪ್ಯೈಕಾಂಗುಲಿಂ ತಥ್ಯಂ ಶ್ರೇಷ್ಠೈಕಾ ಮಣಿಕರ್ಣಿಕಾ ॥ ೪೯ ॥
ಗರ್ಜಂತಿ ಸರ್ವತೀರ್ಥಾನಿ ಸ್ವಸ್ವಧಿಷ್ಣ್ಯಗತಾನ್ಯಹೋ ।
ಕೇವಲಂ ಬಲಮಾಸಾದ್ಯ ಸುಮಹನ್ಮಣಿಕರ್ಣಿಕಾಂ ॥ ೫೦ ॥
ಪಾಪಾನಿ ಪಾಪಿನಾಂ ಹತ್ವಾ ಮಹಾಂತ್ಯಪಿ ಬಹೂನ್ಯಪಿ ।
ಕಾಶೀತೀರ್ಥಾನಿ ಮಧ್ಯಾಹ್ನೇ ಪ್ರಾಯಶ್ಚಿತ್ತಚಿಕೀರ್ಷಯಾ ॥ ೫೧ ॥
ಪರ್ವಸ್ವಪರ್ವಸ್ವಪಿ ವಾ ನಿತ್ಯಂ ನಿಯಮವಂತ್ಯಹೋ ।
ನಿರ್ಮಲಾನಿ ಭವಂತ್ಯೇವ ವಿಗಾಹ್ಯ ಮಣಿಕರ್ಣಿಕಾಂ ॥ ೫೨ ॥
ವಿಶ್ವೇಶೋ ವಿಶ್ವಯಾ ಸಾರ್ಧಂ ಸದೋಪಮಣಿಕರ್ಣಿಕಂ ।
ಮಧ್ಯಂದಿನಂ ಸಮಾಸಾದ್ಯ ಸಂಸ್ನಾತಿ ಪ್ರತಿವಾಸರಂ ॥ ೫೩ ॥

---

೪೭. ನಿನಗೆ ಮತ್ತೊಂದು ರಹಸ್ಯವನ್ನು ಹೇಳುವೆನು. ಇದನ್ನು ಎಲ್ಲೆಡೆಗಳಲ್ಲಿಯೂ ಹೇಳಬಾರದು. ಭಕ್ತರಲ್ಲದವರಿಂದ ಯಾವಾಗಲೂ ರಕ್ಷಿಸಬೇಕು. ಆದರೆ ಭಕ್ತಿಯುಕ್ತರಾದ ಜನರಿಗೆ ಗೋಪ್ಯವಾದುದಲ್ಲ.

೪೮. ಕಾಶಿಯಲ್ಲಿರುವ ಸಕಲ ತೀರ್ಥಗಳೂ ಒಂದಕ್ಕಿಂತ ಒಂದು ಅಧಿಕ ಪ್ರಭಾವವುಳ್ಳವುಗಳಾಗಿ ತಮ್ಮ ತೇಜಸ್ಸಿನಿಂದ ಸ್ನಾನಮಾಡುವವರ ಸಕಲ ಪಾತಕಗಳನ್ನೂ ಬಲಾತ್ಕಾರವಾಗಿ ನಾಶಗೊಳಿಸುವುವು.

೪೯. ವಾರಣಾಸೀಕ್ಷೇತ್ರದ ಅತಿಗುಹ್ಯತಮವಾದ ರಹಸ್ಯವೊಂದನ್ನು ನಿನಗೆ ತಿಳಿಸುತ್ತೇನೆ. ಬೆರಳನ್ನೆತ್ತಿ ಸತ್ಯವನ್ನು ಹೇಳುವುದಾದರೆ ಸರ್ವತೀರ್ಥಗಳಲ್ಲಿಯೂ ಮಣಿಕರ್ಣಿಕೆಯೊಂದೇ ಶ್ರೇಷ್ಠತಮವಾದುದು.

೫೦. ಸಕಲ ತೀರ್ಥಗಳೂ ಮಣಿಕರ್ಣಿಕೆಯ ಮಹತ್ತರವಾದ ಬಲವನ್ನಾಶ್ರಯಿಸಿಯೇ ತಮ್ಮ ತಮ್ಮ ಸ್ಥಾನಗಳಲ್ಲಿ ಪಾಪಪರಿಹಾರಕಗಳೆಂದು ಪ್ರಖ್ಯಾತಗಳಾಗಿರುವುವು.

೫೧–೫೩. ತಮ್ಮಲ್ಲಿ ಸ್ನಾನಮಾಡುವ ಪಾಪಾತ್ಮರ ಮಹತ್ತರಗಳೂ ಅಸಂಖ್ಯಾಕಗಳೂ ಆದ ಪಾತಕಗಳನ್ನೆಲ್ಲ ಹೋಗಲಾಡಿಸಿ ಕಾಶಿಯ ತೀರ್ಥಗಳೆಲ್ಲವೂ ಪ್ರಾಯಶ್ಚಿತ್ತವನ್ನು ಮಾಡಿ ತಮ್ಮೊಳಗಿನ ಪಾತಕಗಳನ್ನು ಕಳೆದುಕೊಳ್ಳಲು ಪರ್ವಕಾಲಗಳಲ್ಲಿಯೂ, ಬೇರೆ ಸಮಯಗಳಲ್ಲಿಯೂ, ಪ್ರತಿದಿವಸದ ಮಧ್ಯಾಹ್ನದಲ್ಲಿಯೂ ತಪ್ಪದೆ ಮಣಿಕರ್ಣಿಕೆಯಲ್ಲಿ ಬಂದು ಸ್ನಾನವನ್ನು ಮಾಡಿ ಪರಿಶುದ್ಧ

ವೈಕುಂಠಾದಪ್ಯಹಂ ನಿತ್ಯಂ ಮಧ್ಯಾಹ್ನೇ ಮಣಿಕರ್ಣಿಕಾಂ ।
ವಿಗಾಹೇ ಪದ್ಮಯಾ ಸಾರ್ಧಂ ಮುದಾ ಪರಮಯಾ ಮುನೇ ॥ ೫೪ ॥
ಸಕೃನ್ಮಮಾಖ್ಯಾಂ ಗೃಣತಾಂ ನಿರ್ಹರನ್ಯದಘಾನ್ಯಹಂ ।
ಹರಿನಾಮ ಸಮಾಪನ್ನಸ್ತದ್ಬಲಾನ್ಮಣಿಕರ್ಣಿಕಾತ್ ॥ ೫೫ ॥
ಸತ್ಯಲೋಕಾತ್ಪ್ರತಿದಿನಂ ಹಂಸಯಾನಃ ಪಿತಾಮಹಃ ।
ಮಾಧ್ಯಾಹ್ನಿಕವಿಧಾನಾಯ ಸಮಾಯಾನ್ಮಣಿಕರ್ಣಿಕಾಂ ॥ ೫೬ ॥
ಇಂದ್ರಾದ್ಯಾ ಲೋಕಪಾಲಾಶ್ಚ ಮರೀಚ್ಯಾದ್ಯಾ ಮಹರ್ಷಯಃ ।
ಮಾಧ್ಯಾಹ್ನಿಕೀಂ ಕ್ರಿಯಾಂ ಕರ್ತುಂ ಸಮಾಯಾಂತಿ ಮಣಿಕರ್ಣಿಕಾಂ ॥ ೫೭ ॥
ಶೇಷವಾಸುಕಿಮುಖ್ಯಾಶ್ಚ ನಾಗಾ ವೈ ನಾಗಲೋಕತಃ ।
ಸಮಾಯಾಂತೀಹ ಮಧ್ಯಾಹ್ನೇ ಸಂಸ್ನಾತುಂ ಮಣಿಕರ್ಣಿಕಾಂ ॥ ೫೮ ॥
ಚರಾಚರೇಷು ಸರ್ವೇಷು ಯಾವಂತಶ್ಚ ಸಚೇತನಾಃ ।
ತಾವಂತಃ ಸ್ನಾಂತಿ ಮಧ್ಯಾಹ್ನೇ ಮಣಿಕರ್ಣೀಜಲೇಽಮಲೇ ॥ ೫೯ ॥

---

ಗಳಾಗುವುವು. ವರ್ಷದ ಎಲ್ಲ ದಿವಸಗಳಲ್ಲಿಯೂ ಮಧ್ಯಾಹ್ನಕಾಲಕ್ಕೆ ಸರಿಯಾಗಿ ವಿಶ್ವೇಶ್ವರನು ಅನ್ನಪೂರ್ಣೆಯೊಡನೆ ಬಂದು ಮಣಿಕರ್ಣಿಕೆಯಲ್ಲಿ ಸ್ನಾನಮಾಡುವರು. ನಾನೂ ಸಹ ವೈಕುಂಠವನ್ನು ಬಿಟ್ಟು ನಿತ್ಯವೂ ಮಧ್ಯಾಹ್ನದಲ್ಲಿ ಅತ್ಯಂತ ಸಂತೋಷದಿಂದ ರಮಾದೇವಿಯೊಡನೆ ಮಣಿಕರ್ಣಿಕಾತೀರ್ಥದಲ್ಲಿ ಸ್ನಾನಮಾಡುತ್ತಿರುವೆನು.

೫೫. "ಶ್ರೀಹರಿ" ಎಂಬ ನನ್ನ ನಾಮವನ್ನು ಒಂದುಸಲವಾದರೂ ಉಚ್ಚರಿಸುವವರ ಪಾತಕಗಳನ್ನು ನಾಶಮಾಡುವ ಸಾಮರ್ಥ್ಯವನ್ನು ನಾನು ಪಡೆದಿರುವುದೂ ಮಣಿಕರ್ಣಿಕಾಸ್ನಾನದ ಬಲದಿಂದಲೇ ಆಗಿರುವುದು. ಆದುದರಿಂದಲೇ ಭಕ್ತಪಾತಕಹಾರಿಯಾದ ನನಗೆ ಹರಿಯೆಂಬ ನಾಮವೂ ಸಾರ್ಥಕವಾಗಿರುವುದು.

೫೬–೫೭. ಸತ್ಯಲೋಕದಿಂದ ಪ್ರತಿದಿನವೂ ಬ್ರಹ್ಮದೇವನು ಹಂಸವಾಹನಾರೂಢನಾಗಿ ಮಾಧ್ಯಾಹ್ನಿಕ ನಿತ್ಯಕರ್ಮವನ್ನು ನೆರವೇರಿಸಲು ಮಣಿಕರ್ಣಿಕೆಗೇ ಬರುತ್ತಿರುವನು. ಇಂದ್ರನೇ ಮೊದಲಾದ ಲೋಕಪಾಲಕರೂ ಮರೀಚ್ಯಾದಿ ಮಹರ್ಷಿಗಳೂ ಎಲ್ಲರೂ ತಮ್ಮ ಮಾಧ್ಯಾಹ್ನಿಕ ಕ್ರಿಯೆಗಳಿಗಾಗಿ ಮಣಿಕರ್ಣಿಕೆಯನ್ನೇ ಬಂದು ಸೇರುವರು.

೫೮. ಆದಿಶೇಷ, ವಾಸುಕಿಗಳೇ ಮುಂತಾದ ನಾಗರೂ ನಾಗಲೋಕವನ್ನು ಬಿಟ್ಟು ಮಧ್ಯಾಹ್ನಕಾಲದ ಸ್ನಾನವನ್ನು ಮಾಡಲು ಈ ಮಣಿಕರ್ಣಿಕೆಯನ್ನೇ ಸೇರುತ್ತಿರುವರು.

೫೯. ಚರಾಚರಗಳೆನಿಸಿದ ಸಮಸ್ತಭೂತಗಳಲ್ಲಿ ಚೈತನ್ಯವುಳ್ಳ ಸಕಲ ಪ್ರಾಣಿಗಳೂ ಮಧ್ಯಾಹ್ನಕಾಲದಲ್ಲಿ ಮಣಿಕರ್ಣಿಕಾತೀರ್ಥದ ಜಲದಲ್ಲಿ ಸ್ನಾನಮಾಡುವುವು.

ಕೇ ಮಾಣಿಕರ್ಣಿಕೇಯಾನಾಂ ಗುಣಾನಾಂ ಸುಗರೀಯಸಾಂ ।
ಶಕ್ತಾ ವರ್ಣಯಿತುಂ ವಿಪ್ರಾಽಸಂಖ್ಯೇಯಾನಾಂ ಮದಾದಿಭಿಃ ॥ ೬೦ ॥
ಚೀರ್ಣಾನ್ಯುಗ್ರಾಣ್ಯರಣ್ಯೇಷು ತೈಸ್ತಪಾಂಸಿ ತಪೋಧನೈಃ ।
ಯೈರಿಯಂ ಹಿ ಸಮಾಸಾದಿ ಮುಕ್ತಭೂರ್ಮಣಿಕರ್ಣಿಕಾ ॥ ೬೧ ॥
ವಿಶ್ರಾಣಿತಮಹಾದಾನಾಸ್ತ ಏವ ನರಪುಂಗವಾಃ ।
ಚರಮೇ ವಯಸಿ ಪ್ರಾಪ್ತಾ ಯೈರೇಷಾ ಮಣಿಕರ್ಣಿಕಾ ॥ ೬೨ ॥
ಚೀರ್ಣಸರ್ವವ್ರತಾಸ್ತೇ ತು ಯಥೋಕ್ತವಿಧಿನಾ ಧ್ರುವಂ ।
ಯೈಃ ಸ್ವತಲ್ಪೀಕೃತಾ ಮಾಣಿಕರ್ಣಿಕೇಯೀ ಸ್ಥಲೀ ಮೃದುಃ ॥ ೬೩ ॥
ತ ಏವ ಧನ್ಯಾ ಮರ್ತ್ಯೇಽಸ್ಮಿನ್ಸರ್ವಕ್ರತುಷು ದೀಕ್ಷಿತಾಃ ।
ತ್ಯಕ್ತ್ವಾ ಪುಣ್ಯಾರ್ಜಿತಾಂ ಲಕ್ಷ್ಮೀಮೈಕ್ಷಿ ಯೈರ್ಮಣಿಕರ್ಣಿಕಾ ॥ ೬೪ ॥
ಕೃತಾ ನಾನಾವಿಧಾ ಧರ್ಮಾ ಇಷ್ಟಾಪೂರ್ತಾಸು ತೈರ್ನೃಭಿಃ ।
ವಾರ್ಧಕಂ ಸಮನುಪ್ರಾಪ್ಯ ಪ್ರಾಪಿ ಯೈರ್ಮಣಿಕರ್ಣಿಕಾ ॥ ೬೫ ॥

---

೬೦. ಬ್ರಾಹ್ಮಣೋತ್ತಮನೆ! ಮಣಿಕರ್ಣಿಕಾತೀರ್ಥದ ಮಹತ್ತರಗಳಾದ ಗುಣಗಳು ನನ್ನಂತಹವರಿಗೂ ಅಸಂಖ್ಯೇಯಗಳಾಗಿರುವುವೆಂದಮೇಲೆ ಬೇರೆ ಯಾರು ತಾನೆ ವರ್ಣಿಸಲು ಶಕ್ತರಾಗುವರು?

೬೧. ಯಾರು ಮೋಕ್ಷಭೂಮಿಯಾದ ಈ ಮಣಿಕರ್ಣಿಕಾತೀರ್ಥವನ್ನು ಸೇರುವರೊ, ಅವರು ಪೂರ್ವಜನ್ಮಗಳಲ್ಲಿ ಮಹಾತಪಸ್ವಿಗಳಾಗಿ ಅರಣ್ಯಗಳಲ್ಲಿ ಅತ್ಯುಗ್ರಗಳಾದ ತಪಸ್ಸುಗಳನ್ನು ಮಾಡಿರಬೇಕು.

೬೨. ಆಜನ್ಮವೂ ಅನೇಕ ಮಹಾದಾನಗಳನ್ನು ಮಾಡಿದ ಮನುಷ್ಯೋತ್ತಮರಿಗೆ ಮಾತ್ರ ವಾರ್ಧಕ್ಯದಲ್ಲಿ ಮಣಿಕರ್ಣಿಕಾತೀರ್ಥೋದಕದ ಸ್ನಾನದಾನಗಳ ಪುಣ್ಯವು ಲಭಿಸುವುದು.

೬೩. ಯಾರು ಈ ಮಣಿಕರ್ಣಿಕೆಯ ಕ್ಷೇತ್ರದ ಮಣ್ಣನ್ನು ಹಾಸಿಗೆಯಾಗಿ ಉಪಯೋಗಿಸುವ ಭಾಗ್ಯವನ್ನು ಪಡೆಯುವರೊ, ಅವರು ಸಮಸ್ತ ವ್ರತಗಳನ್ನೂ ಶಾಸ್ತ್ರೋಕ್ತ ವಿಧಾನಗಳನ್ನನುಸರಿಸಿ ಮಾಡಿದವರೆಂದು ತಿಳಿಯಬೇಕು.

೬೪. ಯಾರು ತಮ್ಮ ಪುಣ್ಯಗಳಿಂದ ಸಂಪಾದಿಸಿದ ಸಕಲೈಶ್ವರ್ಯಗಳನ್ನೂ ತ್ಯಜಿಸಿ ಮಣಿಕರ್ಣಿಕೆಯ ದರ್ಶನವನ್ನು ಮಾಡುವರೊ, ಅವರೇ ಈ ಮರ್ತ್ಯಲೋಕದಲ್ಲಿ ಧನ್ಯರಾದವರು. ಅವರಿಗೆ ಸಮಸ್ತ ಯಜ್ಞಗಳಲ್ಲಿಯೂ ದೀಕ್ಷೆವಹಿಸಿದ ಪುಣ್ಯವುಂಟು.

೬೫. ವಾರ್ಧಕ್ಯವನ್ನು ಹೊಂದಿ ಯಾರು ಮಣಿಕರ್ಣಿಕೆಯನ್ನು ಸೇರುವರೊ, ಅವರು ಅನೇಕ ವಿಧಗಳಾದ ಧರ್ಮಗಳನ್ನೂ, ಯಜ್ಞಗಳನ್ನೂ, ವಾಪೀಕೂಪತಟಕಾದಿ ಪೂರ್ತಗಳನ್ನೂ ಮಾಡಿದಂತೆ ತಿಳಿಯಬೇಕು.

ರತ್ನಾನಿ ಸದುಕೂಲಾನಿ ಕಾಂಚನಂ ಗಜವಾಜಿನಃ ।
ದೇಯಾಃ ಪ್ರಾಜ್ಞೇನ ಯತ್ನೇನ ಸದೋಪಮಣಿಕರ್ಣಿಕಾಂ ॥ ೬೬ ॥
ಪುಣ್ಯೇನೋಪಾರ್ಜಿತಂ ದ್ರವ್ಯಮತ್ಯಲ್ಪಮಪಿ ಯೈರ್ನರೈಃ ।
ದತ್ತಂ ತದಕ್ಷಯಂ ನಿತ್ಯಂ ಮುನೇಽಧಿಮಣಿಕರ್ಣಿಕಾಂ ॥ ೬೭ ॥
ಕುರ್ಯಾದ್ಯಥೋಕ್ತಮಪ್ಯೇಕಂ ಪ್ರಾಣಾಯಾಮಂ ನರೋತ್ತಮಃ ।
ಯಸ್ತೇನ ವಿಹಿತೋ ನೂನಂ ಷಡಂಗೋ ಯೋಗ ಉತ್ತಮಃ ॥ ೬೮ ॥
ಜಪ್ತ್ವೈಕಾಮಪಿ ಗಾಯತ್ರೀಂ ಸಂಪ್ರಾಪ್ಯ ಮಣಿಕರ್ಣಿಕಾಂ ।
ಲಭೇದಯುತಗಾಯತ್ರೀಜಪನಸ್ಯ ಫಲಂ ಸ್ಫುಟಂ ॥ ೬೯ ॥
ಏಕಾಮಪ್ಯಾಹುತಿಂ ಪ್ರಾಜ್ಞೋ ದತ್ತ್ವೋಪಮಣಿಕರ್ಣಿಕಾಂ ।
ಯಾವಜ್ಜೀವಾಗ್ನಿಹೋತ್ರಸ್ಯ ಲಭೇದವಿಕಲಂ ಫಲಂ ॥ ೭೦ ॥
ಇತಿ ಶ್ರುತ್ವಾ ಹರೇರ್ವಾಕ್ಯಮಗ್ನಿಬಿಂದುರ್ಮಹಾತಪಾಃ ।
ಪ್ರಣಿಪತ್ಯ ಮಹಾಭಕ್ತ್ಯಾ ಪುನಃ ಪಪ್ರಚ್ಛ ಮಾಧವಂ ॥ ೭೧ ॥

ಅಗ್ನಿಬಿಂದುರುವಾಚ :—

ವಿಷ್ಣೋ ಕಿಯತ್ಪರೀಮಾಣಾ ಪುಣ್ಯೇಷಾ ಮಣಿಕರ್ಣಿಕಾ ।
ಬ್ರೂಹಿ ಮೇ ಪುಂಡರೀಕಾಕ್ಷ ನ ತ್ವತ್ತಸ್ತತ್ತ್ವವಿತ್ಪರಃ ॥ ೭೨ ॥

---

೬೬. ಬುದ್ಧಿವಂತನಾದ ಮಾನವನು ಮಣಿಕರ್ಣಿಕಾತೀರ್ಥವನ್ನು ಸೇವಿಸಿ ಅಲ್ಲಿ ಶಕ್ತ್ಯನುಸಾರವಾಗಿ ರತ್ನಗಳನ್ನೂ, ವಸ್ತ್ರಗಳನ್ನೂ, ಹಿರಣ್ಯವನ್ನೂ, ಆನೆಗಳನ್ನೂ, ಕುದುರೆಗಳನ್ನೂ ದಾನಮಾಡಬೇಕು.

೬೭-೬೮. ಮನುಷ್ಯೋತ್ತಮನಾದವನು ಶಾಸ್ತ್ರನಿಯಮವನ್ನನುಸರಿಸಿ ಒಂದು ಪ್ರಾಣಾಯಮವನ್ನಾದರೂ ಮಾಡಲೇಬೇಕು. ಅಂತಹವನು ಉತ್ತಮವೂ ಶಮದಮಾದಿ ಷಡಂಗಸಹಿತವೂ ಆದ ಯೋಗವನ್ನು ಸಾಂಗವಾಗಿ ಅಭ್ಯಾಸ ಮಾಡಿದ ಫಲವನ್ನು ಪಡೆಯುವನು.

೬೯. ಮಣಿಕರ್ಣಿಕಾಕ್ಷೇತ್ರವನ್ನು ಸೇರಿ ಅಲ್ಲಿ ಗಾಯತ್ರಿಯ ಒಂದು ಜಪವನ್ನು ಮಾಡುವುದರಿಂದಲೇ ಹತ್ತುಸಾವಿರ ಗಾಯತ್ರೀಜಪವನ್ನು ಇತರ ಕಡೆಗಳಲ್ಲಿ ಮಾಡಿದ ಫಲವು ಲಭಿಸುವುದೆಂಬುದು ನಿಜವು.

೭೦. ಮಣಿಕರ್ಣಿಕೆಯ ತೀರದಲ್ಲಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಒಂದೇ ಒಂದು ಆಹುತಿಯನ್ನು ಕೊಟ್ಟವನು ಯಾವಜ್ಜೀವವೂ ಅಖಂಡವಾದ ಅಗ್ನಿಹೋತ್ರವನ್ನು ಮಾಡಿದ ಫಲವನ್ನು ಪಡೆಯುವನು."

೭೧. ಇಂತೆಂದ ಬಿಂದುಮಾಧವನ ಮಾತುಗಳನ್ನು ಕೇಳಿ ಮಹಾತಪಸ್ಸಂಪನ್ನನಾದ ಅಗ್ನಿಬಿಂದುವು ಅತ್ಯಂತ ಭಕ್ತಿಯುಕ್ತನಾಗಿ ಮತ್ತೆ ನಮಸ್ಕರಿಸಿ ಆ ಶ್ರೀಹರಿಯನ್ನು ಪುನಃ ಪ್ರಶ್ನೆಮಾಡಿದನು.

೭೨. ಅಗ್ನಿಬಿಂದುವು ಕೇಳುತ್ತಾನೆ:— ಕಮಲನೇತ್ರನಾದ ವಿಷ್ಣುವೇ!

ಶ್ರೀ ವಿಷ್ಣುರುವಾಚ :—

ಆಗಂಗಾಕೇಶವಾದಾ ಚ ಹರಿಶ್ಚಂದ್ರಸ್ಯ ಮಂಡಪಾತ್ ।
ಆಮಧ್ಯಾದ್ದೇವಸರಿತಃ ಸ್ವರ್ದ್ವಾರಾನ್ಮಣಿಕರ್ಣಿಕಾ ॥ ೭೩ ॥
ಸ್ಥೂಲಮೇತತ್ಪರೀಮಾಣಂ ಸೂಕ್ಷ್ಮಂ ಚ ಪ್ರವದಾಮಿ ತೇ ।
ಹರಿಶ್ಚಂದ್ರಸ್ಯ ತೀರ್ಥಾಗ್ರೇ ಹರಿಶ್ಚಂದ್ರವಿನಾಯಕಃ ॥ ೭೪ ॥
ಸೀಮಾವಿನಾಯಕಶ್ಚಾತ್ರ ಮಣಿಕರ್ಣೀಹ್ರದೋತ್ತರೇ ।
ಸೀಮಾ ವಿನಾಯಕಂ ಭಕ್ತ್ಯಾ ಪೂಜಯಿತ್ವಾ ನರೋತ್ತಮಃ ॥ ೭೫ ॥
ಮೋದಕೈಃ ಸೋಪಚಾರೈಶ್ಚ ಪ್ರಾಪ್ನುಯಾನ್ಮಣಿಕರ್ಣಿಕಾಂ ।
ಹರಿಶ್ಚಂದ್ರೇ ಮಹಾತೀರ್ಥೇ ತರ್ಪಯೇಯುಃ ಪಿತಾಮಹಾನ್ ॥ ೭೬ ॥
ಶತಂ ಸಮಾಃ ಸುತೃಪ್ತಾಃ ಸ್ಯುಃ ಪ್ರಯಚ್ಛಂತಿ ಚ ವಾಂಛಿತಂ ।
ಹರಿಶ್ಚಂದ್ರೇ ಮಹಾತೀರ್ಥೇ ಸ್ನಾತ್ವಾ ಶ್ರದ್ಧಾನ್ವಿತೋ ನರಃ ॥ ೭೭ ॥
ಹರಿಶ್ಚಂದ್ರೇಶ್ವರಂ ನತ್ವಾ ನ ಸತ್ಯಾತ್ಪರಿಹೀಯತೇ ।
ತತಃ ಪರ್ವತತೀರ್ಥಂ ಚ ಪರ್ವತೇಶ್ವರಸನ್ನಿಧೌ ॥ ೭೮ ॥

---

ಈ ಮಣಿಕರ್ಣಿಕಾತೀರ್ಥವು ಯಾವ ಪ್ರಮಾಣದ ಪುಣ್ಯವುಳ್ಳುದೆಂಬುದನ್ನು ನನಗೆ ಹೇಳು. ನಿನಗಿಂತಲೂ ಇದರ ತತ್ತ್ವವನ್ನು ತಿಳಿದವನು ಮತ್ತೊಬ್ಬನಿಲ್ಲ.

೭೩. ವಿಷ್ಣುವು ಹೇಳುತ್ತಾನೆ:—ಗಂಗಾಕೇಶವ ದೇವಾಲಯ, ಹರಿಶ್ಚಂದ್ರ ಮಂಟಪ ಮತ್ತು ದೇವನದಿಯ ಮಧ್ಯದಲ್ಲಿರುವ ಸ್ವರ್ಗದ್ವಾರ—ಈ ಮೂರು ಕ್ಷೇತ್ರಗಳ ನಡುವೆಯಿರುವ ತೀರ್ಥವೇ ಮಣಿಕರ್ಣಿಕೆಯು.

೭೪. ಇದು ಜನರ ಸ್ಥೂಲನೇತ್ರಗಳಿಗೆ ಕಾಣಿಸುವ ಪರಿಮಾಣವು. ಇನ್ನು ಸೂಕ್ಷ್ಮಪರಿಮಾಣವನ್ನು ಹೇಳುವೆನು. ಹರಿಶ್ಚಂದ್ರತೀರ್ಥದ ಕೊನೆಯಲ್ಲಿರುವ ಹರಿಶ್ಚಂದ್ರವಿನಾಯಕನೇ ಮಣಿಕರ್ಣಿಕಾತೀರ್ಥದ ಉತ್ತರ ಸೀಮಾವಿನಾಯಕ ನಾಗಿರುವನು.

೭೫. ಯಾವ ಮನುಷ್ಯಶ್ರೇಷ್ಠನೇ ಆದರೂ ಆ ಸೀಮಾವಿನಾಯಕನನ್ನು ಪೂಜಿಸಿ ಇತರ ಉಪಚಾರಗಳೊಡನೆ ಮೋದಕಗಳನ್ನು ನಿವೇದನಮಾಡಲು ಮಣಿಕರ್ಣಿಕೆಯನ್ನು ಪಡೆಯುವನು.

೭೬. ಪ್ರಾಜ್ಞರಾದವರು ಹರಿಶ್ಚಂದ್ರಮಹಾತೀರ್ಥದಲ್ಲಿ ಪಿತೃದೇವತೆಗಳಿಗೆ ತರ್ಪಣಗಳನ್ನು ಕೊಡುವರು. ಆ ಪಿತೃಗಳೂ ನೂರುವರ್ಷಗಳವರೆಗೂ ಸಂತೃಪ್ತರಾಗಿ ಶ್ರಾದ್ಧ ತರ್ಪಣವನ್ನುಮಾಡಿದವನ ಸಕಲ ವಾಂಛಿತಗಳನ್ನೂ ಈಡೇರಿಸುವರು.

೭೭. ಶ್ರದ್ಧಾಭಕ್ತಿಗಳಿಂದ ಕೂಡಿದ ಮನುಷ್ಯನು ಹರಿಶ್ಚಂದ್ರತೀರ್ಥದಲ್ಲಿ ಸ್ನಾನವನ್ನು ಮಾಡಿ ಹರಿಶ್ಚಂದ್ರೇಶ್ವರನಿಗೆ ನಮಸ್ಕರಿಸಲು ಎಂದಿಗೂ ಸತ್ಯವಾಕ್ಯತೆಯಿಂದ ಭ್ರಷ್ಟನಾಗುವುದಿಲ್ಲ.

೭೮. ಬಳಿಕ ಪರ್ವತೇಶ್ವರನ ಬಳಿಯಲ್ಲಿ ಪರ್ವತತೀರ್ಥವಿರುವುದು. ಅದು

ಅಧಿಷ್ಠಾನಂ ಮಹಾಮೇರೋರ್ಮಹಾಪಾತಕನಾಶನಂ ।
ತತ್ರ ಸ್ನಾತ್ವಾರ್ಚಯಿತ್ವೇಶಂ ಕಿಂಚಿದ್ದತ್ವಾ ಸ ಶಕ್ತಿತಃ ॥ ೭೯ ॥
ಅಧ್ಯಾಸ್ಯ ಮೇರುಶಿಖರಂ ದಿವ್ಯಾನ್ಭೋಗಾನ್ಸಮಶ್ನುತೇ ।
ಕಂಬಲಾಶ್ವತರಂ ತೀರ್ಥಂ ಪರ್ವತೇಶ್ವರದಕ್ಷಿಣೇ ॥ ೮೦ ॥
ಕಂಬಲಾಶ್ವತರೇಶಂ ಚ ತತ್ತೀರ್ಥಾತ್ಪಶ್ಚಿಮೇ ಶುಭಂ ।
ತಸ್ಮಿಂಸ್ತೀರ್ಥೇ ಕೃತಸ್ನಾನಸ್ತಲ್ಲಿಂಗಂ ಯಃ ಸಮರ್ಚಯೇತ್ ॥ ೮೧ ॥
ಅಪಿ ತಸ್ಯ ಕುಲೇ ಜಾತಾ ಗೀತಜ್ಞಾಃಸ್ಯುಃ ಶ್ರಿಯಾನ್ವಿತಾಃ ।
ಚಕ್ರಪುಷ್ಕರಿಣೀ ತತ್ರ ಯೋನಿಚಕ್ರನಿವಾರಿಣೀ ॥ ೮೨ ॥
ಸಂಸಾರಚಕ್ರೇ ಗಹನೇ ಯತ್ರ ಸ್ನಾನೋ ವಿಶೇನ್ನನಾ ।
ಚಕ್ರಪುಷ್ಕರಿಣೀತೀರ್ಥಂ ಮಮಾಧಿಷ್ಠಾನಮುತ್ತಮಂ ॥ ೮೩ ॥
ಸಮಾಃ ಪರಾರ್ಧಸಂಖ್ಯಾತಾಸ್ತತ್ರತಪ್ತಂ ಮಹಾತಪಃ ।
ತತ್ರ ಪ್ರತ್ಯಕ್ಷತಾಂ ಯಾತೋ ಮಮ ವಿಶ್ವೇಶ್ವರಃ ಪರಃ ॥ ೮೪ ॥

---

ಮಹಾಮೇರುಪರ್ವತಕ್ಕೆ ಅಧಿಷ್ಠಾನವೆನಿಸಿ ಮಹಾ ಪಾತಕಗಳನ್ನೂ ನಾಶಗೊಳಿಸುವುದು.

೭೯. ಅಲ್ಲಿ ಸ್ನಾನವನ್ನೂ, ಈಶ್ವರನ ಪೂಜೆಯನ್ನೂ ಮಾಡಿಕೊಂಡು ತನ್ನ ಶಕ್ತ್ಯನುಸಾರವಾಗಿ ಏನನ್ನಾದರೂ ದಾನಮಾಡಿದವನು ಮೇರುಪರ್ವತದ ಶಿಖರವನ್ನೇರಿ ದೇವಲೋಕದ ಭೋಗಗಳನ್ನನುಭವಿಸುವನು.

೮೦–೮೧. ಆ ಪರ್ವತೇಶ್ವರನಿಗೆ ದಕ್ಷಿಣದಲ್ಲಿ ಕಂಬಳಾಶ್ವತರತೀರ್ಥವಿರುವುದು. ತೀರ್ಥದ ಪಶ್ಚಿಮದಿಕ್ಕಿನಲ್ಲಿ ಮಂಗಳಕರವಾದ ಕಂಬಳಾಶ್ವತರೇಶ್ವರನ ಲಿಂಗವೂ ಇರುವುದು. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಭಕ್ತನು ಆ ಲಿಂಗವನ್ನು ಪೂಜಿಸಬೇಕು. ಆತನ ವಂಶದಲ್ಲಿ ಹುಟ್ಟುವವರೆಲ್ಲರೂ ಸಂಗೀತಶಾಸ್ತ್ರಜ್ಞರೂ ಐಶ್ವರ್ಯವಂತರೂ ಆಗಿ ಬಾಳುವರು.

೮೨. ಅಲ್ಲಿಯೇ ಮನುಷ್ಯನ ಜನನಮರಣಚಕ್ರವನ್ನು ಪರಿಹರಿಸುವ ಚಕ್ರಪುಷ್ಕರಿಣಿಯಿರುವುದು. ಅದರಲ್ಲಿ ಸ್ನಾನಮಾಡಿದವನು ಪುನಃ ಸಂಸಾರ ಚಕ್ರದಲ್ಲಿ ಭ್ರಮಣವನ್ನು ಹೊಂದುವುದಿಲ್ಲ.

೮೩. ಈ ಚಕ್ರಪುಷ್ಕರಿಣೀತೀರ್ಥವು ನನಗೆ ಉತ್ತಮವಾದ ವಾಸಭೂಮಿಯಾಗಿರುವುದು. ಒಂದು ಪರಾರ್ಧಸಂಖ್ಯೆಯ (ಒಂದು ನೂರುಕೋಟಿ ಕೋಟಿಗಳ) ವರ್ಷಗಳು ಇಲ್ಲಿ ನಾನು ಮಹಾ ತಪಸ್ಸನ್ನು ಮಾಡಿದೆನು.

೮೪. ಅಲ್ಲಿ ಪರತತ್ತ್ವವಾದ ವಿಶ್ವೇಶ್ವರನು ನನಗೆ ಪ್ರತ್ಯಕ್ಷನಾದನು. ಆತನಿಂದಲೇ ನಾನು ನಾಶವಿಲ್ಲದುದೂ, ಅಪರಿಮಿತವೂ ಆದ ಮಹದೈಶ್ವರ್ಯವನ್ನು ಪಡೆದೆನು.

ತತ್ರ ಲಬ್ಧಂ ಮಯೈಶ್ವರ್ಯಮವಿನಾಶಿ ಮಹತ್ತರಂ ।
ಚಕ್ರಪುಷ್ಕರಿಣೀ ಚೈವ ಖ್ಯಾತಾಭೂನ್ಮಣಿಕರ್ಣಿಕಾ ॥ ೮೫ ॥
ದ್ರವರೂಪಂ ಪರಿತ್ಯಜ್ಯ ಲಲನಾರೂಪಧಾರಿಣೀ ।
ಪ್ರತ್ಯಕ್ಷರೂಪಿಣೀ ತತ್ರ ಮಯೈಕ್ಷಿ ಮಣಿಕರ್ಣಿಕಾ ॥ ೮೬ ॥
ತಸ್ಯಾ ರೂಪಂ ಪ್ರವಕ್ಷ್ಯಾಮಿ ಭಕ್ತಾನಾಂ ಶುಭದಂ ಪರಂ ।
ಯದ್ರೂಪಧ್ಯಾನತಃ ಪುಂಭಿರಾಷಣ್ಮಾಸಂ ತ್ರಿಸಂಧ್ಯತಃ ॥ ೮೭ ॥
ಪ್ರತ್ಯಕ್ಷರೂಪಿಣೀ ದೇವೀ ದೃಶ್ಯತೇ ಮಣಿಕರ್ಣಿಕಾ ।
ಚತುರ್ಭುಜಾ ವಿಶಾಲಾಕ್ಷೀ ಸ್ಫುರದ್ಫಾಲವಿಲೋಚನಾ ।
ಪಶ್ಚಿಮಾಭಿಮುಖೀ ನಿತ್ಯಂ ಪ್ರಬದ್ಧಕರಸಂಪುಟಾ ॥ ೮೮ ॥
ಇಂದೀವರವತೀಂ ಮಾಲಾಂ ದಧತೀ ದಕ್ಷಿಣೇ ಕರೇ ।
ವರೋದ್ಯತೇ ಕರೇ ಸಂಖ್ಯೇ ಮಾತುಲುಂಗಫಲಂ ಶುಭಂ ॥ ೮೯ ॥
ಕುಮಾರೀರೂಪಿಣೀ ನಿತ್ಯಂ ನಿತ್ಯಂ ದ್ವಾದಶವಾರ್ಷಿಕೀ ।
ಶುದ್ಧಸ್ಫಟಿಕಕಾಂತಿಶ್ಚ ಸುನೀಲಸ್ನಿಗ್ಧಮೂರ್ಧಜಾ ॥ ೯೦ ॥

---

೮೫. ಪೂರ್ವದಲ್ಲಿ ಮಣಿಕರ್ಣಿಕೆಯು ಚಕ್ರಪುಷ್ಕರಿಣಿಯೆಂದೇ ಪ್ರಸಿದ್ಧಿಯನ್ನು ಪಡೆದಿದ್ದಿತು. ಆ ತೀರ್ಥವು ಜಲಪ್ರವಾಹರೂಪವನ್ನು ತ್ಯಜಿಸಿ ಉತ್ತಮ ಸ್ತ್ರೀಯ ರೂಪವನ್ನು ಧರಿಸಿದ್ದಿತು.

೮೬. ನನ್ನ ತಪಸ್ಸಿನ ಸಮಯದಲ್ಲಿ ಮಣಿಕರ್ಣಿಕೆಯು ಪ್ರತ್ಯಕ್ಷವಾಗಿ ಆಕಾರದಿಂದಿರುವುದನ್ನು ನಾನು ಕಂಡೆನು. ಭಕ್ತರಿಗೆ ಮಂಗಳವನ್ನುಂಟು ಮಾಡುವ ಸರ್ವೋತ್ತಮವಾದ ಆಕೆಯ ರೂಪವನ್ನು ವರ್ಣಿಸುವೆನು.

೮೭. ಆ ರೂಪವನ್ನು ಆರು ತಿಂಗಳುಗಳವರೆಗೂ ಮೂರು ಸಂಜೆಗಳಲ್ಲಿಯೂ ಮನುಷ್ಯರು ಧ್ಯಾನಮಾಡುತ್ತಿರಲು ಮಣಿಕರ್ಣಿಕಾದೇವಿಯು ಪ್ರತ್ಯಕ್ಷವಾಗಿ ಅವರಿಗೆ ದರ್ಶನವನ್ನು ಕೊಡುವಳು.

೮೮–೮೯. ಆಕೆಯು ನಾಲ್ಕು ಭುಜಗಳುಳ್ಳವಳೂ ವಿಶಾಲಗಳಾದ ಲೋಚನಗಳುಳ್ಳವಳೂ, ಹಣೆಯಲ್ಲಿ ಜ್ವಲಿಸುತ್ತಿರುವ ಮೂರನೆಯ ಕಣ್ಣುಳ್ಳವಳೂ, ಪಶ್ಚಿಮದಿಕ್ಕಿಗೆ ಮುಖವನ್ನು ತಿರುಗಿಸಿಕೊಂಡು ಕೈಗಳನ್ನು ಮುಗಿದುಕೊಂಡಿರುವವಳೂ ಆಗಿರುವಳು. ಬಲಗೈಯಲ್ಲಿ ನೀಲೋತ್ಪಲಗಳ ಮಾಲೆಯೊಂದನ್ನು ಹಿಡಿದು ಮೇಲಕ್ಕೆತ್ತಿದ ಎಡಗೈಯಲ್ಲಿ ಉತ್ತಮವಾದ ಮಾತುಲುಂಗ (ಮಾದಳ) ಫಲವುಳ್ಳವಳಾಗಿರುವಳು.

೯೦. ಸಂತತವೂ ಹನ್ನೆರಡು ವರ್ಷಗಳ ವಯಸ್ಸಿನ ಅವಿವಾಹಿತ ಕನ್ಯೆಯ ರೂಪವನ್ನು ಧರಿಸಿ ಸ್ವಚ್ಛವಾದ ಸ್ಫಟಿಕವನ್ನು ಮೈಬಣ್ಣದಿಂದ ಹೋಲುತ್ತ ನೀಲವೂ ಸ್ನಿಗ್ಧವೂ ಆದ ಕೇಶರಾಶಿಯಿಂದ ರಾಜಿಸುತ್ತಿರುವಳು.

ಜಿತಪ್ರವಾಲಮಾಣಿಕ್ಯರಮಣೀಯರದಚ್ಛದಾ ।
ಪ್ರತ್ಯಗ್ರಕೇತಕೀಪುಷ್ಪಲಸದ್ಧಮ್ಮಿಲ್ಲಮಸ್ತಕಾ ॥ ೯೧ ॥
ಸರ್ವಾಂಗಮುಕ್ತಾಭರಣಾ ಚಂದ್ರಕಾಂತ್ಯಂಶುಕಾವೃತಾ ।
ಪುಂಡರೀಕಮಯೀಂ ಮಾಲಾಂ ಸಶ್ರೀಕಾಂ ಬಿಭ್ರತೀ ಹೃದಿ ॥ ೯೨ ॥
ಧ್ಯಾತವ್ಯಾನೇನ ರೂಪೇಣ ಮುಮುಕ್ಷುಭಿರಹರ್ನಿಶಂ ।
ನಿರ್ವಾಣಲಕ್ಷ್ಮೀಭವನಂ ಶ್ರೀಮತೀ ಮಣಿಕರ್ಣಿಕಾ ॥ ೯೩ ॥
ಮಂತ್ರಂ ತಸ್ಯಾಶ್ಚ ವಕ್ಷ್ಯಾಮಿ ಭಕ್ತಕಲ್ಪದ್ರುಮಾಭಿಧಂ ।
ಯಸ್ಯಾವರ್ತನತಃ ಸಿದ್ಧ್ಯೇದಪಿ ಸಿದ್ಧ್ಯಷ್ಟಕಂ ನೃಣಾಂ ॥ ೯೪ ॥
ವಾಗ್ಭವಮಾಯಾಲಕ್ಷ್ಮೀಮದನಪ್ರಣವಾನ್ವದೇತ್ಪೂರ್ವಂ ।
ಭಾಂತ್ಯಂ ಬಿಂದೂಪೇತಂ ಮಣಿಪದಮಥಕರ್ಣಿಕೇ ಸಹೃತ್ಪ್ರಣವಪುಟಂ ॥

---

೯೧. ಆಕೆಯ ತುಟಿಗಳು ಹವಳ, ಮಾಣಿಕ್ಯಗಳನ್ನು ರಕ್ತವರ್ಣದಲ್ಲಿ ಜಯಿಸಿರುವುವು. ಹೊಸದಾಗಿ ಬಿರಿದ ಕೇದಿಗೆಯ ಹೂವುಗಳಿಂದಲಂಕರಿಸಿದ ಜಡೆಯಿಂದ ರಮಣೀಯವಾದ ಶಿರಸ್ಸುಳ್ಳವಳು.

೯೨. ಸಮಸ್ತಾವಯವಗಳಲ್ಲಿಯೂ ಮುತ್ತುಗಳ ಆಭರಣಗಳನ್ನು ಧರಿಸಿ, ಚಂದ್ರಕಾಂತಶಿಲೆಯನ್ನು ಹೋಲುವ ವಸ್ತ್ರವನ್ನುಟ್ಟು, ಸರ್ವಲಕ್ಷಣೋಪೇತವಾದ ಕಮಲಮಾಲೆಯೊಂದನ್ನು ವಕ್ಷಃಸ್ಥಳದಲ್ಲಿ ಧರಿಸಿರುವಳು.

೯೩. ಇಂತಹ ರೂಪದಿಂದ ಆಕೆಯನ್ನು ಮುಮುಕ್ಷುಗಳಾದವರು ಅಹೋರಾತ್ರಗಳಲ್ಲಿಯೂ ಧ್ಯಾನಿಸುತ್ತಿರಬೇಕು. ಮಣಿಕರ್ಣಿಕೆಯು ಮೋಕ್ಷಲಕ್ಷ್ಮಿಗೆ ನೆಲೆಮನೆಯಾಗಿಯೂ ಐಹಿಕೈಶ್ವರ್ಯಪ್ರದಳಾಗಿಯೂ ಇರುವಳು.

೯೪. ಇನ್ನು ಭಕ್ತಕಲ್ಪದ್ರುಮವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಆಕೆಯ ಉಪಾಸನೆಯ ಮಂತ್ರವನ್ನು ತಿಳಿಸುವೆನು. ಅದನ್ನು ಪುರಶ್ಚರಣೆಮಾಡುವುದರಿಂದ ಮನುಷ್ಯರಿಗೆ ಅಣಿಮಾದಿ ಅಷ್ಟಸಿದ್ಧಿಗಳೂ ಕರಗತಗಳಾಗುವುವು.

೯೫. ಸರಸ್ವತೀ, ಭುವನೇಶ್ವರಿಯಾದ ಮಾಯೆ, ಲಕ್ಷ್ಮಿ, ಮನ್ಮಥ—ಇವರ ಬೀಜಾಕ್ಷರಗಳನ್ನು ಪ್ರಣವಪೂರ್ವಕವಾಗಿ ಮೊದಲು ಉಚ್ಚರಿಸಬೇಕು. ಭಕಾರವುಳ್ಳ ವರ್ಗದ ಅಂತ್ಯಾಕ್ಷರವನ್ನು ಅನುಸ್ವಾರಸಹಿತವಾಗಿ ಮಣಿಕರ್ಣಿಕೆಯೆಂಬ ಪದದೊಡನೆ ಸೇರಿಸಿ ಆದ್ಯಂತಗಳಲ್ಲಿ ಪ್ರಣವಗಳನ್ನು ಸಂಪುಟರೂಪವಾಗಿ ಉಚ್ಚರಿಸಬೇಕು.*

---

* ಇಲ್ಲಿ ಹೇಳಿರುವ ಕ್ರಮದಿಂದ ಜಪಮಂತ್ರವು "ಓಂ ಐಂ ಹ್ರೀಂ ಶ್ರೀಂ ಕ್ಲೀಂ ಓಂ ಮಂ ಮಣಿಕರ್ಣಿಕೇ ನಮಃ ಓಂ" ಎಂಬುದಾಗಿ ಸಿದ್ಧವಾಗುತ್ತದೆ. ಅರ್ಥಸೌಲಭ್ಯಕ್ಕಾಗಿ ತುಭ್ಯಂ ಎಂಬ ಪದವನ್ನು ಬೇರೆಯಾಗಿ ಅಧ್ಯಾಹಾರಮಾಡಿಕೊಳ್ಳಬೇಕು.

ಮಂತ್ರಃ ಸುರದ್ರುಮಸಮಃ ಸಮಸ್ತಸುಖಸಂತತಿಪ್ರದೋ ಜಪ್ಯಃ ।
ತಿಥಿಭಿಃ ಪರಿಮಿತವರ್ಣಃ ಪರಮಪದಂ ದಿಶತಿ ನಿಶಿತಧಿಯಾಂ ॥ ೯೬ ॥
ತಾರಸ್ತಾತ್ರತೃತೀಯೋ ಬಿಂದ್ವಂತೋ ಮಣಿಪದಂ ತತಃ ಕರ್ಣಿಕೇ ।
ಪ್ರಣವಾತ್ಮಿಕಪದಂ ಕೇನಮ ಇತಿ ಮನುಸಂಖ್ಯವರ್ಣಮನುಃ ॥ ೯೭ ॥
ಅಯಂ ಮಂತ್ರೋಽನಿಶಂ ಜಪ್ಯಃ ಪುಂಭಿರ್ಮುಕ್ತಿಮಭೀಪ್ಸುಭಿಃ ।
ಹೋಮೋ ದಶಾಂಶಕಃ ಕಾರ್ಯಃ ಶ್ರದ್ಧಾಬದ್ಧಾದರೈರ್ನೃಭಿಃ ॥ ೯೮ ॥
ಪರಿಪ್ಲುತೈಃ ಪುಂಡರೀಕೈರ್ಗವ್ಯೇನ ಹವಿಷಾ ಸ್ಫುಟೈಃ ।
ಸಶರ್ಕರೇಣ ಮೇಧಾವೀ ಸಕ್ಷೌದ್ರೇಣ ಸದಾ ಶುಚಿಃ ॥ ೯೯ ॥
ತ್ರಿಲಕ್ಷಮಂತ್ರಜಪ್ಯೇನ ಮೃತೋ ದೇಶಾಂತರೇಷ್ವಪಿ ।
ಅವಶ್ಯಂ ಮುಕ್ತಿಮಾಪ್ನೋತಿ ಮಂತ್ರಸ್ಯಾಸ್ಯ ಪ್ರಭಾವತಃ ॥ ೧೦೦ ॥

---

೯೬. ಕಲ್ಪವೃಕ್ಷಕ್ಕೆ ಸಮಾನವೂ ಸಕಲ ಸೌಖ್ಯಪರಂಪರೆಗಳನ್ನು ಕೈಗೂಡಿಸುವುದೂ ಆದ ಈ ಮಂತ್ರವನ್ನು ಪ್ರತಿ ಮಾನವನೂ ಜಪಿಸಬೇಕು. ಇದರಲ್ಲಿ ತಿಥಿಗಳ ಸಂಖ್ಯೆಯ (ಹದಿನೈದು) ಅಕ್ಷರಗಳಿರುವುವು. ಇದರ ಜಪವು ತೀಕ್ಷ್ಣಬುದ್ಧಿಯುಳ್ಳವರಿಗೆ ಉತ್ತಮ ಗತಿಯನ್ನು ತೋರಿಸಿಕೊಡುವುದು.

೯೭. ಮೊದಲು ಪ್ರಣವವನ್ನುಚ್ಚರಿಸಬೇಕು. ಬಳಿಕ ಪ್ರಣವದೊಳಗಿನ ತೃತೀಯಾಕ್ಷರವನ್ನು ಅನುಸ್ವಾರ ಸಹಿತವಾಗಿ ಹೇಳಬೇಕು. ಬಳಿಕ 'ಮಣಿಕರ್ಣಿಕೇ" ಎಂಬುದನ್ನೂ, ಆಮೇಲೆ "ಪ್ರಣವಾತ್ಮಿಕೇ ನಮಃ" ಎಂಬುದನ್ನೂ ಜಪಿಸಬೇಕು. ಇದು ಎರಡನೆಯ ಕಲ್ಪವು. ಈ ಮಂತ್ರದಲ್ಲಿ ಮನುಗಳ (ಹದಿನಾಲ್ಕು) ಸಂಖ್ಯೆಯ ವರ್ಣಗಳಿರುವುವು.*

೯೮. ಮೋಕ್ಷವನ್ನಪೇಕ್ಷಿಸುವ ಪುರುಷರೆಲ್ಲರೂ ಅಹೋರಾತ್ರಗಳಲ್ಲಿ ಈ ಮಂತ್ರವನ್ನು ಜಪಿಸುತ್ತಿರಬೇಕು. ಮತ್ತು ಶ್ರದ್ಧಾಭಕ್ತಿಯುತರಾದ ಮನುಷ್ಯರು ಜಪಸಂಖ್ಯೆಯ ಹತ್ತರಷ್ಟು ಹೋಮಗಳನ್ನೂ ಮಾಡಬೇಕು.†

೯೯. ಮೇಧಾವಿಯಾದವನು ನಿತ್ಯವೂ ಶುಚಿಯಾಗಿ ಆಜ್ಯದಲ್ಲಿ ನೆನಸಿದ ಕಮಲಗಳಿಂದಲೂ ಸಕ್ಕರೆ, ಜೇನುತುಪ್ಪಗಳನ್ನು ಬೆರಸಿದ ತುಪ್ಪದ ಹವಿಸ್ಸುಗಳಿಂದಲೂ ಆಹುತಿಗಳನ್ನು ಕೊಡಬೇಕು.

೧೦೦. ಈ ಎರಡು ಮಂತ್ರಗಳಲ್ಲಿ ಯಾವುದೊಂದನ್ನಾದರೂ ಮೂರು

---

* ಈ ಮಂತ್ರದ ಸ್ವರೂಪವು "ಓಂ ಮಂ ಮಣಿಕರ್ಣಿಕೇ ಪ್ರಣವಾತ್ಮಿಕೇ ನಮಃ" ಎಂಬುದಾಗಿ ಆಗುವುದು.

ಈ ಎರಡು ಮಂತ್ರಗಳ ಸ್ವರೂಪಗಳನ್ನು ನಿರೂಪಿಸಿ ಹೀಗೆಯೇ ಜಪಿಸಬೇಕೆಂದು ಮುಂದೆ ಹೇಳುವುದರಿಂದ, ರೂಢಿಯಲ್ಲಿ ಮಂತ್ರಪುರಶ್ಚರಣೆಗೆ ಮೊದಲು ಮಾಡುವ ಋಷಿ, ದೇವತಾ, ವಿನಿಯೋಗಾದಿಗಳ ಸ್ಮರಣೆಯನ್ನು ಬೇರೆಯಾಗಿ ಮಾಡಬೇಕಾಗಿಲ್ಲವೆಂದು ತಿಳಿಯಬೇಕು.

† "ಪುಂಭೀ" ಎಂಬ ಶಬ್ದದ ಸ್ವಾರಸ್ಯದಿಂದ ಸ್ತ್ರೀಯರು ಈ ಜಪಗಳನ್ನು ಮಾಡಕೂಡದೆಂಬ ನಿಷೇಧವು ತೋರಿಬರುತ್ತಿರುವುದು.

ಸೌವರ್ಣಪ್ರತಿಮಾ ಕಾರ್ಯಾ ನವರತ್ನಸಮನ್ವಿತಾ ।
ಪೂರ್ವೋಕ್ತರೂಪಸಂಪನ್ನಾ ಸಂಪೂಜ್ಯಾ ಸಾ ಪ್ರಯತ್ನತಃ ॥ ೧೦೧ ॥
ಸಂಪೂಜ್ಯಾ ವಾ ಸದಾ ಗೇಹೇ ಸರ್ವೈರ್ಮೋಕ್ಷೈಕಕಾಂಕ್ಷಿಭಿಃ ।
ಮಣಿಕರ್ಣ್ಯಾಮಥಾಕ್ಷೇಪ್ಯ ಸಮಭ್ಯರ್ಚ್ಯ ಪ್ರಯತ್ನತಃ ॥ ೧೦೨ ॥
ಸಂಸಾರಭೀರುಭಿಃ ಪುಂಭಿಃ ಶ್ರದ್ಧಾಬದ್ಧಾದರೈರಿಹ ।
ಉಪಾಯಃ ಸಮನುಷ್ಠೇಯೋ ಹ್ಯಪಿ ದೂರನಿವಾಸಿಭಿಃ ॥ ೧೦೩ ॥
ಮಣಿಕರ್ಣ್ಯಾಂ ಕೃತಸ್ನಾನೋ ಮಣಿಕರ್ಣೀಶ ವೀಕ್ಷಣಾತ್ ।
ಜನನೀ ಜಠರಾವಾಸೇ ವಸತಿಂ ನ ಲಭೇನ್ನರಃ ॥ ೧೦೪ ॥
ಮಣಿಕರ್ಣೀಶ್ವರಂ ಲಿಂಗಂ ಪುರಾ ಸಂಸ್ಥಾಪಿತಂ ಮಯಾ ।
ಪ್ರಾಗ್ದ್ವಾರೇಽಂತರ್ಗೃಹಸ್ತತ್ರ ಸಮರ್ಚ್ಯೋ ಮೋಕ್ಷಕಾಂಕ್ಷಿಭಿಃ॥ ೧೦೫ ॥
ತತಃ ಪಾಶುಪತಂ ತೀರ್ಥಮವಾಚ್ಯಾಂ ಮಣಿಕರ್ಣಿತಃ ।
ಕೃತೋದಕಕ್ರಿಯಸ್ತತ್ರ ಪಶ್ಯೇತ್ಪಶುಪತೀಶ್ವರಂ ॥ ೧೦೬ ॥

---

ಲಕ್ಷ ಸಲ ಜಪಿಸಿದ ಮನುಷ್ಯನು ದೇಶಾಂತರಗಳಲ್ಲಿ ಮರಣವನ್ನು ಹೊಂದಿದರೂ ಈ ಮಂತ್ರದ ಮಹಿಮೆಯಿಂದ ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವನು.

೧೦೧. ಮೇಲೆ ಹೇಳಿದ ರೂಪವುಳ್ಳ ಪ್ರತಿಮೆಯೊಂದನ್ನು ನವರತ್ನಖಚಿತವಾದ ಚಿನ್ನದಲ್ಲಿ ಮಾಡಿಸಿ ಸರ್ವೋಪಚಾರಗಳಿಂದ ಅದರ ಅರ್ಚನೆಯನ್ನು ಮಾಡಬೇಕು.

೧೦೨. ಮೋಕ್ಷವೊಂದನ್ನೇ ಅಪೇಕ್ಷಿಸುವ ಭಕ್ತರು ಆ ಪ್ರತಿಮೆಯನ್ನು ನಿತ್ಯವೂ ತಮ್ಮ ಮನೆಗಳಲ್ಲಿ ಪೂಜಿಸುತ್ತಿರಬೇಕು. ಅಥವಾ ಸಮಸ್ತೋಪಕರಣಗಳಿಂದ ಪ್ರಯತ್ನಪೂರ್ವಕವಾಗಿ ಪೂಜಿಸಿ ಅದನ್ನು ಮಣಿಕರ್ಣಿಕೆಯ ಜಲದಲ್ಲಿ ವಿಸರ್ಜಿಸಬೇಕು.

೧೦೩. ಸಂಸಾರದ ಭಯವುಳ್ಳವರಾಗಿ, ಶ್ರದ್ಧಾದರಸಮನ್ವಿತರಾಗಿರುವ ಜನರು ಎಷ್ಟೇ ದೂರದಲ್ಲಿ ವಾಸಮಾಡುತ್ತಿದ್ದರೂ ಮೋಕ್ಷವನ್ನು ಪಡೆಯಬೇಕಾದರೆ ಈ ಸುಲಭೋಪಾಯವನ್ನು ಅನುಷ್ಠಾನಮಾಡಬೇಕು.

೧೦೪. ಮಣಿಕರ್ಣಿಕಾತೀರ್ಥದಲ್ಲಿ ಸ್ನಾನವನ್ನುಮಾಡಿ ಮಣಿಕರ್ಣಿಕೇಶ್ವರನನ್ನು ದರ್ಶನಮಾಡಿದ ಮನುಷ್ಯನು ಪುನಃ ತಾಯಿಯ ಗರ್ಭದಲ್ಲಿ ವಾಸವನ್ನನುಭವಿಸುವುದಿಲ್ಲ.

೧೦೫. ಕಾಶೀಕ್ಷೇತ್ರದ ಅಂತರ್ಗೃಹದ ಪೂರ್ವದ್ವಾರದಲ್ಲಿ ಈ ಮಣಿಕರ್ಣಿಕೇಶ್ವರವೆಂಬ ಲಿಂಗವು ನನ್ನಿಂದಲೇ ಸ್ಥಾಪಿತವಾಯಿತು. ಪುರಾತನವಾದ ಈ ಲಿಂಗವನ್ನು ಮೋಕ್ಷಕಾಂಕ್ಷಿಗಳಾದ ಸರ್ವರೂ ಪೂಜಿಸಬೇಕು.

೧೦೬. ಈ ಮಣಿಕರ್ಣಿಕೆಯ ದಕ್ಷಿಣಕ್ಕೆ ಪಾಶುಪತವೆಂಬ ತೀರ್ಥವಿರು

ಯತ್ರ ಪಾಶುಪತೋ ಯೋಗ ಉಪಾದಿಷ್ಟಃ ಪಿನಾಕಿನಃ ।
ಮಮಾಪಿ ವಿಧಿಮುಖ್ಯಾನಾಂ ಸುರಾನಾಂ ಪಶುಪಾಶಹೃತ್ ॥ ೧೦೭ ॥
ಅತಃ ಪಶುಪತಿರ್ಯತ್ರ ಲಿಂಗರೂಪಧರಃ ಸ್ವಯಂ ।
ಪಶುಪಾಶವಿಮೋಕ್ಷಾಯ ನಿತ್ಯಂ ಕಾಶ್ಯಾಂ ವಿಶೋಭತೇ ॥ ೧೦೮ ॥
ತತ್ರ ಚೈತ್ರ ಚತುರ್ದಶ್ಯಾಂ ಶುಕ್ಲಾಯಾಂ ಶುಚಿಮಾನಸೈಃ ।
ಕಾರ್ಯಾ ಯಾತ್ರಾ ಪ್ರಯತ್ನೇನ ರಾತ್ರೌ ಜಾಗರಣಂ ತಥಾ ॥ ೧೦೯ ॥
ಪೂಜಯಿತ್ವಾ ಪಶುಪತಿಮುಪೋಷಣಪರಾಯಣಾಃ ।
ಪಶುಪಾಶೈರ್ನ ಬಧ್ಯಂತೇ ದರ್ಶೇ ವಿಹಿತಪಾರಣಾಃ ॥ ೧೧೦ ॥
ರುದ್ರಾವಾಸಸ್ತತಸ್ತೀರ್ಥಂ ತೀರ್ಥಾತ್ಪಾಶುಪತಾತ್ಪುರಾ ।
ತತ್ರ ಸ್ನಾತ್ವಾ ನರೈರರ್ಚ್ಯೋ ರುದ್ರಾವಾಸೇಶ್ವರೋ ಹರಃ ॥ ೧೧೧ ॥
ಮಣಿಕರ್ಣೀಶ್ವರಾದ್ಯಾಮ್ಯಾಂ ರುದ್ರಾವಾಸೇಶ್ವರಂ ನರಃ ।
ಸಮಾರಾಧ್ಯ ವಸೇಲ್ಲೋಕೇ ರುದ್ರಾವಾಸೇ ನ ಸಂಶಯಃ ॥ ೧೧೨ ॥

---

ವುದು. ಅಲ್ಲಿ ಸ್ನಾನಾದಿ ಕಾರ್ಯಗಳನ್ನು ಮಾಡಿಕೊಂಡು ಪಶುಪತೀಶ್ವರನ ದರ್ಶನವನ್ನು ತೆಗೆದುಕೊಳ್ಳಬೇಕು.

೧೦೭. ಇಲ್ಲಿಯೇ ಮಹಾದೇವನು ನನಗೂ ಬ್ರಹ್ಮದೇವನೇ ಮೊದಲಾದ ಸಮಸ್ತ ದೇವತೆಗಳಿಗೂ ಪಶುಪಾಶಗಳನ್ನು ಕಳೆಯುವ ಸಾಧನವಾದ ಪಾಶುಪತಯೋಗದ ಮಾರ್ಗವನ್ನು ಉಪದೇಶಮಾಡಿದನು.

೧೦೮. ಆದುದರಿಂದ ಈ ಪ್ರದೇಶದಲ್ಲಿ ಪಶುಪತಿಯು ತಾನೇ ಶಿವಲಿಂಗದ ರೂಪವನ್ನು ಸ್ವೀಕರಿಸಿ ಪಶುಸ್ಥಾನೀಯರಾದ ಜೀವರ ಸಂಸಾರಪಾಶಗಳನ್ನು ಬಿಡಿಸುವುದಕ್ಕಾಗಿಯೇ ನಿತ್ಯವೂ ಪ್ರಕಾಶಿಸುತ್ತಿರುವನು.

೧೦೯. ಅಲ್ಲಿ ಚೈತ್ರಮಾಸದ ಶುಕ್ಲಪಕ್ಷದ ಚತುರ್ದಶಿಯ ತಿಥಿಯಲ್ಲಿ ನಿರ್ಮಲಾಂತಃಕರಣರಾಗಿ ಭಕ್ತರು ಪ್ರಯತ್ನದಿಂದ ಮಹೋತ್ಸವವನ್ನೂ ರಾತ್ರಿಯಲ್ಲಿ ಜಾಗರಣೆಯನ್ನೂ ನೆರವೇರಿಸಬೇಕು.

೧೧೦. ಈ ರೀತಿಯಾಗಿ ಒಂದು ಪಕ್ಷದ ದಿವಸಗಳು ಉಪವಾಸದಿಂದಲೇ ಮಹಾದೇವನನ್ನು ಪೂಜಿಸುತ್ತ ಅಮಾವಾಸ್ಯೆಯ ದಿನ ಪಾರಣೆಯನ್ನುಮಾಡುವ ಮಾನವರು ಜೀವತ್ವರೂಪವಾದ ಅಜ್ಞಾನಬಂಧನಗಳಿಂದ ಬಿಡುಗಡೆಯನ್ನು ಹೊಂದುವರು.

೧೧೧. ಆ ಪಾಶುಪತತೀರ್ಥದ ಎದುರಿನಲ್ಲಿಯೇ ರುದ್ರಾವಾಸತೀರ್ಥವಿರುವುದು. ಅಲ್ಲಿ ಸ್ನಾನಮಾಡಿದ ಮನುಷ್ಯರು ರುದ್ರಾವಾಸೇಶ್ವರವೆಂಬ ಶಿವಲಿಂಗವನ್ನು ಪೂಜಿಸಬೇಕು.

೧೧೨. ಈ ರುದ್ರಾವಾಸೇಶ್ವರಲಿಂಗವು ಮಣಿಕರ್ಣಿಕೇಶ್ವರನ ದಕ್ಷಿಣಕ್ಕಿರು

ವಿಶ್ವತೀರ್ಥಂ ತತೋ ಯಾಮ್ಯಾಂ ವಿಶ್ವೈಸ್ತೀರ್ಥೈರಧಿಷ್ಠಿತಂ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ವಿಶ್ವನಾಥಂ ವಿಲೋಕಯೇತ್ ॥ ೧೧೩ ॥
ವಿಶ್ವಾಂ ಗೌರೀಂ ಚ ತದನು ಪೂಜಯಿತ್ವಾತಿಭಕ್ತಿತಃ ।
ವಿಶ್ವಸ್ಯ ಪೂಜ್ಯೋ ಭವತಿ ತತೋ ವಿಶ್ವಮಯೋ ಭವೇತ್ ॥ ೧೧೪ ॥
ಮುಕ್ತಿತೀರ್ಥಂ ಚ ತದನು ತತ್ರಾಪಿ ಕೃತಮಜ್ಜನಃ ।
ಮೋಕ್ಷೇಶ್ವರಂ ತತೋಽಭ್ಯರ್ಚ್ಯ ಮೋಕ್ಷಂ ಪ್ರಾಪ್ನೋತ್ಯಸಂಶಯಂ ॥
ಅವಿಮುಕ್ತೇಶ್ವರಾತ್ಪಶ್ಚಾನ್ಮೋಕ್ಷೇಶಂ ವೀಕ್ಷ್ಯ ಮಾನವಃ ।
ಸ ಪುನರ್ಮಾನವೋ ಲೋಕೇ ಯಾತಾಯಾತಂ ಕರೋತ್ಯಹೋ ॥ ೧೧೬ ॥
ಅವಿಮುಕ್ತೇಶ್ವರಂ ತೀರ್ಥಂ ಮುಕ್ತಿತೀರ್ಥಾತ್ಸಮಾಕ್ಪರೇ ।
ತತ್ರಾಪ್ಲುತ್ಯಾವಿಮುಕ್ತೇಶಮರ್ಚಯಿತ್ವಾ ವಿಮುಚ್ಯತೇ ॥ ೧೧೭ ॥
ತತ್ಪರೇ ತಾರಕಂ ತೀರ್ಥಂ ಯತ್ರ ವಿಶ್ವೇಶ್ವರಃ ಸ್ವಯಂ ।
ಆಚಷ್ಟೇ ತಾರಕಂ ಬ್ರಹ್ಮ ಮೃತಕರ್ಣೇಽಮೃತಾತ್ಮಕಂ ॥ ೧೧೮ ॥

---

ವುದು. ಆ ಶಿವಲಿಂಗವನ್ನು ಪೂಜಿಸಿದವನು ರುದ್ರನ ವಾಸಸ್ಥಾನವಾದ ಕೈಲಾಸದಲ್ಲಿ ವಾಸಮಾಡುವನೆಂಬುದರಲ್ಲಿ ಸಂದೇಹವಿಲ್ಲ.

೧೧೩. ಆದಕ್ಕೂ ದಕ್ಷಿಣದಲ್ಲಿ ವಿಶ್ವತೀರ್ಥವಿರುವುದು. ಅದು ಭೂಲೋಕದಲ್ಲಿರುವ ಸಮಸ್ತ ತೀರ್ಥಗಳ ಅಧಿಷ್ಠಾನವನ್ನೂ ಪಡೆದಿರುವುದು. ಅಲ್ಲಿ ಮನುಷ್ಯನು ಭಕ್ತಿಯಿಂದ ಸ್ನಾನವನ್ನುಮಾಡಿ ವಿಶ್ವನಾಥನನ್ನು ನೋಡಬೇಕು.

೧೧೪. ಬಳಿಕ ಲೋಕಮಾತೆಯಾದ ಪಾರ್ವತಿಯನ್ನೂ ಅತ್ಯಂತ ಭಕ್ತಿಯಿಂದ ಪೂಜಿಸಿ ಮಾನವನು ಲೋಕಕ್ಕೆಲ್ಲ ಪೂಜ್ಯನಾಗಿ ಬಾಳುವನು. ಅಲ್ಲದೆ ಅವನು ಮರಣಕಾಲದಲ್ಲಿ ಬ್ರಹ್ಮಾಂಡದ ಅಂತರ್ಯಾಮಿಯೇ ಆಗಿಬಿಡುವನು.

೧೧೫. ಅದರ ಸಮೀಪದಲ್ಲಿಯೇ ಮುಕ್ತಿತೀರ್ಥವಿರುವುದು. ಅಲ್ಲಿಯೂ ಸ್ನಾನವನ್ನುಮಾಡಿ ಮೋಕ್ಷೇಶ್ವರನನ್ನು ಅರ್ಚಿಸಲು ಮೋಕ್ಷವನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ.

೧೧೬. ಅವಿಮುಕ್ತೇಶ್ವರನ ಹಿಂದುಗಡೆಯಲ್ಲಿರುವ ಮೋಕ್ಷೇಶ್ವರನನ್ನು ನೋಡಿದ ಮನುಷ್ಯನು ಮತ್ತೆ ಮತ್ತೆ ಈ ಮನುಷ್ಯಲೋಕಕ್ಕೆ ಬಂದು ಹೋಗುವುದನ್ನು ತಪ್ಪಿಸಿಕೊಳ್ಳುವನು.

೧೧೭. ಮುಕ್ತಿತೀರ್ಥಕ್ಕೆ ಸ್ವಲ್ಪ ದೂರದಲ್ಲಿಯೇ ಅವಿಮುಕ್ತೇಶ್ವರವೆಂಬ ತೀರ್ಥವೊಂದಿರುವುದು. ಅದರಲ್ಲಿ ಮುಳುಗಿ ಅವಿಮುಕ್ತೇಶ್ವರನನ್ನು ಪೂಜಿಸಲು ಮನುಷ್ಯನು ಮೋಕ್ಷಕ್ಕೆ ಭಾಗಿಯಾಗುವನು.

೧೧೮. ಅದರ ಸಮೀಪದಲ್ಲಿಯೇ ತಾರಕತೀರ್ಥವಿರುವುದು. ಅಲ್ಲಿ ವಿಶ್ವೇಶ್ವರನು ಮೃತರಾದವರ ಕಿವಿಗಳಲ್ಲಿ ತಾನೇ ಮೊದಲು ಅಮೃತತ್ವಪ್ರಾಪಕವಾದ ತಾರಕಬ್ರಹ್ಮಮಂತ್ರವನ್ನುಪದೇಶಿಸಿದನು.

ಸುಸ್ನಾತಸ್ತಾರಕೇ ತೀರ್ಥೇ ತಾರಕೇಶ್ವರದರ್ಶನಾತ್ ।
ಸಂಸಾರತಾರಕಂ ತೀರ್ತ್ವಾ ತಾರಯೇತ್ಸ ಪಿತೄನಪಿ ॥ ೧೧೯ ॥
ತತ್ರಾಭ್ಯಾಶೇ ಸ್ಕಂದತೀರ್ಥಂ ತತ್ರಾಪ್ಲುತ್ಯ ನರೋತ್ತಮಃ ।
ದೃಷ್ಟ್ವಾ ಷಡಾನನಂ ಚೈವ ಜಹ್ಯಾತ್ಷಾಟ್ಕೌಶಿಕೀಂ ತನುಂ ॥ ೧೨೦ ॥
ತಾರಕೇಶ್ವರಪೂರ್ವೇಣ ದೃಷ್ಟ್ವಾ ದೇವಂ ಷಡಾನನಂ ।
ವಸೇತ್ಷಡಾನನೇ ಲೋಕೇ ಕೌಮಾರಂ ವಪುರುದ್ವಹನ್ ॥ ೧೨೧ ॥
ಢುಂಢಿತೀರ್ಥಂ ತತಃ ಪುಣ್ಯಂ ನರಸ್ತತ್ರ ಕೃತೋದಕಃ ।
ಢುಂಢಿಂ ಗಣಪತಿಂ ಸ್ತುತ್ವಾ ನ ವಿಘ್ನೈರಭಿಭೂಯತೇ ॥ ೧೨೨ ॥
ಭವಾನೀತೀರ್ಥಮತುಲಂ ಢುಂಢಿತೀರ್ಥಸ್ಯ ದಕ್ಷಿಣೇ ।
ತತ್ರ ಸ್ನಾತ್ವಾ ವಿಧಾನೇನ ಭವಾನೀಂ ಪರಿಪೂಜ್ಯ ಚ ॥ ೧೨೩ ॥
ದುಕೂಲೈ ರತ್ನನೇಪಥ್ಯೈರ್ನೈವೇದ್ಯೈರ್ಬಹುವಿಸ್ತರೈಃ ।
ಪುಷ್ಪೈರ್ಧೂಪೈಃ ಪ್ರದೀಪೈಶ್ಚ ಭವಾನೀಶೌ ಪ್ರಪೂಜ್ಯ ಚ ॥ ೧೨೪ ॥

---

೧೧೯. ಈ ತಾರಕತೀರ್ಥದಲ್ಲಿ ವಿಧ್ಯುಕ್ತಸ್ನಾನವನ್ನು ಮಾಡಿ ತಾರಕೇಶ್ವರನ ದರ್ಶನವನ್ನು ಮಾಡುವುದರಿಂದ ಮನುಷ್ಯನು ಸಂಸಾರಸಮುದ್ರವನ್ನು ತಾನೂ ದಾಟುವುದಲ್ಲದೆ ತನ್ನ ಪಿತೃಗಳನ್ನೂ ಕಡೆಹಾಯಿಸುವನು.

೧೨೦. ಅದರ ಸಮೀಪದಲ್ಲಿಯೇ ಸ್ಕಂದತೀರ್ಥವಿರುವುದು. ಅದರಲ್ಲಿ ಸ್ನಾನಮಾಡಿದ ಮಾನವಶ್ರೇಷ್ಠನು ಷಣ್ಮುಖಸ್ವಾಮಿಯ ದರ್ಶನವನ್ನು ಮಾಡಲು (ತ್ವಙ್ಮಾಂಸರುಧಿರ ಸ್ನಾಯ್ವಸ್ಥಿಮಜ್ಜೆಗಳೆಂಬ) ಆರು ಕೋಶಗಳುಳ್ಳ ಈ ಸ್ಥೂಲ ದೇಹವನ್ನು ತ್ಯಜಿಸುವನು.

೧೨೧. ತಾರಕೇಶ್ವರನಿಗೆ ಪೂರ್ವದಲ್ಲಿರುವ ಷಣ್ಮುಖಸ್ವಾಮಿಯನ್ನು ನೋಡಿದವನು ನಿತ್ಯಯೌವನವುಳ್ಳ ದೇಹವನ್ನು ತಾಳಿ ಷಡಾನನ ಲೋಕದಲ್ಲಿ ವಾಸ ಮಾಡುವನು.

೧೨೨. ಬಳಿಕ ಪವಿತ್ರವಾದ ಢುಂಢಿತೀರ್ಥವಿರುವುದು. ಅಲ್ಲಿ ಸ್ನಾನಾದಿಗಳನ್ನುಮಾಡಿ ಢುಂಢಿವಿನಾಯಕನನ್ನು ಸ್ತೋತ್ರಮಾಡಲು ತನ್ನ ಕಾರ್ಯಗಳಲ್ಲಿ ಯಾವ ಮಾನವನೂ ವಿಘ್ನಗಳಿಂದ ಪ್ರತಿಹತನಾಗುವುದಿಲ್ಲ.

೧೨೩–೧೨೪. ಢುಂಢೀತೀರ್ಥದ ದಕ್ಷಿಣದಲ್ಲಿ ಅಪ್ರತಿಮವಾದ ಭವಾನೀತೀರ್ಥವಿರುವುದು. ಅಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನುಮಾಡಿ ಭವಾನಿಯನ್ನು ಪೂಜಿಸಿ, ಭವಾನೀಶ್ವರನನ್ನು ವಸ್ತ್ರಗಳಿಂದಲೂ, ರತ್ನಾಭರಣಗಳಿಂದಲೂ, ಬಹುಬಗೆಗಳಾದ ನೈವೇದ್ಯಗಳಿಂದಲೂ, ಪುಷ್ಪಗಳಿಂದಲೂ, ಧೂಪಗಳಿಂದಲೂ, ದೀಪಾವಳಿಗಳಿಂದಲೂ ಪೂಜಿಸಬೇಕು.

ಸಮಸ್ತಮರ್ಚಿತಂ ತೇನ ತ್ರೈಲೋಕ್ಯಂ ಸಚರಾಚರಂ ।
ಭವಾನೀಶಂಕರೌ ಕಾಶ್ಯಾಮರ್ಚಿತೌ ಶ್ರದ್ಧಯಾ ತು ಯೈಃ ॥ ೧೨೪ ॥
ಚೈತ್ರಾಷ್ಟಮ್ಯಾಂ ಮಹಾಯಾತ್ರಾಂ ಭವಾನ್ಯಾಃ ಕಾರಯೇತ್ಸುಧೀಃ ।
ಅಷ್ಟಾಧಿಕಾಃ ಪ್ರಕರ್ತವ್ಯಾಃ ಶತಕೃತ್ವಃ ಪ್ರದಕ್ಷಿಣಾಃ ॥ ೧೨೬ ॥
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪವತೀ ಮಹೀ ।
ಸಶೈಲಾ ಸಸಮುದ್ರಾ ಚ ಸಾಶ್ರಮಾ ಚ ಸಕಾನನಾ ॥ ೧೨೭ ॥
ಅಷ್ಟೌ ಪ್ರದಕ್ಷಿಣಾ ದೇಯಾಃ ಪ್ರತ್ಯಹಂ ತುಷ್ಟಿತತ್ಪರೈಃ ।
ಸಮನೀಯೌ ಪ್ರಯತ್ನೇನ ಭವಾನೀಶಂಕರೌ ಸದಾ ॥ ೧೨೮ ॥
ಭಕ್ತಾನಾಂ ಕಾಮದಾ ನಿತ್ಯಂ ಭವಾನೀವಾಸಸಾಂಪ್ರದಾ ।
ಅತೋ ಭವಾನೀ ಸಂಪೂಜ್ಯಾ ಕಾಶ್ಯಾಂ ತೀರ್ಥನಿವಾಸಿಭಿಃ ॥ ೧೨೯ ॥
ಯೋಗಕ್ಷೇಮಂ ಸದಾ ಕುರ್ಯಾದ್ಭವಾನೀ ಕಾಶಿವಾಸಿನಾಂ ।
ತಸ್ಮಾದ್ಭವಾನೀ ಸಂಸೇವ್ಯಾ ಸತತಂ ಕಾಶಿವಾಸಿಭಿಃ ॥ ೧೩೦ ॥

---

೧೨೪. ಯಾರು ಕಾಶಿಯಲ್ಲಿ ಶ್ರದ್ಧೆಯಿಂದ ಭವಾನೀಶಂಕರರನ್ನು ಪೂಜಿಸಿರುವರೊ, ಅವರಿಂದ ಚರಾಚರಗಳಿಂದೊಡಗೂಡಿದ ಬ್ರಹ್ಮಾಂಡವೆಲ್ಲವೂ ಪೂಜಿತವಾಯಿತೆಂದು ತಿಳಿಯಬೇಕು.

೧೨೬. ಚೈತ್ರಮಾಸದ ಶುಕ್ಲಾಷ್ಟಮಿಯ ದಿನದಲ್ಲಿ ಭವಾನೀದೇವಿಗೆ ಪ್ರಾಜ್ಞನಾದವನು ಮಹೋತ್ಸವವನ್ನು ಮಾಡಿಸಬೇಕು. ಆಗ ಒಂದುನೂರೆಂಟು ಪ್ರದಕ್ಷಿಣೆಗಳನ್ನು ಶ್ರದ್ಧೆಯಿಂದ ಮಾಡಬೇಕು.

೧೨೭. ಅಂತಹವನು ಪರ್ವತಗಳು, ಸಮುದ್ರಗಳು, ಆಶ್ರಮಗಳು ಮತ್ತು ಅರಣ್ಯಗಳನ್ನೊಳಕೊಂಡು ಸಪ್ತದ್ವೀಪಗಳಿಂದ ಕೂಡಿದ ಸಮಸ್ತ ಭೂಮಂಡಲವನ್ನೂ ಪ್ರದಕ್ಷಿಣೆಮಾಡಿದ ಪುಣ್ಯವನ್ನು ಪಡೆಯುವನು.

೧೨೮. ಭವಾನೀಶ್ವರರನ್ನು ಸಂತೋಷಗೊಳಿಸುವ ಅಪೇಕ್ಷೆಯುಳ್ಳವರು ಪ್ರತಿದಿನವೂ ಎಂಟು ಪ್ರದಕ್ಷಿಣೆಗಳನ್ನರ್ಪಿಸಬೇಕು. ಮತ್ತು ನಿರಂತರವಾಗಿ ಪ್ರಯತ್ನದಿಂದ ನಮಸ್ಕಾರಗಳನ್ನು ಮಾಡುತ್ತಿರಬೇಕು.

೧೨೯. ಭವಾನೀದೇವಿಯೇ ನಿತ್ಯವೂ ಭಕ್ತರಿಗೆ ಸಕಲಾಪೇಕ್ಷಿತಗಳನ್ನೂ, ವಾಸಗೃಹಗಳನ್ನೂ ಕೊಡುತ್ತಿರುವಳು. ಆದುದರಿಂದ ಕಾಶಿಯ ತೀರ್ಥಗಳಲ್ಲಿ ವಾಸಮಾಡಲಿಚ್ಛಿಸುವವರು ಆಕೆಯನ್ನು ಪೂಜಿಸುತ್ತಿರಬೇಕು.

೧೩೦. ಭವಾನಿಯೇ ಕಾಶೀಕ್ಷೇತ್ರವಾಸಿಗಳ ಯೋಗಕ್ಷೇಮವನ್ನು ನಿತ್ಯವೂ ನಿರ್ವಹಿಸುತ್ತಿರುವಳು. ಆದುದರಿಂದ ಭವಾನಿಯೇ ನಿತ್ಯವೂ ಕಾಶೀವಾಸಿಗಳಿಗೆ ಸಂಸೇವ್ಯಳಾಗಿರುವಳು.

ಭಿಕ್ಷಣೀಯಾ ಸದಾ ಭಿಕ್ಷಾ ಭಿಕ್ಷುಣಾ ಮೋಕ್ಷಕಾಂಕ್ಷಿಣಾ ।
ಯತೋ ಭಿಕ್ಷಾಪ್ರದಾ ಕಾಶ್ಯಾಂ ವಿಶ್ವೇಶಸ್ಯ ಕುಟುಂಬಿನೀ ॥ ೧೩೧ ॥
ಗೃಹಮಧ್ಯೇಽತ್ರ ವಿಶ್ವೇಶೋ ಭವಾನೀ ತತ್ಕುಟುಂಬಿನೀ ।
ಸರ್ವೇಭ್ಯಃ ಕಾಶಿಸಂಸ್ಥೇಭ್ಯೋ ಮೋಕ್ಷಭಿಕ್ಷಾಂ ಪ್ರಯಚ್ಛತಿ ॥ ೧೩೨ ॥
ದುಷ್ಪ್ರಾಪಮಪಿ ಯತ್ಕಿಂಚಿತ್ಕಾಶೀಕ್ಷೇತ್ರನಿವಾಸಿನಾಂ ।
ತತ್ಸುಪ್ರಾಪ್ಯಂ ಕರೋತ್ಯೇವ ಭವಾನೀ ಪೂಜಿತಾ ನೃಭಿಃ ॥ ೧೩೩ ॥
ಕುರ್ಯಾಜ್ಜಾಗರಣಂ ರಾತ್ರೌ ಮಹಾಷ್ಟಮ್ಯಾಂ ವ್ರತೀ ನರಃ ।
ಪ್ರಾತರ್ಭವಾನೀಮಭ್ಯರ್ಚ್ಯ ಪ್ರಾಪ್ನುಯಾದ್ವಾಂಛಿತಂ ಫಲಂ ॥ ೧೩೪ ॥
ಶುಕ್ರೇಶಾತ್ಪಶ್ಚಿಮಾಶಾಯಾಂ ಭವಾನೀಂ ಯೋಽಭಿವೀಕ್ಷತೇ ।
ಸರ್ವೇ ಮನೋರಥಾಸ್ತಸ್ಯ ಸಿಧ್ಯಂತೀಹ ನ ಸಂಶಯಃ ॥ ೧೩೫ ॥
ಕಾಶ್ಯಾಂ ಸದೈವ ವಸ್ತವ್ಯಂ ಸ್ನಾತವ್ಯೋತ್ತರವಾಹಿನೀ ।
ಭವಾನೀಶಂಕರೌ ಸೇವ್ಯೌ ಪ್ರಾಪ್ತವ್ಯೇ ಭುಕ್ತಿಮುಕ್ತಿಕೇ ॥ ೧೩೬ ॥

---

೧೩೧. ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರನ ಅರ್ಧಾಂಗಿಯಾದ ಅನ್ನಪೂರ್ಣೆಯೇ ಎಲ್ಲರಿಗೂ ಭಿಕ್ಷೆಯನ್ನು ನೀಡುತ್ತಿರುವಳಾದುದರಿಂದ ಮೋಕ್ಷಕಾಂಕ್ಷಿಗಳಾದ ಭಿಕ್ಷುಗಳು ಯಾವಾಗಲೂ ಭಿಕ್ಷೆಯನ್ನೇ ಅವಲಂಬಿಸಿರಬೇಕು.

೧೩೨. ಅಂತರ್ಗೃಹದ ಮಧ್ಯದಲ್ಲಿ ವಿಶ್ವೇಶ್ವರನು ನೆಲಸಿರುವನು. ಭವಾನಿಯೇ ಅವನಿಗೆ ಕುಟುಂಬಿನಿಯಾಗಿರುವಳು. ಆಕೆಯೇ ಕಾಶೀಕ್ಷೇತ್ರವಾಸಿಗಳಾದ ಸಕಲರಿಗೂ ಮೋಕ್ಷಭಿಕ್ಷೆಯನ್ನು ನೀಡುತ್ತಿರುವಳು.

೧೩೩. ಕಾಶೀಕ್ಷೇತ್ರದಲ್ಲಿ ವಾಸಮಾಡುವ ಜನರಿಗೆ ಎಂತಹ ದುಷ್ಪ್ರಾಪ್ಯ ವಸ್ತುವಾದರೂ ಅವರಿಂದ ಪೂಜಿತಳಾದ ಭವಾನಿಯು ಅದನ್ನು ಸುಲಭಸಾಧ್ಯವಾಗುವಂತೆ ಮಾಡುವಳು.

೧೩೪. ವ್ರತವನ್ನು ಕೈಕೊಂಡ ಮಾನವನು ಮೇಲೆ ಹೇಳಿದ ಮಹಾಷ್ಟಮಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಮಾರನೆಯ ಪ್ರಾತಃಕಾಲದಲ್ಲಿ ಭವಾನಿಯನ್ನು ಪೂಜಿಸಲು ವಾಂಛಿತಫಲವನ್ನು ಪಡೆಯುವನು.

೧೩೫. ಶುಕ್ರೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿರುವ ಭವಾನಿಯ ದರ್ಶನವನ್ನು ಯಾವನು ಮಾಡುವನೊ, ಅವನ ಸಕಲ ಮನೋರಥಗಳೂ ಸಿದ್ಧಿಸುವುದರಲ್ಲಿ ಸಂದೇಹವೇ ಇರುವದಿಲ್ಲ.

೧೩೬. ಮನುಷ್ಯನಾಗಿ ಹುಟ್ಟಿದವನು ಯಾವಾಗಲೂ ಕಾಶಿಯಲ್ಲಿಯೇ ವಾಸಮಾಡಬೇಕು. ಉತ್ತರವಾಹಿನಿಯಾದ ಗಂಗೆಯಲ್ಲಿ ಸ್ನಾನವನ್ನು ಮಾಡಬೇಕು. ಭವಾನೀಶಂಕರರನ್ನು ಸೇವಿಸಬೇಕು. ಮತ್ತು ಭುಕ್ತಿಮುಕ್ತಿಗಳೆರಡನ್ನೂ ಸಾಧಿಸಿಕೊಳ್ಳಬೇಕು.

ಮಾತರ್ಭವಾನಿ ತವ ಪಾದರಜೋ ಭವಾನಿ
ಮಾತರ್ಭವಾನಿ ತವ ದಾಸತರೋ ಭವಾನಿ ।
ಮಾತರ್ಭವಾನಿ ನ ಭವಾನಿ ಯಥಾ ಭವೇಸ್ಮಿನ್
ತ್ವದ್ಭಾಗ್ಯವಾನ್ಯನುದಿನಂ ನ ಪುನರ್ಭವಾನಿ ॥ ೧೩೭ ॥
ತಿಷ್ಠತಾ ಗಚ್ಛತಾ ವಾಪಿ ಸ್ವಪತಾ ಜಾಗ್ರತಾಪಿ ವಾ ।
ಅಯಂ ಮಂತ್ರಃ ಸದಾ ಜಪ್ಯಃ ಸುಖಾಪ್ತ್ಯೈ ಕಾಶಿವಾಸಿನಾ ॥ ೧೩೮ ॥
ಈಶಾನತೀರ್ಥಂ ತತ್ರೈವ ಭವಾನೀತೀರ್ಥಸನ್ನಿಧೌ ।
ತತ್ರ ಸ್ನಾತೋ ಯ ಈಶಾನಮರ್ಚಯೇನ್ನ ಸ ಜನ್ಮಭಾಕ್ ॥ ೧೩೯ ॥
ಜ್ಞಾನತೀರ್ಥಂ ಚ ತತ್ರೈವ ಜ್ಞಾನದಂ ಸರ್ವದಾ ನೃಣಾಂ ।
ಕೃತಾಭಿಷೇಕಸ್ತತ್ತೀರ್ಥೇ ದೃಷ್ಟ್ವಾ ಜ್ಞಾನೇಶ್ವರಂ ಶಿವಂ ॥ ೧೪೦ ॥
ಜ್ಞಾನವಾಪೀಸಮೀಪಸ್ಥೋ ಜ್ಞಾನೇಶೋ ಯೈಃ ಸಮರ್ಚಿತಃ ।
ಜ್ಞಾನಭ್ರಂಶೋ ನ ತೇಷಾಂ ಸ್ಯಾದಪಿ ಪಂಚತ್ವಮೃಚ್ಛತಾಂ ॥ ೧೪೧ ॥
ಶೈಲಾದಿತೀರ್ಥಂ ತತ್ರೈವ ಪರಮರ್ದ್ಧಿಪ್ರಕಾಶಕಂ ।
ತತ್ರ ಶ್ರಾದ್ಧಾದಿಕಂ ಕೃತ್ವಾ ದತ್ವಾ ದಾನಂ ಸ್ವಶಕ್ತಿತಃ ॥ ೧೪೨ ॥

---

೧೩೭. ತಾಯಿಯೆ ಭವಾನಿ! ನಾನು ಎಂದಿಗೂ ನಿನ್ನ ಪಾದಕಮಲಗಳ ಧೂಳಿಯಾಗಿರುವಂತೆ ಅನುಗ್ರಹಿಸು. ನಿನ್ನ ದಾಸರಿಗೆ ದಾಸನಾಗಿರುವ ಭಾಗ್ಯವನ್ನು ಕೊಡು. ಮಾತೆಯೆ! ಈ ಸಂಸಾರದಲ್ಲಿ ಪುನಃ ಬಂಧನವನ್ನು ಅನುಭವಿಸದಂತೆ ಮಾಡುವ ನಿನ್ನ ಭಕ್ತಿಯನ್ನು ನನಗೆ ಅನುದಿನವೂ ಉಂಟು ಮಾಡುತ್ತಿರು. ಈ ದೇಹವಳಿದ ಮೇಲೆ ನನಗೆ ಮತ್ತೊಂದು ಜನ್ಮವು ಬಾರದಿರಲಿ.

೧೩೮. ಕಾಶೀನಿವಾಸಿಯಾದವನು ಇಹಪರಗಳಲ್ಲಿ ಸೌಖ್ಯಗಳನ್ನು ಪಡೆಯ ಬೇಕಾದರೆ ಈ ಮಂತ್ರವನ್ನು ನಿಂತಾಗಲೂ, ನಡೆಯುವಾಗಲೂ, ನಿದ್ರಿಸು ವಾಗಲೂ, ಎಚ್ಚೆತ್ತಿರುವಾಗಲೂ ಸರ್ವಕಾಲಗಳಲ್ಲಿಯೂ ಜಪಿಸುತ್ತಿರಬೇಕು.

೧೩೯. ಆ ಭವಾನೀತೀರ್ಥದ ಸನ್ನಿಧಿಯಲ್ಲಿಯೇ ಈಶಾನತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿ ಈಶ್ವರನನ್ನು ಅರ್ಚಿಸಿದವನು ಪುನರ್ಜನ್ಮವನ್ನು ಪಡೆಯುವುದಿಲ್ಲ.

೧೪೦. ಅಲ್ಲಿಯೇ ಮನುಷ್ಯರಿಗೆ ಸರ್ವಕಾಲಗಳಲ್ಲಿಯೂ ಜ್ಞಾನವನ್ನು ಕೊಡುವ ಜ್ಞಾನತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾನವನ್ನುಮಾಡಿಕೊಂಡು ಜ್ಞಾನೇಶ್ವರರೂಪಿಯಾದ ಶಿವನನ್ನು ಸಂದರ್ಶಿಸಬೇಕು.

೧೪೧. ಜ್ಞಾನವಾಪಿಯ ಸಮೀಪದಲ್ಲಿರುವ ಜ್ಞಾನೇಶ್ವರನನ್ನು ಯಾರು ಚೆನ್ನಾಗಿ ಅರ್ಚಿಸುವರೊ, ಅವರಿಗೆ ಮರಣಕಾಲದಲ್ಲಿಯೂ ತತ್ತ್ವಜ್ಞಾನದ ಭ್ರಂಶವುಂಟಾಗುವುದಿಲ್ಲ.

೧೪೨. ಅಲ್ಲಿಯೇ ಮಹಾವೈಭವವನ್ನು ಪ್ರಕಾಶಗೊಳಿಸುತ್ತಿರುವ ಶೈಲಾದಿ

ಶೈಲಾದೀಶ್ವರಮಾಲೋಕ್ಯ ಜ್ಞಾನವಾಪ್ಯಾ ಉದಗ್ದಿಶಿ ।
ಲಭೇದ್ಗಣತ್ವಪದವೀಂ ನಾತ್ರ ಕಾರ್ಯಾ ವಿಚಾರಣಾ ॥ ೧೪೩ ॥
ನಂದತೀರ್ಥಾದವಾಪ್ಯಾಂ ತು ವಿಷ್ಣುತೀರ್ಥಂ ಪರಂ ಮಮ ।
ತತ್ರ ಪಿಂಡಾನ್ವಿನಿರ್ವಾಪ್ಯ ಪಿತ್ರೂಣಾಮನೃಣೋ ಭವೇತ್ ॥ ೧೪೪ ॥
ವಿಷ್ಣುತೀರ್ಥೇ ಕೃತಸ್ನಾನೋ ಯೋ ಮಾಂ ವಿಷ್ಣುಂ ವಿಲೋಕಯೇತ್ ।
ವಿಶ್ವೇಶಾದ್ದಕ್ಷಿಣೇ ಪಾರ್ಶ್ವೇ ವಿಷ್ಣುಲೋಕಂ ಸ ಗಚ್ಛತಿ ॥ ೧೪೫ ॥
ಯಃ ಪ್ರತ್ಯೇಕಾದಶೀಂ ಪ್ರಾಪ್ಯ ಶಯನೀಂ ಬೋಧಿನೀಂ ತಥಾ ।
ಕುರ್ಯಾಜ್ಜಾಗರಣಂ ರಾತ್ರೌ ಮಮ ಮೂರ್ತಿಸಮೀಪತಃ ॥ ೧೪೬ ॥
ಪ್ರಾತಃ ಸಮರ್ಚ್ಯ ಮಾಂ ಭಕ್ತ್ಯಾ ಭೋಜಯಿತ್ವಾ ದ್ವಿಜಾನಪಿ ।
ದತ್ವಾ ಗಾಃ ಕಾಂಚನಂ ಭೂಮಿಂ ನ ಭೂಯೋ ಭೂಮಿಭಾಗ್ಭವೇತ್ ॥
ಕೃತ್ವಾ ತತ್ರ ವ್ರತೋತ್ಸರ್ಗಂ ವಿತ್ತಶಾಠ್ಯವಿವರ್ಜಿತಃ ।
ಸಂಯಗ್ವ್ರತಫಲಂ ಧೀಮಾನ್ಪ್ರಾಪ್ನೋತ್ಯೇವ ಮಮಾಜ್ಞಯಾ ॥ ೧೪೮ ॥

---

ತೀರ್ಥವಿರುವುದು. ಅಲ್ಲಿ ಶ್ರಾದ್ಧಾದಿ ಪಿತೃಕಾರ್ಯಗಳನ್ನು ನೆರವೇರಿಸಬೇಕು. ಮತ್ತು ಶಕ್ತಿಗನುಸಾರವಾಗಿ ದಾನವನ್ನು ಮಾಡಬೇಕು.

೧೪೩. ಜ್ಞಾನವಾಪಿಗೆ ಉತ್ತರದಿಕ್ಕಿನಲ್ಲಿರುವ ಶೈಲಾದೀಶ್ವರನನ್ನು ನೋಡಲು ಶಿವಗಣಗಳ ಪದವಿಯನ್ನು ಹೊಂದುವನು ಈ ವಿಷಯದಲ್ಲಿ ಸಂದೇಹಪಡಬೇಕಾದ ಆವಶ್ಯಕವಿಲ್ಲ.

೧೪೪. ಈ ನಂದತೀರ್ಥಕ್ಕೆ ದಕ್ಷಿಣದಲ್ಲಿ ನನಗೆ ಪ್ರಿಯವಾದ ವಿಷ್ಣುತೀರ್ಥವಿರುವುದು. ಅಲ್ಲಿ ಪಿಂಡಗಳನ್ನು ಅರ್ಪಿಸಲು ಮನುಷ್ಯನು ಪಿತೃಋಣದಿಂದ ಮುಕ್ತನಾಗುವನು.

೧೪೫. ವಿಷ್ಣುತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ವಿಶ್ವೇಶ್ವರನಿಗೆ ದಕ್ಷಿಣಪಾರ್ಶ್ವದಲ್ಲಿರುವ ಮಹಾವಿಷ್ಣುವಾದ ನನ್ನನ್ನು ಯಾವನು ನೋಡುವನೊ, ಅವನು ವೈಕುಂಠಲೋಕವನ್ನೇ ಸೇರುವನು.

೧೪೬–೧೪೭. ಯಾವನು ಪ್ರತಿವರ್ಷದಲ್ಲಿಯೂ ಉತ್ಥಾನೈಕಾದಶಿ ಮತ್ತು ಶಯನೈಕಾದಶಿಗಳು ಪ್ರಾಪ್ತವಾಗಲು ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ನನ್ನ ಮೂರ್ತಿಯ ಸಮೀಪದಲ್ಲಿಯೇ ಇದ್ದು, ಮಾರನೆಯ ಪ್ರಾತಃಕಾಲದಲ್ಲಿ ನನ್ನನ್ನು ಭಕ್ತಿಯಿಂದ ಪೂಜಿಸಿ, ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ಗೋವುಗಳನ್ನೂ, ಹಿರಣ್ಯವನ್ನೂ, ಭೂಮಿಯನ್ನೂ ದಾನಮಾಡುವನೊ, ಅವನು ಪುನಃ ಭೂಲೋಕದಲ್ಲಿ ಜನ್ಮವನ್ನು ತಾಳುವುದಿಲ್ಲ.

೧೪೮. ಅಲ್ಲಿ ದ್ರವ್ಯಲೋಭವನ್ನು ಬಿಟ್ಟವನಾಗಿ ವ್ರತದ ಉದ್ಯಾಪನೆಯನ್ನು ಮಾಡಿದ ಮನುಷ್ಯನು ನನ್ನ ಆಜ್ಞೆಯಂತೆ ಬುದ್ಧಿವಂತನಾಗಿ ವ್ರತವನ್ನು ಸಾಂಗೋಪಾಂಗವಾಗಿ ಮಾಡಿದ ಫಲವನ್ನು ಪಡೆಯುವನು.

ಮಮ ತೀರ್ಥಾದವಾಚ್ಯಾಂ ತು ತೀರ್ಥಂ ಪೈತಾಮಹಂ ಶುಭಂ ।
ತತ್ರ ಶ್ರಾದ್ಧವಿಧಾನೇನ ತರ್ಪಯಿತ್ವಾ ಪಿತಾಮಹಾನ್ ॥ ೧೪೯ ॥
ಪಿತಾಮಹೇಶ್ವರಂ ಲಿಂಗಂ ಬ್ರಹ್ಮನಾಲೋಪರಿಸ್ಥಿತಂ ।
ಪೂಜಯಿತ್ವಾ ನರೋ ಭಕ್ತ್ಯಾ ಬ್ರಹ್ಮಲೋಕಮವಾಪ್ನುಯಾತ್ ॥ ೧೫೦ ॥
ಬ್ರಹ್ಮಸ್ರೋತಃ ಸಮೀಪೇ ತು ಕೃತಂ ಕರ್ಮ ಶುಭಾಶುಭಂ ।
ಪರಾಮಕ್ಷಯತಾಮೇತಿ ಶುಭಮೇವ ತತಶ್ಚರೇತ್ ॥ ೧೫೧ ॥
ಅತ್ಯಲ್ಪಮಪಿ ಯತ್ಕರ್ಮ ಕೃತಮತ್ರ ಶುಭಾಶುಭಂ ।
ಪ್ರಲಯೇಽಪಿ ನ ತಸ್ಯಾಸ್ತಿ ಪ್ರಲಯೋ ಮುನಿಸತ್ತಮ ॥ ೧೫೨ ॥
ನಾಭಿತೀರ್ಥಮಿದಂ ಪ್ರೋಕ್ತಂ ನಾಭಿಭೂತಂ ಯತಃ ಕ್ಷಿತೇಃ ।
ಅಪಿ ಬ್ರಹ್ಮಾಂಡಗೋಲಸ್ಯ ನಾಭಿರೇಷಾ ಶುಭೋದಯಾ ॥ ೧೫೩ ॥
ಸ ಮಣಿಕರ್ಣಿಕೇಯಿಯಂ ನಾಭಿರ್ಗಾಂಭೀರ್ಯಭೂಮಿಕಾ ।
ಬ್ರಹ್ಮಾಂಡಗೋಲಕಂ ಸರ್ವಂ ಯಸ್ಯಾಮೇತಿ ಲಯೋದಯಂ ॥ ೧೫೪ ॥

---

೧೪೯. ನನ್ನ ತೀರ್ಥದ ದಕ್ಷಿಣದಿಕ್ಕಿಗೆ ಪವಿತ್ರವಾದ ಬ್ರಹ್ಮತೀರ್ಥವಿರವುದು. ಅಲ್ಲಿ ಶ್ರಾದ್ಧಕಾರ್ಯಗಳನ್ನು ಮಾಡಿ ಪಿತಾಮಹರೆಲ್ಲರನ್ನೂ ತೃಪ್ತಿಗೊಳಿಸಬೇಕು.

೧೫೦. ಬ್ರಹ್ಮನಾಳದ ಮೇಲೆ ಪ್ರತಿಷ್ಠಿತವಾಗಿರುವ ಪಿತಾಮಹೇಶ್ವರ ಲಿಂಗವನ್ನು ಭಕ್ತಿಯಿಂದ ಪೂಜೆಮಾಡಿದ ಮನುಷ್ಯನು ಬ್ರಹ್ಮಲೋಕವನು ಪಡೆಯುವನು.

೧೫೧. ಈ ಪಿತಾಮಹತೀರ್ಥದ ಸಮೀಪದಲ್ಲಿ ಮಾಡಿದ ಶುಭಾಶುಭಕರ್ಮಗಳೆಲ್ಲವೂ ಅತ್ಯಂತ ಅಕ್ಷಯಗುಣಿತಗಳಾಗುವುವು. ಆದುದರಿಂದ ಅಲ್ಲಿ ನಿತ್ಯವೂ ಶುಭಕಾರ್ಯಗಳನ್ನೇ ಮಾಡಬೇಕು.

೧೫೨. ಮುನಿವರ್ಯನೆ! ಇಲ್ಲಿ ಶುಭವಾಗಲಿ, ಅಶುಭವಾಗಲಿ, ಮಾಡಲ್ಪಟ್ಟ ಅತ್ಯಲ್ಪವಾದ ಕಾರ್ಯವಾದರೂ, ಅದು ಅನಂತಗುಣಿತವಾಗಿ ಅದರ ಫಲಕ್ಕೆ ಪ್ರಳಯಕಾಲದಲ್ಲಿಯೂ ನಾಶವುಂಟಾಗುವುದಿಲ್ಲ.

೧೫೩. ಈ ತೀರ್ಥವು ಭೂಮಂಡಲಕ್ಕೆ ನಾಭಿಯಂತಿರುವುದರಿಂದ ಇದಕ್ಕೆ ನಾಭಿತೀರ್ಥವೆಂದೇ ಹೆಸರಾಗಿರುವುದು. ಅಷ್ಟೇ ಅಲ್ಲದೆ ಮಂಗಳಾಸ್ಪದವಾದ ಈ ಸ್ಥಳವು ಸಕಲಬ್ರಹ್ಮಾಂಡಕ್ಕೂ ನಾಭಿಯಾಗಿರುವುದು.

೧೫೪. ಗಾಂಭೀರ್ಯಕ್ಕೆ ನೆಲೆಮನೆಯಾದ ಈ ನಾಭಿತೀರ್ಥವು ಮಣಿಕರ್ಣಿಕೆಯ ಜಲದಿಂದಲೇ ಕೂಡಿರುವುದು. ಇದರಲ್ಲಿಯೇ ಬ್ರಹ್ಮಾಂಡದ ಗೋಳಕವೆಲ್ಲವೂ ಲಯವನ್ನೂ, ಉದ್ಭವವನ್ನೂ ಪಡೆಯುತ್ತಿರುವುದು.

ಬ್ರಹ್ಮನಾಲಂ ಪರಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।
ತತ್ಸಂಗಮೇ ನರಃ ಸ್ನಾತ್ವಾ ಕೋಟಿಜನ್ಮಮಲಂ ಹರೇತ್ ॥ ೧೫೫ ॥
ಬ್ರಹ್ಮನಾಲೇ ಪತೇದ್ಯೇಷಾಮಪಿ ಕೀಕಸಮಾತ್ರಕಂ ।
ಬ್ರಹ್ಮಾಂಡಮಂಡಪಾಂತಸ್ತೇ ನ ವಿಶಂತಿ ಕದಾಚನ ॥ ೧೫೬ ॥
ತತೋ ಭಾಗೀರಥೇಸ್ತೀರ್ಥಂ ಬ್ರಹ್ಮನಾಲಾಚ್ಚ ದಕ್ಷಿಣೇ ।
ತತ್ರ ಸ್ನಾತ್ವಾ ನರಃ ಸಂಯುಜ್ಮುಚ್ಯತೇ ಬ್ರಹ್ಮಹತ್ಯಯಾ ॥ ೧೫೭ ॥
ಭಾಗೀರಥೀಶ್ವರಂ ಲಿಂಗಂ ಸ್ವರ್ಗದ್ವಾರಸ್ಯ ಸನ್ನಿಧೌ ।
ದರ್ಶನಾದ್ಬ್ರಹ್ಮಹತ್ಯಾಯಾಃ ಪುರಶ್ಚರಣಮುಚ್ಯತೇ ॥ ೧೫೮ ॥
ಅಶುಭಾಂ ಗತಿಮಾಪನ್ನಾ ಯಸ್ಯ ಪೂರ್ವೇ ಪಿತಾಮಹಾಃ ।
ತೇನ ಭಾಗೀರಥೀತೀರ್ಥೇ ತರ್ಪಣೀಯಾಃ ಪ್ರಯತ್ನತಃ ॥ ೧೫೯ ॥
ತತ್ರ ಭಾಗೀರಥೇ ತೀರ್ಥೇ ಶ್ರಾದ್ಧಂ ಕೃತ್ವಾ ವಿಧಾನತಃ ।
ಬ್ರಾಹ್ಮಣಾನ್ಭೋಜಯಿತ್ವಾ ತು ಬ್ರಹ್ಮಲೋಕೇ ನಯೇತ್ಪಿತೄನ್ ॥ ೧೬೦ ॥

---

೧೫೫. ಬಳಿಕ ಮೂರುಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ ಬ್ರಹ್ಮನಾಳವೆಂಬ ತೀರ್ಥವಿರುವುದು. ಅದರಲ್ಲಿ ಮನುಷ್ಯನು ಸ್ನಾನವನ್ನು ಮಾಡಲು ಕೋಟಿಜನ್ಮಗಳಲ್ಲಿ ಸಂಚಿತಗಳಾದ ಪಾಪಗಳನ್ನು ಕಳೆದುಕೊಳ್ಳುವನು.

೧೫೬. ಯಾರ ದೇಹದ ಒಂದು ಅಸ್ಥಿಮಾತ್ರವಾದರೂ ಬ್ರಹ್ಮನಾಳತೀರ್ಥದಲ್ಲಿ ವಿಸರ್ಜಿಸಲ್ಪಡುವುದೊ, ಅವರು ಎಂದಿಗೂ ಬ್ರಹ್ಮಾಂಡದೊಳಗಿನ ಯಾವ ಲೋಕಗಳಲ್ಲಿಯೂ ಜನ್ಮವನ್ನು ಪಡೆಯುವುದಿಲ್ಲ.

೧೫೭. ಈ ಬ್ರಹ್ಮನಾಳದ ದಕ್ಷಿಣದಲ್ಲಿಯೇ ಭಾಗೀರಥೀತೀರ್ಥವಿರುವುದು. ಅಲ್ಲಿ ವಿಧ್ಯುಕ್ತರೀತಿಯಿಂದ ಸ್ನಾನವನ್ನು ಮಾಡಿದ ಮಾನವನು ಬ್ರಹ್ಮಹತ್ಯೆಯ ಮಹಾಪಾತಕದಿಂದಲೂ ಬಿಡುಗಡೆಯನ್ನು ಹೊಂದುವನು.

೧೫೮. ಬ್ರಹ್ಮಹತ್ಯೆಯನ್ನು ದರ್ಶನಮಾಡಿದವರ ಶುದ್ಧಿಗಾಗಿ ಸ್ವರ್ಗದ್ವಾರದ ಸನ್ನಿಧಾನದಲ್ಲಿರುವ ಭಾಗೀರಥೀಶ್ವರಲಿಂಗದ ನಾಮದ ಪುರಶ್ಚರಣೆಯು ಶಾಸ್ತ್ರದಲ್ಲಿ ವಿಹಿತವಾಗಿರುವುದು.

೧೫೯. ಯಾವ ಮಾನವನ ಪೂರ್ವಿಕರಾದ ಪಿತಾಮಹಾದಿಗಳು ದುರ್ಗತಿಯನ್ನು ಪಡೆದಿರುವರೊ, ಆತನು ಪ್ರಯತ್ನಪೂರ್ವಕವಾಗಿ ಅವರ ಸದ್ಗತಿಗಾಗಿ ಭಾಗೀರಥೀತೀರ್ಥದಲ್ಲಿ ತರ್ಪಣಗಳನ್ನು ಕೊಡಬೇಕು.

೧೬೦. ಆ ಭಾಗೀರಥೀತೀರ್ಥದಲ್ಲಿ ಕ್ರಮವಾಗಿ ಪಿಂಡಪ್ರದಾನಾದಿಗಳಿಂದ ಶ್ರಾದ್ಧಗಳನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದವನು ತನ್ನ ಪಿತೃಗಳನ್ನು ಬ್ರಹ್ಮಲೋಕಕ್ಕೆ ಕಳುಹಿಸಿಕೊಡುವನು.

ತದ್ದಕ್ಷಿಣೇ ಮಹಾತೀರ್ಥಂ ಖುರಕರ್ತರಿಸಂಜ್ಞಿತಂ ।
ಗೋಲೋಕಾದಾಗತಾಭಿಶ್ಚ ಗೋಭಿರ್ಯತ್ಖುರಕೋಟಿಭಿಃ ॥ ೧೬೧ ॥
ಶ್ಲಥೀಕೃತಭೂಭಾಗಂ ತತಸ್ತತ್ಖುರಕರ್ತರೀ ।
ತಸ್ಮಿಂಸ್ತೀರ್ಥೇ ಕೃತಸ್ನಾನಂ ಕೃತಪಿಂಡೋದಕಕ್ರಿಯಃ ॥ ೧೬೨ ॥
ಖುರಕರ್ತರೀಶ್ವರಂ ಲಿಂಗಂ ದೃಷ್ಟ್ವಾ ಗೋಲೋಕಮಾಪ್ನುಯಾತ್ ।
ಗೋಧನೈರ್ನ ವಿಮುಚ್ಯೇತ ತಲ್ಲಿಂಗಸ್ಯ ಸಮರ್ಚನಾತ್ ॥ ೧೬೩ ॥
ದಕ್ಷಿಣೇ ಖುರಕರ್ತರ್ಯಾ ಮಾರ್ಕಂಡಂ ತೀರ್ಥಮುತ್ತಮಂ ।
ಕೃತಶ್ರಾದ್ಧವಿಧಾನಶ್ಚ ತಸ್ಮಿಂಸ್ತೀರ್ಥೇಽಘಹಾರಿಣಿ ॥ ೧೬೪ ॥
ಮಾರ್ಕಂಡೇಯೇಶ್ವರಂ ಲಿಂಗಂ ದೃಷ್ಟ್ವಾಯುರ್ದೀರ್ಘಮಾಪ್ನುಯಾತ್ ।
ಬ್ರಹ್ಮತೇಜೋಽಭಿವೃದ್ಧಿಂ ಚ ಕೀರ್ತಿಂ ಚ ಪರಮಾಂ ಭುವಿ ॥ ೧೬೫ ॥
ವಸಿಷ್ಠತೀರ್ಥಂ ಪರಮಂ ಮಹಾಪಾತಕನಾಶನಂ ।
ತರ್ಪಯಿತ್ವಾ ಪಿತೄಂಸ್ತತ್ರ ವಸಿಷ್ಠೇಶಂ ವಿಲೋಕ್ಯ ಚ ॥ ೧೬೬ ॥
ನರೋ ನ ಲಿಪ್ಯತೇ ಪಾಪೈಃ ಜನ್ಮತ್ರಯಸಮಾರ್ಜಿತೈಃ ।
ವಸಿಷ್ಠಲೋಕೇ ವಸತಿ ಬ್ರಹ್ಮತೇಜಃಸಮನ್ವಿತಃ ॥ ೧೬೭ ॥

---

೧೬೧–೧೬೩. ಅದಕ್ಕೆ ದಕ್ಷಿಣದಲ್ಲಿಯೇ ಖುರಕರ್ತರಿಯೆಂಬ ಹೆಸರಿನ ಮಹಾತೀರ್ಥವೊಂದಿರುವುದು. ಗೋಲೋಕದಿಂದ ಭೂಮಿಗೆ ಬಂದ ಗೋವುಗಳ ಕೋಟಿಸಂಖ್ಯಾಕಗಳಾದ ಗೊರಸುಗಳಿಂದ ಶಿಥಿಲೀಕೃತವಾದ ಈ ಭೂಭಾಗಕ್ಕೆ ಆ ಕಾರಣದಿಂದಲೇ ಖುರಕರ್ತರಿಯೆಂಬ ಹೆಸರುಂಟಾಯಿತು. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಪಿತೃಗಳಿಗೆ ಪಿಂಡಗಳನ್ನೂ, ತರ್ಪಣಗಳನ್ನೂ ಸಮರ್ಪಿಸಿ, ಖುರಕರ್ತರೀಶ್ವರನನ್ನು ನೋಡುವ ಮನುಷ್ಯನು ಗೋಲೋಕವನ್ನು ಹೊಂದುವನು. ಆ ಶಿವಲಿಂಗವನ್ನು ಪೂಜೆಮಾಡುವುದರಿಂದ ಎಂದಿಗೂ ಗೋಧನವಿಹೀನನಾಗುವುದಿಲ್ಲ.

೧೬೪–೧೬೫. ಖುರಕರ್ತರಿಯ ದಕ್ಷಿಣದಲ್ಲಿ ಉತ್ತಮವಾದ ಮಾರ್ಕಂಡೇಯ ತೀರ್ಥವಿರುವುದು. ಸಕಲ ಪಾತಕಗಳನ್ನೂ ಪರಿಹರಿಸುವ ಆ ತೀರ್ಥದಲ್ಲಿ ಶ್ರಾದ್ಧಕಾರ್ಯವನ್ನು ಮಾಡಿಕೊಂಡು ಮಾರ್ಕಂಡೇಯೇಶ್ವರವೆಂಬ ಲಿಂಗದ ದರ್ಶನವನ್ನು ಮಾಡಲು ಮನುಷ್ಯನು ಬಹುಕಾಲದ ಆಯುಷ್ಯವನ್ನೂ, ಬ್ರಹ್ಮತೇಜಸ್ಸಿನ ಅಭಿವೃದ್ಧಿಯನ್ನೂ, ಭೂಲೋಕದಲ್ಲಿ ಅಪರಿಮಿತವಾದ ಕೀರ್ತಿಯನ್ನೂ ಪಡೆಯುವನು.

೧೬೬–೧೬೭. ಮಹಾಪಾತಕಗಳನ್ನೂ ನಾಶಗೊಳಿಸುವ ಶ್ರೇಷ್ಠವಾದ ವಶಿಷ್ಠತೀರ್ಥವಿರುವುದು. ಅಲ್ಲಿ ಪಿತೃಗಳಿಗೆ ತರ್ಪಣಗಳನ್ನಿತ್ತು ವಸಿಷ್ಠೇಶ್ವರನ ದರ್ಶನವನ್ನು ತೆಗೆದುಕೊಂಡು ಮನುಷ್ಯನು ಮೂರುಜನ್ಮಗಳಲ್ಲಿ ಸಂಪಾದಿಸಿದ

ತತ್ರೈವಾರುಂಧತೀತೀರ್ಥಂ ಸ್ತ್ರೀಣಾಂ ಸೌಭಾಗ್ಯವರ್ಧನಂ ।
ಪತಿವ್ರತಾಭಿಸ್ತತ್ತೀರ್ಥಂ ಗಾಹನೀಯಂ ವಿಶೇಷತಃ ॥ ೧೬೮ ॥
ಪೌಂಶ್ಚಲ್ಯಜನಿತೋ ದೋಷಸ್ತತ್ತೀರ್ಥಪರಿಮಜ್ಜನಾತ್ ।
ಕ್ಷಣಾದ್ವಿನಾಶಮಾಗಚ್ಛೇದರುಂಧತ್ಯಾಃ ಪ್ರಭಾವತಃ ॥ ೧೬೯ ॥
ಮಾರ್ಕಂಡೇಯೇಶ್ವರಾತ್ಪ್ರಾಚ್ಯಾಂ ವಸಿಷ್ಠೇಶ್ವರಪೂಜನಾತ್ ।
ನಿಷ್ಪಾಪೋ ಜಾಯತೇ ಮರ್ತ್ಯೋ ಮಹತ್ಪುಣ್ಯಮವಾಪ್ನುಯಾತ್ ॥ ೧೭೦ ॥
ಮೂರ್ತೀರ್ವಸಿಷ್ಠಾರುಂಧತ್ಯೋಸ್ತತ್ರ ಪೂಜ್ಯೇ ಪ್ರಯತ್ನತಃ ।
ನಸ್ತ್ರೀ ವೈಧವ್ಯಮಾಪ್ನೋತಿ ನ ಪುಮಾನ್ಸ್ತ್ರೀವಿಯೋಗಿತಾಂ ॥ ೧೭೧ ॥
ವಸಿಷ್ಠತೀರ್ಥತೋ ಯಾಮ್ಯಾಂ ನರ್ಮದಾತೀರ್ಥಮುತ್ತಮಂ ।
ವಿಧಾಯ ಶ್ರಾದ್ಧಂ ಮೇಧಾವೀ ನರ್ಮದೇಶಂ ವಿಲೋಕ್ಯ ಚ ॥ ೧೭೨ ॥
ತತ್ರ ದತ್ವಾ ಮಹಾದಾನಂ ಪದ್ಮಯಾ ನ ವಿಮುಚ್ಯತೇ ।
ತತಸ್ತ್ರಿಸಂಧ್ಯಂ ವೈ ತೀರ್ಥಂ ತ್ರಿಸಂಧ್ಯೇಶ್ವರಪೂರ್ವತಃ ॥ ೧೭೩ ॥

---

ಪಾತಕಗಳಿಂದಲೂ ಲೇಪಿತನಾಗುವುದಿಲ್ಲ. ಬ್ರಹ್ಮತೇಜಸ್ಸಿನಿಂದೊಡಗೂಡಿದವನಾಗಿ ಅವನು ವಸಿಷ್ಠಲೋಕದಲ್ಲಿಯೇ ವಾಸಮಾಡುತ್ತಿರುವನು.

೧೬೮. ಅದರ ಸಮೀಪದಲ್ಲಿಯೇ ಸ್ತ್ರೀಯರಿಗೆ ಸೌಭಾಗ್ಯವನ್ನು ಅಭಿವೃದ್ಧಿಗೊಳಿಸುವ ಅರುಂಧತೀತೀರ್ಥವಿರುವುದು. ಪತಿವ್ರತೆಯರಾದ ಸ್ತ್ರೀಯರು ಅದರಲ್ಲಿ ಅವಶ್ಯಕವಾಗಿ ಸ್ನಾನವನ್ನು ಮಾಡಬೇಕು.

೧೬೯. ಪುಂಶ್ಚಲಿಯರಾದ ಸ್ತ್ರೀಯರ ಅಪಾತಿವ್ರತ್ಯದೋಷವೂ ಕೂಡ ಆ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಅರುಂಧತೀದೇವಿಯ ಪ್ರಭಾವದ ಫಲವಾಗಿ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುದು.

೧೭೦. ಮಾರ್ಕಂಡೇಯೇಶ್ವರನಿಗೆ ಪೂರ್ವದಿಕ್ಕಿನಲ್ಲಿರುವ ವಸಿಷ್ಠೇಶ್ವರನನ್ನು ಪೂಜಿಸುವುದರಿಂದ ಮನುಷ್ಯನು ಪಾಪರಹಿತನಾಗುವುದಲ್ಲದೆ ಮಹತ್ತರವಾದ ಪುಣ್ಯವನ್ನೂ ಸಂಪಾದಿಸಿಕೊಳ್ಳುವನು.

೧೭೧. ಅಲ್ಲಿರುವ ವಸಿಷ್ಠಾರುಂಧತಿಯರ ಮೂರ್ತಿಗಳನ್ನು ಪ್ರತಿಮನುಷ್ಯನೂ ಪ್ರಯತ್ನದಿಂದ ಪೂಜಿಸಬೇಕು. ಸ್ತ್ರೀಯರು ಪೂಜಿಸುವುದರಿಂದ ವೈಧವ್ಯವನ್ನು ಹೊಂದುವುದಿಲ್ಲ. ಪುರುಷರು ಮಾಡುವ ಪೂಜೆಯಿಂದ ಅವರಿಗೆ ಸ್ತ್ರೀವಿಯೋಗವಾಗುವುದಿಲ್ಲ.

೧೭೨–೧೭೩. ವಸಿಷ್ಠತೀರ್ಥಕ್ಕೆ ದಕ್ಷಿಣದಿಕ್ಕಿನಲ್ಲಿ ಸರ್ವೋತ್ತಮವಾದ ನರ್ಮದಾತೀರ್ಥವಿರುವುದು. ಅಲ್ಲಿ ಮೇಧಾವಿಯಾದವನು ಶ್ರಾದ್ಧವನ್ನುಮಾಡಿ, ನರ್ಮದೇಶ್ವರ ಲಿಂಗವನ್ನು ದರ್ಶನಮಾಡಿಕೊಂಡು, ಮಹಾದಾನಗಳನ್ನು ಕೊಟ್ಟ ಮನುಷ್ಯನು ಎಂದಿಗೂ ಐಶ್ವರ್ಯವಿಹೀನನಾಗುವುದಿಲ್ಲ. ಬಳಿಕ ತ್ರಿಸಂಧ್ಯೇಶ್ವರನಿಗೆ ಪೂರ್ವದಲ್ಲಿ ತ್ರಿಸಂಧ್ಯವೆಂಬ ತೀರ್ಥವಿರುವುದು.

ತತ್ರ ತೀರ್ಥೇ ನರಃ ಸ್ನಾತ್ವಾ ಕೃತ್ವಾ ಸಂಧ್ಯಾಂ ವಿಧಾನತಃ ।
ಸಂಧ್ಯಾಕಾಲವಿಲೋಪೋತ್ಥಪಾತಕೈರ್ನಾಭಿಭೂಯತೇ ॥ ೧೭೪ ॥
ತ್ರಿಸಂಧ್ಯೇಶ್ವರಮಾಲೋಕ್ಯ ಕೃತಸಂಧ್ಯಸ್ತ್ರಿಕಾಲತಃ ।
ತ್ರಿವೇದಾವರ್ತಜಂ ಪುಣ್ಯಂ ಪ್ರಾಪ್ನುಯಾಚ್ಛ್ರದ್ಧಯಾ ದ್ವಿಜಃ ॥ ೧೭೫ ॥
ತತೋಽನುಯೋಗಿನೀತೀರ್ಥಂ ನರಸ್ತತ್ರ ಕೃತಾಪ್ಲವಃ ।
ದೃಷ್ಟ್ವಾ ತು ಯೋಗಿನೀಪೀಠಂ ಯೋಗಸಿದ್ಧಿಮವಾಪ್ನುಯಾತ್ ॥ ೧೭೬ ॥
ಅಗಸ್ತಿತೀರ್ಥಂ ತತ್ರಾಸ್ತಿ ಮಹಾಘೌಘವಿಘಾತಕೃತ್ ।
ತತ್ರ ಸ್ನಾತ್ವಾ ಪ್ರಯತ್ನೇನ ದೃಷ್ಟ್ವಾಗಸ್ತೀಶ್ವರಂ ವಿಭುಂ ॥ ೧೭೭ ॥
ಅಗಸ್ತಿಕುಂಡೇ ತತಃ ಸಂತರ್ಪ್ಯ ಚ ಪಿತಾಮಹಾನ್ ।
ಅಗಸ್ತಿನಾ ಸಮೇತಾಂ ಚ ಲೋಪಾಮುದ್ರಾಂ ಪ್ರಣಮ್ಯ ಚ ॥ ೧೭೮ ॥
ಸರ್ವಪಾಪವಿನಿರ್ಮುಕ್ತಃ ಸರ್ವಕ್ಲೇಶವಿವರ್ಜಿತಃ ।
ಗಚ್ಛೇತ್ಸಪೂರ್ವಜೈಃ ಸಾರ್ಧಂ ಶಿವಲೋಕಂ ನರೋತ್ತಮಃ ॥ ೧೭೯ ॥

---

೧೭೪. ಅದರಲ್ಲಿ ಸ್ನಾನವನ್ನುಮಾಡಿ ಸಾಂಗವಾಗಿ ಸಂಧ್ಯೋಪಾಸನೆಯನ್ನು ಮಾಡಲು ಮನುಷ್ಯನು ಜನ್ಮಪ್ರಭೃತಿಯೂ ಸಂಧ್ಯಾಕಾಲಗಳಲ್ಲಿ ನಿತ್ಯಕರ್ಮಗಳನ್ನು ತ್ಯಜಿಸಿದ ಪಾತಕಗಳಿಂದ ಅಭಿಭೂತನಾಗುವುದಿಲ್ಲ.

೧೭೫. ತ್ರಿಸಂಧ್ಯೇಶ್ವರನನ್ನು ಸಂದರ್ಶಿಸಿ ಮೂರುವೇಳೆಗಳಲ್ಲಿಯೂ ಸಂಧ್ಯಾವಂದನೆಯನ್ನು ಮಾಡಲು ಬ್ರಾಹ್ಮಣನು ಶ್ರದ್ಧಾನ್ವಿತನಾಗಿ ಮೂರು ವೇದಗಳನ್ನೂ ಪುನರಾವರ್ತನೆ ಮಾಡಿದ ಪುಣ್ಯವನ್ನು ಪಡೆಯುವನು.

೧೭೬. ಅದರ ಸಮೀಪದಲ್ಲಿಯೇ ಯೋಗಿನೀತೀರ್ಥವಿರುವುದು. ಅದರಲ್ಲಿ ಮುಳುಗಿದ ಮನುಷ್ಯನು ಯೋಗಿನೀಪೀಠವನ್ನು ನೋಡಲು ಯೋಗಾಭ್ಯಾಸದ ಸಂಪೂರ್ಣಸಿದ್ಧಿಯನ್ನು ಪಡೆಯುವನು.

೧೭೭. ಮಹಾಪಾತಕರಾಶಿಗಳಿಗೆ ವಿಘಾತವನ್ನುಂಟುಮಾಡುವ ಅಗಸ್ತ್ಯತೀರ್ಥವೂ ಅಲ್ಲಿಯೇ ಇರುವುದು. ಅದರಲ್ಲಿ ಸ್ನಾನವನ್ನು ಮಾಡಿ ಸರ್ವವ್ಯಾಪಿಯಾದ ಅಗಸ್ತ್ಯೇಶ್ವರನ ದರ್ಶನವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು.

೧೭೮. ಬಳಿಕ ಅಗಸ್ತ್ಯಕುಂಡದಲ್ಲಿ ಪಿತಾಮಹರಿಗೆ ತರ್ಪಣಾದಿಗಳನ್ನಿತ್ತು ಅಗಸ್ತ್ಯಮಹರ್ಷಿಯೊಡಗೂಡಿದ ಲೋಪಾಮುದ್ರಾದೇವಿಗೆ ನಮಸ್ಕಾರಗಳನ್ನು ಅರ್ಪಿಸಬೇಕು.

೧೭೯. ಅಂಥ ಮಾನವನು ಸಕಲಪಾಪಗಳಿಂದಲೂ ಮುಕ್ತನಾಗಿ ಸಮಸ್ತ ಕಷ್ಟಗಳನ್ನೂ ಕಡೆಹಾಯುವನು. ದೇಹಪಾತಾನಂತರದಲ್ಲಿ ತನ್ನ ಪೂರ್ವ ಪಿತಾಮಹರೊಡನೆ ಶಿವಲೋಕವನ್ನು ಹೋಗಿ ಸೇರುವನು.

ದಕ್ಷಿಣೇಽಗಸ್ತ್ಯತೀರ್ಥಾಚ್ಚ ತೀರ್ಥಮತ್ಯತಿಪಾವನಂ ।
ಗಂಗಾಕೇಶವಸಂಜ್ಞಂ ಚ ಸರ್ವಪಾತಕನಾಶನಮ್ ॥ ೧೮೦ ॥
ತತ್ರ ಮೇ ಶುಭದಾಂ ಮೂರ್ತಿಂ ಮುನೇ ತತ್ತೀರ್ಥಸಂಜ್ಞಿಕಾಮ್ ।
ಸಂಪೂಜ್ಯ ಶ್ರದ್ಧಯಾ ಧೀಮಾನ್ಮಮ ಲೋಕೇ ಮಹೀಯತೇ ॥ ೧೮೧ ॥
ತತ್ರ ಪಿಂಡಾನ್ನಿನಿರ್ವಾಪ್ಯ ದತ್ವಾ ದಾನಂ ಸ್ವಶಕ್ತಿತಃ ।
ಶತಸಾಂವತ್ಸರೀಂ ತೃಪ್ತಿಂ ಪಿತೄಣಾಂ ಸಮುಪರ್ನಯೇತ್ ॥ ೧೮೨ ॥
ಮಣಿಕರ್ಣ್ಯಾಃ ಪರೀಮಾಣಮೇತತ್ತೇ ಕೀರ್ತಿತಂ ಮಹತ್ ।
ಸೀಮಾವಿನಾಯಕಾದ್ಯಾಮ್ಯಾಂ ಸರ್ವವಿಘ್ನನಿಘಾತನಾತ್ ॥ ೧೮೩ ॥
ವೈರೋಚನೇಶ್ವರಾತ್ಪ್ರಾಚ್ಯಾಮಹಂ ವೈಕುಂಠಮಾಧವಃ ।
ತತ್ರ ಮಾಂ ಭಕ್ತಿತೋಽಭ್ಯರ್ಚ್ಯ ವೈಕುಂಠಾರ್ಚ್ಯಾಮವಾಪ್ನುಯಾತ್ ॥
ವೀರಮಾಧವಸಂಜ್ಞೋಽಹಂ ವೀರೇಶಾತ್ಪಶ್ಚಿಮೇ ಮುನೇ ।
ತತ್ರ ವ್ರತೀ ಸಮಭ್ಯರ್ಚ್ಯ ನ ಯಾಮೀಂ ಯಾತನಾಂ ಲಭೇತ್ ॥ ೧೮೫ ॥

---

೧೮೦. ಅಗಸ್ತ್ಯತೀರ್ಥಕ್ಕೆ ದಕ್ಷಿಣದಲ್ಲಿ ಅತ್ಯಂತ ಪವಿತ್ರವಾದ ಮತ್ತೊಂದು ತೀರ್ಥವಿರುವುದು. ಅದು ಗಂಗಾಕೇಶವತೀರ್ಥವೆಂದು ಪ್ರಸಿದ್ಧವಾಗಿ ಸ್ನಾನ ಮಾಡುವವರ ಸಮಸ್ತ ಪಾತಕಗಳನ್ನೂ ನಾಶಗೊಳಿಸುವುದು.

೧೮೧. ಅಗ್ನಿಬಿಂದುಮುನಿಯೆ! ಅಲ್ಲಿ ಗಂಗಾಕೇಶವನೆಂದೇ ಹೆಸರುಳ್ಳ ನನ್ನ ಮಂಗಳಪ್ರದವಾದ ಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಿದ ಬುದ್ಧಿಶಾಲಿಯು ನನ್ನ ಲೋಕದಲ್ಲಿ ಮಹತ್ತ್ವವನ್ನು ಪಡೆಯುವನು.

೧೮೨. ಅಲ್ಲಿ ಪಿತೃಗಳಿಗೆ ಪಿಂಡಗಳನ್ನರ್ಪಿಸಿ ಶಕ್ತಿಯನ್ನನುಸರಿಸಿ ದಾನಗಳನ್ನು ಮಾಡಿದ ಮಾನವನು ಪಿತೃಗಳಿಗೆ ಒಂದು ನೂರು ವರ್ಷಗಳವರೆಗೂ ತೃಪ್ತಿಯನ್ನುಂಟುಮಾಡುವನು.

೧೮೩. ಮಹರ್ಷಿಯೆ! ಇಂತು ಮಣಿಕರ್ಣಿಕೆಯ ಪರಿಮಾಣದ ಮಹತ್ತ್ವದ ವಿಷಯವನ್ನು ನಿನಗೆ ನಿರೂಪಿಸಿರುವೆನು. ಈ ಪ್ರದೇಶವೆಲ್ಲವೂ ಸಕಲ ವಿಘ್ನ ನಿವಾರಕನಾದ ಸೀಮಾವಿನಾಯಕನಿಗೆ ದಕ್ಷಿಣದಿಕ್ಕಿನಲ್ಲಿರುವುದು.

೧೮೪. ವೈರೋಚನೇಶ್ವರನಿಗೆ ಪೂರ್ವದಲ್ಲಿ ನಾನು ವೈಕುಂಠಮಾಧವನಾಗಿರುವೆನು. ಅಲ್ಲಿ ನನ್ನನ್ನು ಭಕ್ತಿಯಿಂದ ಪೂಜಿಸಿದವರು ವೈಕುಂಠದಲ್ಲಿಯೂ ಉತ್ತಮಪೂಜೆಯನ್ನು ಪಡೆಯುವರು.

೧೮೫. ವೀರೇಶ್ವರನಿಗೆ ಪಶ್ಚಿಮದಲ್ಲಿ ನಾನು ವೀರಮಾಧವನೆಂಬ ಹೆಸರಿನಿಂದಿರುವೆನು. ಅಲ್ಲಿ ವ್ರತವನ್ನು ಕೈಕೊಂಡು ನನ್ನ ಪೂಜೆಯನ್ನು ಮಾಡಿದವನು ಯಮಲೋಕದ ಯಾತನೆಗಳನ್ನನುಭವಸುವುದಿಲ್ಲ.

ಕಾಲಮಾಧವನಾಮಾಹಂ ಕಾಲಭೈರವಸನ್ನಿಧೌ ।
ಕಲಿಃ ಕಾಲೋ ಸ ಕಲಯೇನ್ಮದ್ಭಕ್ತಮಿತಿ ನಿಶ್ಚಿತಂ ॥ ೧೮೬ ॥
ಮಾರ್ಗಶೀರ್ಷಸ್ಯ ಶುಕ್ಲಾಯಾಮೇಕಾದಶ್ಯಾಮುಪೋಷಿತಃ ।
ತತ್ರ ಜಾಗರಣಂ ಕೃತ್ವಾ ಯಮಂ ನಾಲೋಕಯೇತ್ಕ್ವಚಿತ್ ॥ ೧೮೭ ॥
ನಿರ್ವಾಣನರಸಿಂಹೋಽಹಂ ಪುಲಸ್ತ್ಯೇಶ್ವರದಕ್ಷಿಣೇ ।
ಭಕ್ತೋ ನಿರ್ವಾಣಮಾಪ್ನೋತಿ ತನ್ಮೂರ್ತಿನಮನಾದಪಿ ॥ ೧೮೮ ॥
ಮಹಾಬಲನೃಸಿಂಹೋಹಮೋಂಕಾರಾತ್ಪೂರ್ವತೋ ಮುನೇ ।
ದೂತಾನ್ಮಹಾಬಲಾನ್ಯಾಮ್ಯಾನ್ನ ಪಶ್ಯೇತ್ತು ತದರ್ಚಕಃ ॥ ೧೮೯ ॥
ಪ್ರಚಂಡನರಸಿಂಹೋಽಹಂ ಚಂಡಭೈರವಪೂರ್ವತಃ ।
ಪ್ರಚಂಡಮಪ್ಯಘಂ ಕೃತ್ವಾ ನಿಷ್ಪಾಪ್ಮಾ ಸ್ಯಾತ್ತದರ್ಚನಾತ್ ॥ ೧೯೦ ॥
ಅಹಂ ಗಿರಿನೃಸಿಂಹೋಽಸ್ಮಿ ತದ್ದೇಹಲಿವಿನಾಯಕಾತ್ ।
ಪ್ರಾಚ್ಯಾಂ ಪ್ರಬಲಪಾಪೌಘಗಜಾನಾಂ ಪ್ರವಿದಾರಣಃ ॥ ೧೯೧ ॥

---

೧೮೬. ಕಾಲಭೈರವನ ಸಮ್ಮುಖದಲ್ಲಿ ನಾನು ಕಾಲಮಾಧವನಾಮಕನಾಗಿರುವೆನು. ನನ್ನನ್ನು ಸೇವಿಸುವ ಭಕ್ತನನ್ನು ಕಲಿಕಾಲವು ಎಂದಿಗೂ ಕ್ಷೋಭೆಗೊಳಿಸಲಾರದೆಂಬುದು ದಿಟವು.

೧೮೭. ಆ ಸನ್ನಿಧಿಯಲ್ಲಿ ಮಾರ್ಗಶಿರಮಾಸದ ಶುಕ್ಲೈಕಾದಶಿಯ ದಿನ ಉಪವಾಸವನ್ನುಮಾಡಿ ಅಂದಿನ ರಾತ್ರಿಯನ್ನು ಜಾಗರಣೆಯಿಂದ ಕಳೆಯಲು ಎಂದಿಗೂ ಯಮಧರ್ಮರಾಜನ ದರ್ಶನವಾಗುವುದಿಲ್ಲ.

೧೮೮. ಪುಲಸ್ತ್ಯೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ನಾನು ನಿರ್ವಾಣನರಸಿಂಹನಾಗಿ ನೆಲಸಿರುವೆನು. ಆ ಮೂರ್ತಿಗೆ ಒಮ್ಮೆ ನಮಸ್ಕಾರವನ್ನು ಮಾಡುವುದರಿಂದಲೇ ಭಕ್ತನು ದೇಹವಸಾನದಲ್ಲಿ ಮೋಕ್ಷವನ್ನು ಪಡೆಯುವನು.

೧೮೯. ಮಹಾಮುನಿಯೆ ! ನಾನು ಓಂಕಾರೇಶ್ವರನ ಪೂರ್ವದಿಕ್ಕಿನಲ್ಲಿ ಮಹಾಬಲನರಸಿಂಹನಾಗಿರುವೆನು. ಅದನ್ನು ಪೂಜಿಸಿದವನು ಮಹಾಬಲಶಾಲಿಗಳಾದ ಯಮದೂತರನ್ನೆಂದಿಗೂ ಕಾಣುವುದಿಲ್ಲ.

೧೯೦. ಚಂಡಭೈರವನಿಗೆ ಪೂರ್ವದಲ್ಲಿ ನಾನು ಪ್ರಚಂಡನರಸಿಂಹರೂಪದಿಂದಿರುವೆನು. ಪ್ರಚಂಡವಾದ ಪಾಪವನ್ನು ಮಾಡಿದವನೂ ಸಹ ಅದನ್ನು ಪೂಜಿಸುವುದರಿಂದ ನಿಷ್ಕಲ್ಮಷನಾಗುವನು.

೧೯೧. ದೇಹಲಿವಿನಾಯಕನ ಪೂರ್ವದಲ್ಲಿ ನಾನು ಗಿರಿನೃಸಿಂಹನಾಗಿರುವೆನು. ಭಕ್ತರ ಪ್ರಬಲಗಳಾದ ಪಾಪರಾಶಿಗಳೆಂಬ ಮದ್ದಾನೆಗಳನ್ನು ಸೀಳಿಹಾಕುವೆನು.

ಮಹಾಭಯಹರಶ್ಚಾಹಂ ನರಸಿಂಹೋ ಮಹಾಮುನೇ ।
ಪಿತಾಮಹೇಶ್ವರಾತ್ಪಶ್ಚಾದ್ಭಕ್ತಸಾಧ್ವಸಸಾಧ್ವಸಃ ॥ ೯೫೨ ॥
ಅತ್ಯುಗ್ರನರಸಿಂಹೋಽಹಂ ಕಲಶೇಶ್ವರಪಶ್ಚಿಮೇ ।
ಅತ್ಯುಗ್ರಮಪಿ ಪಾಪೌಘಂ ಹರಾಮಿ ಶ್ರದ್ಧಯಾರ್ಚಿತಃ ॥ ೯೫೩ ॥
ಜ್ವಾಲಾಮಾಲೀನೃಸಿಂಹೋಽಹಂ ಜ್ವಾಲಾಮುಖ್ಯಾಃ ಸಮೀಪತಃ ।
ಸಂಜ್ವಾಲಯಾಮಿ ಪಾಪೌಘತೃಣಾನಿ ಪರಿಪೂಜಿತಃ ॥ ೯೫೪ ॥
ಕೋಲಾಹಲನೃಸಿಂಹೋಽಸ್ಮಿ ದೈತ್ಯದಾನವಮರ್ದನಃ ।
ಮಮ ನಾಮಸಮುಚ್ಚಾರಾದಘಕೋಲಾಹಲೋ ಯತಃ ॥ ೯೫೫ ॥
ಕಂಕಾಲಭೈರವೋ ಯತ್ರ ಕಾಶೀರಕ್ಷಣದಕ್ಷಧೀಃ ।
ತತ್ರ ಮಾಂ ಭಕ್ತಿತೋಽಭ್ಯರ್ಚ್ಯ ನೋಪಸರ್ಗೈರ್ನಿರುಧ್ಯತೇ ॥ ೯೫೬ ॥
ವಿಟಂಕನರಸಿಂಹೋಽಸ್ಮಿ ನೀಲಕಂಠೇಶ್ವರಾದನು ।
ತತ್ರ ಮಾಂ ಶ್ರದ್ಧಯಾ ಪೂಜ್ಯ ನರೋ ಭವತಿ ನಿರ್ಭಯಃ ॥ ೯೫೭ ॥

---

೯೫೨. ಮಹರ್ಷಿಯೆ! ಪಿತಾಮಹೇಶ್ವರನ ಹಿಂದುಗಡೆಯಲ್ಲಿ ನಾನು ಮಹಾಭಯಹರನರಸಿಂಹನೆಂಬ ನಾಮದಿಂದಿರುವೆನು. ಭಕ್ತರಿಗೆ ಭಯಗಳೊದಗುವುವೆಂಬ ಒಂದೇ ಭಯವುಳ್ಳವನಾಗಿ ಅವುಗಳನ್ನು ಪರಿಹರಿಸುತ್ತಿರುವೆನು.

೯೫೩. ಕಲಶೇಶ್ವರನ ಪಶ್ಚಿಮದಲ್ಲಿ ನಾನು ಅತ್ಯುಗ್ರನರಸಿಂಹನಾಗಿರುವೆನು. ಶ್ರದ್ಧೆಯಿಂದ ಪೂಜೆಮಾಡಿದವರ ಅತ್ಯುಗ್ರವಾದ ಪಾಪಸಮೂಹವನ್ನೂ ನಾನು ಪರಿಹರಿಸುವೆನು.

೯೫೪. ಜ್ವಾಲಾಮಾಲೀನೃಸಿಂಹನಾಗಿ ನಾನು ಜ್ವಾಲಾಮುಖಿಯ ಸಮೀಪದಲ್ಲಿರುವೆನು. ಸಾಂಗವಾಗಿ ಪೂಜಿಸಿದವರ ಪಾಪಕೋಟಿಗಳೆಂಬ ತೃಣಗಳನ್ನು ಸುಟ್ಟುಹಾಕುತ್ತಿರುವೆನು.

೯೫೫. ಸಕಲ ದೈತ್ಯದಾನವರನ್ನೂ ನಿಗ್ರಹಿಸುವ ಕೋಲಾಹಲನೃಸಿಂಹನಾಗಿಯೂ ಇಲ್ಲಿ ನೆಲಸಿರುವೆನು. ನನ್ನ ನಾಮವನ್ನು ಉಚ್ಚರಿಸುವ ಮಾತ್ರದಿಂದಲೇ ಪಾತಕಗಳೆಲ್ಲವೂ ಕೋಲಾಹಲಮಾಡುತ್ತ ಓಡಿಹೋಗುವುವು.

೯೫೬. ಕಾಶೀಕ್ಷೇತ್ರದ ರಕ್ಷಣೆಯಲ್ಲಿ ಜಾಗರೂಕವಾದ ಬುದ್ಧಿಯುಳ್ಳ ಕಂಕಾಲಭೈರವನಿರುವೆಡೆಯಲ್ಲಿಯೇ ನಾನು ಈ ರೂಪದಿಂದಿರುವೆನು. ಅಲ್ಲಿ ನನ್ನನ್ನು ಭಕ್ತಿಯಿಂದ ಅರ್ಚಿಸಿದವನು ಕಷ್ಟಗಳಿಂದ ನಿರೋಧವನ್ನು ಹೊಂದುವುದಿಲ್ಲ.

೯೫೭. ನೀಲಕಂಠೇಶ್ವರನ ಸಮೀಪದಲ್ಲಿ ನಾನು ವಿಟಂಕನರಸಿಂಹನಾಗಿರುವೆನು. ಅಲ್ಲಿ ನನ್ನನ್ನು ಶ್ರದ್ಧೆಯಿಂದ ಪೂಜಿಸಿದ ಮಾನವನು, ಭಯರಹಿತನಾಗಿ ಬಾಳುವನು.

ಅನಂತವಾಮನಶ್ಚಾಹಮನಂತೇಶ್ವರಸನ್ನಿಧೌ ।
ಅನಂತಾನ್ಯಪಿ ಭಕ್ತಸ್ಯ ಕಲುಷಾಣಿ ಹರೇಽರ್ಚಿತಃ ॥ ೧೯೮ ॥
ದಧಿವಾಮನಸಂಜ್ಞೋಽಹಂ ಭಕ್ತಾನಾಂ ದಧಿಭಕ್ತದಃ ।
ಯನ್ನಾಮಸ್ಮರಣಾದೇವ ನ ದರಿದ್ರೋ ನರೋ ಭವೇತ್ ॥ ೧೯೯ ॥
ತ್ರಿವಿಕ್ರಮೋಽಸ್ಮ್ಯಹಂ ಕಾಶ್ಯಾಮುದೀಚ್ಯಾಂ ಚ ತ್ರಿಲೋಚನಾತ್ ।
ದದಾಮಿ ಪೂಜಿತೋ ಲಕ್ಷ್ಮೀಂ ಹರಾಮಿ ವೃಜಿನಾನ್ಯಪಿ ॥ ೨೦೦ ॥
ಬಲಿವಾಮನನಾಮಾಹಂ ಬಲಿನಾ ಪರಿಪೂಜಿತಃ ।
ಬಲಿಭದ್ರೇಶ್ವರಾತ್ಪ್ರಾಚ್ಯಾಂ ಭಕ್ತಾನಾಂ ಬಲವರ್ಧನಃ ॥ ೨೦೧ ॥
ದಕ್ಷಿಣೇ ಭವತೀರ್ಥಾಚ್ಚ ತಾಮ್ರದೀಪಾದಿಹಾನತಃ ।
ನಾಮ್ನಾ ತಾಮ್ರವರಾಹೋಽಸ್ಮಿ ಭಕ್ತಾನಾಂ ಚಿಂತಿತಾರ್ಥದಃ ॥ ೨೦೨ ॥
ಮುನೇ ಧರಣಿವಾರಾಹಃ ಪ್ರಯಾಗೇಶ್ವರಸನ್ನಿಧೌ ।
ಸ್ನಾತ್ವಾ ವಾರಾಹತೀರ್ಥೇಽತ್ರ ದೃಷ್ಟ್ವಾ ಮಾಂ ಕಿಟಿರೂಪಿಣಂ ॥ ೨೦೩ ॥

---

೧೯೮. ಅನಂತವಾಮನನಾಗಿ ನಾನು ಅನಂತೇಶ್ವರನ ಸನ್ನಿಧಿಯಲ್ಲಿ ನಿಂತಿರುವೆನು. ನನ್ನನ್ನು ಪೂಜಿಸಿದ ಭಕ್ತನ ಅಸಂಖ್ಯಾಕಗಳಾದ ಪಾತಕಗಳನ್ನಾದರೂ ನಾನು ಪರಿಹರಿಸುವೆನು.

೧೯೯. ದಧಿವಾಮನರೂಪಿಯಾದ ನಾನು ಭಕ್ತರಿಗೆ ದಧಿಸಹಿತವಾದ ಮೃಷ್ಟಾನ್ನವನ್ನು ಕೊಡುವೆನು. ಆ ನನ್ನ ನಾಮಸ್ಮರಣೆಯಿಂದಲೇ ಮನುಷ್ಯನು ಎಂದಿಗೂ ದರಿದ್ರನಾಗುವುದಿಲ್ಲ.

೨೦೦. ತ್ರಿಲೋಚನೇಶ್ವರನಿಗೆ ಉತ್ತರದಿಕ್ಕಿನಲ್ಲಿ ನಾನು ತ್ರಿವಿಕ್ರಮನಾಗಿ ಕಾಶಿಯಲ್ಲಿ ನೆಲಸಿರುವೆನು. ನನ್ನನ್ನು ಪೂಜಿಸಿದವರಿಗೆ ಸಕಲೈಶ್ವರ್ಯಗಳನ್ನಿತ್ತು ಅವರ ಪಾಪಗಳೆಲ್ಲವನ್ನೂ ಕಳೆಯುವೆನು.

೨೦೧. ಬಲಭದ್ರೇಶ್ವರನಿಗೆ ಪೂರ್ವದಿಕ್ಕಿನಲ್ಲಿ ನಾನು ಬಲಿವಾಮನವೆಂಬ ಹೆಸರುಳ್ಳವನಾಗಿರುವೆನು. ಪೂರ್ವದಲ್ಲಿ ಬಲಿಚಕ್ರವರ್ತಿಯು ಇಲ್ಲಿ ನನ್ನನ್ನು ಪೂಜಿಸಿದನು. ನನ್ನ ಭಕ್ತರಿಗೆ ಬಲಾಧಿಕ್ಯವನ್ನನುಗ್ರಹಿಸುತ್ತಿರುವೆನು.

೨೦೨. ಪಿತಾಮಹತೀರ್ಥಕ್ಕೆ ದಕ್ಷಿಣದಲ್ಲಿ ನಾನು ತಾಮ್ರದ್ವೀಪದಿಂದ ಇಲ್ಲಿಗೆ ಬಂದು ತಾಮ್ರವರಾಹನೆಂದು ಪ್ರಸಿದ್ಧನಾಗಿ ಭಕ್ತರಿಗೆ ಅಭೀಪ್ಸಿತಗಳನ್ನೆಲ್ಲ ನೆರವೇರಿಸಿಕೊಡುತ್ತಿರುವೆನು.

೨೦೩–೨೦೪. ಮುನಿವರ್ಯನೆ! ಪ್ರಯಾಗೇಶ್ವರನ ಸನ್ನಿಧಿಯಲ್ಲಿ ನಾನು ಧರಣೀವರಾಹನಾಗಿರುವೆನು. ವರಾಹತೀರ್ಥದಲ್ಲಿ ಸ್ನಾನವನ್ನುಮಾಡಿ ಸೂಕರರೂಪಿಯಾದ ನನ್ನನ್ನು ದರ್ಶನಮಾಡಿಕೊಂಡು ಅತ್ಯಂತ ಭಕ್ತಿಯಿಂದ ಪೂಜಿಸಿ

ಸಂಪೂಜ್ಯ ಬಹುಭಾವೇನ ನ ವಿಶೇದ್ಯೋತಿಸಂಕಟಂ ।
ತತ್ರಾಲ್ಪಮಪಿ ದತ್ವಾನ್ನಂ ಧರಾದಾನಫಲಂ ಲಭೇತ್ ॥ ೨೦೪ ॥
ಮಹಾಕಲುಷಗಂಭೀರಸಾಗರೇ ನಿಪತನ್ ಜನಃ ।
ಮನು ಭಕ್ತ್ಯುಡುಪಂ ಪ್ರಾಪ್ಯ ಪ್ರಲಯೇಽಪಿ ನ ಮಜ್ಜತಿ ॥ ೨೦೫ ॥
ಅಹಂ ಕೋಕಾವರಾಹೋಽಸ್ಮಿ ಕಿಟೇಶ್ವರಸಮೀಪತಃ ।
ತತ್ರ ಮಾಂ ಪೂಜಯನ್ಮರ್ತ್ಯೋ ಲಭತೇ ಚಿಂತಿತಂ ಫಲಂ ॥ ೨೦೬ ॥
ನಾರಾಯಣಾಃ ಶತಂ ಪಂಚ ಶತಂ ಚ ಜಲಶಾಯಿನಃ ।
ತ್ರಿಂಶತ್ಕಮಠರೂಪಾಣಿ ಮತ್ಸ್ಯರೂಪಾಣಿ ವಿಂಶತಿಃ ॥ ೨೦೭ ॥
ಗೋಪಾಲಶ್ಚ ಶತಂ ಚಾಷ್ಟಂ ಬುದ್ಧಾಃ ಸಂತಿ ಸಹಸ್ರಶಃ ।
ತ್ರಿಂಶತ್ಪರಶುರಾಮಾಶ್ಚ ರಾಮಾ ಏಕೋತ್ತರಂ ಶತಂ ॥ ೨೦೮ ॥
ವಿಷ್ಣುರೂಪೋಽಸ್ಮ್ಯಹಂ ಚೈಕೋ ಮುಕ್ತಿಮಂಡಪಮಧ್ಯತಃ ।
ಮುನೇ ಕೃತಪ್ರಸಾದೇನ ವಿಶ್ವೇಶೇನ ಶ್ರಿತಃ ಸ್ವಯಂ ॥ ೨೦೯ ॥

---

ದವನು ಎಂಬತ್ತುನಾಲ್ಕು ಲಕ್ಷಯೋನಿಗಳಲ್ಲಿ ಜನಿಸುವ ಸಂಕಟವನ್ನು ಕಳೆದುಕೊಳ್ಳುವನು. ಅಲ್ಲಿ ಎಷ್ಟು ಅಲ್ಪವಾದ ಅನ್ನದಾನವನ್ನು ಮಾಡಿದರೂ ಇಡೀ ಭೂಮಂಡಲವನ್ನೇ ದಾನಮಾಡಿದ ಫಲವು ಲಭಿಸುವುದು.

೨೦೫. ಮಹಾಪಾತಕಗಳೆಂಬ ಗಂಭೀರವಾದ ಸಮುದ್ರದಲ್ಲಿ ತೇಲಿ ಮುಳುಗುತ್ತಿರುವ ಮನುಷ್ಯನು ನನ್ನ ಭಕ್ತಿಯೆಂಬ ನಾವೆಯನ್ನು ಹೊಂದಿದರೆ ಪ್ರಲಯದಲ್ಲಿಯೂ ಪುನಃ ಮುಳುಗಲಾರನು.

೨೦೬. ವರಾಹೇಶ್ವರನ ಸಮೀಪದಲ್ಲಿಯೇ ನಾನು ಕೋಕಾವರಾಹನೆನಿಸಿರುವೆನು. ಅಲ್ಲಿ ನನ್ನನ್ನು ಪೂಜಿಸಿದ ಮನುಷ್ಯನು ಇಷ್ಟಾರ್ಥಗಳನ್ನೆಲ್ಲ ಪಡೆಯುವನು.

೨೦೭. ಈ ಕ್ಷೇತ್ರದಲ್ಲಿ ಇಂತು ನನ್ನ ಅನೇಕ ರೂಪಗಳಿರುವುವು. ನಾರಾಯಣರೂಪಗಳು ಒಂದುನೂರು, ಐದುನೂರು ಸಾಗರಶಾಯಿರೂಪಗಳು, ಮೂವತ್ತು ಕೂರ್ಮರೂಪಗಳು, ಇಪ್ಪತ್ತು ಮತ್ಸ್ಯರೂಪಗಳು.

೨೦೮. ಗೋಪಾಲಕೃಷ್ಣರೂಪಗಳು ಒಂದುನೂರೆಂಟು. ಬುದ್ಧರು ಸಹಸ್ರಸಂಖ್ಯಾಕರಾಗಿರುವರು. ಪರಶುರಾಮರೂಪಗಳು ಮೂವತ್ತು, ಶ್ರೀರಾಮಸ್ವರೂಪಗಳು ಒಂದುನೂರೊಂದಿರುವುವು.

೨೦೯. ಮುಕ್ತಿಮಂಟಪದ ಮಧ್ಯದಲ್ಲಿ ನಾನು ಒಬ್ಬನೇ ಆದ ಮಹಾವಿಷ್ಣುವಿನ ರೂಪದಿಂದಿರುವೆನು. ಮುನಿಯೆ! ಪ್ರಸನ್ನಗೊಳಿಸಲ್ಪಟ್ಟ ವಿಶ್ವೇಶ್ವರನ ದಯೆಯಿಂದಲೇ ನಾನು ಆ ಸ್ಥಳದಲ್ಲಿ ನೆಲಸಿರುವೆನು.

ನಾರಾಯಣಸ್ವರೂಪೇಣ ಗಣಾಶ್ಚಕ್ರಗದೋದ್ಗತಾಃ ।
ಕುರ್ವಂತಿ ರಕ್ಷಾಂ ಕ್ಷೇತ್ರಸ್ಯ ಪರಿತೋ ನಿಯುತಾನಿ ಷಟ್ ॥ ೨೧೦ ॥
ಸೋಽಗ್ನಿಬಿಂದುರಿತಿ ಶ್ರುತ್ವಾ ಸಂಪ್ರಹೃಷ್ಟತನೂರುಹಃ ।
ಪುನಃ ಪಪ್ರಚ್ಛ ಮೇಧಾವೀ ಮೂರ್ತಿಭೇದಾಸ್ತ್ವದ ಪ್ರಭೋ ॥ ೨೧೧ ॥
ಹಿತಾಯ ನಿಜಭಕ್ತಾನಾಂ ಮಮ ಸಂದೇಹಶಾಂತಯೇ ।
ಕಥಿತೇ ಮೂರ್ತಯೋಽನಂತ ಕಥಂ ಜ್ಞೇಯಾಸ್ತಥಾ ವದ ॥ ೨೧೨ ॥
ಇತ್ಯಾಕರ್ಣ್ಯ ವಚಸ್ತ್ವಗ್ನಿಬಿಂದೋಸ್ತಪಸಾಂ ನಿಧೇಃ ।
ಉವಾಚ ಭಗವಾನ್ವಿಷ್ಣುರ್ಮೂರ್ತಿಭೇದಾನನುಕ್ರಮಾತ್ ॥ ೨೧೩ ॥
ಯಾಂ ಶ್ರುತ್ವಾಪಿ ಹಿ ನೋ ಮರ್ತ್ಯೋ ಯಮಗೋಚರತಾಂ ವ್ರಜೇತ್ ।
ಕೇಶವಾದೀಂಶ್ಚತುರ್ವಿಂಶದ್ವೇಧಾನಾಹ ಪ್ರಜಾಪತಿಃ ॥ ೨೧೪ ॥

ಶ್ರೀ ವಿಷ್ಣುರುವಾಚ:—

ಅಗ್ನಿಬಿಂದೋ ಮಹಾಪ್ರಾಜ್ಞ ಶೃಣು ತೇ ಕಥಯಾಮ್ಯಹಂ ।
ಆದ್ಯದಕ್ಷಿಣಹಸ್ತಾಚ್ಚ ವಿದ್ಧಿ ಸೃಷ್ಟಿಕ್ರಮಾನ್ಮಮೇ ॥ ೨೧೫ ॥

---

೨೧೦. ಅಲ್ಲದೆ ನನ್ನ ಚಕ್ರ, ಗದೆಗಳಿಂದ ಹುಟ್ಟ ನಾರಾಯಣಸ್ವರೂಪಿಗಳೇ ಆದ ಆರು ನಿಯುತ (ಅರವತ್ತು ಲಕ್ಷ)ಗಣಗಳು ಈ ಕ್ಷೇತ್ರದ ರಕ್ಷಣೆಯನ್ನು ಸರ್ವತೋಮುಖವಾಗಿ ಮಾಡುತ್ತಿರುವರು.''

೨೧೧. ಮಹಾವಿಷ್ಣುವಿನ ಈ ಮಾತುಗಳನ್ನು ಕೇಳಿ ಅಗ್ನಿಬಿಂದುವು ರೋಮಾಂಚಿತವಾದ ಶರೀರವುಳ್ಳವನಾಗಿ ಮೇಧಾವಿಯಾದುದರಿಂದ ಮತ್ತೆ ಪ್ರಶ್ನೆಮಾಡಿದನು. ''ಸ್ವಾಮಿಯೆ! ನಿನ್ನ ಮೂರ್ತಿಭೇದಗಳನ್ನು ನನಗೆ ತಿಳಿಸು.

೨೧೨. ನಿನ್ನ ಭಕ್ತರ ಹಿತದ ದೃಷ್ಟಿಯಿಂದಲೂ ನನ್ನ ಸಂಶಯವನ್ನು ನಿವಾರಣೆಮಾಡುವುದಕ್ಕೂ ಅಂತ್ಯರಹಿತನಾದ ನಿನಗೆ ಎಷ್ಟು ಮೂರ್ತಿಗಳಿರುವುವೆಂಬುದನ್ನೂ, ಅವುಗಳನ್ನು ಹೇಗೆ ಗುರ್ತಿಸಬೇಕೆಂಬುದನ್ನೂ ಹೇಳುವವನಾಗು.''

೨೧೩. ಇಂತೆಂದ ತಪೋರಾಶಿಯಾದ ಅಗ್ನಿಬಿಂದುವಿನ ಮಾತುಗಳನ್ನುಕೇಳಿ ಭಗವಂತನಾದ ಮಹಾವಿಷ್ಣುವು ತನ್ನ ಮೂರ್ತಿಭೇದಗಳನ್ನು ಕ್ರಮವಾಗಿ ಹೇಳತೊಡಗಿದನು.

೨೧೪. ಮರ್ತ್ಯನು ಅವುಗಳನ್ನು ಕೇಳುವುದರಿಂದಲೇ ಯಮನು ಕಣ್ಣಿಗಳಿಗೇ ಬೀಳಲಾರನು. ಬ್ರಹ್ಮದೇವನು ಮಹಾವಿಷ್ಣುವಿಗೆ ಕೇಶವನೇ ಮೊದಲಾದ ಇಪ್ಪತ್ತುನಾಲ್ಕು ರೂಪಗಳಿರುವುವೆಂದು ಹೇಳಿರುವನು.

೨೧೫. ಮಹಾವಿಷ್ಣುವು ಹೇಳುತ್ತಾನೆ:—ಮಹಾಪ್ರಾಜ್ಞನಾದ ಅಗ್ನಿಬಿಂದುವೆ! ನಿನಗೆ ನನ್ನ ಮೂರ್ತಿಭೇದಗಳನ್ನು ತಿಳಿಸುವೆನು, ಕೇಳು. ಆಯಾ ಮೂರ್ತಿಗಳ ಕೈಗಳಲ್ಲಿ ಆಯುಧಗಳನ್ನು ಬಲಗಡೆಯ ಮೇಲುಗೈಮೊದಲುಗೊಂಡು ಪ್ರದಕ್ಷಿಣಾಕಾರವಾಗಿ ಹೇಳುವೆನು.

ಶಂಖಚಕ್ರಗದಾಪದ್ಮೈರ್ಮೂರ್ತಿಂ ಜಾನೀಹಿ ಕೈಶವೀಂ ।
ಪೂಜಿತಾಯಾಂ ನೃಣಾಂ ಕುರ್ಯಾದ್ವಾಂಛಿತಾರ್ಥಮಸಂಶಯಂ ॥ ೨೧೬ ॥
ಮಧುಹಾ ಪರಿಚೇತವ್ಯಃ ಶಂಖಪದ್ಮಗದಾರಿಭಿಃ ।
ವೈರಿಣೋ ನಾಶಮಾಯಾಂತಿ ತನ್ಮೂರ್ತಿಪರಿಸೇವನಾತ್ ॥ ೨೧೭ ॥
ಸಂಕರ್ಷಣಃ ಸಮುದ್ದಿಷ್ಟೋಽತ್ರ ಶಂಖಾಬ್ಜಾರಿಗದಾಯುಧಃ ।
ತನ್ಮೂರ್ತಿಪೂಜನಾಜ್ಜಾತು ಜಂತುರ್ನ ಸ್ಯಾತ್ಪುನರ್ಭವೀ ॥ ೨೧೮ ॥
ಶಂಖಕೌಮೋದಕೀಚಕ್ರ ಪದ್ಮೈರ್ದಾಮೋದರೋಽರ್ಚ್ಯತೇ ।
ದದಾತಿ ವಿತ್ತಂ ಪುತ್ರಾಂಶ್ಚ ಗೋಧನಂ ಧಾನ್ಯಮೇವ ಹಿ ॥ ೨೧೯ ॥
ವಾಮನಃ ಶಂಖಚಕ್ರಾಬ್ಜಗದಾಭಿರುಪಲಕ್ಷಿತಃ ।
ಲಕ್ಷ್ಮೀವಂತಂ ಜನಂ ಕುರ್ಯಾದ್ಗೃಹೇಽಪಿ ಪರಿಧಾರಿತಃ ॥ ೨೨೦ ॥
ಪಾಂಚಜನ್ಯಂ ಗದಾಂ ಪದ್ಮಂ ಚಿತ್ರಮೂರ್ತಿಸುದರ್ಶನಂ ।
ಪ್ರದ್ಯುಮ್ನಂ ಪೂಜ್ಯತೇ ಮರ್ತ್ಯೈರ್ಬಹುದ್ಯುಮ್ನಂ ಪ್ರಯಚ್ಛತಿ ॥ ೨೨೧ ॥

---

೨೧೬. ಬಲಗಡೆಯ ಮೇಲುಗೈಯಲ್ಲಿ ಶಂಖವನ್ನೂ, ಎಡಗೈಯಲ್ಲಿ ಚಕ್ರವನ್ನೂ, ಎಡಗಡೆಯ ಕೆಳಗೈಯಲ್ಲಿ ಗದೆಯನ್ನೂ, ಬಲದ ಕೆಳಗೈಯಲ್ಲಿ ಪದ್ಮವನ್ನೂ ಹಿಡಿದಿರುವುದೇ ನನ್ನ ಕೇಶವರೂಪವು. ಈ ಮೂರ್ತಿಯ ಪೂಜೆಯು ಮನುಷ್ಯನಿಗೆ ಅಭೀಪ್ಸಿತಗಳನ್ನೆಲ್ಲ ಒಡಗೂಡಿಸುವುದರಲ್ಲಿ ಸಂಶಯವಿಲ್ಲ.*

೨೧೭. ಮಧುಸೂದನರೂಪವನ್ನು ಶಂಖ, ಪದ್ಮ, ಗದೆ, ಚಕ್ರಗಳುಳ್ಳವನಾಗಿ ಗುರ್ತಿಸಬೇಕು. ಆ ಮೂರ್ತಿಯನ್ನು ಸೇವಿಸುವವನ ಶತ್ರುಗಳೆಲ್ಲರೂ ನಾಶವನ್ನು ಹೊಂದುವವರಾಗುವರು.

೨೧೮–೨೧೯. ಸಂಕರ್ಷಣನು ಶಂಖ, ಪದ್ಮ, ಚಕ್ರ, ಗದೆಗಳುಳ್ಳವನು. ಮೂರ್ತಿಯ ಪೂಜೆಯಿಂದ ಯಾವ ಮನುಷ್ಯನೂ ಪುನಃ ಜನ್ಮವನ್ನು ಪಡೆಯುವುದಿಲ್ಲ. ದಾಮೋದರನು ಶಂಖ, ಗದೆ, ಚಕ್ರ, ಪದ್ಮಗಳನ್ನು ಹಿಡಿದ ರೂಪದಿಂದ ಪೂಜಿಸಲ್ಪಡುತ್ತಿರುವನು. ಆತನು ಧನವನ್ನೂ, ಪುತ್ರಸಂತಾನವನ್ನೂ, ಗೋವುಗಳನ್ನೂ, ಧಾನ್ಯಸಮೃದ್ಧಿಯನ್ನೂ ಕೊಡುವನು.

೨೨೦. ವಾಮನನು ಶಂಖ, ಚಕ್ರ, ಪದ್ಮ, ಗದೆಗಳಿಂದ ಚಿಹ್ನಿತನಾಗಿರುವನು. ಆ ರೂಪವನ್ನು ಮನೆಯಲ್ಲಿ ನೆಲೆಗೊಳಿಸಿ ಪೂಜಿಸುತ್ತಿರುವ ಭಕ್ತನನ್ನು ಐಶ್ವರ್ಯವಂತನನ್ನಾಗಿಮಾಡುವನು.

೨೨೧. ಶಂಖ, ಗದಾ, ಪದ್ಮ ಮತ್ತು ಚಿತ್ರರೂಪದ ಚಕ್ರವುಳ್ಳವನಾಗಿ ಪ್ರದ್ಯುಮ್ನನು ಜನರಿಂದ ಪೂಜೆಗೊಳ್ಳುತ್ತಿರುವನು. ಅವರಿಗೆ ಬಹುವಿಧವಾದ ಕುಶಲತೆಯನ್ನು ಅನುಗ್ರಹಿಸುತ್ತಿರುವನು.

---

* ಮುಂದಿನ ಶ್ಲೋಕಗಳಲ್ಲಿಯೂ ಆಯುಧಗಳನ್ನು ಇದೇಕ್ರಮದಲ್ಲಿಯೇ ನಿರೂಪಿಸಿದೆಯೆಂದ ತಿಳಿಯಬೇಕು.

ಊರ್ಧ್ವವಾಮಕರಾತ್ಸೃಷ್ಟ್ಯಾ ವಿಷ್ಣ್ವಾದ್ಯಂ ಷಟ್ಕಮುಚ್ಯತೇ ।
ಯಸ್ಯ ಸ್ಮರಣಮಾತ್ರೇಣ ವಿಲೀಯಂತೇಽಘರಾಶಯಃ ॥ ೨೨೨ ॥
ಶಂಖಾರಿಭ್ಯಾಂ ಗದಾಬ್ಜಾಭ್ಯಾಂ ಪೂಜ್ಯೋ ವಿಷ್ಣುಃ ಶ್ರಿಯೇ ನರೈಃ ।
ಶಂಖಪದ್ಮಗದಾಚಕ್ರೈರ್ಮಾಧವಃ ಪರಮರ್ಧಿದಃ ॥ ೨೨೩ ॥
ಧ್ಯೇಯೋಽನಿರುದ್ಧಃ ಸಂಸಿದ್ಧ್ಯೈಃ ಶಂಖಾಬ್ಜಾರಿಗದೋದ್ಯತಃ ।
ಶಂಖೇನ ಗದಯಾ ಚಕ್ರಾಂಬುಜಾಭ್ಯಾಂ ಪುರುಷೋತ್ತಮಃ ॥ ೨೨೪ ॥
ಅಧೋಕ್ಷಜೋ ಜನಿಹರಃ ಶಂಖಾರ್ಯಬ್ಜಗದೋ ಮುನೇ ।
ಶಂಖಕೌಮೋದಕೀಪದ್ಮಚಕ್ರೈರ್ಧ್ಯೇಯೋ ಜನಾರ್ದನಃ ॥ ೨೨೫ ॥
ಅಧೋವಾಮಕರಾತ್ಸೃಷ್ಟ್ಯಾ ಷಡ್ಗೋವಿಂದಾದಿಮೂರ್ತಯಃ ।
ಶಂಖಂ ಚಕ್ರಂ ಗದಾಂ ಪದ್ಮಂ ಗೋವಿಂದೋ ಬಿಭೃಯಾತ್ಸದಾ ॥ ೨೨೬ ॥
ಶಂಖಪದ್ಮಗದಾಚಕ್ರೈರರ್ಚ್ಯೋ ಲಕ್ಷ್ಮ್ಯೈ ತ್ರಿವಿಕ್ರಮಃ ।
ಶಂಖಾಬ್ಜಚಕ್ರಂ ಬಿಭ್ರಾಣೋನ್ ಶ್ರೀಧರಃ ಶ್ರಿಯೇ ॥ ೨೨೭ ॥

---

೨೨೨. ಇನ್ನು ವಿಷ್ಣುವೇ ಮೊದಲಾದ ಆರು ರೂಪಗಳನ್ನೂ ಆ ಮೂರ್ತಿಗಳ ಕೈಗಳಲ್ಲಿರುವ ಆಯುಧಗಳನ್ನೂ ವಿವರಿಸುವೆನು. ಆಯುಧಗಳಕ್ರಮವು ನಾಲ್ಕು ಕೈಗಳಲ್ಲಿಯೂ ಎಡದ ಮೇಲುಗೈಯಿಂದ ಪ್ರದಕ್ಷಿಣಕ್ರಮವಾಗಿ ಹೇಳಲ್ಪಡುವುದು. ಆ ರೂಪಗಳ ಸ್ಮರಣಮಾತ್ರದಿಂದಲೇ ಸಕಲ ಪಾಪರಾಶಿಗಳೂ ನಾಶವಾಗುವುವು.

೨೨೩. ಶಂಖ, ಚಕ್ರ, ಗದೆ, ಪದ್ಮಗಳಿಂದ ಕೂಡಿದ ವಿಷ್ಣುವು ಐಶ್ವರ್ಯಕಾಮರಾದ ಜನರಿಗೆ ಸಂಪೂಜ್ಯನು. ಶಂಖ, ಪದ್ಮ, ಗದೆ, ಚಕ್ರಗಳುಳ್ಳ ಮಾಧವನು ಪರಮಸಮೃದ್ಧಿಯನ್ನು ಕೊಡುವನು.

೨೨೪. ಶಂಖ, ಪದ್ಮ, ಚಕ್ರ, ಗದೆಗಳನ್ನು ಹಿಡಿದಿರುವ ಅನಿರುದ್ಧನನ್ನು ಕಾರ್ಯಸಿದ್ಧಿಗಾಗಿ ಧ್ಯಾನಿಸಬೇಕು. ಶಂಖ, ಗದೆ, ಚಕ್ರ, ಪದ್ಮಗಳುಳ್ಳವನೇ ಪುರುಷೋತ್ತಮನು.

೨೨೫. ಮುನಿಯೆ! ಶಂಖ, ಚಕ್ರ, ಪದ್ಮ, ಗದೆಗಳುಳ್ಳ ಅಧೋಕ್ಷಜನು ಪುನರ್ಜನ್ಮವನ್ನು ಕಳೆಯುವನು. ಶಂಖ, ಗದೆ, ಪದ್ಮ, ಚಕ್ರಗಳುಳ್ಳ ರೂಪದಿಂದ ಜನಾರ್ದನನನ್ನು ಧ್ಯಾನಮಾಡಬೇಕು.

೨೨೬. ಇನ್ನು ಶಂಖವನ್ನು ಎಡದ ಕೆಳಗೈಯಲ್ಲಿ ಹಿಡಿದಿರುವ ಗೋವಿಂದನೇ ಮೊದಲಾದ ಆರು ರೂಪಗಳನ್ನು ವಿಶದೀಕರಿಸುವೆನು. ಶಂಖ, ಚಕ್ರ, ಗದೆ, ಪದ್ಮಗಳನ್ನು ಗೋವಿಂದನು ಯಾವಾಗಲೂ ಧರಿಸಿರುವನು.

೨೨೭. ಶಂಖ, ಪದ್ಮ, ಗದೆ, ಚಕ್ರಗಳಿಂದೊಡಗೂಡಿದ ತ್ರಿವಿಕ್ರಮನನ್ನು ಸಂಪದಭಿಲಾಷೆಯುಳ್ಳವರು ಪೂಜಿಸಬೇಕು. ಶಂಖ, ಪದ್ಮ, ಚಕ್ರ, ಗದೆಗಳನ್ನು ಧರಿಸಿದ ಶ್ರೀಧರನು ಶ್ರೀಯನ್ನು ಕೊಡುವನು.

ಹೃಷೀಕೇಶಶ್ಚ ಶಂಖೇನ ಗದಾಚಕ್ರಾಂಬುಜೈರ್ಯುತಃ ।
ನೃಸಿಂಹಃ ಶಂಖಚಕ್ರಾಭ್ಯಾಂ ಪದ್ಮೇನ ಗದಯೋಹ್ಯತೇ ॥ ೨೨೮ ॥
ಅಚ್ಯುತಃ ಶಂಖಭೃನ್ನಿತ್ಯಂ ಗದಾಪದ್ಮರಥಾಂಗವಾನ್ ।
ದಕ್ಷಿಣಾಧಃ ಕರಾದೂಹ್ಯಾ ವಾಸುದೇವಾದಯಶ್ಚ ಷಟ್ ॥ ೨೨೯ ॥
ವಾಸುದೇವಶ್ಚ ಶಂಖಾರಿಗದಾಜಲಜಭೃತ್ಸದಾ ।
ಶಂಖಾಂಬುಜಗದಾಚಕ್ರೀ ಧ್ಯೇಯೋ ನಾರಾಯಣೋ ನೃಭಿಃ ॥ ೨೩೦ ॥
ಶಂಖೀ ಪದ್ಮೀ ಪದ್ಮನಾಭೋ ಜ್ಞೇಯಶ್ಚಕ್ರೀ ಗದೀ ಮುನೇ ।
ಉಪೇಂದ್ರಃ ಶಂಖವಾನ್ನಿತ್ಯಂ ಗದಾರಿಕಮಲಾಯುಧಃ ॥ ೨೩೧ ॥
ಹರಿರ್ಹರೇದಘಂ ಶಂಖೀ ಚಕ್ರೀ ಪದ್ಮಿ ಗದೀ ನೃಣಾಂ ।
ಶಂಖೇನ ಗದಯಾ ಪದ್ಮಶ್ಚಕ್ರಾಭ್ಯಾಂ ಕೃಷ್ಣ ಉಚ್ಯತೇ ॥ ೨೩೨ ॥
ಏತೇ ಭೇದಾ ಮಯಾ ಖ್ಯಾತಾಃ ಸ್ವಮೂರ್ತಿನಾಂ ಮಹಾಮುನೇ ।
ಯಾನ್ವಿಜ್ಞಾಯ ಧ್ರುವಂ ಮರ್ತ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ॥೨೩೩॥

---

೨೨೮. ಶಂಖ, ಗದೆ, ಚಕ್ರ, ಪದ್ಮಗಳಿಂದಿರುವನು ಹೃಷಿಕೇಶನೆಂದು ಹೇಳುವರು. ಶಂಖ, ಚಕ್ರ, ಪದ್ಮ, ಗದೆಗಳಿಂದ ಕೂಡಿದವನೇ ನೃಸಿಂಹ ನೆಂದೂಹಿಸಬೇಕು.

೨೨೯. ಶಂಖ, ಗದೆ, ಪದ್ಮ, ಚಕ್ರಗಳನ್ನು ಧರಿಸಿದವನೇ ಅಚ್ಯುತನು. ಇನ್ನು ಶಂಖವನ್ನು ಬಲದ ಕೆಳಗೈಯಲ್ಲಿ ಹಿಡಿದಿರುವ ವಾಸುದೇವನೇ ಮುಂತಾದ ಆರು ರೂಪಗಳನ್ನು ವಿವರಿಸುವೆನು.

೨೩೦. ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿರುವವನೇ ವಾಸು ದೇವನು. ಶಂಖ, ಪದ್ಮ, ಗದೆ, ಚಕ್ರಗಳನ್ನು ತಾಳಿದವನು ನಾರಾಯಣ ನೆಂದು ಜನರು ಧ್ಯಾನಿಸಬೇಕು.

೨೩೧. ಅಗ್ನಿಬಿಂದುವೆ! ಶಂಖ, ಪದ್ಮ, ಚಕ್ರ, ಗದೆಗಳನ್ನು ಧರಿಸಿರು ವವನೇ ಪದ್ಮನಾಭನೆಂದು ತಿಳಿಯಬೇಕು. ಶಂಖ, ಗದೆ, ಚಕ್ರ, ಪದ್ಮಗಳನ್ನು ಉಪೇಂದ್ರನು ಯಾವಾಗಲೂ ಆಯುಧಗಳನ್ನಾಗಿ ಹಿಡಿದಿರುವನು.

೨೩೨. ಶಂಖ, ಚಕ್ರ, ಪದ್ಮ, ಗದೆಗಳನ್ನು ಹಿಡಿದಿರುವ ಶ್ರೀ ಹರಿಯು ಮನುಷ್ಯರ ಸಮಸ್ತ ಪಾತಕಗಳನ್ನೂ ಕಳೆಯುವನು. ಕೃಷ್ಣನು ಶಂಖ, ಗದೆ, ಪದ್ಮ, ಚಕ್ರಗಳನ್ನು ಕ್ರಮವಾಗಿ ಹಿಡಿದಿರುವನೆಂದು ಹೇಳುವರು.

೨೩೩. ಎಲೈ ಮಹಾಮುನಿಯೆ! ಇಂತು ನನ್ನ ಮೂರ್ತಿಗಳ ಭೇದ ಗಳನ್ನು ನಿನಗೆ ವಿಸ್ತರಿಸಿ ಹೇಳಿರುವೆನು. ಇವುಗಳನ್ನು ಯಥಾರ್ಥವಾಗಿ ತಿಳಿದು ಕೊಂಡ ಮನುಷ್ಯನು ಭುಕ್ತಿಮುಕ್ತಿಗಳನ್ನು ಪಡೆಯುವುದು ನಿಶ್ಚಯವು.

ಏವಂ ವದತಿ ಗೋವಿಂದೇ ಮುನಯೇ ಚಾಗ್ನಿಬಿಂದವೇ ।
ಪಕ್ಷೀಂದ್ರಃ ಪಕ್ಷನಿಕ್ಷಿಪ್ತವಿಪಕ್ಷೋಽಕ್ಷಿಪಥಂಗತಃ ॥ ೨೩೪ ॥
ಪ್ರಾಹ ಚ ಪ್ರಣಿಪತ್ಯಾಶು ತ್ರ್ಯಕ್ಷಸ್ಯಾಗಮನಂ ಮುದಾ ।
ಸಂಭ್ರಮೇಣ ಹೃಷೀಕೇಶಃ ಕ್ವೇಶ ಇತ್ಯವದತ್ತತಃ ॥ ೨೩೫ ॥

ಗರುಡ ಉವಾಚ :—

ಪ್ರತ್ಯಕ್ಷಃ ಕ್ರಿಯತಾಮೇಷ ಮಹಾವೃಷಭಕೇತನಃ ।
ಯಸ್ಯ ಧ್ವಜಸ್ಯ ರತ್ನಾರ್ಚಿಃ ಪೂರಯೇದ್ರೋದಸೀಮಿಮಾಂ ॥ ೨೩೬ ॥
ಲೋಕಲೋಚನನಿರ್ಮಾಣಸಫಲೀಕರಣಕ್ಷಮಂ ।
ಕೋಟಿಮಾರ್ತಂಡವಿದ್ಯೋತ ಪ್ರದ್ಯೋತಿತದಿಗಾನನಂ ॥ ೨೩೭ ॥
ನಿರೀಕ್ಷ್ಯ ಪುಂಡರೀಕಾಕ್ಷಸ್ತ್ರ್ಯಕ್ಷಸ್ಯ ವೃಷಭಧ್ವಜಂ ।
ವಿಮಾನಿನಾಂ ವಿಮಾನೌಘೈಃ ಪರೀತಗಗನಾಙ್ಗಣಂ ॥ ೨೩೮ ॥
ಮಹಾವಾದ್ಯನಿನಾದೌಘೈಃ ಪ್ರತಿಧ್ವಾನಿತಕಂದರಂ ।
ವಿದ್ಯಾಧರೀಪರಿಕ್ಷಿಪ್ತಪುಷ್ಪಾಂಜಲಿಸುಗಂಧಿತಂ ॥ ೨೩೯ ॥

---

೨೩೪. ಈ ವಿಧವಾಗಿ ಶ್ರೀಮಹಾವಿಷ್ಣುವು ಮಹಾಮುನಿಯಾದ ಅಗ್ನಿಬಿಂದುವಿಗೆ ನಿರೂಪಣೆಮಾಡುತ್ತಿರಲು ಗರುಡನು ತನ್ನ ಪಕ್ಷಗಳಿಂದ ಸಕಲ ಶತ್ರುಗಳನ್ನೂ ಧ್ವಂಸಮಾಡುತ್ತಿರುವಂತೆ ಹಾರಿಬರುತ್ತಿದ್ದುದು ಕಂಡುಬಂದಿತು.

೨೩೫. ಆತನು ಬರುತ್ತಲೇ ಪ್ರಣಾಮವನ್ನು ಮಾಡಿ ಸಂತೋಷದಿಂದ ಮಹಾದೇವನು ಕಾಶೀಕ್ಷೇತ್ರಕ್ಕೆ ಬರುತ್ತಿರುವ ವಿಷಯವನ್ನು ಬಿನ್ನವಿಸಿದನು. ಅದನ್ನು ಕೇಳಿ ಮಹಾವಿಷ್ಣುವು ಸಂಭ್ರಮದಿಂದೆದ್ದು 'ಈಶ್ವರನೆಲ್ಲಿ?' ಎಂಬುದಾಗಿ ಪ್ರಶ್ನೆಮಾಡಿದನು.

೨೩೬. ಗರುಡನು ಹೇಳುತ್ತಾನೆ :—ಯಾವನ ಧ್ವಜದ ರತ್ನಗಳ ಕಾಂತಿಯು ಭೂಮ್ಯಾಕಾಶಗಳ ಅಂತರವನ್ನೆಲ್ಲ ವ್ಯಾಪಿಸಿರುವುದೊ, ಅಂತಹ ವೃಷಭಧ್ವಜನಾದ ಮಹಾದೇವನನ್ನು ಪ್ರತ್ಯಕ್ಷವಾಗಿ ನೋಡು.

೨೩೭. ಆತನೊಬ್ಬನೇ ಜನರ ನೇತ್ರಗಳ ಸೃಷ್ಟಿಯನ್ನು ಸಫಲಗೊಳಿಸಲು ಸಮರ್ಥನು. ಆತನನ್ನು ನೋಡುವುದರಿಂದಲೇ ಜನರ ನೇತ್ರಗಳು ಸಫಲಗಳಾಗುವುವು. ಕೋಟಿಸೂರ್ಯರ ಪ್ರಕಾಶದಿಂದ ಹತ್ತುದಿಕ್ಕುಗಳ ಮುಖಗಳನ್ನೂ ಬೆಳಗಿಸುತ್ತಿರುವನು.

೨೩೮–೨೪೦. ವಿಮಾನಸ್ಥರಾದ ದೇವತೆಗಳ ವಿಮಾನಗಳಿಂದ ಆಕಾಶದಲ್ಲಿ ಪರಿವೃತವಾದುದೂ, ಮಹಾವಾದ್ಯಘೋಷಗಳಿಂದ ಕುಲಪರ್ವತಗಳ ಗುಹೆ

ಪ್ರಣಮ್ಯ ದೂರಾದಪಿ ಚ ಸಂಪ್ರಹೃಷ್ಟತನೂರುಹಃ ।
ಅಭ್ಯುತ್ಥಾತುಂ ಮನಶ್ಚಕ್ರೇ ಶಂಖಚಕ್ರಗದಾಧರಃ ॥ ೨೪೦ ॥
ಅಗ್ನಿಬಿಂದುಮಥ ಪ್ರಾಹ ಮುಕ್ತಿದಸ್ತು ಮುದಾಂ ನಿಧಿಃ ।
ಇದಂ ಸುದರ್ಶನಂ ಚಕ್ರಂ ಸ್ಪೃಶಾಸವ್ಯೇನ ಪಾಣಿನಾ ॥ ೨೪೧ ॥
ಅಗ್ನಿಬಿಂದುರಿತಿ ಪ್ರೋಕ್ತಃ ಸ್ಪೃಶೇದ್ಯಾವತ್ಸುದರ್ಶನಂ ।
ತಾವತ್ಸುದರ್ಶನೋ ಜಾತಃ ಪರಮಾನುಗ್ರಹಾದ್ಧರೇಃ ॥ ೨೪೨ ॥

ಸ್ಕಂದ ಉವಾಚ :—

ಜ್ಯೋತೀರೂಪೋಽಥ ಸ ಮುನಿಃ ಕೌಸ್ತುಭೇ ಜ್ಯೋತಿಷಾಂ ತನೌ ।
ಏಕೀಭೂತಃ ಕಲಶಜ ಬಿಂದುಮಾಧವಸೇವನಾತ್ ॥ ೨೪೩ ॥
ಬಿಂದುಮಾಧವಪಾದಾಬ್ಜಭ್ರಮರೀಕೃತಮಾನಸಾಃ ।
ಅಗ್ನಿಬಿಂದೂಪಮಾಂ ಯಾಂತಿ ಕಲಶೋದ್ಭವ ನಿಶ್ಚಿತಂ ॥ ೨೪೪ ॥

---

ಗಳನ್ನೂ ಪ್ರತಿಧ್ವನಿಗೊಳಿಸುತ್ತಿರುವುದೂ, ವಿದ್ಯಾಧರಿಯರು ಸುರಿಸುತ್ತಿರುವ ಪುಷ್ಪಾಂಜಲಿಗಳಿಂದ ಸುವಾಸನಾವಿಶಿಷ್ಟವಾದುದೂ ಆದ ಮಹೇಶ್ವರನ ವೃಷಭಧ್ವಜವನ್ನು ಕಂಡು ಮಹಾವಿಷ್ಣುವು ದೂರದಿಂದಲೇ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಸಂತೋಷದಿಂದ ಮೈನವಿರೇಳುತ್ತಿರಲು, ಶಂಖ, ಚಕ್ರ, ಗದಾದ್ಯಾಯುಧಗಳನ್ನು ಧರಿಸಿ ಪ್ರತ್ಯುತ್ಥಾನಮಾಡಲೆಳಸಿದನು.

೨೪೧. ಮೋಕ್ಷಪ್ರದಾಯಕನೂ, ಸಂತೋಷನಿಧಿಯೂ ಆದ ಆತನು ಅಗ್ನಿಬಿಂದುವಿಗೆ ಇಂತೆಂದು ಹೇಳಿದನು: "ಈ ನನ್ನ ಸುದರ್ಶನ ಚಕ್ರವನ್ನು ಬಲಗೈಯಿಂದ ಸ್ಪರ್ಶಿಸು."

೨೪೨. ಹೀಗೆ ಹೇಳಲ್ಪಟ್ಟ ಅಗ್ನಿಬಿಂದುವು ಆ ಸುದರ್ಶನವನ್ನು ಮುಟ್ಟುತ್ತಿರುವಂತೆಯೇ ಶ್ರೀಹರಿಯು ಪರಮಾನುಗ್ರಹದಿಂದ ದಿವ್ಯಜ್ಞಾನದಿಂದ ಕೂಡಿದವನಾದನು.

೨೪೩. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ಆ ಮುನಿಯು ಬಿಂದುಮಾಧವನ ಸೇವೆಯ ಫಲವಾಗಿ ತೇಜೋಮಯವಾದ ರೂಪವುಳ್ಳವನಾಗಿ ಜ್ಯೋತಿರ್ಮಯವೆನಿಸಿದ ಶ್ರೀಹರಿಯ ವಕ್ಷಸ್ಥಳದಲ್ಲಿರುವ ಕೌಸ್ತುಭದಲ್ಲಿ ಐಕ್ಯವನ್ನು ಹೊಂದಿದನು.

೨೪೪. ಅಯ್ಯಾ ಕಲಶಸಂಭವನೆ! ಬಿಂದುಮಾಧವನ ಪಾದಕಮಲಗಳಲ್ಲಿಯೇ ಯಾರ ಮನಸ್ಸು ದುಂಬಿಗಳಂತೆ ಓಡಾಡುತ್ತಿರುವುದೊ, ಅವರೆಲ್ಲರೂ ಅಗ್ನಿಬಿಂದುವಿನ ಸಾಮ್ಯವನ್ನೇ ಹೊಂದಿ ಜ್ಞಾನಿಗಳಾಗುವರೆಂಬುದು ನಿಶ್ಚಯವು.

ಕಾಶ್ಯಾಂ ಸದೈವ ವಸ್ತವ್ಯಂ ದ್ರಷ್ಟವ್ಯೋ ಬಿಂದುಮಾಧವಃ ।
ಶ್ರೋತವ್ಯಮಿದಮಾಖ್ಯಾನಂ ಜೇತವ್ಯಾ ಜಗತಾಂ ಗತಿಃ ॥ ೨೪೫ ॥
ಪುಣ್ಯಾಂ ಪಂಚನದೋತ್ಪತ್ತಿಃ ಪುಣ್ಯಾ ಮಾಧವಸಂಕಥಾ ।
ಪುಣ್ಯೋ ವಾರಾಣಸೀ ವಾಸಃ ಸಂಭವೇತ್ಪುಣ್ಯಜನ್ಮನಾಂ ॥ ೨೪೬ ॥
ಅಗ್ನಿಬಿಂದೋಃ ಸ್ತುತಿಂ ಯೋಽತ್ರ ಮಾಧವಾಗ್ರೇ ಪಠಿಷ್ಯತಿ ।
ಸಮೃದ್ಧ ಸರ್ವಕಾಮಃ ಸ ಮೋಕ್ಷಲಕ್ಷ್ಮೀಪತಿರ್ಭವೇತ್ ॥ ೨೪೭ ॥
ಶ್ರಾದ್ಧಕಾಲೇ ಸದಾ ಜಪ್ಯಮಿದಮಾಖ್ಯಾನಮುತ್ತಮಂ ।
ದ್ವಿಜಾನಾಂ ಭುಂಜಮಾನಾನಾಂ ಪುರಸ್ತಾತ್ಪಿತೃತೃಪ್ತಯೇ ॥ ೨೪೮ ॥
ಜಪ್ತವ್ಯಮಿದಮಾಖ್ಯಾನಂ ಪರ್ವಕಾಲೇ ವಿಶೇಷತಃ ।
ಪುಣ್ಯೇ ಪಂಚನದಾಭ್ಯಾಶೇ ಪುಣ್ಯಲಕ್ಷ್ಮೀವಿವೃದ್ಧಯೇ ॥ ೨೪೯ ॥
ಪಠಿತವ್ಯಃ ಪ್ರಯತ್ನೇನ ಬಿಂದುಮಾಧವಸಂಭವಃ ।
ಶ್ರೋತವ್ಯಃ ಪರಯಾ ಭಕ್ತ್ಯಾ ಭುಕ್ತಿಮುಕ್ತಿಸಮೃದ್ಧಯೇ ॥ ೨೫೦ ॥

---

೨೪೫. ಮನುಷ್ಯನಾಗಿ ಜನಿಸಿದಮೇಲೆ ಸರ್ವಕಾಲದಲ್ಲಿಯೂ ಕಾಶಿಯಲ್ಲಿ ವಾಸಮಾಡಬೇಕು. ಬಿಂದುಮಾಧವನ ದರ್ಶನವನ್ನು ತೆಗೆದುಕೊಳ್ಳಬೇಕು. ಈ ಸಚ್ಚರಿತ್ರೆಯನ್ನು ಶ್ರದ್ಧೆಯಿಂದ ಕೇಳಬೇಕು. ಅಂತೆಯೆ, ಜಗತ್ತಿಗೆ ಸಹಜವೇ ಆದ ಸಂಸಾರದ ಗತಿಯನ್ನು ಜಯಿಸಬೇಕು.

೨೪೬. ಪುಣ್ಯತರಗಳಾದ ಪಂಚನದೋತ್ಪತ್ತಿಯ ಆಖ್ಯಾನವೂ, ಬಿಂದು ಮಾಧವನ ದಿವ್ಯಚರಿತ್ರೆಯೂ, ವಾರಾಣಸೀಕ್ಷೇತ್ರದಲ್ಲಿ ವಾಸವೂ ಪುಣ್ಯವಂತರಿಗಲ್ಲದೆ ಇತರರಿಗೆ ಲಭಿಸಲಾರವು.

೨೪೭. ಯಾವನು ಅಗ್ನಿಬಿಂದುವು ಮಾಡಿದ ಸ್ತೋತ್ರವನ್ನು ಬಿಂದು ಮಾಧವನ ಇದಿರಿನಲ್ಲಿ ಪಠನಮಾಡುವನೊ, ಅವನು ಇಹದಲ್ಲಿ ಸಕಲಾಭೀಷ್ಟಗಳ ಸಮೃದ್ಧಿಯನ್ನನುಭವಿಸಿ ಮೋಕ್ಷಲಕ್ಷ್ಮಿಯ ರಮಣನಾಗುವನು.

೨೪೮. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಭೋಜನವನ್ನು ಮಾಡುತ್ತಿರಲು ಪಿತೃಗಳು ತೃಪ್ತರಾಗುವುದಕ್ಕಾಗಿ ಉತ್ತಮವಾದ ಈ ಆಖ್ಯಾನವನ್ನು ಪಠನ ಮಾಡಬೇಕು.

೨೪೯. ವಿಶೇಷವಾಗಿ ಪರ್ವಕಾಲಗಳು ಪ್ರಾಪ್ತವಾದಂದು ಪವಿತ್ರವಾದ ಪಂಚನದದ ಸಮೀಪದಲ್ಲಿ ಈ ಚರಿತ್ರೆಯನ್ನು ಪುರಶ್ಚರಣೆಯನ್ನು ಮಾಡಲು ಪುಣ್ಯವೆಂಬ ಐಶ್ವರ್ಯವು ಭಕ್ತನಿಗೆ ಅಭಿವೃದ್ಧಿಯಾಗುವುದು.

೨೫೦. ಈ ಬಿಂದುಮಾಧವನ ಉತ್ಪತ್ತಿಯನ್ನು ಸರ್ವರೂ ಪ್ರಯತ್ನದಿಂದ ಪಠನಮಾಡಬೇಕು. ಭುಕ್ತಿಮುಕ್ತಿಗಳ ಆಧಿಕ್ಯವನ್ನಿಚ್ಛಿಸುವ ಭಕ್ತರು ಅತ್ಯಂತ ಭಕ್ತಿಯಿಂದ ಇದನ್ನು ಕೇಳಬೇಕು.

**ಸಂಪ್ರಾಪ್ತೇ ವಾಸರೇ ವಿಷ್ಣೋ ರಾತ್ರೌ ಜಾಗರಣಾನ್ವಿತಃ ।**
**ಶೃತ್ವಾಖ್ಯಾನಮಿದಂ ಪುಣ್ಯಂ ವೈಕುಂಠೇ ವಸತಿಂ ಲಭೇತ್ ॥ ೨೫೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಬಿಂದುಮಾಧವಾವಿರ್ಭಾವಃ— ಮಾಧವಾಗ್ನಿಬಿಂದುಸಂವಾದಃ—ವೈಷ್ಣವತೀರ್ಥಮಾಹಾತ್ಮ್ಯವರ್ಣನಂ" ನಾಮೈಕಷಷ್ಟಿತಮೋಽಧ್ಯಾಯಃ**

---

೨೫೧. ಹರಿವಾಸರವು ಪ್ರಾಪ್ತವಾಗಲು ಅಂದಿನ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಈ ಪರಮಪುಣ್ಯತಮವಾದ ಆಖ್ಯಾನವನ್ನು ಶ್ರವಣಮಾಡಲು ವೈಕುಂಠದಲ್ಲಿ ಶಾಶ್ವತವಾಗಿ ವಾಸಮಾಡುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಬಿಂದುಮಾಧವಾವಿರ್ಭಾವ—ಮಾಧವಾಗ್ನಿಬಿಂದುಸಂವಾದ—ವೈಷ್ಣವತೀರ್ಥಮಾಹಾತ್ಮ್ಯವರ್ಣನ"ವೆಂಬ ಅರುವತ್ತೊಂದನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ದ್ವಿಷಷ್ಟಿತಮೋಽಧ್ಯಾಯಃ

### ವೃಷಭಧ್ವಜಪ್ರಾದುರ್ಭಾವವರ್ಣನಂ

ಅಗಸ್ತ್ಯ ಉವಾಚ:—

ಶ್ರುತ್ವಾ ಸ್ಕಂದ ನ ತೃಪ್ತೋಽಸ್ಮಿ ತವ ವಕ್ತ್ರೇರಿತಾಂ ಕಥಾಂ ।
ಅತ್ಯಾಶ್ಚರ್ಯಕರಂ ಪ್ರೋಕ್ತಮಾಖ್ಯಾನಂ ಬೈಂದುಮಾಧವಂ ॥ ೧ ॥
ಇದಾನೀಂ ಶ್ರೋತುಮಿಚ್ಛಾಮಿ ದೇವದೇವಸಮಾಗಮಂ ।
ತಾರ್ಕ್ಷ್ಯಾತ್ತ್ರ್ಯಕ್ಷಃ ಸಮಾಕರ್ಣ್ಯ ದಿವೋದಾಸಸ್ಯ ಚೇಷ್ಟಿತಂ ॥ ೨ ॥
ವಿಷ್ಣುಮಾಯಾಪ್ರಪಂಚಂ ಚ ಕಿಮಾಹ ಗರುಡಧ್ವಜಂ ।
ಕೇ ಕೇ ಚ ಶಂಭುನಾ ಸಾರ್ಧಂ ಸಮಾಯುರ್ಮಂದರಾದ್ಗಿರೇಃ ॥ ೩ ॥
ಬ್ರಹ್ಮಣೇಶಃ ಕಥಂ ದೃಷ್ಟಸ್ತ್ರಪಾಕುಲಿತಚಕ್ಷುಷಾ ।
ಕಿಮಾಹ ದೇವೋ ಬ್ರಹ್ಮಾಣಂ ಕಿಮುಕ್ತಂ ಭಾಸ್ವತಾಪಿ ಚ ॥ ೪ ॥
ಯೋಗಿನೀಭಿಃ ಕಿಮಾಖ್ಯಾಯಿ ಗಣಾ ಹ್ರೀಣಾಃ ಕಿಮಬ್ರುವನ್ ।
ಏತದಾಖ್ಯಾಹಿ ಮೇ ಸ್ಕಂದ ಮಹತ್ಕೌತೂಹಲಂ ಮಯಿ ॥ ೫ ॥

---

### ಕನ್ನಡದ ಅನುವಾದ

#### ವೃಷಭಧ್ವಜಪ್ರಾದುರ್ಭಾವವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ಕಂದನೆ! ನಿನ್ನ ಮುಖದಿಂದ ಹೊರಬಿದ್ದ ಈ ಕಥೆಯನ್ನು ಕೇಳಿದ ನನಗೆ ಇನ್ನೂ ತೃಪ್ತಿಯೇ ಇಲ್ಲದಿರುವುದು. ನೀನು ಹೇಳಿದ ಬಿಂದುಮಾಧವನ ಚರಿತ್ರೆಯು ಅತ್ಯಂತ ಆಶ್ಚರ್ಯದಿಂದ ಕೂಡಿರುವುದು.

೨. ಈಗ ಗರುಡನಿಂದ ದಿವೋದಾಸನ ವೃತ್ತಾಂತವನ್ನೆಲ್ಲ ಕೇಳಿ ದೇವಾಧಿದೇವನಾದ ಮಹೇಶ್ವರನು ಕಾಶೀಕ್ಷೇತ್ರಕ್ಕೆ ಬಂದು ನೆಲಸಿದ ಪ್ರಕಾರವನ್ನು ಕೇಳಲು ಕುತೂಹಲವುಳ್ಳವನಾಗಿರುವೆನು.

೩–೫. ವಿಷ್ಣುಮಾಯೆಯು ವಿಸ್ತರಿಸಿದ ಬಗೆಯನ್ನೂ, ಮಹೇಶ್ವರನು ಮಹಾವಿಷ್ಣುವಿಗೆ ಏನನ್ನು ಹೇಳಿದನೆಂಬುದನ್ನೂ, ಪರಶಿವನೊಡನೆ ಯಾರು ಯಾರು ಮಂದರಪರ್ವತದಿಂದ ಕಾಶಿಗೆ ಬಂದರರೆಂಬುದನ್ನೂ, ಭಯದಿಂದ ಚಂಚಲಗಳಾದ ನೇತ್ರಗಳುಳ್ಳ ಬ್ರಹ್ಮನು ಈಶ್ವರನನ್ನು ಹೇಗೆ ನೋಡಿದನೆಂಬುದನ್ನೂ, ಆತನು ಬ್ರಹ್ಮನಿಗೆ ಏನನ್ನು ಹೇಳಿದನೆಂಬುದನ್ನೂ, ಸೂರ್ಯನು ಏನು ಹೇಳಿದನೆಂಬುದನ್ನೂ, ಯೋಗಿನಿಯರಿಂದ ಏನು ಹೇಳಲ್ಪಟ್ಟಿತೆಂಬುದನ್ನೂ, ಲಜ್ಜಾನ್ವಿತರಾದ ಗಣಗಳು ಏನನ್ನು ಬಿನ್ನವಿಸಿದರೆಂಬುದನ್ನೂ, ನನಗೆ ವಿಸ್ತಾರವಾಗಿ ತಿಳಿಸು. ಸ್ಕಂದನೆ! ಇವುಗಳನ್ನೆಲ್ಲಾ ಕೇಳಲು ನನ್ನಲ್ಲಿ ಅತ್ಯಂತ ಔತ್ಸುಕ್ಯವುಂಟಾಗಿರುವುದು.

ಇಮಂ ಪ್ರಶ್ನಂ ನಿಶಮ್ಯೈಶಿರ್ಮುನೇಃ ಕಲಶಜನ್ಮನಃ ।
ಪ್ರತ್ಯುವಾಚ ನಮಸ್ಕೃತ್ಯ ಶಿವೌ ಪ್ರಣತಸಿದ್ಧಿದೌ ॥ ೬ ॥

ಸ್ಕಂದ ಉವಾಚಃ—

ಮುನೇ ಶೃಣು ಕಥಾಮೇತಾಂ ಸರ್ವಪಾತಕನಾಶಿನೀಂ ।
ಅಶೇಷವಿಘ್ನಶಮನೀಂ ಮಹಾಶ್ರೇಯೋಽಭಿವರ್ಧಿನೀಂ ॥ ೭ ॥
ಅಥ ದೇವೋಽಸುರರಿಪುಃ ಶ್ರುತ್ವಾ ಶಂಭುಸಮಾಗಮಂ ।
ದ್ವಿಜರಾಜಾಯ ಸ ಮುದಾ ಸಮದಾತ್ಪಾರಿತೋಷಿಕಂ ॥ ೮ ॥
ಆಯಾತಂ ಶಂಸತೇ ಶಂಭೋರುಪವಾರಾಣಸಿ ಪ್ರಿಯಂ ।
ಬ್ರಹ್ಮಾಣಮಗ್ರತಃ ಕೃತ್ವಾ ತತಶ್ಚಾಭ್ಯುದ್ಯಯೌ ಹರಿಃ ॥ ೯ ॥
ವಿವಸ್ವತಾ ಸಮೇತಶ್ಚ ತೈರ್ಗಣೈಃ ಪರಿತೋ ವೃತಃ ।
ಯೋಗಿನೀಭಿರನುಧ್ಯಾತೋ ಗಣೇಶಮುಪಸಂಸ್ಥಿತಃ ॥ ೧೦ ॥
ಅಥ ನೇತ್ರಾತಿಥೀಕೃತ್ಯ ದೇವದೇವಂ ವೃಷಧ್ವಜಂ ।
ಮಂಕ್ಷು ತಾರ್ಕ್ಷ್ಯಾದವಾರುಹ್ಯ ಪ್ರಣನಾಮ ಶ್ರಿಯಃಪತಿಃ ॥ ೧೧ ॥

---

೬. ಕಲಶಸಂಭವನಾದ ಅಗಸ್ತ್ಯನ ಈ ಪ್ರಶ್ನೆಯನ್ನು ಕೇಳಿ ಈಶ್ವರಪುತ್ರನಾದ ಷಣ್ಮುಖನು ಪ್ರಣತರಿಗೆ ಕಾರ್ಯಸಿದ್ಧಿಯನ್ನನುಗ್ರಹಿಸುವ ಪಾರ್ವತೀಪರಮೇಶ್ವರರಿಗೆ ನಮಸ್ಕರಿಸಿ ಉತ್ತರವನ್ನು ಹೇಳತೊಡಗಿದನು.

೭. ಸ್ಕಂದನು ಹೇಳುತ್ತಾನೆ:—ಅಯ್ಯಾ ಮುನಿವರ್ಯನೆ! ಸಕಲಪಾತಕಗಳನ್ನೂ ನಾಶಗೊಳಿಸುವುದೂ, ವಿಘ್ನಗಳನ್ನು ನಿಶ್ಶೇಷವಾಗಿ ಶಮನಮಾಡುವುದೂ, ಮಹತ್ತರವಾದ ಶ್ರೇಯಸ್ಸನ್ನು ಅಭಿವೃದ್ಧಿಗೊಳಿಸುವುದೂ ಆದ ಈ ಚರಿತ್ರೆಯನ್ನು ಕೇಳು.

೮. ಇಂತು ದಾನವವೈರಿಯಾದ ಮಹಾವಿಷ್ಣುವು ಗರುಡನಿಂದ ಮಹೇಶ್ವರನು ಕಾಶಿಗೆ ಬರುತ್ತಿರುವ ಸಮಾಚಾರವನ್ನು ಕೇಳಿದೊಡನೆಯೇ ಸಂತೋಷದಿಂದ ಆ ಪಕ್ಷಿಶ್ರೇಷ್ಠನಿಗೆ ಉತ್ತಮವಾದ ಪಾರಿತೋಷಕವನ್ನು ಕೊಟ್ಟನು.

೯. ತನಗೆ ಪ್ರಿಯವಾದ ವಾರಾಣಸಿಗೆ ಶಂಭುವು ಬರುತ್ತಿರುವನೆಂಬ ವಾರ್ತೆಯನ್ನು ಹೇಳುತ್ತಿರುವ ಗರುಡನ ಮಾತನ್ನು ಕೇಳಿ ಶ್ರೀಹರಿಯು ಬ್ರಹ್ಮನನ್ನು ಮುಂದುಮಾಡಿಕೊಂಡು ಮೇಲಕ್ಕೆದ್ದನು.

೧೦–೧೧. ಆತನು ಸೂರ್ಯನಿಂದ ಕೂಡಿದವನಾಗಿ ಗಣಗಳು ಸುತ್ತಲೂ ಗುಂಪುಗೂಡಿರಲು ಯೋಗಿನಿಯರು ತನ್ನನ್ನು ಹಿಂಬಾಲಿಸುತ್ತಿರಲು ಗಣಪತಿಯ ಹಸ್ತಲಾಘವವನ್ನು ಸ್ವೀಕರಿಸಿ ಹೊರಟನು. ಬಳಿಕ ವೃಷಭಾರೂಢನಾಗಿದ್ದ ಮಹಾದೇವನು ತನ್ನ ಕಣ್ಣುಗಳಿಗೆ ಬಿದ್ದೊಡನೆಯೇ ವೇಗವಾಗಿ ಗರುಡನಿಂದ ಕೆಳಗಿಳಿದು ಲಕ್ಷ್ಮೀರಮಣನು ಆತನಿಗೆ ನಮಸ್ಕರಿಸಿದನು.

ಪಿತಾಮಹೋಽಪಿ ಸ್ಥವಿರೋ ಭೃಶಂ ನಮ್ರಶಿರೋಧರಃ ।
ಪ್ರಣತೇನ ಮೃಡೇನೈವ ಪ್ರಣಮನ್ನಿನಿವಾರಿತಃ ॥ ೧೨ ॥
ಸ್ವಸ್ತ್ಯಭ್ಯುದಿತಪಾಣಿಶ್ಚ ರುದ್ರಸೂಕ್ತೈರಮಂತ್ರಯತ್ ।
ಅಕ್ಷತಾನ್ಯಥ ಸಾರ್ದ್ರಾಣಿ ದರ್ಶಯನ್ಸಫಲಾನ್ಯಜಃ ॥ ೧೩ ॥
ಮೌಲಿಂ ಪಾದಾಬ್ಜಯೋಃ ಕೃತ್ವಾ ಗಣೇಶಃ ಸತ್ವರೋ ನತಃ ।
ಮೂರ್ಧ್ನ್ಯಾಘ್ರಾಜಿಘ್ರಯಾಂಚಕ್ರೇ ಹರೋ ಹರ್ಷಾದ್ಗಜಾನನಂ ॥ ೧೪ ॥
ಅಭ್ಯುಪಾವೇಶಯಚ್ಚಾಪಿ ಪರಿಷ್ವಜ್ಯ ನಿಜಾಸನೇ ।
ಸೋಮನಂದಿಪ್ರಭೃತಯಃ ಪ್ರಣೇಮುರ್ದಂಡವದ್ಗಣಾಃ ॥ ೧೫ ॥
ಯೋಗಿನ್ಯೋಽಪಿ ಪ್ರಣಮ್ಯೇಶಂ ಚಕ್ರುರ್ಮಂಗಲಗಾಯನಂ ।
ತರಣಿಃ ಪ್ರಣನಾಮಾಥ ಪ್ರಮಥಾಧಿಪತಿಂ ಹರಂ ॥ ೧೬ ॥
ಖಂಡೇಂದುಶೇಖರಶ್ಚಾಥ ಉಪಸಿಂಹಾಸನಂ ಹರಿಂ ।
ಸಮುಪಾವೇಶಯದ್ವಾಮಪಾರ್ಶ್ವೇ ಮಾನಪುರಃಸರಂ ॥ ೧೭ ॥

---

೧೨. ವೃದ್ಧನಾದ ಬ್ರಹ್ಮದೇವನೂ ಅತ್ಯಂತ ವಿನೀತನಾಗಿ ತಲೆಯನ್ನು ಬಗ್ಗಿಸಿಕೊಂಡು ಆತನಿಗೆ ನಮಸ್ಕರಿಸಲು ಬರುತ್ತಿರುವುದನ್ನು ಕಂಡು ಈಶ್ವರನು ನಿವಾರಿಸಿ ತಾನೇ ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿದನು.

೧೩. ಆಗ ಚತುರ್ಮುಖನು ಸ್ವಸ್ತಿಸೂಚಕವಾಗಿ ಎತ್ತಿದ ಕೈಗಳಲ್ಲಿ ಫಲ ಸಹಿತವಾದ ಆರ್ದ್ರಾಕ್ಷತೆಯನ್ನು ಹಿಡಿದು ರುದ್ರಸೂಕ್ತದ ಮಂತ್ರಗಳಿಂದ ಆತನನ್ನು ಸತ್ಕರಿಸಿದನು.

೧೪. ವಿನಾಯಕನು ತ್ವರೆಯಾಗಿ ಮುಂದೆ ಬಂದು ತನ್ನ ಕಿರೀಟವನ್ನು ಆತನ ಪಾದಗಳಲ್ಲೀಡಾಡಿ ನಮಸ್ಕರಿಸಿದನು. ಪರಮೇಶ್ವರನೂ ಸಂತೋಷದಿಂದ ಆ ಗಣೇಶನನ್ನು ಶಿರಸ್ಸನ್ನಾಘ್ರಾಣಿಸಿದನು.

೧೫. ಆತನನ್ನು ಆಲಿಂಗಿಸಿಕೊಂಡು ತನ್ನ ಆಸನದಲ್ಲಿಯೇ ಕುಳ್ಳಿರಿಸಿಕೊಂಡನು. ಬಳಿಕ ಸೋಮ, ನಂದಿ ಮುಂತಾದ ಗಣನಾಯಕರೆಲ್ಲರೂ ಕ್ರಮವಾಗಿ ದೀರ್ಘದಂಡಪ್ರಣಾಮಗಳನ್ನು ಮಾಡಿದರು.

೧೬. ಯೋಗಿನಿಯರೂ ಸಹ ಈಶ್ವರನಿಗೆ ನಮಸ್ಕರಿಸಿ ಮಂಗಳಗೀತೆಗಳನ್ನು ಹಾಡಿದರು. ಬಳಿಕ ಪ್ರಮಥಗಣಗಳಿಗೆ ಒಡೆಯನಾದ ಹರನಿಗೆ ಸೂರ್ಯದೇವನೂ ನಮಸ್ಕಾರವನ್ನು ಮಾಡಿದನು.

೧೭. ಅರ್ಧಚಂದ್ರನನ್ನು ಮೌಳಿಯಲ್ಲಿ ಧರಿಸಿದ ಮಹೇಶ್ವರನೂ ಅಭಿಮಾನಪುರಸ್ಸರವಾಗಿ ನಾರಾಯಣನನ್ನು ಸಮೀಪಕ್ಕೆ ಕರೆದು ತನ್ನ ಸಿಂಹಾಸನದ ಮೇಲೆಯೇ ಎಡಗಡೆಯಲ್ಲಿ ಕುಳ್ಳಿರಿಸಿಕೊಂಡನು.

ಬ್ರಹ್ಮಾಣಂ ದಕ್ಷಿಣೇ ಭಾಗೇ ಪರಿವಿಶ್ರಾಣಿತಾಸನಂ ।
ದೃಷ್ಟ್ವಾಽತ್ರ ಸಂಭಾವಿತಾಃ ಸರ್ವೇ ಶರ್ವೇಣ ಪ್ರಣತಾ ಗಣಾಃ ॥ ೧೮ ॥
ಮೌಲಿಚಾಲನಮಾತ್ರೇಣ ಯೋಗಿನ್ಯೋಽಪಿ ಪ್ರಸಾದಿತಾಃ ।
ಸಂತೋಷಿತೋ ರವಿಶ್ಚಾಪಿ ವಿಶೇತಿ ಕರಸಂಜ್ಞಯಾ ॥ ೧೯ ॥
ಅಯಂ ಶಂಭುಂ ಶತಧೃತಿಃ ಪ್ರಬದ್ಧಕರಸಂಪುಟಃ ।
ಪರಿವಿಜ್ಞಾಪಯಾಂಚಕ್ರೇ ಪ್ರಸನ್ನವದನಾಂಬುಜಂ ॥ ೨೦ ॥

ಬ್ರಹ್ಮೋವಾಚ :—

ಭಗವನ್ದೇವದೇವೇಶ ಕ್ಷಂತವ್ಯಂ ಗಿರಿಜಾಪತೇ ।
ವಾರಾಣಸೀಂ ಸಮಾಸಾದ್ಯ ಯದಹಂ ನಾಗತಃ ಪುನಃ ॥ ೨೧ ॥
ಪ್ರಸಂಗತೋಽಪಿ ಕಃ ಕಾಶೀಂ ಪ್ರಾಪ್ಯ ಚಂದ್ರವಿಭೂಷಣ ।
ಕಿಂಚಿದ್ವಿಧಾತುಂ ಶಕ್ತೋಽಪಿ ತ್ಯಜೇತ್ಸ್ಥಿರತಾಂ ದಧತ್ ॥ ೨೨ ॥
ಸ್ವರೂಪತೋ ಬ್ರಾಹ್ಮಣತ್ವಾದಪಾಕರ್ತುಂ ನ ಶಕ್ಯತೇ ।
ಅಥ ಶಕ್ತೋ ವ್ಯಪಾಕರ್ತುಂ ಕಃ ಪುಣ್ಯೇ ಸಂಚಿಕೀರ್ಷತಿ ॥ ೨೩ ॥

---

೧೮–೧೯. ಬಲಭಾಗದಲ್ಲಿದ್ದ ಸುಖಾಸನದಲ್ಲಿ ಮಂಡಿಸಿದ್ದ ಬ್ರಹ್ಮದೇವನನ್ನು ನೋಡಿ ನಮಸ್ಕರಿಸಿದ ಗಣಗಳೆಲ್ಲರೂ ಮಹೇಶ್ವರನ ಆದರ ಸತ್ಕಾರಗಳಿಗೆ ಪಾತ್ರರಾದರು. ತಲೆತೂಗಿದ ಮಾತ್ರದಿಂದಲೇ ಯೋಗಿನಿಯರೂ ಪ್ರಸನ್ನಗೊಳಿಸಲ್ಪಟ್ಟರು. ಕುಳಿತುಕೊಳ್ಳಬೇಕೆಂಬ ಆತನ ಕೈಸನ್ನೆಯನ್ನು ನೋಡಿದ ಸೂರ್ಯನೂ ಸಂತೋಷಗೊಂಡನು.

೨೦. ಇಂತು ಪ್ರಸನ್ನವಾದ ಮುಖಕಮಲವುಳ್ಳ ಪರಮೇಶ್ವರನನ್ನು ಕುರಿತು ಬ್ರಹ್ಮದೇವನು ಕೈಗಳನ್ನು ಜೋಡಿಸಿಕೊಂಡು ವಿಜ್ಞಾಪನೆಯನ್ನು ಮಾಡತೊಡಗಿದನು.

೨೧. ಬ್ರಹ್ಮನು ಹೇಳುತ್ತಾನೆ:— "ಷಡ್ಗುಣೈಶ್ವರ್ಯಸಮನ್ವಿತನಾದ ಮಹಾದೇವನೆ! ಪಾರ್ವತೀರಮಣನೆ! ವಾರಾಣಸೀಕ್ಷೇತ್ರವನ್ನು ಸೇರಿ ಪುನಃ ನಿನ್ನಲ್ಲಿಗೆ ಹಿಂದಿರುಗಿ ಬರದಿದ್ದ ನನ್ನ ಮಹಾಪರಾಧವನ್ನು ಕ್ಷಮಿಸಬೇಕು.

೨೨. ವಯೋಜ್ಞಾನಗಳಿಂದ ವೃದ್ಧನೆನಿಸಿದವನೂ, ಸ್ವತಂತ್ರವಾಗಿ ಕಾರ್ಯಗಳನ್ನು ಮಾಡಲು ಶಕ್ತನಾದವನೂ ಆದ ಯಾವನು ತಾನೆ ಪ್ರಸಂಗವಶದಿಂದಲಾದರೂ ಒಮ್ಮೆ ಕಾಶಿಯನ್ನು ಸೇರಿ ಮತ್ತೆ ಬಿಟ್ಟುಬರಲಿಚ್ಛಿಸುವನು ?

೨೩. ನಾನು ಸ್ವಭಾವತಃ ಬ್ರಾಹ್ಮಣನಾದುದರಿಂದ ಆ ರಾಜನಿಗೆ ಅಪಕಾರವನ್ನು ಮಾಡಲು ಸಾಧ್ಯವಾಗಲಿಲ್ಲ. ಹಾಗೆ ಮಾಡಲು ಶಕ್ತನಾಗಿದ್ದಿದಂತಿರಲಿ. ಪುಣ್ಯತಮವಾದ ಈ ಕ್ಷೇತ್ರದಲ್ಲಿ ಯಾವನು ಪಾಪಕಾರ್ಯವನ್ನು ಮಾಡಲೆಳಸುವನು ?

ವಿಭೋರಪಿ ಸಮಾಜ್ಞೇಯಂ ಧರ್ಮವರ್ತ್ಮಾನುಸಾರಿಣೀ ।
ನ ಕಿಂಚಿದಪಕರ್ತವ್ಯಂ ಜಾನತಾ ಕೇನಚಿತ್ಕ್ವಚಿತ್ ॥ ೨೪ ॥
ಕಸ್ಮಾದ್ಯಶಿ ಮಹೀಜಾನೌ ಪುಣ್ಯವರ್ತ್ಮನ್ಯತಂದ್ರಿತೇ ।
ಕಾಶೀಪಾಲೇ ದಿವೋದಾಸೇ ಮನಾಗಪಿ ವಿರುದ್ಧಧೀಃ ॥ ೨೫ ॥
ನಿಶಮ್ಯೇತಿ ವಚಸ್ತುಷ್ಟಃ ಶ್ರೀಕಂಠೋಽತಿವಿಶುದ್ಧಧೀಃ ।
ಹಸನ್ನೋವಾಚ ಧಾತಾರಂ ಬ್ರಹ್ಮನ್ಸರ್ವಮವೈಮ್ಯಹಂ ॥ ೨೬ ॥

ದೇವದೇವ ಉವಾಚ :—

ಆದೌ ತಾವದದೋಷಂ ಹಿ ಬ್ರಹ್ಮತ್ವಂ ಬ್ರಾಹ್ಮಣಸ್ಯ ತೇ ।
ವಾಜಿಮೇಧಾಧ್ವರಾಣಾಂ ಚ ತತೋಽಪಿ ದಶಕಂ ಕೃತಂ ॥ ೨೭ ॥
ತತೋಽಪಿ ವಿಹಿತಂ ಬ್ರಹ್ಮನ್ಭವತಾ ಪರಮಂ ಹಿತಂ ।
ಅಪರಾಧಸಹಸ್ರಾಣಿ ಯಲ್ಲಿಂಗಂ ಸ್ಥಾಪಿತಂ ಮಮ ॥ ೨೮ ॥
ಯೇನೈಕಮಪಿ ಮೇ ಲಿಂಗಂ ಸ್ಥಾಪಿತಂ ಯತ್ರ ಕುತ್ರಚಿತ್ ।
ತಸ್ಯಾಪರಾಧಲೇಶೋಽಪಿ ನಾಸ್ತಿ ಸರ್ವಾಪರಾಧಿನಃ ॥ ೨೯ ॥

---

೨೪. ಈ ವಿಷಯದಲ್ಲಿ ನಿನ್ನ ಅಪ್ಪಣೆಯೇ ನನಗಿದ್ದರೂ ಧರ್ಮಮಾರ್ಗದಲ್ಲಿಯೇ ನಡೆಯುತ್ತಿದ್ದ ಆ ಮಹಾರಾಜನಲ್ಲಿ ಬುದ್ಧಿವಂತನಾದ ಯಾವನೂ ಎಂದಿಗೂ ಸ್ವಲ್ಪವೂ ಅಪಕಾರವನ್ನು ಮಾಡುವಂತಿರಲಿಲ್ಲ.

೨೫. ಪುಣ್ಯದ ಮಾರ್ಗದ ಅನುಸರಣೆಯಲ್ಲಿಯೇ ಜಾಗರೂಕನಾಗಿ ಕಾಶೀಕ್ಷೇತ್ರವನ್ನು ಪಾಲಿಸುತ್ತಿದ್ದ ದಿವೋದಾಸನಂತಹ ಮಹಾರಾಜನಲ್ಲಿ ಯಾವನು ತಾನೆ ಸ್ವಲ್ಪವಾದರೂ ಕುಟಿಲಬುದ್ಧಿಯಿಂದ ವರ್ತಿಸಬಹುದು?''

೨೬. ಇಂತೆಂದ ಚತುರ್ಮುಖನ ಮಾತುಗಳನ್ನು ಕೇಳಿ ವಿಮಲಜ್ಞಾನಸಂಪನ್ನನಾದ ಪರಮೇಶ್ವರನು ನಗುತ್ತ ಆತನನ್ನು ಕುರಿತು ''ಎಲೈ ಬ್ರಹ್ಮನೆ! ಅಲ್ಲಿ ನಡೆದುದೆಲ್ಲವನ್ನೂ ನಾನು ತಿಳಿದಿರುವೆನು'' ಎಂಬುದಾಗಿ ಹೇಳತೊಡಗಿದನು.

೨೭. ದೇವದೇವನು ಹೇಳುತ್ತಾನೆ:—''ಮೊದಲನೆಯದಾಗಿ ಬ್ರಾಹ್ಮಣನಾದ ನಿನ್ನ ಬ್ರಹ್ಮತ್ವವೆಂಬುದು ದೋಷವಲ್ಲ. ಮೇಲಾಗಿ ಅಲ್ಲಿ ನೀನು ನನಗಾಗಿ ಹತ್ತು ಅಶ್ವಮೇಧ ಮಹಾಯಜ್ಞಗಳನ್ನೂ ನೆರವೇರಿಸಿರುವೆ.

೨೮. ಎಲೈ ಬ್ರಹ್ಮನೆ! ಆದುದರಿಂದ ನೀನು ಮಾಡಿದುದೆಲ್ಲವೂ ನನಗೆ ಅತ್ಯಂತ ಹಿತವೇ ಆಗಿರುವುದು. ಅಲ್ಲದೆ ಅಪರಾಧಸಹಸ್ರಗಳನ್ನೂ ನಾಶಗೊಳಿಸುವ ಶಿವಲಿಂಗವನ್ನೂ ಪ್ರತಿಷ್ಠಿಸಿರುವೆಯಲ್ಲವೆ.

೨೯. ಯಾವನಿಂದ ಎಲ್ಲಿಯಾದರೂ ನನ್ನ ಒಂದು ಲಿಂಗವು ಸ್ಥಾಪಿಸಲ್ಪಟ್ಟಿರುವುದೊ, ಅವನು ಸಮಸ್ತ ಪಾತಕಗಳನ್ನು ಮಾಡಿದ್ದರೂ ಆ ಪಾಪವು ಸ್ವಲ್ಪವೂ ಅವನಿಗೆ ಲೇಪವಾಗುವುದಿಲ್ಲ.

ಅಪರಾಧಸಹಸ್ರೇಽಪಿ ಬ್ರಾಹ್ಮಣಂ ಯೋಽಪರಾಧ್ನುಯಾತ್ ।
ದಿನೈಃ ಕತಿಪಯೈರೇವ ತಸ್ಯೈಶ್ವರ್ಯಂ ವಿನಶ್ಯತಿ ॥ ೩೦ ॥
ಇತಿ ಭ್ರುವತಿ ದೇವೇಶೇಽಪ್ಯಂತರುಚ್ಛ್ವಸಿತಂ ಗಣೈಃ ।
ಸಮಾತೃಭಿಃ ಸಮಂತಾಚ್ಚ ವಿಲೋಕ್ಯಾಸ್ಯಂ ಪರಸ್ಪರಂ ॥ ೩೧ ॥
ಅರ್ಕೋಽಪ್ಯವಸರಂ ಜ್ಞಾತ್ವಾ ನತ್ವಾ ಶಂಭುಂ ವ್ಯಜಿಜ್ಞಪತ್ ।
ಪ್ರಸನ್ನಾಸ್ಯಮುಮಾಕಾಂತಂ ದೃಷ್ಟ್ವಾ ದೃಷ್ಟಚರಾಚರಃ ॥ ೩೨ ॥

ಅರ್ಕ ಉವಾಚ :—

ನಾಥ ಕಾಶೀಮಿತೋ ಗತ್ವಾ ಯಥಾಶಕ್ತಿ ಕೃತೋಪಧಿಃ ।
ಅಕಿಂಚಿತ್ಕರತಾಂ ಪ್ರಾಪ್ತಃ ಸಹಸ್ರಕರವಾನಪಿ ॥ ೩೩ ॥
ಸ್ವಧರ್ಮಪಾಲಕೇ ತಸ್ಮಿನ್ದಿವೋದಾಸೇ ಧರಾಪತೌ ।
ನಿಶ್ಚಿತಾಗಮನಂ ಜ್ಞಾತ್ವಾ ದೇವಸ್ಯಾಹಮಿಹ ಸ್ಥಿತಃ ॥ ೩೪ ॥
ಪ್ರತೀಕ್ಷಮಾಣೋ ದೇವೇಶ ತ್ವದಾಗಮನಮುತ್ತಮಂ ।
ವಿಭಜ್ಯ ಬಹುಧಾತ್ಮಾನಂ ತ್ವದಾರಾಧನತತ್ಪರಃ ॥ ೩೫ ॥

---

೩೦. ಇತರ ಸಾವಿರಾರು ಅಪರಾಧಗಳಿದ್ದರೂ ವಿಶೇಷವಾಗಿ ಯಾವನು ಬ್ರಾಹ್ಮಣನಿಗೆ ದ್ರೋಹವನ್ನು ಮಾಡುವನೊ, ಅವನ ಐಶ್ವರ್ಯವೆಲ್ಲವೂ ಕೆಲವಾರು ದಿವಸಗಳಲ್ಲಿಯೇ ನಾಶವನ್ನು ಹೊಂದುವುದು."

೩೧. ಇಂತೆಂದು ಮಹಾದೇವನು ಹೇಳುತ್ತಿರಲು ಅಲ್ಲಿ ನೆರೆದಿದ್ದ ಗಣಗಳೂ ಮಾತೃಕೆಯರೂ ಪರಸ್ಪರ ಮುಖಗಳನ್ನು ನೋಡಿಕೊಳ್ಳುತ್ತ ತಮ್ಮ ಭಯವನ್ನು ಬಿಟ್ಟು ಸ್ವಸ್ಥವಾಗಿ ಉಸಿರಾಡತೊಡಗಿದರು.

೩೨. ಪ್ರಸನ್ನಾಂತಃಕರಣನೂ, ಪಾರ್ವತೀಸಮೇತನೂ ಆದ ಶಂಭುವನ್ನು ಕಂಡು ಚರಾಚರಭೂತಗಳ ಕರ್ಮಗಳಿಗೆ ಸಾಕ್ಷಿಯಾದ ಸೂರ್ಯನೂ ಕೂಡ ಸಮಯವರಿತು ನಮಸ್ಕರಿಸಿ ವಿಜ್ಞಾಪಿಸಿಕೊಂಡನು.

೩೩. ಸೂರ್ಯನು ಹೇಳುತ್ತಾನೆ:—"ಸ್ವಾಮಿಯೆ! ನಾನು ಮಂದರ ಪರ್ವತದಿಂದ ಹೊರಟು ಶಕ್ತ್ಯನುಸಾರವಾಗಿ ವೇಷವನ್ನು ಮರೆಮಾಚಿಕೊಂಡು ಕಾಶಿಯನ್ನು ಸೇರಿದರೂ, ಸಹಸ್ರಕರನಾದ ನನಗೂ ಅಲ್ಲಿ ನಿಶ್ಚೇಷ್ಟತೆಯು ಪ್ರಾಪ್ತವಾಯಿತು.

೩೪. ಸ್ವಧರ್ಮದಲ್ಲಿಯೇ ನಿರತನಾಗಿದ್ದ ಆ ದಿವೋದಾಸಮಹಾರಾಜನ ವಿಷಯದಲ್ಲಿ ಏನನ್ನೂ ಮಾಡಲಾರದವನಾಗಿ ದೇವದೇವನಾದ ನೀನು ಇಲ್ಲಿಗೆ ಹೇಗಾದರೂ ಬರುವೆಯೆಂಬುದನ್ನು ನಿಶ್ಚಯಿಸಿಕೊಂಡೇ ನಾನು ಇಲ್ಲಿ ನೆಲಸಿರುವೆನು.

೩೫. ಮಂಗಳಪ್ರದವಾದ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತ ನಾನು

ಮನೋರಥದ್ರುಮಸ್ತ್ವಾದ್ಯ ಫಲಿತಃ ಶ್ರೀಮದೀಕ್ಷಣಾತ್ ।
ಕಿಂಚಿದ್ಭಕ್ತಿಲವಾಂಭೋಭಿಃ ಸಿಕ್ತೋ ಧ್ಯಾನೇನ ಸಿಕ್ತಿತಃ ॥ ೩೬ ॥
ಇತ್ಯುದೀರಿತಮಾಕರ್ಣ್ಯ ರವೇರ್ನ್ಯ ರವಿಲೋಚನಃ ।
ಪ್ರೋವಾಚ ದೇವದೇವೇಶೋ ನಾಪರಾಧ್ಯಸಿ ಭಾಸ್ಕರ ॥ ೩೭ ॥
ಮಮೈವ ಕಾರ್ಯಂ ವಿಹಿತಂ ತ್ವಂ ಯದತ್ರ ವ್ಯವಸ್ಥಿತಃ ।
ಯಸ್ಯಾಂ ಸುರಪ್ರವೇಶೋ ನ ತಸ್ಮಿನ್ರಾಜನಿ ಶಾಸತಿ ॥ ೩೮ ॥
ಇತಿ ಶೂರಂ ಸಮಾಶ್ವಾಸ್ಯ ದೇವದೇವಃ ಕೃಪಾನಿಧಿಃ ।
ಗಣಾನಾಶ್ವಾಸಯಾಮಾಸ ವ್ರೀಡಾಸಮ್ರಶಿರೋಧರಾನ್ ॥ ೩೯ ॥
ಯೋಗಿನ್ಯೋಽಪಿ ಸುದೃಷ್ಟ್ಯಾಥ ಶಂಭುನಾ ಸಂಪ್ರಸಾದಿತಾಃ ।
ತ್ರಪಾಭರಸಮಾಕ್ರಾಂತಕಂಧರಾ ಇವ ಸಂಗತಾಃ ॥ ೪೦ ॥
ತತೋ ವ್ಯಾಪಾರಯಾಂಚಕ್ರೇ ತ್ರ್ಯಕ್ಷೋ ನೇತ್ರಾಣಿ ಚಕ್ರಿಣಿ ।
ಹರಿರ್ನ ಕಿಂಚಿದಪ್ಯೂಚೇ ಸರ್ವಜ್ಞಾಗ್ರೇ ಮಹಾಮನಾಃ ॥ ೪೧ ॥

---

ರೂಪವನ್ನು ಬಹು ವಿಧವಾಗಿ ವಿಭಾಗಮಾಡಿಕೊಂಡು ನಿನ್ನ ಪೂಜೆಯಲ್ಲಿಯೇ ತತ್ಪರನಾಗಿರುವೆನು.

೩೬. ಐಶ್ವರ್ಯರೂಪನಾದ ನಿನ್ನ ದರ್ಶನದಿಂದ ಇಂದಿಗೆ ನನ್ನ ಮನೋರಥವೆಂಬ ವೃಕ್ಷವು ಫಲಿತವಾಯಿತು. ಭಕ್ತಿಯೆಂಬ ಸ್ವಲ್ಪವಾದ ನೀರಿನ ಹನಿಗಳಿಂದ ಎರೆಯಲ್ಪಟ್ಟ ಈ ಮರವು ಧ್ಯಾನವೆಂಬ ಪುಷ್ಪದಿಂದೊಡಗೂಡಿರುವುದು.''

೩೭. ಇಂತೆಂದು ಸೂರ್ಯನಾಡಿದ ಮಾತುಗಳನ್ನು ಕೇಳಿ ಸೂರ್ಯನೇತ್ರನೂ ದೇವಾಧಿದೇವನೂ ಆದ ಮಹೇಶ್ವರನು ಹೇಳತೊಡಗಿದನು: ''ಎಲೈ ಸೂರ್ಯನೆ! ನಿನ್ನಿಂದ ಯಾವ ಅಪರಾಧವೂ ನಡೆದಿರುವುದಿಲ್ಲ.

೩೮. ನೀನು ಇಲ್ಲಿ ನೆಲಸುವುದರಿಂದಲೂ ನನ್ನ ಕಾರ್ಯವನ್ನೇ ಮಾಡಿದಂತಾಯಿತು. ಏಕೆಂದರೆ ಆ ಮಹಾರಾಜನು ರಾಜ್ಯಭಾರವನ್ನು ಮಾಡುತ್ತಿರುವವರೆಗೂ ಯಾವ ದೇವತೆಯೂ ಕಾಶಿಯನ್ನು ಪ್ರವೇಶಿಸುವಂತಿರಲಿಲ್ಲ.''

೩೯. ಈ ವಿಧವಾಗಿ ಕೃಪಾಸಮುದ್ರನಾದ ಮಹಾದೇವನು ಸೂರ್ಯನಿಗೆ ಸಮಾಧಾನವನ್ನು ಹೇಳಿ ನಾಚಿಕೆಯಿಂದ ತಲೆಬಾಗಿಸಿದ್ದ ಗಣಗಳೆಲ್ಲರನ್ನೂ ಕ್ರಮವಾಗಿ ಸಂತೈಸಿದನು.

೪೦. ಲಜ್ಜೆಯ ಭಾರದಿಂದ ಅವನತಗಳಾದ ಕಂದರಗಳುಳ್ಳ ಯೋಗಿನಿಯರೂ ಸಹ ಮಹಾದೇವನ ಮಂಗಳದೃಷ್ಟಿಯಿಂದ ಪ್ರಸನ್ನಗೊಳಿಸಲ್ಪಟ್ಟರು. ಮತ್ತು ಆತನ ಬಳಿಗೆ ಮೆಲ್ಲಮೆಲ್ಲಗೆ ಬಂದು ಸೇರಿದರು.

೪೧. ಆಗ ತ್ರಿನೇತ್ರನು ತನ್ನ ಕಣ್ಣುಗಳನ್ನು ಮಹಾವಿಷ್ಣುವಿದ್ದ ಕಡೆಗೆ ಪ್ರಸರಿಸಿದನು. ಆದರೆ ಸರ್ವಜ್ಞನಾದ ಆತನೆದುರಿನಲ್ಲಿ ಮಹಾಮೇಧಾವಿಯಾದ ವಿಷ್ಣುವು ಏನನ್ನೂ ಹೇಳಲಿಲ್ಲ.

ಈಶೋಽಪಿ ಶ್ರುತವೃತ್ತಾಂತಸ್ತಾರ್ಕ್ಷ್ಯಾದ್ಗಣಪಶಾರ್ಙ್ಗಿಣೋಃ ।
ಮನಸ್ಯೈವ ಪ್ರಸನ್ನೋಽಭೂನ್ನ ಕಿಂಚಿತ್ಪರ್ಯಭಾಷತ ॥ ೪೨ ॥
ಏತಸ್ಮಿನ್ನಂತರೇ ಪ್ರಾಪ್ತಾ ಗೋಲೋಕಾತ್ಪಂಚಧೇನವಃ ।
ಸುನಂದಾ ಸುಮನಾಶ್ಚಾಪಿ ಸುಶೀಲಾ ಸುರಭಿಸ್ತಥಾ ॥ ೪೩ ॥
ಪಂಚಮೀ ಕಪಿಲಾ ಚಾಪಿ ಸರ್ವಾಘೌಘವಿಘಟ್ಟಿನೀ ।
ವಾತ್ಸಲ್ಯದೃಷ್ಟ್ಯಾ ಭರ್ಗಸ್ಯ ತಾಸಾಮೂಧಾಂಸಿ ಸುಸ್ರುವುಃ ॥ ೪೪ ॥
ವವರ್ಷುಃ ಪಯಸಾಂ ಪೂರೈಸ್ತದೂಧಾಂಸಿ ಪಯೋಧರಾಃ ।
ಧಾರಾಸಾರೈರವಿಚ್ಛಿನ್ನೈಸ್ತಾವದ್ಯಾವದ್ಧ್ರದೋಽಭವತ್ ॥ ೪೫ ॥
ಪಯಃಪಯೋಧಿರಿವ ಸಾ ದ್ವಿತೀಯಃ ಪ್ರೈಕ್ಷಿ ಪಾರ್ಷದೈಃ ।
ದೇವೇಶಸಮಧಿಷ್ಠಾನಾತ್ತತ್ತೀರ್ಥಮಭವತ್ಪರಂ ॥ ೪೬ ॥
ಕಪಿಲಾಹ್ರದ ಇತ್ಯಾಖ್ಯಾಂ ಚಕ್ರೇ ತಸ್ಯ ಮಹೇಶ್ವರಃ ।
ತತೋ ದೇವಾಜ್ಞಯಾ ಸರ್ವೇ ಸ್ನಾತಾಸ್ತತ್ರ ದಿವೌಕಸಃ ॥ ೪೭ ॥
ಆವಿರಾಸುಸ್ತತಸ್ತೀರ್ಥಾದಥ ದಿವ್ಯಪಿತಾಮಹಾಃ ।
ತಾನ್ದೃಷ್ಟ್ವಾ ತೇ ಸುರಾಃ ಸರ್ವೇ ತರ್ಪಯಾಂಚಕ್ರಿರೇ ಮುದಾ ॥ ೪೮ ॥

---

೪೨. ಮಹೇಶ್ವರನೂ ಗರುಡನಿಂದ ವಿನಾಯಕ ಮಹಾವಿಷ್ಣುಗಳ ಸಕಲ ವೃತ್ತಾಂತವನ್ನೂ ಕೇಳಿದವನಾಗಿ ಮನಸ್ಸಿನಲ್ಲಿಯೇ ಪ್ರಸನ್ನನಾದನಲ್ಲದೆ ಯಾವ ಮಾತನ್ನೂ ಆಡಲೇ ಇಲ್ಲ.

೪೩–೪೪. ಅಷ್ಟರಲ್ಲಿಯೇ ಗೋಲೋಕದಿಂದ ಐದು ಆಕಳುಗಳು ಅಲ್ಲಿಗೆ ಬಂದು ಸೇರಿದುವು. ಅವುಗಳೇ ಸುನಂದೆ, ಸುಮನಸೆ, ಸುಶೀಲೆ ಮತ್ತು ಸುರಭಿ. ಐದನೆಯದೇ ಸಕಲ ಪಾಪರಾಶಿಗಳನ್ನೂ ನಿರ್ಮೂಲಗೊಳಿಸುವ ಕಪಿಲೆಯೆಂದು. ಪರಮೇಶ್ವರನ ವಾತ್ಸಲ್ಯಪೂರಿತವಾದ ದೃಷ್ಟಿಯಿಂದ ಅವುಗಳ ಕೆಚ್ಚಲುಗಳು ಹಾಲನ್ನು ಕರೆಯತೊಡಗಿದುವು.

೪೫. ತುಂಬಿದ ಕೆಚ್ಚಲುಗಳು ಅವುಗಳ ಹಾಲಿನಿಂದ ತುಂಬಿ ಅವಿಚ್ಛಿನ್ನವಾಗಿ ಒಂದೇಸವನೆ ಸುರಿಯುತ್ತಿರುವ ಆ ಧಾರೆಗಳಿಂದ ಸ್ವಲ್ಪಕಾಲದಲ್ಲಿಯೇ ದೊಡ್ಡದಾದ ಒಂದು ತಟಾಕವುಂಟಾಯಿತು.

೪೬. ಅದು ಅಲ್ಲಿ ನೆರೆದಿದ್ದ ಪಾರ್ಷದಗಣಗಳಿಗೆ ಎರಡನೆಯ ಕ್ಷೀರಸಮುದ್ರದಂತೆಯೇ ತೋರುತ್ತಿದ್ದಿತು. ಅಲ್ಲಿಯೇ ದೇವಾಧಿದೇವನು ನೆಲಸಿದುದರಿಂದ ಆ ತೀರ್ಥವು ಸರ್ವೋತ್ತಮವಾಯಿತು.

೪೭. ಅದಕ್ಕೆ ಮಹೇಶ್ವರನು ಕಪಿಲಾಹ್ರದವೆಂಬ ಹೆಸರನ್ನಿಟ್ಟನು. ಬಳಿಕ ಆತನ ಅಪ್ಪಣೆಯಂತೆ ಅಲ್ಲಿ ನೆರೆದಿದ್ದ ಸಮಸ್ತ ದೇವತೆಗಳೂ ಆ ಹ್ರದದಲ್ಲಿ ಸ್ನಾನಗಳನ್ನು ಮಾಡಿದರು.

೪೮. ಬಳಿಕ ಆ ತೀರ್ಥದಿಂದ ದೇವಲೋಕವಾಸಿಗಳಾದ ಪಿತಾಮಹ

ಅಗ್ನಿಷ್ವಾತ್ತಾ ಬರ್ಹಿಷದ ಆಜ್ಯಪಾಃ ಸೋಮಪಾಸ್ತಥಾ ।
ಇತ್ಯಾದ್ಯಾ ದಿವ್ಯಪಿತರಸ್ತೃಪ್ತಾಃ ಶಂಭುಂ ವ್ಯಜಿಜ್ಞಪನ್ ॥ ೪೯ ॥
ದೇವದೇವ ಜಗನ್ನಾಥ ಭಕ್ತಾನಾಮಭಯಪ್ರದ ।
ಅಸ್ಮಿಂಸ್ತೀರ್ಥೇ ತ್ವದಭ್ಯಾಶಾಜ್ಜಾತಾ ನಸ್ತೃಪ್ತಿರಕ್ಷಯಾ ॥ ೫೦ ॥
ತಸ್ಮಾಚ್ಛಂಭೋ ವರಂ ದೇಹಿ ಪ್ರಸನ್ನೇನಾಂತರಾತ್ಮನಾ ।
ಇತಿ ದಿವ್ಯಪಿತೄಣಾಂ ಸ ಶ್ರುತ್ವಾ ವಾಕ್ಯಂ ವೃಷಧ್ವಜಃ ॥ ೫೧ ॥
ಶೃಣ್ವತಾಂ ಸರ್ವದೇವಾನಾಮಿದಂ ವಚನಮಬ್ರವೀತ್ ।
ಶರ್ವಃ ಸರ್ವಪಿತೄಣಾಂ ವೈ ಪರತೃಪ್ತಿಕರಂ ಪರಂ ॥ ೫೨ ॥

ಶ್ರೀ ದೇವದೇವ ಉವಾಚ:—

ಶೃಣು ವಿಷ್ಣೋ ಮಹಾಬಾಹೋ ಶೃಣು ತ್ವಂ ಚ ಪಿತಾಮಹ ।
ಏತಸ್ಮಿನ್ ಕಾಪಿಲೇ ತೀರ್ಥೇ ಕಾಪಿಲೇಯಪಯೋಭೃತೇ ॥ ೫೩ ॥
ಯೇ ಪಿಂಡಾನ್ನಿರ್ವಪಿಷ್ಯಂತಿ ಶ್ರದ್ಧಯಾ ಶ್ರಾದ್ಧದಾನತಃ ।
ತೇಷಾಂ ಪಿತೄಣಾಂ ಸಂತೃಪ್ತಿರ್ಭವಿಷ್ಯತಿ ಮಮಾಜ್ಞಯಾ ॥ ೫೪ ॥

---

ರೆಲ್ಲರೂ ಆವಿರ್ಭವಿಸಿದರು. ಅವರನ್ನು ಕಂಡು ಆ ದೇವತೆಗಳೆಲ್ಲರೂ ಸಂತೋಷಗೊಂಡು ಅವರಿಗೆ ತರ್ಪಣಗಳನ್ನಿತ್ತರು.

೪೯. ಅವುಗಳಿಂದ ಸಂತೃಪ್ತರಾದ ಅಗ್ನಿಷ್ವಾತ್ತರು, ಬರ್ಹಿಷದರು, ಆಜ್ಯಪರು ಮತ್ತು ಸೋಮಪರೇ ಮೊದಲಾದ ಪಿತೃದೇವತೆಗಳೆಲ್ಲರೂ ಮಹೇಶ್ವರನಲ್ಲಿ ಹೀಗೆ ವಿಜ್ಞಾಪಿಸಿಕೊಂಡರು.

೫೦. ದೇವಾಧಿದೇವನೆ! ಲೋಕೇಶ್ವರನೆ! ಭಕ್ತರಿಗೆ ಅಭಯವನ್ನೀಯುವವನೆ! ನಿನ್ನ ಆಜ್ಞೆಯ ನಿಮಿತ್ತದಿಂದ ಈ ತೀರ್ಥದಲ್ಲಿ ನಮಗೆ ಅಕ್ಷಯವಾದ ತೃಪ್ತಿಯುಂಟಾಯಿತು.

೫೧. ಎಲೈ ಶಂಭುವೆ! ಆದುದರಿಂದ ಪ್ರಸನ್ನಚಿತ್ತನಾಗಿ ನಮಗೆ ವರವನ್ನು ಕೊಡು. ಇಂತೆಂದ ಪಿತೃದೇವತೆಗಳ ವಾಕ್ಯಗಳನ್ನು ವೃಷಭವಾಹನನು ಕೇಳಿದವನಾದನು.

೫೨. ಬಳಿಕ ಈಶ್ವರನು ಸಕಲ ದೇವತೆಗಳೂ ಕಿವಿಗೊಟ್ಟು ಕೇಳುತ್ತಿರಲು ಪಿತೃಗಳಿಗೆ ತೃಪ್ತಿಯುಂಟಾಗುವಂತೆ ಮುಂದೆ ಹೇಳುವಂತೆ ಮಾತನಾಡಿದನು.

೫೩–೫೪. ಮಹಾದೇವನು ಹೇಳುತ್ತಾನೆ:—ಮಹಾ ಪರಾಕ್ರಮಿಯಾದ ವಿಷ್ಣುವೆ! ಕೇಳು; ಪಿತಾಮಹನಾದ ಬ್ರಹ್ಮನೆ! ನೀನೂ ಕೇಳು. ಈ ಧೇನುಗಳ ಹಾಲಿನಿಂದ ತುಂಬಿರುವ ಈ ಕಾಪಿಲತೀರ್ಥದಲ್ಲಿ ಯಾರು ಶ್ರದ್ಧೆಯಿಂದ ಶ್ರಾದ್ಧಾದಿ ಪಿತೃಕಾರ್ಯಗಳನ್ನು ಮಾಡಿ ಅವರಿಗೆ ಪಿಂಡಗಳನ್ನರ್ಪಿಸುವರೊ, ಅವರ ಪಿತೃಗಳಿಗೆ ನನ್ನ ಅಪ್ಪಣೆಯಂತೆ ಅಕ್ಷಯವಾದ ಸಂತೃಪ್ತಿಯುಂಟಾಗುವುದು.

ಅನ್ಯಂ ವಿಶೇಷಂ ವಕ್ಷ್ಯಾಮಿ ಮಹಾತೃಪ್ತಿಕರಂ ಪರಂ ।
ಕುಹೂಸೋಮಸಮಾಯೋಗೇ ದತ್ತಂ ಶ್ರಾದ್ಧಮಿಹಾಕ್ಷಯಂ ॥ ೫೫ ॥
ಸಂವರ್ತಕಾಲೇ ಸಂಪ್ರಾಪ್ತೇ ಜಲರಾಶೇರ್ಜಲಾನ್ಯಪಿ ।
ಕ್ಷೀಯಂತೇ ನ ಕ್ಷಯತ್ಯತ್ರ ಶ್ರಾದ್ಧಂ ಸೋಮಕುಹೂಕೃತಂ ॥ ೫೬ ॥
ಅಮಾಸೋಮಸಮಾಯೋಗೇ ಶ್ರಾದ್ಧಂ ಯದ್ಯತ್ರ ಲಭ್ಯತೇ ।
ತೀರ್ಥೇ ಕಾಪಿಲಧಾರೇಽಸ್ಮಿನ್ಗಯಯಾ ಪುಷ್ಕರೇಣ ಕಿಂ ॥ ೫೭ ॥
ಗದಾಧರ ಭವಾನ್ಯತ್ರ ಯತ್ರ ತ್ವಂ ಚ ಪಿತಾಮಹ ।
ವೃಷಧ್ವಜೋಽಸ್ಮ್ಯಹಂ ಯತ್ರ ಫಲ್ಗುಸ್ತತ್ರ ನ ಸಂಶಯಃ ॥ ೫೮ ॥
ದಿವ್ಯಾಂತರಿಕ್ಷಭೌಮಾನಿ ಯಾನಿ ತೀರ್ಥಾನಿ ಸರ್ವತಃ ।
ತಾನ್ಯತ್ರ ನಿವಸಿಷ್ಯಂತಿ ದರ್ಶೇ ಸೋಮದಿನಾನ್ವಿತೇ ॥ ೫೯ ॥
ಕುರುಕ್ಷೇತ್ರೇ ನೈಮಿಷೇ ಚ ಗಂಗಾಸಾಗರಸಂಗಮೇ ।
ಗ್ರಹಣೇ ಶ್ರಾದ್ಧತೋ ಯತ್ಸ್ಯಾತ್ತತ್ತೀರ್ಥೇ ವಾರ್ಷಭಧ್ವಜೇ ॥ ೬೦ ॥

---

೫೫. ಮತ್ತು ಇವರಿಗೆ ಮಹಾಸಂತೋಷಕರವಾದ ಮತ್ತೊಂದು ಉತ್ತಮ ವಿಶೇಷವನ್ನು ನಿರೂಪಿಸುವೆನು. ಅಮಾವಾಸ್ಯೆಯು ಸೋಮವಾರದ ದಿನ ಸಂಭವಿಸಲು ಇಲ್ಲಿ ಅರ್ಪಿಸಿದ ಶ್ರಾದ್ಧವು ಅಕ್ಷಯಫಲದಾಯಕವಾಗುವುದು.

೫೬. ಪ್ರಳಯಕಾಲವೊದಗಿದಾಗಲೂ ಸಹ ಸಮುದ್ರದ ಜಲವೆಲ್ಲವೂ ಕ್ಷಯವನ್ನು ಹೊಂದಿದರೂ ಅಮಾಸೋಮವಾರದ ದಿನದಲ್ಲಿ ಮಾಡಿದ ಇಲ್ಲಿಯ ಶ್ರಾದ್ಧದ ಫಲವು ನಾಶವಾಗುವುದಿಲ್ಲ.

೫೭. ಅಮಾವಾಸ್ಯೆ ಸೋಮವಾರಗಳ ಸುಯೋಗದಲ್ಲಿ ಕಪಿಲಧಾರೆಯೆಂಬ ಈ ತೀರ್ಥದಲ್ಲಿ ಪಿತೃಗಳಿಗೆ ಶ್ರಾದ್ಧವು ಲಭಿಸಿದುದೇ ಆದರೆ ಗಯೆಯಲ್ಲಿಯೂ ಪುಷ್ಕರಕ್ಷೇತ್ರದಲ್ಲಿಯೂ ಮಾಡಿದ ಶ್ರಾದ್ಧಗಳಿಂದ ವಿಶೇಷ ಫಲವೇನು ?

೫೮. ಗದಾಧರನೆ! ನೀನೆಲ್ಲಿರುವೆಯೊ, ಲೋಕಪಿತಾಮಹನಾದ ಬ್ರಹ್ಮನೆಲ್ಲಿರುವನೊ, ವೃಷಭಧ್ವಜನಾದ ನಾನೆಲ್ಲಿರುವೆನೊ, ಅಲ್ಲಿಯೇ ತೀರ್ಥದ ಸಾನ್ನಿಧ್ಯವಿರುವುದೆಂಬುದರಲ್ಲಿ ಸಂದೇಹವಿಲ್ಲ.

೫೯. ಸೋಮವಾರದ ದಿನ ಅಮಾವಾಸ್ಯೆಯೊದಗಲು ಸ್ವರ್ಗದಲ್ಲಿಯೂ, ಅಂತರಿಕ್ಷದಲ್ಲಿಯೂ, ಭೂಲೋಕದಲ್ಲಿಯೂ ಇರುವ ತೀರ್ಥಗಳೆಲ್ಲ ಎಲ್ಲೆಡೆಗಳಿಂದಲೂ ಬಂದು ಇಲ್ಲಿ ವಾಸಮಾಡುವುವು.

೬೦. ವೃಷಭಧ್ವಜನಾದ ನನಗೆ ಪ್ರಿಯವಾದ ಈ ತೀರ್ಥದಲ್ಲಿ ಶ್ರಾದ್ಧವನ್ನು ಮಾಡಲು ಕುರುಕ್ಷೇತ್ರದಲ್ಲಿಯೂ, ನೈಮಿಷಾರಣ್ಯದಲ್ಲಿಯೂ, ಗಂಗಾಸಾಗರ ಸಂಗಮದಲ್ಲಿಯೂ ಗ್ರಹಣಕಾಲದಲ್ಲಿ ಮಾಡಿದ ಶ್ರಾದ್ಧದ ಫಲವು ಲಭಿಸುವುದು.

ಅಸ್ಯ ತೀರ್ಥಸ್ಯ ನಾಮಾನಿ ಯಾನಿ ದಿವ್ಯಪಿತಾಮಹಾಃ ।
ತಾನ್ಯಹಂ ಕಥಯಿಷ್ಯಾಮಿ ಭವತಾಂ ತೃಪ್ತಿದಾನ್ಯಲಂ ॥ ೬೧ ॥
ಮಧುಸ್ರವೇತಿ ಪ್ರಥಮಮೇಷಾ ಪುಷ್ಕರಿಣೀ ಸ್ಮೃತಾ ।
ಕೃತಕೃತ್ಯಾ ತತೋ ಜ್ಞೇಯಾ ತಥೋಽಸೌ ಕ್ಷೀರನೀರಧಿಃ ॥ ೬೨ ॥
ವೃಷಭಧ್ವಜತೀರ್ಥಂ ಚ ತೀರ್ಥಂ ಪೈತಾಮಹಂ ತತಃ ।
ತತೋ ಗದಾಧರಾಖ್ಯಂ ಚ ಪಿತೃತೀರ್ಥಂ ತತಃ ಪರಂ ॥ ೬೩ ॥
ತತಃ ಕಾಪಿಲಧಾರಂ ವೈ ಸುಧಾಖನಿರಿಯಂ ಪುನಃ ।
ತತಃ ಶಿವಗಯಾಖ್ಯಂ ಚ ಜ್ಞೇಯಂ ತೀರ್ಥಮಿದಂ ಶುಭಂ ॥ ೬೪ ॥
ಏತಾನಿ ದಶನಾಮಾನಿ ತೀರ್ಥಸ್ಯಾಸ್ಯ ಪಿತಾಮಹಾಃ ।
ಭವತಾಂ ತೃಪ್ತಿಕಾರೀಣಿ ವಿನಾಪಿ ಶ್ರಾದ್ಧತರ್ಪಣೈಃ ॥ ೬೫ ॥
ಸೂರ್ಯೇಂದುಸಂಗಮೇ ಯೇಽತ್ರ ಪಿತೄಣಾಂ ತೃಪ್ತಿಕಾಮುಕಾಃ ।
ಬ್ರಾಹ್ಮಣಾನ್ಭೋಜಯಿಷ್ಯಂತಿ ತೇಷಾಂ ಶ್ರಾದ್ಧಮನಂತಕಂ ॥ ೬೬ ॥
ಶ್ರಾದ್ಧೇ ಪಿತೄಣಾಂ ಸಂತೃಪ್ತ್ಯೈ ದಾಸ್ಯಂತಿ ಕಪಿಲಾಂ ಶುಭಾಂ ।
ಯೇಽತ್ರ ತೇಷಾಂ ಪಿತೃಗಣೋ ವಸೇತ್ಕ್ಷೀರೋದರೋಧಸಿ ॥ ೬೭ ॥

---

೬೧. ಎಲೈ ಪಿತೃಪಿತಾಮಹ ದೇವತೆಗಳಿರಾ! ಈ ತೀರ್ಥಕ್ಕೆ ಯಾವ ಯಾವ ಹೆಸರುಗಳಿರುವುವೊ ಅವುಗಳೆಲ್ಲವನ್ನೂ ಹೇಳುವೆನು. ಅವುಗಳು ನಾಮ ಸ್ಮರಣೆಯಿಂದಲೇ ನಿಮಗೆ ತೃಪ್ತಿಯನ್ನುಂಟುಮಾಡುವುವು.

೬೨–೬೪. ಈ ಸರೋವರವು ಮೊದಲು ಮಧುಸ್ರವೆಯೆಂಬ ಹೆಸರುಳ್ಳದ್ದಾಗಿರುವುದು. ಬಳಿಕ ಕೃತಕೃತ್ಯ, ಅನಂತರ ಕ್ಷೀರಸಮುದ್ರ, ವೃಷಭಧ್ವಜತೀರ್ಥ, ಪಿತಾಮಹತೀರ್ಥ, ಗದಾಧರತೀರ್ಥ, ಪಿತೃತೀರ್ಥ, ಕಪಿಲಧಾರಾತೀರ್ಥ, ಸುಧಾಖನಿತೀರ್ಥ, ಕೊನೆಯದಾಗಿ ಈ ಪವಿತ್ರ ತೀರ್ಥವು ಶಿವಗಯೆಯೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು.

೬೫. ಪಿತಾಮಹರಿರಾ! ಇಲ್ಲಿ ಶ್ರಾದ್ಧಗಳನ್ನುಮಾಡಲು ಅಶಕ್ತರಾದವರು ಈ ಹತ್ತು ಹೆಸರುಗಳನ್ನು ಜಪಿಸಿದ ಮಾತ್ರದಿಂದಲೆ ಶ್ರಾದ್ಧತರ್ಪಣಾದಿ ಕ್ರಿಯೆಗಳಿಲ್ಲದೆಯೇ ನಿಮಗೆ ತೃಪ್ತಿಯುಂಟಾಗಲಿ.

೬೬–೬೭. ಸೂರ್ಯಚಂದ್ರರು ಕೂಡಿದ ದಿನದಲ್ಲಿ (ಅಮಾವಾಸ್ಯೆಯಲ್ಲಿ) ಯಾರು ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬೇಕೆಂಬ ಅಭಿಲಾಷೆಯಿಂದ ಈ ತೀರ್ಥದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವರೊ, ಅವರ ಶ್ರಾದ್ಧಕರ್ಮವು ಅನಂತಫಲದವಾಗುವುದು. ಯಾರು ಇಲ್ಲಿ ಶ್ರಾದ್ಧವನ್ನು ಮಾಡುತ್ತ ಪಿತೃಗಳ ಸಂತೃಪ್ತಿಗಾಗಿ ಕಪಿಲಾಗೋವಿನ ದಾನವನ್ನು ಮಾಡುವರೊ, ಅವರ ಪಿತೃಗಳೆಲ್ಲರೂ ಕ್ಷೀರಸಮುದ್ರದ ದಡದಲ್ಲಿಯೇ ವಾಸಮಾಡುತ್ತಿರುವರು.

ವೃಷೋತ್ಸರ್ಗಃ ಕೃತೋ ಯೈಸ್ತು ತೀರ್ಥೇಽಸ್ಮಿನ್ವೃಷಭಧ್ವಜೇ ।
ಅಶ್ವಮೇಧಪುರೋಡಾಶೈಃ ಪಿತರಸ್ತೇನ ತರ್ಪಿತಾಃ ॥ ೬೮ ॥
ಗಯಾತೋಽಷ್ಟಗುಣಂ ಪುಣ್ಯಂ ಯಸ್ಮಿಂಸ್ತೀರ್ಥೇ ಪಿತಾಮಹಾಃ ।
ಅಮಾಯಾಂ ಸೋಮಯುಕ್ತಾಯಾಂ ಶ್ರಾದ್ಧೈಃ ಕಾಪಿಲಧಾರಿಕೇ॥ ೬೯ ॥
ಯೇಷಾಂ ಗರ್ಭೇಽಭವತ್ಸ್ರಾವೋ ಯೇಽದಂತಜನಸಾ ಮೃತಾಃ ।
ತೇಷಾಂ ತೃಪ್ತಿರ್ಭವೇನ್ನೂನಂ ತೀರ್ಥೇ ಕಾಪಿಲಧಾರಿಕೇ ॥ ೭೦ ॥
ಅದತ್ತಮೌಂಜೀದಾನಾ ಯೇ ಯೇ ಚಾದರಪರಿಗ್ರಹಾಃ ।
ತೇಭ್ಯೋ ನಿರ್ವಾಪಿತಂ ಪಿಂಡಮಿಹ ಹ್ಯಕ್ಷಯತಾಂ ವ್ರಜೇತ್ ॥ ೭೧ ॥
ಅಗ್ನಿದಾಹಮೃತಾ ಯೇ ವೈ ನಾಗ್ನಿದಾಹಶ್ಚ ಯೇಷು ವೈ ।
ತೇ ಸರ್ವೇ ತೃಪ್ತಿಮಾಯಾಂತಿ ತೀರ್ಥೇ ಕಾಪಿಲಧಾರಿಕೇ ॥ ೭೨ ॥
ಔರ್ಧ್ವದೈಹಿಕಹೀನಾ ಯೇ ಷೋಡಶಶ್ರಾದ್ಧವರ್ಜಿತಾಃ ।
ತೇ ತೃಪ್ತಿಮಧಿಗಚ್ಛಂತಿ ಘೃತಕುಲ್ಯಾಂ ನಿವಾಪತಃ ॥ ೭೩ ॥

---

೬೮. ವೃಷಭಧ್ವಜನಾದ ನನಗೆ ಪ್ರಿಯವಾದ ಈ ತೀರ್ಥದಲ್ಲಿ ಪಿತೃಗಳ ಸಂತೋಷಕ್ಕಾಗಿ ಯಾರು ವೃಷೋತ್ಸರ್ಗವನ್ನು ಮಾಡುವರೊ, ಅವರು ಅಶ್ವಮೇಧ ಯಜ್ಞವನ್ನುಮಾಡಿ ಅದರ ಪುರೋಡಾಶದಿಂದ ಪಿತೃಗಳನ್ನು ತೃಪ್ತಿಗೊಳಿಸಿದಂತಾಗುವುದು.

೬೯. ಪಿತೃದೇವತೆಗಳಿಗೂ, ಸೋಮವಾರಯುಕ್ತವಾದ ಅಮಾವಾಸ್ಯೆಯ ದಿನದಲ್ಲಿ ಕಪಿಲಧಾರೆಯೆಂಬ ಈ ಉತ್ತಮ ತೀರ್ಥದಲ್ಲಿ ಶ್ರಾದ್ಧಕ್ರಿಯೆಗಳನ್ನು ಮಾಡಲು ಗಯಾಶ್ರಾದ್ಧಗಳ ಎಂಟರಷ್ಟು ಪುಣ್ಯವು ಲಭಿಸುವುದು.

೭೦. ಕಪಿಲಧಾರೆಯಲ್ಲಿ ಮಾಡಿದ ಪಿತೃಕಾರ್ಯಗಳಿಂದ ಕರ್ತೃವಿನ ವಂಶದಲ್ಲಿ ಗರ್ಭಸ್ರಾವದಿಂದ ಮೃತರಾದ ಜೀವರೂ, ಹಲ್ಲುಗಳು ಬಂದು ಮೃತರಾದವರೂ ತೃಪ್ತರಾಗುವರೆಂಬುದು ನಿಶ್ಚಯವು.

೭೧. ಉಪನಯನರಹಿತರಾದವರೂ, ದಾರಪರಿಗ್ರಹವನ್ನು ಮಾಡದ ಬ್ರಹ್ಮಚಾರಿಗಳೂ ಕರ್ತೃವು ಇಲ್ಲಿ ತಮಗೆ ಅರ್ಪಿಸಿದ ಪಿಂಡಗಳಿಂದ ಅಕ್ಷಯ ತೃಪ್ತಿಯನ್ನು ಹೊಂದುವರು.

೭೨. ಅಗ್ನಿದಾಹದಿಂದ ಯಾರು ಮೃತರಾಗಿರುವರೊ, ಯಾವ ಮೃತರಿಗೆ ಅಗ್ನಿಸಂಸ್ಕಾರವು ನಡೆದಿರುವುದಿಲ್ಲವೊ, ಅವರೆಲ್ಲರಿಗೂ ಈ ಕಪಿಲಧಾರೆಯಲ್ಲಿ ಮಾಡಿದ ಪಿತೃಕರ್ಮದಿಂದ ತೃಪ್ತಿಯುಂಟಾಗುವುದು.

೭೩. ಘೃತಕುಲ್ಯವೆಂಬ ಈ ತೀರ್ಥದಲ್ಲಿ ಮಾಡಿದ ಪಿಂಡದಾನಗಳಿಂದ ಯಾರಿಗೆ ಔರ್ಧ್ವದೇಹಿಕ ಕ್ರಿಯೆಗಳು ಸರಿಯಾಗಿ ನಡೆದಿರುವುದಿಲ್ಲವೊ, ಯಾರು ಷೋಡಶಶ್ರಾದ್ಧರಹಿತರಾಗಿರುವರೊ, ಅವರೂ ಸಂತೋಷವನ್ನು ಹೊಂದುವರು.

ಅಪುತ್ರಾಶ್ಚ ಮೃತಾ ಯೇ ವೈ ಏಷಾಂ ನಾಸ್ತ್ಯುದಕಪ್ರದಃ ।
ತೇಽಪಿ ತೃಪ್ತಿಂ ಪರಾಂ ಯಾಂತಿ ಮಧುಸ್ರವಸಿ ತರ್ಪಿತಾಃ ॥ ೨೪ ॥
ಅಪಮೃತ್ಯುಮೃತಾ ಯೇ ವೈ ಚೋರವಿದ್ಯುಜ್ಜಲಾದಿಭಿಃ ।
ತೇಷಾಮಿಹ ಕೃತಂ ಶ್ರಾದ್ಧಂ ಜಾಯತೇ ಸುಗತಿಪ್ರದಂ ॥ ೨೫ ॥
ಆತ್ಮಘಾತೇನ ನಿಧನಾಂ ಯೇಷಾಮಿಹ ವಿಕರ್ಮಿಣಾಂ ।
ತೇಽಪಿ ತೃಪ್ತಿಂ ಲಭಂತೇಽತ್ರ ಪಿಂಡೈಃ ಶಿವಗಯಾಕೃತೈಃ ॥ ೨೬ ॥
ಪಿತೃಗೋತ್ರೇ ಮೃತಾ ಯೇ ವೈ ಮಾತೃಪಕ್ಷೇ ಚ ಯೇ ಮೃತಾಃ ।
ತೇಷಾಮತ್ರ ಕೃತಃ ಪಿಂಡೋ ಭವೇದಕ್ಷಯತೃಪ್ತಿಭಿಃ ॥ ೨೭ ॥
ಪತ್ನೀವರ್ಗೇ ಮೃತಾ ಯೇ ವೈ ಮಿತ್ರವರ್ಗೇ ಚ ಯೇ ಮೃತಾಃ ।
ತೇ ಸರ್ವೇ ತೃಪ್ತಿಮಾಯಾಂತಿ ತರ್ಪಿತಾ ವಾರ್ಷಭಧ್ವಜೇ ॥ ೨೮ ॥
ಬ್ರಹ್ಮಕ್ಷತ್ರವಿಶಾಂ ವಂಶೇ ಶೂದ್ರವಂಶೇಽಂತ್ಯಜೇಷು ಚ ।
ಯೇಷಾಂ ನಾಮ ಗೃಹೀತ್ವಾತ್ರ ದೀಯತೇ ತೇ ಸಮುದ್ಧೃತಾಃ ॥ ೨೯ ॥

---

೨೪. ಯಾರು ಪುತ್ರಸಂತತಿಯಿಲ್ಲದೆ ಮೃತರಾಗಿರುವರೊ, ಯಾರಿಗೆ ತಿಲೋದಕಗಳನ್ನು ಕೊಡುವವರೂ ಇರುವುದಿಲ್ಲವೊ, ಅವರೂ ಸಹ ಈ ಮಧುಸ್ರವದಲ್ಲಿ ಮಾಡಿದ ತರ್ಪಣಗಳಿಂದ ಅಪಾರವಾದ ತೃಪ್ತಿಯನ್ನು ಹೊಂದುವರು.

೨೫. ವಂಶದಲ್ಲಿ ಯಾರು ಚೋರರು, ಸಿಡಿಲು, ಜಲ ಮುಂತಾದುವುಗಳಿಂದ ಅಪಮೃತ್ಯುವನ್ನು ಪಡೆದಿರುವರೊ, ಅವರಿಗೆ ಇಲ್ಲಿ ಮಾಡಲ್ಪಟ್ಟ ಶ್ರಾದ್ಧಕರ್ಮವು ಸದ್ಗತಿಯನ್ನೊದಗಿಸಿಕೊಡುವುದು.

೨೬. ಯಾರು ದುಷ್ಕರ್ಮವೆನಿಸಿದ ಆತ್ಮಹತ್ಯೆಯಿಂದ ಪ್ರಾಣಗಳನ್ನು ತ್ಯಜಿಸಿರುವರೊ, ಈ ಶಿವಗಯೆಯಲ್ಲಿ ಮಾಡಿದ ಪಿಂಡದಾನಗಳಿಂದ ಅವರೂ ಸಹ ಪಾಪರಹಿತರಾಗಿ ತೃಪ್ತಿಯನ್ನು ಹೊಂದುವರು.

೨೭. ತಂದೆಯ ಗೋತ್ರದಲ್ಲಿಯಾಗಲಿ, ತಾಯಿಯ ಗೋತ್ರದಲ್ಲಿಯಾಗಲಿ ಮೃತರಾಗಿರುವ ಸಕಲರಿಗೂ ಇಲ್ಲಿ ಮಾಡುವ ಪಿಂಡಪ್ರದಾನಕಾರ್ಯವು ನಾಶರಹಿತವಾದ ಸಂತೋಷವನ್ನುಂಟುಮಾಡುವುದು.

೨೮. ಹೆಂಡತಿಯ ಮಾತಾಪಿತೃಗಳ ವರ್ಗಗಳಲ್ಲಿ ಮೃತರಾದವರೂ ಮಿತ್ರವರ್ಗದಲ್ಲಿ ಮೃತರಾದವರೂ ಎಲ್ಲರೂ ಈ ವೃಷಭಧ್ವಜತೀರ್ಥದಲ್ಲಿ ಮಾಡಿದ ತರ್ಪಣಕ್ರಿಯೆಯಿಂದ ಸಂತೃಪ್ತರಾಗುವರು.

೨೯. ಬ್ರಾಹ್ಮಣರಲ್ಲಾಗಲಿ, ಕ್ಷತ್ರಿಯರಲ್ಲಾಗಲಿ, ವೈಶ್ಯರಲ್ಲಾಗಲಿ, ಶೂದ್ರರಲ್ಲಾಗಲಿ, ಅಂತ್ಯಜರಲ್ಲಾಗಲಿ ಯಾರ ಯಾರ ಹೆಸರುಗಳನ್ನು ಹೇಳಿ ಇಲ್ಲಿ ತರ್ಪಣಗಳನ್ನು ಕರ್ತೃವು ಕೊಡುವನೊ, ಅವರೆಲ್ಲರೂ ಉದ್ಧೃತರಾಗುವರು.

ತಿರ್ಯಗ್ಯೋನಿಮೃತಾ ಯೇ ವೈ ಯೇ ಪಿಶಾಚತ್ವಮಾಗತಾಃ ।
ತೇಽಪ್ಯೂರ್ಧ್ವಗತಿಮಾಯಾಂತಿ ತೃಪ್ತಾಃ ಕಾಪಿಲಧಾರಿಕೇ ॥ ೮೦ ॥
ಯೇ ತು ಮಾನುಷಲೋಕೇಽಸ್ಮಿನ್ಪಿತರೋ ಮರ್ತ್ಯಯೋನಯಃ ।
ತೇ ದಿವ್ಯಯೋನಯಃ ಸರ್ವೇ ಮಧುಸ್ರವಸಿ ತರ್ಪಿತಾಃ ॥ ೮೧ ॥
ಯೇ ದಿವ್ಯಲೋಕೇ ಪಿತರಃ ಪುಣ್ಯೈರ್ದೇವತ್ವಮಾಗತಾಃ ।
ತೇ ಬ್ರಹ್ಮಲೋಕೇ ಗಚ್ಛಂತಿ ತೃಪ್ತಾಸ್ತೀರ್ಥೇ ವೃಷಧ್ವಜೇ ॥ ೮೨ ॥
ಕೃತೇ ಕ್ಷೀರಮಯಂ ತೀರ್ಥಂ ತ್ರೇತಾಯಾಂ ಮಧುಮತ್ಪಸಃ ।
ದ್ವಾಪರೇ ಸರ್ಪಿತಾ ಪೂರ್ಣಂ ಕಲೌ ಜಲಮಯಂ ಭವೇತ್ ॥ ೮೩ ॥
ಸೀಮಾ ಬಹಿರ್ಗತಮಪಿ ಜ್ಞೇಯಂ ತೀರ್ಥಮಿದಂ ಶುಭಂ ।
ಮಧ್ಯೇ ವಾರಾಣಸಿ ಶ್ರೇಷ್ಠಂ ಮಮ ಸಾನ್ನಿಧ್ಯತೋ ಸರ್ವೈಃ ॥ ೮೪ ॥
ಕಾಶೀಸ್ಥಿತೈರ್ಯತೋಽದರ್ಶಿ ಧ್ವಜೋ ಮೇ ವೃಷಲಾಂಛನಃ ।
ವೃಷಧ್ವಜೇನ ನಾಮ್ನಾತಃ ಸ್ಥಾಸ್ಯಾಮ್ಯತ್ರ ಪಿತಾಮಹಾಃ ॥ ೮೫ ॥

---

೮೦. ಮನೆಯಲ್ಲಿ ಯಾವ ತೀರ್ಯಗ್ಜಂತುಗಳು ಮೃತಿಯನ್ನು ಹೊಂದಿರುವುವೊ, ಯಾವ ಪಿತೃಗಳು ತಮ್ಮ ಪಾಪಗಳ ಫಲವಾಗಿ ಪಿಶಾಚತ್ವವನ್ನು ಪಡೆದಿರುವರೊ, ಅವರೆಲ್ಲರೂ ಈ ಕಪಿಲಧಾರೆಯಲ್ಲಿತ್ತ ತರ್ಪಣಗಳಿಂದ ಉತ್ತಮ ಗತಿಯನ್ನು ಪಡೆಯುವರು.

೮೧. ಯಾರು ಕ್ಷೀಣಪುಣ್ಯರಾಗಿ ಪುನಃ ಈ ಮಾನುಷಲೋಕದಲ್ಲಿಯೇ ಜನಿಸಿರುವರೊ, ಆ ಪಿತೃಗಳೂ ಸಹ ಮಧುಸ್ರವತೀರ್ಥದಲ್ಲಿ ಮಾಡಿದ ತರ್ಪಣಗಳ ಫಲವಾಗಿ ದಿವ್ಯಯೋನಿಗಳಲ್ಲಿ ಜನ್ಮಗಳನ್ನು ತಾಳುವರು.

೮೨. ಯಾವ ಪಿತೃಗಳು ತಮ್ಮ ಪುಣ್ಯಕರ್ಮಗಳ ಫಲವನ್ನನುಭವಿಸುತ್ತ ಸ್ವರ್ಗಲೋಕದಲ್ಲಿ ದೇವತೆಗಳಾಗಿರುವರೊ, ಅವರು ವೃಷಭಧ್ವಜತೀರ್ಥದಲ್ಲಿ ತರ್ಪಣಗಳನ್ನು ಪಡೆದು ಬ್ರಹ್ಮಲೋಕವನ್ನೇ ಸೇರುವರು.

೮೩. ಈ ತೀರ್ಥವು ಕೃತಯುಗದಲ್ಲಿ ಕ್ಷೀರಮಯವಾಗಿಯೂ, ತ್ರೇತಾಯುಗದಲ್ಲಿ ಮಧುಪೂರಿತವಾಗಿಯೂ, ದ್ವಾಪರದಲ್ಲಿ ಘೃತಮಯವಾಗಿಯೂ ಇದ್ದು ಕಲಿಯುಗದಲ್ಲಿ ಜಲಮಯವಾಗಿ ವ್ಯತ್ಯಾಸಗೊಳ್ಳುವುದು.

೮೪. ಪವಿತ್ರವಾದ ಈ ತೀರ್ಥವು ಮೇರೆಯ ಹೊರಗಿರುವುದಾದರೂ ನನ್ನ ಸಾನ್ನಿಧ್ಯ ವಿಶೇಷವನ್ನುಹೊಂದುವುದರಿಂದ ಕಾಶೀಕ್ಷೇತ್ರದ ಮಧ್ಯದಲ್ಲಿದ್ದಂತೆಯೇ ಜನರು ತಿಳಿದು ಸೇವಿಸಬೇಕು.

೮೫. ನಾನು ಇಲ್ಲಿಗೆ ಬರುತ್ತಲೆ ಕಾಶೀನಿವಾಸಿಗಳಿಗೆ ನನ್ನ ವೃಷಭಲಾಂಛನವುಳ್ಳ ಧ್ವಜವು ಕಂಡಿತಾದುದರಿಂದ ನಾನು ಇಲ್ಲಿಯೇ ವೃಷಭಧ್ವಜನೆಂಬ ಹೆಸರಿನಿಂದ ನಿಂತು ಪ್ರಸಿದ್ಧನಾಗುವೆನು.

ಪಿತಾಮಹೇನ ಸಹಿತೋ ಗದಾಧರಸಮನ್ವಿತಃ ।
ರವಿಣಾ ಪಾರ್ಷದೈಃ ಸಾರ್ಧಂ ತುಷ್ಟಯೇ ವಃ ಪಿತಾಮಹಾಃ ॥ ೮೬ ॥
ಇತಿ ಯಾವದ್ವರಂ ದತ್ತೇ ಪಿತೃಭ್ಯೋ ವೃಷಭಧ್ವಜಃ ।
ತಾವನ್ನಂದೀ ಸಮಾಗತ್ಯ ಪ್ರಣಮ್ಯೇಶಂ ವ್ಯಜಿಜ್ಞಪತ್ ॥ ೮೭ ॥

ನಂದಿಕೇಶ್ವರ ಉವಾಚ :—

ವಿಹಿತಃ ಸ್ಯಂದನಃ ಸಜ್ಜಸ್ತತೋಽಸ್ತು ವಿಜಯೋದಯಃ ।
ಅಷ್ಟೌ ಕಂಠೀರವಾ ಯತ್ರ ಯತ್ರೋಕ್ಷ್ಣಾಮಷ್ಟಕಂ ಶುಭಂ ॥ ೮೮ ॥
ಯಚ್ಛ್ರೇಭಾಃ ಪರಿಭ್ರಾಂತ್ಯಷ್ಟೌ ಯತ್ರಾಷ್ಟೌ ಜವಿನೋ ಹಯಾಃ ।
ಮನಃ ಸಂಯಮನಂ ಯತ್ರ ಕಶಾಪಾಣಿ ವ್ಯವಸ್ಥಿತಂ ॥ ೮೯ ॥

---

೮೬. ಪಿತೃದೇವತೆಗಳಿರಾ! ಲೋಕಪಿತಾಮಹನಾದ ಬ್ರಹ್ಮದೇವನಿಂದಲೂ, ಗದಾಪಾಣಿಯಾದ ಮಹಾವಿಷ್ಣುವಿನಿಂದಲೂ, ಸೂರ್ಯನಿಂದಲೂ, ಪಾರ್ಷದಗಣಗಳಿಂದಲೂ ಕೂಡಿದವನಾಗಿ ನಿಮಗೆ ಸಂತೋಷವನ್ನುಂಟುಮಾಡುತ್ತ ನಾನು ಇಲ್ಲಿ ನೆಲಸುವೆನು.''

೮೭. ಇಂತೆಂದು ವೃಷಭಧ್ವಜನು ಪಿತೃದೇವತೆಗಳಿಗೆ ವರವನ್ನು ಕೊಡುತ್ತಿರುವಷ್ಟರಲ್ಲಿಯೇ ನಂದಿಯು ಅಲ್ಲಿಗೆ ಪ್ರಾಪ್ತನಾಗಿ ಪ್ರಣಾಮವನ್ನುಮಾಡಿ ವಿಜ್ಞಾಪನೆಯನ್ನು ಮಾಡತೊಡಗಿದನು.

೮೮. ನಂದಿಕೇಶ್ವರನು ಹೇಳುತ್ತಾನೆ:—ದೇವೋತ್ತಮನೆ! ನಿನ್ನ ರಥವು ಸಜ್ಜುಗೊಳಿಸಲ್ಪಟ್ಟು ಬಂದು ನಿಂತಿರುವುದು. ಇನ್ನು ಪುರಪ್ರವೇಶಮಹೋತ್ಸವವು ಮುಂದುವರಿಯಲಿ. ಆ ರಥಕ್ಕೆ ಎಂಟು ಸಿಂಹಗಳನ್ನೂ ಉತ್ತಮಗಳಾದ ಎಂಟು ವೃಷಭಗಳನ್ನೂ ಹೂಡಿರುವರು.

೮೯. ಅದನ್ನು ಅಷ್ಟದಿಗ್ಗಜಗಳು ಸುತ್ತುವರೆದಿರುವುವು. ವೇಗಶಾಲಿಗಳಾದ ಎಂಟು ಕುದುರೆಗಳೂ ಯೋಜಿಸಲ್ಪಟ್ಟಿರುವುವು. ಮನೋನಿಗ್ರಹವೇ ಚಾವಟಿಗೆಯನ್ನು ಕೈಯಲ್ಲಿ ಹಿಡಿದು ಅದರಲ್ಲಿ ಕುಳಿತಿರುವುದು.*

---

* ಆಧ್ಯಾತ್ಮಿಕವಾಗಿ ಈ ಎರಡು ಶ್ಲೋಕಗಳಿಗೂ ಅರ್ಥಮಾಡಬಹುದು : ಸಿಂಹಗಳೆಂದರೆ
ಮೂಲಪ್ರಕೃತಿಯೂ ಅದರ ವಿಕಾರಗಳಾದ ಮಹತ್ತು, ಅಹಂಕಾರ ಮತ್ತು ಪಂಚ ತನ್ಮಾತ್ರೆಗಳು.
ವೃಷಭಗಳೆಂದರೆ ತ್ವಙ್ಮಾಂಸ ರುಧಿರ ಸ್ನಾಯು ಮೇದೋಮಜ್ಜಾಸ್ಥಿ ಶುಕ್ರಗಳೆಂಬ ಶರೀರದ ಅಷ್ಟಧಾತು
ಗಳು. ಕುದುರೆಗಳೆಂದರೆ ಚಿತ್ತ, ಅಹಂಕಾರ, ಬುದ್ಧಿ ಮತ್ತು ಪಂಚಜ್ಞಾನೇಂದ್ರಿಯಗಳೆಂದಾಗಲಿ,
ಮನಸ್ಸು, ಬುದ್ಧಿ, ಅಹಂಕಾರ, ಚಿತ್ತಗಳೆಂಬ ಅಂತಃಕರಣದ ನಾಲ್ಕು ವೃತ್ತಿಗಳೂ, ಆಯುರ್ವೇದ,
ಧನುರ್ವೇದ, ಅರ್ಥವೇದ, ಗಾಂಧರ್ವವೇದಗಳೆಂಬ ನಾಲ್ಕು ಉಪವೇದಗಳೂ ಕೂಡಿರುವುವೆಂದಾಗಲಿ
ತಿಳಿಯಬೇಕು. ಮನೋವೃತ್ತಿಯೆಂಬ ಚಿತ್ತವನ್ನು ಹಿಡಿದಿರುವ ಬುದ್ಧಿಯೆಂಬ ಸಾರಥಿಯು ನಡೆಯಿಸು
ತ್ತಿರುವ ರಥದಲ್ಲಿ ಆತ್ಮನು ಮಹಾರಥಿಕನಾಗಿ ನಿಂತಿರುವನು.

ಗಂಗಾಯಮುನಯೋರೀಷೇ ಚಕ್ರೇ ಪವನದೇವತಾ ।
ಸಾಯಂಪ್ರಾತರ್ಮಯೋ ಚಕ್ರೇ ಛತ್ರಂ ದ್ಯೌರ್ಮಂಡಲಂ ಶುಚಿ ॥ ೯೦ ॥
ತಾರಾವಲೀಮಯಾಃ ಕೀಲಾ ಅಹೇಯಾ ಉಪನಾಯಕಾಃ ।
ಶೃತಯೋ ಮಾರ್ಗದರ್ಶಿನ್ಯಃ ಸ್ಮೃತಯೋ ರಥಗುಪ್ತಯಃ ॥ ೯೧ ॥
ದಕ್ಷಿಣಾ ದೂರ್ಧ್ವಾ ಯತ್ರ ಮಖಾ ಯತ್ರಾಭಿರಕ್ಷಕಾಃ ।
ಆಸನಂ ಪ್ರಣವೋ ಯತ್ರ ಗಾಯತ್ರೀ ಪಾದಪೀಠಭೂಃ ॥ ೯೨ ॥
ಸಾಂಗಾ ವ್ಯಾಹೃತಯೋ ಯತ್ರ ಶುಭಾಃ ಸೋಪಾನವೀಥಿಕಾಃ ।
ಸೂರ್ಯಾಚಂದ್ರಮಸೌ ಯತ್ರ ಸತತಂ ದ್ವಾರರಕ್ಷಕೌ ॥ ೯೩ ॥
ಅಗ್ನಿರ್ಮಕರತುಂಡಶ್ಚ ರಥಭೂಃ ಕೌಮುದೀಮಯೀ ।
ಧ್ವಜದಂಡೋ ಮಹಾಮೇರುಃ ಪತಾಕಾಹಸ್ಕರಪ್ರಭಾ ॥ ೯೪ ॥
ಸ್ವಯಂ ವಾಗ್ದೇವತಾ ಯತ್ರ ಚಂಚಚ್ಚಾಮರಧಾರಿಣೀ ।

ಸ್ಕಂದ ಉವಾಚ :—

ಶೈಲಾದಿನೇತಿ ವಿಜ್ಞಪ್ತೋ ದೇವದೇವ ಉಮಾಪತಿಃ ॥ ೯೫ ॥

---

೯೦. ಗಂಗಾಯಮುನೆಯರೇ ಅದಕ್ಕೆ ಮೂಕಿಮರಗಳಾಗಿರುವರು. ಚಕ್ರಗಳಲ್ಲಿ ವಾಯುವು ಅಧಿಷ್ಠಾನದೇವತೆಯಾಗಿರುವನು. ಸಾಯಂಕಾಲ ಪ್ರಾತಃಕಾಲಗಳೇ ರಥದ ಚಕ್ರಗಳಾಗಿರುವುವು. ನಿರ್ಮಲವಾದ ಆಕಾಶಮಂಡಲವೇ ಛತ್ರವಾಗಿರುವುದು.

೯೧. ನಕ್ಷತ್ರಮಂಡಲಗಳೇ ಕೀಲುಗಳು. ನಾಗಪಾಶಗಳೇ ರಥಬಂಧನಗಳಾಗಿರುವುವು. ವೇದಗಳೇ ಮುಂದೆ ಮಾರ್ಗದರ್ಶಕಗಳಾಗಿ ಹೊರಟಿರುವುವು. ಸ್ಮೃತಿಗಳು ರಥಕ್ಕೆ ಅಂಗರಕ್ಷಕಗಳಾಗಿರುವುವು.

೯೨. ದಕ್ಷಿಣೆಯೇ ಆ ರಥದ ದೃಢವಾದ ನೊಗವು. ಯಜ್ಞಗಳೇ ಪಾರ್ಶ್ವರಕ್ಷಕರು. ಅದರಲ್ಲಿ ಪ್ರಣವಮಯವಾದ ಸುಖಾಸನವೂ ಗಾಯತ್ರೀರೂಪವಾದ ಪಾದಪೀಠವೂ ಕಂಗೊಳಿಸುತ್ತಿರುವುವು.

೯೩. ಶಿಕ್ಷಾದಿ ಷಡಂಗಗಳಿಂದ ಕೂಡಿದ ವ್ಯಾಹೃತಿಗಳೇ ಮಂಗಳಾಲಂಕೃತಗಳಾದ ಸೋಪಾನವೀಥಿಗಳಾಗಿರುವುವು. ಸೂರ್ಯಚಂದ್ರರೇ ಅಲ್ಲಿ ನಿತ್ಯವೂ ದ್ವಾರಪಾಲಕರಾಗಿ ನಿಂತಿರುವರು.

೯೪. ಅಗ್ನಿಯೇ ಮೂಕಿಯ ಮರದ ಮುಂದಿನ ಮಕರಾಲಂಕಾರವಾಗಿರುವನು. ರಥವು ಸಂಚರಿಸುವ ಭೂಮಿಯೆಲ್ಲವೂ ಚಂದ್ರಕಾಂತಮಯವಾಗಿರುವುದು. ಮಹಾಮೇರುಪರ್ವತವೇ ಧ್ವಜದ ದಂಡವೂ ಸೂರ್ಯನ ಮುಂಬೆಳಗೇ ಪತಾಕೆಯೂ ಆಗಿರುವುವು.

೯೫–೯೬. ವಾಗ್ದೇವತೆಯಾದ ಸರಸ್ವತಿಯು ತಾನೇ ಚಾಮರವನ್ನು ಹಾಕಲು ನಿಂತಿರುವಳು. ಸ್ಕಂದನು ಹೇಳುತ್ತಾನೆ:—ಇಂತು ನಂದಿಯು

ಕೃತನೀರಾಜನವಿಧಿರಷ್ಟಭಿರ್ದೇವಮಾತೃಭಿಃ ।
ಪಿನಾಕಪಾಣಿರುತ್ತಸ್ಥೌ ದತ್ತಹಸ್ತೋऽಥ ಶಾರ್ಙ್ಗಿಣಃ ॥ ೯೬ ॥
ನಿನಾದೋ ದಿವ್ಯವಾದ್ಯಾನಾಂ ರೋದಸೀ ಪರ್ಯಪೂರಯತ್ ।
ಗೀತಮಂಗಲಗೀರ್ಭಿಶ್ಚ ಚಾರಣೈರನುವರ್ಧಿತಃ ॥ ೯೭ ॥
ತೇನ ದಿವ್ಯನಿನಾದೇನ ಬಧಿರೀಕೃತದಿಙ್ಮುಖಾಃ ।
ಆಹೂತಾ ಇವ ಆಜಗ್ಮುರ್ವಿಷ್ಟಗ್ಭುವನವಾಸಿನಃ ॥ ೯೮ ॥
ದೇವಾಃ ಕೋಟ್ಯಸ್ತ್ರಯಸ್ತ್ರಿಂಶದ್ಗಣಾಃ ಕೋಟ್ಯಯುತದ್ವಯಂ ।
ನವಕೋಟ್ಯಸ್ತು ಚಾಮುಂಡಾ ಭೈರವ್ಯೋಂ ಕೋಟಿಸಂಮಿತಾಃ ॥ ೯೯ ॥
ಷಡಾನನಾಃ ಕುಮಾರಾಶ್ಚ ಮಯೂರವರವಾಹನಾಃ ।
ಮಮಾನುಗಾಃ ಸಮಾಯಾತಾಃ ಕೋಟಯೋऽಷ್ಟೌ ಮಹಾಬಲಾ॥೧೦೦॥
ಆಯುಯುಃ ಕೋಟಯಃ ಸಪ್ತ ಸ್ಫುರತ್ಪರಶುಪಾಣಯಃ ।
ಪಿಚಂಡಿಲಾ ಮಹಾವೇಗಾ ವಿಘ್ನವಿಘ್ನಾ ಗಜಾನನಾಃ ॥ ೧೦೧ ॥

---

ವಿಜ್ಞಾಪಿಸುತ್ತಿರಲು ದೇವರ ದೇವನಾದ ಪಾರ್ವತೀರಮಣನು ಅಷ್ಟಮಾತೃಕೆಯರು ಮಾಡಿದ ಮಂಗಳನೀರಾಜನಗಳನ್ನು ಸ್ವೀಕರಿಸಿ ಪಿನಾಕವನ್ನು ಕೈಯಲ್ಲಿ ತೆಗೆದುಕೊಂಡು ನಾರಾಯಣನು ಹಸ್ತಾವಲಂಬನವನ್ನು ಕೊಡುತ್ತಿರಲು ಆಸನದಿಂದ ಮೇಲಕ್ಕೆದ್ದನು.

೯೭. ಆಗ ದೇವತೆಗಳ ವಾದ್ಯಗಳ ಶಬ್ದವು ದಿಗಂತರಾಳವನ್ನು ತುಂಬಿ ಪ್ರತಿಧ್ವನಿಸುತ್ತಿದ್ದಿತು. ಚಾರಣರು ಗೀತಗಾಯನಗಳಿಂದಲೂ ಮಂಗಳಾಶೀರ್ವಾದಗಳಿಂದಲೂ ಉತ್ತರೋತ್ತರಾಭಿವೃದ್ಧಿಯನ್ನು ಕೋರುತ್ತಿದ್ದರು.

೯೮. ಆ ದೇವವಾದ್ಯಗಳ ಶಬ್ದಗಳಿಂದ ಸಕಲ ದಿಙ್ಮಂಡಲಗಳೂ ತುಂಬಿ ಆಹ್ವಾನವನ್ನು ಮಾಡುತ್ತಿರಲು ಹದಿನಾಲ್ಕು ಲೋಕಗಳ ನಿವಾಸಿಗಳೂ ಬಂದು ಕಾಶೀಕ್ಷೇತ್ರದಲ್ಲಿ ಸೇರಿದರು.

೯೯. ಮೂವತ್ತುಮೂರುಕೋಟಿ ಸಂಖ್ಯೆಯ ದೇವತೆಗಳೂ ಇಪ್ಪತ್ತು ಸಾವಿರ ಕೋಟಿಗಳ ಮಹೇಶ್ವರ ಗಣಗಳೂ, ಒಂಬತ್ತುಕೋಟಿ ಚಾಮುಂಡಿಯರೂ, ಒಂದು ಕೋಟಿಯ ಸಂಖ್ಯೆಯ ಭೈರವಿಯರೂ ಅಲ್ಲಿ ನೆರೆದರು.

೧೦೦. ಆರು ಮುಖಗಳುಳ್ಳವರೂ, ಬಾಲ್ಯಾವಸ್ಥೆಯಲ್ಲಿರುವವರೂ, ನವಿಲುಗಳನ್ನೇ ವಾಹನಗಳನ್ನಾಗಿ ಮಾಡಿಕೊಂಡವರೂ, ಮಹಾಬಲಶಾಲಿಗಳೂ ಆದ ನನ್ನ (ಸ್ಕಂದನ) ಅನುಚರರೂ ಎಂಟು ಕೋಟಿ ಜನರೂ ಪ್ರಾಪ್ತರಾದರು.

೧೦೧. ಪರಶುಗಳನ್ನು ಹಸ್ತಗಳಲ್ಲಿ ಹಿಡಿದು ಡೊಳ್ಳುಹೊಟ್ಟೆಯುಳ್ಳವರಾಗಿ ವಿಘ್ನಗಳನ್ನು ನಾಶಗೊಳಿಸುವ ಏಳುಕೋಟಿ ವಿನಾಯಕರು ಮಹಾವೇಗದಿಂದ ಬಂದು ಮಹೇಶ್ವರನನ್ನು ಸುತ್ತುವರಿದರು.

ಷಡಶೀತಿ ಸಹಸ್ರಾಣಿ ಮುನಯೋ ಬ್ರಹ್ಮವಾದಿನಃ ।
ತಾವಂತೋಽಪಿ ಸಮಾಜಗ್ಮುಸ್ತತ್ರಾನ್ಯೇ ಗೃಹಮೇಧಿನಃ ॥ ೧೦೨ ॥
ನಾಗಾನಾಂ ಕೋಟಯಸ್ತಿಸ್ರಃ ಪಾತಾಲತಲವಾಸಿನಾಂ ।
ದಾನವಾನಾಂ ಚ ದೈತ್ಯಾನಾಂ ದ್ವೇ ದ್ವೇ ಕೋಟೀ ಶಿವಾತ್ಮನಾಂ ॥ ೧೦೩ ॥
ಗಂಧರ್ವಾ ನಿಯುತಾನ್ಯಷ್ಟೌ ಕೋಟ್ಯರ್ಧಂ ಯಕ್ಷರಾಕ್ಷಸಾಂ ।
ವಿದ್ಯಾಧರಾಣಾಮಯುತಂ ನಿಯುತದ್ವಯಸಂಯುತಂ ॥ ೧೦೪ ॥
ತಥಾ ಷಷ್ಟಿಸಹಸ್ರಾಣಿ ದಿವ್ಯಾಶ್ಚಾಪ್ಸರಸಃ ಶುಭಾಃ ।
ಗೋಮಾತರೋಽಷ್ಟೌ ಲಕ್ಷಾಣಿ ಸುಪರ್ಣಾನ್ಯಯುತಾನಿ ಷಟ್ ॥ ೧೦೫ ॥
ಸಾಗರಾಃ ಸಪ್ತಸಂಪ್ರಾಪ್ತಾ ನಾನಾರತ್ನೋಪದಪ್ರದಾಃ ।
ಸರಿತಾಂ ಚ ಸಹಸ್ರಾಣಿ ತ್ರೀಣಿ ಪಂಚಾಯುತಾನಿ ಚ ॥ ೧೦೬ ॥
ಗಿರಯೋಽಷ್ಟೌ ಸಹಸ್ರಾಣಿ ವನಸ್ಪತಿಶತತ್ರಯಂ ।
ಆಜಗ್ಮುರ್ದಿಗ್ಗಜಾ ಅಷ್ಟೌ ಯತ್ರ ದೇವಃ ಪಿನಾಕಧೃಕ್ ॥ ೧೦೭ ॥
ಏತೈಃ ಸಮೇತಃ ಸಂತುಷ್ಟಃ ಪರಿಷ್ಟುತ ಇತಸ್ತತಃ ।
ಶ್ರೀಕಂಠೋ ರಥಮಾರುಹ್ಯ ಕಾಶೀಂ ಪ್ರಾವಿಶದುತ್ತಮಾಂ ॥ ೧೦೮ ॥

---

೧೦೨. ಮತ್ತು ಬ್ರಹ್ಮವಿಚಾರದಲ್ಲಿಯೇ ನಿರತರಾಗಿದ್ದ ಎಂಬತ್ತಾರು ಸಾವಿರ ಮಹಾಮುನಿಗಳೂ, ಅಷ್ಟೇ ಸಂಖ್ಯೆಯ ಇತರ ಗೃಹಸ್ಥಾಶ್ರಮಿಗಳೂ ಬಂದು ಸೇರಿದರು.

೧೦೩. ಪಾತಾಲಾದಿ ಲೋಕಗಳಲ್ಲಿ ವಾಸಮಾಡುವ ನಾಗರಲ್ಲಿ ಮೂರು ಕೋಟಿಗಳೂ, ಶಿವನನ್ನು ಹೃದಯದಲ್ಲಿ ಧ್ಯಾನಿಸುತ್ತಿರುವ ದಾನವದೈತ್ಯರೂ ಎರಡೆರಡು ಕೋಟಿ ಸಂಖ್ಯೆಯುಳ್ಳವರಾಗಿ ನೆರೆದರು.

೧೦೪–೧೦೫. ಗಂಧರ್ವರು ಎಂಟು ಲಕ್ಷಗಳು, ಯಕ್ಷರೂ ರಾಕ್ಷಸರೂ ಅರ್ಧಕೋಟಿಗಳು, ವಿಧ್ಯಾಧರರು ಎರಡುಲಕ್ಷದ ಹತ್ತುಸಾವಿರಗಳು, ಸರ್ವಾಂಗಸುಂದರಿಯರಾದ ದೇವಲೋಕದ ಅಪ್ಸರಸೆಯರು ಅರುವತ್ತು ಸಾವಿರಗಳು, ಎಂಟುಲಕ್ಷ ಗೋಮಾತೆಯರು, ಮತ್ತು ಆರುಲಕ್ಷ ಸಂಖ್ಯೆಯ ಗರುಡರೂ ಅಲ್ಲಿಗೆ ಆಗಮಿಸಿದರು.

೧೦೬–೧೦೭. ನಾನಾರತ್ನಗಳ ಉಪಾಯನಗಳನ್ನು ತೆಗೆದುಕೊಂಡು ಸಪ್ತಸಮುದ್ರಗಳೂ ಬಂದುವು. ಐವತ್ತುಮೂರು ಸಾವಿರ ನದಿಗಳ ಅಭಿಮಾನಿದೇವತೆಯರೂ ಪ್ರಾಪ್ತರಾದರು. ಎಂಟುಸಾವಿರ ಪರ್ವತರಾಜರೂ, ಮುನ್ನೂರು ವನಸ್ಪತಿಗಳೂ, ಅಷ್ಟದಿಗ್ಗಜಗಳೂ, ಎಲ್ಲರೂ ಮಹೇಶ್ವರನು ಪ್ರಯಾಣಸನ್ನದ್ಧನಾಗಿದ್ದಲ್ಲಿಗೆ ಬಂದು ಸೇರಿದರು.

೧೦೮. ಇವರಿಂದ ಪರಿಪಾಲಿತನಾಗಿ ಅಡಿಗಡಿಗೂ ಅವರ ಸ್ತೋತ್ರಗಳನ್ನು

ಸ ಗಿರೀಂದ್ರಸುತಸ್ತ್ರ್ಯಕ್ಷೋ ಮುದಾಂ ಧಾಮ ಮುದಾಂ ಖನೀ ।
ಕಾಶೀಂ ಪ್ರೈಕ್ಷಿಷ್ಟ ಸಂಹೃಷ್ಟಸ್ತ್ರಿವಿಷ್ಟಪಸಮುತ್ಕಟಾಂ ॥ ೧೦೯ ॥

ಸ್ಕಂದ ಉವಾಚ :—

ಶ್ರುತ್ವಾಖ್ಯಾನಮಿದಂ ಪುಣ್ಯಂ ಕೋಟಿಜನ್ಮಾಘನಾಶನಂ ।
ಪಠಿತ್ವಾ ಪಾಠಯಿತ್ವಾ ಚ ಶಿವಸಾಯುಜ್ಯಮಾಪ್ನುಯಾತ್ ॥ ೧೧೦ ॥
ಶ್ರಾದ್ಧಕಾಲೇ ವಿಶೇಷೇಣ ಪಠನೀಯಂ ಪ್ರಯತ್ನತಃ ।
ಅಕ್ಷಯಂ ತದ್ಭವೇಚ್ಛ್ರಾದ್ಧಂ ಪಿತೃತುಷ್ಟಿಕರಂ ಪರಂ ॥ ೧೧೧ ॥
ವೃಷಭಧ್ವಜಮಾಹಾತ್ಮ್ಯಂ ಪಠಿತ್ವಾ ಶಿವಸನ್ನಿಧೌ ।
ಪ್ರತ್ಯಹಂ ವರ್ಷಮಾತ್ರಂ ತು ಹ್ಯಪುತ್ರಃ ಪುತ್ರವಾನ್ಭವೇತ್ ॥ ೧೧೨ ॥
ವಿಶ್ವೇಶಿತುಃ ಸಂಪ್ರವೇಶೋ ಯಃ ಕಾಶ್ಯಾಂ ಸಮುದಾಹೃತಃ ।
ಪರಮಾನಂದಕಂದಸ್ಯ ಬೀಜಮೇತತ್ಸುನಿಶ್ಚಿತಂ ॥ ೧೧೩ ॥
ಪಠಿತ್ವೈತನ್ಮಹಾಖ್ಯಾನಂ ಪ್ರವಿಶೇದ್ಯೋ ನವಂ ಗೃಹಂ ।
ಸ ಸರ್ವಸೌಖ್ಯನಿಲಯೋ ಭವೇದೇವ ನ ಸಂಶಯಃ ॥ ೧೧೪ ॥

---

ಕೇಳಿ ಸಂತೋಷಗೊಳ್ಳುತ್ತ ಮಹಾದೇವನು ಆ ಉತ್ತಮ ರಥವನ್ನೇರಿ ಕ್ಷೇತ್ರಗಳಲ್ಲಿ ಸರ್ವೋತ್ತಮವೆನಿಸಿದ ಕಾಶಿಯನ್ನು ಪ್ರವೇಶಮಾಡಿದನು.

೧೦೯. ಪರಮಾನಂದನಿಧಿಯೂ, ಸೌಖ್ಯದ ಗಣಿಯೂ ಎನಿಸಿದ ತ್ರಿಲೋಚನನು ಗಿರಿರಾಜಪುತ್ರಿಯೊಡಗೂಡಿ ದೇವಲೋಕಕ್ಕೂ ಮಿಗಿಲೆನಿಸಿದ ಕಾಶೀಕ್ಷೇತ್ರವನ್ನು ಸಂತೋಷದಿಂದಲೂ ಕುತೂಹಲದಿಂದಲೂ ಕಂಡನು.

೧೧೦. ಸ್ಕಂದನು ಹೇಳುತ್ತಾನೆ:—ಈ ಶಿವನ ಪುರಪ್ರವೇಶಾಖ್ಯಾನವನ್ನು ಕೇಳಲು ಕೋಟಿಜನ್ಮಗಳಲ್ಲಿ ಆರ್ಜಿಸಿದ ಪಾಪಗಳೂ ನಾಶವಾಗುವುವು. ಇದನ್ನು ಪಠನಮಾಡಿದರಾಗಲಿ ಪೌರಾಣಿಕರಿಂದ ಪಾಠಮಾಡಿಸಿದರಾಗಲಿ ಮನುಷ್ಯನು ಶಿವನ ಸಾಯುಜ್ಯಪದವಿಯನ್ನು ಹೊಂದುವನು.

೧೧೧. ಈ ಚರಿತ್ರೆಯು ವಿಶೇಷವಾಗಿ ಶ್ರಾದ್ಧಕಾಲಗಳಲ್ಲಿ ಪ್ರಯತ್ನದಿಂದ ಅನುವಾದ ಮಾಡಲ್ಪಡಬೇಕು. ಆ ಶ್ರಾದ್ಧಕರ್ಮವು ಅಕ್ಷಯಫಲದಾಯಕವೂ ಪಿತೃದೇವತೆಗಳಿಗೆ ಅತ್ಯಂತಾನಂದಕಾರಕವೂ ಆಗುವುದು.

೧೧೨. ವೃಷಭಧ್ವಜತೀರ್ಥದ ಮಹಾತ್ಮ್ಯವನ್ನು ಒಂದು ವರ್ಷದವರೆಗೂ ಪ್ರತಿನಿತ್ಯವೂ ಮಹಾದೇವನ ಸನ್ನಿಧಿಯಲ್ಲಿ ಪಾರಾಯಣಮಾಡಲು ಸಂತಾನಹೀನನಾದವನು ಸತ್ಪುತ್ರನನ್ನು ಪಡೆಯುವನು.

೧೧೩. ವಿಶ್ವೇಶ್ವರನು ವಾರಾಣಸೀಕ್ಷೇತ್ರವನ್ನು ಪ್ರವೇಶಮಾಡಿದ ಮಹೋತ್ಸವದ ಈ ಚರಿತ್ರೆಯು ಅಪರಿಮಿತವಾದ ಶಾಶ್ವತಾನಂದದ ವೃಕ್ಷಕ್ಕೆ ಬೀಜಭೂತವಾಗಿರುವುದೆಂಬುದು ನಿಶ್ಚಯವಾದ ವಿಷಯವು.

೧೧೪. ಈ ಉತ್ತಮ ಚರಿತ್ರೆಯನ್ನು ಓದುತ್ತ ಯಾವನು ನೂತನಗೃಹ

ತ್ರೈಲೋಕ್ಯಾನಂದಜನಕಮೇತದಾಖ್ಯಾನಮುತ್ತಮಂ ।
ಅಸ್ಯ ಶ್ರವಣಮಾತ್ರೇಣ ವಿಶ್ವೇಶಃ ಸಂಪ್ರಸೀದತಿ ॥ ೧೧೫ ॥
ಅಲಭ್ಯಲಾಭೋ ದೇವಸ್ಯ ಜಾತೋಽತ್ರ ಹಿ ಯತ್ರಃ ಪರಃ ।
ತತಃ ಕಾಶೀಪ್ರವೇಶಾಖ್ಯಂ ಜಪ್ಯಮಾಖ್ಯಾನಮುತ್ತಮಂ ॥ ೧೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವೃಷಭಧ್ವಜಪ್ರಾದುರ್ಭಾವವರ್ಣನಂ"
ನಾಮ ದ್ವಿಷಷ್ಟಿತಮೋಽಧ್ಯಾಯಃ

---

ವನ್ನು ಪ್ರವೇಶಿಸುವನೊ, ಅವನ ಮನೆಯು ಸಕಲ ಸೌಖ್ಯಗಳಿಗೆ ನೆಲೆಮನೆಯಾಗುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೧೧೫. ಶ್ರೇಷ್ಠವಾದ ಈ ಆಖ್ಯಾನವು ಮೂರುಲೋಕಗಳಿಗೂ ಆನಂದವನ್ನುಂಟುಮಾಡುತ್ತಿರುವುದು. ಇದನ್ನು ಭಕ್ತಿಯಿಂದ ಕೇಳಿದ ಮಾತ್ರದಿಂದಲೇ ಆ ಭಕ್ತನಲ್ಲಿ ವಿಶ್ವೇಶ್ವರನು ಸುಪ್ರಸನ್ನನಾಗುವನು.

೧೧೬. ಈ ಅಧ್ಯಾಯದಲ್ಲಿ ಸರ್ವೋತ್ತಮವೂ ಅತ್ಯಂತ ದುರ್ಲಭವೂ ಆದ ಮಹಾದೇವನ ಪ್ರಾಪ್ತಿಯು ಹೇಳಲ್ಪಟ್ಟಿರುವುದು. ಆದುದರಿಂದ ಕಾಶೀಪ್ರವೇಶವೆಂಬ ಹೆಸರುಳ್ಳ ಈ ಆಖ್ಯಾನವನ್ನು ಯಾವಾಗಲೂ ಜಪಿಸುತ್ತಿರಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ವೃಷಭಧ್ವಜಪ್ರಾದುರ್ಭಾವವರ್ಣನ"ವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಷಷ್ಟಿತಮೋಽಧ್ಯಾಯಃ

### ಜೈಗೀಷವ್ಯೇಶಾಖ್ಯಾನವರ್ಣನಂ

ಅಗಸ್ತ್ಯ ಉವಾಚ :—

ದೃಷ್ಟ್ವಾ ಕಾಶೀಂ ಮೃಗಾನಂದಾಂ ತಾರಕಾರೇ ಪುರಾರಿಣಾ ।
ಕಿಮಕಾರಿ ಸಮಾಚಕ್ಷ್ವ ಪ್ರಾಪ್ತಾಂ ಬಹುಮನೋರಥೈಃ ॥ ೧ ॥

ಸ್ಕಂದ ಉವಾಚ :—

ಪತಿವ್ರತಾಪತೇಽಗಸ್ತ್ಯ ಶೃಣು ವಕ್ಷ್ಯಾಮ್ಯಶೇಷತಃ ।
ಮೃಗಾಂಕಲಕ್ಷ್ಮಣೋತ್ಕಂಠಂ ಕಾಶೀ ನೇತ್ರಾತಿಥೀಕೃತಾ ॥ ೨ ॥
ಅಥ ಸರ್ವಜ್ಞನಾಥೇನ ಭಕ್ತವತ್ಸಲಚೇತಸಾ ।
ಜೈಗೀಷವ್ಯೋ ಮುನಿಶ್ರೇಷ್ಠೋ ಗುಹಾಂತಸ್ಥೋ ನಿರೀಕ್ಷಿತಃ ॥ ೩ ॥
ಯಮನೇಹಸಮಾರಭ್ಯ ಮಂದರಾದ್ರಿಂ ವಿನಿರ್ಯಯೌ ।
ಅದ್ರೀಂದ್ರಸುತಯಾ ಸಾರ್ಧಂ ರುದ್ರೇಣೋಕ್ಷೇಂದ್ರಗಾಮಿನಾ ॥ ೪ ॥
ತಂ ವಾಸರಂ ಪುರಸ್ಕೃತ್ಯ ಜಗ್ರಾಹ ನಿಯಮಂ ದೃಢಂ ।
ಜೈಗೀಷವ್ಯೋ ಮಹಾಮೇಧಾಃ ಕುಂಭಯೋನೇ ಮಹಾಕೃತೀ ॥ ೫ ॥

---

## ಕನ್ನಡದ ಅನುವಾದ

### ಜೈಗೀಷವ್ಯೇಶಾಖ್ಯಾನವರ್ಣನ

೧. ಅಗಸ್ತ್ಯನು ಕೇಳುತ್ತಾನೆ:—ತಾರಕಸಂಹಾರಕನಾದ ಷಣ್ಮುಖನೆ! ಬಹುಕಾಲದ ಅಪೇಕ್ಷೆಗಳ ಫಲವಾಗಿ ನೇತ್ರಾನಂದಕರವಾದ ಕಾಶೀಕ್ಷೇತ್ರವನ್ನು ನೋಡಿದ ಪರಮೇಶ್ವರನು ಏನನ್ನು ಮಾಡಿದನೆಂಬುದನ್ನು ನನಗೆ ವಿಸ್ತರಿಸು.

೨. ಸ್ಕಂದನು ಹೇಳುತ್ತಾನೆ:—ಲೋಪಾಮುದ್ರೆಯ ಪತಿಯಾದ ಅಗಸ್ತ್ಯನೆ! ಕೇಳು. ಜಿಂಕೆಯನ್ನು ಕೈಯಲ್ಲಿ ಹಿಡಿದಿರುವ ಆ ಪರಮೇಶ್ವರನು ಅತ್ಯಂತ ಕುತೂಹಲದಿಂದ ಕಾಶೀಕ್ಷೇತ್ರವನ್ನು ತನ್ನ ದೃಷ್ಟಿಗೆ ವಿಷಯವನ್ನಾಗಿ ಮಾಡಿಕೊಂಡನು.

೩. ಬಳಿಕ ಸರ್ವಜ್ಞರಲ್ಲಿ ಶ್ರೇಷ್ಠನೂ, ಭಕ್ತವಾತ್ಸಲ್ಯದಿಂದ ತುಂಬಿದ ಅಂತಃಕರಣವುಳ್ಳವನೂ ಆದ ಮಹಾದೇವನು ಗುಹೆಯೊಳಗಿದ್ದ ಮುನಿಶ್ರೇಷ್ಠನಾದ ಜೈಗೀಷವ್ಯನ ವೃತ್ತಾಂತವನ್ನು ತಿಳಿದುಕೊಂಡನು.

೪–೫. ಯಾವ ದಿನದಲ್ಲಿ ವೃಷಭಧ್ವಜನಾದ ಶಿವನು ಪರ್ವತರಾಜಕನ್ಯೆಯೊಡನೆ ಮಂದರಾಚಲವನ್ನು ಕುರಿತು ಪ್ರಯಾಣಮಾಡಿದನೊ, ಆ ದಿನ ಮೊದಲುಗೊಂಡು ಬುದ್ಧಿಶಾಲಿಯೂ ಕರ್ತವ್ಯಪರನೂ ಆದ ಆ ಜೈಗೀಷವ್ಯನು ದೃಢವಾದ ನಿಯಮವೊಂದನ್ನು ಕೈಗೊಂಡನು.

ನಿಷಮೇಕ್ಷಣಪಾದಾಬ್ಜಂ ಸಮೀಕ್ಷಿಷ್ಯೇ ಯದಾ ಪುನಃ ।
ತದಾಂಬುವಿಪ್ರುಷಮಪಿ ಭಕ್ಷಯಿಷ್ಯಾಮಿ ಚೇತ್ಯಹೋ ॥ ೬ ॥
ಕುತಶ್ಚಿದ್ಧಾರಣಾಯೋಗಾದಥ ಶಂಭ್ವನುಗ್ರಹಾತ್ ।
ಅನಶ್ನನ್ನಪಿಬನ್ಯೋಗೀ ಜೈಗೀಷವ್ಯಃ ಸ್ಥಿತೋ ಮುನೇ ॥ ೭ ॥
ತಂ ಶಂಭುರೇವ ಜಾನಾತಿ ನಾನ್ಯೋ ಜಾನಾತಿ ಕಶ್ಚನ ।
ಅತ ಏವ ತತಃ ಪ್ರಾಪ್ತಃ ಪ್ರಥಮಂ ಪ್ರಮಥಾಧಿಪಃ ॥ ೮ ॥
ಜ್ಯೇಷ್ಠಶುಕ್ಲಚತುರ್ದಶ್ಯಾಂ ಸೋಮವಾರಾನುರಾಧಯೋಃ ।
ತತ್ಪರ್ವಣಿ ಮಹಾಯಾತ್ರಾ ಕರ್ತವ್ಯಾ ತತ್ರ ಮಾನವೈಃ ॥ ೯ ॥
ಜ್ಯೇಷ್ಠಸ್ಥಾನಂ ತತಃ ಕಾಶ್ಯಾಂ ತದಾಭೂದಪಿ ಪುಣ್ಯದಂ ।
ತತ್ರ ಲಿಂಗಂ ಸಮಭವತ್ಸ್ವಯಂ ಜ್ಯೇಷ್ಠೇಶ್ವರಾಭಿದಂ ॥ ೧೦ ॥
ತಲ್ಲಿಂಗದರ್ಶನಾತ್ಪುಂಸಾಂ ಪಾಪಂ ಜನ್ಮಶತಾರ್ಜಿತಂ ।
ತಮೋಽರ್ಕೋದಯಮಾಪ್ಯೇವ ತಕ್ಷಣಾದೇವ ನಶ್ಯತಿ ॥ ೧೧ ॥

---

೬. "ನಾನು ಪುನಃ ತ್ರಿಲೋಚನನ ಪಾದಕಮಲಗಳನ್ನು ಯಾವಾಗ ನೋಡುವೆನೊ, ಆಗಲೇ ನೀರಿನ ಬಿಂದುಮಾತ್ರವನ್ನು ಆಹಾರವನ್ನಾಗಿ ತೆಗೆದು ಕೊಳ್ಳುವೆನು."

೭–೮. ಅಗಸ್ತ್ಯಮುನಿವರ್ಯನೆ! ಯಾವುದಾದರೊಂದು ಧಾರಣಾಶಕ್ತಿಯಿಂದಲೊ, ಅಥವಾ ವಿಶ್ವೇಶ್ವರನ ಅನುಗ್ರಹದಿಂದಲೊ, ಆ ಜೈಗೀಷವ್ಯನು ಆಹಾರವನ್ನಾಗಲಿ ಜಲವನ್ನಾಗಲಿ ಸ್ವೀಕರಿಸದೆಯೇ ಇಂದಿನವರೆವಿಗೂ ಕಾಲವನ್ನು ಕಳೆದಿದ್ದನು. ಆತನನ್ನು ಪರಮೇಶ್ವರನೊಬ್ಬನು ಬಲ್ಲನೇ ಹೊರತು ಮತ್ತೆ ಯಾರೂ ಅರಿಯರು. ಆದುದರಿಂದಲೇ ಮೊದಲು ಶಿವನು ಕಾಶಿಯ ಪ್ರವೇಶವನ್ನು ಮಾಡಿ ಆತನಿದ್ದಲ್ಲಿಗೆ ಬಿಜಯಮಾಡಿಸಿದನು.

೯. ಆ ದಿವಸವು ಜ್ಯೇಷ್ಠಮಾಸದ ಶುಕ್ಲ ಚತುರ್ದಶಿಯಿಂದಲೂ, ಅನೂರಾಧಾನಕ್ಷತ್ರದಿಂದಲೂ ಕೂಡಿದ ಸೋಮವಾರವಾಗಿದ್ದಿತು. ಆದಕಾರಣದಿಂದ ಇಂದಿಗೂ ಆ ಪರ್ವಕಾಲವೊದಗಲು ಮಾನವರು ಅಲ್ಲಿ ಮಹೋತ್ಸವವನ್ನು ನೆರವೇರಿಸಬೇಕು.

೧೦. ಅಂದು ಮೊದಲು ಆ ಪ್ರದೇಶವು ಕಾಶಿಯಲ್ಲಿ ಅತ್ಯಂತ ಪುಣ್ಯಪ್ರದವಾದ ಜ್ಯೇಷ್ಠಸ್ಥಾನವೆಂದು ಹೆಸರಾಯಿತು. ಶಿವನೂ ಅಲ್ಲಿ ತಾನೇ ಜ್ಯೇಷ್ಠೇಶ್ವರನೆಂಬ ಹೆಸರಿನಿಂದ ಲಿಂಗವಾಗಿ ಪ್ರತಿಷ್ಠಿತನಾದನು.

೧೧. ಆ ಲಿಂಗದ ದರ್ಶನದಿಂದಲೇ ಜನರಿಗೆ ನೂರಾರು ಜನ್ಮಗಳಲ್ಲಿ ಸಂಪಾದಿಸಿದ ಪಾತಕಗಳೂ ಸಹ ಸೂರ್ಯನನ್ನು ಕಂಡ ಕತ್ತಲೆಯಂತೆ ನಿಮಿಷಮಾತ್ರದಲ್ಲಿ ನಷ್ಟವಾಗುವುದು.

ಜ್ಯೇಷ್ಠವಾಪ್ಯಾಂ ನರಃ ಸ್ನಾತ್ವಾ ತರ್ಪಯಿತ್ವಾ ಪಿತಾಮಹಾನ್ ।
ಜ್ಯೇಷ್ಠೇಶ್ವರಂ ಸಮಾಲೋಕ್ಯ ನ ಭೂಯೋ ಜಾಯತೇ ಭುವಿ ॥ ೧೨ ॥
ಆದಿರಾಸೀತ್ಸ್ವಯಂ ತತ್ರ ಜ್ಯೇಷ್ಠೇಶ್ವರಸಮೀಪತಃ ।
ಸರ್ವಸಿದ್ಧಿಪ್ರದಾ ಗೌರೀ ಜ್ಯೇಷ್ಠಾ ಶ್ರೇಷ್ಠಾ ಸಮಂತತಃ ॥ ೧೩ ॥
ಜ್ಯೇಷ್ಠೇ ಮಾಸಿ ಸಿತಾಷ್ಟಮ್ಯಾಂ ತತ್ರ ಕಾರ್ಯೋ ಮಹೋತ್ಸವಃ ।
ರಾತ್ರೌ ಜಾಗರಣಂ ಕಾರ್ಯಂ ಸರ್ವಸಂಪತ್ಸಮೃದ್ಧಯೇ ॥ ೧೪ ॥
ಜ್ಯೇಷ್ಠಾಂ ಗೌರೀಂ ನಮಸ್ಕೃತ್ಯ ಜ್ಯೇಷ್ಠವಾಪೀಪರಿಪ್ಲುತಾಃ ।
ಸೌಭಾಗ್ಯಭಾಜನಂ ಭೂಯಾದ್ಯೋಷಾ ಸೌಭಾಗ್ಯಭಾಗಪಿ ॥ ೧೫ ॥
ನಿವಾಸಂ ಕೃತವಾನ್ ಶಂಭುಸ್ತಸ್ಮಿನ್ಸ್ಥಾನೇ ಯತಃ ಸ್ವಯಂ ।
ನಿವಾಸೇಶ ಇತಿ ಖ್ಯಾತಂ ಲಿಂಗಂ ತತ್ರ ಪರಂ ತತಃ ॥ ೧೬ ॥
ನಿವಾಸೇಶ್ವರಲಿಂಗಸ್ಯ ಸೇವನಾತ್ಸರ್ವಸಂಪದಃ ।
ನಿವಸಂತಿ ಗೃಹೇ ನಿತ್ಯಂ ನಿತ್ಯಂ ಪ್ರತಿಪದಂ ಪುನಃ ॥ ೧೭ ॥

---

೧೨. ಜ್ಯೇಷ್ಠತೀರ್ಥದಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ತರ್ಪಣಗಳನ್ನಿತ್ತು ಜ್ಯೇಷ್ಠೇಶ್ವರನನ್ನು ನೋಡಿದ ಮನುಷ್ಯನು ಪುನಃ ಭೂಲೋಕದಲ್ಲಿ ಜನಿಸುವುದಿಲ್ಲ.

೧೩. ಆ ಜ್ಯೇಷ್ಠೇಶ್ವರನ ಸಮೀಪದಲ್ಲಿಯೇ ಪಾರ್ವತಿಯೂ ಸಹ ಜ್ಯೇಷ್ಠಾದೇವಿಯೆಂಬ ಹೆಸರಿನಿಂದಲೇ ಸರ್ವಾರ್ಥಸಿದ್ಧಿದಾಯಕಿಯೂ ಸರ್ವಶ್ರೇಷ್ಠಳೂ ಆಗಿ ನೆಲಸಿದಳು.

೧೪. ಜ್ಯೇಷ್ಠಮಾಸದ ಶುಕ್ಲಾಷ್ಟಮಿಯ ದಿನದಲ್ಲಿ ಆಕೆಗೆ ಮಹೋತ್ಸವವನ್ನು ನಡೆಸಬೇಕು. ಸಕಲೈಶ್ವರ್ಯಗಳನ್ನು ಅಪೇಕ್ಷಿಸುವವನು ಅಂದಿನ ರಾತ್ರೆಯಲ್ಲಿ ಜಾಗರಣೆಯನ್ನು ಮಾಡಬೇಕು.

೧೫. ಜ್ಯೇಷ್ಠಾದೇವಿಯಾದ ಗೌರಿಗೆ ನಮಸ್ಕರಿಸಿ ಜ್ಯೇಷ್ಠತೀರ್ಥದಲ್ಲಿ ಸ್ನಾನವನ್ನು ಮಾಡಿದ ನಾರೀಮಣಿಯು ಸಕಲ ಸೌಭಾಗ್ಯವಂತಳೂ, ದೀರ್ಘ ಸುಮಂಗಲಿಯೂ ಆಗಿರುವಳು.

೧೬. ಆ ಸ್ಥಳದಲ್ಲಿ ಈಶ್ವರನು ತಾನೇ ನಿವಾಸವನ್ನು ಮಾಡಿಕೊಂಡ ಕಾರಣದಿಂದ ಅಲ್ಲಿರುವ ಉತ್ತಮವಾದ ಲಿಂಗವು ನಿವಾಸೇಶ್ವರನೆಂದೇ ಪ್ರಖ್ಯಾತವಾಯಿತು.

೧೭. ಆ ನಿವಾಸೇಶ್ವರಲಿಂಗದ ಸೇವೆಯನ್ನು ಮಾಡುವುದರಿಂದ ಸಕಲೈಶ್ವರ್ಯಗಳೂ ಭಕ್ತನ ಮನೆಯಲ್ಲಿ ಶಾಶ್ವತವಾಗಿ ನೆಲಸುವುವು ಮತ್ತು ದೇಹಪಾತಾನಂತರದಲ್ಲಿ ಶಾಶ್ವತಪದವಿಯೂ ಲಭಿಸುವುದು.

ಕೃತ್ವಾ ಶ್ರಾದ್ಧಂ ವಿಧಾನೇನ ಜ್ಯೇಷ್ಠಸ್ಥಾನೇ ನರೋತ್ತಮಃ ।
ಜ್ಯೇಷ್ಠಾಂ ತೃಪ್ತಿಂ ದದಾತ್ಯೇವ ಪಿತೃಭ್ಯೋ ಮಧುಸರ್ಪಿಷಾ ॥ ೧೮ ॥
ಜ್ಯೇಷ್ಠತೀರ್ಥೇ ನರಃ ಕಾಶ್ಯಾಂ ದತ್ವಾ ದಾನಾನಿ ಶಕ್ತಿತಃ ।
ಜ್ಯೇಷ್ಠಾನ್ಸ್ವರ್ಗಾನವಾಪ್ನೋತಿ ನರೋ ಮೋಕ್ಷಂ ಚ ಗಚ್ಛತಿ ॥ ೧೯ ॥
ಜ್ಯೇಷ್ಠೇಶ್ವರೋಽರ್ಚ್ಯಃ ಪ್ರಥಮಂ ಕಾಶ್ಯಾಂ ಶ್ರೇಯೋರ್ಥಿಭಿರ್ನರೈಃ ।
ಜ್ಯೇಷ್ಠಾ ಗೌರೀ ತತೋಭ್ಯರ್ಚ್ಯಾ ಸರ್ವಜ್ಯೇಷ್ಠಮಭೀಪ್ಸುಭಿಃ ॥ ೨೦ ॥
ಅಥ ನಂದಿನಮಾಹೂಯ ಧೂರ್ಜಟಿಃ ಸ ಕೃಪಾನಿಧಿಃ ।
ಶೃಣ್ವತಾಂ ಸರ್ವದೇವಾನಾಮಿದಂ ವಚನಮಬ್ರವೀತ್ ॥ ೨೧ ॥

ಈಶ್ವರ ಉವಾಚ :—

ಶೈಲಾದೇ ಪ್ರವಿಶಾಶು ತ್ವಂ ಗುಹಾಸ್ತ್ಯತ್ರ ಮನೋಹರಾ ।
ತದಂತರೇಽಸ್ತಿ ಮೇ ಭಕ್ತೋ ಜೈಗೀಷವ್ಯಸ್ತಪೋಧನಃ ॥ ೨೨ ॥
ಮಹಾನಿಯಮವಾನ್ನಂದಿಂಸ್ತ್ವಗಸ್ಥಿಸ್ನಾಯುಶೇಷಿತಃ ।
ತಮಿಹಾನಯ ಮದ್ಭಕ್ತಂ ಮದ್ದರ್ಶನದೃಢವ್ರತಂ ॥ ೨೩ ॥

---

೧೮. ಆ ಜ್ಯೇಷ್ಠಸ್ಥಾನದಲ್ಲಿ ಜೇನುತುಪ್ಪ ಮತ್ತು ತುಪ್ಪಗಳಿಂದ ಯಥೋಕ್ತಪ್ರಕಾರವಾಗಿ ಶ್ರಾದ್ಧಗಳನ್ನು ಮಾಡಿದ ಮನುಷ್ಯಶ್ರೇಷ್ಠನು ಪಿತೃದೇವತೆಗಳಿಗೆ ಉತ್ತಮವಾದ ಸಂತೋಷವನ್ನುಂಟುಮಾಡುವನು.

೧೯. ಜ್ಯೇಷ್ಠತೀರ್ಥದಲ್ಲಿ ಕಾಶಿಯಲ್ಲಿ ತನ್ನ ಶಕ್ತ್ಯನುಸಾರವಾಗಿ ದಾನಗಳನ್ನು ಕೊಟ್ಟ ಮಾನವನು ಉತ್ತಮಗಳಾದ ಸ್ವರ್ಗಲೋಕಗಳನ್ನು ಹೊಂದುವುದಲ್ಲದೆ ಕಾಲಾಂತರದಲ್ಲಿ ಮೋಕ್ಷದಲ್ಲಿಯೂ ಭಾಗಿಯಾಗುವನು.

೨೦. ಶ್ರೇಯೋಭಿಲಾಷಿಗಳಾದ ನರರು ಕಾಶಿಯಲ್ಲಿ ಮೊದಲು ಜ್ಯೇಷ್ಠೇಶ್ವರನನ್ನು ಪೂಜಿಸಬೇಕು. ಮತ್ತು ಸರ್ವರಲ್ಲಿಯೂ ಜ್ಯೇಷ್ಠತ್ವವನ್ನು ಪಡೆಯಲೆಳಸುವವರು ಜ್ಯೇಷ್ಠಾನಾಮಕಳಾದ ಗೌರಿಯನ್ನು ಬಳಿಕ ಅರ್ಚಿಸಬೇಕು.

೨೧. ಬಳಿಕ ಕೃಪಾಸಮುದ್ರನಾದ ಮಹೇಶ್ವರನು ನಂದಿಕೇಶ್ವರನನ್ನು ಕರೆದು ಸಕಲ ದೇವತೆಗಳೂ ಕೇಳುತ್ತಿರಲು ಹೇಳತೊಡಗಿದನು.

೨೨. ಈಶ್ವರನು ಹೇಳುತ್ತಾನೆ:—ಎಲೈ ನಂದಿಯೆ! ನೀನು ಬೇಗ ಒಳಗೆ ಪ್ರವೇಶಿಸು. ಅಲ್ಲಿ ಮನೋಹರವಾದ ಗುಹೆಯೊಂದಿರುವುದು. ಅದರಲ್ಲಿ ನನ್ನ ಭಕ್ತನಾದ ಜೈಗೀಷವ್ಯನೆಂಬ ತಪೋನಿಧಿಯು ಧ್ಯಾನಾಸಕ್ತನಾಗಿರುವನು.

೨೩. ನಂದಿಯೆ! ಆತನು ಅತ್ಯಂತ ಉಗ್ರವಾದ ನಿಯಮವನ್ನು ಕೈಗೊಂಡು ಕೇವಲ ಚರ್ಮ, ಮೂಳೆ, ನರಗಳಿಂದ ಕೂಡಿದ ದೇಹವುಳ್ಳವನಾಗಿರುವನು. ನನ್ನ ಭಕ್ತನೂ, ನನ್ನನ್ನು ಪುನಃ ನೋಡಬೇಕೆಂಬ ದೃಢವ್ರತದಲ್ಲಿ ನಿರತನೂ ಆಗಿರುವ ಆತನನ್ನು ಇಲ್ಲಿಗೆ ಕರೆದುಕೊಂಡು ಬಾ.

ಯದಾ ಪ್ರಭೃತ್ಯಗಾಂ ಕಾಶ್ಯಾ ಮಂದರಂ ಸರ್ವಸುಂದರಂ ।
ಮಹಾನಿಯಮವಾನೇಷ ತದಾರಭ್ಯೋಜ್ಝಿತಾಶನಃ ॥ ೨೪ ॥
ಗೃಹಾಣ ಲೀಲಾಕಮಲಮಿದಂ ಪೀಯೂಷಪೋಷಣಂ ।
ಅನೇನ ತಸ್ಯ ಗಾತ್ರಾಣಿ ಸ್ಪೃಶ ಸದ್ಯಃ ಸುಬೃಂಹಿಣಾ ॥ ೨೫ ॥
ತತೋ ನಂದೀ ಸಮಾದಾಯ ತಲ್ಲೀಲಾಕಮಲಂ ವಿಭೋಃ ।
ಪ್ರಣಮ್ಯ ದೇವದೇವೇಶಮಾವಿಶದ್ಗಹ್ವರಾಂ ಗುಹಾಂ ॥ ೨೬ ॥
ನಂದೀ ದೃಷ್ಟ್ವಾಥ ತಂ ತತ್ರ ಧಾರಣಾದೃಢಮಾನಸಂ ।
ತಪೋಽಗ್ನಿಪರಿಶುಷ್ಕಾಂಗಂ ಕಮಲೇನ ಸಮಸ್ಪೃಶತ್ ॥ ೨೭ ॥
ತಪಾಂತೇ ವೃಷ್ಟಿಸಂಯೋಗಾಚ್ಛಾಲೂರ ಇವ ಕೋಟರೇ ।
ಉಲ್ಲಲಾಸ ಸ ಯೋಗೀಂದ್ರಃ ಸ್ಪರ್ಶಮಾತ್ರಾತ್ತದಬ್ಜಜಾತ್ ॥ ೨೮ ॥
ಅಥ ನಂದೀ ಸಮಾದಾಯ ಸತ್ವರಂ ಮುನಿಪುಂಗವಂ ।
ದೇವದೇವಸ್ಯ ಪಾದಾಗ್ರೇ ನಮಸ್ಕೃತ್ಯ ವ್ಯಪಾತಯತ್ ॥ ೨೯ ॥

---

೨೪. ಎಂದಿನಿಂದ ನಾನು ಕಾಶಿಯನ್ನು ಬಿಟ್ಟು ಸರ್ವತ್ರದಲ್ಲಿಯೂ ಮನೋಹರವಾದ ಮಂದರ ಪರ್ವತದಲ್ಲಿ ನೆಲಸಿದೆನೊ, ಅಂದಿನಿಂದ ಈತನು ಆಹಾರಾದಿಗಳನ್ನು ತೊರೆದು ಮಹಾನಿಯಮದಿಂದ ಜೀವಿಸುತ್ತಿರುವನು.

೨೫. ಅಮೃತೋದಕದಿಂದ ಪೋಷಿತವಾದ ಈ ಸುಂದರವಾದ ಕಮಲವನ್ನು ತೆಗೆದುಕೊ. ಉತ್ತಮ ಬಲವರ್ಧಕವಾದ ಇದರಿಂದ ತತ್‌ಕ್ಷಣದಲ್ಲಿಯೇ ಕೃಶನಾಗಿರುವ ಆತನ ಶರೀರದ ಅವಯವಗಳನ್ನು ಮುಟ್ಟುವವನಾಗು.

೨೬. ಆಗ ನಂದಿಕೇಶ್ವರನು ಪರಮಾತ್ಮನಿಂದ ಆ ಲೀಲಾಕಮಲವನ್ನು ಸ್ವೀಕರಿಸಿ ದೇವೋತ್ತಮನಾದ ಆತನಿಗೆ ಅಭಿನಮಿಸಿ ಅಂಧಕಾರಮಯವಾಗಿದ್ದ ಆ ಗುಹೆಯೊಳಗೆ ಪ್ರವೇಶಮಾಡಿದನು.

೨೭. ಗುಹೆಯಲ್ಲಿ ಶಿವಧ್ಯಾನದಲ್ಲಿಯೇ ದೃಢವಾದ ಮನಸ್ಸುಳ್ಳವನೂ, ತಪಸ್ಸಿನಿಂದ ಕ್ಷಯವನ್ನು ಹೊಂದಿದ ಶರೀರವುಳ್ಳವನೂ ಆದ ಜೈಗೀಷವ್ಯನನ್ನು ಕಂಡು ನಂದಿಯು ತನ್ನ ಕೈಯಲ್ಲಿದ್ದ ಕಮಲದಿಂದ ಆತನನ್ನು ಸ್ಪರ್ಶಿಸಿದನು.

೨೮. ಪೊಟರೆಯಲ್ಲಿ ಹುದುಗಿದ ಕಪ್ಪೆಯು ಗ್ರೀಷ್ಮರ್ತುವು ಕಳೆದು ವರ್ಷಾಕಾಲವು ಪ್ರಾರಂಭವಾದೊಡನೆಯೇ ಹೇಗೆ ಉಲ್ಲಾಸಗೊಳ್ಳುವುದೊ, ಹಾಗೆ ಆ ಯೋಗಿವರ್ಯನ ಶರೀರವೂ ಅಮೃತಮಯವಾದ ಆ ಕಮಲದ ಸ್ಪರ್ಶದಿಂದ ಪುಷ್ಟವಾಯಿತು.

೨೯. ಆಗ ನಂದಿಯು ವೇಗದಿಂದ ಆ ಮುನಿವರ್ಯನನ್ನು ಕರೆದುಕೊಂಡು ಬಂದು ಮಹಾದೇವನ ಪಾದಪ್ರದೇಶದಲ್ಲಿ ಆತನನ್ನು ಬೀಳಿಸಿದುದಲ್ಲದೆ ತಾನೂ ಸಾಷ್ಟಾಂಗನಮಸ್ಕಾರವನ್ನು ಮಾಡಿದನು.

ಜೈಗೀಷವ್ಯೋಽಥ ಸಂಭ್ರಾಂತಃ ಪುರತೋ ವೀಕ್ಷ್ಯ ಶಂಕರಂ ।
ವಾಮಾಂಗಸನ್ನಿವಿಷ್ಟಾದ್ರಿತನಯಂ ಪ್ರಣನಾಮ ಹ ॥ ೩೦ ॥
ಪ್ರಣಮ್ಯ ದಂಡವದ್ಭೂಮೌ ಪರಿಲುಂಠ್ಯ ಸಮಂತತಃ ।
ತುಷ್ಟಾವ ಪರಯಾ ಭಕ್ತ್ಯಾ ಸ ಮುನಿಶ್ಚಂದ್ರಶೇಖರಂ ॥ ೩೧ ॥

ಜೈಗೀಷವ್ಯ ಉವಾಚ:—

ನಮಃ ಶಿವಾಯ ಶಾಂತಾಯ ಸರ್ವಜ್ಞಾಯ ಶುಭಾತ್ಮನೇ ।
ಜಗದಾನಂದಕಂದಾಯ ಪರಮಾನಂದಹೇತವೇ ॥ ೩೨ ॥
ಅರೂಪಾಯ ಸರೂಪಾಯ ನಾನಾರೂಪಧರಾಯ ಚ ।
ವಿರೂಪಾಕ್ಷಾಯ ವಿಧಯೇ ವಿಧಿವಿಷ್ಣುಸ್ತುತಾಯ ಚ ॥ ೩೩ ॥
ಸ್ಥಾವರಾಯ ನಮಸ್ತುಭ್ಯಂ ಜಂಗಮಾಯ ನಮೋಽಸ್ತು ತೇ ।
ಸರ್ವಾತ್ಮನೇ ನಮಸ್ತುಭ್ಯಂ ನಮಸ್ತೇ ಪರಮಾತ್ಮನೇ ॥ ೩೪ ॥
ನಮಸ್ತ್ರೈಲೋಕ್ಯಕಾಮ್ಯಾಯ ಕಾಮಾಂಗದಹನಾಯ ಚ ।
ನಮೋ ಶೇಷವಿಶೇಷಾಯ ನಮಃ ಶೇಷಾಂಗದಾಯ ತೇ ॥ ೩೫ ॥

---

೩೦. ಜೈಗೀಷವ್ಯನೂ ತನ್ನ ಮುಂದೆ ಎಡದೊಡೆಯಲ್ಲಿ ಪಾರ್ವತಿಯನ್ನು ಕುಳ್ಳಿರಿಸಿಕೊಂಡಿರುವ ಶಂಕರನನ್ನು ಕಂಡು ಸಂಭ್ರಮಗೊಂಡು ಮತ್ತೆಮತ್ತೆ ಪ್ರಣಾಮಗಳನ್ನು ಇಬ್ಬರಿಗೂ ಮಾಡಿದನು.

೩೧. ಇಂತು ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿ ತನ್ನ ಮೈಯನ್ನು ಧೂಳಿಯಲ್ಲೀಡಾಡಿ ಆ ಮುನಿವರ್ಯನು ಅಪ್ರತಿಮವಾದ ಭಕ್ತಿಯಿಂದ ಆ ಚಂದ್ರಶೇಖರನನ್ನು ಸ್ತೋತ್ರಮಾಡಿದನು.

೩೨. ಜೈಗೀಷವ್ಯನು ಸ್ತುತಿಸುತ್ತಾನೆ:—ಸುಖಸ್ವರೂಪನೂ, ಶಾಂತನೂ, ಸರ್ವಜ್ಞನೂ, ಮಂಗಳರೂಪನೂ, ಹದಿನಾಲ್ಕು ಲೋಕಗಳ ಆನಂದಕ್ಕೆ ಮೂಲನೂ, ತಾನೇ ಆನಂದಸ್ವರೂಪನಾದುದರಿಂದ ಪರಮಾನಂದಪ್ರಾಪ್ತಿಗೆ ಕಾರಣನೂ ಆದ ನಿನಗೆ ನಮಸ್ಕರಿಸುವೆನು.

೩೩. ರೂಪರಹಿತನೂ, ಚಂದ್ರಶೇಖರಾದಿ ರೂಪಸಹಿತನೂ, ಪದಾರ್ಥಗಳ ನಾನಾ ರೂಪಗಳನ್ನು ಸ್ವೀಕರಿಸಿದವನೂ, ತ್ರಿಲೋಚನನೂ, ಬ್ರಹ್ಮಸ್ವರೂಪಿಯೂ, ಬ್ರಹ್ಮವಿಷ್ಣುಗಳಿಗೆ ಸ್ತುತ್ಯನಾದವನೂ ಆದ ನಿನಗೆ ನಮಸ್ಕಾರವು.

೩೪. ಸ್ಥಾವರ ರೂಪಗಳನ್ನು ಧರಿಸಿದವನೂ, ಚರಜಂತುಗಳ ರೂಪವುಳ್ಳವನೂ, ಸರ್ವ ಬ್ರಹ್ಮಾಂಡದ ಅಂತರ್ಯಾಮಿಯೂ, ಇಂದ್ರಿಯಾದಿಗಳಿಗೆ ಅಗೋಚರನಾದ ಪರಮಾತ್ಮನೂ ಆದ ನಿನಗೆ ನಮಸ್ಕರಿಸುವೆನು.

೩೫. ಸಕಲ ಲೋಕಗಳ ನಿವಾಸಿಗಳಿಗೂ ಪ್ರೀತ್ಯಾಸ್ಪದನೂ, ಮನ್ಮಥನ ರೂಪವನ್ನು ದಹಿಸಿದವನೂ, ಸಕಲ ಬ್ರಹ್ಮಾಂಡಕ್ಕೂ ಅತೀತವಾದವನೂ, ಆದಿಶೇಷನನ್ನೇ ವಲಯವಾಗಿ ಸ್ವೀಕರಿಸಿದವನೂ ಆದ ನಿನಗೆ ನಮೋನಮಃ!.

ಶ್ರೀಕಂಠಾಯ ನಮಸ್ತುಭ್ಯಂ ವಿಷಕಂಠಾಯ ತೇ ನಮಃ ।
ವೈಕುಂಠವಂದ್ಯಪಾದಾಯ ನಮೋಽಕುಂಠಿತಶಕ್ತಯೇ ॥ ೩೬ ॥
ನಮಃ ಶಕ್ತ್ಯರ್ಧದೇಹಾಯ ವಿದೇಹಾಯ ಸುದೇಹಿನೇ ।
ಸಕೃತ್ಪ್ರಣಾಮಮಾತ್ರೇಣ ದೇಹಿದೇಹನಿವಾರಿಣೇ ॥ ೩೭ ॥
ಕಾಲಾಯ ಕಾಲಕಾಲಾಯ ಕಾಲಕೂಟವಿಷಾದಿನೇ ।
ವ್ಯಾಲಯಜ್ಞೋಪವೀತಾಯ ವ್ಯಾಲಭೂಷಣಧಾರಿಣೇ ॥ ೩೮ ॥
ನಮಸ್ತೇ ಖಂಡಪರಶೋ ನಮಃ ಖಂಡೇಂದುಧಾರಿಣೇ ।
ಖಂಡಿತಾಶೇಷದುಃಖಾಯ ಖಡ್ಗಖೇಟಕಧಾರಿಣೇ ॥ ೩೯ ॥
ಗೀರ್ವಾಣಗೀತನಾಥಾಯ ಗಂಗಾಕಲ್ಲೋಲಮಾಲಿನೇ ।
ಗೌರೀಶಾಯ ಗಿರೀಶಾಯ ಗಿರಿಶಾಯ ಗುಹಾರಣೇ ॥ ೪೦ ॥
ಚಂದ್ರಾರ್ಧಶುದ್ಧಭೂಷಾಯ ಚಂದ್ರಸೂರ್ಯಾಗ್ನಿಚಕ್ಷುಷೇ ।
ನಮಸ್ತೇ ಚರ್ಮವಸನ ನಮೋ ದಿಗ್ವಸನಾಯ ತೇ ॥ ೪೧ ॥

---

೩೬. ವಿಷವನ್ನು ಕೊರಳಿನಲ್ಲಿ ಧರಿಸಿದವನೂ, ನೀಲಗ್ರೀವನೂ, ಮಹಾವಿಷ್ಣುವಿನಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳವನೂ, ಕ್ಷಯನಾಶಗಳಿಲ್ಲದ ಶಕ್ತಿಯುಳ್ಳವನೂ ಆದ ನಿನಗೆ ನಮಸ್ಕಾರವು.

೩೭. ಶಕ್ತಿರೂಪಿಣಿಯಾದ ಪಾರ್ವತಿಗೆ ಅರ್ಧದೇಹವನ್ನು ಕೊಟ್ಟಿರುವವನೂ, ಪ್ರಾಕೃತದೇಹಶೂನ್ಯನೂ, ಅಪ್ರಾಕೃತವಾದ ತೇಜೋಮಯರೂಪನೂ, ಒಮ್ಮೆ ನಮಸ್ಕರಿಸುವುದರಿಂದಲೇ ಭಕ್ತರಾದ ಮಾನವರ ದೇಹಾಭಿಮಾನವನ್ನು ಕಳೆಯುವವನೂ ಆದ ನಿನಗೆ ಪ್ರಣಾಮವನ್ನು ಮಾಡುವೆನು.

೩೮. ಬ್ರಹ್ಮಾಂಡದ ನಿಯಾಮಕನಾಗಿ ಕಾಲಸ್ವರೂಪಿಯೂ, ಯಮನಿಗೂ ಯಮನಾಗಿರುವವನೂ, ಕಾಲಕೂಟವಿಷವನ್ನು ಪಾನಮಾಡಿ, ನಾಗಯಜ್ಞೋಪವೀತವನ್ನು ಧರಿಸಿ, ಅವುಗಳನ್ನೇ ಆಭರಣಗಳಾಗಿ ಧರಿಸಿದವನೂ ಆದ ನಿನಗೆ ನಮಸ್ಕಾರವನ್ನು ಮಾಡುವೆನು.

೩೯. ಖಂಡಪರಶುವೂ, ಚಂದ್ರಖಂಡವನ್ನು ಜಡೆಯಲ್ಲಿ ಧರಿಸಿದವನೂ, ಸಕಲ ದುಃಖಗಳನ್ನೂ ದೂರಗೊಳಿಸಿದವನೂ, ಖಡ್ಗ ಮತ್ತು ಗುರಾಣಿಗಳನ್ನು ಹಿಡಿದಿರುವವನೂ ಆದ ನಿನಗಿದೋ ಮಣಿಯುವೆನು.

೪೦. ದೇವತೆಗಳ ಮಂಗಳಗೀತಗಳಿಗೆ ಪಾತ್ರನಾದವನೂ, ಗಂಗೆಯ ಪ್ರವಾಹವನ್ನೇ ಮಾಲೆಯಾಗಿ ಧರಿಸಿದವನೂ, ಗೌರೀನಾಥನೂ, ಗಿರಿಶನೂ, ಪರ್ವತನಿವಾಸಿಯೂ, ಷಣ್ಮುಖನೆಂಬ ಅಗ್ನಿಗೆ ಉತ್ಪತ್ತಿಸ್ಥಾನವಾದ ಅರಣಿಯೂ ಆದ ನಿನಗೆ ನಮಸ್ಕಾರವು.

೪೧. ನಿರ್ಮಲವಾದ ಅರ್ಧಚಂದ್ರನನ್ನು ಭೂಷಣವಾಗಿಟ್ಟು, ಚಂದ್ರ

ಜಗದೀಶಾಯ ಜೀರ್ಣಾಯ ಜರಾಜನ್ಮಹರಾಯ ತೇ ।
ಜೀವಾಯ ತೇ ನಮಸ್ತುಭ್ಯಂ ಜಾಪಕಾಘನಿವಾರಿಣೇ ॥ ೪೨ ॥
ನಮೋ ಡಮರುಹಸ್ತಾಯ ಧನುರ್ಹಸ್ತಾಯ ತೇ ನಮಃ ।
ತ್ರಿನೇತ್ರಾಯ ನಮಸ್ತುಭ್ಯಂ ಜಗನ್ನೇತ್ರಾಯ ತೇ ನಮಃ ॥ ೪೩ ॥
ತ್ರಿಶೂಲವ್ಯಗ್ರಹಸ್ತಾಯ ನಮಸ್ತ್ರಿಪಥಗಾಧರ ।
ತ್ರಿವಿಷ್ಟಪಾಧಿನಾಥಾಯ ತ್ರಿವೇದೀಪಠಿತಾಯ ಚ ॥ ೪೪ ॥
ತ್ರಯೀಮಯಾಯ ತುಷ್ಟಾಯ ಭಕ್ತತುಷ್ಟಿಪ್ರದಾಯ ಚ ।
ದೀಕ್ಷಿತಾಯ ನಮಸ್ತುಭ್ಯಂ ದೇವದೇವಾಯ ತೇ ನಮಃ ॥ ೪೫ ॥
ದಾರಿತಾಶೇಷಪಾಪಾಯ ನಮಸ್ತೇ ದೀರ್ಘದರ್ಶಿನೇ ।
ದೂರಾಯ ದುರವಾಪ್ಯಾಯ ದೋಷನಿರ್ದಲನಾಯ ಚ ॥ ೪೬ ॥
ದೋಷಾಕರಕಲಾಧಾರ ತ್ಯಕ್ತದೋಷಾಗಮಾಯ ಚ ।
ನಮೋ ಧೂರ್ಜಟಯೇ ತುಭ್ಯಂ ಧತ್ತೂರಕುಸುಮಪ್ರಿಯ ॥ ೪೭ ॥

---

ಸೂರ್ಯ ವಹ್ನಿಗಳೆಂಬ ಮೂರು ಕಣ್ಣುಗಳುಳ್ಳವನಾಗಿ, ಗಜಚರ್ಮವನ್ನು ಮೈಗೆ ಸುತ್ತಿಕೊಂಡು, ತಾಂಡವನೃತ್ಯಕಾಲದಲ್ಲಿ ದಿಗಂಬರನಾಗಿಯೂ ಇರುವ ನಿನಗೆ ನಮಸ್ಕಾರವು.

೪೨. ಲೋಕೇಶ್ವರನೂ, ಪುರಾಣಪುರುಷನೂ, ಮುಪ್ಪು ಹುಟ್ಟುಗಳನ್ನು ಕಳೆಯುವವನೂ, ಪ್ರಾಣಿಗಳಲ್ಲಿ ಪ್ರಾಣರೂಪನೂ, ನಿನ್ನ ದಿವ್ಯನಾಮವನ್ನು ಜಪಿಸುವವರ ಪಾತಕಗಳನ್ನು ಕಡೆಗಾಣಿಸುವವನೂ ಆದ ನಿನಗೆ ನಮಸ್ಕರಿಸುವೆನು.

೪೩. ಒಂದು ಕೈಯಲ್ಲಿ ಡಮರುಗವನ್ನೂ, ಮತ್ತೊಂದರಲ್ಲಿ ಪಿನಾಕ ಧನುಸ್ಸನ್ನೂ ಹಿಡಿದು ಮುಕ್ಕಣ್ಣನೂ ಜೀವರ ಜ್ಞಾನಕ್ಕೆ ಕಾರಣಗಳಾದ ಇಂದ್ರಿಯಗಳಿಗೆ ಅಧಿಷ್ಠಾತೃವೂ ಆಗಿರುವ ನಿನಗೆ ನಮಸ್ಕಾರವು.

೪೪. ತ್ರಿಶೂಲವನ್ನು ಕೈಯಲ್ಲಿ ಹಿಡಿದಿರುವವನೂ, ಗಂಗೆಯನ್ನು ತಲೆಯಲ್ಲಿ ಧರಿಸಿದವನೂ, ಸ್ವರ್ಗಕ್ಕೆ ಅಧೀಶ್ವರನೂ, ಮೂರು ವೇದಗಳಿಂದಲೂ ಸ್ತುತಿಸಲ್ಪಡುತ್ತಿರುವವನೂ ಆದ ನಿನ್ನನ್ನು ನಮಸ್ಕರಿಸುವೆನು.

೪೫. ವೇದಾತ್ಮಕನೂ, ಸ್ವರಮಣನೂ, ಭಕ್ತರಿಗೆ ಸಂತೋಷವನ್ನುಂಟುಮಾಡುವವನೂ, ಜಗದ್ವ್ಯಾಪಾರವೆಂಬ ಯಜ್ಞಕ್ಕೆ ದೀಕ್ಷಿತನಾಗಿರುವವನೂ, ದೇವಾಧಿದೇವನೂ ಆದ ನಿನಗೆ ನಮೋ ನಮಃ.

೪೬. ಸಕಲಪಾತಕಗಳನ್ನೂ ನಿರ್ಮೂಲಗೊಳಿಸುವವನೂ, ದೀರ್ಘದರ್ಶಿಯೂ, ಭಕ್ತರಲ್ಲದವರಿಗೆ ದೂರನೂ, ದುರವಾಪ್ಯನೂ, ಸೇವಕರ ದೋಷಗಳನ್ನು ದೂರಮಾಡುವವನೂ ಆದ ನಿನಗೆ ನಮಸ್ಕಾರವು.

೪೭. ರಾತ್ರಿಂಕರನಾದ ಚಂದ್ರನ ಕಳೆಯನ್ನು ಧರಿಸಿದವನೆ! ಸಮಸ್ತ

ನಮೋ ಧೀರಾಯ ಧರ್ಮಾಯ ಧರ್ಮಪಾಲಾಯ ತೇ ನಮಃ ।
ನೀಲಗ್ರೀವ ನಮಸ್ತುಭ್ಯಂ ನಮಸ್ತೇ ನೀಲಲೋಹಿತ ॥ ೪೮ ॥
ನಾಮಮಾತ್ರಸ್ಮೃತಿಕೃತಾಂ ತ್ರೈಲೋಕ್ಯೈಶ್ವರ್ಯಪೂರಕ ।
ನಮಃ ಪ್ರಮಥನಾಥಾಯ ಪಿನಾಕೋದ್ಯತಪಾಣಯೇ ॥ ೪೯ ॥
ಪಶುಪಾಶವಿಮೋಕ್ಷಾಯ ಪಶೂನಾಂ ಪತಯೇ ನಮಃ ।
ನಾಮೋಚ್ಚಾರಣಮಾತ್ರೇಣ ಮಹಾಪಾತಕಹಾರಿಣೇ ॥ ೫೦ ॥
ಪರಾತ್ಪರಾಯ ಪಾರಾಯ ಪರಾಪರಪರಾಯ ಚ ।
ನಮೋಽಪಾರಚರಿತ್ರಾಯ ಸುಪವಿತ್ರಕಥಾಯ ಚ ॥ ೫೧ ॥
ವಾಮದೇವಾಯ ವಾಮಾರ್ಧಧಾರಿಣೇ ವೃಷಗಾಮಿನೇ ।
ನಮೋ ಭರ್ಗಾಯ ಭೀಮಾಯ ನತಭೀತಿಹರಾಯ ಚ ॥ ೫೨ ॥
ಭವಾಯ ಭವನಾಶಾಯ ಭೂತಾನಾಂ ಪತಯೇ ನಮಃ ।
ಮಹಾದೇವ ನಮಸ್ತುಭ್ಯಂ ಮಹೇಶ ಮಹಸಾಂ ಪತೇ ॥ ೫೩ ॥

---

ದೋಷಗಳನ್ನೂ ತ್ಯಜಿಸಿದವನೆ! ವಿಶಾಲವಾದ ಜಟಾಭಾರವುಳ್ಳವನೂ ಧತ್ತೂರ ಪುಷ್ಪಪ್ರಿಯನೂ ಆದ ನಿನಗೆ ನಮಸ್ಕರಿಸುವೆನು.

೪೮. ಧೀರನೂ, ಧರ್ಮಸ್ವರೂಪನೂ, ಧರ್ಮರಕ್ಷಕನೂ, ನೀಲಕಂಠನೂ, ನೀಲಲೋಹಿತನೂ ಆದ ನಿನಗೆ ನಮಸ್ಕಾರವು.

೪೯. ನಿಮ್ಮ ನಾಮದ ಸ್ಮರಣೆಯನ್ನು ಮಾತ್ರ ಮಾಡುವವರಿಗೂ ಮೂರು ಲೋಕಗಳ ಐಶ್ವರ್ಯಗಳನ್ನೂ ಅನುಗ್ರಹಿಸುವೆ. ಪ್ರಮಥಗಣಗಳಿಗೆ ಒಡೆಯನೂ, ಪಿನಾಕಧನುಸ್ಸನ್ನು ಎತ್ತಿ ಹಿಡಿದಿರುವವನೂ ಆದ ನಿನಗೆ ನಮಸ್ಕಾರವಿರಲಿ.

೫೦. ಪಶುರೂಪರಾದ ಜೀವರ ಸಂಸಾರಪಾಶವನ್ನು ಬಿಡಿಸುವವನೂ, ಪಶುಪತಿಯೆನಿಸಿದವನೂ, ನಾಮೋಚ್ಚಾರಣಮಾತ್ರದಿಂದಲೇ ಮಹಾಪಾತಕ ಗಳನ್ನು ಹದಗೆಡಿಸುವವನೂ ಆಗಿರುವವನು ನೀನೆ!

೫೧. ಪರವೆನಿಸಿದ ಅವ್ಯಕ್ತಕ್ಕೂ ಪರನಾಗಿರುವವನೂ, ಸಕಲ ಜಗದ್ವ್ಯಾಪಾರದ ಸೀಮಾಪುರುಷನೂ, ಕಾರ್ಯಕಾರಣಾದಿ ದ್ವಂದ್ವಗಳಿಗೆ ಅತೀತನೂ, ಅದ್ಭುತಚರಿತ್ರೆಯುಳ್ಳವನೂ, ಲೋಕಪಾವನವಾದ ವ್ಯಾಪಾರವನ್ನು ನಡೆಸುವವನೂ ಆದ ನಿನಗೆ ನಮಸ್ಕಾರವು.

೫೨. ವಾಮದೇವನೂ, ವಾಮಾರ್ಧದಲ್ಲಿ ಪಾರ್ವತಿಯನ್ನು ಧರಿಸಿದವನೂ, ವೃಷಭವಾಹನನೂ, ಭರ್ಗನಾಮಕನೂ, ಭೀಮನೂ, ಶರಣಾಗತರ ಭಯವನ್ನು ಪರಿಹರಿಸುವವನೂ ಆದ ನಿನಗೆ ನಮಸ್ಕಾರವು.

೫೩. ಭವನೂ, ಸಂಸಾರನಾಶಕನೂ, ಭೂತಗಳಿಗೆ ಅಧೀಶ್ವರನೂ, ದೇವಾಧಿದೇವನೂ, ಮಹೇಶ್ವರನೂ, ಮಹಾತ್ಮ್ಯಪೂರಿತನೂ ಆದ ನಿನಗೆ ಪ್ರಣಾಮವು.

ನಮೋ ಮೃಡಾನೀಪತಯೇ ನಮೋ ಮೃತ್ಯುಂಜಯಾಯ ತೇ ।
ಯಜ್ಞಾರಯೇ ನಮಸ್ತುಭ್ಯಂ ಯಕ್ಷರಾಜಪ್ರಿಯಾಯ ಚ ॥ ೫೪ ॥
ಯಾಯಜೂಕಾಯ ಯಜ್ಞಾಯ ಯಜ್ಞಾನಾಂ ಫಲದಾಯಿನೇ ।
ರುದ್ರಾಯ ರುದ್ರಪತಯೇ ಕದ್ರುದ್ರಾಯ ರಮಾಯ ಚ ॥ ೫೫ ॥
ಶೂಲಿನೇ ಶಾಶ್ವತೇಶಾಯ ಶ್ಮಶಾನಾವಸಚಾರಿಣೇ ।
ಶಿವಾಪ್ರಿಯಾಯ ಶರ್ವಾಯ ಸರ್ವಜ್ಞಾಯ ನಮೋಽಸ್ತು ತೇ ॥ ೫೬ ॥
ಹರಾಯ ಕ್ಷಾಂತಿರೂಪಾಯ ಕ್ಷೇತ್ರಜ್ಞಾಯ ಕ್ಷಮಾಕರ ।
ಕ್ಷಮಾಯ ಕ್ಷಿತಿಹರ್ತ್ರೇ ಚ ಕ್ಷೀರಗೌರಾಯ ತೇ ನಮಃ ॥ ೫೭ ॥
ಅಂಧಕಾರೇ ನಮಸ್ತುಭ್ಯಮಾದ್ಯಂತರಹಿತಾಯ ಚ ।
ಇಡಾಧಾರಾಯ ಈಶಾಯ ಉಪೇಂದ್ರೇಂದ್ರಸ್ತುತಾಯ ಚ ॥ ೫೮ ॥
ಉಮಾಕಾಂತಾಯ ಉಗ್ರಾಯ ನಮಸ್ತೇ ಊರ್ಧ್ವರೇತಸೇ ।
ಏಕರೂಪಾಯ ಚೈಕಾಯ ಮಹದೈಶ್ವರ್ಯರೂಪಿಣೇ ॥ ೫೯ ॥

---

೫೪. ಪಾರ್ವತೀರಮಣನೂ, ಮೃತ್ಯುಂಜಯನೂ, ದಕ್ಷಯಜ್ಞಧ್ವಂಸಕನೂ, ಕುಬೇರಸ್ನೇಹಿತನೂ ಆದ ನಿನಗೆ ನಮಸ್ಕರಿಸುವೆನು.

೫೫. ಯಜ್ಞಕರ್ತೃವೂ, ಯಜ್ಞಸ್ವರೂಪನೂ, ಯಜ್ಞಗಳಿಗೆ ಫಲಗಳನ್ನು ಕೊಡುವ ಸ್ವಾಮಿಯೂ, ರುದ್ರನೂ, ರೌದ್ರಾಕಾರರಾದ ಗಣಗಳಿಗೊಡೆಯನೂ, ನೀಚವಾದ ರೋದನಾದಿ ದುಃಖವನ್ನು ನಾಶಗೊಳಿಸುವವನೂ, ಭಕ್ತರಿಗೆ ಸಂತೋಷವನ್ನುಂಟುಮಾಡುವವನೂ ಆದ ನಿನಗೆ ಸಾಷ್ಟಾಂಗವು.

೫೬. ತ್ರಿಶೂಲಧಾರಿಯೂ, ನಿತ್ಯೈಶ್ವರ್ಯಸಮನ್ವಿತನೂ, ಶ್ಮಶಾನಭೂಮಿಯಲ್ಲಿ ವಾಸಮಾಡುವವನೂ, ಪಾರ್ವತೀಪ್ರಿಯನೂ, ಶರ್ವನೂ, ಸರ್ವಜ್ಞನೂ ಆದ ನಿನಗೆ ನಮಸ್ಕಾರವಿರಲಿ.

೫೭. ಪಾಪಪರಿಹಾರಕನೂ, ಕ್ಷಮಾರೂಪನೂ, ದೇಹಾದಿ ಸಕಲಕ್ಷೇತ್ರಗಳಲ್ಲಿ ಕ್ಷೇತ್ರಜ್ಞನೂ, ಭಕ್ತರ ಅಪರಾಧಗಳನ್ನು ಮನ್ನಿಸುವವನೂ, ಸರ್ವಶಕ್ತನೂ, ಬ್ರಹ್ಮಾಂಡವನ್ನು ಲಯಗೊಳಿಸುವವನೂ, ಕ್ಷೀರಸದೃಶವಾದ ದೇಹವುಳ್ಳವನೂ ಆದ ನಿನಗೆ ನಮಸ್ಕಾರವು.

೫೮. ಅಂಧಕಾಸುರನನ್ನು ಸಂಹರಿಸಿದವನೂ, ಆದ್ಯಂತರಹಿತನೂ, ಭೂಮಿಗೆ ಆಧಾರವಾಗಿರುವವನೂ, ಸರ್ವೇಶ್ವರನೂ, ವಿಷ್ಣು ಮಹೇಂದ್ರರಿಂದ ಸಂಸ್ತುತನೂ ಆದ ನಿನಗೆ ನಮಸ್ಕಾರವು.

೫೯. ಉಮಾರಮಣನೂ, ಉಗ್ರನೂ, ಊರ್ಧ್ವರೇತಸನೂ, ಶಶ್ವದೇಕಸ್ವರೂಪನೂ, ಅದ್ವಿತೀಯನೂ, ಮಹತ್ತರವಾದ ಐಶ್ವರ್ಯದ ಸ್ವರೂಪವುಳ್ಳವನೂ ಆದ ನಿನಗೆ ನಮಸ್ಕರಿಸುವೆನು.

ಅನಂತಕಾರಿಣೇ ತುಭ್ಯಮಂಬಿಕಾಪತಯೇ ನಮಃ ।
ತ್ವಮೋಂಕಾರೋ ವಷಟ್ಕಾರೋ ಭೂರ್ಭುವಃ ಸ್ವಸ್ತ್ವಮೇವ ಹಿ ॥ ೬೦ ॥
ದೃಶ್ಯಾದೃಶ್ಯಂ ಯದತ್ರಾಸ್ತಿ ತತ್ಸರ್ವಂ ತ್ವಮುಮಾಧವ ।
ಸ್ತುತಿಂ ಕರ್ತುಂ ನ ಜಾನಾಮಿ ಸ್ತುತಿಕರ್ತಾ ತ್ವಮೇವ ಹಿ ॥ ೬೧ ॥
ವಾಚ್ಯಸ್ತ್ವಂ ವಾಚಕಸ್ತ್ವಂ ಹಿ ವಾಕ್ಚ ತ್ವಂ ಪ್ರಣತೋಽಸ್ಮಿ ತೇ ।
ನಾನ್ಯಂ ವೇದ್ಮಿ ಮಹಾದೇವ ನಾನ್ಯಂ ಸ್ತೌಮಿ ಮಹೇಶ್ವರ ॥ ೬೨ ॥
ನಾನ್ಯಂ ನಮಾಮಿ ಗೌರೀಶ ನಾನ್ಯಾಖ್ಯಾಮಾದದೇ ಶಿವ ।
ಮೂಕೋಽನ್ಯನಾಮಗ್ರಹಣೇ ಬಧಿರೋಽನ್ಯಕಥಾಶ್ರುತೌ ॥ ೬೩ ॥
ಪಂಗುರನ್ಯಾಭಿಗಮನೇಽಸ್ಮ್ಯಂಧೋಽನ್ಯಪರಿವೀಕ್ಷಣೇ ।
ಏಕ ಏವ ಭವಾನೀಶ ಏಕಃ ಕರ್ತಾ ತ್ವಮೇವ ಹಿ ॥ ೬೪ ॥
ಪಾತಾ ಹರ್ತಾ ತ್ವಮೇವೈಕೋ ನಾನಾತ್ವಂ ಮೂಢಕಲ್ಪನಾ ।
ಅತಸ್ತ್ವಮೇವ ಶರಣಂ ಭೂಯೋ ಭೂಯಃ ಪುನಃ ಪುನಃ ॥ ೬೫ ॥

---

೬೦. ನಾಶರಹಿತವಾದ ಮೋಕ್ಷವನ್ನು ಕೊಡುವವನೂ, ಅಂಬಿಕಾಪತಿಯೂ ಆದ ನಿನಗೆ ನಮಸ್ಕಾರವು. ನೀನೇ ಪ್ರಣವವೂ, ವಷಟ್ಕಾರವೂ, ಭೂಲೋಕ, ಭುವರ್ಲೋಕ, ಸುವರ್ಲೋಕಗಳೂ ಆಗಿರುವೆ.

೬೧. ಉಮಾಕಾಂತನೆ! ಬ್ರಹ್ಮಾಂಡದಲ್ಲಿ ದೃಶ್ಯಪದಾರ್ಥಗಳೂ ಇಂದ್ರಿಯಾತೀತಗಳೂ ಯಾವುವು ಇರುವುವೊ, ಅವುಗಳೆಲ್ಲವೂ ನೀನೇ ಆಗಿರುವೆ. ನಿನ್ನನ್ನು ಸ್ತೋತ್ರಮಾಡುವ ಬಗೆಯನ್ನು ನಾನರಿಯೆನು. ಸ್ತೋತ್ರಕರ್ತನೂ ನೀನೇ ಆಗಿರುವೆಯಲ್ಲವೆ.

೬೨. ಪದಗಳ ವಾಚ್ಯಾರ್ಥವೂ ನೀನೇ. ಅವುಗಳನ್ನು ತಿಳಿಸುವ ಶಬ್ದಗಳೂ ನೀನೇ. ವಾಕ್ಯರೂಪನೂ ಆಗಿರುವೆ. ನಿನಗೆ ನಮಸ್ಕಾರವು. ದೇವೇಶ್ವರನೆ! ಮಹಾದೇವನೆ! ನಾನು ಮತ್ತೊಬ್ಬನನ್ನು ತಿಳಿಯೆನು. ಮತ್ತೆ ಯಾರನ್ನೂ ಸ್ತೋತ್ರಮಾಡುವುದಿಲ್ಲ.

೬೩. ಗೌರೀನಾಥನೆ! ಇನ್ನೊಬ್ಬನಿಗೆ ನಮಸ್ಕರಿಸುವುದಿಲ್ಲ. ಮಂಗಳಸ್ವರೂಪನೆ! ನಿನ್ನನ್ನುಳಿದು ಬೇರೆಯವರ ನಾಮವನ್ನು ಸಹ ಜಪಿಸುವುದಿಲ್ಲ. ಅವರ ನಾಮವನ್ನುಚ್ಚರಿಸುವ ವಿಷಯದಲ್ಲಿ ನಾನು ಮೂಕನಾಗಿರುವೆನು. ಇತರರ ಚರಿತ್ರೆಗಳನ್ನು ಕೇಳುವುದರಲ್ಲಿ ಕಿವುಡನಾಗಿರುವೆನು.

೬೪. ಇತರರನ್ನು ಆಶ್ರಯಿಸುವುದರಲ್ಲಿ ಕುಂಟನು. ಅವರನ್ನು ನೋಡುವುದರಲ್ಲಿ ಅಂಧಸಮಾನನು. ನೀನೊಬ್ಬನೇ ನನಗೆ ಸ್ವಾಮಿಯಾಗಿರುವೆ. ಸಕಲ ಲೋಕಗಳಿಗೂ ನೀನೊಬ್ಬನೇ ಪ್ರವರ್ತಕನಾಗಿರುವೆ.

೬೫. ನೀನೊಬ್ಬನೇ ಸಂರಕ್ಷಕನೂ, ಸಂಹಾರಕನೂ ಆಗಿರುವೆ. ನಿನ್ನಲ್ಲಿ

ಸಂಸಾರಸಾಗರೇ ಮಗ್ನಂ ಮಾಮುದ್ಧರ ಮಹೇಶ್ವರ ।
ಇತಿ ಸ್ತುತ್ವಾ ಮಹೇಶಾನಂ ಜೈಗೀಷವ್ಯೋ ಮಹಾಮುನಿಃ ।
ವಾಚಂಯಮೋಽಭವತ್ತಸ್ಥೌ ಪುರತಃ ಸ್ಥಾಣುಸನ್ನಿಭಃ ॥ ೬೬ ॥
ಇತಿ ಸ್ತುತಿಂ ಸಮಾಕರ್ಣ್ಯ ಮುನೇಶ್ಚಂದ್ರವಿಭೂಷಣಃ ।
ಉವಾಚ ಚ ಪ್ರಸನ್ನಾತ್ಮಾ ವರಂ ಬ್ರೂಹೀತಿ ತಂ ಮುನಿಂ ॥ ೬೭ ॥

ಜೈಗೀಷವ್ಯ ಉವಾಚ:—

ಯದಿ ಪ್ರಸನ್ನೋ ದೇವೇಶ ತತಸ್ತವ ಪದಾಂಬುಜಾತ್ ।
ಮಾ ಭವಾನಿ ಭವಾನೀಶ ದೂರಂ ದೂರಪದಪ್ರದ ॥ ೬೮ ॥
ಅಪರಶ್ಚ ವರೋ ನಾಥ ದೇಯೋಽಯಮವಿಚಾರತಃ ।
ಯನ್ಮಯಾ ಸ್ಥಾಪಿತಂ ಲಿಂಗಂ ತತ್ರ ಸಾನ್ನಿಧ್ಯಮಸ್ತು ತೇ ॥ ೬೯ ॥

ಈಶ್ವರ ಉವಾಚ:—

ಜೈಗೀಷವ್ಯ ಮಹಾಭಾಗ ಯದುಕ್ತಂ ಭವತಾನಘ ।
ತದಸ್ತು ಸರ್ವಂ ತೇಽಭೀಷ್ಟಂ ವರಮನ್ಯಂ ದದಾಮಿ ಚ ॥ ೭೦ ॥

---

ಭೇದಕಲ್ಪನೆಯು ಮೂಢತನವೇ ಸರಿ. ಆದುದರಿಂದ ಎಂದೆಂದಿಗೂ ಸರ್ವ ಪ್ರಕಾರದಿಂದಲೂ ನೀನೇ ನನಗೆ ಶರಣ್ಯನಾಗಿರುವೆ.

೬೬. ಮಹೇಶ್ವರನೆ! ಸಂಸಾರವೆಂಬ ಅಗಾಧವಾದ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸು. ಇಂತೆಂದು ಮಹಾಮುನಿಯಾದ ಜೈಗೀಷವ್ಯನು ಮಹಾದೇವನನ್ನು ಸ್ತೋತ್ರಮಾಡಿ ಸ್ಥಾಣುವಾದ ಆತನ ಮುಂದುಗಡೆಯಲ್ಲಿ ಮರದ ಸ್ತಂಭದಂತೆ ನಿಶ್ಚಲವಾಗಿ ನಿಂತು ಮಾತುಗಳನ್ನುಪಸಂಹರಿಸಿದನು.

೬೭. ಮುನೀಶ್ವರನ ಈ ಸ್ತೋತ್ರವನ್ನು ಕೇಳಿ ಚಂದ್ರಶೇಖರನು ಪ್ರಸನ್ನಾಂತಃಕರಣನಾಗಿ ಆತನನ್ನು ಕುರಿತು "ಮುನಿವರ್ಯನೆ! ನಿನಗೆ ಬೇಕಾದ ವರವನ್ನು ಕೇಳಿಕೊ" ಎಂಬುದಾಗಿ ಅನುಜ್ಞೆಯಿತ್ತನು.

೬೮. ಜೈಗೀಷವ್ಯನು ಹೇಳುತ್ತಾನೆ:—ದೇವೇಶ್ವರನೆ! ಭವಾನೀಪತಿಯೆ! ದುರ್ಲಭವಾದ ಸದ್ಗತಿಯನ್ನು ನೀಡುವವನೆ! ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ ನನ್ನ ಮನಸ್ಸು ನಿನ್ನ ಪಾದಕಮಲಗಳನ್ನು ಬಿಟ್ಟು ದೂರಕ್ಕೆ ಚಲಿಸದಂತೆ ಅನುಗ್ರಹವನ್ನು ಮಾಡು.

೬೯. ಮನ್ನಾಥನೆ! ನನ್ನ ಮತ್ತೊಂದು ವರವನ್ನು ನೀನು ಹಿಂದು ಮುಂದೆಣಿಸದೆ ಕೊಡಬೇಕು. ನಾನು ಸ್ಥಾಪಿಸಿರುವ ಈ ಲಿಂಗದಲ್ಲಿ ಯಾವಾಗಲೂ ನಿನ್ನ ಸಾನ್ನಿಧ್ಯವಿರುವಂತಾಗಲಿ.

೭೦. ಈಶ್ವರನು ಹೇಳುತ್ತಾನೆ:—ಮಹಾತ್ಮನೂ, ನಿಷ್ಕಳಂಕನೂ ಆದ ಜೈಗೀಷವ್ಯಮುನಿಯೆ! ನೀನು ಹೇಳಿದಂತೆಯೇ ನಿನ್ನ ಅಭೀಷ್ಟವೆಲ್ಲವೂ ಸಿದ್ಧಿಸುವುದು. ಅಲ್ಲದೆ ನಿನಗೆ ಬೇರೊಂದು ವರವನ್ನೂ ಅನುಗ್ರಹಿಸುವೆನು.

ಯೋಗಶಾಸ್ತ್ರಂ ಮಯಾ ದತ್ತಂ ತವ ನಿರ್ವಾಣಸಾಧಕಂ ।
ಸರ್ವೇಷಾಂ ಯೋಗಿನಾಂ ಮಧ್ಯೇ ಯೋಗಾಚಾರ್ಯಸ್ತು ವೈ ಭವಾನ್ ॥
ರಹಸ್ಯಂ ಯೋಗವಿದ್ಯಾಯಾ ಯಥಾವತ್ತ್ವಂ ತಪೋಧನ ।
ಸಂವೇತ್ಸ್ಯಸೇ ಪ್ರಸಾದಾನ್ಮೇ ಯೇನ ನಿರ್ವಾಣಮಾಪ್ಸ್ಯಸಿ ॥ ೭೨ ॥
ಯಥಾ ನಂದೀ ಯಥಾ ಭೃಂಗೀ ಸೋಮನಂದೀ ಯಥಾ ತಥಾ ।
ತ್ವಂ ಭವಿಷ್ಯಸಿ ಭಕ್ತೋ ಮೇ ಜರಾಮರಣವರ್ಜಿತಃ ॥ ೭೩ ॥
ಸಂತಿ ವ್ರತಾನಿ ಭೂಯಾಂಸಿ ನಿಯಮಾಃ ಸಂತ್ಯನೇಕಧಾ ।
ತಪಾಂಸಿ ನಾನಾ ಸಂತ್ಯತ್ರ ಸಂತಿ ದಾನಾನ್ಯನೇಕಶಃ ॥ ೭೪ ॥
ಶ್ರೇಯಸಾಂ ಸಾಧನಾನ್ಯತ್ರ ಪಾಪಘ್ನಾನ್ಯಪಿ ಸರ್ವಥಾ ।
ಪರಂ ಹಿ ಪರಮಶ್ಚೈಷ ನಿಯಮೋ ಯಸ್ತ್ವಯಾ ಕೃತಃ ॥ ೭೫ ॥
ಪರೋ ಹಿ ನಿಯಮಶ್ಚೈಷ ಮಾಂ ವಿಲೋಕ್ಯ ಯದಶ್ಯತೇ ।
ಮಾಮಸಾಲೋಕ್ಯ ಯದ್ಭುಕ್ತಂ ತದ್ಭುಕ್ತಂ ಕೇವಲಂ ತ್ವಘಂ ॥ ೭೬ ॥

---

೭೧. ನಿರ್ವಾಣಸೌಖ್ಯವನ್ನು ಕೊಡುವ ಯೋಗಶಾಸ್ತ್ರವನ್ನು ನಿನಗೆ ಕೊಟ್ಟಿರುವೆನು. ಸಕಲ ಯೋಗಿಗಳ ಮಧ್ಯದಲ್ಲಿಯೂ ನೀನು ಯೋಗಾಚಾರ್ಯನೆಂಬ ಪದವಿಯನ್ನು ಹೊಂದುವವನಾಗು.

೭೨. ಎಲೈ ತಪೋಧನನೆ! ನನ್ನ ಅನುಗ್ರಹದ ಬಲದಿಂದ ನೀನು ಯೋಗಶಾಸ್ತ್ರದಲ್ಲಿರುವ ರಹಸ್ಯವನ್ನೆಲ್ಲ ಯಥಾವತ್ತಾಗಿ ತಿಳಿಯುವೆ. ಅದರಿಂದ ಮೋಕ್ಷವನ್ನೂ ಯಥಾಕಾಲದಲ್ಲಿ ಪಡೆಯುವೆ.

೭೩. ನಂದಿಕೇಶ್ವರ, ಭೃಂಗಿ ಮತ್ತು ಸೋಮನಂದಿಗಳು ಹೇಗೆ ನನ್ನ ಭಕ್ತೋತ್ತಮರಾಗಿರುವರೊ, ಹಾಗೆಯೇ ನೀನೂ ಭಕ್ತೋತ್ತಮನೆನಿಸಿ ಮುಪ್ಪು ಸಾವುಗಳಿಲ್ಲದವನಾಗುವೆ.

೭೪. ಮೋಕ್ಷೋಪಾಯಗಳೆನಿಸಿದ ಅನೇಕ ವ್ರತಗಳಿರುವುವು. ಬಹುವಿಧಗಳಾದ ಇತರ ವ್ರತಗಳೂ ಇರುವುವು. ನಾನಾಪ್ರಕಾರಗಳಾದ ತಪಸ್ಸುಗಳೂ ಇರುವುವು. ಅನೇಕ ದಾನಕ್ರಮಗಳೂ ಹೇಳಲ್ಪಟ್ಟಿರುವುವು.

೭೫. ಇವುಗಳೆಲ್ಲವೂ ಸರ್ವಪ್ರಕಾರದಿಂದಲೂ ಪಾಪಪರಿಹಾರಕಗಳೂ ಶ್ರೇಯಸ್ಸಾಧನಗಳೂ ಆಗಿರುವುದರಲ್ಲಿ ಸಂದೇಹವಿಲ್ಲ. ಆದರೆ ನೀನು ಆಚರಿಸಿರುವ ಈ ನಿಯಮವು ಸರ್ವೋತ್ತಮವಾದುದಾಗಿರುವುದು.

೭೬. ನನ್ನ ದರ್ಶನವನ್ನು ಮಾಡಿಯೇ ಆಹಾರವನ್ನು ಸ್ವೀಕರಿಸಬೇಕೆಂಬ ಈ ನಿಯಮವು ಅತ್ಯುತ್ಕೃಷ್ಟವಾದುದು. ನನ್ನನ್ನು ನೋಡದೆ ಮಾಡಿದ ಊಟವು ಪಾಪ ಭೋಜನವೇ ಸರಿ.

ಅಸಮರ್ಚ್ಯ ಚ ಯೋ ಭುಙ್ಕ್ತೇ ಪತ್ರಪುಷ್ಪಫಲೈರಪಿ ।
ರೇತೋಭಕ್ಷೀ ಭವೇನ್ಮೂಢಃ ಸ ಜನ್ಮಾನ್ಯೇಕವಿಂಶತಿಂ ॥ ೭೭ ॥
ಮಹತೋ ನಿಯಮಸ್ಯಾಸ್ಯ ಭವತಾನುಷ್ಠಿತಸ್ಯ ವೈ ।
ನಾರ್ಹಂತಿ ಷೋಡಶೀಂ ಮಾತ್ರಾಮನ್ಯೇ ನಿಯಮಾ ಯಮಾಃ ॥ ೭೮ ॥
ಅತೋ ಮಚ್ಚರಣಾಭ್ಯಾಶೇ ತ್ವಂ ನಿವತ್ಸ್ಯಸಿ ಸರ್ವಥಾ ।
ಅತೋ ನೈಃಶ್ರೇಯಸೀಂ ಲಕ್ಷ್ಮೀಂ ತತ್ರೈವ ಪ್ರಾಪ್ಸ್ಯಸಿ ಧ್ರುವಂ ॥ ೭೯ ॥
ಜೈಗೀಷವ್ಯೇಶ್ವರಂ ನಾಮ ಲಿಂಗಂ ಕಾಶ್ಯಾಂ ಸುದುರ್ಲಭಂ ।
ತ್ರೀಣಿ ವರ್ಷಾಣಿ ಸಂಸೇವ್ಯ ಲಭೇದ್ಯೋಗಂ ನ ಸಂಶಯಃ ॥ ೮೦ ॥
ಜೈಗೀಷವ್ಯಗುಹಾಂ ಪ್ರಾಪ್ಯ ಯೋಗಾಭ್ಯಸನತತ್ಪರಃ ।
ಷಣ್ಮಾಸೇನ ಲಭೇತ್ಸಿದ್ಧಿಂ ವಾಂಛಿತಂ ಮದನುಗ್ರಹಾತ್ ॥ ೮೧ ॥
ತವ ಲಿಂಗಮಿದಂ ಭಕ್ತೈಃ ಪೂಜನೀಯಂ ಪ್ರಯತ್ನತಃ ।
ವಿಲೋಕ್ಯಾ ಚ ಗುಹಾ ರಮ್ಯಾ ಪರಾಂ ಸಿದ್ಧಿಮಭೀಪ್ಸುಭಿಃ ॥ ೮೨ ॥

---

೭೭. ಯಾವ ಮೂಢಮಾನವನು ನನ್ನ ಪೂಜೆಯನ್ನು ಪತ್ರಗಳಿಂದಾಗಲಿ, ಪುಷ್ಪಗಳಿಂದಾಗಲಿ, ಫಲಗಳಿಂದಾಗಲಿ ಮಾಡದೆ ಭೋಜನವನ್ನು ಮಾಡುವನೊ, ಆ ಮನುಷ್ಯನು ಇಪ್ಪತ್ತೊಂದು ಜನ್ಮಗಳಲ್ಲಿ ರೇತೋಭಕ್ಷಕನಾಗುವನು.

೭೮. ನೀನು ಅನುಷ್ಠಾನಮಾಡಿರುವ ಈ ಮಹಾನಿಯಮದ ಹದಿನಾರನೆಯ ಒಂದು ಭಾಗವನ್ನೂ ಸಹ ಇತರ ಎಲ್ಲ ನಿಯಮಗಳೂ ಇಂದ್ರಿಯ ನಿಗ್ರಹಾದಿ ಸಾಧನಗಳೂ ಸರಿತೂಗಲಾರವು.

೭೯. ಅದರ ಫಲವಾಗಿ ನೀನು ಸರ್ವಕಾಲದಲ್ಲಿಯೂ ನನ್ನ ಪಾದಗಳ ಸಮೀಪದಲ್ಲಿಯೇ ವಾಸಮಾಡುತ್ತಿರುವೆ. ಮತ್ತು ಅಲ್ಲಿಯೇ ಮೋಕ್ಷವೆಂಬ ಶಾಶ್ವತೈಶ್ವರ್ಯವನ್ನೂ ಹೊಂದುವೆ.

೮೦. ಈ ಜೈಗೀಷವ್ಯೇಶ್ವರವೆಂಬ ಲಿಂಗವು ಜನರಿಗೆ ಅತ್ಯಂತ ದುರ್ಲಭವಾಗಿರುವುದು. ಮೂರು ವರ್ಷಗಳವರೆಗೂ ಇದನ್ನು ಎಡಬಿಡದೆ ಸೇವಿಸಲು ಯೋಗಶಾಸ್ತ್ರದ ಸಿದ್ಧಿಯು ಲಭಿಸುವುದರಲ್ಲಿ ಸಂದೇಹವಿಲ್ಲ.

೮೧. ಜೈಗೀಷವ್ಯನಾದ ನೀನು ತಪೋನಿರತನಾಗಿ ನೆಲಸಿದ್ದ ಗುಹೆಯನ್ನು ಸೇರಿ ಯೋಗಾಭ್ಯಾಸದಲ್ಲಿ ನಿರತನಾದ ಮಾನವನು ಆರು ತಿಂಗಳುಗಳಲ್ಲಿಯೇ ನನ್ನ ಅನುಗ್ರಹದಿಂದ ಸಕಲ ಇಷ್ಟಾರ್ಥಗಳ ಸಿದ್ಧಿಯನ್ನೂ ಪಡೆಯುವನು.

೮೨. ಕಾಮ್ಯಸಿದ್ಧಿಗಳನ್ನಪೇಕ್ಷಿಸುವ ನರರೆಲ್ಲರೂ ಪ್ರಯತ್ನಪೂರ್ವಕವಾಗಿ ಈ ನಿನ್ನ ಹೆಸರಿನ ಲಿಂಗವನ್ನು ಪೂಜಿಸಬೇಕು ಮತ್ತು ಮನೋಹರವಾದ ನಿನ್ನ ಗುಹೆಯನ್ನು ನೋಡಬೇಕು.

ತತ್ರ ಜ್ಯೈಷ್ಠೇಶ್ವರಕ್ಷೇತ್ರೇ ತ್ವಲ್ಲಿಂಗಂ ಸರ್ವಸಿದ್ಧಿದಂ ।
ನಾಶಯೇದಘಸಂಘಾನಿ ದೃಷ್ಟಂ ಸ್ಪೃಷ್ಟಂ ಸಮರ್ಚಿತಂ ॥ ೮೩ ॥
ಅಸ್ಮಿನ್ಜ್ಯೇಷ್ಠೇಶ್ವರಕ್ಷೇತ್ರೇ ಸಂಭೋಜ್ಯ ಶಿವಯೋಗಿನಃ ।
ಕೋಟಿಭೋಜ್ಯಫಲಂ ಸಂಯುಗೇಕ್ಕೈಕಪರಿಸಂಖ್ಯಯಾ ॥ ೮೪ ॥
ಜೈಗೀಷವ್ಯೇಶ್ವರಂ ಲಿಂಗಂ ಗೋಪನೀಯಂ ಪ್ರಯತ್ನತಃ ।
ಕಲೌ ಕಲುಷಬುದ್ಧೀನಾಂ ಪುರತಶ್ಚ ವಿಶೇಷತಃ ॥ ೮೫ ॥
ಕರಿಷ್ಯಾಮ್ಯತ್ರ ಸಾನ್ನಿಧ್ಯಮಸ್ಮಿನ್ಲಿಂಗೇ ತಪೋಧನ ।
ಯೋಗಸಿದ್ಧಿಪ್ರದಾನಾಯ ಸಾಧಕೇಭ್ಯಃ ಸದೈವ ಹಿ ॥ ೮೬ ॥
ಮುನೇ ಶೃಣು ಮಹಾಭಾಗ ಜೈಗೀಷವ್ಯಾಪರಂ ವರಂ ।
ತ್ವಯೇದಂ ಯತ್ಕೃತಂ ಸ್ತೋತ್ರಂ ಯೋಗಸಿದ್ಧಿಕರಂ ಪರಂ ॥ ೮೭ ॥
ಮಹಾಪಾಪೌಘಶಮನಂ ಮಹಾಪುಣ್ಯಪ್ರವರ್ಧನಂ ।
ಮಹಾಭೀತಿಪ್ರಶಮನಂ ಮಹಾಭಕ್ತಿವಿವರ್ಧನಂ ॥ ೮೮ ॥
ಏತತ್ಸ್ತೋತ್ರಜಪಾತ್ಪುಂಸಾಮಸಾಧ್ಯಂ ನೈವ ಕಿಂಚನ ।
ತಸ್ಮಾತ್ಸರ್ವಪ್ರಯತ್ನೇನ ಜಪನೀಯಂ ಸುಸಾಧಕೈಃ ॥ ೮೯ ॥

---

೮೩. ಈ ಜ್ಯೇಷ್ಠೇಶ್ವರನ ಕ್ಷೇತ್ರದಲ್ಲಿ ನೀನು ಪ್ರತಿಷ್ಠೆಮಾಡಿರುವ ಲಿಂಗವು ಸಕಲ ಸಿದ್ಧಿಗಳನ್ನೂ ಕೈಗೂಡಿಸುವುದು. ಮತ್ತು ದರ್ಶನ, ಸ್ಪರ್ಶ, ಸಮರ್ಚನೆಗಳನ್ನು ಮಾಡಿದ ಶ್ರದ್ಧಾಳುಗಳ ಪಾಪಕೋಟಿಗಳನ್ನೆಲ್ಲ ನಾಶಗೊಳಿಸುವುದು.

೮೪. ಈ ಜ್ಯೇಷ್ಠೇಶ್ವರಕ್ಷೇತ್ರದಲ್ಲಿ ಶಿವಭಕ್ತರಿಗೆ ಮೃಷ್ಟಾನ್ನವನ್ನು ಭೋಜನ ಮಾಡಿಸಲು ಒಬ್ಬೊಬ್ಬನ ಭೋಜನದಿಂದಲೂ ಒಂದು ಕೋಟಿ ಸಂಖ್ಯೆಯ ಬ್ರಾಹ್ಮಣರಿಗೆ ಉಣಬಡಿಸಿದ ಉತ್ತಮ ಫಲವುಂಟಾಗುವುದು.

೮೫. ಕಲಿಯುಗದಲ್ಲಿ ಕಲ್ಮಷಚಿತ್ತರಾದ ಜನರಿಗೆ ಕಾಣದಂತೆ ವಿಶೇಷವಾಗಿ ಈ ಜೈಗೀಷವ್ಯೇಶ್ವರಲಿಂಗವನ್ನು ಪ್ರಯತ್ನದಿಂದ ಗೋಪ್ಯಗೊಳಿಸಬೇಕು.

೮೬. ತಪೋಧನನೆ! ಇಲ್ಲಿ ಬರುವ ಸಾಧಕರಿಗೆ ನಿತ್ಯವೂ ಯೋಗಸಿದ್ಧಿಯನ್ನು ಕೊಡುವವನಾಗಿ ಈ ನಿನ್ನ ಲಿಂಗದಲ್ಲಿ ನನ್ನ ಸಾನ್ನಿಧ್ಯವಿಶೇಷವನ್ನಿಟ್ಟಿರುವೆನು.

೮೭. ಮಹಾತ್ಮನಾದ ಜೈಗೀಷವ್ಯನೆ! ನಿನಗೆ ಇನ್ನೂ ಒಂದು ವರವನ್ನು ಕೊಡುವೆನು, ಕೇಳು. ನೀನು ಮಾಡಿರುವ ಈ ಸ್ತೋತ್ರವು ಸರ್ವೋತ್ತಮವೂ ಯೋಗಸಿದ್ಧಿಪ್ರದವೂ ಆಗಿರುವುದು.

೮೮. ಮಹಾ ಪಾತಕಗಳ ಸಮೂಹವನ್ನೂ ನಾಶಗೊಳಿಸಿ ಉತ್ತಮವಾದ ಪುಣ್ಯವನ್ನು ಅಭಿವೃದ್ಧಿಪಡಿಸುವುದು. ಅಜೇಯಗಳಾದ ಭಯಸ್ಥಾನಗಳನ್ನು ಶಮನಮಾಡಿ ಏಕಾಗ್ರ ಭಕ್ತಿಯನ್ನು ಹೆಚ್ಚಿಸುವುದು.

೮೯. ಈ ಸ್ತೋತ್ರವನ್ನು ಜಪಿಸುವ ಮನುಷ್ಯರಿಗೆ ಅಸಾಧ್ಯವೆಂಬುದು

ಇತಿ ದತ್ವಾ ವರಂ ತಸ್ಮೈ ಸ್ಮರಾರಿಃ ಸ್ಮೇರಲೋಚನಃ ।
ದದರ್ಶ ಬ್ರಾಹ್ಮಣಾಂಸ್ತತ್ರ ಸಮೇತಾನ್ ಕ್ಷೇತ್ರವಾಸಿನಃ ॥ ೯೦ ॥

ಸ್ಕಂದ ಉವಾಚ:—

ನಿಶಮ್ಯಾಖ್ಯಾನಮತುಲಮೇತತ್ಪ್ರಾಜ್ಞಃ ಪ್ರಯತ್ನತಃ ।
ನಿಷ್ಪಾಪೋ ಜಾಯತೇ ಮರ್ತ್ಯೋ ನೋಪಸರ್ಗೈಃ ಪ್ರಬಾಧ್ಯತೇ ॥ ೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಜ್ಯೈಷ್ಠೇಶಾಖ್ಯಾನವರ್ಣನಂ"
ನಾಮ ತ್ರಿಷಷ್ಠಿತಮೋಽಧ್ಯಾಯಃ

---

ಯಾವುದೂ ಇಲ್ಲವು. ಆದುದರಿಂದ ಸಾಧಕರಲ್ಲಿ ಉತ್ತಮರಾದವರು ಅತ್ಯವಶ್ಯಕವಾಗಿ ಇದನ್ನು ಜಪಿಸುತ್ತಿರಬೇಕು.

೯೦. ಪ್ರಸನ್ನಮುಖನೂ ಮನ್ಮಥವೈರಿಯೂ ಆದ ಮಹಾದೇವನು ಇಂತು ಆ ಜೈಗೀಷವ್ಯನಿಗೆ ವರಗಳನ್ನಿತ್ತು ಅಲ್ಲಿ ನೆರೆದಿದ್ದ ಕ್ಷೇತ್ರವಾಸಿಗಳಾದ ಬ್ರಾಹ್ಮಣರನ್ನು ನೋಡುವವನಾದನು.

೯೧. ಸ್ಕಂದನು ಹೇಳುತ್ತಾನೆ:—ಪ್ರಾಜ್ಞನಾದವನು ಅಪ್ರತಿಮವಾದ ಈ ಆಖ್ಯಾನವನ್ನು ಕೇಳಲು ಪಾಪರಹಿತನಾಗುವುದೇ ಅಲ್ಲದೆ ಆಧ್ಯಾತ್ಮಿಕಾದಿ ತಾಪತ್ರಯಗಳಿಂದಲೂ ಎಂದಿಗೂ ತಿರಸ್ಕೃತನಾಗುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಜ್ಯೈಷ್ಠೇಶಾಖ್ಯಾನವರ್ಣನ"ವೆಂಬ ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಷ್ಷಷ್ಟಿತಮೋಽಧ್ಯಾಯಃ

## ಕ್ಷೇತ್ರರಹಸ್ಯಕಥನಂ

ಅಗಸ್ತ್ಯ ಉವಾಚ :—

ದೃಷ್ಟ್ವಾ ಭೂದೇವತಾಃ ಶಂಭುಂ ಕಿಮೂಚುರ್ಯೂಯಂ ಷಡಾನನ ।
ಕಾನಿ ಕಾನಿ ಚ ಲಿಂಗಾನಿ ತತ್ರ ತಾನ್ಯಪಿ ಚಕ್ಷ್ವ ಮೇ ॥ ೧ ॥
ಜ್ಯೇಷ್ಠಸ್ಥಾನೇ ಮಹಾಪುಣ್ಯೇ ದೇವದೇವಸ್ಯ ವಲ್ಲಭೇ ।
ಆಶ್ಚರ್ಯಂ ಕಿಮಭೂತ್ತತ್ರ ತದಾಚಕ್ಷ್ವ ಷಡಾನನ ॥ ೨ ॥

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಯಥಾಪೃಚ್ಛಿ ಭವತಾ ತದ್ಬ್ರವೀಮ್ಯಹಂ ।
ಮಂದರಾದ್ರಿಂ ಯದಾ ದೇವೋ ಗತವಾನ್ಬ್ರಹ್ಮಗೌರವಾತ್ ॥ ೩ ॥
ತದಾ ನಿರಾಶ್ರಯಾಃ ವಿಪ್ರಾಃ ಕ್ಷೇತ್ರಸನ್ಯಾಸಿನೋಽನಘಾಃ ।
ಉಪಾಕೃತಾಶ್ಚಾವಿರತಂ ಮಹಾಕ್ಷೇತ್ರಪ್ರತಿಗ್ರಹಾತ್ ॥ ೪ ॥
ಖಾತಂ ಖಾತಂ ಚ ದಂಡಾಗ್ರೈರ್ಭೂಮಿಂ ಕಂದಾದಿವೃತ್ತಯಃ ।
ಚಕ್ರುಃ ಪುಷ್ಕರಣೀಂ ರಮ್ಯಾಂ ದಂಡಖಾತಾಭಿಧಾಂ ಮುನೇ ॥ ೫ ॥

---

## ಕನ್ನಡದ ಅನುವಾದ

### ಕ್ಷೇತ್ರರಹಸ್ಯಕಥನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ಷಣ್ಮುಖನೆ! ಆ ಬ್ರಾಹ್ಮಣರೆಲ್ಲರೂ ಪರಮಶಿವನನ್ನು ಕಂಡು ಏನನ್ನು ಹೇಳಿದರು? ಮತ್ತು ಆ ಕ್ಷೇತ್ರದಲ್ಲಿ ಯಾವ ಯಾವ ಲಿಂಗಗಳು ಪ್ರತಿಷ್ಠಿತಗಳಾಗಿರುವುವು? ಅವುಗಳನ್ನೂ ನನಗೆ ವಿಸ್ತರಿಸಿ ಹೇಳು.

೨. ಓ ಕುಮಾರಸ್ವಾಮಿಯೆ! ಮಹಾಪುಣ್ಯಭೂಮಿಯೂ ಪರಮೇಶ್ವರನಿಗೆ ಅತ್ಯಂತ ಪ್ರೀತ್ಯಾಸ್ಪದವಾದುದೂ ಆದ ಜ್ಯೇಷ್ಠಸ್ಥಾನದಲ್ಲಿ ಯಾವ ಆಶ್ಚರ್ಯವು ನಡೆಯಿತೆಂಬುದನ್ನೂ ನನಗೆ ತಿಳಿಸುವವನಾಗು.

೩–೪. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ನೀನು ಕೇಳಿದಂತೆಯೇ ಅಲ್ಲಿ ನಡೆದ ಸಮಸ್ತವೃತ್ತಾಂತವನ್ನೂ ವಿವರಿಸುವೆನು, ಕೇಳು. ಬ್ರಹ್ಮನ ಮಾತಿನಲ್ಲಿಯ ಗೌರವದಿಂದ ಮಹೇಶ್ವರನು ಯಾವಾಗ ಮಂದರಾಚಲವನ್ನು ಕುರಿತು ಪ್ರಯಾಣಮಾಡಿದನೊ, ಆಗ ಕ್ಷೇತ್ರಸನ್ಯಾಸಿಗಳೂ, ನಿಷ್ಪಾಪರಾದ ಬ್ರಾಹ್ಮಣರೂ ಎಲ್ಲರೂ ಆಶ್ರಯರಹಿತರಾಗಿ ಸಂತತವಾಗಿ ತಾವು ಮಹಾಕ್ಷೇತ್ರದಲ್ಲಿ ಮಾಡುತ್ತಿದ್ದ ಪ್ರತಿಗ್ರಹದಿಂದಲೂ ವಿಮುಖರಾಗಿ ವೈರಾಗ್ಯಶಾಲಿಗಳಾದರು.

೫. ಆಹಾರಕ್ಕಾಗಿ ಭೂಮಿಯನ್ನು ತಮ್ಮ ದಂಡಗಳಿಂದ ನಿತ್ಯವೂ ಬಗೆದು

ತತ್ತೀರ್ಥಂ ಪರಿತಃ ಸ್ಥಾಪ್ಯ ಮಹಾಲಿಂಗಾನ್ಯನೇಕಶಃ ।
ಮಹೇಶಾರಾಧನಪರಾಸ್ತಪಶ್ಚಕ್ರುಃ ಪ್ರಯತ್ನತಃ ॥ ೬ ॥
ವಿಭೂತಿಧಾರಿಣೋ ನಿತ್ಯಂ ನಿತ್ಯಂ ರುದ್ರಾಕ್ಷಧಾರಿಣಃ ।
ಲಿಂಗಪೂಜಾರತಾ ನಿತ್ಯಂ ಶತರುದ್ರಿಯಜಾಪಿನಃ ॥ ೭ ॥
ತೇ ಶ್ರುತ್ವಾ ದೇವದೇವಸ್ಯ ಪುನರಾಗಮನಂ ಮುನೇ ।
ತಪಃಕೃಶಾ ಅತಿತರಾಮಾಸುರಾನಂದಮೇದುರಾಃ ॥ ೮ ॥
ದ್ವಿಜಾಃ ಪಂಚಸಹಸ್ರಾಣಿ ಚರಂತೋ ವಿಪುಲಂ ತಪಃ ।
ದಂಡಖಾತಾನ್ಮಹಾತೀರ್ಥಾದಾಜಗ್ಮುರ್ದೇವದರ್ಶನೇ ॥ ೯ ॥
ತೀರ್ಥಾನ್ಮಂದಾಕಿನೀನಾಮ್ನೋ ದ್ವಿಜಾಃ ಪಾಶುಪತವ್ರತಾಃ ।
ಶಿವೈಕಾರಾಧನಪರಾಃ ಸಮೇತಾ ಅಯುತೋನ್ಮಿತಾಃ ॥ ೧೦ ॥
ಹಂಸತೀರ್ಥಾತ್ಪರಿಪ್ರಾಪ್ತಾ ಅಯುತಂ ತ್ರಿಶತೋತ್ತರಂ ।
ಶತಂ ದುರ್ವಾಸಸಸ್ತೀರ್ಥಾದೇಕಾದಶಶತಾಧಿಕಂ ॥ ೧೧ ॥

---

ದಂಡಖಾತವೆಂಬ ಹೆಸರಿನ ಒಂದು ಉತ್ತಮವಾದ ಸರೋವರವನ್ನೇ ನಿರ್ಮಾಣ ಮಾಡಿದರು.

೬. ಆ ತೀರ್ಥದ ಸುತ್ತಲೂ ಅಸಂಖ್ಯಾಕಗಳಾದ ಮಹಾಲಿಂಗಗಳನ್ನು ಸ್ಥಾಪಿಸಿ ಅವರು ಮಹೇಶ್ವರನ ಆರಾಧನೆಯಲ್ಲಿಯೇ ಆಸಕ್ತಿಯುಳ್ಳವರಾಗಿ ದೇಹವನ್ನು ದಂಡಿಸುತ್ತ ಉಗ್ರವಾದ ತಪಸ್ಸನ್ನಾಚರಿಸಿದರು.

೭. ಪ್ರತಿನಿತ್ಯದಲ್ಲಿಯೂ ವಿಭೂತಿಯನ್ನು ಧರಿಸಿಕೊಂಡು, ರುದ್ರಾಕ್ಷಮಾಲೆಗಳಿಂದಲಕೃತರಾಗಿ, ಶಿವಲಿಂಗದ ಪೂಜೆಯಲ್ಲಿಯೇ ನಿರತರಾಗಿ ಸಂತತವೂ ಶತರುದ್ರೀಯವೇ ಮುಂತಾದ ಮಂತ್ರಗಳನ್ನು ಜಪಿಸುತ್ತಿದ್ದರು.

೮. ಅಗಸ್ತ್ಯಮಹರ್ಷಿಯೆ! ಅವರೆಲ್ಲರೂ ಮಹೇಶ್ವರನು ಕಾಶೀಕ್ಷೇತ್ರಕ್ಕೆ ಹಿಂದಿರುಗುವನೆಂಬ ವಾರ್ತೆಯನ್ನುಕೇಳಿ ತಪಸ್ಸಿನಿಂದ ಅತ್ಯಂತ ಕೃಶಾಂಗರಾಗಿದ್ದರೂ ಆನಂದಭರಿತವಾದ ಮನಸ್ಸುಳ್ಳವರಾದರು.

೯. ಇಂತಹ ಅತ್ಯಂತದುಶ್ಚರವಾದ ತಪಸ್ಸನ್ನು ಮಾಡುತ್ತಿದ್ದ ಐದು ಸಾವಿರ ಬ್ರಾಹ್ಮಣೋತ್ತಮರೂ ಮಹಾದೇವನ ದರ್ಶನದ ಲಾಭವನ್ನು ಪಡೆಯಲು ಮಹಾತೀರ್ಥವಾದ ದಂಡಖಾತದಿಂದ ಪ್ರಾಪ್ತರಾದರು.

೧೦. ಮಂದಾಕಿನೀ ತೀರ್ಥದಿಂದ ಶಿವದೀಕ್ಷೆಯನ್ನು ಕೈಗೊಂಡವರೂ, ಶಿವಾರಾಧನದಲ್ಲಿಯೇ ತತ್ಪರರಾದವರೂ, ಹತ್ತುಸಾವಿರ ಸಂಖ್ಯೆಯುಳ್ಳವರೂ ಆದ ದ್ವಿಜಶ್ರೇಷ್ಠರು ಬಂದು ಸೇರಿದರು.

೧೧. ಹಂಸತೀರ್ಥದಿಂದ ಹತ್ತುಸಾವಿರದ ಮುನ್ನೂರುಜನರೂ, ದೂರ್ವಾಸತೀರ್ಥದಿಂದ ಒಂದುಸಾವಿರದ ಇನ್ನೂರು ಬ್ರಾಹ್ಮಣರೂ ಸಂಪ್ರಾಪ್ತರಾದರು.

ಮತ್ಸ್ಯೋದರ್ಯಾಃ ಪರಾಃ ಪೇತುಃ ಸಹಸ್ರಾಣಿ ಷಡೇವಹಿ ।
ಕಪಾಲಮೋಚನಾತ್ಸಪ್ತಶತಾನ್ಯಭ್ಯಾಗತಾಃ ದ್ವಿಜಾಃ ॥ ೧೨ ॥
ಋಣಮೋಚನತಸ್ತೀರ್ಥಾತ್ಸಹಸ್ರಂ ದ್ವಿಶತಾಧಿಕಂ ।
ವೈತರಣ್ಯಾ ಅಪಿ ಮುನೇ ದ್ವಿಜಾನಾಮಯುತಾರ್ಧಕಂ ॥ ೧೩ ॥
ತತಃ ಪೃಥೂದಕಾತ್ಕುಂಡಾತ್ಪೃಥುನಾ ಪರಿಖಾನಿತಾತ್ ।
ಅಯಾಸಿಷುರ್ದ್ವಿಜಾನಾಂ ಚ ಶತಾನ್ಯೇವ ತ್ರಯೋದಶ ॥ ೧೪ ॥
ತಥೈವಾಪ್ಸರಸಃ ಕುಂಡಾನ್ಮೇನಕಾಖ್ಯಾಚ್ಛತದ್ವಯಂ ।
ಊರ್ವಶೀಕುಂಡತಃ ಪ್ರಾಪ್ತಾಃ ಸಹಸ್ರಂ ದ್ವಿಶತಾಧಿಕಂ ॥ ೧೫ ॥
ತಥೈರಾವತಕುಂಡಾಚ್ಚ ಬ್ರಾಹ್ಮಣಾಸ್ತ್ರಿಶತಾನಿ ಚ ।
ಗಾಂಧರ್ವಾತ್ಸರಸಃ ಸಪ್ತಶತಾನಿ ದ್ವಿಶತಾನಿ ಚ ॥ ೧೬ ॥
ವೃಷೇಶತೀರ್ಥಾದಾಜಗ್ಮುರ್ನವತಿಃ ಸ ಶತತ್ರಯಾ ।
ಯಕ್ಷಿಣೀಕುಂಡತಃ ಪ್ರಾಪ್ತಾಃ ಸಹಸ್ರಂ ತ್ರಿಂಶತೋತ್ತರಂ ॥ ೧೭ ॥
ಲಕ್ಷ್ಮೀತೀರ್ಥಾತ್ಪರಂ ಜಗ್ಮುಃ ಷೋಡಶೈವ ಶತಾನಿ ಚ ।
ಪಿಶಾಚಮೋಚನಾತ್ಸಪ್ತ ಸಹಸ್ರಾಣಿ ದ್ವಿಜೋತ್ತಮಾಃ ॥ ೧೮ ॥
ಪಿತೃಕುಂಡಾಚ್ಛತಂ ಸಾಗ್ರಂ ಧ್ರುವತೀರ್ಥಾಚ್ಛತಾನಿ ಷಟ್ ।
ಮಾನಸಾಖ್ಯಾಚ್ಚ ಸರಸೋ ದ್ವಿಶತೀ ಸ ಶತತ್ರಯಾ ॥ ೧೯ ॥

---

೧೨. ಮತ್ಸ್ಯೋದರೀತೀರ್ಥದಿಂದ ಆರುಸಾವಿರ ಜನರು ಬಂದಿಳಿದರು. ಕಪಾಲಮೋಚನದಿಂದ ಏಳುನೂರು ದ್ವಿಜರು ಬಂದವರಾದರು.

೧೩. ಋಣಮೋಚನತೀರ್ಥದಿಂದ ಒಂದುಸಾವಿರದ ಇನ್ನೂರು ಜನರೂ, ವೈತರಣೀತೀರ್ಥದಿಂದ ಐದುಸಾವಿರ ಬ್ರಾಹ್ಮಣರೂ ಬಂದರು.

೧೪. ಬಳಿಕ ಪೃಥೂದಕಕುಂಡದಿಂದ ಒಂದುಸಾವಿರದ ಮುನ್ನೂರು ದ್ವಿಜರು ಬಂದು ಸೇರಿದರು. ಆ ಕುಂಡವು ಪೃಥುಮಹಾರಾಜನಿಂದ ಮಾಡಲ್ಪಟ್ಟುದು.

೧೫. ಮೇನಕಾನಾಮಕವಾದ ಅಪ್ಸರಃಕುಂಡದಿಂದ ಇನ್ನೂರು ಜನರೂ, ಊರ್ವಶೀಕುಂಡದಿಂದ ಒಂದುಸಾವಿರದ ಇನ್ನೂರು ಜನರೂ ಪ್ರಾಪ್ತರಾದರು.

೧೬. ಐರಾವತಕುಂಡದಿಂದ ಮುನ್ನೂರು ಬ್ರಾಹ್ಮಣರೂ, ಗಾಂಧರ್ವ ಸರೋವರದಿಂದ ಒಂಬೈನೂರು ಜನರೂ ಬಂದರು.

೧೭. ವೃಷಭೇಶ್ವರತೀರ್ಥದಿಂದ ಮುನ್ನೂರತೊಂಭತ್ತು ಜನರೂ, ಯಕ್ಷಿಣೀಕುಂಡದಿಂದ ಒಂದು ಸಾವಿರದ ಮುನ್ನೂರು ಬ್ರಾಹ್ಮಣರೂ ಬಂದರು.

೧೮. ಲಕ್ಷ್ಮೀತೀರ್ಥದಿಂದ ಒಂದು ಸಾವಿರದ ಆರುನೂರು ಉತ್ತಮ ದ್ವಿಜರೂ, ಪಿಶಾಚಮೋಚನತೀರ್ಥದಿಂದ ಏಳುಸಾವಿರ ಬ್ರಾಹ್ಮಣಶ್ರೇಷ್ಠರೂ ಆಗಮಿಸಿದರು.

೧೯. ಪಿತೃಕುಂಡದಿಂದ ಒಂದನೂರ ಇಪ್ಪತ್ತೈದು ಜನರೂ, ಧ್ರುವತೀರ್ಥ

ಬ್ರಾಹ್ಮಣಾ ವಾಸುಕಿಹ್ರದಾತ್ಸಹಸ್ರಾಣಿ ದಶೈವ ತು ।
ತಥೈವಾಷ್ಟಾಶತಂ ದ್ರಷ್ಟುಂ ಜಾನಕೀಕುಂಡತೋ ದ್ವಿಜಾಃ ॥ ೨೦ ॥
ಕಾಶೀನಾಥಮನುಪ್ರಾಪ್ತಾಃ ಪರಮಾನಂದದಾಯಿನಂ ।
ತಥಾ ಗೌತಮಕುಂಡಾಚ್ಚ ಶತಾನಿ ನವ ಚಾಗತಾಃ ॥ ೨೧ ॥
ತೀರ್ಥಾದ್ದುರ್ಗತಿಸಂಹರ್ತುರ್ಬ್ರಾಹ್ಮಣಾಃ ಪ್ರತಿಪೇದಿರೇ ।
ಏಕಾದಶಶತಾನ್ಯೇವ ದ್ರಷ್ಟುಂ ದೇವಮುಮಾಪತಿಂ ॥ ೨೨ ॥
ಅಸಿಸಂಭೇದಮಾರಭ್ಯ ಗಂಗಾತೀರಸ್ಥಿತಾ ದ್ವಿಜಾಃ ।
ಆಸಂಗಮೇಶ್ವರಾತ್ತತ್ರ ಪರಿಪ್ರಾಪ್ತಾ ಘಟೋದ್ಭವ ॥ ೨೩ ॥
ಅಷ್ಟಾದಶಸಹಸ್ರಾಣಿ ತಥಾ ಪಂಚಶತಾನ್ಯಪಿ ।
ಬ್ರಾಹ್ಮಣಾಃ ಪಂಚಪಂಚಾಶದ್ಗಂಗಾತೀರಾತ್ ಸಮಾಗತಾಃ ॥ ೨೪ ॥
ಸಾರ್ದ್ರದೂರ್ವಾಕ್ಷತಕರೈಃ ಸಪುಷ್ಪಫಲಪಾಣಿಭಿಃ ।
ಸುಗಂಧಮಾಲ್ಯಹಸ್ತೈಶ್ಚ ಬ್ರಾಹ್ಮಣೈರ್ಜಯವಾದಿಭಿಃ ॥ ೨೫ ॥
ಸ್ತುತೋ ಮಂಗಲಸೂಕ್ತೈಶ್ಚ ಪ್ರಣತಶ್ಚ ಪುನಃ ಪುನಃ ।
ತೇಭ್ಯೋ ದತ್ತಾಭಯಃ ಶಂಭುಃ ಪಪ್ರಚ್ಛ ಕುಶಲಂ ಮುದಾ ॥ ೨೬ ॥

---

ದಿಂದ ಆರುನೂರು ಜನರೂ, ಮಾನಸವೆಂಬ ಸರೋವರದಿಂದ ಐನೂರು ಬ್ರಾಹ್ಮಣರೂ ಬಂದು ಸೇರಿದರು.

೨೦. ವಾಸುಕಿತೀರ್ಥದಿಂದ ಹತ್ತುಸಾವಿರ ಬ್ರಾಹ್ಮಣರೂ, ಜಾನಕೀಕುಂಡದಿಂದ ಪರಮೇಶ್ವರನನ್ನು ನೋಡಲು ಎಂಟುನೂರು ಜನರೂ ಪ್ರಾಪ್ತರಾದರು.

೨೧. ಹಾಗೆಯೇ ಗೌತಮಕುಂಡದಿಂದ ಒಂಭೈನೂರು ಬ್ರಾಹ್ಮಣರು ಪರಮಾನಂದಕಾರಕನಾದ ಕಾಶೀನಾಥನನ್ನು ನೋಡಲು ಪ್ರಾಪ್ತರಾದರು.

೨೨. ದೇವೇಶ್ವರನಾದ ಪಾರ್ವತೀಪತಿಯನ್ನು ನೋಡಲು ದುರ್ಗತಿ ಸಂಹಾರಕವೆಂಬ ತೀರ್ಥದಿಂದ ಒಂದು ಸಾವಿರದ ಒಂದು ನೂರು ಬ್ರಾಹ್ಮಣರು ನೆರೆದರು.

೨೩. ಘಟಜನ್ಮನಾದ ಅಗಸ್ತ್ಯನೆ! ಅಸಿಗಂಗಾಸಂಗಮವನ್ನು ಮೊದಲು ಮಾಡಿಕೊಂಡು ಸಂಗಮೇಶ್ವರಕ್ಷೇತ್ರದವರೆವಿಗೂ ಗಂಗಾನದಿಯ ತೀರಗಳಲ್ಲಿ ವಾಸಮಾಡುತ್ತಿದ್ದ ದ್ವಿಜರೆಲ್ಲರೂ ಆ ಮಹೋತ್ಸವವನ್ನು ನೋಡಲು ಆಗಮಿಸಿದರು.

೨೪. ಇಂತು ಗಂಗಾತೀರಪ್ರದೇಶಗಳಿಂದ ಹದಿನೆಂಟು ಸಾವಿರದ ಏಳು ನೂರ ಐವತ್ತು ಬ್ರಾಹ್ಮಣರು ಅಲ್ಲಿ ಪ್ರಾಪ್ತರಾದರು.

೨೫–೨೬. ಆರ್ದ್ರಗಳಾದ ದೂರ್ವಾಕ್ಷತೆಗಳನ್ನೂ, ಪುಷ್ಪಫಲಾದಿಗಳನ್ನೂ, ಸುಗಂಧಯುಕ್ತಗಳಾದ ಮಾಲೆಗಳನ್ನೂ ಕೈಗಳಲ್ಲಿ ಹಿಡಿದು, ಜಯಕಾರಗಳನ್ನು

ತತಸ್ತೇ ಬ್ರಾಹ್ಮಣಾಃ ಪ್ರೋಚುಃ ಪ್ರಬದ್ಧಕರಸಂಪುಟಾಃ ।
ಕ್ಷೇತ್ರೇ ನಿವಸತಾಂ ನಾಥ ಸದಾ ನಃ ಕುಶಲೋದಯಃ ॥ ೨೭ ॥
ವಿಶೇಷತಃ ಕೃತೋಽಸ್ಮಾಭಿಃ ಸಾಕ್ಷಾನ್ನಯನಗೋಚರಃ ।
ತ್ವಂ ಯತ್ಸ್ವರೂಪಂ ಶ್ರುತಯೋ ನ ವಿದುಃ ಪರಮಾರ್ಥತಃ ॥ ೨೮ ॥
ಸದೈವಾಕುಶಲಂ ತೇಷಾಂ ಯೇ ತ್ವತ್ಕ್ಷೇತ್ರಪರಾಙ್ಮುಖಾಃ ।
ಚತುರ್ದಶಾಪಿ ವೈ ಲೋಕಾಸ್ತೇಷಾಂ ನಿತ್ಯಂ ಪರಾಙ್ಮುಖಾಃ ॥ ೨೯ ॥
ಯೇಷಾಂ ಹೃದಿ ಸದೈವಾಸ್ತೇ ಕಾಶೀ ತ್ವಾಶೀವಿಷಾಂಗದ ।
ಸಂಸಾರಾಶೀವಿಷವಿಷಂ ನ ತೇಷಾಂ ಪ್ರಭವೇತ್ಕ್ವಚಿತ್ ॥ ೩೦ ॥
ಗರ್ಭರಕ್ಷಾಮಣಿರ್ಮಂತ್ರಃ ಕಾಶೀವರ್ಣದ್ವಯಾತ್ಮಕಃ ।
ಯಸ್ಯ ಕಂಠೇ ತ್ವಯಾ ತಿಷ್ಠೇತ್ತಸ್ಯಾಕುಶಲತಾ ಕುತಃ ॥ ೩೧ ॥
ಸುಧಾಂ ಪಿಬತಿ ಯೋ ನಿತ್ಯಂ ಕಾಶೀವರ್ಣದ್ವಯಾತ್ಮಿಕಾಂ ।
ಸ ನೈರ್ಜರೀಂ ದಶಾಂ ಹಿತ್ವಾ ಸುಧೈವ ಪರಿಜಾಯತೇ ॥ ೩೨ ॥

---

ಮಾಡುತ್ತಿರುವ ಬ್ರಾಹ್ಮಣರು ಮಂಗಳಸೂಕ್ತಗಳಿಂದ ಸ್ತೋತ್ರಮಾಡುತ್ತ ಮತ್ತೆ ಮತ್ತೆ ನಮಸ್ಕರಿಸುತ್ತಿರಲು ಮಹೇಶ್ವರನು ಸಂತೋಷದಿಂದ ಅವರಿಗೆ ಅಭಯವನ್ನಿತ್ತು ಕುಶಲಪ್ರಶ್ನೆಯನ್ನು ಮಾಡುತ್ತಿದ್ದನು.

೨೭. ಆಗ ಬ್ರಾಹ್ಮಣರೆಲ್ಲರೂ ಹಣೆಗಳಲ್ಲಿ ಕೈಗಳನ್ನು ಜೋಡಿಸಿಕೊಂಡು "ಸ್ವಾಮಿಯೆ! ನಮಗೆ ಯಾವಾಗಲೂ ಕುಶಲವನ್ನುಂಟುಮಾಡುತ್ತ ನೀನು ಈ ಕ್ಷೇತ್ರದಲ್ಲಿಯೇ ವಾಸಿಸುತ್ತಿರು" ಎಂಬುದಾಗಿ ಪ್ರಾರ್ಥಿಸಿದರು.

೨೮. ನಿನ್ನ ಯಾವ ರೂಪವನ್ನು ವೇದಗಳೂ ಕೂಡ ಯಥಾಸ್ಥಿತಿಯಾಗಿ ತಿಳಿಯಲಾರವೊ, ಆ ರೂಪದಿಂದಲೇ ನೀನು ನಮ್ಮ ವಿಶೇಷ ತಪಸ್ಸಿನ ಫಲವಾಗಿ ಇಂದು ಕಣ್ಣುಗಳೆದುರಿಗೆ ಸಾಕ್ಷಾತ್ಕರಿಸಿರುವೆ.

೨೯. ಯಾರು ನಿನ್ನ ಈ ಕ್ಷೇತ್ರದಿಂದ ಪರಾಙ್ಮುಖರಾಗಿರುವರೊ, ಅವರಿಗೆ ಯಾವಾಗಲೂ ದುಃಖಪರಂಪರೆಯೇ ಉಂಟಾಗುವುದು. ಮತ್ತು ಹದಿನಾಲ್ಕು ಲೋಕಗಳ ನಿವಾಸಿಗಳೂ ಸಹ ಅವರಿಂದ ಪರಾಙ್ಮುಖರಾಗುವರು.

೩೦. ಸರ್ಪಗಳನ್ನೇ ವಲಯಗಳಾಗಿ ಧರಿಸಿದ ಮಹೇಶ್ವರನೆ! ಯಾರ ಹೃದಯದಲ್ಲಿ ನಿತ್ಯವೂ ಕಾಶೀಕ್ಷೇತ್ರದ ಸ್ಮರಣೆಯಿರುವುದೊ, ಅವರಿಗೆ ಸಂಸಾರವೆಂಬ ಕಾಳಸರ್ಪದ ವಿಷದ ಬಾಧೆಯೆಂದಿಗೂ ಉಂಟಾಗಲಾರದು.

೩೧. ಕಾಶಿಯೆಂಬ ಎರಡಕ್ಷರಗಳಿಂದ ಕೂಡಿದ ಮಂತ್ರವು ಗರ್ಭವಾಸದಿಂದ ಸಂರಕ್ಷಿಸುವಂತಹ ಉತ್ತಮಮಣಿಯಾಗಿರುವುದು. ಅದು ನಿತ್ಯವೂ ಯಾವನ ಕಂಠದಲ್ಲಿ ನೆಲಸಿರುವುದೊ, ಅವನಿಗೆ ಅಶುಭವೆಲ್ಲಿಯದು?

೩೨. ಯಾವನು, ಕಾಶಿಯೆಂಬ ಎರಡಕ್ಷರಗಳ ಉಚ್ಚಾರಣೆಯೆಂಬ ಅಮೃತ

ಶ್ರುತಂ ಕರ್ಣಾಮೃತಂ ಯೇನ ಕಾಶೀತ್ಯಕ್ಷರಯುಗ್ಮಕಂ ।
ನ ಸಮಾಕರ್ಣಯತ್ಯೇವ ಸ ಪುನರ್ಗರ್ಭಜಾಂ ಕಥಾಂ ॥ ೩೩ ॥
ಕಾಶೀರಜೋಽಪಿ ಯನ್ಮೂರ್ಧ್ನಿ ಪತೇದಪ್ಯನಿಲಾಹತಂ ।
ಚಂದ್ರಶೇಖರ ತನ್ಮೂರ್ಧಾ ಭವೇಚ್ಚಂದ್ರಕಲಾಂಕಿತಃ ॥ ೩೪ ॥
ಪ್ರಸಂಗತೋಽಪಿ ಯನ್ನೇತ್ರಪಥಮಾನಂದಕಾನನಂ ।
ಯಾತಂ ತೇಽತ್ರ ನ ಜಾಯಂತೇ ನೇಕ್ಷೇರನ್ ಪಿತೃಕಾನನಂ ॥ ೩೫ ॥
ಗಚ್ಛತಾ ತಿಷ್ಠತಾ ವಾಪಿ ಸ್ವಪತಾ ಜಾಗ್ರತಾಥವಾ ।
ಕಾಶೀತ್ಯೇಷ ಮಹಾಮಂತ್ರೋ ಯೇನ ಜಪ್ತಃ ಸ ನಿರ್ಭಯಃ ॥ ೩೬ ॥
ಯೇನ ಬೀಜಾಕ್ಷರಯುಗಂ ಕಾಶೀತಿ ಹೃದಿ ಧಾರಿತಂ ।
ಅಬೀಜಾನಿ ಭವಂತ್ಯೇವ ಕರ್ಮಬೀಜಾನಿ ತಸ್ಯ ವೈ ॥ ೩೭ ॥
ಕಾಶೀ ಕಾಶೀತಿ ಕಾಶೀತಿ ಜಪತೋ ಯಸ್ಯ ಸಂಸ್ಥಿತಿಃ ।
ಅನ್ಯತ್ರಾಪಿ ಸತಸ್ತಸ್ಯ ಪುರೋ ಮುಕ್ತಿಃ ಪ್ರಕಾಶತೇ ॥ ೩೮ ॥

---

ವನ್ನು ನಿತ್ಯವೂ ಪಾನಮಾಡುತ್ತಿರುವನೋ, ಅವನು ಜರಾದಿದುಃಖಭಾಜನವಾದ ಸಂಸಾರದಶೆಯನ್ನು ಬಿಟ್ಟು ಅಮೃತತ್ವವನ್ನೇ ಪಡೆಯುವನು.

೩೩. ಯಾವನಿಂದ ಕಾಶಿಯೆಂಬ ಕರ್ಣಾಮೃತಪ್ರಾಯವಾದ ಎರಡಕ್ಷರಗಳು ಕೇಳಲ್ಪಡುವವೋ,ಅವನು ಪುನಃ ಗರ್ಭವಾಸವೆಂಬ ಕಥೆಯನ್ನೆಂದಿಗೂ ಕೇಳುವುದಿಲ್ಲ.

೩೪. ಯಾವನ ತಲೆಯಲ್ಲಿ ವಾಯುವಿನಿಂದ ತರಲ್ಪಟ್ಟ ಕಾಶಿಯ ಧೂಳಿಯು ಬೀಳುವುದೋ, ಅವನೂ ಸಹ ಚಂದ್ರಶೇಖರನಾದ ನಿನ್ನಂತೆಯೇ ಚಂದ್ರಕಳೆಯಿಂದಲಂಕೃತವಾದ ಜಟಾಭಾರವುಳ್ಳವನಾಗುವನು.

೩೫. ಪ್ರಸಂಗವಶದಿಂದಲಾದರೂ ಈ ಆನಂದಕಾನನಕ್ಷೇತ್ರವು ಯಾರ ದೃಷ್ಟಿಪಥಕ್ಕೆ ಬೀಳುವುದೋ, ಅವರು ಪುನಃ ಭೂಲೋಕದಲ್ಲಿ ಹುಟ್ಟುವುದಿಲ್ಲ. ಪಿತೃಲೋಕಗಳನ್ನೂ ನೋಡಲಾರರು.

೩೬. ನಡೆಯುವಾಗಲಾಗಲಿ, ನಿಂತಾಗಲಿ, ನಿದ್ರೆಯಲ್ಲಾಗಲಿ, ಜಾಗ್ರದವಸ್ಥೆಯಲ್ಲಾಗಲಿ, ಕಾಶಿಯೆಂಬ ಈ ಮಹಾಮಂತ್ರವನ್ನು ಯಾವನು ಜಪಿಸುತ್ತಿರುವನೋ, ಅವನಿಗೆಲ್ಲಿಯೂ ಭಯವುಂಟಾಗುವುದಿಲ್ಲ.

೩೭. ಯಾವನು ಕಾಶಿಯೆಂಬ ಎರಡು ಬೀಜಾಕ್ಷರಗಳನ್ನು ಹೃದಯಕಮಲದಲ್ಲಿ ಧರಿಸಿರುವನೋ, ಅವನ ಸಂಚಿತ ಆಗಾಮಿಕರ್ಮಗಳ ಬೀಜಗಳೆಲ್ಲವೂ ನಿಷ್ಫಲಗಳಾಗುವುವು.

೩೮. ಯಾವನು ಇತರ ಸ್ಥಳಗಳಲ್ಲಿ ವಾಸಿಸುತ್ತಿದ್ದರೂ ಕಾಶೀಕ್ಷೇತ್ರದ ಹೆಸರನ್ನು ನಿರಂತರವೂ ಜಪಿಸುತ್ತಿರುವನೋ, ಅವನ ಮುಂದೆಯೇ ಮೋಕ್ಷವು ಪ್ರಕಾಶಿಸುತ್ತಿರುವುದು.

ಕ್ಷೇಮಮೂರ್ತಿರಿಯಂ ಕಾಶೀ ಕ್ಷೇಮಮೂರ್ತಿರ್ಭವಾನ್ನಪಿ ।
ಕ್ಷೇಮಮೂರ್ತಿಸ್ತ್ರಿಪಥಗಾ ನಾನ್ಯತ್ ಕ್ಷೇಮತ್ರಯಂ ಕ್ವಚಿತ್ ॥ ೩೯ ॥
ಬ್ರಾಹ್ಮಣಾನಾಮಿತಿ ವಚಃ ಕ್ಷೇತ್ರಭಕ್ತಿವಿಜೃಂಭಿತಂ ।
ನಿಶಮ್ಯ ಗಿರಿಜಾಕಾಂತಸ್ತುತೋಷ ನಿತರಾಂ ಹರಃ ॥ ೪೦ ॥
ಪ್ರೋವಾಚ ಚ ಪ್ರಸನ್ನಾತ್ಮಾ ಧನ್ಯಾ ಯೂಯಂ ದ್ವಿಜರ್ಷಭಾಃ ।
ಯೇಷಾಮಿಹೇದೃಶೀ ಭಕ್ತಿರ್ಮಮ ಕ್ಷೇತ್ರೇಽತಿಪಾವನೇ ॥ ೪೧ ॥
ಜಾನೇ ಸತ್ವಮಯಾ ಜಾತಾಃ ಕ್ಷೇತ್ರಸ್ಯಾಸ್ಯ ನಿಷೇವಣಾತ್ ।
ನೀರಜಸ್ಕಾ ವಿತಮಸಃ ಸಂಸಾರಾರ್ಣವಪಾರಗಾಃ ॥ ೪೨ ॥
ವಾರಾಣಸ್ಯಾಸ್ತು ಯೇ ಭಕ್ತಾಸ್ತೇ ಭಕ್ತಾ ಮಮ ನಿಶ್ಚಿತಂ ।
ಜೀವನ್ಮುಕ್ತಾ ಹಿ ತೇ ನೂನಂ ಮೋಕ್ಷಲಕ್ಷ್ಮ್ಯಾ ಕಟಾಕ್ಷಿತಾಃ ॥ ೪೩ ॥
ಯೈಶ್ಚ ಕಾಶೀಸ್ಥಿತೋ ಜಂತುರಲ್ಪಕೋಽಪಿ ವಿರೋಧಿತಃ ।
ತೈರ್ಮೇ ವಿಶ್ವಂಭರಾ ಸರ್ವಾ ಮಯಾ ಸಹ ವಿರೋಧಿತಾ ॥ ೪೪ ॥

---

೩೯. ಮಹೇಶ್ವರನೆ! ಈ ಕಾಶಿಯು ಮಂಗಳಸ್ವರೂಪವುಳ್ಳದ್ದು. ನೀನೂ ಮಂಗಳಸ್ವರೂಪನೇ ಆಗಿರುವೆ. ಇಲ್ಲಿ ಪ್ರವಹಿಸುತ್ತಿರುವ ಗಂಗೆಯೂ ಮಂಗಳಪ್ರದೆಯಾಗಿರುವಳು. ಇಂತಹ ಮಂಗಳತ್ರಯಗಳು ಮತ್ತೆಲ್ಲಿಯೂ ಸಿಕ್ಕಲಾರವು.

೪೦. ಇಂತೆಂದು ಕ್ಷೇತ್ರಭಕ್ತಿಭರಿತರಾಗಿ ಆಡಿದ ಮಾತುಗಳನ್ನು ಕೇಳಿದವನಾಗಿ ಆ ಗಿರಿಜಾಕಾಂತನು ಅತ್ಯಂತವಾದ ಸಂತೋಷವನ್ನು ಹೊಂದಿದನು.

೪೧. ಮತ್ತು ಪ್ರಸನ್ನಾಂತಃಕರಣದಿಂದ ಹೇಳತೊಡಗಿದನು. "ಎಲೈ ಬ್ರಾಹ್ಮಣೋತ್ತಮರಿರಾ! ಪರಮಪವಿತ್ರವಾದ ನನ್ನ ಕ್ಷೇತ್ರದಲ್ಲಿ ಇಂತಹ ದೃಢಭಕ್ತಿಯನ್ನಿಟ್ಟಿರುವ ನೀವೇ ಧನ್ಯತಮರಾಗಿರುವಿರಿ.

೪೨. ನೀವೆಲ್ಲರೂ ಈ ಕ್ಷೇತ್ರವನ್ನು ಸೇವಿಸಿದುದರ ಫಲವಾಗಿ ಸತ್ತ್ವಗುಣಸಂಪನ್ನರಾಗಿಯೂ, ನಿಷ್ಕಲ್ಮಷರಾಗಿಯೂ, ತಮೋಗುಣವಿಲ್ಲದವರಾಗಿಯೂ, ಸಂಸಾರಸಮುದ್ರದ ಕೊನೆಯನ್ನು ಸೇರುವವರಾಗಿಯೂ ಆಗಿರುವಿರೆಂಬುದನ್ನು ನಾನು ತಿಳಿದಿರುವೆನು.

೪೩. ಯಾರು ವಾರಾಣಸೀಕ್ಷೇತ್ರದ ಭಕ್ತರಾಗಿರುವರೊ, ಅವರು ನನಗೂ ಭಕ್ತರೆಂದೇ ನಿಶ್ಚಯವು. ಅವರು ನಿಜವಾಗಿಯೂ ಜೀವನ್ಮುಕ್ತರಾಗಿ ಮೋಕ್ಷಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರರಾಗಿರುವರು.

೪೪. ಯಾರು ಕಾಶಿಯಲ್ಲಿ ವಾಸಿಸುತ್ತಿರುವ ಅತ್ಯಲ್ಪಜಂತುವಿನಲ್ಲಿಯೂ ವಿರೋಧವನ್ನಾಚರಿಸುವರೊ, ಅವರು ನನ್ನಿಂದೊಡಗೂಡಿದ ಸಕಲ ಪ್ರಪಂಚವನ್ನೂ ವಿರೋಧಗೊಳಿಸಿರುವರೆಂಬುದು ಸಿದ್ಧಾಂತವು.

ವಾರಾಣಸ್ಯಾಃ ಸ್ತುತಿಮಪಿ ಯೋ ನಿಶಮ್ಯಾನುಮೋದತೇ ।
ಅಪಿ ಬ್ರಹ್ಮಾಂಡಮಖಿಲಂ ಧ್ರುವಂ ತೇನಾನುಮೋದಿತಂ ॥ ೪೫ ॥
ನಿವಸಂತಿ ಹಿ ಯೇ ಮರ್ತ್ಯಾ ಅಸ್ಮಿನ್ನಾನಂದಕಾನನೇ ।
ಮಮಾಂತಃಕರಣೇ ತೇ ವೈ ನಿವಸೇಯುರಕಲ್ಮಷಾಃ ॥ ೪೬ ॥
ನಿವಸಂತಿ ಮಮ ಕ್ಷೇತ್ರೇ ಮಮ ಭಕ್ತಿಂ ಪ್ರಕುರ್ವತೇ ।
ಮಮ ಲಿಂಗಧರಾ ಯೇ ತು ತಾನೇವೋಪದಿಶಾಮ್ಯಹಂ ॥ ೪೭ ॥
ನ ವಸಂತಿ ಮಮ ಕ್ಷೇತ್ರೇ ಮಮ ಭಕ್ತಿಂ ನ ಕುರ್ವತೇ ।
ಮಮ ಲಿಂಗಧರಾ ಯೇ ನೋ ನ ತಾನುಪದಿಶಾಮ್ಯಹಂ ॥ ೪೮ ॥
ಕಾಶೀ ನಿರ್ವಾಣನಗರೀ ಯೇಷಾಂ ಚಿತ್ತೇ ಪ್ರಕಾಶತೇ ।
ತೇ ಮತ್ಪುರಃ ಪ್ರಕಾಶಂತೇ ನೈಶ್ರೇಯಸ್ಯಾ ಶ್ರಿಯಾ ವೃತಾಃ ॥ ೪೯ ॥
ಮೋಕ್ಷಲಕ್ಷ್ಮೀರಿಯಂ ಕಾಶೀ ನ ಯೇಭ್ಯಃ ಪರಿರೋಚತೇ ।
ಸ್ವರ್ಲಕ್ಷ್ಮೀಂ ಕಾಂಕ್ಷಮಾಣೇಭ್ಯಃ ಪತಿತಾಸ್ತೇ ನ ಸಂಶಯಃ ॥ ೫೦ ॥
ಕಾಶೀಂ ಸಂಕಾಂಕ್ಷಮಾಣಾನಾಂ ಪುರುಷಾರ್ಥಚತುಷ್ಟಯಂ ।
ಪುರಃ ಕಿಂಕರವತ್ತಿಷ್ಠೇನ್ಮಮಾನುಗ್ರಹತೋ ದ್ವಿಜಾಃ ॥ ೫೧ ॥

---

೪೫. ಯಾವನು ಈ ಕ್ಷೇತ್ರದ ಸ್ತೋತ್ರವನ್ನಾದರೂ ಕೇಳಿ ಅನುಮೋದಿಸುವನೊ, ಅವನು ನಿಜವಾಗಿಯೂ ಅಖಿಲ ಬ್ರಹ್ಮಾಂಡವನ್ನೇ ಸಂತೋಷಗೊಳಿಸಿದ ಪುಣ್ಯಕ್ಕೆ ಭಾಗಿಯಾಗುವನು.

೪೬. ಯಾವ ಮನುಷ್ಯರು ಈ ಆನಂದಕಾನನದಲ್ಲಿ ವಾಸಮಾಡುವರೊ, ಅವರು ಪಾಪರಹಿತರಾಗಿ ನನ್ನ ಅಂತರಂಗದಲ್ಲಿಯೇ ವಾಸಮಾಡುವರು.

೪೭. ನನ್ನ ಕ್ಷೇತ್ರದಲ್ಲಿ ವಾಸಮಾಡುತ್ತ, ನನ್ನಲ್ಲಿಯೇ ಭಕ್ತಿಯನ್ನು ಮಾಡುತ್ತ, ನನ್ನ ಚಿಹ್ನೆಗಳಾದ ತ್ರಿಪುಂಡ್ರಾದಿ ವೈದಿಕಲಿಂಗಗಳನ್ನು ದೇಹಗಳಲ್ಲಿ ಧರಿಸಿರುವರೊ, ಅವರಿಗೆ ಮಾತ್ರವೇ ನಾನು ಉಪದೇಶವನ್ನು ಮಾಡುವೆನು.

೪೮. ಯಾರು ನನ್ನ ಕ್ಷೇತ್ರದಲ್ಲಿ ವಾಸಿಸುವುದಿಲ್ಲವೊ, ನನ್ನಲ್ಲಿ ಭಕ್ತಿಯನ್ನು ಮಾಡುವುದಿಲ್ಲವೊ, ನನ್ನ ಚಿಹ್ನೆಗಳನ್ನು ಧರಿಸುವುದಿಲ್ಲವೊ, ಅವರಿಗೆ ನಾನು ಉಪದೇಶವನ್ನು ಕೊಡುವುದಿಲ್ಲ.

೪೯. ಯಾರ ಮನಸ್ಸಿನಲ್ಲಿ ನಿರ್ವಾಣನಗರಿಯೆನಿಸಿದ ಕಾಶಿಯು ಸರ್ವಕಾಲದಲ್ಲಿಯೂ ಪ್ರಕಾಶಿಸುತ್ತಿರುವುದೊ, ಅವರು ಮೋಕ್ಷಲಕ್ಷ್ಮಿಯಿಂದ ವರಿಸಲ್ಪಟ್ಟು ನನ್ನ ಮುಂದೆಯೇ ಪ್ರಕಾಶಿಸುತ್ತಿರುವರು.

೫೦. ಸ್ವರ್ಗಲಕ್ಷ್ಮಿಯನ್ನೇ ಅಪೇಕ್ಷಿಸುವವರಾಗಿ ಯಾರು ಮೋಕ್ಷಲಕ್ಷ್ಮಿಯ ನಿವಾಸವಾದ ಈ ಕಾಶಿಕ್ಷೇತ್ರದಲ್ಲಿ ಅಭಿರುಚಿಯುಳ್ಳವರಲ್ಲವೊ, ಅವರು ಸಂಕರಜಾತಿಗಳಲ್ಲಿ ಜನಿಸುವುದರಲ್ಲಿ ಸಂದೇಹವಿಲ್ಲ.

೫೧. ಎಲೈ ಬ್ರಾಹ್ಮಣರಿರಾ! ನನ್ನ ಅನುಗ್ರಹದಿಂದ ಕಾಶೀಕ್ಷೇತ್ರವನ್ನು

ಆನಂದಕಾನನೇ ಹ್ಯತ್ರ ಜ್ವಲದ್ದಾವಾನಲೋಽಸ್ಮ್ಯಹಂ ।
ಕರ್ಮಬೀಜಾನಿ ಜಂತೂನಾಂ ಜ್ವಾಲಯೇ ನ ಪ್ರರೋಹಯೇ ॥ ೫೨ ॥
ಮನುಷ್ಯೈಸ್ಸತತಂ ಕಾಶ್ಯಾಂ ಯಷ್ಟವ್ಯೋಽಹಂ ಪ್ರಯತ್ನತಃ ।
ಜೇತವ್ಯೌ ಕಲಿಕಾಲೌ ಚ ರಂತವ್ಯಾ ಮುಕ್ತಿರಂಗನಾ ॥ ೫೩ ॥
ಪ್ರಾಪ್ಯಾಪಿ ಕಾಶೀಂ ದುರ್ಬುದ್ಧಿರ್ಯೋ ನ ಮಾಂ ಪರಿಸೇವತೇ ।
ತಸ್ಯ ಹಸ್ತಗತಾಪ್ಯಾಶು ಕೈವಲ್ಯಶ್ರೀಃ ಪ್ರಣಶ್ಯತಿ ॥ ೫೪ ॥
ಧನ್ಯಾ ಮದ್ಭಕ್ತಿಲಕ್ಷ್ಮಾಣೋ ಬ್ರಾಹ್ಮಣಾಃ ಕಾಶಿವಾಸಿನಃ ।
ಯೂಯಂ ಯಚ್ಚೇತಸೋ ವೃತ್ತೇರ್ನ ದೂರೇಽಹಂ ನ ಕಾಶಿಕಾ ॥ ೫೫ ॥
ದಾತವ್ಯೋ ವೋ ವರಃ ಕೋಽತ್ರ ವ್ರಿಯತಾಂ ಮೇ ಯಥಾರುಚಿ ।
ಪ್ರೇಯಾಂಸೋ ಮೇ ಯತೋ ಯೂಯಂ ಕ್ಷೇತ್ರಸಂನ್ಯಾಸಕಾರಿಣಃ ॥
ಇತಿ ಪೀತ್ವಾ ಮಹೇಶಾನಮುಖಕ್ಷೀರಾಬ್ಧಿಜಾಂ ಸುಧಾಂ ।
ಪರಿತೃಪ್ತಾ ದ್ವಿಜಾಃ ಸರ್ವೇ ವವ್ರುರ್ವರಮನುತ್ತಮಂ ॥ ೫೭ ॥

---

ಆಕಾಂಕ್ಷಿಸುತ್ತಿರುವವರೆಲ್ಲರಿಗೂ ಚತುರ್ವಿಧ ಪುರುಷಾರ್ಥಗಳೂ ದಾಸಭಾವದಿಂದ ಮುಂದೆ ನಿಂತಿರುವುವು.

೫೨. ಆನಂದಕಾನನದಲ್ಲಿ ನಾನು ಉರಿಯುತ್ತಿರುವ ಬೆಂಕಿಯಂತೆ ನೆಲಸಿ, ಸಕಲಜೀವರ ಕರ್ಮಬೀಜಗಳನ್ನೂ ಪುನಃ ಫಲೋನ್ಮುಖಗಳಾಗದಂತೆ ಸುಟ್ಟು, ಭಸ್ಮಮಾಡುತ್ತಿರುವೆನು.

೫೩. ಮನುಷ್ಯನಾಗಿ ಜನಿಸಿದವನು ನಿತ್ಯವೂ ಕಾಶಿಯಲ್ಲಿ ವಾಸಮಾಡಬೇಕು. ಪ್ರಯತ್ನದಿಂದ ನನ್ನನ್ನು ಪೂಜಿಸಬೇಕು. ಕಲಿಯನ್ನೂ, ಯಮನನ್ನೂ ಜಯಿಸಬೇಕು. ಮತ್ತು ಮುಕ್ತಿಕನ್ಯೆಯೊಡನೆ ರಮಿಸಬೇಕು.

೫೪. ಮಂದಬುದ್ಧಿಯಾದ ಯಾವನು ಕಾಶಿಯನ್ನು ಹೊಂದಿಯೂ ನನ್ನನ್ನು ಸೇವಿಸುವುದಿಲ್ಲವೊ, ಅವನಿಗೆ ಕೈಸೇರಿದ ಮೋಕ್ಷವೂ ಕ್ಷಿಪ್ರದಲ್ಲಿಯೇ ನಾಶವನ್ನು ಹೊಂದುವುದು.

೫೫. ನನ್ನ ಭಕ್ತಿಯೆಂಬ ಚಿಹ್ನೆಯನ್ನು ಧರಿಸಿದ ಬ್ರಾಹ್ಮಣರೂ, ಕಾಶೀನಿವಾಸಿಗಳೂ, ಮನೋವೃತ್ತಿಯಿಂದ ನನ್ನನ್ನೂ ಕಾಶೀಕ್ಷೇತ್ರವನ್ನೂ ದೂರಮಾಡದಿರುವವರೂ ಆದ ನೀವೇ ಪರಮಧನ್ಯರಾಗಿರುವಿರಿ.

೫೬–೫೭. ನಿಮಗೆ ಅಭಿಲಷಿತವಾದ ಬೇರೆ ಯಾವ ವರವನ್ನು ಕೊಡಲಿ? ಕೇಳುವವರಾಗಿರಿ. ಕ್ಷೇತ್ರಸನ್ನ್ಯಾಸಕಾರಿಗಳಾದ ನೀವು ನನಗೆ ಅತ್ಯಂತ ಪ್ರಿಯರಾಗಿರುವಿರಿ.'' ಇಂತೆಂದ ಮಹೇಶ್ವರನ ಮುಖವೆಂಬ ಕ್ಷೀರಸಮುದ್ರದಿಂದ ಹೊರಟ ಅಮೃತೋಪಮಗಳಾದ ವಾಕ್ಯಗಳನ್ನು ಕೇಳಿ ಆ ಬ್ರಾಹ್ಮಣರೆಲ್ಲರೂ ಅತ್ಯಂತ ಸಂತೃಪ್ತರಾಗಿ ಸರ್ವೋತ್ತಮವಾದ ಒಂದು ವರವನ್ನು ಬೇಡಿದರು.

ಬ್ರಾಹ್ಮಣಾ ಊಚುಃ:—
ಉಮಾಪತೇ ಮಹೇಶಾನ ಸರ್ವಜ್ಞ ವರ ಏಷ ನಃ ।
ಕಾಶೀ ಕದಾಪಿ ನ ತ್ಯಾಜ್ಯಾ ಭವತಾ ಭವತಾಪಹೃತ್ ॥ ೫೮ ॥
ವಚನಾದ್ಬ್ರಾಹ್ಮಣಾನಾಂ ತು ಶಾಪೋ ಮಾ ಪ್ರಭವತ್ವಿಹ ।
ಕದಾಚಿದಪಿ ಕೇಷಾಂಚಿತ್ಕ್ವಾಪ್ಯಾಂ ಮೋಕ್ಷಾಂತರಾಯಕಃ ॥ ೫೯ ॥
ತವ ಪಾದಾಂಬುಜದ್ವಂದ್ವೇ ನಿರ್ದ್ವಂದ್ವಾ ಭಕ್ತಿರಸ್ತು ನಃ ।
ಆಕಲೇವರಪಾತಂ ಚ ಕಾಶೀವಾಸೋಽಸ್ತು ನೋಽನಿಶಂ ॥ ೬೦ ॥
ಕಿಮನ್ಯೇನ ವರೇಣೇಶ ದೇಯ ಏಷ ವರೋ ಹಿ ನಃ ।
ಅವಧೇಹ್ಯಂಧಕಧ್ವಂಸಿನ್ವರಮನ್ಯಂ ವೃಣೀಮಹೇ ॥ ೬೧ ॥
ತವ ಪ್ರತಿನಿಧೀಕೃತ್ಯಾಸ್ಮಾಭಿಸ್ತ್ವದ್ಭಕ್ತಿಭಾವಿತೈಃ ।
ಪ್ರತಿಷ್ಠಿತೇಷು ಲಿಂಗೇಷು ಸಾನ್ನಿಧ್ಯಂ ಭವತೋಽಸ್ತ್ವಿಹ ॥ ೬೨ ॥
ಶ್ರುತ್ವೇತಿ ತೇಷಾಂ ವಾಕ್ಯಾನಿ ತಥಾಸ್ತ್ವಿತಿ ಪಿನಾಕಿನಾ ।
ಪ್ರೋಚೇಽನ್ಯೋಽಪಿ ವರೋ ದತ್ತೋ ಜ್ಞಾನಂ ವಶ್ಚ ಭವಿಷ್ಯತಿ ॥ ೬೩ ॥

---

೫೮–೫೯. ಬ್ರಾಹ್ಮಣರು ಹೇಳುತ್ತಾರೆ:—ಉಮಾಪತಿಯೆ! ಮಹೇಶ್ವರನೆ! ಸರ್ವಜ್ಞನೆ! ಭಕ್ತರ ಸಂಸಾರತಾಪವನ್ನು ಪರಿಹರಿಸುವವನೆ! ಈ ವರವೊಂದನ್ನು ಮಾತ್ರ ನಮಗೆ ಕೊಡು. ನೀನು ಎಂದಿಗೂ ಈ ಕಾಶೀಕ್ಷೇತ್ರವನ್ನು ತ್ಯಜಿಸಬಾರದು. ಮತ್ತು ಕಾಶಿಯಲ್ಲಿ ಯಾವ ಕಾಲಕ್ಕೂ, ಯಾವ ಪ್ರಾಣಿಗೂ ಮೋಕ್ಷಸಾಧನೆಗೆ ಅಡ್ಡಿಯಾಗುವ ಯಾವ ಶಾಪವಾಕ್ಯವೇ ಆಗಲಿ ಅದು ಬ್ರಾಹ್ಮಣೋಕ್ತವಾಗಿದ್ದರೂ ಇಲ್ಲಿ ಶಕ್ತಿಹೀನವಾಗಲಿ.

೬೦. ನಿನ್ನ ಪಾದಕಮಲಯುಗಳದಲ್ಲಿ ನಮಗೆ ನಿಷ್ಕಲವಾದ ಭಕ್ತಿಯುಂಟಾಗಲಿ. ಮತ್ತು ಈ ದೇಹದ ವಿಯೋಗವಾಗುವವರೆಗೂ ನಮಗೆ ಕಾಶಿಯಲ್ಲಿಯೇ ಅಖಂಡವಾಸವನ್ನು ಅನುಗ್ರಹಿಸು.

೬೧. ಸ್ವಾಮಿಯೆ! ಬೇರೆ ವರದಿಂದಾಗಬೇಕಾದುದೇನು? ಈ ವರವನ್ನು ಮಾತ್ರ ನಮಗೆ ಕೊಡು. ಎಲೈ ಅಂಧಕಾಸುರಧ್ವಂಸಿಯೆ! ಲಾಲಿಸು. ಮತ್ತೊಂದು ವರವನ್ನು ಬೇಡುತ್ತಿರುವೆವು.

೬೨. ನಿನ್ನ ಭಕ್ತಿಯಿಂದ ಭರಿತವಾದ ಅಂತಃಕರಣವುಳ್ಳವರಾಗಿ ನಾವು ನಿನ್ನ ಪ್ರತಿನಿಧಿಗಳಾಗಿ ಇಲ್ಲಿ ಸ್ಥಾಪಿಸಿರುವ ಲಿಂಗಗಳೆಲ್ಲವುಗಳಲ್ಲಿಯೂ ನಿನ್ನ ಸಾನ್ನಿಧ್ಯವಿಶೇಷವುಂಟಾಗಲಿ.

೬೩. ಅವರ ಈ ಮಾತುಗಳೆಲ್ಲವನ್ನೂ ಕೇಳಿ ಪಿನಾಕಪಾಣಿಯು ಹಾಗೆಯೇ ಆಗಲೆಂದು ಅಂಗೀಕರಿಸಿ "ನಿಮಗೆ ಅಪ್ರತಿಹತವಾದ ಜ್ಞಾನವುಂಟಾಗುವಂತೆ ಮತ್ತೂ ಒಂದು ವರವನ್ನು ಕೊಟ್ಟಿರುವೆನು" ಎಂಬುದಾಗಿ ಹೇಳಿದನು.

ಪುನಃ ಪ್ರೋವಾಚ ದೇವೇಶೋ ನಿಶಾಮಯತ ಭೋ ದ್ವಿಜಾಃ ।
ಹಿತಂ ವಃ ಕಥಯಾಮ್ಯತ್ರ ತದನುಷ್ಠೇಯಮೇವ ಧ್ರುವಮ್ ॥ ೬೪ ॥
ಸೇವ್ಯೋತ್ತರವಹಾ ನಿತ್ಯಂ ಲಿಂಗಮರ್ಚ್ಯಂ ಪ್ರಯತ್ನತಃ ।
ದಮೋ ದಾನಂ ದಯಾ ನಿತ್ಯಂ ಕರ್ತವ್ಯಂ ಮುಕ್ತಿಕಾಂಕ್ಷಿಭಿಃ ॥ ೬೫ ॥
ಇದಮೇವ ರಹಸ್ಯಂ ಚ ಕಥಿತಂ ಕ್ಷೇತ್ರವಾಸಿನಾಮ್ ।
ಮತಿಃ ಪರಹಿತಾ ಕಾರ್ಯಾ ವಾಚ್ಯಂ ನೋದ್ವೇಗಕೃದ್ವಚಃ ॥ ೬೬ ॥
ಮನಸಾಪಿ ನ ಕರ್ತವ್ಯಮೇನೋಽತ್ರ ವಿಜಿಗೀಷುಣಾ ।
ಅತ್ರತ್ಯಮಕ್ಷಯಂ ಯಸ್ಮಾತ್ಸುಕೃತಂ ಸುಕೃತೇತರಮ್ ॥ ೬೭ ॥
ಅನ್ಯತ್ರ ಯತ್ಕೃತಂ ಪಾಪಂ ತತ್ಕಾಶ್ಯಾಂ ಪರಿಣಶ್ಯತಿ ।
ವಾರಾಣಸ್ಯಾಂ ಕೃತಂ ಪಾಪಮಂತರ್ಗೇಹೇ ಪ್ರಣಶ್ಯತಿ ॥ ೬೮ ॥
ಅಂತರ್ಗೇಹೇ ಕೃತಂ ಪಾಪಂ ಪೈಶಾಚ್ಯನರಕಾವಹಮ್ ।
ಪಿಶಾಚನರಕಪ್ರಾಪ್ತಿರ್ಗಚ್ಛತ್ಯೇವ ಬಹಿರ್ಯದಿ ॥ ೬೯ ॥

---

೬೪. ಬಳಿಕ ಆ ದೇವೇಶ್ವರನು ಪುನಃ ಹೇಳತೊಡಗಿದನು. "ಎಲೈ ಬ್ರಾಹ್ಮಣರಿರಾ! ಕೇಳಿರಿ. ನಿಮಗೆ ಹಿತಕರವಾದ ಮತ್ತೊಂದು ಹಿತವನ್ನು ಹೇಳುವೆನು. ಇಲ್ಲಿ ಅದನ್ನು ಎಡಬಿಡದೆ ಅನುಷ್ಠಾನಮಾಡುವವರಾಗಿರಿ.

೬೫. ಉತ್ತರವಾಹಿನಿಯಾದ ಗಂಗೆಯನ್ನು ನಿತ್ಯವೂ ಸೇವಿಸಬೇಕು. ಶಿವಲಿಂಗವನ್ನು ಪ್ರಯತ್ನದಿಂದ ಪೂಜಿಸಬೇಕು. ಮೋಕ್ಷಕಾಂಕ್ಷಿಗಳಾದವರು ಇಂದ್ರಿಯನಿಗ್ರಹ, ದಾನ, ದಯೆಗಳನ್ನು ನಿತ್ಯವೂ ಆಚರಣೆಯಲ್ಲಿ ತರಬೇಕು.

೬೬. ಈ ಕ್ಷೇತ್ರದಲ್ಲಿ ವಾಸಮಾಡುವವರೆಲ್ಲರಿಗೂ ಈ ರಹಸ್ಯವು ಹೇಳಲ್ಪಟ್ಟಿರುವುದು. ಇತರರಿಗೆ ಹಿತವನ್ನು ಕೋರುವ ಬುದ್ಧಿಯನ್ನೇ ಇಲ್ಲಿ ಮಾಡಬೇಕು. ಅವರಿಗೆ ಉದ್ವೇಗವನ್ನುಂಟುಮಾಡುವ ಮಾತುಗಳನ್ನು ಎಂದಿಗೂ ಆಡಬಾರದು.

೬೭. ಸಂಸಾರವನ್ನು ಜಯಿಸಲಪೇಕ್ಷಿಸುವವನು ಮನಸ್ಸಿನಲ್ಲಿಯೂ ಈ ಕ್ಷೇತ್ರದಲ್ಲಿ ಯಾವ ಪಾಪವನ್ನೂ ಎಣಿಸಬಾರದು. ಏಕೆಂದರೆ ಇಲ್ಲಿ ಮಾಡಿದ ಸುಕೃತವಾಗಲಿ, ದುಷ್ಕೃತವಾಗಲಿ ಅನಂತಗುಣಿತವಾದ ಫಲವನ್ನು ಕೊಡುವುದು.

೬೮. ಇತರ ಪುಣ್ಯಕ್ಷೇತ್ರಗಳಲ್ಲಿ ಮಾಡಿದ ಪಾತಕವು ವಾರಾಣಸಿಯಲ್ಲಿ ನಾಶವಾಗುವುದು. ವಾರಾಣಸಿಯಲ್ಲಿ ಮಾಡಿದ ಪಾಪವಾದರೊ, ಅಂತರ್ಗೇಹದಲ್ಲಿ ನಾಶವಾಗುವುದು.

೬೯. ಕಾಶಿಯಲ್ಲಿ ಅಂತರ್ಗೃಹದ ಹೊರಗೆ ಮಾಡಿದ ಪಿಶಾಚನರಕಪ್ರದ

ನ ಕಲ್ಪಕೋಟಿಭಿಃ ಕಾಶ್ಯಾಂ ಕೃತಂ ಕರ್ಮ ಪ್ರಮೃಜ್ಯತೇ ।
ಕಿಂ ತು ರುದ್ರಪಿಶಾಚತ್ವಂ ಜಾಯತೇಽತ್ರಾಯುತತ್ರಯಂ ॥ ೨೦ ॥
ವಾರಾಣಸ್ಯಾಂ ಸ್ಥಿತೋ ಯೋ ವೈ ಪಾತಕೇಷು ರತಃ ಸದಾ ।
ಯೋನಿಂ ಪ್ರಾಪ್ಯಾಪಿ ಪೈಶಾಚೀಂ ವರ್ಷಾಣಾಮಯುತತ್ರಯಂ ॥ ೨೧ ॥
ಪುನರತ್ರೈವ ನಿವಸನ್ ಜ್ಞಾನಂ ಪ್ರಾಪ್ಸ್ಯತ್ಯನುತ್ತಮಂ ।
ತೇನ ಜ್ಞಾನೇಽಥ ಸಂಪ್ರಾಪ್ತೇ ಮೋಕ್ಷಮಾಪ್ಸ್ಯತ್ಯನುತ್ತಮಂ ॥ ೨೨ ॥
ದುಷ್ಕೃತಾನಿ ವಿಧಾಯೇಹ ಬಹಿಃ ಪಂಚತ್ವಮಾಗತಾಃ ।
ತೇಷಾಂ ಗತಿಂ ಪ್ರವಕ್ಷ್ಯಾಮಿ ಶೃಣುತ ದ್ವಿಜಸತ್ತಮಾಃ ॥ ೨೩ ॥

---

ವಾದ ಪಾತಕವೂ ಕೂಡ ಅಂತರ್ಗೃಹದೊಳಗೆ ನಿಷ್ಫಲವಾಗುವುದೇಹೊರತು ನರಕಪ್ರಾಪಕವಾಗಲಾರದು.*

೨೦. ಕಾಶಿಯಲ್ಲಿ ಮಾಡಿದ ಯಾವ ಕರ್ಮವೂ ಕಲ್ಪಕೋಟಿಗಳಾದರೂ ನಾಶವಾಗುವುದಿಲ್ಲ. ಆದರೆ ಅಲ್ಲಿ ಪಾಪವನ್ನು ಮಾಡುವವನು ಮೂವತ್ತು ಸಾವಿರ ದಿವ್ಯವರ್ಷಗಳವರೆಗೂ ರುದ್ರಪಿಶಾಚದ ಜನ್ಮವನ್ನು ಪಡೆಯುವನು.

೨೧–೨೨. ಯಾವನು ವಾರಾಣಸಿಯಲ್ಲಿದ್ದರೂ ಸರ್ವಕಾಲದಲ್ಲಿಯೂ ಪಾತಕಗಳನ್ನು ಮಾಡುವುದರಲ್ಲಿಯೇ ನಿರತನಾಗಿರುವನೋ, ಅವನು ಮೂವತ್ತು ಸಾವಿರ ವರ್ಷಗಳವರೆಗೂ ಪಿಶಾಚಯೋನಿಯನ್ನು ಹೊಂದಿ, ಪುನಃ ಇಲ್ಲಿಯೇ ವಾಸಮಾಡುತ್ತ ಅಸದೃಶವಾದ ಜ್ಞಾನವನ್ನು ಪಡೆಯುವನು. ಆ ಜ್ಞಾನದ ಫಲವಾಗಿ ಐಹಿಕಭೋಗಗಳನ್ನು ಅನುಭವಿಸಿದ ಮೇಲೆ ಶಾಶ್ವತವಾದ ಮೋಕ್ಷವನ್ನು ಪಡೆಯುವನು.

೨೩. ಎಲೈ ಬ್ರಾಹ್ಮಣೋತ್ತಮರಿರಾ! ಯಾರು ಇಲ್ಲಿ ಪಾಪಗಳನ್ನು ಮಾಡಿ ಹೊರಗೆ ಮರಣವನ್ನು ಹೊಂದುವರೋ, ಅವರ ಗತಿಯನ್ನು ವಿವರಿಸುವೆನು. ಶ್ರದ್ಧಾಳುಗಳಾಗಿ ಕೇಳುವವರಾಗಿರಿ.

---

* ಈ ಶ್ಲೋಕಕ್ಕೆ ಇನ್ನೂ ಹಲವು ವಿಧದ ಅರ್ಥಗಳನ್ನು ಮಾಡಬಹುದು.

(೧) ಅಂತರ್ಗೃಹದಲ್ಲಿ ಮಾಡಿದ ಪಾಪವು ಪಿಶಾಚನರಕಪ್ರದವು. ಆ ಪಾಪಿಯು ಹೊರಕ್ಕೆ ಹೋಗುತ್ತಲೆ ಅವನಿಗೆ ಪಿಶಾಚನರಕವು ಪ್ರಾಪ್ತವಾಗುವುದು.

(೨) ಅಂತರ್ಗೃಹದಲ್ಲಿ ಮಾಡಿದ ಪಿಶಾಚನರಕಪ್ರಾಪಕವಾದ ಯಾವ ಪಾಪವಿರುವುದೋ, ಅದರ ಫಲವಾದ ನರಕಪ್ರಾಪ್ತಿಯು ಕಾಶಿಯಿಂದ ಹೊರಕ್ಕೆ ಹೊರಟುಹೋಗುವುದೇ ಹೊರತು ಪುನಃ ಪ್ರವೇಶ ಮಾಡಲಾಗದು. (ಎಂದರೆ ಕಾಶಿಯಲ್ಲಿ ಮಾಡಿದ ಪಾಪಗಳ ಫಲಗಳನ್ನು ಕಾಶಿಯನ್ನು ಬಿಟ್ಟುಹೋದವನು ಕೋಟಿಕಲ್ಪಗಳ ಮೇಲಾದರೂ ಅನುಭವಿಸಿಯೇ ತೀರಬೇಕೆಂಬ ಮುಂದಿನ ಶ್ಲೋಕಾರ್ಥದೊಡನೆ ಅನ್ವಯಿಸಿಕೊಳ್ಳಬೇಕು.)

(೩) ಅಂತರ್ಗೃಹದಲ್ಲಿ ಮಾಡಿದ ಪಿಶಾಚನರಕಪ್ರದವಾದ ಪಾಪವೂ ಸುಲಭವಾಗಿಯೇ ನಾಶವಾಗುವುದು. ಆದರ ಹೊರಗೆ ಮಾಡಿದ ಪಾಪದಿಂದ ನೀಚವಾದ ಪಿಶಾಚ ನರಕವು ಲಭಿಸುವುದು. (ಎಂದರೆ ಕಾಶಿಯಲ್ಲಿ ಮಾಡಿದ ಪಾತಕಗಳ ಫಲವಾದ ರುದ್ರಪಿಶಾಚಜನ್ಮವನ್ನು ಪಡೆಯುವನೆಂದು ಮುಂದೆ ಹೇಳುವ ವಾಕ್ಯದೊಡನೆ ಸಂಬಂಧಿಸಿಕೊಳ್ಳಬೇಕು.)

ಯಾಮ್ಯಾಖ್ಯಾ ನೋ ಗಣಾಃ ಸಂತಿ ಘೋರಾ ವಿಕೃತಮೂರ್ತಯಃ ।
ಮೂಷಾಯಾಂ ತೇ ಧಮಂತ್ಯಾದೌ ಕ್ಷೇತ್ರದುಷ್ಕೃತಕಾರಿಣಃ ॥ ೭೪ ॥
ನಯಂತ್ಯನೂಪಪ್ರಾಯಂ ಚ ತತಃ ಪ್ರಾಚೀಂ ದುರಾಸದಾಂ ।
ವರ್ಷಾಕಾಲೇ ದುರಾಚಾರಾನ್ಪಾತಯಂತಿ ಮಹಾಜಲೇ ॥ ೭೫ ॥
ಜಲೌಕಾಭಿಃ ಸಪಕ್ಷಾಭಿರ್ದಂದಶೂಕೈರ್ಜಲೋದ್ಭವೈಃ ।
ದುರ್ನಿವಾರ್ಯೈಶ್ಚ ಮಶಕೈರ್ದಶ್ಯಂತೇ ತೇ ದಿವಾನಿಶಂ ॥ ೭೬ ॥
ತತೋ ಯಾಮ್ಯೈರ್ಹಿಮರ್ತೌ ತೇ ನೀಯಂತೇಽದ್ರೌ ಹಿಮಾಲಯೇ ।
ಅಶನಾವರಣೈರ್ಹೀನಾಃ ಕ್ಲೇಶ್ಯಂತೇ ತೇ ದಿವಾನಿಶಂ ॥ ೭೭ ॥
ಮರುಸ್ಥಲೇ ತತೋ ಗ್ರೀಷ್ಮೇ ವಾರಿವೃಕ್ಷವಿವರ್ಜಿತೇ ।
ದಿವಾಕರಕರೈಸ್ತೀವ್ರೈಸ್ತಾಪ್ಯಂತೇ ತೇ ಪಿಪಾಸಿತಾಃ ॥ ೭೮ ॥
ಕ್ಲೇಶಿತಾಸ್ತೇ ಗಣೈರುಗ್ರೈರ್ಯಾತನಾಭಿಃ ಸಮಂತತಃ ।
ಇತ್ಥಂ ಕಾಲಮಸಂಖ್ಯಾತಮಾನೀಯಂತೇ ತತಸ್ತ್ವಿಹ ॥ ೭೯ ॥

---

೭೪. ನನ್ನ ಗಣಗಳಲ್ಲಿ ಘೋರರೂ, ವಿಕಾರಸ್ವರೂಪವುಳ್ಳವರೂ ಆದ ಯಾಮ್ಯರೆಂಬ ಹೆಸರಿನವರಿರುವರು. ಈ ಕ್ಷೇತ್ರದಲ್ಲಿ ದುಷ್ಕೃತ್ಯಗಳನ್ನು ಮಾಡಿದವರನ್ನು ಅವರು ಮೊದಲು ಕಾದ ಕೊಪ್ಪರಿಗೆಗಳಲ್ಲಿ ಹಾಕಿ ಹುರಿಯುವರು.

೭೫. ಬಳಿಕ ಕೆಸರಿನಿಂದ ಕೂಡಿದ ದುರ್ಗಮವಾದ ನೆಲದಲ್ಲಿ ಪೂರ್ವದಿಕ್ಕಿಗೆ ಅವರನ್ನು ಸೆಳೆದೊಯ್ಯುವರು. ಆ ದುರಾಚಾರನಿರತರನ್ನು ಮಳೆಗಾಲದಲ್ಲಿ ಅಗಾಧವಾದ ಜಲದಲ್ಲಿ ತಳ್ಳಿಬಿಡುವರು.

೭೬. ಅಲ್ಲಿ ಅವರು ಅಹೋರಾತ್ರಗಳಲ್ಲಿಯೂ ರೆಕ್ಕೆಗಳುಳ್ಳ ಜಲಪಕ್ಷಿಗಳಿಂದಲೂ, ಜಲದಲ್ಲಿ ಹುಟ್ಟಿರುವ ಸರ್ಪಗಳಿಂದಲೂ, ನಿವಾರಿಸಲಾಗದಂತಹ ಸೊಳ್ಳೆಗಳೇ ಮೊದಲಾದ ಕೀಟಗಳಿಂದಲೂ ಭಕ್ಷಿಸಲ್ಪಡುವರು.

೭೭. ಹೇಮಂತಋತುವು ಪ್ರಾಪ್ತವಾಗಲು ಯಮಭಟರು ಅವರನ್ನು ಹಿಮಾಲಯ ಪರ್ವತಕ್ಕೆ ಸೆಳೆದೊಯ್ಯುವರು. ಅಲ್ಲಿ ಬಹುದಿನಗಳು ಅವರು ಅನ್ನವಸ್ತ್ರಗಳಿಲ್ಲದೆ ಸರ್ವಕಾಲದಲ್ಲಿಯೂ ಕ್ಲೇಶಪಡುವರು.

೭೮. ಗ್ರೀಷ್ಮಕಾಲದಲ್ಲಿ ಅವರು ನೀರುನೆರಳುಗಳಿಲ್ಲದ ಮರುಳುಕಾಡಿನಲ್ಲಿ ಬಿಡಲ್ಪಟ್ಟು ತೀಕ್ಷ್ಣಗಳಾದ ಸೂರ್ಯನ ಕಿರಣಗಳಿಂದ ತಪಿಸುತ್ತ ಬಾಯಾರಿಕೆಯಿಂದ ಸಂಕಟಪಡುತ್ತಿರುವರು.

೭೯. ಅವರನ್ನು ಉಗ್ರರಾದ ಯಮಭಟರು ಯಾತನೆಗಳಿಂದ ಬಹುವಿಧವಾಗಿ ಕ್ಲೇಶಗೊಳಿಸುವರು. ಇಂತು ಲೆಕ್ಕವಿಲ್ಲದಷ್ಟು ಕಾಲದವರೆಗೂ ಅವರು ಬಳಲಿ ಬಳಿಕ ಯಮಲೋಕಕ್ಕೆ ಕರೆತರಲ್ಪಡುವರು.

ನಿವೇದಯಂತಿ ತೇ ಯಾಮ್ಯಾಃ ಕಾಲರಾಜಾಂತಿಕೇ ತತಃ ।
ಕಾಲರಾಜೋಽಪಿ ತಾನ್ದೃಷ್ಟ್ವಾ ಕರ್ಮ ಸಂಸ್ಮಾರ್ಯ ದುಷ್ಕೃತಂ ॥ ೮೦ ॥
ವಿವಸ್ತ್ರಾನ್ ಕ್ಷುತ್ತೃಷಾರ್ತಾಂಶ್ಚ ಲಗ್ನಪೃಷ್ಠೋದರತ್ತ್ವಚಃ ।
ಅನ್ಯೈಃ ರುದ್ರಪಿಶಾಚೈಶ್ಚ ಸಹ ಸಂಯೋಜಯತ್ಯಪಿ ॥ ೮೧ ॥
ತತೋ ರುದ್ರಪಿಶಾಚಾಸ್ತೇ ಭೈರವಾನುಚರಾಃ ಸದಾ ।
ಸಹಂತೇ ಕ್ಲಮುತ್ಯರ್ಥಂ ಕ್ಷುತ್ತೃಷ್ಣೋಗ್ರತ್ವಸಂಭವಂ ॥ ೮೨ ॥
ಆಹಾರಂ ರುಧಿರೋನ್ಮಿಶ್ರಂ ತೇ ಲಭಂತೇ ಕದಾಚನ ।
ಏವಂ ತ್ರ್ಯಯುತಸಂಖ್ಯಾಕಂ ಕಾಲಂ ತತ್ರಾತಿದುಃಖಿತಾಃ ॥ ೮೩ ॥
ಶ್ಮಶಾನಸ್ತಂಭಮಭಿತೋ ನೀಯಂತೇ ಕಂಠಪಾಶಿತಾಃ ।
ಪಿಪಾಸಿತಾ ಅಪಿ ನ ತೇಂಽಬುಸ್ಪರ್ಶಮಪಿ ಚಾಪ್ನುಯುಃ ॥ ೮೪ ॥
ಅಥ ಸಂಕ್ಷೀಣಪಾಪಾಸ್ತೇ ಕಾಲಭೈರವದರ್ಶನಾತ್ ।
ಇಹೈವ ದೇಹಿನೋ ಭೂತ್ವಾ ಮುಚ್ಯಂತೇ ತೇ ಮಮಾಜ್ಞಯಾ ॥ ೮೫ ॥
ತಸ್ಮಾನ್ನ ಕಾಮಯೇತಾತ್ರ ವಾಙ್ಮನಃಕರ್ಮಜಾಪ್ಯಘಂ ।
ಶುಚೌ ಪಥಿ ಸದಾ ಸ್ಥೇಯಂ ಮಹಾಲಾಭಮಭೀಪ್ಸುಭಿಃ ॥ ೮೬ ॥

---

೮೦–೮೧. ಆ ಯಮಭಟರು ಜೀವರನ್ನು ಯಮರಾಜನ ಬಳಿಯಲ್ಲಿ ತಂದೊಪ್ಪಿಸುವರು. ಆತನೂ ಸಹ ಅವರನ್ನು ಕಂಡು ಅವರು ಮಾಡಿದ ದುಷ್ಕೃತ್ಯಗಳೆಲ್ಲವನ್ನೂ ಸ್ಮರಿಸಿಕೊಂಡು ವಸ್ತ್ರಹೀನರೂ, ಹಸಿವುಬಾಯಾರಿಕೆಗಳಿಂದ ಕೃಶರಾಗಿ ಬೆನ್ನು ಹೊಟ್ಟೆಗಳ ಚರ್ಮಗಳೊಂದಾಗಿರುವವರೂ ಆದ ಅವರನ್ನು ಇತರ ರುದ್ರಪಿಶಾಚಗಳ ಅಧೀನರನ್ನಾಗಿ ಮಾಡುವನು.

೮೨. ಬಳಿಕ ಪರಮೇಶ್ವರನ ಅನುಚರರಾದ ರುದ್ರಪಿಶಾಚರಾಗಿ ಅವರೂ ಸರ್ವಕಾಲದಲ್ಲಿಯೂ ತೀಕ್ಷ್ಣಗಳಾದ ಕ್ಷುತ್ತೃಷೆಗಳಿಂದುಂಟಾದ ಸಂಕಟವನ್ನು ಬಹಳ ಕಷ್ಟದಿಂದ ಸಹಿಸುತ್ತಿರುವರು.

೮೩. ಆಕಸ್ಮಿಕವಾಗಿ ಒಮ್ಮೊಮ್ಮೆ ಅವರಿಗೆ ರಕ್ತಮಿಶ್ರಿತವಾದ ಆಹಾರವು ಲಭಿಸುವುದು. ಈ ವಿಧವಾಗಿ ಅವರು ಮುವ್ವತ್ತುಸಾವಿರ ವರ್ಷಗಳನ್ನು ಅತ್ಯಂತ ಕಷ್ಟದಿಂದ ಕಳೆಯುವರು.

೮೪. ಬಳಿಕ ಕಂಠದಲ್ಲಿ ಬಿಗಿಸಿದ ಪಾಶಗಳಿಂದ ವಧ್ಯಭೂಮಿಯ ಸ್ತಂಭದ ಬಳಿಗೆ ಸೆಳೆಯಲ್ಪಡುವರು. ಬಹಳವಾದ ಬಾಯಾರಿಕೆಯಿಂದ ಕೂಡಿದ್ದರೂ ಅವರಿಗೆ ಜಲದ ಸ್ಪರ್ಶವೂ ಲಭಿಸುವುದಿಲ್ಲ.

೮೫. ಅಲ್ಲಿ ಕಾಲಭೈರವನ ದರ್ಶನದಿಂದ ತಮ್ಮ ಪಾತಕಗಳನ್ನೆಲ್ಲ ಕಳೆದುಕೊಂಡು ಪುನಃ ಈ ಕಾಶಿಯಲ್ಲಿ ಜನ್ಮಗಳನ್ನು ಪಡೆದು ನನ್ನ ಆಜ್ಞಾನುಸಾರವಾಗಿ ಅವರೆಲ್ಲರೂ ಮೋಕ್ಷವನ್ನು ಹೊಂದುವರು.

೮೬. ಆದುದರಿಂದ ಈ ಕ್ಷೇತ್ರದಲ್ಲಿ ವಾಕ್ಕಾಯಕರ್ಮಗಳಿಂದ ಯಾರೂ

ನಾವಿಮುಕ್ತೇ ಮೃತಃ ಕಶ್ಚಿನ್ನರಕಂ ಯಾತಿ ಕಿಲ್ಬಿಷೀ ।
ಮಮಾನುಗ್ರಹಮಾಸಾದ್ಯ ಗಚ್ಛತ್ಯೇವ ಪರಾಂ ಗತಿಂ ॥ ೮೭ ॥
ಅನಶನಂ ಯಃ ಕುರುತೇ ಮದ್ಭಕ್ತ ಇಹ ಸುವ್ರತಃ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೮೮ ॥
ಅಶಾಶ್ವತಮಿದಂ ಜ್ಞಾತ್ವಾ ಮಾನುಷ್ಯಂ ಬಹುಕಿಲ್ಬಿಷಂ ।
ಅವಿಮುಕ್ತಂ ಸದಾ ಸೇವ್ಯಂ ಸಂಸಾರಭಯಮೋಚಕಂ ॥ ೮೯ ॥
ನಾಸ್ಯತ್ಪಶ್ಯಾಮಿ ಜಂತೂನಾಂ ಮುಕ್ತ್ವಾ ವಾರಾಣಸೀಂ ಪುರೀಂ ।
ಸರ್ವಪಾಪಪ್ರಶಮನೀಂ ಪ್ರಾಯಶ್ಚಿತ್ತಂ ಕಲೌ ಯುಗೇ ॥ ೯೦ ॥
ಜನ್ಮಾಂತರಸಹಸ್ರೇಷು ಯತ್ಪಾಪಂ ಸಮುಪಾರ್ಜಿತಂ ।
ಅವಿಮುಕ್ತಂ ಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಂ ॥ ೯೧ ॥
ಜನ್ಮಾಂತರಸಹಸ್ರೇಷು ಯುಂಜನ್ಯೋಗೀ ಯದಾಪ್ನುಯಾತ್ ।
ತದಿಹೈವ ಪರೋ ಮೋಕ್ಷೋ ಮರಣಾದಧಿಗಮ್ಯತೇ ॥ ೯೨ ॥

---

ಇತರರಿಗೆ ಪಾಪಗಳನ್ನೆಣಿಸಬಾರದು. ಕ್ಷೇತ್ರವಾಸದ ಮಹಾಲಾಭವನ್ನು ಬಯಸುವವರು ಯಾವಾಗಲೂ ಶುಚಿಯಾದ ನಡೆವಳಿಕೆಯಲ್ಲಿಯೇ ಸ್ಥಿರರಾಗಿರಬೇಕು.

೮೭. ಈ ಅವಿಮುಕ್ತಕ್ಷೇತ್ರದಲ್ಲಿ ಯಾವ ಪಾಪಿಯು ಮರಣವನ್ನು ಹೊಂದಿದರೂ ನರಕಕ್ಕೆ ಭಾಗಿಯಾಗುವುದಿಲ್ಲ. ನನ್ನ ಅನುಗ್ರಹವನ್ನು ಪಡೆದು ಉತ್ತಮ ಗತಿಯನ್ನೇ ಹೊಂದುವನು.

೮೮. ಇಲ್ಲಿ ಯಾವ ನನ್ನ ಭಕ್ತನು ಉತ್ತಮ ವ್ರತವನ್ನು ತಳೆದು ಉಪವಾಸವನ್ನು ಮಾಡುವನೊ, ಅವನು ನೂರುಕೊಟಿಕಲ್ಪಗಳಾದರೂ ಪುನಃ ಭೂಲೋಕದಲ್ಲಿ ಹುಟ್ಟಲಾರನು.

೮೯. ಮನುಷ್ಯಜನ್ಮವು ಕ್ಷಣಿಕವಾದುದೆಂದೂ, ಅತ್ಯಂತ ಪಾಪಭೂಯಿಷ್ಠವಾದುದೆಂದೂ ಮನಗಂಡವರು ಸಂಸಾರಭಯವನ್ನು ಕಡೆಗಾಣಿಸುವ ಅವಿಮುಕ್ತಕ್ಷೇತ್ರವನ್ನು ನಿತ್ಯವೂ ಸೇವಿಸಬೇಕು.

೯೦. ಸಕಲ ಪಾತಕಗಳನ್ನೂ ಶಮನಮಾಡುವ ವಾರಾಣಸಿಯೊಂದನ್ನುಳಿದರೆ, ಜೀವರಿಗೆ ಈ ಕಲಿಯುಗದಲ್ಲಿ ಪ್ರಾಯಶ್ಚಿತ್ತಕಾರಕವಾದ ಬೇರೆ ಯಾವುದನ್ನೂ ಕಾಣೆನು.

೯೧. ಅವಿಮುಕ್ತವನ್ನು ಪ್ರವೇಶಮಾಡಿದ ಮನುಷ್ಯನ ಹಿಂದಿನ ಸಾವಿರಾರು ಜನ್ಮಗಳಲ್ಲಿ ಮಾಡಿದ ಪಾಪಸಂಚಯವೂ ಕೂಡ ತತ್ಕ್ಷಣದಲ್ಲಿಯೇ ಸಮೂಲವಾಗಿ ನಾಶವನ್ನು ಹೊಂದುವುದು.

೯೨. ಸಾವಿರಾರು ಜನ್ಮಗಳಲ್ಲಿ ಯೋಗಿಯು ಏಕಾಗ್ರವಾದ ಯೋಗಾ

ತಿರ್ಯಗ್ಯೋನಿಗತಾಃ ಸತ್ವಾ ಯೇಽವಿಮುಕ್ತಕೃತಾಲಯಾಃ ।
ಕಾಲೇನ ನಿಧನಂ ಪ್ರಾಪ್ತಾಸ್ತೇಽಪಿ ಯಾಂತಿ ಪರಾಂ ಗತಿಂ ॥ ೯೩ ॥
ಅವಿಮುಕ್ತಂ ನ ಸೇವಂತೇ ಯೇ ಮೂಢಾಸ್ತಮಸಾವೃತಾಃ ।
ವಿಣ್ಮೂತ್ರರೇತಸಾಂ ಮಧ್ಯೇ ತೇ ವಸಂತಿ ಪುನಃ ಪುನಃ ॥ ೯೪ ॥
ಅವಿಮುಕ್ತಂ ಸಮಾಸಾದ್ಯ ಯೋ ಲಿಂಗಂ ಸ್ಥಾಪಯೇತ್ಸುಧೀಃ ।
ಕಲ್ಪಕೋಟಿಶತೈರ್ವಾಪಿ ನಾಸ್ತಿ ತಸ್ಯ ಪುನರ್ಭವಃ ॥ ೯೫ ॥
ಗ್ರಹನಕ್ಷತ್ರತಾರಾಣಾಂ ಕಾಲೇನ ಪತನಂ ಧ್ರುವಂ ।
ಅವಿಮುಕ್ತೇ ಮೃತಾನಾಂ ತು ಪತನಂ ನೈವ ವಿದ್ಯತೇ ॥ ೯೬ ॥
ಬ್ರಹ್ಮಹತ್ಯಾಂ ನರಃ ಕೃತ್ವಾ ಪಶ್ಚಾತ್ಸಂಯತಮಾನಸಃ ।
ಪ್ರಾಣಾಂಸ್ತ್ಯಜತಿ ಯತ್ಕಾಶ್ಯಾಂ ಸ ಮುಕ್ತೋ ನಾತ್ರ ಸಂಶಯಃ ॥ ೯೭ ॥
ಸ್ತ್ರಿಯಃ ಪತಿವ್ರತಾ ಯಾಶ್ಚ ಮಮ ಭಕ್ತಿ ಸಮಾಹಿತಾಃ ।
ಅವಿಮುಕ್ತೇ ಮೃತಾ ವಿಪ್ರಾ ಯಾಂತಿ ತಾಃ ಪರಮಾಂ ಗತಿಂ ॥ ೯೮ ॥

---

ಭ್ಯಾಸದಿಂದ ಯಾವ ಪುನರಾವೃತ್ತಿರಹಿತವಾದ ಮೋಕ್ಷವನ್ನು ಸಾಧಿಸುವನೊ, ಅದನ್ನು ಪ್ರತಿಯೊಬ್ಬನೂ ಕಾಶಿಯಲ್ಲಿ ಪ್ರಾಪ್ತವಾದ ಮರಣದಿಂದಲೇ ಸುಲಭವಾಗಿ ಪಡೆಯುವನು.

೯೩. ಅವಿಮುಕ್ತಕ್ಷೇತ್ರದಲ್ಲಿ ನಿವಾಸವನ್ನು ಮಾಡಿಕೊಂಡು ಕಾಲಾನುಕ್ರಮದಲ್ಲಿ ದೇಹವನ್ನು ತ್ಯಜಿಸುವ ತಿರ್ಯಗ್ಜಂತುಗಳೂ ಸಹ ಉತ್ತಮಗತಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

೯೪. ಯಾವ ಮೂಢರು ತಮೋಗುಣಾವಿಷ್ಟರಾಗಿ ಅವಿಮುಕ್ತಕ್ಷೇತ್ರವನ್ನು ಸೇವಿಸುವುದಿಲ್ಲವೊ, ಅವರು ಮರಳಿ ಮರಳಿ ಮೂತ್ರಾಮೇಧ್ಯರೇತಸ್ಸುಗಳ ಮಧ್ಯದಲ್ಲಿ ಕ್ರಿಮಿಗಳಾಗಿ ಜನಿಸುತ್ತಿರುವರು.

೯೫. ಯಾವ ಬುದ್ಧಿವಂತನು ಅವಿಮುಕ್ತಕ್ಷೇತ್ರವನ್ನು ಸೇರಿ ಅಲ್ಲಿ ಒಂದು ಶಿವಲಿಂಗಪ್ರತಿಷ್ಠೆಯನ್ನು ಮಾಡುವನೊ, ಅವನಿಗೆ ನೂರುಕಲ್ಪಕೋಟಿಗಳಾದರೂ ಪುನರ್ಜನ್ಮವು ಸಂಭವಿಸುವುದಿಲ್ಲ.

೯೬. ಕಾಲಾನಂತರದಲ್ಲಿ ಗ್ರಹಗಳೂ, ನಕ್ಷತ್ರಗಳೂ, ತಾರೆಗಳೂ ಭೂಮಿಗೆ ಬೀಳುವುವೆಂಬುದು ನಿಶ್ಚಯವು. ಆದರೆ ಅವಿಮುಕ್ತದಲ್ಲಿ ಮೃತರಾದವರಿಗೆ ಪತನವೆಂದಿಗೂ ಕಾಣುವುದಿಲ್ಲ.

೯೭. ಯಾವ ಮನುಷ್ಯನೇ ಆದರೂ ಬ್ರಹ್ಮಹತ್ಯೆಯನ್ನು ಮಾಡಿಯೂ ಬಳಿಕ ಪಶ್ಚಾತ್ತಾಪಯುಕ್ತನಾಗಿ ಕಾಶಿಯನ್ನು ಸೇರಿ ಅಲ್ಲಿ ಪ್ರಾಣವನ್ನು ತ್ಯಜಿಸಲು ಮುಕ್ತನೇ ಆಗುವುದರಲ್ಲಿ ಸಂದೇಹವಿಲ್ಲ.

೯೮. ಎಲೈ ಬ್ರಾಹ್ಮಣರಿರಾ! ಪತಿವ್ರತೆಯರಾದ ಯಾವ ಸ್ತ್ರೀಯರು

ಅತ್ರೋತ್ಕ್ರಮಣಕಾಲೇಽಹಂ ಸ್ವಯಮೇವ ದ್ವಿಜೋತ್ತಮಾಃ ।
ದಿಶಾಮಿ ತಾರಕಂ ಬ್ರಹ್ಮ ದೇಹೀ ಸ್ಯಾದ್ಯೇನ ತನ್ಮಯಃ ॥ ೯೯ ॥
ಮನ್ಮನಾ ಮಮ ಭಕ್ತಶ್ಚ ಮಯಿ ಸರ್ವಾರ್ಪಿತಕ್ರಿಯಃ ।
ಯಥಾ ಮೋಕ್ಷಮಿಹಾಪ್ನೋತಿ ನ ತಥಾನ್ಯತ್ರ ಕುತ್ರಚಿತ್ ॥ ೧೦೦ ॥
ಮರಣಂ ನಿಶ್ಚಿತಂ ಜ್ಞಾತ್ವಾ ಗತಿಂ ಚಾಸುಖರೂಪಿಣಂ ।
ಚಲಮಾಗಂತುಕಂ ಸರ್ವಂ ತತಃ ಕಾಶೀಂ ಸಮಾಶ್ರಯೇತ್ ॥ ೧೦೧ ॥
ಕಾಶೀ ಸಮಾಶ್ರಿತಾ ಯೈಸ್ತು ಮನೋವಾಕ್ಕಾಯಕರ್ಮಭಿಃ ।
ತಾನತ್ರ ನಿರ್ಮಲಧಿಯೋ ನಿರ್ವಾಣಶ್ರೀಃ ಸಮಾಶ್ರಯೇತ್ ॥ ೧೦೨ ॥
ಕಾಶೀಸ್ಥಿತೈಕಮಪಿ ಯಃ ಪ್ರೀಣಯೇನ್ನ್ಯಾಯಜೈರ್ಧನೈಃ ।
ತೇನ ತ್ರೈಲೋಕ್ಯಮಖಿಲಂ ಪ್ರೀಣಿತಂ ತು ಮಯಾ ಸಹ ॥ ೧೦೩ ॥
ಯಃ ಪ್ರೀಣಯತಿ ಪುಣ್ಯಾತ್ಮಾ ನಿರ್ವಾಣನಗರೀನರಂ ।
ಪುಮರ್ಥೇನ ಸ್ಥಿತೋ ನಿತ್ಯಂ ಬ್ರಾಹ್ಮಣಾಃ ಪ್ರೀಣಯಾಮಿ ತಂ ॥ ೧೦೪ ॥

---

ನನ್ನಲ್ಲಿಯೇ ಭಕ್ತಿಯನ್ನು ಮಾಡುವವರಾಗಿ ಅವಿಮುಕ್ತದಲ್ಲಿ ಪ್ರಾಣಗಳನ್ನು ಬಿಡುವರೊ, ಅವರೂ ಸಹ ಪರಮಪದವನ್ನು ಪಡೆಯುವುದು ದಿಟವು.

೯೯. ದ್ವಿಜೋತ್ತಮರಿರಾ! ಪ್ರಾಣೋತ್ಕ್ರಮಣಕಾಲದಲ್ಲಿ ನಾನೇ ಇಲ್ಲಿ ಜೀವನಿಗೆ ತಾರಕಬ್ರಹ್ಮದ ಉಪದೇಶವನ್ನು ಕರ್ಣದಲ್ಲಿ ಮಾಡುತ್ತೇನೆ. ಅದರಿಂದ ಜೀವನು ಬ್ರಹ್ಮಸ್ವರೂಪನೇ ಆಗುವನು.

೧೦೦. ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ, ನನ್ನ ಭಕ್ತನಾಗಿ, ಸರ್ವಕಾರ್ಯಗಳನ್ನೂ ನನ್ನಲ್ಲಿಯೇ ಸಮರ್ಪಿಸುವ ಭಕ್ತನು ಈ ಕ್ಷೇತ್ರದಲ್ಲಿ ಮೋಕ್ಷವನ್ನು ಪಡೆಯುವಷ್ಟು ಸುಲಭವಾಗಿ ಮತ್ತೆಲ್ಲಿಯೂ ಪಡೆಯಲಾರನು.

೧೦೧. ಇಂದಾಗಲಿ ಕಾಲಾಂತರದಲ್ಲಿಯಾಗಲಿ ಮರಣವು ನಿಶ್ಚಯವೆಂದು ತಿಳಿದು, ಸಂಸಾರದಲ್ಲಿ ಹುಟ್ಟಿ ಸಾಯುತ್ತಿರುವುದು ದುಃಖಪ್ರದವಾದುದೆಂಬುದನ್ನು ಮನಗಂಡು, ಐಹಿಕಭೋಗಭಾಗ್ಯಗಳೆಲ್ಲವೂ ಚಂಚಲಗಳೂ ಆಗಂತುಕಗಳೂ ಆಗಿರುವುದನ್ನು ನಿಶ್ಚಯಿಸಿ ಪ್ರಾಜ್ಞನಾದವನು ಕಾಶಿಯನ್ನಾಶ್ರಯಿಸಬೇಕು.

೧೦೨. ಯಾರು ಈ ಕಾಶಿಯನ್ನೇ ಮನಸ್ಸು, ಮಾತು, ದೇಹ, ಕರ್ಮಗಳಿಂದ ಆಶ್ರಯಿಸಿರುವರೊ, ಅಂತಹ ನಿರ್ಮಲಜ್ಞಾನಸಂಪನ್ನರಾದವರನ್ನು ಮೋಕ್ಷಲಕ್ಷ್ಮಿಯು ತಾನಾಗಿಯೇ ಬಂದು ವರಿಸುತ್ತಾಳೆ.

೧೦೩. ಯಾವನು ನ್ಯಾಯೋಪಾರ್ಜಿತವಾದ ಧನದಿಂದ ಕಾಶೀನಿವಾಸಿಯಾದ ಒಬ್ಬನನ್ನು ಸಂತೋಷಗೊಳಿಸುವನೊ, ಅಷ್ಟರಿಂದಲೇ ಅವನು ತ್ರೈಲೋಕ್ಯವನ್ನೇ ಅಲ್ಲದೆ ನನ್ನನ್ನೂ ತೃಪ್ತಿಗೊಳಿಸಿದನೆಂದು ತಿಳಿಯಬೇಕು.

೧೦೪. ಬ್ರಾಹ್ಮಣೋತ್ತಮರಿರಾ! ಯಾವ ಪುಣ್ಯಪುರುಷನು ನಿರ್ವಾಣ

ದಿವೋದಾಸೋಽಪಿ ರಾಜರ್ಷಿಃ ಕಾಶೀಂ ಧರ್ಮೇಣ ಪಾಲಯನ್ ।
ಸದೇಹೋ ಮತ್ಪದಂ ಪ್ರಾಪ್ತೋ ಯತೋ ನ ಪುನರಾಗತಿಃ ॥ ೧೦೫ ॥
ಅತ್ರ ಯೋಗಸ್ತಥಾ ಜ್ಞಾನಂ ಮುಕ್ತಿರೇಕೇನ ಜನ್ಮನಾ ।
ಅತೋಽವಿಮುಕ್ತಮಾಸಾದ್ಯ ನಾನ್ಯದ್ಗಚ್ಛೇತ್ತಪೋವನಂ ॥ ೧೦೬ ॥
ಮೋಕ್ಷಂ ಸುದುರ್ಲಭಂ ಜ್ಞಾತ್ವಾ ಸಂಸಾರಂ ಚಾತಿಭೀಷಣಂ ।
ಅಶ್ಮನಾ ಚರಣೌ ಹತ್ವಾ ಕಾಲಮತ್ರ ಪ್ರತೀಕ್ಷಯೇತ್ ॥ ೧೦೭ ॥
ಅವಿಮುಕ್ತಂ ಪರಿತ್ಯಜ್ಯ ಯದಾ ಯಾಸ್ಯಂತಿ ದುರ್ಧಿಯಃ ।
ಹಸಿಷ್ಯಂತಿ ತದಾ ಭೂತಾನ್ಯನ್ಯೋನ್ಯಕರತಾಡನೈಃ ॥ ೧೦೮ ॥
ಪ್ರಾಪ್ಯ ವಾರಾಣಸೀಂ ಪುಣ್ಯಾಂ ಸಿದ್ಧಿಕ್ಷೇತ್ರಮನುತ್ತಮಂ ।
ಪರಿನಿಷ್ಕ್ರಾಂತಮನ್ಯತ್ರ ಕಸ್ಯ ಜಂತೋರ್ಮತಿರ್ಭವೇತ್ ॥ ೧೦೯ ॥
ಮಹಾದಾನೇನ ಚಾನ್ಯತ್ರ ಯತ್ಫಲಂ ಲಭ್ಯತೇ ನರೈಃ ।
ಅವಿಮುಕ್ತೇ ತು ಕಾಕಿಣ್ಯಾಂ ದತ್ತಾಯಾಂ ತದವಾಪ್ಯತೇ ॥ ೧೧೦ ॥

---

ನಗರಿಯ ನಿವಾಸಿಯಾದವನನ್ನು ಸಂತೋಷಗೊಳಿಸಿ ಅವನ ಪುರುಷಾರ್ಥ ಸಾಧನೆಗೆ ಕಾರಣನಾಗುವನೊ, ಅವನನ್ನು ನಾನೇ ಸುಪ್ರೀತನನ್ನಾಗಿ ಮಾಡುವೆನು.

೧೦೫. ರಾಜರ್ಷಿಯಾದ ದಿವೋದಾಸನೂ ಸಹ ನನ್ನ ಕಾಶೀನಗರಿಯನ್ನು ಧರ್ಮದಿಂದ ಪಾಲಿಸುತ್ತಿದ್ದನಾದುದರಿಂದ ಪುನರಾವೃತ್ತಿರಹಿತವಾದ ನನ್ನ ಕೈಲಾಸಪದವಿಯನ್ನು ಸಶರೀರನಾಗಿಯೇ ಪಡೆಯುವವನಾದನು.

೧೦೬. ಇಲ್ಲಿ ಯೋಗವೂ, ಜ್ಞಾನವೂ, ಮೋಕ್ಷವೂ, ಒಂದೇ ಜನ್ಮದಲ್ಲಿಯೇ ಸಾಧಿಸಲ್ಪಡುವುವು. ಆದುದರಿಂದ ಅವಿಮುಕ್ತಕ್ಷೇತ್ರವನ್ನು ಸೇರಿದ ಮನುಷ್ಯನು ಬೇರೆ ತಪೋವನಗಳಿಗೆ ಹೋಗಬೇಕಾದುದಿಲ್ಲ.

೧೦೭. ಮೋಕ್ಷವು ಅತ್ಯಂತ ದುರ್ಲಭವೆಂಬುದನ್ನೂ, ಸಂಸಾರವು ಅತಿ ಭಯಂಕರವೆಂಬುದನ್ನೂ ತಿಳಿದವನು ಇತರ ಕ್ಷೇತ್ರಗಳಿಗೆ ತಿರುಗುವ ಚಾಪಲ್ಯ ವುಂಟಾಗದಂತೆ ಕಲ್ಲಿನಿಂದ ಕಾಲುಗಳನ್ನು ಜಜ್ಜಿಕೊಂಡು ದೇಹವಿಯೋಗದ ಕಾಲವನ್ನೇ ನಿರೀಕ್ಷಿಸಬೇಕು.

೧೦೮. ದುರ್ಬುದ್ಧಿಗಳಾದವರು ಅವಿಮುಕ್ತಕ್ಷೇತ್ರವನ್ನು ತ್ಯಜಿಸಿ ಯಾವಾಗ ಇತರ ಕ್ಷೇತ್ರಗಳಿಗೆ ಹೋಗುವರೊ, ಆಗ ಭೂತಗಣಗಳೆಲ್ಲವೂ ಕರತಾಡನಗಳನ್ನು ಮಾಡುತ್ತ ತಮ್ಮತಮ್ಮಲ್ಲಿಯೇ ಪರಿಹಾಸ್ಯಮಾಡಿಕೊಳ್ಳುವುವು.

೧೦೯. ಅಪ್ರತಿಮವಾದ ಸಿದ್ಧಿಕ್ಷೇತ್ರವೆನಿಸಿದ ಪುಣ್ಯತಮವಾದ ವಾರಾಣಸೀ ಪುರಿಯನ್ನು ಹೊಂದಿದ ಯಾವ ಪ್ರಾಣಿಗೆ ತಾನೆ ಇತರ ಸ್ಥಳಗಳಿಗೆ ಹೋಗಿ ನೋಡುವ ಚಾಪಲ್ಯದಿಂದ ಕೂಡಿದ ಬುದ್ಧಿಯುಂಟಾಗುವುದು ?

೧೧೦. ಇತರ ಕ್ಷೇತ್ರಗಳಲ್ಲಿ ಮಹಾ ದಾನಗಳನ್ನು ಕೊಡುವುದರಿಂದ

ಏಕಂ ಸಮರ್ಚಯೇಲ್ಲಿಂಗಂ ತಪಸ್ತಪ್ಯೇತ ಚಾಪರಃ ।
ತಯೋರ್ಮಧ್ಯೇ ತು ಸ ಶ್ರೇಷ್ಠೋ ಯೋ ಲಿಂಗಂ ಪೂಜಯೇದಿಹ॥೧೧೧॥
ತೀರ್ಥಾಂತರೇ ಗವಾಂ ಕೋಟಿಂ ವಿಧಿವದ್ಯಃ ಪ್ರಯಚ್ಛತಿ ।
ಏಕಾಹಂ ಯೋ ವಸೇತ್ಕಾಶ್ಯಾಂ ಕಾಶೀವಾಸೀ ತಯೋರ್ವರಃ ॥ ೧೧೨ ॥
ಅನ್ಯತ್ರ ಬ್ರಾಹ್ಮಣಾನಾಂ ತು ಕೋಟಿಂ ಸಂಭೋಜ್ಯ ಯತ್ಫಲಂ ।
ವಾರಾಣಸ್ಯಾಂ ತು ಚೈಕೇನ ಭೋಜಿತೇನ ತದಾಪ್ಯತೇ ॥ ೧೧೩ ॥
ಸನ್ನಿಹತ್ಯಾಂ ಕುರುಕ್ಷೇತ್ರೇ ರಾಹುಗ್ರಸ್ತೇ ದಿವಾಕರೇ ।
ತುಲಾಪುರುಷದಾನೇನ ಕಾಶೀಭಿಕ್ಷಾ ಸಮಾ ಭವೇತ್ ॥ ೧೧೪ ॥
ಮಮೇಹ ಪರಮಂ ಜ್ಯೋತಿರಾಪಾತಾಲಾದ್ವ್ಯವಸ್ಥಿತಂ ।
ಅತೀತ್ಯ ಸಪ್ತಲೋಕಾದೀನನಂತಂ ಲಿಂಗರೂಪಧೃಕ್ ॥ ೧೧೫ ॥
ಪೃಥಿವ್ಯಂತೇಽಪಿ ಯೇ ಲಿಂಗಮವಿಮುಕ್ತಂ ಸ್ಮರಂತಿ ಮೇ ।
ಕಲುಷೈಸ್ತೇ ವಿಮುಚ್ಯಂತೇ ಮಹದ್ಭಿರಿತಿ ನಿಶ್ಚಿತಂ ॥ ೧೧೬ ॥

---

ಮಾನವರು ಯಾವ ಸತ್ಫಲವನ್ನು ಹೊಂದುವರೊ, ಅದನ್ನು ಈ ಕ್ಷೇತ್ರದಲ್ಲಿ ಒಂದು ಕವಡೆಯಷ್ಟನ್ನು ಮಾತ್ರ ದಾನಮಾಡುವುದರಿಂದಲೇ ಪಡೆಯಬಹುದು.

೧೧೧. ಲಿಂಗಾರ್ಚನೆಯನ್ನು ಮಾಡುವವನೊಬ್ಬನನ್ನೂ ತಪಸ್ಸನ್ನು ಆಚರಿಸುವವನೊಬ್ಬನನ್ನೂ ತೆಗೆದುಕೊಂಡರೆ ಅವರಿಬ್ಬರಲ್ಲಿ ಯಾವನು ಕಾಶಿಯಲ್ಲಿ ಲಿಂಗವನ್ನರ್ಚಿಸುವನೊ, ಅವನೇ ಶ್ರೇಷ್ಠನೆನಿಸುವನು.

೧೧೨. ತೀರ್ಥಾಂತರಗಳಲ್ಲಿ ವಿಧಿಯನ್ನನುಸರಿಸಿ ಯಾವನು ಒಂದು ಕೋಟಿ ಗೋವುಗಳನ್ನು ದಾನಮಾಡುವನೊ, ಯಾವನು ಕಾಶಿಯಲ್ಲಿ ಒಂದು ದಿವಸದ ಮಟ್ಟಿಗೆ ವಾಸಮಾಡುವನೊ, ಅವಗಲ್ಲಿ ಕಾಶೀನಿವಾಸಿಯೇ ಉತ್ತಮನು.

೧೧೩. ಬೇರೆ ಸ್ಥಳಗಳಲ್ಲಿ ಕೋಟಿ ಬ್ರಾಹ್ಮಣರಿಗೆ ಸಂತರ್ಪಣೆಯನ್ನು ಮಾಡಿಸಲು ಯಾವ ಫಲವುಂಟೊ, ಅದನ್ನೇ ವಾರಾಣಸೀಕ್ಷೇತ್ರದಲ್ಲಿ ಒಬ್ಬನಿಗೆ ಭೋಜನಮಾಡಿಸುವುದರಿಂದಲೇ ಪಡೆಯಬಹುದು.

೧೧೪. ಕುರುಕ್ಷೇತ್ರದಲ್ಲಿ ಸೂರ್ಯನು ರಾಹುಗ್ರಸ್ತನಾಗಿರಲು ಅಲ್ಲಿ ಪುರುಷತುಲಾಭಾರದಾನದಿಂದ ಯಾವ ಫಲವುಂಟೊ, ಅದು ಕಾಶಿಯಲ್ಲಿ ಒಬ್ಬನಿಗೆ ಭಿಕ್ಷೆಯನ್ನು ನೀಡುವುದರಿಂದಲೇ ಲಭಿಸುವುದು.

೧೧೫. ಅಲ್ಲಿ ಏಳು ಅಧೋಲೋಕಗಳನ್ನೂ ಅತಿಕ್ರಮಿಸಿದುದಾಗಿ, ಅನಂತವೂ, ಲಿಂಗಸ್ವರೂಪವನ್ನು ಧರಿಸಿದುದೂ ಆದ ನನ್ನ ಪರಂಜ್ಯೋತಿಯೇ ಪಾತಾಲ ಲೋಕದವರೆಗೂ ವ್ಯಾಪಿಸಿ ನೆಲಸಿರುವುದು.

೧೧೬. ಭೂಮಿಯ ಅಂತ್ಯಪ್ರದೇಶಗಳಲ್ಲಿದ್ದರೂ ಯಾರು ಅವಿಮುಕ್ತೇಶ್ವರ

ಅಸ್ಮಿನ್ಕ್ಷೇತ್ರೇ ತು ಯೇನಾಹಂ ದೃಷ್ಟಃ ಸ್ಪೃಷ್ಟಃ ಸಮರ್ಚಿತಃ ।
ಸಂಪ್ರಾಪ್ಯ ತಾರಕಂ ಜ್ಞಾನಂ ನ ಸ ಭೂಯೋಽಭಿಜಾಯತೇ ॥ ೧೧೭ ॥
ಯೋ ಮಾಮಿಹ ಸಮಭ್ಯರ್ಚ್ಯ ಮ್ರಿಯತೇಽನ್ಯತ್ರ ಕುತ್ರಚಿತ್ ।
ಜನ್ಮಾಂತರೇಽಪಿ ಮಾಂ ಪ್ರಾಪ್ಯ ಸ ವಿಮುಕ್ತೋ ಭವಿಷ್ಯತಿ ॥ ೧೧೮ ॥
ಇತ್ಯುಕ್ತ್ವಾ ಕ್ಷೇತ್ರಮಾಹಾತ್ಮ್ಯಂ ದ್ವಿಜಾನಾಮಗ್ರತೋ ಹರಃ ।
ಪಶ್ಯತಾಮೇವ ತೇಷಾಂ ತು ತತ್ರೈವಾಂತರ್ಹಿತೋಽಭವತ್ ॥ ೧೧೯ ॥
ತೇಽಪಿ ಸಾಕ್ಷಾದ್ವಿರೂಪಾಕ್ಷಂ ಪ್ರತ್ಯಕ್ಷೀಕೃತ್ಯ ವಾಡವಾಃ ।
ಪ್ರಹೃಷ್ಟಮನಸೋಽತ್ಯಂತಂ ಪ್ರಯಯುಃ ಸ್ವಂ ಸ್ವಮಾಶ್ರಯಂ ॥ ೧೨೦ ॥
ಶಂಭೋರ್ವಾಕ್ಯಂ ವಿನಿಶ್ಚಿತ್ಯ ಸರ್ವಜ್ಞಸ್ಯ ಕೃಪಾನಿಧೇಃ ।
ತ್ಯಕ್ತ್ವಾ ಕಾರ್ಯಾಂತರಂ ವಿಪ್ರಾ ಲಿಂಗಾನ್ಯೇವ ಸಮರ್ಚಿಷುಃ ॥ ೧೨೧ ॥

---

ಸಾನುಕವಾದ ನನ್ನ ಈ ಲಿಂಗವನ್ನು ಸ್ಪರ್ಶಿಸುವರೊ, ಅವರು ಮಹಾ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವರೆಂಬುದು ನಿಶ್ಚಯವು.

೧೧೭. ಈ ಕ್ಷೇತ್ರದಲ್ಲಿ ನನ್ನನ್ನು ಯಾವನು ನೋಡುವನೊ, ಸ್ಪರ್ಶಿಸುವನೊ, ಪೂಜಿಸುವನೊ, ಅವನು ಭವತಾರಕವಾದ ಜ್ಞಾನವನ್ನು ಪಡೆದು ಪುನಃ ಭೂಲೋಕದಲ್ಲಿ ಜನಿಸುವುದಿಲ್ಲ.

೧೧೮. ಯಾವ ಮಾನವನು ನನ್ನನ್ನು ಇಲ್ಲಿ ಪೂಜೆಮಾಡಿ ಕಾರಣಾಂತರಗಳಿಂದ ಇತರ ಸ್ಥಳಗಳಲ್ಲಿ ಎಲ್ಲಿಯಾದರೂ ಮರಣವನ್ನು ಹೊಂದುವನೊ, ಅವನು ಮತ್ತೊಂದು ಜನ್ಮದಲ್ಲಿಯಾದರೂ ನನ್ನನ್ನು ಹೊಂದಿ ಮೋಕ್ಷವನ್ನು ಪಡೆಯುವನು.''

೧೧೯. ಇಂತೆಂದು ಆ ಬ್ರಾಹ್ಮಣರೆದುರಿನಲ್ಲಿ ಕ್ಷೇತ್ರದ ಮಾಹಾತ್ಮ್ಯವನ್ನು ನಿರೂಪಿಸಿ ಪರಮೇಶ್ವರನು ಅವರು ನೋಡುತ್ತಿದ್ದಂತೆಯೇ ಅಲ್ಲಿಯೇ ಅಂತರ್ಧಾನವನ್ನು ಹೊಂದುವವನಾದನು.

೧೨೦. ಆ ಬ್ರಾಹ್ಮಣೋತ್ತಮರೂ ಸಹ ವಿರೂಪಾಕ್ಷನನ್ನು ಸ್ಥೂಲನೇತ್ರಗಳಿಂದಲೇ ಪ್ರತ್ಯಕ್ಷನಾಗಿ ಕಂಡುದರಿಂದ ಅತ್ಯಂತ ಹರ್ಷದಿಂದ ಕೂಡಿದ ಮನಸ್ಸುಳ್ಳವರಾಗಿ ತಮ್ಮ ತಮ್ಮ ಆಶ್ರಮಗಳನ್ನು ಕುರಿತು ತೆರಳಿದರು.

೧೨೧. ಸರ್ವಜ್ಞನೂ ಕೃಪಾಸಮುದ್ರನೂ ಆದ ಮಹೇಶ್ವರನ ಮಾತುಗಳನ್ನೇ ಪ್ರಮಾಣವಾಗಿ ಸ್ವೀಕರಿಸಿ ಆ ಬ್ರಾಹ್ಮಣರೆಲ್ಲರೂ ತಮ್ಮ ಇತರ ಕಾರ್ಯಗಳನ್ನೆಲ್ಲ ತ್ಯಜಿಸಿ ಲಿಂಗಾರ್ಚನೆಯಲ್ಲಿಯೇ ನಿರತರಾಗಿದ್ದರು.

ಸ್ಕಂದ ಉವಾಚ :—

ಪಠಿತ್ವಾ ಪಾಠಯಿತ್ವಾ ಚ ರಹಸ್ಯಾಖ್ಯಾನಮುತ್ತಮಂ ।
ಶ್ರದ್ಧಾಳುಃ ಪಾತಕೈರ್ಮುಕ್ತಃ ಶಿವಲೋಕೇ ಮಹೀಯತೇ ॥ ೧೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಕ್ಷೇತ್ರರಹಸ್ಯಕಥನಂ"
ನಾಮ ಚತುಃಷಷ್ಟಿತಮೋಽಧ್ಯಾಯಃ

---

೧೨೨. ಸ್ಕಂದನು ಹೇಳುತ್ತಾನೆ:— ರಹಸ್ಯವಾದ ಕ್ಷೇತ್ರಮಾಹಾತ್ಮ್ಯದ ಈ ಆಖ್ಯಾನವನ್ನು ಶ್ರದ್ಧಾಳುವಾದ ಭಕ್ತನು ಪಠಿಸಿದರೂ ಇತರರಿಂದ ಹೇಳಿಸಿದರೂ ಪಾತಕಗಳೆಲ್ಲವನ್ನೂ ಕಳೆದುಕೊಂಡು ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಕ್ಷೇತ್ರರಹಸ್ಯಕಥನ"ವೆಂಬ
ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಷಷ್ಟಿತಮೋಽಧ್ಯಾಯಃ

### ಪರಾಶರೇಶ್ವರಾದಿ ಲಿಂಗಸಂಭವವರ್ಣನಂ

ಸ್ಕಂದ ಉವಾಚ :—

ಜ್ಯೇಷ್ಠೇಶ್ವರಸ್ಯ ಪರಿತೋ ಯಾನಿ ಲಿಂಗಾನಿ ಕುಂಭಜ ।
ತಾನಿ ಪಂಚಸಹಸ್ರಾಣಿ ಮುನೀನಾಂ ಸಿದ್ಧಿದಾನ್ಯಲಂ ॥ ೧ ॥
ಪರಾಶರೇಶ್ವರಂ ಲಿಂಗಂ ಜ್ಯೇಷ್ಠೇಶಾದುತ್ತರೇ ಮಹತ್ ।
ತಸ್ಯ ದರ್ಶನಮಾತ್ರೇಣ ನಿರ್ಮಲಂ ಜ್ಞಾನಮಾಪ್ಯತೇ ॥ ೨ ॥
ತತ್ರೈವ ಸಿದ್ಧಿದಂ ಲಿಂಗಂ ಮಾಂಡವ್ಯೇಶ್ವರಸಂಜ್ಞಿತಂ ।
ನ ತಸ್ಯ ದರ್ಶನಾಜ್ಜಾತು ದುರ್ಬುದ್ಧಿಂ ಪ್ರಾಪ್ನುಯಾನ್ನರಃ ॥ ೩ ॥
ಲಿಂಗಂ ಚ ಶಂಕರೇಶಾಖ್ಯಂ ತತ್ರೈವ ಶುಭದಂ ಸದಾ ।
ಭೃಗುನಾರಾಯಣಸ್ತತ್ರ ಭಕ್ತಾನಾಂ ಸರ್ವಸಿದ್ಧಿದಃ ॥ ೪ ॥
ಜಾಬಾಲೀಶ್ವರಸಂಜ್ಞಂ ಚ ಲಿಂಗಂ ತತ್ರಾತಿಸಿದ್ಧಿದಂ ।
ತಸ್ಯ ಸಂದರ್ಶನಾಜ್ಜಾತು ನ ಜಂತುರ್ದುರ್ಗತಿಂ ವ್ರಜೇತ್ ॥ ೫ ॥

---

## ಕನ್ನಡದ ಅನುವಾದ

### ಪರಾಶರೇಶ್ವರಾದಿ ಲಿಂಗಗಳ ಆವಿರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ:—ಕುಂಭಸಂಭವಮುನಿಯೆ ! ಜ್ಯೇಷ್ಠೇಶ್ವರನ ಸುತ್ತಲೂ ಇರುವ ಲಿಂಗಗಳು ಐದುಸಾವಿರ ಸಂಖ್ಯೆಯುಳ್ಳವುಗಳೆಂದು ಹೇಳಲ್ಪಡುವುವು. ಅವುಗಳು ಸೇವಿಸುವ ಮುನಿಗಳಿಗೆ ಕಾರ್ಯಸಿದ್ಧಿಗಳನ್ನುಂಟುಮಾಡುವುವು.

೨. ಜ್ಯೇಷ್ಠೇಶ್ವರನಿಗೆ ಉತ್ತರದಲ್ಲಿ ಮಹಾಮಹಿಮೋಪೇತವಾದ ಪರಾಶರೇಶ್ವರವೆಂಬ ಲಿಂಗವೊಂದಿರುವುದು. ಅದನ್ನು ದರ್ಶನಮಾಡುವ ಮಾತ್ರದಿಂದಲೇ ನಿರ್ಮಲವಾದ ಜ್ಞಾನವುಂಟಾಗುವುದು.

೩. ಅಲ್ಲಿಯೇ ಮಾಂಡವೇಶ್ವರನಾಮಕವಾದ ಮತ್ತೊಂದು ಲಿಂಗವು ಸಿದ್ಧಿಪ್ರದವಾಗಿರುವುದು. ಅದರ ದರ್ಶನದಿಂದ ಮನುಷ್ಯನಿಗೆಂದಿಗೂ ದುರ್ಬುದ್ಧಿಯುಂಟಾಗುವುದಿಲ್ಲವು.

೪. ಅದರ ಸಮೀಪದಲ್ಲಿಯೇ ನಿತ್ಯವೂ ಮಂಗಳದಾಯಕವೂ ಆದ ಶಂಕರೇಶ್ವರವೆಂಬ ಲಿಂಗವಿರುವುದು. ಅಲ್ಲಿ ಭೃಗುನಾರಾಯಣಸ್ವಾಮಿಯು ಭಕ್ತರಿಗೆ ಸಕಲ ಸಿದ್ಧಿಗಳನ್ನೂ ದಯೆಗೈಯುತ್ತಿರುವನು.

೫. ಬಳಿಕ ಅಷ್ಟಸಿದ್ಧಿಗಳನ್ನು ಕೈಗೂಡಿಸುವ ಜಾಬಾಲೀಶ್ವರನಾಮಕವಾದ ಲಿಂಗವೊಂದಿರುವುದು. ಅದರ ಸಂದರ್ಶನದಿಂದ ಮನುಷ್ಯನು ಎಂದಿಗೂ ದುರ್ಗತಿಯನ್ನು ಪಡೆಯುವುದಿಲ್ಲವು.

ಸುಮಂತುಮುನಿನಾ ಶ್ರೇಷ್ಠಸ್ತತ್ರಾದಿತ್ಯಃ ಪ್ರತಿಷ್ಠಿತಃ ।
ತಸ್ಯ ಸಂದರ್ಶನಾದೇವ ಕುಷ್ಠವ್ಯಾಧಿಃ ಪ್ರಶಾಮ್ಯತಿ ॥ ೬ ॥
ಭೈರವೀಭೀಷಣಾನಾಮ ತತ್ರ ಭೀಷಣರೂಪಿಣೀ ।
ಕ್ಷೇತ್ರಸ್ಯ ಭೀಷಣಂ ಸರ್ವಂ ನಾಶಯೇದ್ಭಾವತೋಽರ್ಚಿತಾ ॥ ೭ ॥
ತತ್ರೋಪಜಂಘನೇರ್ಲಿಂಗಂ ಕರ್ಮಬಂಧವಿಮೋಕ್ಷಣಂ ।
ನೃಭಿಃ ಸಂಸೇವಿತಂ ಭಕ್ತ್ಯಾ ಷಣ್ಮಾಸಾತ್ಸಿದ್ಧಿದಂ ಪರಂ ॥ ೮ ॥
ಭಾರದ್ವಾಜೇಶ್ವರಂ ಲಿಂಗಂ ಲಿಂಗಂ ಮಾದ್ರೀಶ್ವರಂ ಪರಂ ।
ಏಕತ್ರ ಸಂಸ್ಥಿತೇ ದ್ವೇ ತು ದ್ರಷ್ಟವ್ಯೇ ಸುಕೃತಾತ್ಮನಾ ॥ ೯ ॥
ಅರುಣಸ್ಥಾಪಿತಂ ಲಿಂಗಂ ತತ್ರೈವ ಕಲಶೋದ್ಭವ ।
ತಸ್ಯ ಲಿಂಗಸ್ಯ ಸೇವಾತಃ ಸರ್ವಸಮೃದ್ಧಿಮವಾಪ್ನುಯಾತ್ ॥ ೧೦ ॥
ಲಿಂಗಂ ವಾಜಸನೇಯಾಖ್ಯಂ ತತ್ರಾಸ್ತ್ಯತಿಮನೋಹರಂ ।
ತಸ್ಯ ಸಂದರ್ಶನಾತ್ಪುಂಸಾಂ ವಾಜಪೇಯಫಲಂ ಲಭೇತ್ ॥ ೧೧ ॥

---

೬. ಸುಮಂತುವೆಂಬ ಮಹಾಮುನಿಯು ಅದರ ಬಳಿಯಲ್ಲಿಯೇ ಉತ್ತಮವಾದ ಆದಿತ್ಯ ವಿಗ್ರಹವನ್ನು ಪ್ರತಿಷ್ಠಿಸಿರುವನು. ಅದನ್ನು ನೋಡಿದ ಮಾತ್ರದಿಂದಲೇ ಮನುಜನ ಕುಷ್ಠವ್ಯಾಧಿಯು ನಾಶವನ್ನು ಹೊಂದುವುದು.

೭. ಅಲ್ಲಿಯೇ ಭಯಂಕರರೂಪವುಳ್ಳ ಭೀಷಣೆಯೆಂಬ ಹೆಸರಿನ ಮಹಾಕಾಳಿಯಿರುವಳು. ಭಕ್ತಿಯಿಂದ ಪೂಜಿಸಲು ಆಕೆಯು ಕ್ಷೇತ್ರದ ಸಕಲಭಯಗಳನ್ನೂ ನಾಶಗೊಳಿಸುವಳು.

೮. ಉಪಜಂಘನಿಯ ಲಿಂಗವು ಕರ್ಮಬಂಧಗಳಿಂದ ಬಿಡುಗಡೆಮಾಡುವುದು. ಅದನ್ನು ಆರುತಿಂಗಳ ಪರ್ಯಂತರ ಮನುಷ್ಯರು ಭಕ್ತಿಯಿಂದ ಸೇವಿಸಲು ದುರ್ಲಭಗಳಾದ ಸಿದ್ಧಿಗಳೂ ಸುಲಭಸಾಧ್ಯಗಳಾಗುವುವು.

೯. ಭಾರದ್ವಾಜೇಶ್ವರಲಿಂಗವೂ ಉತ್ತಮವಾದ ಮಾದ್ರೀಶ್ವರಲಿಂಗವೂ ಎರಡೂ ಒಂದೆಡೆಯಲ್ಲಿಯೇ ಇರುವುವು. ಅವುಗಳೆರಡನ್ನೂ ಪುಣ್ಯಾತ್ಮನಾದವನು ಅವಶ್ಯಕವಾಗಿಯೂ ನೋಡಲೇಬೇಕು.

೧೦. ಅಯ್ಯಾ ಕಲಶೋದ್ಭವನೆ! ಅಲ್ಲಿಯೇ ಅರುಣನು ಸ್ಥಾಪಿಸಿದ ಲಿಂಗವೊಂದಿರುವುದು. ಆ ಲಿಂಗವನ್ನು ಸೇವಿಸುವುದರಿಂದ ಮಾನವನು ಸಕಲೈಶ್ವರ್ಯಸಮೃದ್ಧಿಯನ್ನೂ ಪಡೆಯುವನು.

೧೧. ಅಲ್ಲಿಯೇ ಅತ್ಯಂತ ಮನೋಹರವಾದ ವಾಜಸನೇಯೇಶ್ವರವೆಂಬ ಲಿಂಗವಿರುವುದು. ಅದನ್ನು ನೋಡುವುದರಿಂದ ಮನುಷ್ಯರಿಗೆ ವಾಜಪೇಯಯಜ್ಞವನ್ನು ಮಾಡಿದ ಫಲವು ಲಭಿಸುವುದು.

 

ಕಣ್ವೇಶ್ವರಂ ಶುಭಂ ಲಿಂಗಂ ಲಿಂಗಂ ಕಾತ್ಯಾಯನೇಶ್ವರಂ ।
ವಾಮದೇವೇಶ್ವರಂ ಲಿಂಗಮೌತಥ್ಯೇಶ್ವರಮೇವ ಚ ॥ ೧೨ ॥
ಹಾರೀತೇಶ್ವರಸಂಜ್ಞಂ ಚ ಲಿಂಗಂ ವೈ ಗಾಲವೇಶ್ವರಂ ।
ಕುಂಭೇರ್ಲಿಂಗಂ ಮಹಾಪುಣ್ಯಂ ತಥಾ ವೈ ಕೌಸುಮೇಶ್ವರಂ ॥ ೧೩ ॥
ಅಗ್ನಿವರ್ಣೇಶ್ವರಂ ಚೈವ ನೈಧ್ರುವೇಶ್ವರಮೇವ ಚ ।
ವತ್ಸೇಶ್ವರಂ ಮಹಾಲಿಂಗಂ ಪರ್ಣಾದೇಶ್ವರಮೇವ ಚ ॥ ೧೪ ॥
ಸಕ್ತುಪ್ರಸ್ಥೇಶ್ವರಂ ಲಿಂಗಂ ಕಣಾದೇಶಂ ತಥೈವ ಚ ।
ಅಸ್ಯತ್ತತ್ರ ಮಹಾಲಿಂಗಂ ಮಾಂಡೂಕಾಯನಿರೂಪಿತಂ ॥ ೧೫ ॥
ಬಾಭ್ರವೇಯೇಶ್ವರಂ ಲಿಂಗಂ ಶಿಲಾವೃತ್ತೀಶ್ವರಂ ತಥಾ ।
ಚ್ಯವನೇಶ್ವರಲಿಂಗಂ ಚ ಶಾಲಂಕಾಯನಕೇಶ್ವರಂ ॥ ೧೬ ॥
ಕಲಿಂದಮೇಶ್ವರಂ ಲಿಂಗಂ ಲಿಂಗಮಕ್ರೋಧನೇಶ್ವರಂ ।
ಲಿಂಗಂ ಕಪೋತವೃತ್ತೀಶಂ ಕಂಕೇಶಂ ಕುಂತಲೇಶ್ವರಂ ॥ ೧೭ ॥
ಕಂಠೇಶ್ವರಂ ಕಹೋಲೇಶಂ ಲಿಂಗಂ ತುಂಬುರುಪೂಜಿತಂ ।
ಮತಂಗೇಶಂ ಮರುತ್ತೇಶಂ ಮಾಗಧೇಯೇಶ್ವರಂ ತಥಾ ॥ ೧೮ ॥
ಜಾತೂಕರ್ಣೇಶ್ವರಂ ಲಿಂಗಂ ಜಂಬುಕೇಶ್ವರಮೇವ ಚ ।
ಜಾರುಧೀಶಂ ಜಲೇಶಂ ಚ ಜಾಲ್ಮೇಶಂ ಜಾಲಕೇಶ್ವರಂ ॥ ೧೯ ॥
ಏವಮಾದೀನಿ ಲಿಂಗಾನಿ ಅಯುತಾರ್ಧಾನಿ ಕುಂಭಜ ।
ಸ್ಮರಣಾದ್ದರ್ಶನಾತ್ಸ್ಪರ್ಶಾದರ್ಚನಾನ್ನಮನಾತ್ಸ್ತುತೇಃ ॥ ೨೦ ॥

---

೧೨-೧೯. ಆ ಪ್ರದೇಶದಲ್ಲಿಯೇ ಕಣ್ವೇಶ್ವರನೆಂಬ ಪವಿತ್ರಲಿಂಗವೂ, ಕಾತ್ಯಾಯನೇಶ್ವರ, ವಾಮದೇವೇಶ್ವರ, ಔತಥ್ಯೇಶ್ವರ, ಹಾರೀತೇಶ್ವರ, ಗಾಲವೇಶ್ವರ, ಮಹಾಪುಣ್ಯಪ್ರದನಾದ ಕುಂಭೀಶ್ವರ, ಕೌಸುಮೇಶ್ವರ, ಅಗ್ನಿವರ್ಣೇಶ್ವರ, ನೈಧ್ರುವೇಶ್ವರ, ವತ್ಸೇಶ್ವರನೆಂಬ ಮಹಾಲಿಂಗವೂ, ಪರ್ಣಾದೇಶ್ವರ, ಸಕ್ತುಪ್ರಸ್ಥೇಶ್ವರ, ಕಣಾದೇಶ್ವರ, ಮಾಂಡೂಕಾಯನಿಯೆಂಬ ಮಹರ್ಷಿಯಿಂದ ಪ್ರತಿಷ್ಠಿತನಾದ ಆತನ ಹೆಸರಿನದೇ ಆದ ಮಹಾಲಿಂಗವೂ, ಬಾಭ್ರವೇಯೇಶ್ವರ, ಶಿಲಾವೃತ್ತೀಶ್ವರ, ಚ್ಯವನೇಶ್ವರ, ಶಾಲಂಕಾಯನಕೇಶ್ವರ, ಕಲಿಂದಮೇಶ್ವರ, ಅಕ್ರೋಧನೇಶ್ವರ, ಕಪೋತವೃತ್ತೀಶ್ವರ, ಕಂಕೇಶ್ವರ, ಕುಂತಲೇಶ್ವರ, ಕಂಠೇಶ್ವರ, ಕಹೋಲೇಶ್ವರ, ತುಂಬುರರು ಪೂಜಿಸಿದ ತುಂಬುರೇಶ್ವರ, ಮತಂಗೇಶ್ವರ, ಮರುತ್ತೇಶ್ವರ, ಮಗಧೇಯೇಶ್ವರ, ಜಾತುಕರ್ಣೇಶ್ವರ, ಜಂಬುಕೇಶ್ವರ, ಜಾರುಧೀಶ್ವರ, ಜಲೇಶ್ವರ, ಜಾಲ್ಮೇಶ್ವರ, ಜಾಲಕೇಶ್ವರ ಮುಂತಾದ ಲಿಂಗಗಳೂ ಇರುವುವು.

೨೦-೨೧. ಎಲೈ ಅಗಸ್ತ್ಯನೆ! ಇವೇ ಮೊದಲಾದ ಐದುಸಾವಿರ ಲಿಂಗಗಳು

ನ ಜಾತು ಜಾಯತೇ ಜಂತೋಃ ಕಲುಷಸ್ಯ ಸಮುದ್ಭವಃ ।
ಏತೇಷಾಂ ಶುಭಲಿಂಗಾನಾಂ ಜ್ಯೇಷ್ಠಸ್ಥಾನೇಽತಿಪಾವನೇ ॥ ೨೦ ॥

ಸ್ಕಂದ ಉವಾಚ :—

ಏಕದಾ ತತ್ರ ಯದ್ವೃತ್ತಂ ಜ್ಯೇಷ್ಠಸ್ಥಾನೇ ಮಹಾಮುನೇ ।
ತದಹಂ ತೇ ಪ್ರವಕ್ಷ್ಯಾಮಿ ಶೃಣುಷ್ವಾಘವಿನಾಶನಂ ॥ ೨೨ ॥
ಸ್ವೈರಂ ವಿಹರತಸ್ತತ್ರ ಜ್ಯೇಷ್ಠಸ್ಥಾನೇ ಮಹೇಶಿತುಃ ।
ಕೌತುಕೇನೈವ ಚಿಕ್ರೀಡಾ ಶಿವಾ ಕಂದುಕಲೀಲಯಾ ॥ ೨೩ ॥
ಉದಂಚನ್ನ್ಯಂಚದಂಗಾನಾಂ ಲಾಘವಾನ್ಪರಿತನ್ವತೀ ।
ನಿಶ್ವಾಸಮೋದಮುದಿತಭ್ರಮರಾಕುಲಿತೇಕ್ಷಣಾ ॥ ೨೪ ॥
ಭ್ರಶ್ಯದ್ಧಮ್ಮಿಲ್ಲಸನ್ಮಾಲ್ಯಸ್ಥಪುಟೀಕೃತಭೂಮಿಕಾ ।
ಸ್ವಿದ್ಯತ್ಕಪೋಲಪತ್ರಾಲೀಸ್ರವದಂಬುಕಣೋಜ್ವಲಾ ॥ ೨೫ ॥
ಸ್ಫುಟಿಚ್ಚೋಲಾಂಶುಕಪಥನಿರ್ಯದಂಗಪ್ರಭಾವೃತಾ ।
ಉಲ್ಲಸತ್ಕಂದುಕಾಸ್ಫಾಲಾತಿಶೋಣಿತಕರಾಂಬುಜಾ ॥ ೨೬ ॥

---

ಅಲ್ಲಿ ಪ್ರತಿಷ್ಠಿತಗಳಾಗಿರುವುವು. ಅತಿ ಪವಿತ್ರವಾದ ಜ್ಯೇಷ್ಠಸ್ಥಾನದಲ್ಲಿರುವ ಈ ಪವಿತ್ರಲಿಂಗಗಳ ಸ್ಮರಣದಿಂದಲೂ, ದರ್ಶನದಿಂದಲೂ, ಸ್ಪರ್ಶದಿಂದಲೂ, ಪೂಜೆಯಿಂದಲೂ, ನಮಸ್ಕಾರದಿಂದಲೂ, ಸ್ತೋತ್ರದಿಂದಲೂ, ಮನುಷ್ಯನಿಗೆ ಎಂದಿಗೂ ಪಾಪದ ಲೇಪವುಂಟಾಗುವುದಿಲ್ಲವು.

೨೨. ಸ್ಕಂದನು ಹೇಳುತ್ತಾನೆ:—ಮಹಾಮುನಿಯೆ! ಆ ಜ್ಯೇಷ್ಠಸ್ಥಾನ ದಲ್ಲಿ ಹಿಂದೆ ನಡೆದ ಒಂದಾನೊಂದು ವಿಚಾರವನ್ನು ನಿನಗೆ ಹೇಳುವೆನು. ಪಾಪ ವಿನಾಶಕವಾದ ಆ ವೃತ್ತಾಂತವನ್ನು ಕೇಳುವವನಾಗು.

೨೩. ಜ್ಯೇಷ್ಠಸ್ಥಾನದಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ ಮಹೇಶ್ವರನೊಡನೆ ಪಾರ್ವತೀದೇವಿಯು ಒಮ್ಮೆ ಕೌತುಕಕ್ಕಾಗಿ ಚೆಂಡಿನಾಟವನ್ನು ಲೀಲೆಯಿಂದಾಡು ತ್ತಿದ್ದಳು.

೨೪. ಆಕೆಯು ಮೇಲಕ್ಕೂ ಕೆಳಕ್ಕೂ ಆಡುತ್ತಿರುವ ಅವಯವಗಳ ಲಾಘ ವನ್ನು ತೋರಿಸಿಕೊಳ್ಳುತ್ತ ತನ್ನ ನಿಟ್ಟುಸಿರಿನ ಸುಗಂಧದಿಂದ ಸಂತೋಷಗೊಂಡ ಮುತ್ತಿದ ಭ್ರಮರಗಳಿಂದ ಪೀಡಿತಗಳಾದ ನೇತ್ರಗಳುಳ್ಳವಳಾಗಿದ್ದಳು.

೨೫. ಮುಡಿಯಿಂದ ಜಾರಿಬಿದ್ದ ಹೂವಿನ ಮಾಲೆಗಳಿಂದ ಸುತ್ತಲೂ ಭೂಮಿಯನ್ನು ಆಚ್ಛಾದಿಸುವವಳಾಗಿ ಕಿರುಬೆವರಿನಿಂದ ಕೂಡಿದ ಕಪೋಲಗಳೆಂಬ ಪತ್ರಗಳಿಂದ ಸ್ರವಿಸುತ್ತಿರುವ ನೀರ್ಪನಿಗಳಿಂದ ಕಂಗೊಳಿಸುತ್ತಿದ್ದಳು.

೨೬. ಚಲಿಸುತ್ತಿರುವ ಸೆರಗುಕುಪ್ಪಸಗಳ ಸೂಕ್ಷ್ಮವಸ್ತ್ರಗಳ ರಂಧ್ರ ಗಳಿಂದ ಹೊರಸೂಸುತ್ತಿರುವ ದೇಹಕಾಂತಿಯಿಂದಾವೃತಳಾಗಿದ್ದಳು. ಮೇಲು

ಕಂದುಕಾನುಗಸದ್ದೃಷ್ಟಿನರ್ತಿತಭ್ರೂಲತಾಂಚಲಾ ।
ಮೃಡಾನೀ ಕಿಲ ಖೇಲಂತೀ ದದೃಶೇ ಜಗದಂಬಿಕಾ ॥ ೨೭ ॥
ಅಂತರಿಕ್ಷಚರಾಭ್ಯಾಂ ಚ ದಿತಿಜಾಭ್ಯಾಂ ಮನೋಹರಾ ।
ಕಟಾಕ್ಷಿತಾಭ್ಯಾಮಿವ ವೈ ಸಮುಪಸ್ಥಿತಮೃತ್ಯುನಾ ॥ ೨೮ ॥
ವಿದಲೋತ್ಪಲಸಂಜ್ಞಾಭ್ಯಾಂ ದೃಪ್ತಾಭ್ಯಾಂ ವರತೋ ವಿಧೇಃ ।
ತೃಣೀಕೃತತ್ರಿಜಗತೀ ಪುರುಷಾಭ್ಯಾಂ ಸ್ವದೋರ್ಬಲಾತ್ ॥ ೨೯ ॥
ದೇವೀಂ ಪರಿಜಿಹೀರ್ಷೂ ತೌ ವಿಷಮೇಷುಪ್ರಪೀಡಿತೌ ।
ದಿವೋಽವತೇರತುಃ ಕ್ಷಿಪ್ರಂ ಮಾಯಾಂ ಸ್ವೀಕೃತ್ಯ ಶಾಂಬರೀಂ ॥ ೩೦ ॥
ಧೃತ್ವಾ ಪಾರಷದೀಂ ಮೂರ್ತಿಮಾಯಾತಾವಂಬಿಕಾಂತಿಕಂ ।
ತಾವತ್ಯಂತಂ ಸುದುರ್ವೃತ್ತಾವತಿಚಂಚಲಮಾನಸೌ ॥ ೩೧ ॥
ಸರ್ವಜ್ಞೇನ ಪರಿಜ್ಞಾತೌ ಚಾಂಚಲ್ಯಾಲ್ಲೋಚನೋದ್ಭವಾತ್ ।
ಕಟಾಕ್ಷಿತಾಥ ದೇವೇನ ದುರ್ಗಾ ದುರ್ಗಾರಿಘಾತಿನೀ ॥ ೩೨ ॥

---

ಮೇಲಕ್ಕೆ ಪುಟವಾಡುತ್ತಿರುವ ಚೆಂಡನ್ನು ಹೊಡೆಯುವುದರಿಂದ ಬಹಳ ಕೆಂಪಾದ ಅಂಗೈಗಳಿಂದೊಪ್ಪುತ್ತಿದ್ದಳು.

೨೭. ಚೆಂಡಿನ ಹಾರಾಟವನ್ನೇ ಅನುಸರಿಸುತ್ತಿರುವ ದೃಷ್ಟಿಯಿಂದ ಕುಣಿದಾಡುತ್ತಿರುವ ಹುಬ್ಬುಗಳ ಕೊನೆಗಳುಳ್ಳವಳಾಗಿ ಲೋಕಮಾತೆಯಾದ ಪಾರ್ವತಿಯು ಕಂದುಕಲೀಲಾವ್ಯಗ್ರಮಾನಸಳಾಗಿ ಕಾಣುತ್ತಿದ್ದಳು.

೨೮. ಇಂತು ಆಟವಾಡುತ್ತಿದ್ದ ಆ ಮನೋಹರೆಯು, ಮರಣಕ್ಕೆ ಸಿದ್ಧತೆಯನ್ನು ಪಡೆದಿದ್ದಂತೆ ತೋರುತ್ತಿದ್ದವರೂ, ಆಕಾಶದಲ್ಲಿ ಸಂಚರಿಸುತ್ತಿದ್ದವರೂ ಆದ ಇಬ್ಬರು ರಾಕ್ಷಸರನ್ನು ಕಟಾಕ್ಷಿಸಿದಂತೆ ನಟಿಸಿದಳು.

೨೯. ವಿದಲ ಮತ್ತು ಉತ್ಪಲ ನಾಮಕರಾದ ಅವರಿಬ್ಬರೂ ಬ್ರಹ್ಮದೇವನ ವರವನ್ನು ಪಡೆದು ಗರ್ವಿತರಾಗಿ ತಮ್ಮ ಬಾಹುಬಲದಿಂದ ಮೂರುಲೋಕಗಳನ್ನು ಹುಲ್ಲಿಗೆಣೆಯಾಗಿ ಕಾಣುವವರಾಗಿದ್ದರು.

೩೦. ಪಾರ್ವತಿಯನ್ನು ನೋಡಿದ ಮಾತ್ರದಿಂದಲೇ ಅವರು ಕಾಮಪೀಡಿತರಾಗಿ ಆಕೆಯನ್ನು ಅಪಹರಿಸಲೆಳಸಿ ಶಂಬರಾಸುರನ ಮಾಯೆಯನ್ನು ಸ್ವೀಕರಿಸಿ ವೇಗವಾಗಿ ಅಂತರಿಕ್ಷದಿಂದ ಕೆಳಗಿಳಿದರು.

೩೧. ದುರಾಚಾರಿಗಳೂ ಚಂಚಲಮನಸ್ಕರೂ ಆದ ಅವರಿಬ್ಬರೂ ಪಾರ್ಷದಗಣಗಳ ವೇಷಗಳನ್ನು ತಾಳಿ ಪಾರ್ವತಿಗೆ ಅತ್ಯಂತ ಸಮೀಪದಲ್ಲಿ ಸುಳಿದಾಡತೊಡಗಿದರು.

೩೨. ಸರ್ವಜ್ಞನಾದ ಮಹಾದೇವನಿಗೆ ಮಾತ್ರ ಅವರಿಬ್ಬರೂ ತಕ್ಷಣದಲ್ಲಿಯೇ ಜ್ಞಾತರಾದರು. ಆತನು ಕಣ್ಣುಗಳ ಚಂಚಲದೃಷ್ಟಿಯಿಂದ ದುರ್ಜೇಯರಾದ ಶತ್ರುಗಳನ್ನು ನಾಶಮಾಡುವ ದುರ್ಗೆಯನ್ನು ಒಮ್ಮೆ ವೀಕ್ಷಿಸಿದನು.

ವಿಜ್ಞಾಯ ನೇತ್ರಸಂಜ್ಞಾಂ ತು ಸರ್ವಜ್ಞಾರ್ಧಶರೀರಿಣೀ ।
ತೇನೈವ ಕಂದುಕೇನಾಥ ಯುಗಪನ್ನಿಜಘಾನ ತೌ ॥ ೩೩ ॥
ಮಹಾಬಲೌ ಮಹಾದೇವ್ಯಾ ಕಂದುಕೇನ ಸಮಾಹತೌ ।
ಪರಿಭ್ರಮ್ಯ ಪರಿಭ್ರಮ್ಯ ತೌ ದುಷ್ಟೌ ವಿನಿಪೇತತುಃ ॥ ೩೪ ॥
ವೃಂತಾದಿವ ಫಲೇ ಪಕ್ವೇ ತಾಲಾದನಿಲಲೋಲಿತೇ ।
ದಂಭೋಲಿನಾ ಪರಿಹತೇ ಶೃಂಗೇ ಇವ ಮಹಾಗಿರೇಃ ॥ ೩೫ ॥
ತೌ ನಿಪಾತ್ಯ ಮಹಾದೈತ್ಯಾವಕಾರ್ಯಕರಣೋದ್ಯತೌ ।
ತತಃ ಪರಿಣತಿಂ ಯಾತೋ ಲಿಂಗರೂಪೇಣ ಕಂದುಕಃ ॥ ೩೬ ॥
ಕಂದುಕೇಶ್ವರಸಂಜ್ಞಂ ಚ ತಲ್ಲಿಂಗಮಭವತ್ತದಾ ।
ಜ್ಯೇಷ್ಠೇಶ್ವರಸಮೀಪೇ ತು ಸರ್ವದುಷ್ಟನಿವಾರಣಂ ॥ ೩೭ ॥
ಕಂದುಕೇಶಸಮುತ್ಪತ್ತಿಂ ಯಃ ಶ್ರೋಷ್ಯತಿ ಮುದಾನ್ವಿತಃ ।
ಪೂಜಯಿಷ್ಯತಿ ಯೋ ಭಕ್ತಸ್ತಸ್ಯ ದುಃಖಭಯಂ ಕುತಃ ॥ ೩೮ ॥
ಕಂದುಕೇಶ್ವರಭಕ್ತಾನಾಂ ಮಾನವಾನಾಂ ನಿರೇನಸಾಂ ।
ಯೋಗಕ್ಷೇಮಂ ಸದಾ ಕುರ್ಯಾದ್ಭವಾನೀ ಭಯನಾಶಿನೀ ॥ ೩೯ ॥

---

೩೩. ಆತನ ದೇಹಾರ್ಧವೆನಿಸಿದ ಆಕೆಯು ಕಣ್ಣಾಗಳ ಸನ್ನೆಯನ್ನು ತಿಳಿದವಳಾಗಿ ತನ್ನ ಕೈಯಲ್ಲಿದ್ದ ಚೆಂಡಿನಿಂದಲೇ ಅವರಿಬ್ಬರನ್ನೂ ಹೊಡೆದಳು.

೩೪. ಇಂತು ಮಹಾದೇವಿಯ ಲೀಲಾಕಂದುಕದಿಂದ ಹೊಡೆಯಲ್ಪಟ್ಟ ಮಹಾಬಲಶಾಲಿಗಳಾದರೂ ಅವರು ದಿಗ್ಭ್ರಾಂತರಾಗಿ ಸುತ್ತಿ ಸುತ್ತಿ ನೆಲಕ್ಕೆ ಬಿದ್ದರು.

೩೫. ವಾಯುವಿನಿಂದ ಅಲುಗಾಡಿಸಲ್ಪಟ್ಟ ತಾಳೆಯ ಮರದಲ್ಲಿ ತೊಟ್ಟ ನಿಂದುದುರುವ ಹಣ್ಣಿನಂತೆಯೂ, ಇಂದ್ರನ ವಜ್ರಾಯುಧದಿಂದ ರೆಕ್ಕೆಗಳನ್ನು ಕಳೆದುಕೊಂಡು ನೆಲಕ್ಕುರುಳಿದ ಎರಡು ಪರ್ವತಗಳಂತೆಯೂ ಅವರು ಭೂಮಿಯಲ್ಲಿ ಉರುಳಿದರು.

೩೬. ನೀಚಕಾರ್ಯದಲ್ಲಿ ತೊಡಗಿದ್ದ ಅವರಿಬ್ಬರನ್ನೂ ನೆಲಕ್ಕೆ ಕೆಡವಿ ಆ ಕಂದುಕವು ಲಿಂಗವಾಗಿ ಅಲ್ಲಿಯೇ ನೆಲಸಿತು.

೩೭. ಅದು ಜ್ಯೇಷ್ಠೇಶ್ವರನ ಸಮೀಪದಲ್ಲಿ ಸಕಲದುಷ್ಟರ ಬಾಧೆಗಳನ್ನೂ ನಿವಾರಿಸುವುದಾಗಿ ಕಂದುಕೇಶ್ವರವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು.

೩೮. ಯಾವನು ಸಂತೋಷದಿಂದ ಈ ಕಂದುಕೇಶ್ವರದ ಉತ್ಪತ್ತಿ ಕಥೆಯನ್ನು ಕೇಳುವನೊ, ಯಾವನು ಆ ಲಿಂಗವನ್ನು ಭಕ್ತಿಯಿಂದ ಪೂಜಿಸುವನೊ, ಅವರಿಗೆ ದುಃಖದ ಭಯವೆಲ್ಲಿಯದು ?

೩೯. ಕಂದುಕೇಶ್ವರನ ಭಕ್ತರೂ ಪಾತಕರಹಿತರೂ ಆದ ಸಕಲ ಮಾನವರ

ಮೃಡಾನೀ ತಸ್ಯ ಲಿಂಗಸ್ಯ ಪೂಜಾಂ ಕುರ್ಯಾತ್ಸದೈವ ಹಿ ।
ತತ್ರೈವ ದೇವ್ಯಾಃ ಸಾನ್ನಿಧ್ಯಂ ಪಾರ್ವತ್ಯಾ ಭಕ್ತಸಿದ್ಧಿದಂ ॥ ೪೦ ॥
ಕಂದುಕೇಶಂ ಮಹಾಲಿಂಗಂ ಕಾಶ್ಯಾಂ ಯೈರ್ನ ಸಮರ್ಚಿತಂ ।
ಕಥಂ ತೇಷಾಂ ಭವಾನೀಶೌ ಸ್ಯಾತಾಂ ಸರ್ವೇಪ್ಸಿತಪ್ರದೌ ॥ ೪೧ ॥
ದ್ರಷ್ಟವ್ಯಂ ಚ ಪ್ರಯತ್ನೇನ ತಲ್ಲಿಂಗಂ ಕಂದುಕೇಶ್ವರಂ ।
ಸರ್ವೋಪಸರ್ಗಸಂಘಾತವಿಘಾತಕರಣಂ ಪರಂ ॥ ೪೨ ॥
ಕಂದುಕೇಶ್ವರನಾಮಾಪಿ ಶ್ರುತ್ವಾ ವೃಜಿನಸಂತತಿಃ ।
ಕ್ಷಿಪ್ರಂ ಕ್ಷಯಮವಾಪ್ನೋತಿ ತಮಃ ಪ್ರಾಪ್ಯೋಷ್ಣಗುಂ ತಥಾ ॥ ೪೩ ॥

ಸ್ಕಂದ ಉವಾಚ :—

ಸಂಶೃಣುಷ್ವ ಮಹಾಭಾಗ ಜ್ಯೇಷ್ಠೇಶ್ವರಸಮೀಪತಃ ।
ಯದ್ವೃತ್ತಾಂತಮಭೂದ್ವಿಪ್ರ ಪರಮಾಶ್ಚರ್ಯಕೃದ್ಧ್ರುವಂ ॥ ೪೪ ॥
ದಂಡಖಾತೇ ಮಹಾತೀರ್ಥೇ ದೇವರ್ಷಿಪಿತೃತೃಪ್ತಿದೇ ।
ತಪ್ಯಮಾನೇಷು ವಿಪ್ರೇಷು ನಿಷ್ಕಾಮಂ ಪರಮಂ ತಪಃ ॥ ೪೫ ॥

---

ಯೋಗಕ್ಷೇಮವನ್ನು ಭಯನಿವಾರಕಳಾದ ಭವಾನಿಯೇ ನಿತ್ಯವೂ ನೋಡಿಕೊಳ್ಳುತ್ತಿರುವಳು.

೪೦. ಆಕೆಯೂ ಆ ದೇವನ ಪೂಜೆಯನ್ನು ನಿತ್ಯವೂ ಮಾಡುತ್ತಿರುವಳು. ಅಲ್ಲಿಯೇ ಭಕ್ತರಿಗೆ ಸಕಲಾಭೀಷ್ಟಗಳನ್ನೂ ಕೊಡುವ ಪಾರ್ವತೀದೇವಿಯ ಸಾನ್ನಿಧ್ಯವಿಶೇಷವೂ ಇರುವುದು.

೪೧. ಯಾರು ಕಾಶೀಕ್ಷೇತ್ರವನ್ನು ಸೇರಿ ಕಂದುಕೇಶ್ವರಮಹಾಲಿಂಗವನ್ನು ಅರ್ಚನೆಮಾಡುವುದಿಲ್ಲವೊ, ಅವರಿಗೆ ಭವಾನೀಶಂಕರರು ಹೇಗೆ ಸರ್ವಾಭೀಷ್ಟಪ್ರದರಾಗುವರು ?

೪೨. ಆದುದರಿಂದ ಸಮಸ್ತ ವಿಘ್ನಸಮೂಹಗಳ ನಾಶಕ್ಕೆ ಸುಲಭೋಪಾಯವಾದ ಸರ್ವೋತ್ತಮವಾದ ಆ ಕಂದುಕೇಶ್ವರಲಿಂಗವನ್ನು ಪ್ರತಿಮಾನವನೂ ಅವಶ್ಯಕವಾಗಿ ನೋಡಲೇಬೇಕು.

೪೩. ಕಂದುಕೇಶ್ವರನ ಹೆಸರನ್ನು ಕೇಳಿದ ಮಾತ್ರದಿಂದಲೇ ಪಾಪಸಮೂಹಗಳೆಲ್ಲವೂ ಸೂರ್ಯನನ್ನು ಕಂಡ ಅಂಧಕಾರದಂತೆ ಕ್ಷಿಪ್ರದಲ್ಲಿಯೇ ನಾಶವನ್ನು ಹೊಂದುವುವು.

೪೪. ಸ್ಕಂದನು ಹೇಳುತ್ತಾನೆ:—ಓ ಮಹಾಭಾಗ! ವಿಪ್ರೋತ್ತಮನೆ! ಪೂರ್ವದಲ್ಲಿ ಜ್ಯೇಷ್ಠೇಶ್ವರನ ಸಮೀಪದಲ್ಲಿ ನಿಜವಾಗಿಯೂ ಮಹಾಶ್ಚರ್ಯಸಮನ್ವಿತವೆನಿಸಿದ ವೃತ್ತಾಂತವು ನಡೆದುದನ್ನು ವಿವರಿಸುವೆನು, ಕೇಳು.

೪೫. ಒಂದಾನೊಂದು ಕಾಲದಲ್ಲಿ ದೇವತೆಗಳಿಗೂ, ಪಿತೃಗಳಿಗೂ, ಮಹರ್ಷಿ

ದೈತ್ಯೋ ದುಂದುಭಿನಿರ್ಹ್ರಾದೋ ದುಷ್ಟಃ ಪ್ರಹ್ಲಾದಮಾತುಲಃ ।
ದೇವಾಃ ಕಥಂ ಸುಜೇಯಾಃ ಸ್ಯುರಿತ್ಯುಪಾಯಮಚಿಂತಯತ್ ॥ ೪೬ ॥
ಕಿಂಬಲಾಶ್ಚ ಕಿಮಾಹಾರಾಃ ಕಿಮಾಧಾರಾ ಹಿ ದೇವತಾಃ ।
ವಿಚಾರ್ಯ ಬಹುಶೋ ದೈತ್ಯಸ್ತತ್ತ್ವಂ ವಿಜ್ಞಾಯ ನಿಶ್ಚಿತಂ ॥ ೪೭ ॥
ಅಪಶ್ಯಮಗ್ರಜನ್ಮಾನೋ ಹೇತವೋಽತ್ರ ವಿಚಾರತಃ ।
ಬ್ರಾಹ್ಮಣಾನ್ಹಂತುಮಸಕೃತ್ಕೃತವಾನುದ್ಯಮಂ ತತಃ ॥ ೪೮ ॥
ಯತಃ ಕ್ರತುಭುಜೋ ದೇವಾಃ ಕ್ರತವೋ ವೇದಸಂಭವಾಃ ।
ತೇ ವೇದಾಃ ಬ್ರಾಹ್ಮಣಾಧೀನಾಸ್ತತೋ ದೇವಬಲಂ ದ್ವಿಜಾಃ ॥ ೪೯ ॥
ನಿಶ್ಚಿತಂ ಬ್ರಾಹ್ಮಣಾಧಾರಾಃ ಸರ್ವೇ ದೇವಾಃ ಸವಾಸವಾಃ ।
ಗೀರ್ವಾಣಾ ಬ್ರಾಹ್ಮಣಬಲಾ ನಾತ್ರ ಕಾರ್ಯಾ ವಿಚಾರಣಾ ॥ ೫೦ ॥
ಬ್ರಾಹ್ಮಣಾ ಯದಿ ನಷ್ಟಾಃ ಸ್ಯುರ್ವೇದಾ ನಷ್ಟಾಸ್ತತಃ ಸ್ವಯಂ ।
ಆಮ್ನಾಯೇಷು ಪ್ರಣಷ್ಟೇಷು ವಿನಷ್ಟಾಃ ಶತತಂತವಃ ॥ ೫೧ ॥

---

ಗಳಿಗೂ ತೃಪ್ತಿಕರವಾದ ದಂಡಖಾತವೆಂಬ ಮಹಾತೀರ್ಥದಲ್ಲಿ ಬ್ರಾಹ್ಮಣೋತ್ತಮರು ಫಲಾಭಿಸಂಧಿರಹಿತರಾಗಿ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದರು.

೪೬. ಆಗ ಪ್ರಹ್ಲಾದನಿಗೆ ಸೋದರಮಾವನಾದ ದುಂದುಭಿನಿರ್ಹ್ರಾದನೆಂಬ ದುರಾಚಾರಿಯಾದ ದೈತ್ಯನು ದೇವತೆಗಳನ್ನು ಸುಲಭವಾಗಿ ಹೇಗೆ ಜಯಿಸಬಹುದೆಂಬ ಉಪಾಯವನ್ನು ಕುರಿತು ಚಿಂತಿಸುತ್ತಿದ್ದನು.

೪೭. ಅವರು ಯಾವ ಬಲವನ್ನಾಶ್ರಯಿಸಿರುವರು? ಯಾವ ಆಹಾರವನ್ನು ಸ್ವೀಕರಿಸುತ್ತಿರುವರು? ಯಾವ ಆಧಾರವುಳ್ಳವರಾಗಿರುವರು? ಇವುಗಳನ್ನೆಲ್ಲ ಆ ದೈತ್ಯನು ಬಹು ಪ್ರಕಾರವಾಗಿ ವಿಚಾರಮಾಡಿ ನಿಶ್ಚಿತವಾದ ತತ್ತ್ವಾರ್ಥವನ್ನು ತಿಳಿದುಕೊಂಡನು.

೪೮. ವಿಚಾರವನ್ನು ಮಾಡಿ ಖಂಡಿತವಾಗಿಯೂ ಬ್ರಾಹ್ಮಣರೇ ದೇವತೆಗಳ ಉತ್ಕರ್ಷಕ್ಕೆ ಕಾರಣರೆಂಬುದನ್ನು ನಿಶ್ಚಯಿಸಿ ಅವರನ್ನು ನಿರ್ಮೂಲಗೊಳಿಸಲು ಅನೇಕಸಲ ಪ್ರಯತ್ನವನ್ನು ಮಾಡಿದನು.

೪೯-೫೦. "ದೇವತೆಗಳು ಯಜ್ಞಭಾಗಗಳನ್ನು ಭೋಜನಮಾಡುವವರು. ಯಜ್ಞಗಳು ವೇದೋದಿತಗಳಾಗಿರುವುವು. ಆ ವೇದಗಳಾದರೊ ಬ್ರಾಹ್ಮಣರ ಅಧೀನಗಳಾಗಿರುವುವು. ಆದುದರಿಂದ ಬ್ರಾಹ್ಮಣರೇ ದೇವತೆಗಳ ಬಲಕ್ಕೆ ಮೂಲಭೂತರಾಗಿರುವರು. ಸಕಲ ವೇದಗಳೂ ಬ್ರಾಹ್ಮಣರನ್ನವಲಂಬಿಸಿರುವುದು ನಿಶ್ಚಯವು. ಮಹೇಂದ್ರನೇ ಮುಂತಾದ ದೇವತೆಗಳೂ ಬ್ರಾಹ್ಮಣರ ಬಲವನ್ನಾಶ್ರಯಿಸಿರುವರೆಂಬ ವಿಷಯದಲ್ಲಿ ವಿಚಾರ್ಯವಾದ ಅಂಶವೇನೂ ಇರುವುದಿಲ್ಲ.

೫೧. ಬ್ರಾಹ್ಮಣರು ಪ್ರಣಷ್ಟರಾಗಲು ದೇವತೆಗಳು ತಮಗೆ ತಾವೇ ನಾಶ

ಯಜ್ಞೇಷು ನಾಶಂ ಗಚ್ಛತ್ಸು ಹೃತಾಹಾರಾಸ್ತತಃ ಸುರಾಃ ।
ನಿರ್ಬಲಾಃ ಸುಖಜೇಯಾಃ ಸ್ಯುರ್ಜಿತೇಷು ತ್ರಿದಶೇಷ್ವಥ ॥ ೫೨ ॥
ಅಹಮೇವ ಭವಿಷ್ಯಾಮಿ ಮಾನ್ಯಸ್ತ್ರಿಜಗತೀಪತಿಃ ।
ಆಹರಿಷ್ಯಾಮಿ ದೇವಾನಾಮಕ್ಷಯಾಃ ಸರ್ವಸಂಪದಃ ॥ ೫೩ ॥
ನಿರ್ವೇಕ್ಷ್ಯಾಮಿ ಸುಖಾನ್ಯೇವ ರಾಜ್ಯೇ ನಿಹತಕಂಟಕೇ ।
ಇತಿ ನಿಶ್ಚಿತ್ಯ ದುರ್ಬುದ್ಧಿಃ ಪುನಶ್ಚಿಂತಿತವಾನ್ಮನೇ ॥ ೫೪ ॥
ದ್ವಿಜಾಃ ಕ್ವ ಸಂತಿ ಭೂಯಾಂಸೋ ಬ್ರಹ್ಮತೇಜೋಽತಿಬೃಂಹಿತಾಃ ।
ಶ್ರುತ್ಯಧ್ಯಯನಸಂಪನ್ನಾಸ್ತಪೋಬಲಸಮನ್ವಿತಾಃ ॥ ೫೫ ॥
ಭೂಯಸಾಂ ಬ್ರಾಹ್ಮಣಾನಾಂ ತು ಸ್ಥಾನಂ ವಾರಾಣಸೀ ಭವೇತ್ ।
ತಾನಾದಾವುಪಸಂಹೃತ್ಯ ಯಾಮಿ ತೀರ್ಥಾಂತರಂ ತತಃ ॥ ೫೬ ॥
ಯತ್ರ ಯತ್ರ ಹಿ ತೀರ್ಥೇಷು ಯತ್ರ ಯತ್ರಾಶ್ರಮೇಷು ಚ ।
ಸಂತಿ ಸರ್ವೇಽಗ್ರಜನ್ಮಾನಸ್ತೇ ಮಯಾದ್ಯಾಃ ಸಮಂತತಃ ॥ ೫೭ ॥

---

ವನ್ನು ಹೊಂದುವರು. ವೇದಗಳು ನಷ್ಟಗಳಾಗಲು ಯಜ್ಞಯಾಗಾದಿಗಳೂ ವಿನಾಶವನ್ನೈದುವುವು.

೫೨-೫೩. ಯಜ್ಞಗಳು ನಾಶವನ್ನು ಹೊಂದಲು ಅದರಿಂದ ದೇವತೆಗಳು ಆಹಾರವಿಲ್ಲದವರಾಗುವರು. ಬಳಿಕ ಬಲಹೀನರಾದ ಅವರನ್ನು ಸುಲಭವಾಗಿಯೇ ಜಯಿಸಬಹುದು. ಇಂತು ದೇವತೆಗಳೆಲ್ಲರೂ ಪರಾಜಿತರಾಗಲು ನಾನೇ ಪೂಜಾರ್ಹನೂ, ಮೂರುಲೋಕಗಳಿಗೊಡೆಯನೂ ಆಗಿ ದೇವತೆಗಳಿಗಿರುವ ಕಾಮಧೇನು ಕಲ್ಪವೃಕ್ಷಗಳೇ ಮುಂತಾದ ಅಕ್ಷಯೈಶ್ವರ್ಯಗಳೆಲ್ಲವನ್ನೂ ಕಸಿದುಕೊಳ್ಳುವೆನು.

೫೪. ಈ ರೀತಿಯಾಗಿ ನಿಷ್ಕಂಟಕವಾದ ತ್ರಿಲೋಕಾತ್ಮಕವಾದ ನನ್ನ ರಾಜ್ಯದಲ್ಲಿ ಸುಖಗಳನ್ನೇ ಉಂಟುಮಾಡುತ್ತಿರುವೆನು.'' ಎಲೈ ಅಗಸ್ತ್ಯನೆ! ಇಂತೆಂದು ಆ ದುಷ್ಟಾತ್ಮನು ನಿಶ್ಚಯವನ್ನು ಮಾಡಿಕೊಂಡು ಮತ್ತೆಯೂ ಚಿಂತಿಸಿದನು.

೫೫. "ಬಹುಸಂಖ್ಯಾಕರೂ, ಬ್ರಹ್ಮತೇಜಸ್ಸಿನಿಂದ ಮಹಿಮಾನ್ವಿತರೂ, ವೇದಾಧ್ಯಯನಸಂಪನ್ನರೂ ತಪಸ್ಸಿನ ಬಲದಿಂದೊಡಗೂಡಿದವರೂ ಆದ ಬ್ರಾಹ್ಮಣರು ಎಲ್ಲಿರುವರು?

೫೬. ಇಷ್ಟು ಅಸಂಖ್ಯಾಕರಾದ ಬ್ರಾಹ್ಮಣರಿಗೆ ಪ್ರಾಯಶಃ ವಾರಾಣಸೀ ಕ್ಷೇತ್ರವೊಂದೇ ವಾಸಸ್ಥಾನವಾಗಿರಬಹುದು. ಅಲ್ಲಿರುವವರನ್ನೆಲ್ಲ ಮೊದಲು ನಾಶಗೊಳಿಸಿ ಬಳಿಕ ತೀರ್ಥಾಂತರಗಳಿಗೆ ಹೋಗುವೆನು.

೫೭. ಭೂಮಂಡಲದ ಸಮಸ್ತ ತೀರ್ಥಗಳಲ್ಲಿಯೂ ನಿಖಿಲಾಶ್ರಮಗಳಲ್ಲಿಯೂ ಇರುವ ಸಕಲ ಬ್ರಾಹ್ಮಣರೂ ನಿಶ್ಶೇಷವಾಗಿ ನನಗೆ ಭಕ್ಷ್ಯರಾಗಬೇಕು.''

ಇತಿ ದುಂದುಭಿನಿರ್ಹ್ರಾದೋ ಮತಿಂ ಕೃತ್ವಾ ಕುಲೋಚಿತಾಂ ।
ಪ್ರಾಪ್ಯಾಪಿ ಕಾಶೀಂ ದುರ್ವೃತ್ತೋ ಮಾಯಾವೀ ನ್ಯವಧೀದ್ದ್ವಿಜಾನ್॥೫೮॥
ಸಮಿತ್ಕುಶಾಸ್ಸಮಾದಾತುಂ ಯತ್ರ ಯಾಂತಿ ದ್ವಿಜೋತ್ತಮಾಃ ।
ಅರಣ್ಯೇ ತತ್ರ ತಾಸ್ಸರ್ವಾನ್ಸ ಭಕ್ಷಯತಿ ದುರ್ಮತಿಃ ॥ ೫೯ ॥
ಯಥಾ ಕೋಽಪಿ ನ ವೇತ್ತ್ಯೇವ ತಥಾ ಚ್ಛನ್ನೋಽಭವತ್ಪುನಃ ।
ವನೇ ವನೇಚರೋ ಭೂತ್ವಾ ಯಾದೋರೂಪೀ ಜಲಾಶಯೇ ॥ ೬೦ ॥
ಅದೃಶ್ಯರೂಪೀ ಮಾಯಾವೀ ದೇವಾನಾಮಪ್ಯಗೋಚರಃ ।
ದಿವಾ ಧ್ಯಾನಪರಸ್ತಿಷ್ಠೇನ್ಮುನಿವನ್ಮುನಿಮಧ್ಯಗಃ ॥ ೬೧ ॥
ಪ್ರವೇಶಮುಟಜಾನಾಂ ಚ ನಿರ್ಗಮಂ ಚ ವಿಲೋಕಯನ್ ।
ಯಾಮಿನ್ಯಾಂ ವ್ಯಾಘ್ರರೂಪೇಣ ಬ್ರಾಹ್ಮಣಾನ್ಭಕ್ಷಯೇದ್ಬಹೂನ್ ॥ ೬೨ ॥
ನಿಶ್ಶಬ್ದಮೇವ ನಯತಿ ನ ತ್ಯಜೇದಪಿ ಕೀಕಸಂ।
ಇತ್ಥಂ ನಿಪಾತಿತಾ ವಿಪ್ರಾಸ್ತೇನ ದುಷ್ಟೇನ ಭೂರಿಶಃ ॥ ೬೩ ॥

---

೫೮. ಇಂತೆಂದು ಸ್ವತಃ ದುಷ್ಟಚರಿತ್ರನೂ, ಮಾಯಾವಿಯೂ ಆದ ಆ ದುಂದುಭಿನಿರ್ಹ್ರಾದ ದೈತ್ಯನು ತನ್ನ ಕುಲಕ್ಕೆ ಅನುರೂಪವಾದ ನಿಶ್ಚಯವನ್ನೇ ಮಾಡಿಕೊಂಡು ಕಾಶಿಯನ್ನು ಹೊಂದಿಯೂ ಅಲ್ಲಿನ ಬ್ರಾಹ್ಮಣರನ್ನೆಲ್ಲ ಸಂಹರಿಸ ತೊಡಗಿದನು.

೫೯. ಆ ಬ್ರಾಹ್ಮಣೋತ್ತಮರು ಸಮಿತ್ತು ದರ್ಭೆಗಳನ್ನು ತರಲು ಯಾವ ಯಾವ ಅರಣ್ಯವನ್ನು ಪ್ರವೇಶಿಸುತ್ತಿದ್ದರೊ, ಅಲ್ಲಿಯೇ ಅವರೆಲ್ಲರನ್ನೂ ದುರ್ಬುದ್ಧಿ ಯಾದ ಅವನು ಭಕ್ಷಿಸುತ್ತಿದ್ದನು.

೬೦. ಪುನಃ ಯಾರಿಗೂ ತಿಳಿಯಲಾಗದಂತೆ ಕಾಡಿನಲ್ಲಿ ಬೇಡನಾಗಿಯೂ, ನೀರಿನಲ್ಲಿ ಜಲಚರವಾಗಿಯೂ ತನ್ನ ರೂಪವನ್ನು ಮರೆಸಿಕೊಳ್ಳುತ್ತಿದ್ದನು.

೬೧. ಮಾಯಾಬಲದ ಸಹಾಯದಿಂದ ಕಾಲವನ್ನನುಸರಿಸಿ ಅದೃಶ್ಯನಾಗಿದ್ದು ದೇವತೆಗಳಿಗೂ ಅಗೋಚರನಾಗಿದ್ದನು. ಕೆಲವು ವೇಳೆ ಹಗಲಿನಲ್ಲಿ ಮುನಿಗಳ ಮಧ್ಯದಲ್ಲಿಯೇ ಧ್ಯಾನಾಸಕ್ತನಾಗಿ ಕುಳಿತಿರುವಂತೆ ನಟಿಸುತ್ತಿದ್ದನು.

೬೨. ಅವರು ಆಶ್ರಮಮಠಾದಿಗಳನ್ನು ಪ್ರವೇಶಿಸುವುದನ್ನೂ ಹೊರಗೆ ಬರು ವುದನ್ನೂ ತಿಳಿದು ಸಮಯವನ್ನು ಕಾಯುತ್ತ ರಾತ್ರಿಗಳಲ್ಲಿ ವ್ಯಾಘ್ರರೂಪನಾಗಿ ಅನೇಕ ಬ್ರಾಹ್ಮಣರನ್ನು ಭಕ್ಷಿಸಿದನು.

೬೩. ಶಬ್ದಮಾಡದೆಯೇ ಅವರನ್ನು ಸೆಳೆದೊಯ್ಯುವನು. ಮೂಳೆಗಳನ್ನೂ ಉಳಿಸುವುದಿಲ್ಲ. ಈ ವಿಧದಿಂದ ಆ ದುಷ್ಟನು ಅಸಂಖ್ಯಾಕರಾದ ಬ್ರಾಹ್ಮಣರನ್ನು ಸಂಹಾರಮಾಡಿದನು.

ಏಕದಾ ಶಿವರಾತ್ರೌ ತು ಭಕ್ತಸ್ತ್ವೇಕೋ ನಿಜೋಟಜೇ ।
ಸಪರ್ಯಾಂ ದೇವದೇವಸ್ಯ ಕೃತ್ವಾ ಧ್ಯಾನಸ್ಥಿತೋಽಭವತ್ ॥ ೬೪ ॥
ಸ ಚ ದುಂದುಭಿನಿರ್ಹ್ರಾದೋ ದೈತ್ಯೇಂದ್ರೋ ಬಲದರ್ಪಿತಃ ।
ವ್ಯಾಘ್ರರೂಪಂ ಸಮಾಸ್ಥಾಯ ತಮಾಧಾತುಂ ಮತಿಂ ದಧೇ ॥ ೬೫ ॥
ತಂ ಭಕ್ತಂ ಧ್ಯಾನಮಾಪನ್ನಂ ದೃಢಚಿತ್ತಂ ಶಿವೇಕ್ಷಣೇ ।
ಕೃತ್ವಾಸ್ತ್ರಮಂತ್ರವಿನ್ಯಾಸಂ ತಂ ಕ್ರಾಂತುಮಶಕನ್ನ ಸಃ ॥ ೬೬ ॥
ಅಥ ಸರ್ವಗತಃ ಶಂಭುರ್ಜ್ಞಾತ್ವಾ ತಸ್ಯಾಶಯಂ ಹರಃ ।
ದೈತ್ಯಸ್ಯ ದುಷ್ಟರೂಪಸ್ಯ ವಧಾಯ ವಿದಧೇ ಧಿಯಂ ॥ ೬೭ ॥
ಯಾವದಾದಿತ್ಸತಿ ವ್ಯಾಘ್ರಸ್ತಾವದಾವಿರಭೂದ್ಧರಃ ।
ಜಗದ್ರಕ್ಷಾಮಣಿಸ್ತ್ರ್ಯಕ್ಷೋ ಭಕ್ತರಕ್ಷಣದಕ್ಷಧೀಃ ॥ ೬೮ ॥
ರುದ್ರಮಾಯಾಂತಮಾಲೋಕ್ಯ ತದ್ಭಕ್ತಾರ್ಚಿತಲಿಂಗತಃ ।
ದೈತ್ಯಸ್ತೇನೈವರೂಪೇಣ ವವೃಧೇ ಭೂಧರೋಪಮಃ ॥ ೬೯ ॥

---

೬೪. ಒಮ್ಮೆ ಒಬ್ಬಾನೊಬ್ಬ ಶಿವಭಕ್ತನು ತನ್ನ ಆಶ್ರಮದಲ್ಲಿ ಒಂದು ಶಿವರಾತ್ರಿಯ ದಿನ ಮಹಾದೇವನ ಪೂಜೆಯನ್ನು ಮುಗಿಸಿಕೊಂಡು ಆತನ ಸನ್ನಿಧಿಯಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದನು.

೬೫. ರಾಕ್ಷಸೇಂದ್ರನಾದ ಆ ದುಂದುಭಿನಿರ್ಹ್ರಾದನು ಬಲಪರಾಕ್ರಮದಿಂದ ಗರ್ವಗೊಂಡವನಾಗಿ ವ್ಯಾಘ್ರಾಕಾರವನ್ನು ಸ್ವೀಕರಿಸಿ ಆತನನ್ನು ಸೆಳೆದುಕೊಂಡು ಹೋಗಲು ನಿಶ್ಚಯವನ್ನು ಮಾಡಿಕೊಂಡನು.

೬೬. ಆದರೆ ಧ್ಯಾನಾಸಕ್ತನೂ, ಪರಮೇಶ್ವರನನ್ನು ನೋಡುವುದರಲ್ಲಿಯೇ ದೃಢಮನಸ್ಸುಳ್ಳವನೂ, ಆಗಿ ಅಸ್ತ್ರರೂಪಗಳಾದ ಮಂತ್ರಗಳಿಂದ ಅಂಗನ್ಯಾಸ ಕರನ್ಯಾಸಾದಿಗಳನ್ನು ಮಾಡಿ ಕುಳಿತಿದ್ದ ಆ ಭಕ್ತನನ್ನು ಆಕ್ರಮಿಸಲು ರಾಕ್ಷಸನು ಶಕ್ತನಾಗಲಿಲ್ಲ.

೬೭-೬೮. ಆಗ ಸರ್ವಾಂತರ್ಯಾಮಿಯಾದ ಮಹೇಶ್ವರನು ಅವನ ದುರಾಶಯವನ್ನು ಕಂಡು ಕ್ರೂರರೂಪವನ್ನು ಧರಿಸಿದ ಆ ರಾಕ್ಷಸನನ್ನು ಸಂಹರಿಸಬೇಕೆಂಬ ಸಂಕಲ್ಪವನ್ನು ಮಾಡಿಕೊಂಡನು. ಆ ವ್ಯಾಘ್ರವು ಬಂದು ಭಕ್ತನನ್ನು ಸೆಳೆಯುವ ಪ್ರಯತ್ನವನ್ನು ಮಾಡುತ್ತಿರುವಂತೆಯೇ ಲೋಕರಕ್ಷಾಮಣಿಯೂ, ತ್ರಿಲೋಚನನೂ, ಭಕ್ತರನ್ನು ಕಾಪಾಡುವುದರಲ್ಲಿಯೇ ನಿರತವಾದ ಬುದ್ಧಿಯುಳ್ಳವನೂ ಆದ ಹರನು ಅಲ್ಲಿ ಪ್ರತ್ಯಕ್ಷನಾದನು.

೬೯. ಭಕ್ತನು ಪೂಜಿಸಿದ ಲಿಂಗದಿಂದ ಮಹಾರುದ್ರನು ಹೊರಗೆ ಬಂದುದನ್ನು ಕಂಡವನಾಗಿ ಆ ರಾಕ್ಷಸನು ತನ್ನ ವ್ಯಾಘ್ರರೂಪದಿಂದಲೇ ಪರ್ವತಾಕಾರವಾಗಿ ಶರೀರವನ್ನು ಬೆಳಸಿದನು.

ಸಾವಜ್ಞಮಥ ಸರ್ವಜ್ಞಂ ಯಾವತ್ಸಶ್ಯತಿ ದಾನವಃ ।
ತಾವದಾಯಾಂತಮಾದಾಯ ಕಕ್ಷಾಯಂತ್ರೇ ನ್ಯಪೀಡಯತ್ ॥ ೨೦ ॥
ಪಂಚಾಸ್ಯಸ್ತ್ವಥ ಪಂಚಾಸ್ಯಂ ಮುಷ್ಟ್ಯಾ ಮೂರ್ಧನ್ಯತಾಡಯತ್ ।
ಸ ಚ ತೇನೈವ ರೂಪೇಣ ಕಕ್ಷಾನಿಷ್ಪೇಷಣೇನ ಚ ॥ ೨೧ ॥
ಅತ್ಯಾರ್ತಮರಟದ್ವ್ಯಾಘ್ರೋ ರೋದಸೀ ಪರಿಪೂರಯನ್ ।
ತೇನ ನಾದೇನ ಸಹಸಾ ಸಂಪ್ರವೇಪಿತಮಾನಸಾಃ ॥ ೨೨ ॥
ತಪೋಧನಾಃ ಸಮಾಜಗ್ಮುರ್ನಿಶಿ ಶಬ್ದಾನುಸಾರತಃ ।
ತತ್ರೇಶ್ವರಂ ಸಮಾಲೋಕ್ಯ ಕಕ್ಷೀಕೃತಮೃಗೇಶ್ವರಂ ॥ ೨೩ ॥
ತುಷ್ಟುವುಃ ಪ್ರಣತಾಃ ಸರ್ವೇ ಶರ್ವಂ ಜಯಜಯಾಕ್ಷರೈಃ ।
ಪರಿತ್ರಾತಾ ಜಗತ್ತ್ರಾತಃ ಪ್ರತ್ಯೂಹಾದ್ದಾರುಣಾದಿತಃ ॥ ೨೪ ॥
ಅನುಗ್ರಹಂ ಕುರುಷ್ವೇಶ ತಿಷ್ಠಾತ್ರೈವ ಜಗದ್ಗುರೋ ।
ಅನೇನೈವ ಹಿ ರೂಪೇಣ ವ್ಯಾಘ್ರೇಶ ಇತಿ ನಾಮತಃ ॥ ೨೫ ॥
ಕುರು ರಕ್ಷಾಂ ಮಹಾದೇವ ಜ್ಯೇಷ್ಠಸ್ಥಾನಸ್ಯ ಸರ್ವದಾ ।
ಅನ್ಯೇಭ್ಯೋಽಪ್ಯುಪಸರ್ಗೇಭ್ಯೋ ರಕ್ಷ ನಸ್ತೀರ್ಥವಾಸಿನಃ ॥ ೨೬ ॥

---

೨೦. ಆ ದಾನವನು ಸರ್ವಜ್ಞನಾದ ಮಹೇಶ್ವರನನ್ನು ಉದಾಸೀನಭಾವದಿಂದ ನೋಡುತ್ತಿರಲು ಆತನು ಕ್ಷಣಮಾತ್ರದಲ್ಲಿಯೇ ಹತ್ತಿರಕ್ಕೆ ಬರುತ್ತಿರುವ ಆ ಹುಲಿಯನ್ನು ಸೆಳೆದು ಕಂಕುಳಿನ ಸಂದಿಯಲ್ಲಿ ಸೇರಿಸಿ ಪೀಡಿಸಿದನು.

೨೧-೨೩. ಪಂಚಮುಖನಾದ ರುದ್ರನು ಆ ವ್ಯಾಘ್ರವನ್ನು ಮುಷ್ಟಿಯಿಂದ ತಲೆಗೆ ಹೊಡೆದನು. ಆ ರಾಕ್ಷಸನು ಆ ರೂಪದಿಂದಲೇ ಮುಷ್ಟಿಪ್ರಹಾರದಿಂದಲೂ, ಕಂಕುಳಿನ ಒತ್ತಡದಿಂದಲೂ ಸಂಕಟಗೊಂಡು ತನ್ನ ಧ್ವನಿಯಿಂದ ಭೂಮ್ಯಾಕಾಶಗಳನ್ನು ಪ್ರತಿಧ್ವನಿಗೊಳಿಸುತ್ತ ಅತ್ಯಂತವಾದ ಆರ್ತನಾದವನ್ನು ಮಾಡಿದನು. ಆ ಭಯಂಕರ ಶಬ್ದದಿಂದ ಕಂಪಿತಮನಸ್ಕರಾಗಿ ತಪಸ್ವಿಗಳೆಲ್ಲರೂ ಸಂಭ್ರಮಗೊಂಡು ರಾತ್ರಿಯಾದುದರಿಂದ ಧ್ವನಿಯನ್ನೇ ಅನುಸರಿಸಿ ಅಲ್ಲಿ ಬಂದು ಸೇರಿದರು. ಕಂಕುಳಲ್ಲಿ ಮಹಾವ್ಯಾಘ್ರವನ್ನು ಪೀಡಿಸುತ್ತಿದ್ದ ಮಹೇಶ್ವರನನ್ನು ಕಂಡರು.

೨೪. ಎಲ್ಲರೂ ಸಾಷ್ಟಾಂಗಪ್ರಣಾಮಗಳನ್ನು ಮಾಡಿ ಈಶ್ವರನನ್ನು ಜಯಜಯಕಾರಗಳಿಂದ ಬಹುವಿಧವಾಗಿ ಸ್ತೋತ್ರಮಾಡಿದರು. "ಲೋಕರಕ್ಷಕನೆ! ದಾರುಣವಾದ ಈ ಮೃತ್ಯುವಿನಿಂದ ನಮ್ಮನ್ನು ಸಂರಕ್ಷಿಸಿರುವೆ.

೨೫. ಲೋಕೇಶ್ವರನೆ! ಜಗದ್ಗುರುವೆ! ನಮ್ಮಲ್ಲಿ ಅನುಗ್ರಹವನ್ನು ಮಾಡು. ಇಲ್ಲಿಯೇ ಈ ರೂಪದಿಂದಲೇ ವ್ಯಾಘ್ರೇಶ್ವರನೆಂಬ ಹೆಸರುಳ್ಳವನಾಗಿ ನೆಲಸುವವನಾಗು.

೨೬. ಮಹಾದೇವನೆ! ಈ ಜ್ಯೇಷ್ಠಸ್ಥಾನವನ್ನು ಸರ್ವಕಾಲದಲ್ಲಿಯೂ

ಇತಿ ಶ್ರುತ್ವಾ ವಚಸ್ತೇಷಾಂ ದೇವಶ್ಚಂದ್ರವಿಭೂಷಣಃ ।
ತಥೇತ್ಯುಕ್ತ್ವಾ ಪುನಃ ಪ್ರಾಹ ಶೃಣುಧ್ವಂ ದ್ವಿಜಪುಂಗವಾಃ ॥ ೭೭ ॥
ಯೋ ಮಾಮನೇನ ರೂಪೇಣ ದ್ರಕ್ಷ್ಯತಿ ಶ್ರದ್ಧಯಾತ್ರ ವೈ ।
ತಸ್ಯೋಪಸರ್ಗಸಂಘಾತಂ ಘಾತಯಿಷ್ಯಾಮ್ಯಸಂಶಯಂ ॥ ೭೮ ॥
ಏತಲ್ಲಿಂಗಂ ಸಮಭ್ಯರ್ಚ್ಯ ಯೋ ಯಾತಿ ಪಥಿ ಮಾನವಃ ।
ಚೋರವ್ಯಾಘ್ರಾದಿಸಂಭೂತಂ ಭಯಂ ತಸ್ಯ ಕುತೋ ಭವೇತ್ ॥ ೭೯ ॥
ಮಚ್ಚರಿತ್ರಮಿದಂ ಶ್ರುತ್ವಾ ಸ್ಮೃತ್ವಾ ಲಿಂಗಮಿದಂ ಹೃದಿ ।
ಸಂಗ್ರಾಮೇ ಪ್ರವಿಶನ್ಮರ್ತ್ಯೋ ಜಯಮಾಪ್ನೋತಿ ನಾನ್ಯಥಾ ॥ ೮೦ ॥
ಇತ್ಯುಕ್ತ್ವಾ ದೇವದೇವೇಶಸ್ತಸ್ಮಿನ್ಲಿಂಗೇ ಲಯಂ ಯಯೌ ।
ಸವಿಸ್ಮಯಾಸ್ತತೋ ವಿಪ್ರಾಃ ಪ್ರಾತರ್ಯಾತಾ ಯಥಾಗತಂ ॥ ೮೧ ॥

ಸ್ಕಂದ ಉವಾಚ :—

ತದಾ ಪ್ರಭೃತಿ ಕುಂಭೋತ್ಥಲಿಂಗಂ ವ್ಯಾಘ್ರೇಶ್ವರಾಭಿಧಂ ।
ಜ್ಯೇಷ್ಠೇಶಾದುತ್ತರೇ ಭಾಗೇ ದೃಷ್ಟಂ ಸ್ಪೃಷ್ಟಂ ಭಯಾಪಹಂ ॥ ೮೨ ॥

---

ರಕ್ಷಣೆಮಾಡುತ್ತಿರು. ತೀರ್ಥವಾಸಿಗಳಾದ ನಮ್ಮನ್ನು ಇತರ ಕಷ್ಟಗಳಿಂದಲೂ ಸಂರಕ್ಷಿಸುತ್ತಿರುವವನಾಗು."

೭೭. ದೇವದೇವನಾದ ಚಂದ್ರಶೇಖರನು ಆ ಬ್ರಾಹ್ಮಣರಾಡಿದ ಮಾತುಗಳನ್ನು ಕೇಳಿ ಹಾಗೆಯೇ ಆಗಲೆಂದು ಅಂಗೀಕರಿಸಿ ಪುನಃ ಅವರನ್ನು ಕುರಿತು ಇಂತೆಂದನು. "ಎಲೈ ಬ್ರಾಹ್ಮಣೋತ್ತಮರಿರಾ! ಕೇಳಿರಿ.

೭೮. ಯಾವನು ಶ್ರದ್ಧಾಭಕ್ತಿಗಳಿಂದ ಈ ರೂಪದಿಂದಿರುವ ನನ್ನನ್ನು ನೋಡುವನೊ, ಅವನ ಸಕಲ ವಿಘ್ನಸಮೂಹಗಳನ್ನೂ ನಾನು ನಾಶಗೊಳಿಸುವೆನು. ಇದರಲ್ಲಿ ಸಂದೇಹಪಡಬೇಡಿರಿ.

೭೯. ಈ ಲಿಂಗದ ಪೂಜೆಯನ್ನು ಮಾಡಿಕೊಂಡು ಯಾವ ಮನುಷ್ಯನು ಕಾರ್ಯಾರ್ಥಿಯಾಗಿ ಹೊರಡುವನೊ, ಅವನಿಗೆ ದಾರಿಯಲ್ಲಿ ಚೋರರಿಂದಾಗಲಿ, ವ್ಯಾಘ್ರಾದಿ ಹಿಂಸ್ರ ಜಂತುಗಳಿಂದಾಗಲಿ ಭಯವು ಹೇಗೆ ಸಂಭವಿಸುವುದು?

೮೦. ಯಾವ ಮನುಷ್ಯನು ನನ್ನ ಈ ಚರಿತ್ರೆಯನ್ನು ಕೇಳಿ ವ್ಯಾಘ್ರೇಶ್ವರ ಲಿಂಗವನ್ನು ಹೃದಯದಲ್ಲಿ ಧ್ಯಾನಿಸುತ್ತಲೇ ಯುದ್ಧರಂಗವನ್ನು ಪ್ರವೇಶಿಸುವನೊ, ಅವನುಮಾತ್ರ ಜಯವನ್ನು ಪಡೆಯುವನಲ್ಲದೆ ಬೇರೆಯವರು ಪಡೆಯಲಾರರು."

೮೧. ಇಂತೆಂದು ಹೇಳಿ ದೇವದೇವೇಶ್ವರನು ಆ ಲಿಂಗದಲ್ಲಿಯೇ ಅಂತರ್ಲೀನನಾದನು. ಅದನ್ನು ಕಂಡು ವಿಸ್ಮಯಗೊಂಡ ಆ ಬ್ರಾಹ್ಮಣೋತ್ತಮರೆಲ್ಲರೂ ಪ್ರಾತಃಕಾಲವಾಗಲು ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

೮೨. ಸ್ಕಂದನು ಹೇಳುತ್ತಾನೆ:—ಕುಂಭೋದ್ಭವನಾದ ಅಗಸ್ತ್ಯನೆ!

ವ್ಯಾಘ್ರೇಶ್ವರಸ್ಯ ಯೇ ಭಕ್ತಾಸ್ತೇಭ್ಯೋ ಬಿಭ್ಯತಿ ಕಿಂಕರಾಃ ।
ಯಾಮ್ಯಾ ಅಪಿ ಮಹಾಕ್ರೂರಾ ಜಯಜೀವೇತಿ ವಾದಿನಃ ॥ ೭೩ ॥
ಪರಾಶರೇಶ್ವರಾದೀನಾಂ ಲಿಂಗಾನಾಮಿಹ ಸಂಭವಂ ।
ಶ್ರುತ್ವಾ ನರೋ ನ ಲಿಪ್ಯೇತ ಮಹಾಪಾತಕಕರ್ದಮೈಃ ॥ ೭೪ ॥
ಕಂದುಕೇಶಸಮುತ್ಪತ್ತಿಂ ವ್ಯಾಘ್ರೇಶಾವಿರ್ಭವಂ ತಥಾ ।
ಸಮಾಕರ್ಣ್ಯ ನರೋ ಜಾತು ನೋಪಸರ್ಗೈಃ ಪ್ರದೂಯತೇ ॥ ೭೫ ॥
ಉಟಜೇಶ್ವರಲಿಂಗಂ ತು ವ್ಯಾಘ್ರೇಶಾತ್ಪಶ್ಚಿಮೇ ಸ್ಥಿತಂ ।
ಭಕ್ತರಕ್ಷಾರ್ಥಮುದ್ಭೂತಂ ಸ್ಯಾತ್ಸಮಭ್ಯರ್ಚ್ಯ ನಿರ್ಭಯಃ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಪರಾಶರೇಶ್ವರಾದಿ ಲಿಂಗಸಂಭವ ವರ್ಣನಂ" ನಾಮ ಪಂಚಷಷ್ಠಿತಮೋಽಧ್ಯಾಯಃ

---

ಅಂದು ಮೊದಲುಗೊಂಡು ಜ್ಯೇಷ್ಠೇಶ್ವರನಿಗೆ ಉತ್ತರದಿಕ್ಕಿನಲ್ಲಿ ವ್ಯಾಘ್ರೇಶ್ವರನೆಂಬ ಹೆಸರಿನಿಂದ ಆ ಲಿಂಗವು ಕಂಗೊಳಿಸುತ್ತಿರುವುದು. ಅದನ್ನು ನೋಡಿದವರಿಗೂ, ಮುಟ್ಟಿದವರಿಗೂ ಭಯಗಳನ್ನು ನಿವಾರಣೆಮಾಡುತ್ತಿರುವುದು.

೭೩. ವ್ಯಾಘ್ರೇಶ್ವರನಿಗೆ ಯಾರು ಭಕ್ತರಾಗಿರುವರೊ, ಅವರನ್ನು ಕಂಡು ಯಮಧರ್ಮರಾಜನ ಭಟರೂ ಸಹ ಭಯಪಡುವರು. ಮಹಾಕ್ರೂರಸ್ವಭಾವದವರೂ ಅವರನ್ನು ಜಯಕಾರಗಳಿಂದ ಶ್ಲಾಘಿಸುತ್ತಿರುವರು.

೭೪. ಈ ಅಧ್ಯಾಯದಲ್ಲಿ ಹೇಳಿರುವ ಪರಾಶರೇಶ್ವರನೇ ಮುಂತಾದ ಲಿಂಗಗಳ ಉತ್ಪತ್ತಿಯನ್ನು ಭಕ್ತಿಯಿಂದ ಕೇಳಿದ ಮಾನವನು ಮಹಾಪಾತಕಗಳೆಂಬ ಕೆಸರಿನ ಲೇಪವನ್ನೂ ಹೊಂದುವುದಿಲ್ಲ.

೭೫. ಕಂದುಕೇಶ್ವರನ ಉತ್ಪತ್ತಿಯನ್ನೂ, ವ್ಯಾಘ್ರೇಶ್ವರನು ಆವಿರ್ಭವಿಸಿದ ಕಾರಣವನ್ನೂ ಕೇಳಿದ ಮನುಜನು ಎಂದಿಗೂ ಕಾರ್ಯಗಳಲ್ಲಿ ವಿಘ್ನಗಳಿಂದ ಮನಃಕಲ್ಮಷವನ್ನು ಹೊಂದುವುದಿಲ್ಲ.

೭೬. ಈ ವ್ಯಾಘ್ರೇಶ್ವರನಿಗೆ ಪಶ್ಚಿಮದಲ್ಲಿ ಉಟಜೇಶ್ವರವೆಂಬ ಲಿಂಗವು ನೆಲಸಿರುವುದು. ಅದು ಭಕ್ತರನ್ನು ರಕ್ಷಿಸುವುದಕ್ಕಾಗಿಯೇ ಉದ್ಭವಿಸಿರುವುದು ಅದನ್ನು ಪೂಜಿಸಿದವನು ಭಯರಹಿತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಪರಾಶರೇಶ್ವರಾದಿ ಲಿಂಗಗಳ ಆವಿರ್ಭಾವವರ್ಣನ"ವೆಂಬ ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಷಷ್ಟಿತಮೋಽಧ್ಯಾಯಃ

### ಶೈಲೇಶಾದಿಲಿಂಗನಿರ್ಣಯ ವರ್ಣನಂ

ಸ್ಕಂದ ಉವಾಚ :—

ಜ್ಯೇಷ್ಠೇಶ್ವರಸ್ಯ ಪರಿತೋ ಲಿಂಗಾನ್ಯನ್ಯಾನಿ ಯಾನಿ ತು ।
ತಾನಿ ತೇ ಕಥಯಿಷ್ಯಾಮಿ ಶೃಣು ವಾತಾಪಿತಾಪನ ॥ ೧ ॥
ಜ್ಯೇಷ್ಠೇಶಾದ್ದಕ್ಷಿಣೇ ಭಾಗೇ ಲಿಂಗಮಪ್ಸರಸಾಂ ಶುಭಂ ।
ತತ್ರೈವಾಪ್ಸರಸಃ ಕೂಪಃ ಸೌಭಾಗ್ಯೋದಕಸಂಜ್ಞಕಃ ॥ ೨ ॥
ತತ್ಕೂಪಜಲಸುಸ್ನಾತೋ ವಿಲೋಕ್ಯಾಪ್ಸರಸೇಶ್ವರಂ ।
ನ ದೌರ್ಭಾಗ್ಯಮವಾಪ್ನೋತಿ ನಾರೀ ವಾ ಪುರುಷೋಽಥ ವಾ ॥ ೩ ॥
ತತ್ರೈವ ಕುಕ್ಕುಟೇಶಾಖ್ಯಂ ಲಿಂಗಂ ವಾಪೀಸಮೀಪಗಂ ।
ತಸ್ಯ ಪೂಜನತಃ ಪುಂಸಾಂ ಕುಟುಂಬಂ ಪರಿವರ್ಧತೇ ॥ ೪ ॥
ಪಿತಾಮಹೇಶ್ವರಂ ಲಿಂಗಂ ಜ್ಯೇಷ್ಠವಾಪೀತಟೇ ಶುಭಂ ।
ತತ್ರ ಶ್ರಾದ್ಧಂ ನರಃ ಕೃತ್ವಾ ಪಿತೄಣಾಂ ಮುದಮರ್ಪಯೇತ್ ॥ ೫ ॥

---

### ಕನ್ನಡದ ಅನುವಾದ

#### ಶೈಲೇಶಾದಿ ಲಿಂಗನಿರ್ಣಯವರ್ಣನ

೧. ಸ್ಕಂದನು ಹೇಳುತ್ತಾನೆ:—ವಾತಾಪಿಯನ್ನು ನಿಗ್ರಹಿಸಿದ ಅಗಸ್ತ್ಯನೆ! ಜ್ಯೇಷ್ಠೇಶ್ವರನನ್ನು ಸುತ್ತುವರೆದು ಯಾವ ಇತರ ಲಿಂಗಗಳಿರುವುವೊ, ಅವುಗಳನ್ನು ನಿನಗೆ ವಿಸ್ತರಿಸಿ ಹೇಳುವೆನು, ಕೇಳುವವನಾಗು.

೨. ಜ್ಯೇಷ್ಠೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಮಂಗಳಕರವಾದ ಅಪ್ಸರಸೆಯರ ಲಿಂಗವಿರುವುದೂ ಅಲ್ಲಿಯೇ. ಅಲ್ಲಿಯೇ ಸೌಭಾಗ್ಯೋದಕವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಅಪ್ಸರೆಯರ ಕೂಪವೂ ಇರುವುದು.

೩. ಆ ಕೂಪದ ನೀರಿನಲ್ಲಿ ಚೆನ್ನಾಗಿ ಸ್ನಾನವನ್ನು ಮಾಡಿ ಅಪ್ಸರಸೇಶ್ವರ ಲಿಂಗದ ದರ್ಶನವನ್ನು ಮಾಡಿದ ಸ್ತ್ರೀಯೇ ಆಗಲಿ, ಪುರುಷನೇ ಆಗಲಿ ಎಂದಿಗೂ ದರಿದ್ರತೆಯನ್ನು ಹೊಂದುವುದಿಲ್ಲ.

೪. ಆ ಕೂಪದ ಸಮೀಪದಲ್ಲಿಯೇ ಕುಕ್ಕುಟೇಶ್ವರನೆಂಬ ಹೆಸರಿನ ಲಿಂಗ ವಿರುವುದು. ಅದನ್ನು ಪೂಜಿಸಿದ ಮನುಷ್ಯರ ಕುಟುಂಬವು ಅಸಂಖ್ಯಾತವಾಗಿ ವೃದ್ಧಿಯನ್ನು ಹೊಂದುವುದು.

೫. ಜ್ಯೇಷ್ಠವಾಪಿಯ ದಡದಮೇಲಿಯೇ ಶುಭಕರವಾದ ಪಿತಾಮಹೇಶ್ವರ ಲಿಂಗವಿರುವುದು. ಅಲ್ಲಿ ಶ್ರಾದ್ಧಕರ್ಮವನ್ನು ನೆರವೇರಿಸಿದ ಮಾನವನು ಪಿತೃಗಳಿಗೆ ಸಂತೋಷವನ್ನುಂಟುಮಾಡುವನು.

ಪಿತಾಮಹೇಶಾನ್ನೈರ್ಋತ್ಯೇ ಪೂಜನೀಯಂ ಪ್ರಯತ್ನತಃ ।
ಗದಾಧರೇಶ್ವರಂ ಲಿಂಗಂ ಪಿತೄಣಾಂ ಪರಿತೃಪ್ತಿದಂ ॥ ೬ ॥
ದಿಶಿ ಪುಣ್ಯಜನಾಖ್ಯಾಯಾಂ ಲಿಂಗಾಜ್ಜ್ಯೇಷ್ಠೇಶ್ವರಾನ್ಮುನೇ ।
ವಾಸುಕೀಶ್ವರಸಂಜ್ಞಂ ಚ ಲಿಂಗಮರ್ಚ್ಯಂ ಸಮಂತತಃ ॥ ೭ ॥
ತತ್ರ ವಾಸುಕಿಕುಂಡೇ ಚ ಸ್ನಾನದಾನಾದಿಕಕ್ರಿಯಾಃ ।
ಸರ್ಪಭೀತಿಹರಾಃ ಪುಂಸಾಂ ವಾಸುಕೀಶಪ್ರಭಾವತಃ ॥ ೮ ॥
ಯಃ ಸ್ನಾತೋ ನಾಗಪಂಚಮ್ಯಾಂ ಕುಂಡೇ ವಾಸುಕಿಸಂಜ್ಞಿತೇ ।
ನ ತಸ್ಯ ವಿಷಸಂಸರ್ಗೋ ಭವೇತ್ಸರ್ಪಸಮುದ್ಭವಃ ॥ ೯ ॥
ಕರ್ತವ್ಯಾ ನಾಗಪಂಚಮ್ಯಾಂ ಯಾತ್ರಾ ವರ್ಷಾಸು ತತ್ರ ವೈ ।
ನಾಗಾಃ ಪ್ರಸನ್ನಾ ಜಾಯಂತೇ ಕುಲೇ ತಸ್ಯಾಪಿ ಸರ್ವದಾ ॥ ೧೦ ॥
ತತ್ಕುಂಡಾತ್ಪಶ್ಚಿಮೇ ಭಾಗೇ ಲಿಂಗಂ ವೈ ತಕ್ಷಕೇಶ್ವರಂ ।
ಪೂಜನೀಯಂ ಪ್ರಯತ್ನೇನ ಭಕ್ತಾನಾಂ ಸರ್ವಸಿದ್ಧಿದಂ ॥ ೧೧ ॥

---

೬. ಪಿತಾಮಹೇಶ್ವರನಿಗೆ ನೈರ್ಋತ್ಯದಿಕ್ಕಿನಲ್ಲಿ ಗದಾಧರೇಶ್ವರನೆಂಬ ಉತ್ತಮ ಲಿಂಗವೊಂದಿರುವುದು. ಪಿತೃಗಳಿಗೆ ಅಕ್ಷಯತೃಪ್ತಿದಾಯಕವಾದ ಅದನ್ನು ಪ್ರತಿಯೊಬ್ಬ ಮನುಷ್ಯನೂ ಅತ್ಯವಶ್ಯಕವಾಗಿಯೂ ಪೂಜಿಸಬೇಕು.

೭. ಮಹಾಮುನಿಯೆ! ಆ ಜ್ಯೇಷ್ಠೇಶ್ವರನ ನೈರ್ಋತ್ಯದಿಕ್ಕಿನಲ್ಲಿರುವ ವಾಸುಕೀಶ್ವರನೆಂಬ ಲಿಂಗವು ಸರ್ವಪ್ರಕಾರದಿಂದಲೂ ಅರ್ಚಿಸಲ್ಪಡಬೇಕಾದುದಾಗಿರುವುದು.

೮. ಅಲ್ಲಿರುವ ವಾಸುಕೀಕುಂಡದಲ್ಲಿ ಸ್ನಾನದಾನಗಳೇ ಮುಂತಾದ ಸತ್ಕಾರ್ಯಗಳನ್ನು ಮಾಡಲು ವಾಸುಕೀಶ್ವರನ ಮಹಿಮೆಯಿಂದ ಮನುಷ್ಯರಿಗೆ ಸಮಸ್ತ ಭಯಗಳೂ ನಿವಾರಿತಗಳಾಗುವುವು.

೯. ಯಾವ ನರನು ನಾಗರಪಂಚಮಿಯಲ್ಲಿ ವಾಸುಕೀನಾಮಕವಾದ ಈ ಕುಂಡದಲ್ಲಿ ಸ್ನಾನವನ್ನು ಮಾಡುವನೊ, ಅವನಿಗೆ ಸರ್ಪದಂಶನದಿಂದುಟಾಗುವ ವಿಷದ ಭಯವೆಂದಿಗೂ ಉಂಟಾಗುವುದಿಲ್ಲ.

೧೦. ವರ್ಷರ್ತುವಿನಲ್ಲಿ ನಾಗಪಂಚಮಿಯದಿನ ಅಲ್ಲಿಗೆ ಮಹಾಯಾತ್ರೆಯನ್ನು ಮಾಡಿದ ಮಾನವನ ಕುಲದಲ್ಲಿ ಹುಟ್ಟಿದವರೆಲ್ಲರಿಗೂ ಸರ್ವಕಾಲದಲ್ಲಿಯೂ ನಾಗರು ಪ್ರಸನ್ನರಾಗಿರುವರು.

೧೧. ಆ ನಾಗಕುಂಡಕ್ಕೆ ಪಶ್ಚಿಮಭಾಗದಲ್ಲಿ ತಕ್ಷಕೇಶ್ವರನೆಂಬ ಲಿಂಗವಿರುವುದು. ಅದನ್ನು ಪ್ರಯತ್ನದಿಂದ ಪೂಜಿಸಬೇಕು. ಭಕ್ತರಿಗೆ ಆ ಲಿಂಗವು ಸಕಲ ಸಿದ್ಧಿಗಳನ್ನೂ ಕೈಗೂಡಿಸುವುದು.

ಮುನೇ ತಸ್ಯೋತ್ತರೇ ಭಾಗೇ ಕುಂಡಂ ತಕ್ಷಕಸಂಜ್ಞಿತಂ ।
ಕೃತೋದಕಕ್ರಿಯಾಸ್ತತ್ರ ನ ಸರ್ಪೈರಭಿಭೂಯತೇ ॥ ೧೨ ॥
ತತ್ಕುಂಡಾದುತ್ತರೇ ಭಾಗೇ ಕ್ಷೇತ್ರಕ್ಷೇಮಕರಃ ಸದಾ ।
ಭಕ್ತಾನಾಂ ಸಾಧ್ವಸಧ್ವಂಸೀ ಕಪಾಲೀನಾಮ ಭೈರವಃ ॥ ೧೩ ॥
ಭೈರವಸ್ಯ ಮಹಾಕ್ಷೇತ್ರಂ ತದ್ವೈ ಸಾಧಕಸಿದ್ಧಿದಂ ।
ತತ್ರ ಸಂಸಾಧಿತಾ ವಿದ್ಯಾಃ ಷಣ್ಮಾಸಾತ್ಸಿದ್ಧಿಮಾಪ್ನುಯುಃ ॥ ೧೪ ॥
ತತ್ರ ಚಂಡೀ ಮಹಾಮುಂಡಾ ಭಕ್ತವಿಘ್ನೋಪಶಾಂತಿದಾ ।
ಬಲಿಪೂಜೋಪಹಾರಾದ್ಯೈಃ ಪೂಜ್ಯಾ ಸ್ವಾಭೀಷ್ಟಸಿದ್ಧಯೇ ॥ ೧೫ ॥
ತಸ್ಯಾ ಯಾತ್ರಾಂ ತು ಯಃ ಕುರ್ಯಾನ್ಮಹಾಷ್ಟಮ್ಯಾಂ ನರೋತ್ತಮಃ ।
ಯಶಸ್ವೀ ಪುತ್ರಪೌತ್ರಾಢ್ಯೋ ಲಕ್ಷ್ಮೀವಾಂಶ್ಚಾಪಿ ಜಾಯತೇ ॥ ೧೬ ॥
ಮಹಾಮುಂಡಾಪ್ರತೀಚ್ಯಾಂ ತು ಚತುಸ್ಸಾಗರವಾಪಿಕಾ ।
ತಸ್ಯಾಂ ಸ್ನಾತೋ ಭವೇತ್ಸ್ನಾತಃ ಸಾಗರೇಷು ಚತುರ್ಷ್ವಪಿ ॥ ೧೭ ॥

---

೧೨. ಆ ಲಿಂಗದ ಉತ್ತರದಲ್ಲಿಯೇ ತಕ್ಷಕಕುಂಡವಿರುವುದು. ಎಲೈ ಅಗಸ್ತ್ಯನೆ! ಆ ಕುಂಡದಲ್ಲಿ ಸ್ನಾನಸಂಧ್ಯಾದಿಗಳನ್ನು ಮಾಡಿದವನು ಸರ್ಪಗಳ ಬಾಧೆಗೊಳಗಾಗುವುದಿಲ್ಲ.

೧೩. ತಕ್ಷಕಕುಂಡಕ್ಕೆ ಉತ್ತರಭಾಗದಲ್ಲಿ ಕಪಾಲೀಶ್ವರನೆಂಬ ಭೈರವನು ನೆಲಸಿರುವನು. ಆತನು ಕ್ಷೇತ್ರಕ್ಕೆ ನಿತ್ಯವೂ ಕ್ಷೇಮವನ್ನುಂಟುಮಾಡುತ್ತಿರುವ ನಲ್ಲದೆ ಭಕ್ತರ ಸಂಕಟಗಳೆಲ್ಲವನ್ನೂ ನಾಶಮಾಡುತ್ತಿರುವನು.

೧೪. ಭೈರವನಿಗೆ ಪ್ರಿಯವಾದ ಆ ಮಹಾಕ್ಷೇತ್ರವು ಸಾಧಕರಿಗೆ ಕ್ಷಿಪ್ರ ದಲ್ಲಿಯೇ ಸಿದ್ಧಿಯನ್ನು ಕೊಡುವುದು. ಅಲ್ಲಿ ಸಾಧನೆಮಾಡಿದ ಸಕಲವಿದ್ಯೆಗಳೂ ಆರು ತಿಂಗಳುಗಳಲ್ಲಿಯೇ ಸಂಪೂರ್ಣವಾಗಿ ಕರಗತಗಳಾಗುವುವು.

೧೫. ಅಲ್ಲಿಯೇ ಮಹಾಮುಂಡೆಯೆಂಬ ಹೆಸರಿನಿಂದ ಚಂಡೀಶ್ವರಿಯು ನೆಲಸಿರುವಳು. ಆಕೆಯೂ ಭಕ್ತರಿಗೊದಗುವ ವಿಘ್ನಗಳನ್ನು ಶಮನಮಾಡುವಳು. ಆದುದರಿಂದ ತಮ್ಮ ಅಭೀಷ್ಟಗಳನ್ನು ಪಡೆಯಲಿಚ್ಛೆಯುಳ್ಳವರು ಬಲಿದಾನ ಗಳಿಂದಲೂ, ಪೂಜೆಯಿಂದಲೂ, ನೈವೇದ್ಯಗಳಿಂದಲೂ ಆಕೆಯನ್ನು ಸಂತೋಷ ಗೊಳಿಸಬೇಕು.

೧೬. ನವರಾತ್ರಿಯ ದುರ್ಗಾಷ್ಟಮಿಯ ದಿನದಲ್ಲಿ ಯಾವ ಮಾನವ ಶ್ರೇಷ್ಠನು ಆಕೆಯ ಮಂದಿರಕ್ಕೆ ಯಾತ್ರೆಯನ್ನು ಮಾಡುವನೊ, ಆತನು ಯಶಸ್ಸಂಪನ್ನನೂ, ಪುತ್ರಪೌತ್ರಾದಿ ಕುಟುಂಬಸಹಿತನೂ, ಐಶ್ವರ್ಯವಂತನೂ ಆಗುವನು.

೧೭. ಮಹಾಮುಂಡಾದೇವಿಗೆ ಪಶ್ಚಿಮದಲ್ಲಿ ಚತುಸ್ಸಾಗರಕೂಪವಿರುವುದು.

ಮಹಾಪ್ರಸಿದ್ಧಂ ತತ್ಸ್ಥಾನಂ ಚತುಸ್ಸಾಗರಸಂಜ್ಞಿತಂ ।
ಚತ್ವಾರಿ ತತ್ರ ಲಿಂಗಾನಿ ಸಾಗರೈಃ ಸ್ಥಾಪಿತಾನಿ ಚ ॥ ೧೮ ॥
ತಸ್ಯಾ ವಾಪ್ಯಾಶ್ಚತುರ್ದಿಕ್ಷು ಪೂಜಿತಾನಿ ದಹಂತ್ಯಘಂ ।
ತದುತ್ತರೇ ಮಹಾಲಿಂಗಂ ವೃಷಭೇಶ್ವರಸಂಜ್ಞಿತಂ ॥ ೧೯ ॥
ಹರಸ್ಯ ವೃಷಭೇಣೈವ ಸ್ಥಾಪಿತಂ ತತ್ಸ್ವಭಕ್ತಿತಃ ।
ತಸ್ಯ ದರ್ಶನತಃ ಪುಂಸಾಂ ಷಣ್ಮಾಸಾನ್ಮುಕ್ತಿರುದ್ಭವೇತ್ ॥ ೨೦ ॥
ವೃಷೇಶ್ವರಾದುದೀಚ್ಯಾಂ ತು ಗಂಧರ್ವೇಶ್ವರಸಂಜ್ಞಿತಂ ।
ಗಂಧರ್ವಕುಂಡಂ ತತ್ಪ್ರಾಚ್ಯಾಂ ತತ್ರ ಸ್ನಾತ್ವಾ ನರೋತ್ತಮಃ ॥ ೨೧ ॥
ಗಂಧರ್ವೇಶ್ವರಮಭ್ಯರ್ಚ್ಯ ದತ್ವಾ ದಾನಾನಿ ಶಕ್ತಿತಃ ।
ಸಂತರ್ಪ್ಯ ಪಿತೃದೇವಾಂಶ್ಚ ಗಂಧರ್ವೈಃ ಸಹ ಮೋದತೇ ॥ ೨೨ ॥
ಕರ್ಕೋಟನಾಮಾ ನಾಗೋಽಸ್ತಿ ಗಂಧರ್ವೇಶ್ವರಪೂರ್ವತಃ ।
ತತ್ರ ಕರ್ಕೋಟವಾಪೀ ಚ ಲಿಂಗಂ ಕರ್ಕೋಟಕೇಶ್ವರಂ ॥ ೨೩ ॥

---

ಅದರಲ್ಲಿ ಸ್ನಾನವನ್ನು ಮಾಡಿದವನಿಗೆ ನಾಲ್ಕು ಸಮುದ್ರಗಳಲ್ಲಿಯೂ ಸ್ನಾನಗಳನ್ನು ಮಾಡಿದ ಫಲವು ಲಭಿಸುವುದು.

೧೮–೧೯. ಚತುಸ್ಸಾಗರ ನಾಮಕವಾದ ಆ ಪ್ರದೇಶವು ಅತ್ಯಂತ ಪ್ರಸಿದ್ಧಿಯನ್ನು ಪಡೆದಿರುವುದು. ಸಮುದ್ರಾಧೀಶ್ವರರಿಂದ ಅಲ್ಲಿ ನಾಲ್ಕು ಲಿಂಗಗಳು ಸ್ಥಾಪಿಸಲ್ಪಟ್ಟಿರುವುವು. ಅವುಗಳು ಆ ತೀರ್ಥದ ನಾಲ್ಕು ದಿಕ್ಕುಗಳಲ್ಲಿಯೂ ನೆಲಸಿರುವುವು. ಪೂಜಿಸಿದವನ ಪಾಪವನ್ನು ಸುಡುವುವು. ಆ ಕುಂಡದ ಉತ್ತರ ದಿಕ್ಕಿಗೆ ವೃಷಭೇಶ್ವರನೆಂಬ ಮಹಾಲಿಂಗವೊಂದು ಪ್ರತಿಷ್ಠಿತವಾಗಿರುವುದು.

೨೦. ಪರಮೇಶ್ವರನ ವಾಹನವಾದ ವೃಷಭನೇ ತನ್ನ ಭಕ್ತಿಯನ್ನು ಸೂಚಿಸುವುದಕ್ಕಾಗಿ ಅದನ್ನು ಅಲ್ಲಿ ಸ್ಥಾಪಿಸಿದನು. ಅದರ ದರ್ಶನವನ್ನು ಮಾಡಲು ಮನುಷ್ಯರಿಗೆ ಆರು ತಿಂಗಳೊಳಗಾಗಿಯೇ ಮೋಕ್ಷವು ಲಭಿಸುವುದು.

೨೧–೨೨. ವೃಷಭೇಶ್ವರನಿಗೆ ಉತ್ತರದಿಕ್ಕಿನಲ್ಲಿ ಗಂಧರ್ವೇಶ್ವರ ಸಂಜ್ಞಕವಾದ ಲಿಂಗವಿರುವುದು. ಅದರ ಪೂರ್ವದಲ್ಲಿಯೇ ಗಂಧರ್ವಕುಂಡವೂ ಇರುವುದು. ಅದರಲ್ಲಿ ಮನುಷ್ಯಶ್ರೇಷ್ಠನು ಸ್ನಾನವನ್ನು ಮಾಡಿಕೊಂಡು, ಗಂಧರ್ವೇಶ್ವರನ ಪೂಜೆಯನ್ನು ನೆರವೇರಿಸಿ, ತನ್ನ ಶಕ್ತಿಗನುಸಾರವಾಗಿ ದಾನಗಳನ್ನಿತ್ತು, ಪಿತೃದೇವತೆಗಳನ್ನೂ ತಿಲತರ್ಪಣಾದಿಗಳಿಂದ ಸಂತೋಷಗೊಳಿಸಲು ಆತನು ಗಂಧರ್ವಲೋಕಕ್ಕೆ ಹೋಗಿ ಅವರೊಡನೆ ಸುಖಪಡುವನು.

೨೩. ಗಂಧರ್ವೇಶ್ವರನಿಗೆ ಪೂರ್ವದಿಕ್ಕಿನಲ್ಲಿ ಕರ್ಕೋಟಕನೆಂಬ ನಾಗನು ಪ್ರತಿಷ್ಠಿತನಾಗಿರುವನು. ಆತನ ಬಳಿಯಲ್ಲಿಯೇ ಕರ್ಕೋಟವಾಪಿಯೂ ಕರ್ಕೋಟಕೇಶ್ವರನೆಂಬ ಲಿಂಗವೂ ಇರುವುವು.

ತಸ್ಯಾಂ ವಾಪ್ಯಾಂ ನರಃ ಸ್ನಾತ್ವಾ ಕರ್ಕೋಟೇಶಂ ಸಮರ್ಚ್ಯ ಚ ।
ಕರ್ಕೋಟನಾಗಮಾರಾಧ್ಯ ನಾಗಲೋಕೇ ಮಹೀಯತೇ ॥ ೨೪ ॥
ಕರ್ಕೋಟನಾಗೋ ಯೈರ್ದೃಷ್ಟಸ್ತದ್ವಾಪ್ಯಾಂ ವಿಹಿತೋದಕೈಃ ।
ಕ್ರಮತೇ ನ ವಿಷಂ ತೇಷಾಂ ದೇಹೇ ಸ್ಥಾವರಜಂಗಮಂ ॥ ೨೫ ॥
ಕರ್ಕೋಟೇಶಾತ್ಪ್ರತೀಚ್ಯಾಂ ತು ಧುಂಧುಮಾರೀಶ್ವರಾಭಿಧಂ ।
ತಲ್ಲಿಂಗಾಭ್ಯರ್ಚನಾತ್ಪುಂಸಾಂ ನ ಭವೇದ್ವೈರಿಜಂ ಭಯಂ ॥ ೨೬ ॥
ಪುರೂರವೇಶ್ವರಂ ಲಿಂಗಂ ತದುದೀಚ್ಯಾಂ ವ್ಯವಸ್ಥಿತಂ ।
ದ್ರಷ್ಟವ್ಯಂ ತತ್ಪ್ರಯತ್ನೇನ ಚತುರ್ವರ್ಗಫಲಪ್ರದಂ ॥ ೨೭ ॥
ದಿಗ್ಗಜೇನಾರ್ಚಿತಂ ಲಿಂಗಂ ಸುಪ್ರತೀಕೇನ ತತ್ಪುರಃ ।
ಸುಪ್ರತೀಕೇಶ್ವರಂ ನಾಮ್ನಾ ಯಶೋಬಲವಿವರ್ಧನಂ ॥ ೨೮ ॥
ಸರಶ್ಚ ಸುಪ್ರತೀಕಾಖ್ಯಂ ತತ್ಪುರೋ ಭಾಸತೇ ಮಹತ್ ।
ತತ್ರ ಸ್ನಾತ್ವಾ ಚ ತಲ್ಲಿಂಗಂ ದೃಷ್ಟ್ವಾ ದಿಕ್ಪತಿತಾಂ ಲಭೇತ್ ॥ ೨೯ ॥

---

೨೪. ಆ ವಾಪಿಯಲ್ಲಿ ಸ್ನಾನವನ್ನು ಮಾಡಿ, ಕರ್ಕೋಟಕೇಶ್ವರನನ್ನು ಪೂಜಿಸಿ, ಕರ್ಕೋಟನಾಗವನ್ನು ಆರಾಧಿಸಿದ ಮಾನವನು ನಾಗಲೋಕದಲ್ಲಿ ಮಹಾಪೂಜೆಯನ್ನು ಪಡೆಯುವನು.

೨೫. ಕರ್ಕೋಟವಾಪಿಯಲ್ಲಿ ಸ್ನಾನಾದಿ ವಿಧಿಗಳನ್ನು ತೀರಿಸಿಕೊಂಡು ಕರ್ಕೋಟಕ ನಾಗನನ್ನು ಯಾರು ನೋಡುವರೊ, ಅವರ ದೇಹದಲ್ಲಿ ಸ್ಥಾವರಗಳ ವಿಷವು ಎಂದಿಗೂ ವ್ಯಾಪಿಸುವುದಿಲ್ಲ.

೨೬. ಕರ್ಕೋಟಕೇಶ್ವರನಿಗೆ ಪಶ್ಚಿಮದಲ್ಲಿ ಧುಂಧುಮಾರೀಶ್ವರನೆಂಬ ಹೆಸರುಳ್ಳ ಲಿಂಗವೊಂದಿರುವುದು. ಆ ಲಿಂಗವನ್ನು ಪೂಜಿಸುವುದರಿಂದ ಮನುಷ್ಯರಿಗೆಂದಿಗೂ ಶತ್ರುಗಳಿಂದ ಭಯವು ಸಂಭವಿಸುವುದಿಲ್ಲ.

೨೭. ಅದಕ್ಕೆ ಉತ್ತರದಲ್ಲಿ ಪುರೂರವೇಶ್ವರವೆಂಬ ಲಿಂಗವಿರುವುದು. ಅದನ್ನು ಪ್ರತಿಯೊಬ್ಬ ಮಾನವನೂ ಅವಶ್ಯಕವಾಗಿ ದರ್ಶನಮಾಡಬೇಕು. ಆ ಲಿಂಗವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಕೈಗೂಡಿಸುವುದು.

೨೮. ಆದರ ಮುಂಭಾಗದಲ್ಲಿಯೇ ಸುಪ್ರತೀಕವೆಂಬ ಈಶಾನ್ಯ ದಿಗ್ಗಜವು ಪೂರ್ವದಲ್ಲಿ ಪೂಜಿಸಿದ ಲಿಂಗವಿರುವುದು. ಸುಪ್ರತೀಕೇಶ್ವರನೆಂಬ ಹೆಸರುಳ್ಳ ಆ ಲಿಂಗವು ಅರ್ಚಕರ ಯಶಸ್ಸನ್ನೂ ಬಲವನ್ನೂ ಅಭಿವೃದ್ಧಿಗೊಳಿಸುವುದು.

೨೯. ಆ ಲಿಂಗದ ಸಮ್ಮುಖದಲ್ಲಿಯೇ ಸುಪ್ರತೀಕವೆಂಬ ವಿಶಾಲವಾದ ಸರೋವರವೂ ಕಂಗೊಳಿಸುತ್ತಿರುವುದು. ಅದರಲ್ಲಿ ಸ್ನಾನವನ್ನು ಮಾಡಿ ಆ ಲಿಂಗವನ್ನು ನೋಡಲು ದಿಕ್ಪಾಲಕಪದವಿಯು ಲಭಿಸುವುದು.

ತತ್ರಾಸ್ತ್ಯೇಕಾ ಮಹಾಗೌರೀ ನಾಮ್ನಾ ವಿಜಯಭೈರವೀ ।
ರಕ್ಷಾರ್ಥಮುತ್ತರದ್ವಾರಿ ಸ್ಥಿತಾ ಪೂಜ್ಯೇಷ್ಟಸಿದ್ಧಯೇ ॥ ೩೦ ॥
ವರಣಾಯಾಸ್ತಟೇ ರಮ್ಯೇ ಗಣೌ ಹುಂಡನಮುಂಡನೌ ।
ಕ್ಷೇತ್ರರಕ್ಷಾಂ ವಿಧತ್ತಸ್ತೌ ವಿಘ್ನಸ್ತಂಭನಕಾರಕೌ ॥ ೩೧ ॥
ತೌ ದೃಷ್ಟವ್ಯೌ ಪ್ರಯತ್ನೇನ ಕ್ಷೇತ್ರನಿರ್ವಿಘ್ನಹೇತವೇ ।
ಹುಂಡನೇಶಂ ಮುಂಡನೇಶಂ ತತ್ರ ದೃಷ್ಟ್ವಾ ಸುಖೀ ಭವೇತ್ ॥ ೩೨ ॥

ಸ್ಕಂದ ಉವಾಚ :—

ಇಲ್ವಲಾರೇ ಕಥಾಮೇಕಾಂ ಶೃಣುಷ್ವಾವಹಿತೋ ಭವ ।
ವರಣಾಯಾಸ್ತಟೇ ರಮ್ಯೇ ಯದ್ವೃತ್ತಂ ಪೂರ್ವಮುತ್ತಮಂ ॥ ೩೩ ॥
ಏಕದಾದ್ರೀಂದ್ರಮಾಲೋಕ್ಯ ಮೇನಾ ಸಂಹೃಷ್ಟಮಾನಸಂ ।
ಉಮಾಂ ಸಂಸ್ಮೃತ್ಯ ನಿಃಶ್ವಸ್ಯ ಪ್ರೋವಾಚೇತಿ ಪತಿವ್ರತಾ ॥ ೩೪ ॥

ಮೇನೋವಾಚ :—

ಆರ್ಯಪುತ್ರ ನ ಜಾನಾಮಿ ಪ್ರವೃತ್ತಿಮಪಿ ಕಾಂಚನ ।
ವಿವಾಹಸಮಯಾದೂರ್ಧ್ವಂ ತಸ್ಯಾ ಗೌರ್ಯಾ ಗಿರೀಶ್ವರ ॥ ೩೫ ॥

---

೩೦. ಅಲ್ಲಿ ವಿಜಯಭೈರವಿಯೆಂಬ ಹೆಸರಿನಿಂದ ಒಬ್ಬ ಮಹಾ ಗೌರಿಯು ಸ್ಥಾಪಿತಳಾಗಿರುವಳು. ಕ್ಷೇತ್ರದ ರಕ್ಷಣೆಗೋಸ್ಕರವಾಗಿ ಆಕೆಯು ದ್ವಾರದಲ್ಲಿ ನೆಲಸಿರುವಳು. ಅಭೀಷ್ಟಸಿದ್ಧಿಗಳನ್ನು ಬಯಸುವವರು ಆಕೆಯನ್ನು ಪೂಜಿಸಬೇಕು.

೩೧. ವರಣಾನದಿಯ ದಡದ ರಮ್ಯಪ್ರದೇಶದಲ್ಲಿ ಹುಂಡನ, ಮುಂಡನರೆಂಬ ಗಣನಾಯಕರಿರುವರು. ಅವರಿಬ್ಬರೂ ಕ್ಷೇತ್ರದ ಸಂರಕ್ಷಣೆಯನ್ನು ಮಾಡುತ್ತ ಭಕ್ತರ ವಿಘ್ನಗಳನ್ನು ನಿಶ್ಶೇಷ್ಟಗೊಳಿಸುತ್ತಿರುವರು.

೩೨. ಕ್ಷೇತ್ರಸೇವೆಯು ನಿರ್ವಿಘ್ನವಾಗಿ ನಡೆಯಬೇಕಾದರೆ ಅವರಿಬ್ಬರನ್ನೂ ಅತ್ಯವಶ್ಯಕವಾಗಿ ನೋಡಬೇಕು. ಆ ಹುಂಡನೇಶ್ವರ, ಮುಂಡನೇಶ್ವರರನ್ನು ನೋಡಿದ ಮನುಷ್ಯನು ಸುಖವಾಗಿ ಕ್ಷೇತ್ರಯಾತ್ರೆಯನ್ನು ಮಾಡುವನು.

೩೩. ಸ್ಕಂದನು ಹೇಳುತ್ತಾನೆ:—ಇಲ್ವಲವೈರಿಯಾದ ಅಗಸ್ತ್ಯನೆ! ಪೂರ್ವದಲ್ಲಿ ವರಣಾನದಿಯ ತೀರಪ್ರದೇಶದಲ್ಲಿ ನಡೆದ ಉತ್ತಮ ವೃತ್ತಾಂತವೊಂದನ್ನು ಹೇಳುವೆನು. ಏಕಾಗ್ರಮನಸ್ಕನಾಗಿ ಕೇಳುವವನಾಗು.

೩೪. ಒಮ್ಮೆ ಮೇನಾದೇವಿಯು ಮಗಳಾದ ಪಾರ್ವತಿಯನ್ನು ಸ್ಮರಿಸಿಕೊಂಡು ನಿಟ್ಟುಸಿರನ್ನು ಬಿಡುತ್ತ ಸಂತುಷ್ಟಮನಸ್ಕನಾಗಿ ಕುಳಿತಿದ್ದ ಪತಿಯಾದ ಹಿಮವಂತರಾಜನನ್ನು ಕುರಿತು ಇಂತೆಂದಳು.

೩೫. ಮೇನಾದೇವಿಯು ಹೇಳುತ್ತಾಳೆ:—ಉತ್ತಮಕುಲಪ್ರಸೂತನಾದ ಪರ್ವತರಾಜನೆ! ಮದುವೆಯಾದ ದಿನದ ಮೊದಲುಗೊಂಡು ನಮ್ಮ ಪ್ರಿಯಪುತ್ರಿ

ಸ ವೃಷೇಂದ್ರಗತಿರ್ದೇವೋ ಭಸ್ಮೋರಗವಿಭೂಷಣಃ ।
ಮಹಾಪಿತೃವನಾವಾಸೋ ದಿಗ್ವಾಸಾಃ ಕ್ವಾಸ್ತಿ ಸಂಪ್ರತಿ ॥ ೩೭ ॥
ಅಷ್ಟೌ ಯಾ ಮಾತರೋ ದೃಷ್ಟ್ವಾ ಬ್ರಾಹ್ಮೀಪ್ರಭೃತಯಃ ಪ್ರಿಯ ।
ಸ್ವಸ್ವರೂಪಾಸ್ತಾ ಮನ್ಯೇಽಹಂ ಬಾಲಿಕಾಃ ಕಷ್ಟಹೇತವಃ ॥ ೩೭ ॥
ತಸ್ಯೈಕಸ್ಯ ನ ಕೋಽಪ್ಯನ್ಯೋಽಸ್ತ್ಯದ್ವಿತೀಯಸ್ಯ ಶೂಲಿನಃ ।
ತದುದಂತಪ್ರವೃತ್ತ್ಯೈ ಚ ಕ್ರಿಯತಾಮುದ್ಯಮೋ ವಿಭೋ ॥ ೩೮ ॥
ತಸ್ಯಾಃ ಪ್ರಿಯಾಯಾ ವಾಕ್ಯೇನ ತದಪತ್ಯಪ್ರಿಯೋ ಗಿರಿಃ ।
ಉವಾಚ ವಚನಂ ಸಾಸ್ರಮುಮಾವಾತ್ಸಲ್ಯಸನ್ನಗೀಃ ॥ ೩೯ ॥

ಗಿರಿರಾಜ ಉವಾಚ:—

ಅಹಮೇವ ಗಮಿಷ್ಯಾಮಿ ತಸ್ಯ ಮೇನೇ ಗವೇಷಣೇ ।
ನಿತರಾಂ ಬಾಧತೇ ಪ್ರೇಮ ತದದೃಷ್ಟ್ಯಗ್ನಿದೂಷಿತಂ ॥ ೪೦ ॥

---

ಯಾದ ಗೌರಿಯು ಹೇಗೆ ಬಾಳುತ್ತಿರುವಳೆಂಬ ವಿಷಯದಲ್ಲಿ ಸ್ವಲ್ಪವೂ ತಿಳಿಯಲಾರದವಳಾಗಿರುವೆನು.

೩೬. ವೃಷಭೇಶ್ವರವಾಹನನೂ, ದೇವದೇವನೂ, ಭಸ್ಮೋದ್ಧೂಳಿತಗಾತ್ರನೂ, ಸರ್ಪಭೂಷಣನೂ, ಸ್ಮಶಾನನಿವಾಸಿಯೂ, ದಿಗಂಬರನೂ ಆದ ಶಿವನು ಈಗ ಎಲ್ಲಿ ವಾಸಿಸುತ್ತಿರುವನು ?

೩೭. ಪ್ರಿಯನೆ! ಬ್ರಾಹ್ಮಿಯೇ ಮೊದಲಾದ ಅಷ್ಟಮಾತೃಕೆಯರನ್ನು ಶಿವನ ಪರಿವಾರದಲ್ಲಿ ನಾವು ನೋಡಿದೆವಲ್ಲವೆ. ಅವರೇ ಸುಖಸ್ವರೂಪಿಣಿಯರೆಂದು ನಾನು ತಿಳಿದಿರುವೆನು. ಇತರ ಬಾಲಿಕೆಯರೆಲ್ಲರೂ (ತಂದೆತಾಯಿಗಳಿಗೆ) ಕಷ್ಟ ಹೇತುಗಳೇ ಆಗಿರುವರು.*

೩೮. ಏಕನೂ, ಅದ್ವಿತೀಯನೂ, ಶೂಲಾಯುಧಪಾಣಿಯೂ ಆದ ಪರಮ ಶಿವನಿಗೆ ಅನ್ಯನೊಬ್ಬನೂ ಇಲ್ಲ.† ಸ್ವಾಮಿಯೆ! ಆದುದರಿಂದ ಆತನ ಆಚಾರ ವ್ಯವಹಾರಗಳನ್ನು ತಿಳಿಯುವ ಪ್ರಯತ್ನವನ್ನು ಮಾಡು.

೩೯. ಪ್ರಿಯಪತ್ನಿಯ ವಾಕ್ಯದಿಂದ ಚೋದಿತನಾಗಿ ಸಹಜವಾಗಿಯೇ ಮಕ್ಕಳಲ್ಲಿ ವಾತ್ಸಲ್ಯವುಳ್ಳ ಹಿಮವದ್ರಾಜನು ಉಮೆಯಲ್ಲಿನ ಪ್ರೇಮದಿಂದ ಗದ್ಗದಿತವಾದ ಧ್ವನಿಯಿಂದ ಮಾತನಾಡತೊಡಗಿದನು.

೪೦. ಹಿಮವಂತನು ಹೇಳುತ್ತಾನೆ:—ಮೇನೆಯೆ! ನಾನೇ ಆತನನ್ನು

---

* ಈ ಶ್ಲೋಕಕ್ಕೆ "ನಾಥನೆ! ನಾನು ನೋಡಿದ ಬ್ರಾಹ್ಮಿಯೇ ಮುಂತಾದ ಅಷ್ಟಮಾತೃಕೆಯರು ಸುಂದರಸ್ವರೂಪರೂ ಯೌವನವತಿಯರೂ ಆಗಿರುವುದರಿಂದ ನನ್ನ ಮಗಳಿಗೆ ಕ್ಲೇಶದಾಯಕರಾಗುವರೆಂದು ತಿಳಿಯುತ್ತೇನೆ" ಎಂಬುದಾಗಿಯೂ ಅರ್ಥವನ್ನು ಹೇಳಬಹುದು. (ಈಶ್ವರನು ಸುಂದರಿಯರಾದ ಅವರಲ್ಲಿ ಅನುರಕ್ತನಾಗಿ ನನ್ನ ಮಗಳನ್ನು ಉದಾಸೀನಭಾವದಿಂದ ಕಾಣಬಹುದೆಂದು ಭಾವವು.)

† ಏಕನೆಂಬುದರಿಂದ ವಿಜಾತೀಯ ಭೇದರಹಿತನೂ, ಅದ್ವಿತೀಯನೆಂಬುದರಿಂದ ಸ್ವಗತಭೇದ ಶೂನ್ಯನೂ, ಅನ್ಯರಹಿತನೆಂಬುದರಿಂದ ಸಜಾತೀಯಭೇದವರ್ಜಿತನೂ ಆದ ಪರಮೇಶ್ವರನನ್ನೇ ಮೇನಾದೇವಿಯು ನಿಂದಾರೂಪದಿಂದ ಸ್ತುತಿಸಿದಳೆಂದು ತಿಳಿಯಬೇಕು.

ಯದಾ ಪ್ರಭೃತಿ ಸಾ ಗೌರೀ ನಿರ್ಗತಾ ಮಮ ಸದ್ಮತಃ ।
ಮನ್ಯೇ ಮೇನೇ ತದಾರಭ್ಯ ಪದ್ಮಸದ್ಮಾ ವಿನಿರ್ಯಯೌ ॥ ೪೧ ॥
ತದಾಲಾಪಾಮೃತಧಯೌ ನ ಮೇ ಶಬ್ದಗ್ರಹೌ ಪ್ರಿಯೇ ।
ಪ್ರಾಣೇಶ್ವರಿ ತದಾರಭ್ಯ ಸ್ಯಾತಾಂ ಶಬ್ದಾಂತರಗ್ರಹೌ ॥ ೪೨ ॥
ಜೈವಾತೃಕೀ ಯತೋಽಹ್ನಃ ಸ್ಯಾದದೃಶೀಭೂತಾ ದೃಶೋರ್ಮನಾ ।
ಅಹೋ ಜೈವಾತೃಕೀ ಜ್ಯೋತ್ಸ್ನಾ ತತೋಽಹ್ನೋಽತಿ ದುನೋತಿ ಮಾಂ ॥
ಇತ್ಯುಕ್ತ್ವಾssದಾಯ ರತ್ನಾನಿ ವಾಸಾಂಸಿ ವಿವಿಧಾನಿ ಚ ।
ಧರಾಧರೇಂದ್ರೋ ನಿರ್ಯಾತಃ ಶುಭಲಗ್ನಬಲೋದಯೇ ॥ ೪೪ ॥

ಅಗಸ್ತ್ಯ ಉವಾಚ :—

ಕಾನಿ ಕಾನಿ ಚ ರತ್ನಾನಿ ಕಿಯಂತ್ಯಪಿ ಚ ಷಣ್ಮುಖ ।
ಯಾನ್ಯಾದಾಯ ಪ್ರತಸ್ಥೇ ಚ ತಾನಿ ಮೇ ಬ್ರೂಹಿ ಪೃಚ್ಛತಃ ॥ ೪೫ ॥

ಸ್ಕಂದ ಉವಾಚ :—

ತುಲಾ ಮುಕ್ತಾಫಲಾನಾಂ ತು ಕೋಟಿದ್ವಯಪರೀಮಿತಃ ।
ತಥಾ ಪಾರಿತರಾಣಾಂ ಚ ಹೀರಕಾಣಾಂ ತುಲಾಶತಂ ॥ ೪೬ ॥

---

ಅನ್ವೇಷಣೆಮಾಡಿಕೊಂಡು ಹೋಗುವೆನು. ಮಗಳನ್ನು ನೋಡಲಿಲ್ಲನೆಂಬ ತಾಪದಿಂದ ಕೂಡಿದ ಪ್ರೀತಿಯು ನನ್ನನ್ನು ನಿರಂತರವೂ ಪೀಡಿಸುತ್ತಿರುವುದು.

೪೧. ಯಾವ ದಿನ ಆ ಗೌರಿಯು ನನ್ನ ಮನೆಯನ್ನು ಬಿಟ್ಟುಹೋದಳೊ, ಅಂದು ಮೊದಲುಗೊಂಡು ನನ್ನ ಮನೆಯ ಲಕ್ಷ್ಮಿಯೇ ಬಿಟ್ಟುಹೋಗಿರುವಂತೆ ನನಗೆ ತೋರುತ್ತಿರುವುದು.

೪೨. ಪ್ರಿಯೆ, ಪ್ರಾಣನಾಯಕಿಯೆ! ಅವಳ ಮಧುರಾಲಾಪಗಳನ್ನು ಪಾನಮಾಡುತ್ತಿದ್ದ ನನ್ನ ಕಿವಿಗಳೆರಡೂ ಅಂದಿನಿಂದ ಇತರ ಶಬ್ದಗಳನ್ನು ಕೇಳಲು ಕುತೂಹಲವುಳ್ಳವುಗಳಾಗಿಲ್ಲ.

೪೩. ಪ್ರಾಣಕ್ಕೆ ಸಮಾನಳಾಗಿದ್ದ ಉಮೆಯು ಯಾವ ದಿನದಿಂದ ನನ್ನ ಕಣ್ಣುಗಳಿಗೆ ಕಾಣಿಸದಾದಳೊ, ಅಂದಿನಿಂದ ವಿರಹಿತನಾದ ನನಗೆ ಚಂದ್ರನ ಬೆಳದಿಂಗಳೂ ಸಹ ಸಂಕಟವನ್ನುಂಟುಮಾಡುತ್ತಿರುವುದು.

೪೪. ಇಂತೆಂದು ಅನೇಕವಿಧಗಳಾದ ರತ್ನಗಳನ್ನೂ ವಸ್ತ್ರಗಳನ್ನೂ ತೆಗೆದುಕೊಂಡು ಪರ್ವತರಾಜನು ಶುಭಲಗ್ನದ ಬಲವು ಹೆಚ್ಚುತ್ತಿದ್ದ ಸಮಯದಲ್ಲಿ ಅರಮನೆಯನ್ನು ಬಿಟ್ಟು ಹೊರಟನು.

೪೫. ಅಗಸ್ತ್ಯನು ಪ್ರಶ್ನೆಮಾಡುತ್ತಾನೆ:—ಓ ಷಡಾನನೆ! ಆತನು ಯಾವ ಯಾವ ರತ್ನಗಳನ್ನು ಎಷ್ಟು ಸಂಖ್ಯೆಯಿಂದ ತೆಗೆದುಕೊಂಡು ಹೊರಟನೆಂಬ ವಿಷಯವನ್ನು ನನಗೆ ಹೇಳು.

೪೬–೫೦. ಸ್ಕಂದನು ಹೇಳುತ್ತಾನೆ:— ಎರಡುಕೋಟಿ ಸಂಖ್ಯೆಯ

ನವಲಕ್ಷಾಧಿಕಂ ವಿಪ್ರ ಷಡಸ್ರಾಣಾಂ ಸುತೇಜಸಾಂ ।
ಲಕ್ಷದ್ವಯಂ ವಿಡೂರಾಣಾಂ ತುಲಾವಿಮಲವರ್ಚಸಾಂ ॥ ೪೭ ॥
ಕೋಟಯಃ ಪದ್ಮರಾಗಾಣಾಂ ಪಂಚಾವ್ಯೈಹಿ ತುಲಾ ಮುನೇ ।
ಪುಷ್ಪರಾಗತುಲಾಲಕ್ಷಂ ಗುಣಿತಂ ನವಸಂಖ್ಯಯಾ ॥ ೪೮ ॥
ತಥಾ ಗೋಮೇದರತ್ನಾನಾಂ ತುಲಾ ಲಕ್ಷಮಿತಾ ಮುನೇ ।
ಇಂದ್ರನೀಲಮಣೀನಾಂ ಚ ತುಲಾ ಕೋಟ್ಯರ್ಧಸಂಮಿತಾಃ ॥ ೪೯ ॥
ಗರುಡೋದ್ಗಾರರತ್ನಾನಾಂ ತುಲಾಃ ಪ್ರಯುತಸಂಮಿತಾಃ ।
ಶುದ್ಧವಿದ್ರುಮರತ್ನಾನಾಂ ತುಲಾಶ್ಚ ನವಕೋಟಯಃ ॥ ೫೦ ॥
ಅಷ್ಟಾಂಗಾಭರಣಾನಾಂ ಚ ಸಂಖ್ಯಾ ಕರ್ತುಂ ನ ಶಕ್ಯತೇ ।
ವಾಸಸಾಂ ಚ ವಿಚಿತ್ರಾಣಾಂ ಕೋಮಲಾನಾಂ ತಥಾ ಮುನೇ ॥ ೫೧ ॥
ಚಾಮರಾಣಿ ಚ ಭೂಯಾಂಸಿ ದ್ರವ್ಯಾಣ್ಯಾಮೋದಯಂತಿ ಚ ।
ಸುವರ್ಣದಾಸದಾಸ್ಯಾದೀನ್ಯಸಂಖ್ಯಾತಾನಿ ವೈ ಮುನೇ ॥ ೫೨ ॥
ಸರ್ವಾಣ್ಯಪಿ ಸಮಾದಾಯ ಪ್ರತಸ್ಥೇ ಭೂಧರೇಶ್ವರಃ ।
ಆಗತ್ಯ ವರಣಾತೀರಂ ದೂರಾತ್ಕಾಶೀಮವಲೋಕಯತ್ ॥ ೫೩ ॥

---

ತುಲಗಳ* ಪ್ರಮಾಣದ ಉತ್ತಮಗಳಾದ ಆಣಿಮುತ್ತುಗಳನ್ನೂ, ಸಮುದ್ರದಲ್ಲಿ ಉದ್ಭವಿಸಿ ಅತಿ ಸ್ವಚ್ಛಗಳಾದ ಹೀರವಜ್ರಗಳ ನೂರು ತುಲಗಳನ್ನೂ, ಆರು ಮುಖಗಳಿಂದ ಹೊಳೆಯುತ್ತಿರುವ ವಜ್ರಗಳ ಒಂಭತ್ತುಲಕ್ಷ ತುಲಗಳಿಗೆ ಹೆಚ್ಚಿದ ಭಾರವನ್ನೂ, ಶುಭ್ರವಾದ ಕಾಂತಿಯುಳ್ಳ ಎರಡು ಲಕ್ಷ ತುಲಗಳ ವೈಡೂರ್ಯ ಮಣಿಗಳನ್ನೂ, ಐದುಕೋಟಿ ತುಲಗಳ ಪದ್ಮರಾಗಗಳನ್ನೂ, ಒಂಬತ್ತುಲಕ್ಷ ಸಂಖ್ಯೆಯ ತುಲಗಳಷ್ಟು ಪುಷ್ಪರಾಗಗಳನ್ನೂ, ಒಂದುಲಕ್ಷ ತುಲಗಳ ಗೋಮೇಧಿಕರತ್ನಗಳನ್ನೂ, ಐವತ್ತುಲಕ್ಷತುಲಗಳ ಇಂದ್ರನೀಲಮಣಿಗಳನ್ನೂ, ಹತ್ತು ಲಕ್ಷ ತುಲಗಳ ಮರಕತಗಳನ್ನೂ, ಒಂಬತ್ತುಕೋಟಿ ತುಲಗಳ ಪರಿಶುದ್ಧಗಳಾದ ಕೆಂಪುಗಳನ್ನೂ ಸೇರಿಸಿಕೊಂಡು ಹೊರಟನು.

೫೧. ಮಹಾಮುನಿಯೆ! ಆತನು ತೆಗೆದುಕೊಂಡ ದೇಹದ ಅಷ್ಟಾಂಗಗಳ ಅಲಂಕಾರಗಳನ್ನಾಗಲಿ, ವಿಚಿತ್ರಗಳೂ ಸೂಕ್ಷ್ಮಗಳೂ ಆದ ವಸ್ತ್ರಗಳನ್ನಾಗಲಿ ಎಣಿಸಲು ಸಾಧ್ಯವಿಲ್ಲವಾಯಿತು.

೫೨. ಅಸಂಖ್ಯಾಕಗಳಾದ ಚಾಮರಗಳನ್ನೂ, ಅನೇಕ ಸುಗಂಧದ್ರವ್ಯಗಳನ್ನೂ, ಲೆಕ್ಕವಿಲ್ಲದಷ್ಟು ಚಿನ್ನವನ್ನೂ, ದಾಸದಾಸಿಯರನ್ನೂ ಆ ಹಿಮವಂತನು ತೆಗೆದುಕೊಂಡು ಗೌರಿಯನ್ನು ನೋಡಲು ಹೊರಟನು.

೫೩. ಪರ್ವತರಾಜನಾದ ಆತನು ಸಕಲ ಸಾಮಗ್ರಿಗಳನ್ನೂ ತೆಗೆದುಕೊಂಡು

---

* ಎಂಟು ಗುಲಗಂಜಿಗಳ ತೂಕಕ್ಕೆ ಮಾಷವೆಂದೂ, ಅರುವತ್ತನಾಲ್ಕು ಮಾಷಗಳ ತೂಕಕ್ಕೆ ಒಂದು ಪಲವೆಂದೂ ಹೆಸರು. ಇಂತಹ ಒಂದು ನೂರ ಪಲಗಳಾಗಲು ಒಂದು ತುಲವೆನಿಸುವುದು.

ಅನೇಕರತ್ನನಿಚಯೈಃ ಖಚಿತಾಽಖಿಲಭೂಮಿಕಾಂ ।
ನಾನಾಪ್ರಾಸಾದಮಾಣಿಕ್ಯಜ್ಯೋತಿಶ್ಯತತತಾಂಬರಾಂ ॥ ೫೪ ॥
ಸೌಧಾಗ್ರವಿವಿಧಸ್ವರ್ಣಕಲಶೋಜ್ಜ್ವಲದಿಙ್ಮುಖಾಂ ।
ಜಯಂತೀವೈಜಯಂತೀನಾಂ ನಿಕರೈಸ್ತ್ರಿದಿವಸ್ಥಲೀಂ ॥ ೫೫ ॥
ಮಹಾಸಿದ್ಧ್ಯಷ್ಟಕಸ್ಯಾಪಿ ಕ್ರೀಡಾಭವನಮುದ್ಭುತಂ ।
ಜಿತಕಲ್ಪದ್ರುಮವನಾಂ ವನ್ಯೈಃ ಸರ್ವಫಲಾವನ್ಯೈಃ ॥ ೫೬ ॥
ಇತಿ ಕಾಶೀಸಮೃದ್ಧಿಂ ಸ ವಿಲೋಕ್ಯಾಭೂದ್ವಿಲಜ್ಜಿತಃ ।
ಉವಾಚ ಚ ಮನಸ್ಯೇವ ಭೂಧರೇಂದ್ರ ಇದಂ ವಚಃ ॥ ೫೭ ॥
ಪ್ರಾಸಾದೇಷು ಪ್ರತೋಲೀಷು ಪ್ರಾಕಾರೇಷು ಗೃಹೇಷು ಚ ।
ಗೋಪುರೇಷು ವಿಚಿತ್ರೇಷು ಕಪಾಟೇಷು ತಟೇಷ್ವಪಿ ॥ ೫೮ ॥
ಮಣಿಮಾಣಿಕ್ಯರತ್ನಾನಾಮುಚ್ಚಲಚ್ಚಾರುರೋಚಿಷಾಂ ।
ಜ್ಯೋತಿರ್ಜಾಲೈರ್ಜಟಿಲಿತಂ ಯಥೇದಮವಲೋಕ್ಯತೇ ॥ ೫೯ ॥

---

ಹೊರಟು ವರಣಾನದಿಯ ತೀರವನ್ನು ಸೇರಿ ದೂರದಿಂದಲೇ ಕಾಶೀಕ್ಷೇತ್ರದ ದರ್ಶನವನ್ನು ಮಾಡಿದನು.

೫೪. ಆ ನಗರಿಯಾದರೊ ಅನೇಕ ರತ್ನಸಮೂಹಗಳಿಂದಲಂಕೃತವಾದ ಭೂಮಿಯುಳ್ಳದ್ದಾಗಿ, ಅಸಂಖ್ಯಾಕಗಳಾದ ಪ್ರಾಸಾದಗಳಲ್ಲಿ ಬೆಳಗುತ್ತಿರುವ ಮಾಣಿಕ್ಯಗಳ ಕಾಂತಿಯಿಂದ ಆಕಾಶವನ್ನೂ ಬೆಳಗುತ್ತಿದ್ದಿತು.

೫೫. ಉಪ್ಪರಿಗೆಗಳ ಮೇಲೆ ಅನೇಕವಿಧಗಳಾದ ಚಿನ್ನದ ಕಲಶಗಳು ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಿದ್ದುವು. ಜಯಂತಿ, ವೈಜಯಂತಿಗಳೆಂಬ ಧ್ವಜಪತಾಕೆಗಳಿಂದ ಸ್ವರ್ಗಲೋಕವನ್ನೇ ಮುಟ್ಟುತ್ತಿರುವಂತೆ ಆ ಪಟ್ಟಣವು ಕಾಣುತ್ತಿದ್ದಿತು.

೫೬. ಅಣಿಮಾದ್ಯಷ್ಟಮಹಾಸಿದ್ಧಿಗಳಿಗೂ ಆ ನಗರಿಯು ಕ್ರೀಡಾಭವನವೆನ್ನುವಂತೆ ಅದ್ಭುತವಾಗಿ ಸಮಸ್ತಫಲಗಳನ್ನೂ ಸರ್ವಕಾಲಗಳಲ್ಲಿಯೂ ಕೊಡುತ್ತಿರುವ ಉದ್ಯಾನವನಗಳಿಂದ ಕಲ್ಪವೃಕ್ಷಗಳ ವನವನ್ನೂ ಧಿಕ್ಕರಿಸುತ್ತಿದ್ದಿತು.

೫೭. ಇಂತಹ ಅಖಂಡವೈಭವದಿಂದೊಡಗೂಡಿದ ಕಾಶೀಕ್ಷೇತ್ರದ ಸರ್ವಸಮೃದ್ಧಿಯನ್ನು ನೋಡಿ ಆ ಹಿಮವಂತನು ಬಹಳವಾಗಿ ನಾಚಿಕೆಗೊಂಡು, ತನ್ನಲ್ಲಿಯೇ ಇಂತೆಂದುಕೊಂಡನು.

೫೮–೫೯. ಮಹಡಿಗಳಲ್ಲಿಯೂ, ಬೀದಿಗಳಲ್ಲಿಯೂ, ಪ್ರಾಂಗಣಗಳಲ್ಲಿಯೂ, ಮನೆಗಳಲ್ಲಿಯೂ, ಗೋಪುರಗಳಲ್ಲಿಯೂ, ವಿಚಿತ್ರಗಳಾದ ಬಾಗಿಲುಗಳಲ್ಲಿಯೂ, ಜಗುಲಿಗಳಲ್ಲಿಯೂ ಉಜ್ಜ್ವಲಿಸುತ್ತಿರುವ ಮನೋಹರವಾದ ವಾಡಗಳಲ್ಲಿಯೂ, ಜಗುಲಿಗಳಲ್ಲಿಯೂ ಉಜ್ಜ್ವಲಿಸುತ್ತಿರುವ ಮನೋಹರವಾದ

ದ್ಯಾವಾಭೂಮ್ಯೋರಂತರಾಲಂ ತಥೇತಿ ಸಮುನ್ವೈಮ್ಯಹಂ ।
ಈದೃಕ್ಸಂಪತ್ತಿಸಂಭಾರಃ ಕುಬೇರಸ್ಯಾಪಿ ನೋ ಗೃಹೇ ॥ ೬೦ ॥
ಅಪಿ ವೈಕುಂಠಭುವನೇ ನೇತರಸ್ಯೇಹ ಕಾ ಕಥಾ ।
ಇತಿ ಯಾವದ್ಗಿರೀಂದ್ರೋಽಸೌ ಸಂಭಾವಯತಿ ಚೇತಸಿ ॥ ೬೧ ॥
ತಾವತ್ಕಾರ್ಪಟಿಕಃ ಕಶ್ಚಿತ್ತಲ್ಲೋಚನಪಥಂ ಗತಃ ।
ಆಹೂಯ ಬಹುಮಾನಂ ತಮಪೃಚ್ಛಚ್ಚಾಚಲೇಶ್ವರಃ ॥ ೬೨ ॥

ಹಿಮವಾನುವಾಚ :—

ಹಂಹೋ ಕಾರ್ಪಟಿಕಶ್ರೇಷ್ಠ ಅಧ್ಯಾಸ್ವೈತದಿಹಾಸನಂ ।
ಸ್ವಪುರೋದಂತಮಾಖ್ಯಾಹಿ ಕಿಮಪೂರ್ವಮಿಹಾಧ್ವಗ ॥ ೬೩ ॥
ಕೋಽತ್ರ ಸಂಪ್ರತ್ಯಧಿಷ್ಠಾತಾ ಕಿಮಧಿಷ್ಠಾತೃಚೇಷ್ಟಿತಂ ।
ಯದಿ ಜಾನಾಸಿ ತತ್ಸರ್ವಮಿಹಾಚಕ್ಷ್ವ ಮಮಾಗ್ರತಃ ॥ ೬೪ ॥
ಸೋಽಪಿ ಕಾರ್ಪಟಿಕಸ್ತಸ್ಯ ಗಿರಿರಾಜಸ್ಯ ಭಾಷಿತಂ ।
ಸಮಾಕರ್ಣ್ಯ ಸಮಾಚಷ್ಟಂ ಮುನೇ ಸಮುಪಚಕ್ರಮೇ ॥ ೬೫ ॥

---

ಕಾಂತಿಗಳನ್ನು ಬೀರುತ್ತಿರುವ ಮಣಿಗಳ, ಮಾಣಿಕ್ಯಗಳ ಮತ್ತು ರತ್ನಗಳ ಜ್ಯೋತಿರ್ಜಾಲಗಳಿಂದ ಈ ನಗರವೆಲ್ಲವೂ ತುಂಬಿದಂತೆ ತೋರುತ್ತಿರುವುದು.

೬೦. ಭೂಮ್ಯಾಕಾಶಗಳನ್ನೂ ಅಂತರಿಕ್ಷವನ್ನೂ ತುಂಬಿರುವ ಇಂತಹ ಅಷ್ಟೈಶ್ವರ್ಯಗಳ ಸಮೃದ್ಧಿಯು ಇಲ್ಲಿರುವಂತೆ ಕುಬೇರನ ಮನೆಯಲ್ಲಿಯೂ ಇರಲಾರದೆಂದು ತಿಳಿಯುತ್ತೇನೆ.

೬೧-೬೨. ವೈಕುಂಠಲೋಕದಲ್ಲಿಯೂ ಇರಲಾರದೆಂದಮೇಲೆ ಬೇರೆಯವರ ಸ್ಥಾನಗಳನ್ನು ಕುರಿತು ಹೇಳಲೇಕೆ?'' ಇಂತೆಂದು ಗಿರಿರಾಜನು ಮನಸ್ಸಿನಲ್ಲಿಯೇ ಯೋಚನೆಮಾಡುತ್ತಿರಲು ಒಬ್ಬಾನೊಬ್ಬ ಕಾಷಾಯವಸ್ತ್ರಧಾರಿಯಾದ ಶೂದ್ರನು ಆತನ ದೃಷ್ಟಿಗೆ ಗೋಚರನಾದನು. ಆ ಪರ್ವತೇಶ್ವರನು ಆತನನ್ನು ಬಹುಮಾನ ಪುರಸ್ಸರವಾಗಿ ಬರಮಾಡಿಕೊಂಡು ಪ್ರಶ್ನೆಮಾಡತೊಡಗಿದನು.

೬೩. ಹಿಮವಂತನು ಕೇಳುತ್ತಾನೆ:—ಎಲೈ ಕಾರ್ಪಟಿಕೋತ್ತಮನೆ! ಇಲ್ಲಿರುವ ಈ ಆಸನದಲ್ಲಿ ಕುಳಿತುಕೊ. ಪಾಂಥನೆ! ಈ ನಗರದ ವೃತ್ತಾಂತವನ್ನು ನನಗೆ ತಿಳಿಯಹೇಳು. ಇಲ್ಲಿ ಅಪೂರ್ವವಾದ ವಿಷಯವು ಯಾವುದಿರುವುದು ?

೬೪. ಈ ನಗರಕ್ಕೆ ಈಗ ಅಧಿಪತಿಯಾಗಿರುವವನು ಯಾರು? ಆತನು ಹೇಗೆ ವ್ಯವಹರಿಸುತ್ತಿರುವನು? ಈ ವಿಷಯಗಳು ನಿನಗೆ ತಿಳಿದಿದ್ದರೆ ನನ್ನ ಸಮ್ಮುಖದಲ್ಲಿ ಎಲ್ಲವನ್ನೂ ವಿವರಿಸು.''

೬೫. ಅಗಸ್ತ್ಯಮುನಿಯೆ! ಆ ಕಾರ್ಪಟಿಕನೂ ಗಿರಿರಾಜನಾಡಿದ ಮಾತು ಗಳೆಲ್ಲವನ್ನೂ ಕೇಳಿ ಆ ನಗರವೃತ್ತಾಂತವನ್ನು ಹೇಳಲುಪಕ್ರಮಿಸಿದನು.

ಕಾರ್ಪಟಿಕ ಉವಾಚ :—

ಆಚಕ್ಷೇ ಶೃಣು ರಾಜೇಂದ್ರ ಯತ್ಪೃಷ್ಟೋಽಸ್ಮಿ ತ್ವಯಾಖಿಲಂ ।
ಅಹಾನಿ ಪಂಚಷಾಣ್ಯೇವ ವ್ಯತಿಕ್ರಾಂತಾನಿ ಮಾನವ ॥ ೬೬ ॥
ಸಮಾಯಾತೇ ಜಗನ್ನಾಥೇ ಪರ್ವತೇಂದ್ರಸುತಾಪತೌ ।
ಸುಂದರಾನ್ಮಂದರಾದದ್ರೇರ್ದಿವೋದಾಸೇ ಗತೇ ದಿವಿ ॥ ೬೭ ॥
ಯೋ ವೈ ಜಗದಧಿಷ್ಠಾತಾ ಸೋಽಧಿಷ್ಠಾತಾತ್ರ ಸರ್ವಗಃ ।
ಸರ್ವದೃಕ್ಸರ್ವಗಃ ಶರ್ವಃ ಕಥಂ ನ ಜ್ಞಾಯತೇ ವಿಭೋ ॥ ೬೮ ॥
ಮನ್ಯೇ ದೃಷತ್ಸ್ವರೂಪೋಽಸಿ ದೃಷದೋಽಪಿ ಕಠೋರಧೀಃ ।
ಯತೋ ವಿಶ್ವೇಶ್ವರಂ ಕಾಶ್ಯಾಂ ನ ವೇತ್ಸಿ ಗಿರಿಜಾಪತಿಂ ॥ ೬೯ ॥
ಸ್ವಭಾವಕಠಿನಾತ್ಮಾಪಿ ಸ ವರಂ ಹಿಮವಾನ್ಗಿರಿಃ ।
ಪ್ರಾಣಾಧಿಕಸುತಾದಾನಾದ್ಯೋಽಧಿನೋದ್ವಿಶ್ವನಾಯಕಂ ॥ ೭೦ ॥
ಬಿಭ್ರತ್ಸಹಜಕಾಠಿನ್ಯಂ ಜಾತೋ ಗೌರೀಗುರುರ್ಗುರುಃ ।
ಶಂಭುಂ ಪ್ರಪೂಜ್ಯ ಸುತಯಾ ಸ್ರಜಾ ವಿಶ್ವಗುರೋರಪಿ ॥ ೭೧ ॥

---

೬೬. ಕಾರ್ಪಟಿಕನು ಹೇಳುತ್ತಾನೆ:—ರಾಜೇಂದ್ರನೆ! ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಸಮಂಜಸಗಳಾದ ಉತ್ತರಗಳನ್ನು ಹೇಳುವೆನು ಕೇಳು. ಈಗ ಐದಾರು ದಿವಸಗಳ ಹಿಂದೆ ನಡೆದ ಒಂದು ಅದ್ಭುತವನ್ನು ವಿವರಿಸುವೆನು.

೬೭. ಹಿಂದೆ ಈ ನಗರವನ್ನಾಳುತ್ತಿದ್ದ ದಿವೋದಾಸಮಹಾರಾಜನು ಸ್ವರ್ಗಕ್ಕೆ ಹೊರಟುಹೋಗಲು ಪರ್ವತರಾಜಪುತ್ರಿಯ ಸಮೇತನಾಗಿ ಲೋಕೇಶ್ವರನಾದ ಮಹೇಶ್ವರನು ಸರ್ವತೋರಮ್ಯವಾದ ಮಂದರಾಚಲದಿಂದ ಇಲ್ಲಿಗೆ ಬಂದನು.

೬೮. ಯಾವನು ಸಮಸ್ತಬ್ರಹ್ಮಾಂಡಕ್ಕೂ ಅಧಿಷ್ಠಾತೃವಾಗಿರುವನೊ, ಆ ಸರ್ವವ್ಯಾಪಿಯಾದ ಶರ್ವನೇ ಈ ನಗರಿಗೂ ಅಧಿದೇವತೆಯಾಗಿರುವನು. ಮಹಾರಾಜನೆ! ಸರ್ವಸಾಕ್ಷಿಯೂ ಸರ್ವಫಲದಾಯಕನೂ ಆಗಿರುವ ಆತನನ್ನು ನೀನು ಹೇಗೆ ತಿಳಿಯಲಾರದಿರುವೆ?

೬೯. ನೀನು ನಿಜವಾಗಿಯೂ ಪಾಷಾಣಸ್ವರೂಪನೆಂದೇ ತಿಳಿಯುವೆನು. ಅಥವಾ ಕಾಶಿಯಲ್ಲಿ ನೆಲಸಿರುವ ಉಮಾರಮಣನಾದ ವಿಶ್ವೇಶ್ವರನನ್ನು ತಿಳಿಯದಿರುವ ನೀನು ಕಲ್ಲಿಗಿಂತಲೂ ಕಠಿನವಾದ ಹೃದಯವುಳ್ಳವನಾಗಿರುವೆ.

೭೦. ಸ್ವಭಾವದಿಂದ ಕಠಿನಹೃದಯವುಳ್ಳವನಾದ ಪರ್ವತರಾಜನಾದ ಹಿಮವಂತನೂ ಸಹ ಬ್ರಹ್ಮಾಂಡಕ್ಕೆ ಒಡೆಯನಾದ ಈಶ್ವರನನ್ನು ವರನನ್ನಾಗಿ ಸ್ವೀಕರಿಸಿ ಪ್ರಾಣಗಳಿಗಿಂತಲೂ ಪ್ರಿಯತಮೆಯಾದ ಮಗಳನ್ನು ಕೊಟ್ಟು ಸಂತೋಷಗೊಳಿಸಲಿಲ್ಲವೆ.

೭೧. ಬ್ರಹ್ಮನಿಗೂ ಪೂಜ್ಯಳಾದ ತನ್ನ ಮಗಳನ್ನೊಪ್ಪಿಸಿ ಮಹೇಶ್ವರನನ್ನು

ಚೇಷ್ಟಿತಂ ತಸ್ಯ ಕೋ ವೇದ ವೇದವೇದ್ಯಸ್ಯ ಚೇಶಿತುಃ ।
ಮಸಾಗಿತಿ ಚ ಜಾನೇಽಹಂ ತಚ್ಚೇಷ್ಟಿತಮಿದಂ ಜಗತ್ ॥ ೭೨ ॥
ಅಧಿಷ್ಠಾತಾ ಮಯಾ ಖ್ಯಾತಸ್ತಥಾಧಿಷ್ಠಾತೃಚೇಷ್ಟಿತಂ ।
ಅಪೂರ್ವಂ ಯತ್ತ್ವಯಾ ಪೃಷ್ಟಂ ತದಾಖ್ಯಾಸ್ಯೇ ಚ ತಚ್ಛೃಣು ॥ ೭೩ ॥
ಶುಭೇ ಜ್ಯೇಷ್ಠೇಶ್ವರಸ್ಥಾನೇ ಸಾಂಪ್ರತಂ ಸ ಉಮಾಪತಿಃ ।
ಕಾಶೀಂ ಪ್ರಾಪ್ಯ ಮುದಾ ತಿಷ್ಠೇದ್ಗಿರಿರಾಜಾಂಗಜಾಸಖಃ ॥ ೭೪ ॥

ಸ್ಕಂದ ಉವಾಚ:—

ಯದಾ ಯದಾ ಸ ಗಿರಿಜಾಮೃದುನಾಮಾಕ್ಷರಾಮೃತಂ ।
ಆವಿಷ್ಕರೋತಿ ಪಥಿಕೋಽದ್ರೀಂದ್ರೋ ಹೃಷ್ಯೇತ್ತದಾ ತದಾ ॥ ೭೫ ॥
ಉಮಾನಾಮಾಮೃತಂ ಪೀತಂ ಯೇನೇಹ ಜಗತೀತಲೇ ।
ನ ಜಾತು ಜನನೀಸ್ತನ್ಯಂ ಸ ಪಿಬೇತ್ಕುಂಭಸಂಭವ ॥ ೭೬ ॥
ಉಮೇತಿ ದ್ವ್ಯಕ್ಷರಂ ಮಂತ್ರಂ ಯೋಽಹರ್ನಿಶಮನುಸ್ಮರೇತ್ ।
ನ ಸ್ಮರೇಚ್ಚಿತ್ರಗುಪ್ತಸ್ತಂ ಕೃತಪಾಪಮಪಿ ದ್ವಿಜ ॥ ೭೭ ॥

---

ಪೂಜಿಸಿದುದರಿಂದಲೇ ಸಹಜವಾಗಿ ಕಠಿನಸ್ವಭಾವದವನಾದ ಗೌರೀಪಿತನೂ ಲೋಕದಲ್ಲಿ ಮಾನ್ಯತೆಯನ್ನು ಪಡೆದಿರುವನು.

೭೨. ವೇದಾಂತವೇದ್ಯನೂ ಸರ್ವೇಶ್ವರನೂ ಆದ ಆತನ ಚೇಷ್ಟಿತಗಳನ್ನು ತಿಳಿಯಲು ಯಾವನು ತಾನೆ ಸಮರ್ಥನ ? ಹಾಗಾದರೂ ಈ ಸಕಲ ಬ್ರಹ್ಮಾಂಡವೂ ಆತನ ಲೀಲೆಯೆಂದೇ ನಾನು ತಿಳಿದಿರುವೆನು.

೭೩. ಇಂತು ಈ ಕ್ಷೇತ್ರದ ಅಧಿಷ್ಠಾತೃವನ್ನೂ ಆತನ ಚೇಷ್ಟಿತವನ್ನೂ ನಿನಗೆ ವಿವರಿಸಿರುವೆನು. ಇನ್ನು ನೀನು ಇಲ್ಲಿ ನಡೆದಿರುವ ಅಪೂರ್ವವಿಚಾರ ವೇನೆಂದು ಮಾಡಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು, ಕೇಳು.

೭೪. ಪರಮಪವಿತ್ರವಾದ ಜ್ಯೇಷ್ಠಸ್ಥಾನದಲ್ಲಿ ಮಹಾದೇವನು ಈಗ ಗಿರೀಂದ್ರತನುಜೆಯೆನಿಸಿದ ಗೌರಿಯೊಡಗೂಡಿದವನಾಗಿ ಕಾಶೀಕ್ಷೇತ್ರವನ್ನು ಸೇರಿ ಸಂತೋಷದಿಂದ ವಾಸಮಾಡುತ್ತಲಿರುವನು.

೭೫. ಸ್ಕಂದನು ಹೇಳುತ್ತಾನೆ:—ಯಾವ ಯಾವ ವೇಳೆಗಳಲ್ಲಿ ಯಾತ್ರಿಕನು ಗಿರಿಜೆಯ ಮನೋಹರವಾದ ಹೆಸರಿನ ಅಕ್ಷರಗಳನ್ನುಚ್ಚರಿಸುತ್ತಿದ್ದನೊ, ಆಗಲೆಲ್ಲ ಹಿಮವಂತನು ತನ್ನ ಸಂತೋಷವನ್ನು ವ್ಯಕ್ತಗೊಳಿಸುತ್ತಿದ್ದನು.

೭೬. ಯಾವನಿಂದ ಉಮೆಯ ನಾಮವೆಂಬ ಅಮೃತವು ಸೇವಿಸಲ್ಪಟ್ಟಿರುವುದೊ, ಅವನು ಈ ಭೂಲೋಕದಲ್ಲಿ ತಾಯಿಯ ಸ್ತನ್ಯವನ್ನು ಪುನಃ ಎಂದಿಗೂ ಪಾನಮಾಡುವುದಿಲ್ಲ.

೭೭. ಬ್ರಾಹ್ಮಣೋತ್ತಮನೆ! ಉಮೆಯೆಂಬ ಎರಡಕ್ಷರಗಳಿಂದ ಕೂಡಿದ

ಪುನಃ ಶುಶ್ರಾವ ಹಿಮವಾನ್ಹೃಷ್ಟಃ ಕಾರ್ಪಟಿಕೋದಿತಂ ।
ಕಾರ್ಪಟಿಕ ಉವಾಚ :—
ರಾಜನ್ವಿಶ್ವೇಶ್ವರಾರ್ಥೇ ಯಃ ಪ್ರಾಸಾದೋ ವಿಶ್ವಕರ್ಮಣಾ ॥ ೭೮ ॥
ನಿರ್ಮಾಯತೇ ಸುನಿರ್ಮಾಣೋ ಜನ್ಮನಿರ್ಮಾಣದಾಯಿನಃ ।
ತದಪೂರ್ವಂ ನ ಕರ್ಣಾಭ್ಯಾಮುಪ್ಯಾಕರ್ಣಿತವಾನಹಂ ॥ ೭೯ ॥
ಯತ್ರಾತಿಮಿತ್ರತೇಜೋಭಿಃ ಶಲಾಕಾಭಿಃ ಸಮಂತತಃ ।
ಮಣಿಮಾಣಿಕ್ಯರತ್ನಾನಾಂ ಪ್ರಾಸಾದೇ ಭಿತ್ತಯಃ ಕೃತಾಃ ॥ ೮೦ ॥
ಯತ್ರ ಸಂತಿ ಶತಂ ಸ್ತಂಭಾ ಭಾಸ್ವಂತೋ ದ್ವಾದಶೋತ್ತರಾಃ ।
ವಿಶ್ವೈಕಂ ಭುವನಂ ಧರ್ತುಮಷ್ಟಾಷ್ಟಾವಿತಿ ಕಲ್ಪಿತಾಃ ॥ ೮೧ ॥
ಚತುರ್ದಶಸು ಯಾ ಶೋಭಾ ವಿಷ್ಟಪೇಷು ಸಮಂತತಃ ।
ತಸ್ಮಿನ್ವಿಮಾನೇ ಸಾಸ್ತೀಹ ಶತಕೋಟಿಗುಣೋತ್ತರಾ ॥ ೮೨ ॥
ಚಂದ್ರಕಾಂತಮಣೀನಾಂ ಚ ಸ್ತಂಭಾಧಾರಶಿಲಾಶ್ಚ ಯಾಃ ।
ಚಿತ್ರರತ್ನಮಯೈಃ ಸ್ತಂಭೈಃ ಸ್ತಂಭಿತಾಸ್ತತ್ರಭಾಭರಾಃ ॥ ೮೩ ॥

---

ಮಂತ್ರವನ್ನು ಯಾವನು ನಿರಂತರವೂ ಸ್ಮರಿಸುತ್ತಿರುವನೊ, ಅವನು ಪಾತಕಗಳನ್ನು ಮಾಡಿದ್ದರೂ ಚಿತ್ರಗುಪ್ತನು ಅವನನ್ನು ಸ್ಮರಿಸುವುದಿಲ್ಲ.

೭೮—೭೯. ಸಂತೋಷಗೊಂಡ ಹಿಮವಂತನು ಪುನಃ ಆ ಕಾರ್ಪಟಿಕನು ಹೇಳುವುದನ್ನು ಕೇಳಲುಪಕ್ರಮಿಸಿದನು. ಕಾರ್ಪಟಿಕನು ಹೇಳುತ್ತಾನೆ:— ಮಹಾರಾಜನೆ! ಪ್ರಾಣಿಮಾತ್ರಕ್ಕೂ ಮೋಕ್ಷವನ್ನು ಅನುಗ್ರಹಿಸುವ ವಿಶ್ವೇಶ್ವರನಿಗಾಗಿ ಪರಮಶೋಭನವಾದ ಯಾವ ಪ್ರಾಸಾದವು ವಿಶ್ವಕರ್ಮನಿಂದ ರಚಿಸಲ್ಪಟ್ಟಿರುವುದೊ, ಅದು ಈ ಕ್ಷೇತ್ರದ ಮತ್ತೊಂದು ವಿಶೇಷವಾಗಿರುವುದು. ಅಂತಹುದಿರುವುದಾಗಿ ನಾನು ಇಂದಿನವರೆಗೂ ಕಿವಿಗಳಿಂದಲೂ ಕೇಳಲಿಲ್ಲ.

೮೦. ಆ ಪ್ರಾಸಾದದ ಗೋಡೆಗಳು ಮಣಿ, ಮಾಣಿಕ್ಯ, ರತ್ನಗಳಿಂದ ಖಚಿತಗಳಾಗಿ ಸೂರ್ಯನ ಕಿರಣಗಳನ್ನೂ ಧಿಕ್ಕರಿಸುತ್ತಿರುವ ಶಲಾಕೆಗಳಿಂದ ಸುತ್ತಲೂ ಅಲಂಕರಿಸಲ್ಪಟ್ಟಿರುವುವು.

೮೧. ಮಂದಿರದಲ್ಲಿ ಪ್ರಕಾಶಮಾನಗಳಾದ ಒಂದನೂರ ಹನ್ನೆರಡು ಸ್ತಂಭಗಳಿರುವುವು. ಬ್ರಹ್ಮಾಂಡದ ಒಂದೊಂದು ಲೋಕವನ್ನು ಎತ್ತಿಹಿಡಿದಿಗಲು ಎಂಟೆಂಟು ಸ್ತಂಭಗಳ ಗಂಪುಗಳನ್ನು ನಿರ್ಮಿಸಿದಂತೆ ತೋರುತ್ತಿರುವುದು.

೮೨. ಹದಿನಾಲ್ಕು ಲೋಕಗಳ ವೈಭವವನ್ನು ಸಂಪೂರ್ಣವಾಗಿ ಒಟ್ಟುಗೂಡಿಸಿ ನೂರುಕೋಟಿ ಗುಣಿತವನ್ನಾಗಿ ಮಾಡಿದುದಕ್ಕಿಂತಲೂ ಮಿಗಿಲಾಗಿ ಆ ವಿಮಾನಮಂಟಪವು ಶೋಭಿಸುತ್ತಿರುವುದು.

೮೩. ಸ್ತಂಭಗಳಿಗೆ ಮಾಡಿರುವ ಚಂದ್ರಕಾಂತಶಿಲೆಯ ಅಡಿಗಲ್ಲುಗಳು

ಪದ್ಮರಾಗೇಂದ್ರನೀಲಾನಾಂ ಶಾಲೀನಾಃ ಶಾಲಭಂಜಿಕಾಃ ।
ನೀರಾಜಯಂತ್ಯಹೋರಾತ್ರಂ ಯತ್ರ ರತ್ನಪ್ರದೀಪಕೈಃ ॥ ೮೪ ॥
ಸ್ಫುರತ್ಸ್ಫಟಿಕನಿರ್ಮಾಣಶ್ಲಕ್ಷ್ಣಪದ್ಮಶಿಲಾತಲೇ ।
ಅನೇಕರತ್ನರೂಪಾಣಿ ವಿಚಿತ್ರಾಣಿ ಸಮಂತತಃ ॥ ೮೫ ॥
ಆರಕ್ತಪೀತಮಂಜಿಷ್ಠನೀಲಕಿರ್ಮೀರವರ್ಣಕೈಃ ।
ವಿನ್ಯಸ್ತಾನೀವ ಭಾಸಂತೇ ಚಿತ್ರೇ ಚಿತ್ರಕೃತಾ ಯತಃ ॥ ೮೬ ॥
ವೃಕ್ಷಪಙ್ಕ್ತಿಲಾ ವಿಲೋಕ್ಯಂತೇ ಮಾಣಿಕ್ಯಸ್ತಂಭರಾಜಯಃ ।
ಯತೋಽವಿಮುಕ್ತೇ ಸ್ವಕ್ಷೇತ್ರೇ ಮೋಕ್ಷಲಕ್ಷ್ಮ್ಯಂಕುರಾ ಇವ ॥ ೮೭ ॥
ರತ್ನಾಕರೇಭ್ಯಃ ಸರ್ವೇಭ್ಯೋ ಗಣಾ ರತ್ನೋಚ್ಚಯಾನ್ಬಹೂನ್ ।
ರಾಶೀಂಶ್ಚಕ್ರುಃ ಸಮಾನೀಯ ಯತ್ರಾದ್ರಿಶಿಖರೋಪಮಾನ್ ॥ ೮೮ ॥
ಯತ್ರ ಪಾತಾಲತಲತೋ ನಾಗಾನಾಂ ಕೋಶವೇಶ್ಮತಃ ।
ಗಣೈರ್ಮಣಿಗಣಾಃ ಸರ್ವೇ ಸಮಾಹೃತ್ಯ ಗಿರೀಕೃತಾಃ ॥ ೮೯ ॥

---

ಆ ಸ್ತಂಭಗಳಲ್ಲಿ ಕೆತ್ತಿದ ನವರತ್ನಗಳ ಕಾಂತಿಯಿಂದಾವೃತಗಳಾಗಿ ಅವುಗಳಂತೆಯೇ ಮಿಶ್ರಕಾಂತಿಯಿಂದೊಪ್ಪುತ್ತಿರುವುವು.

೮೪. ಪದ್ಮರಾಗ, ಇಂದ್ರನೀಲ ಮಣಿಗಳಿಂದ ಮಾಡಿದ ಪುತ್ಥಳಿಗಳು ನೀಲ ಕಾಂತಿಯಿಂದೊಪ್ಪುತ್ತ ತಮ್ಮ ಕೈಗಳಲ್ಲಿನ ರತ್ನದೀಪಗಳಿಂದ ಅಹೋರಾತ್ರಗಳಲ್ಲಿಯೂ ವಿಶ್ವೇಶ್ವರನಿಗೆ ನೀರಾಜನಗಳನ್ನು ಬೆಳಗುತ್ತಿರುವುವು.

೮೫–೮೬. ಹೊಳೆಯುತ್ತಿರುವ ಸ್ಫಟಿಕಗಳಿಂದ ನಿರ್ಮಿತವಾದ ಸುಂದರವಾದ ಪದ್ಮಶಿಲೆಗಳ ಭೂಮಿಯಲ್ಲಿ ಆ ಪುತ್ಥಳಿಗಳು ಅನೇಕ ರತ್ನಗಳಿಂದ ವಿಚಿತ್ರರೂಪಸಹಿತಗಳಾಗಿ ನಿರ್ಮಿಸಲ್ಪಟ್ಟು, ಚಿತ್ರಕಾರನಿಂದ ಭೂಮಿಯಲ್ಲಿ ಕೆಂಪು, ಹಳದಿ, ಹಸುರು, ನೀಲಿ, ಮಿಶ್ರವರ್ಣಗಳಿಂದ ಬರೆಯಲ್ಪಟ್ಟಂತೆ ಎಲ್ಲೆಡೆಗಳಲ್ಲಿಯೂ ಪ್ರತಿಬಿಂಬಿಸುತ್ತಿರುವುವು.

೮೭. ವಿಶ್ವೇಶ್ವರನಿಗೆ ಸ್ವಂತಕ್ಷೇತ್ರವಾದ ಅವಿಮುಕ್ತದಲ್ಲಿ ಮೋಕ್ಷಲಕ್ಷ್ಮಿಯ ಅಂಕುರಗಳಂತೆ ಮಾಣಿಕ್ಯಸ್ತಂಭಗಳ ಸಾಲುಗಳು ಪ್ರಕಾಶಿಸುತ್ತ ನೋಡುವವರ ಕಣ್ಮನಗಳನ್ನು ಸೆಳೆದು ನಿಲ್ಲಿಸುತ್ತಿರುವಂತೆ ಕಾಣುತ್ತಿರುವುವು.

೮೮. ಅಲ್ಲಿ ಸಪ್ತಸಮುದ್ರಗಳಿಂದಲೂ ರುದ್ರಗಣಗಳು ಅಸಂಖ್ಯಾಕಗಳಾದ ರತ್ನಸಮೂಹಗಳನ್ನು ತೆಗೆದುಕೊಂಡು ಪರ್ವತಶಿಖರಗಳಂತೆ ಕಾಣುತ್ತಿರುವ ರಾಶಿಗಳನ್ನು ನಿರ್ಮಿಸಿರುವರು.

೮೯. ಪಾತಾಳಲೋಕದ ಅಧೋಭಾಗದಲ್ಲಿರುವ ನಾಗರ ಕೋಶಗೃಹಗಳಿಂದಲೂ ಸಹ ಗಣಾಧಿಪರು ಅವುಗಳಲ್ಲಿದ್ದ ಮಣಿಗಣಗಳನ್ನೆಲ್ಲ ಕಸಿದುಕೊಂಡು ಬಂದು ಪರ್ವತಗಳಂತೆ ರಾಶಿಯೊಡ್ಡಿರುವರು.

ಶಿವಭಕ್ತಃ ಸ್ವಯಂ ಯತ್ರ ಪೌಲಸ್ತ್ಯಃ ಸ್ವದ್ರಿಕೂಟತಃ ।
ಕೋಟಿಹಾಟಕಕೂಟಾನಿ ಆನಯಾಮಾಸ ರಾಕ್ಷಸೈಃ ॥ ೯೦ ॥
ಪ್ರಾಸಾದನಿರ್ಮಿತಿಂ ಶ್ರುತ್ವಾ ಭಕ್ತಾ ದ್ವೀಪಾಂತರಸ್ಥಿತಾಃ ।
ಮಾಣಿಕ್ಯಾನಿ ಸಮಾಜಹ್ರುರ್ಯಥಾಸಂಖ್ಯಾನ್ಯಹೋ ನೃಪ ॥ ೯೧ ॥
ಚಿಂತಾಮಣಿಃ ಸ್ವಯಂ ಯತ್ರ ಕರ್ಮಣೇ ವಿಶ್ವಕರ್ಮಣೇ ।
ನಿಶ್ರಾಣಯೇದಹೋರಾತ್ರಂ ವಿಚಿತ್ರಾಂಶ್ಚಿಂತಿತಾನ್ಮಣೀನ್ ॥ ೯೨ ॥
ನಾನಾವರ್ಣಪತಾಕಾಶ್ಚ ಯತ್ರ ಕಲ್ಪಮಹೀರುಹಃ ।
ಅನಲ್ಪಾಃ ಕಲ್ಪಯಂತ್ಯೇವ ನಿತ್ಯಂ ಭಕ್ತಿಸಮನ್ವಿತಾಃ ॥ ೯೩ ॥
ಅಬ್ಧಯೋ ಯತ್ರ ಸತತಂ ದಧಿಕ್ಷೀರೇಕ್ಷುಸರ್ಪಿಷಾಂ ।
ಪಂಚಾಮೃತಾನಾಂ ಕಲಶೈಃ ಸ್ನಾಪಯಂತಿ ದಿನೇ ದಿನೇ ॥ ೯೪ ॥
ಯತ್ರ ಕಾಮದುಘಾ ನಿತ್ಯಂ ಸ್ನಪಯೇನ್ಮಧುಧಾರಯಾ ।
ಸ್ವದುಗ್ಧಯಾ ಸ್ವಯಂ ಭಕ್ತ್ಯಾ ವಿಶ್ವೇಶಂ ಲಿಂಗರೂಪಿಣಂ ॥ ೯೫ ॥

---

೯೦. ಶಿವಭಕ್ತಾಗ್ರಣಿಯಾದ ರಾವಣನೂ ತನ್ನ ರಾಕ್ಷಸರ ಮೂಲಕವಾಗಿ ಶೋಭನಾಚಲದ ತಪ್ಪಲುಗಳಿಂದ ಅಸಂಖ್ಯಾಕಗಳಾದ ಚಿನ್ನದ ರಾಶಿಗಳನ್ನು ತರಿಸಿ ವಿಶ್ವೇಶ್ವರನಿಗರ್ಪಿಸಿರುವನು.

೯೧. ಎಲೈ ಮಹಾರಾಜನೆ! ಈ ಪ್ರಾಸಾದವು ನಿರ್ಮಾಣವಾಗುತ್ತಿರುವ ವೃತ್ತಾಂತವನ್ನು ಕೇಳಿ ದ್ವೀಪಾಂತರಗಳಲ್ಲಿರುವ ಭಕ್ತರೂ ತಮ್ಮ ಶಕ್ತ್ಯನುಸಾರವಾಗಿ ನವರತ್ನಗಳನ್ನು ತೆಗೆದುಕೊಂಡು ಬಂದರು.

೯೨. ಈ ನಿರ್ಮಾಣಕಾರ್ಯವನ್ನು ಕೈಗೊಂಡ ವಿಶ್ವಕರ್ಮನಿಗೆ ಚಿಂತಾಮಣಿಯು ತಾನೇ ಅಹೋರಾತ್ರಗಳಲ್ಲಿಯೂ ಇಲ್ಲಿ ನೆಲಸಿ ಆತನಿಗೆ ಬೇಕಾದ ವಿಚಿತ್ರಮಣಿಗಳನ್ನೆಲ್ಲ ಚಿಂತಿಸುತ್ತಿದ್ದಂತೆಯೇ ಒದಗಿಸುತ್ತಿದ್ದಿತು.

೯೩. ಆ ಸಮಯದಲ್ಲಿ ಶಿವಭಕ್ತಿಯುಕ್ತಗಳಾದ ಕಲ್ಪವೃಕ್ಷಗಳು ನಿತ್ಯವೂ ಲೆಕ್ಕವಿಲ್ಲದಷ್ಟು ವಿಚಿತ್ರವರ್ಣಯುಕ್ತಗಳಾದ ಪತಾಕೆಗಳನ್ನು ಅಲಂಕಾರಕ್ಕಾಗಿ ಒದಗಿಸುತ್ತಿದ್ದುವು.

೯೪. ಪ್ರತಿದಿನದಲ್ಲಿಯೂ ಅಲ್ಲಿ ಮೊಸರು, ಹಾಲು, ಕಬ್ಬಿನರಸ, ತುಪ್ಪಗಳ ಸಮುದ್ರಗಳು ಪಂಚಾಮೃತಗಳ ಕಳಶಗಳನ್ನು ಹಿಡಿದುಕೊಂಡು ವಿಶ್ವೇಶ್ವರನಿಗೆ ಅಭಿಷೇಕಗಳನ್ನು ಮಾಡಿಸುತ್ತಿದ್ದುವು.

೯೫. ಅಲ್ಲಿ ಲಿಂಗರೂಪವನ್ನು ಧರಿಸಿರುವ ವಿಶ್ವೇಶ್ವರನಿಗೆ ಕಾಮಧೇನುವು ತನ್ನಿಂದ ಕರೆದ ಜೇನುತುಪ್ಪದ ಧಾರೆಯಿಂದಲೇ ತಾನೇ ಭಕ್ತಿಯಿಂದ ನಿತ್ಯವೂ ಸ್ನಾನಮಾಡಿಸುತ್ತಿದ್ದಿತು.

ಗಂಧಸಾರರಸೈರ್ಯುಗಂ ಚ ಸೇವತೇ ಮಲಯಾಚಲಃ ।
ಕರ್ಪೂರರಂಭಾಕರ್ಪೂರಪೂರೈರ್ಭಕ್ತ್ಯಾ ನಿಷೇವತೇ ॥ ೯೬ ॥
ಇತ್ಯಾದ್ಯಪೂರ್ವಂ ಯತ್ರಾಸ್ತಿ ಪ್ರತ್ಯಹಂ ಶಂಕರಾಲಯೇ ।
ಕಥಂ ತ್ವಂ ತಮುಮಾಕಾಂತಂ ನ ವೇತ್ಸಿ ಕಠಿನಾಶಯ ॥ ೯೭ ॥
ಇತಿ ತಸ್ಯ ಸಮೃದ್ಧಿಂ ತಾಂ ದೃಷ್ಟ್ವಾ ಜಾಮಾತುರದ್ರಿರಾಟ್ ।
ತ್ರಪಯಾ ಪರಿಭೂತೋಽಭೂನ್ನಿತರಾಂ ಕುಂಭಸಂಭವ ॥ ೯೮ ॥
ತಸ್ಮೈ ಕಾರ್ಪಟಿಕಾಯಾಥ ಸ ದತ್ವಾ ಪಾರಿತೋಷಿಕಂ ।
ಪುನಶ್ಚಿಂತಾಪರೋ ಜಾತೋಽದ್ರಿರಾಟ್ ಕಾರ್ಪಟಿಕೇ ಗತೇ ॥ ೯೯ ॥
ಉವಾಚೇತಿ ಮನಸ್ಯೇವ ವಿಸ್ಮಯೋತ್ಫುಲ್ಲಲೋಚನಃ ।
ಅಹೋ ಭದ್ರಮಿದಂ ಜಾತಂ ಯತ್ತ್ವಯಾಶ್ರಾವಿ ಶರ್ಮಭಾಕ್ ॥ ೧೦೦ ॥
ಯಾವತ್ಸಂಪತ್ತಿಸಂಭಾರಃ ಶ್ರೂಯತೇ ದೃಶ್ಯತೇಽತ್ರ ವೈ ।
ಜಾಮಾತುರತ್ರ ಸದನೇ ಲೀಲಾಸ್ತ್ರಿಜಗತೀಪತೇಃ ॥ ೧೦೧ ॥

---

೯೬. ಮಲಯಪರ್ವತದಿಂದ ಬೀಸುವ ವಾಯುವು ಭಕ್ತಿಭರಿತನಾಗಿ ವಿಶ್ವೇಶ್ವರನನ್ನು ಚಂದನರಸಗಳಿಂದಲೂ, ಕರ್ಪೂರಕದಳೀವೃಕ್ಷಗಳ ಕರ್ಪೂರದ ಸುವಾಸನೆಗಳಿಂದಲೂ ಸೇವಿಸುತ್ತಿದ್ದಿತು.

೯೭. ಇವೇ ಮೊದಲಾದ ಅನೇಕ ಅಪೂರ್ವ ವಿಷಯಗಳು ಇಂದಿಗೂ ವಿಶ್ವೇಶ್ವರನ ಮಂದಿರದಲ್ಲಿ ಕಂಗೊಳಿಸುತ್ತಿರುವುವು. ಎಲೈ ಕಠಿನಹೃದಯನೆ! ಇಂತಹ ವೈಭವಸಮನ್ವಿತನಾದ ಪಾರ್ವತೀರಮಣನನ್ನು ನೀನು ಇದುವರೆಗೂ ತಿಳಿಯದಿರಲು ಕಾರಣವೇನು ?

೯೮. ಎಲೈ ಕುಂಭೋದ್ಭವನೆ! ಆ ಕಾರ್ಪಟಿಕನಿಂದ ತನ್ನ ಅಳಿಯನ ಐಶ್ವರ್ಯದ ಈ ಸಮೃದ್ಧಿಯನ್ನು ಕೇಳಿ ನೋಡಿ ಪರ್ವತರಾಜನು ಅಳತೆಯಿಲ್ಲದ ನಾಚಿಕೆಯಿಂದೊಡಗೂಡಿದವನಾದನು.

೯೯. ಆ ಕಾರ್ಪಟಿಕನಿಗೆ ಯಥೋಚಿತವಾದ ಪಾರಿತೋಷಕವನ್ನು ಕೊಡಲು ಆತನು ಅದನ್ನು ತೆಗೆದುಕೊಂಡು ಹೊರಟುಹೋದನು. ಬಳಿಕ ಹಿಮವದ್ರಾಜನು ಪುನಃ ಚಿಂತಾಕ್ರಾಂತನಾದನು.

೧೦೦. ಮತ್ತು ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ತನ್ನ ಮನದಲ್ಲಿಯೇ ಯೋಚಿಸಿದನು. "ಆಶ್ಚರ್ಯ! ನಾನು ಮೊದಲೇ ಸೌಖ್ಯಪ್ರದವಾದ ಈ ವಾರ್ತೆಯನ್ನು ಕೇಳಿದುದು ಒಳ್ಳೆಯದೇ ಆಯಿತು.

೧೦೧. ಇಲ್ಲಿ ನನ್ನ ಅಳಿಯನ ಮನೆಯಲ್ಲಿ ಎಷ್ಟು ದಿವ್ಯ ಸಂಚಯವನ್ನು ಕೇಳಿರುವೆನೊ, ಮತ್ತು ನೋಡುತ್ತಿರುವೆನೊ, ಅದೆಲ್ಲವೂ ಮೂರುಲೋಕಗಳಿಗೆ ಒಡೆಯನಾದ ಆತನ ಲೀಲಾಮಾತ್ರವೇ ಆಗಿರುವುದು.

ತತಃ ಪ್ರಾಭೃತಕಸ್ತುಚ್ಛೋ ನಿತರಾಂ ಪ್ರತಿಭಾತಿ ಮೇ ।
ಕನ್ಯಾರ್ಥಂ ಯೋ ಮಯಾನೀತೋ ಜಾಮಾತುಃ ಪರಿತೋಷಕೃತ್ ॥
ಅಹಂ ಮನ್ಯೇ ತಥೈವಾಸೌ ಯಥಾದರ್ಶಿ ಮಯಾ ಪುರಾ ।
ವೃದ್ಧೋಕ್ಷಮಾತ್ರಸಂಪತ್ತಿಃ ಸರ್ವಕರ್ಮಪರಾಙ್ಮುಖಃ ॥ ೧೦೩ ॥
ನೈನಂ ಕೋಽಪಿ ವಿಜಾನೀಯಾನ್ನಾನ್ವಯೋಽಸ್ಯ ಕದಾಚನ ।
ನಾಮಾಪಿ ಯಸ್ಯ ನೈಕಂ ಚ ಕಿಂ ದೇಶೋ ಯಸ್ಯ ನೋಹ್ಯತೇ ॥ ೧೦೪ ॥
ಕಿಂವೃತ್ತಶ್ಚ ಕಿಮಾಚಾರೋ ನಾಮಮಾತ್ರೇಣ ಚೇಶ್ವರಃ ।
ಐಶ್ವರ್ಯಸೂಚಕಂ ವಸ್ತು ಯಸ್ಯ ಕಿಂಚಿನ್ನ ಲಕ್ಷ್ಯತೇ ॥ ೧೦೫ ॥
ಸೋಽಸೌ ನಿರ್ವಾಣಸಂಪತ್ತಿಂ ರಂಕಾಯಾಪಿ ದದಾತ್ಯಹೋ ।
ಸುಮುಖಃ ಸರ್ವಕರ್ಮಾಣಿ ಫಲವಂತಿ ಕರೋತಿ ಸಃ ॥ ೧೦೬ ॥
ವೇದವೇದ್ಯೋ ಹಿ ಸರ್ವಜ್ಞೋ ಯತ್ಸಂತಾನೋಽಖಿಲಂ ಜಗತ್ ।
ಯಂ ನ ಕೋಽಪಿ ಹಿ ವೇದಾದೌ ವೇದವೇದ್ಯಃ ಸ ಏಷ ವೈ ॥ ೧೦೭ ॥

---

೧೦೩. ಅಳಿಯನನ್ನು ಸಂತೋಷಗೊಳಿಸಲು ನಾನು ಮಗಳಿಗಾಗಿ ತಂದಿರುವ ಈ ಉಡುಗೊರೆಯೆಲ್ಲವೂ ಖಂಡಿತವಾಗಿಯೂ ಅತ್ಯಂತ ತುಚ್ಛವಾದುದೆಂದು ಈಗ ನನಗೆ ತೋರುತ್ತಿರುವುದು.

೧೦೪. ಪರಮಶಿವನಾದರೆ ಪೂರ್ವದಲ್ಲಿ ನಾನು ನೋಡಿದಂತೆಯೇ ಇಂದಿಗೂ ಇರುವನೆಂದು ತಿಳಿಯುವೆನು. ಅವನ ಐಶ್ವರ್ಯವೆಲ್ಲವೂ ಒಂದು ಮುದಿಯೆತ್ತೇ ಆಗಿರುವುದು. ಅವನು ಸಕಲ ವೈದಿಕಕರ್ಮಗಳನ್ನೂ ತ್ಯಜಿಸಿರುವನು.

೧೦೫. ಈತನನ್ನು ಬಲ್ಲವನು ಯಾವನೂ ಇಲ್ಲವು. ಈತನಿಗೆ ವಂಶವೇ ಇಲ್ಲವು. ಅವನಿಗೆ ಹೆಸರೂ ಒಂದೇ ಇರುವುದಿಲ್ಲ. ಈತನು ಯಾವ ದೇಶದವನೆಂಬುದನ್ನೂ ಊಹಿಸಲಸದಳವಾಗಿರುವುದು.

೧೦೬. ಈತನಿಗೆ ಜೀವನೋಪಾಯವು ಯಾವುದು? ಈತನ ಆಚಾರವೆಂತಹುದು? ಹೆಸರಿಗೆ ಮಾತ್ರ ಈಶ್ವರನೆಂದು ಪ್ರಸಿದ್ಧನಾಗಿರುವನು. ಆತನಲ್ಲಿ ಐಶ್ವರ್ಯಸೂಚಕವಾದ ವಸ್ತುವೊಂದೂ ಕಾಣಿಸುವುದಿಲ್ಲ.

೧೦೭. ಅಂತಹ ಶಿವನು ಎಂತಹ ದರಿದ್ರನಿಗೂ ಮೋಕ್ಷೈಶ್ವರ್ಯವನ್ನು ಕೊಡುವುದು ಆಶ್ಚರ್ಯವು. ಅವನು ಸುಮುಖನಾದರೆ ಸಕಲ ಕರ್ಮಗಳೂ ಫಲದಾಯಕಗಳಾಗುವಂತೆ ಅನುಗ್ರಹಿಸುವನು.

೧೦೮. ಆತನು ವೇದೈಕವೇದ್ಯನು. ಸರ್ವಜ್ಞನು. ಈ ಬ್ರಹ್ಮಾಂಡವೆಲ್ಲವೂ ಆತನ ಪ್ರಜಾರೂಪವಾಗಿ ಹೊರಕ್ಕೆ ಬಂದಿರುವುದು. ಸೃಷ್ಟಿಗೆ ಮೊದಲಿನಲ್ಲಿದ್ದ ಈತನನ್ನು ಯಾವನೂ ತಿಳಿಯದಿರುವುದರಿಂದ ಇವನ ವಿಷಯದಲ್ಲಿ ವೇದಗಳು ಮಾತ್ರ ಪ್ರಮಾಣಗಳಾಗಿರುವುವು.

ಯೋಽನಭಿಜ್ಞಃ ಸದಾ ಜ್ಞಾತಃ ಸ ಸರ್ವಜ್ಞೋಽಯಮೇವ ಹಿ ।
ಯಸ್ಯೈಕಮಪಿ ನೋ ನಾಮ ಪುಂಸಾ ಜ್ಞೇಯಂ ಸ ಕೇನಚಿತ್ ॥ ೧೦೮ ॥
ಸರ್ವೇಷಾಂ ಸರ್ವನಾಮಾನಿ ಯಸ್ಯ ನಾಮಾನಿ ನಿಶ್ಚಿತಂ ।
ಸೋಽಸೌ ಹಿ ಸರ್ವದೇಶೀಯಃ ಸರ್ವೇಭ್ಯಃ ಸರ್ವಸಿದ್ಧಿದಃ ॥ ೧೦೯ ॥
ಯಸ್ಯ ದೇಶೋ ನ ವಿದಿತೋ ಯಸ್ತು ವೃತ್ತಿಪರಾಙ್ಮುಖಃ ।
ಆಚಾರಹೀನಮಿವ ಯಂ ಪುರಾಽಪಶ್ಯಂ ಕಠೋರಧೀಃ ॥ ೧೧೦ ॥
ಶ್ರುತಿಸ್ಮೃತೀ ಯತಃ ಸರ್ವಮಾಚಾರಂ ವಿತ್ತ ಏವ ಹಿ ।
ನಾಮಮಾತ್ರೇಣ ನಿಯತಂ ಯಮಜ್ಞಾಸಿಷಮೀಶ್ವರಂ ॥ ೧೧೧ ॥
ಸಾಕ್ಷಾದೀಶ್ವರ ಏವೈಷ ಸೋಽನ್ಯೇಷ್ವೈಶ್ವರ್ಯಸೂಚಕಃ ।
ಅಪಿ ಸರ್ವಗುಣಾಧಾರೋ ಗುಣಾತೀತಃ ಪರಾಪರಃ ॥ ೧೧೨ ॥
ಅರ್ವಾಚೀನ ಇಹಾಪ್ಯೇಷ ಪರಾಚೀನಃ ಪರಾತ್ಪರಃ ।
ಭೂಧರಾಣಾಮಹಂ ನಾಥೋ ವಿಶ್ವನಾಥ ಉಮಾಪತಿಃ ॥ ೧೧೩ ॥

---

೧೦೮. ಅನಭಿಜ್ಞನಾದರೂ ಯಾವಾಗಲೂ ಆತ್ಮರೂಪದಿಂದ ಜ್ಞಾತನಾದ ಈತನೇ ಸರ್ವಜ್ಞನೆನಿಸುವನು. ಯಾವ ಮಾನವನೂ ಈತನ ಒಂದು ನಾಮದ ಗೂಢಾರ್ಥಗಳನ್ನೂ ಸಮಗ್ರವಾಗಿ ತಿಳಿಯಲಾರನು.

೧೦೯–೧೧೦. ಸಕಲ ಜಂತುಗಳ ಸಮಸ್ತ ನಾಮಗಳೂ ಈತನ ನಾಮಗಳೇ ಎಂಬುದು ನಿಶ್ಚಯವು. (ಸರ್ವವೂ ಶಿವಮಯವೇ ಆಗಿರುವುದರಿಂದ ಸಕಲ ಪದಾರ್ಥಗಳ ನಾಮಗಳೂ ಈತನ ನಾಮಗಳೇ ಆಗಿರುವುವು.) ಅಂತಹ ಮಹಿಮೆಯುಳ್ಳ ಈತನು ಸರ್ವವ್ಯಾಪಕನಾಗಿ ಸಕಲರಿಗೂ ಸಮಸ್ತೇಷ್ಟಾರ್ಥಗಳನ್ನೂ ಕೈಗೂಡಿಸುತ್ತಿರುವನು. ಯಾವನ ವಾಸಸ್ಥಳವು ತಿಳಿಯಲಾರದಾಗಿರುವುದೊ, ಯಾವನು ಜೀವನೋಪಾಯವೃತ್ತಿಯಿಂದ ಪರಾಙ್ಮುಖನಾಗಿರುವನೊ, ಅಂತಹವನನ್ನು ನಾನು ಕಠಿನಚಿತ್ತನಾಗಿ ಮೊದಲು ಆಚಾರಹೀನನೆಂದು ನಿಕೃಷ್ಟಭಾವದಿಂದ ನೋಡುತ್ತಿದ್ದೆನು.

೧೧೧. ಯಾವನಿಂದಲೇ ವೇದಶಾಸ್ತ್ರಗಳೂ ಸಹ ಆಚಾರವ್ಯವಹಾರಗಳನ್ನು ತಿಳಿಯುತ್ತಿರುವುವೊ, ಅಂತಹ ಮಹಾಮಹಿಮನನ್ನು ಕೇವಲ ಹೆಸರಿಗೆ ಮಾತ್ರ ಈಶ್ವರನೆಂದು ತಿಳಿದು ಉದಾಸೀನನಾಗಿದ್ದೆನು.

೧೧೨. ಈತನೇ ನಿಜವಾಗಿಯೂ ಪ್ರತ್ಯಕ್ಷನಾದ ಈಶ್ವರನು. ಆದುದರಿಂದಲೇ ಇತರರಲ್ಲಿಯೂ ಐಶ್ವರ್ಯವನ್ನು ಅನುಗ್ರಹಿಸುತ್ತಿರುವನು. ಸಕಲ ಗುಣಗಳಿಗೂ ಆಧಾರನಾಗಿದ್ದರೂ ಗುಣಾತೀತನಾಗಿರುವನು. ಬ್ರಹ್ಮಾಂಡದಲ್ಲಿ ಕಾರ್ಯಕಾರಣ ಸ್ವರೂಪನಾಗಿ ವಿಹರಿಸುತ್ತಿರುವನು.

೧೧೩. ಇಲ್ಲಿಗೆ ಈತನು ಹೊಸಬನಾದರೂ ಸೃಷ್ಟಿಗಿಂತಲೂ ಪೂರ್ವದಲ್ಲಿದ್ದ

ಅಹಂ ಪ್ರಮಿತಸಂಪತ್ತಿರಪ್ರಮೇಯಧನೋ ಹ್ಯಸೌ ।
ತುಚ್ಛಪ್ರಾಭೃತಕಸ್ತಸ್ಮಾನ್ನೇದಾನೀಮಸ್ಯ ದರ್ಶನಂ ॥ ೧೧೪ ॥
ಕರಿಷ್ಯೇಥ ಕರಿಷ್ಯಾಮಿ ವ್ಯಾವೃತ್ಯಾಗತ್ಯ ಕರ್ಹಿಚಿತ್ ।
ಸಂಪ್ರಧಾರ್ಯೇತಿ ಮನಸಿ ಸಾಯಂ ಸ ಚ ಗಿರೀಶ್ವರಃ ॥ ೧೧೫ ॥
ಆಹೂಯ ಸರ್ವಾನನುಗಾನ್ಪಾರ್ವತೀಯಾನ್ಮಹಾಬಲಾನ್ ।
ಆದಿಷ್ಟವಾನಿದಂ ವಾಕ್ಯಂ ಸರ್ವೇ ಯೂಯಂ ಬಲಾಧಿಕಾಃ ॥ ೧೧೬ ॥
ಕುರ್ವಂತ್ವೇಕಂ ಮಮಾದೇಶಂ ಯಾವನ್ನೋದ್ಯತಿ ಭಾನುಮಾನ್ ।
ತಾವಚ್ಛಿವಾಲಯಂ ಚೈಕಂ ವಿದಧತ್ವತ್ರ ಸತ್ವರಂ ॥ ೧೧೭ ॥
ಯಸ್ಮಿನ್ಕೃತೇ ಕೃತಾರ್ಥಾಂ ಸ್ಯಾಮಿಹಲೋಕೇ ಪರತ್ರ ಚ ।
ಸಮಾಗತ್ಯೇಹ ಕಾಶ್ಯಾಂ ಯಃ ಕುರ್ಯಾದೇಕಂ ಶಿವಾಲಯಂ ॥ ೧೧೮ ॥
ತೇನ ತ್ರೈಲೋಕ್ಯಮಖಿಲಂ ಸಾಲಯಂ ಕೃತಮೇವ ಹಿ ।
ತೇನ ದತ್ತಾನಿ ದಾನಾನಿ ಮಹಾಂತಿ ವಿಧಿಪೂರ್ವಕಂ ॥ ೧೧೯ ॥

---

ವನು. ಜಗತ್ಕಾರಣವಾದ ಅವ್ಯಕ್ತಕ್ಕೂ ಅತೀತವಾದ ಬ್ರಹ್ಮವಸ್ತುವು. ನಾನು ಪರ್ವತಗಳಿಗೆ ಮಾತ್ರ ಒಡೆಯನಾಗಿರುವೆನು. ಪಾರ್ವತೀಪತಿಯಾದರೊ ಸಕಲ ಬ್ರಹ್ಮಾಂಡಕ್ಕೂ ಅಧಿಪತಿಯಾಗಿರುವನು.

೧೧೪. ನನ್ನ ಐಶ್ವರ್ಯಕ್ಕೆ ಪರಿಮಿತಿಯುಂಟು. ಆತನ ಸಂಪತ್ತಿಗಾದರೊ ಮಿತಿಯೇ ಇಲ್ಲದಾಗಿರುವುದು. ಅವನಿಗೆ ದಾಸರಾದವರಲ್ಲಿ ನಾನು ಕೇವಲ ನೀಚನಾಗಿರುವೆನು. ಆದುದರಿಂದ ಈಗ ಆತನ ದರ್ಶನವನ್ನು ಮಾಡುವುದು ನನಗೆ ಸರಿಯಲ್ಲ.

೧೧೫-೧೧೬. ಈಗ ಹಿಂದಕ್ಕೆ ಹೋಗಿ ಬೇರೊಂದು ಸಲ ಇಲ್ಲಿಗೈತಂದು ಆತನನ್ನು ಸಂದರ್ಶಿಸುವೆನು.'' ಇಂತೆಂದು ಮನಸ್ಸಿನಲ್ಲಿಯೇ ನಿಶ್ಚಯವನ್ನು ಮಾಡಿಕೊಂಡು ಆ ಪರ್ವತರಾಜನು ಸಾಯಂಕಾಲದಲ್ಲಿ ಪರ್ವತನಿವಾಸಿಗಳೂ, ಮಹಾ ಬಲಶಾಲಿಗಳೂ ಆದ ತನ್ನ ಅನುಚರರನ್ನೆಲ್ಲ ಕರೆದು ಅವರಿಗೆ ಹೀಗೆ ಹೇಳಿದನು. ''ಅಯ್ಯಾ! ನೀವುಗಳೆಲ್ಲರೂ ಅತ್ಯಂತ ಬಲಸಂಪನ್ನರಾಗಿರುವಿರಿ.

೧೧೭-೧೧೮. ಇಂದು ನನ್ನ ಒಂದು ಅಪ್ಪಣೆಯನ್ನು ಪಾಲಿಸಿರಿ. ಸೂರ್ಯನು ಉದಯಿಸುವುದರೊಳಗಾಗಿಯೇ ಉತ್ತಮವಾದ ಒಂದು ಶಿವಾಲಯವನ್ನು ಶೀಘ್ರವಾಗಿ ಇಲ್ಲಿ ನಿರ್ಮಾಣಮಾಡಿರಿ. ಅದನ್ನು ಮಾಡುವುದರಿಂದ ನಾವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕೃತಕೃತ್ಯರಾಗುವೆವು. ಯಾವನು ಈ ಕಾಶೀಕ್ಷೇತ್ರಕ್ಕೆ ಬಂದು ಒಂದಾದರೂ ಶಿವಾಲಯವನ್ನು ರಚಿಸುವನೊ, ಅವನು ಮೂರುಲೋಕಗಳಿಗೂ ಆಶ್ರಯವನ್ನು ಮಾಡಿಸಿಕೊಟ್ಟಂತಾಗುವುದಿಲ್ಲವೆ?

೧೧೯. ಅವನು ಪರ್ವಕಾಲದಲ್ಲಿ ಉತ್ತಮಪಾತ್ರನಿಗೆ ತೀರ್ಥಕ್ಷೇತ್ರದಲ್ಲಿ

ಸುವರ್ಣಾನಿ ಸುಪಾತ್ರಾಯ ಸುತೀರ್ಥೇ ಶ್ರದ್ಧಯಾಧಿಕಂ ।
ಯೇನ ಸ್ವವಿತ್ತಮಾನೇನ ಧರ್ಮೋಪಾರ್ಜಿತವಿತ್ತತಃ ॥ ೧೨೦ ॥
ಕೃತಂ ಶಂಭೋರ್ಮಹಾಸದ್ಮ ತಂ ಪದ್ಮಾ ನತ್ಯಜೇತ್ಕ್ವಚಿತ್ ।
ತಪಾಂಸಿ ತೇನ ತಪ್ತಾನಿ ಶೀರ್ಣಪರ್ಣಾಶನಾನ್ಯಪಿ ॥ ೧೨೧ ॥
ವಾರಾಣಸೀಂ ಸಮಾಸಾದ್ಯ ಯೇನಾಕಾರಿ ಶಿವಾಲಯಃ ।
ಅಶೇಷಾಃ ಸುವಿಶೇಷಾಢ್ಯಾ ಇಷ್ಟಾಸ್ತೇನ ಮಹಾಮಖಾಃ ।
ಆನಂದಕಾನನೇ ಯೇನ ದೇವದೇವಾಲಯಃ ಕೃತಃ ॥ ೧೨೨ ॥
ಇತಿ ತಸ್ಯ ಸಮಾದೇಶಂ ಸಮಾಕರ್ಣ್ಯಾನುಗಾಸ್ತತಃ ।
ಚಕ್ರುರ್ದೇವಾಲಯಂ ಶ್ರೇಷ್ಠಂ ಯಾವದ್ವ್ಯುಷ್ಟಾ ನ ಯಾಮಿನೀ ॥೧೨೩॥
ತಾವಚ್ಛೈಲೇಶ್ವರಂ ಲಿಂಗಂ ಶೈಲೇಶೇನ ಪ್ರತಿಷ್ಠಿತಂ ।
ಚಂದ್ರಕಾಂತಮಣೇಶ್ಚಂಚತ್ಕಾಂತಿಶ್ವೇತಿತಮಂಡಪಂ ॥ ೧೨೪ ॥
ಅಲೇಖಯತ್ಪ್ರಶಸ್ತಿಂ ಚ ಪ್ರಶಸ್ತಾಕ್ಷರಮಾಲಿನೀಂ ।
ವ್ಯಾಚಕ್ಷಾಣಾಂ ನಿಜಾಂ ಸರ್ವಗೋಪ್ಯೇಭ್ಯೋಽಪ್ಯಧಿಕೋನ್ನತಿಂ॥ ೧೨೫ ॥

---

ಶ್ರದ್ಧಾನ್ವಿತನಾಗಿ ಮಹಾದಾನಗಳನ್ನೆಲ್ಲ ವಿಧಿಪೂರ್ವಕವಾಗಿ ಮಾಡಿದ ಪುಣ್ಯವನ್ನು ಪಡೆಯುವನು.

೧೨೦. ಯಾವ ಮನುಷ್ಯನು ಧರ್ಮದಿಂದ ಹಣವನ್ನು ಸಂಪಾದಿಸಿ ತನ್ನ ವಿತ್ತವನ್ನನುಸರಿಸಿ ಪರಮೇಶ್ವರನಿಗೆ ಒಂದು ಮಹಾದೇವಾಲಯವನ್ನು ಕಟ್ಟಿಸುವನೊ, ಅವನನ್ನು ಲಕ್ಷ್ಮಿಯು ಎಂದಿಗೂ ಎಡೆಬಿಡುವುದಿಲ್ಲ.

೧೨೧. ಯಾವನು ವಾರಾಣಸೀಕ್ಷೇತ್ರವನ್ನು ಸೇರಿ ಅಲ್ಲಿ ಒಂದು ಶಿವಾಲಯವನ್ನು ಕಟ್ಟಿಸುವನೊ, ಅವನು ತರಗೆಲೆಗಳನ್ನೇ ತಿನ್ನುತ್ತ ಸಕಲ ತಪಸ್ಸುಗಳನ್ನೂ ಮಾಡಿದವನೆಂದು ತಿಳಿಯಬೇಕು.

೧೨೨. ಈ ಆನಂದಕಾನನದಲ್ಲಿ ಯಾವನು ದೇವದೇವನಿಗೆ ಆಲಯವನ್ನು ನಿರ್ಮಿಸುವನೊ, ಅವನಿಂದ ಅತ್ಯಂತ ವಿಶೇಷಗಳಿಂದೊಡಗೂಡಿದ ಮಹಾಯಜ್ಞಗಳೆಲ್ಲವೂ ನೆರವೇರಿಸಲ್ಪಟ್ಟಂತಾಗುವುವು.''

೧೨೩. ಇಂತೆಂದ ಆತನ ಕಟ್ಟಪ್ಪಣೆಯನ್ನು ತಲೆಯಲ್ಲಿ ಹೊತ್ತು ಅನುಚರರೆಲ್ಲರೂ ರಾತ್ರಿಯು ಕಳೆಯುವುದರೊಳಗಾಗಿಯೇ ಸರ್ವಶ್ರೇಷ್ಠವಾದ ಒಂದು ದೇವಸ್ಥಾನವನ್ನು ಸಿದ್ಧಗೊಳಿಸಿದರು.

೧೨೪–೧೨೫. ಆಗಲೇ ಪರ್ವತೇಶ್ವರನು ಚಂದ್ರಕಾಂತಶಿಲೆಯಿಂದ ನಿರ್ಮಿತವಾದ ಶೈಲೇಶ್ವರವೆಂಬ ಲಿಂಗವನ್ನು ಅಲ್ಲಿ ಪ್ರತಿಷ್ಠಿಸಿದನು. ಆ ಲಿಂಗವು ತನ್ನ ಕಾಂತಿಯಿಂದ ದೇವಾಲಯವೆಲ್ಲವನ್ನೂ ಬಿಳಿಯಬಣ್ಣದಿಂದ ಕಾಂತಿಮಯವನ್ನಾಗಿ ಮಾಡಿತು. ಬಳಿಕ ಆ ಪರ್ವತರಾಜನು ಸಮಸ್ತ ಪರ್ವತಗಳಲ್ಲಿಯೂ ಅತ್ಯುನ್ನತ್ಯ

ತತೋऽರುಣೋದಯೇ ಜಾತೇ ಸ್ನಾತ್ವಾ ಪಂಚನದೇ ಹ್ರದೇ ।
ಶೈಲರಾಜಃ ಕಾಲರಾಜಂ ನಮಸ್ಕೃತ್ಯ ಸಮರ್ಚ್ಯ ಚ ॥ ೧೨೬ ॥
ತತ್ರ ರಾಶೀನ್ಸಮುತ್ಸೃಜ್ಯ ಪರಿತಸ್ತ್ವರಿತೋ ಯಯೌ ।
ಪಾರ್ವತೀಯೈರನುಗತಃ ಸರ್ವೈರಪಿ ನಿಜಾಲಯಂ ॥ ೧೨೭ ॥
ತತಃ ಪ್ರಾತಃ ಸಮಾಲೋಕ್ಯ ಗಣೌ ಹುಂಡನಮುಂಡನೌ ।
ಹೃಷ್ಟೌ ದೇವಾಲಯಂ ರಮ್ಯಂ ವರಣಾಯಾಸ್ತಟೇ ಶುಭೇ ॥ ೧೨೮ ॥
ಅದೃಷ್ಟಪೂರ್ವಂ ದೇವಾಯ ನಿವೇದಯಿತುಮಾಗತೌ ।
ತೌ ತು ದೃಷ್ಟ್ವಾ ಮಹಾದೇವಮುಮಾದರ್ಪಿತದರ್ಪಣಂ ॥ ೧೨೯ ॥
ಪ್ರಣಮ್ಯ ದಂಡವದ್ಭೂಮೌ ಕೃತಾಂಜಲಿಪುಟೌ ಗಣೌ ।
ಕೃತಾಭ್ಯನುಜ್ಞೌ ಭ್ರೂಕ್ಷೇಪಾದ್ವಿಜ್ಞಪ್ತಿಮಥ ಚಕ್ರತುಃ ॥ ೧೩೦ ॥
ದೇವದೇವ ನ ಜಾನೀವಃ ಕೇನಚಿದ್ದೃಢಭಕ್ತಿನಾ ।
ಅತೀವ ರಮ್ಯಃ ಪ್ರಾಸಾದೋ ನಿರ್ಮಿತೋ ವರಣಾತಟೇ ॥ ೧೩೧ ॥

---

ವನ್ನು ಪಡೆದ ತನ್ನ ವೈಭವವನ್ನು ತಿಳಿಸುವಂತಹ ಪ್ರಶಸ್ತಿಪತ್ರವನ್ನು ಸುಲಕ್ಷಣಗಳಾದ ಅಕ್ಷರಗಳ ಜೋಡಣೆಯಿಂದ ಕೆತ್ತಿಸಿದನು.

೧೨೬–೧೨೭. ಆ ಕಾಲಕ್ಕೆ ಅರುಣೋದಯವುಂಟಾಗಲು, ಹಿಮವಂತನು ಪಂಚನದತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಯಮನಿಗೂ ನಿಯಾಮಕನಾದ ಮಹೇಶ್ವರನಿಗೆ ನಮಸ್ಕಾರವನ್ನೂ, ಪೂಜೆಯನ್ನೂ ವಿಧಿಪ್ರಕಾರವಾಗಿ ಸಮರ್ಪಿಸಿ, ಅಲ್ಲಿಯೇ ತನ್ನ ಧನರಾಶಿಯನ್ನೆಲ್ಲ ವಿಸರ್ಜಿಸಿ ವೇಗದಿಂದ ಪರ್ವತವಾಸಿಗಳಾದ ಅನುಚರರು ಸುತ್ತಲೂ ಬಳಸಿಬರುತ್ತಿರಲು ಅವರೆಲ್ಲರೊಡನೆ ತನ್ನ ಅರಮನೆಯನ್ನು ಕುರಿತು ಹಿಂದಿರುಗಿದನು.

೧೨೮. ಬಳಿಕ ಪ್ರಾತಃಕಾಲವಾಗಲು ಹುಂಡನ, ಮುಂಡನರೆಂಬ ಗಣನಾಯಕರು ವರಣಾನದಿಯ ದಡದ ಪರಿಶುದ್ಧವಾದ ಪ್ರದೇಶದಲ್ಲಿ ನಿರ್ಮಿತವಾಗಿದ್ದ ಆ ದೇವಾಲಯವನ್ನು ನೋಡಿ ಅತಿಸಂತುಷ್ಟರಾದರು.

೧೨೯. ಹಿಂದೆ ನೋಡದ ಅಪೂರ್ವವಾದ ಈ ವಿಷಯವನ್ನು ವಿಜ್ಞಾಪಿಸಿಕೊಳ್ಳಲು ಅವರು ಶಿವನಿದ್ದಲ್ಲಿಗೆ ಬಂದರು. ಅವರಿಬ್ಬರೂ ಬರುವ ವೇಳೆಗೆ ಪಾರ್ವತಿಯು ಪರಮೇಶ್ವರನಿಗೆ ಕೈಗನ್ನಡಿಯನ್ನು ಇದಿರಾಗಿ ಹಿಡಿದು ನಿಂತದ್ದಳು.

೧೩೦. ಆ ಗಣಾಧಿಪತಿಗಳಿಬ್ಬರೂ ಭೂಮಿಯಲ್ಲಿ ದಂಡನಮಸ್ಕಾರವನ್ನು ಮಾಡಿದವರಾಗಿ ಅಂಜಲಿಬಂಧಯುಕ್ತರಾಗಿರಲು ಮಹಾದೇವನು ಹುಬ್ಬುಗಳ ಸನ್ನೆಯಿಂದಲೇ ಅವರಿಗೆ ಅಪ್ಪಣೆಯಿತ್ತನು. ಆಗ ಅವರು ಇಂತೆಂದು ವಿಜ್ಞಾಪನೆ ಮಾಡಿದರು.

೧೩೧. "ದೇವಾಧಿದೇವ! ಯಾರೋ ಒಬ್ಬನು ನಿಶ್ಚಲವಾದ ಭಕ್ತಿಯುಳ್ಳವ

ಆಸಾಯಂ ನೈಕ್ಷಿ ಚಾವಾಭ್ಯಾಂ ದೃಷ್ಟೋಽದ್ಯೈವ ಪ್ರಗೇ ವಿಭೋ ।
ಗಣೋದಿತಮಿತೀಶಾನೋ ನಿಶಮ್ಯಾಹ ಗಿರೀಂದ್ರಜಾಂ ॥ ೧೩೨ ॥
ವಿಜ್ಞಾತಸರ್ವವೃತ್ತಾಂತಃ ಸರ್ವಜ್ಞೋಽಪ್ಯನಭಿಜ್ಞವತ್ ।
ಅಚಲೇಂದ್ರಾಂಗಜೇ ಯಾವಸ್ತತ್ಪ್ರಾಸಾದವಿಲೋಕನೇ ॥ ೧೩೩ ॥
ಇತ್ಯುಕ್ತ್ವೇಶಃ ಸ ಗಿರಿಜೋ ನಿರಗಾತ್ಸಗಣೋ ಮುನೇ ।
ಮಹಾಸ್ಯಂದನಮಾರುಹ್ಯ ಪ್ರಾಸಾದಂ ದ್ರಷ್ಟುಮುತ್ಸುಕಃ ॥ ೧೩೪ ॥
ಅಥಾಲುಲೋಕೇ ಗಿರಿಶಃ ಪ್ರಾಸಾದಂ ವರಣಾತಟೇ ।
ಅತೀವರಮ್ಯರಚನಂ ಯಾಮಿನೀಮಾತ್ರನಿರ್ಮಿತಂ ॥ ೧೩೫ ॥
ಸ್ಯಂದನಾದವರುಹ್ಯಾಥ ಗರ್ಭಾಗಾರಮವೀವಿಶತ್ ।
ದದರ್ಶ ಚ ಮಹಾಲಿಂಗಂ ಚಂದ್ರಕಾಂತಶಿಲಾಮಯಂ ॥ ೧೩೬ ॥
ದೇದೀಪ್ಯಮಾನಂ ಮಹಸಾ ಮೋಕ್ಷಲಕ್ಷ್ಮ್ಯಂಕುರಾಕೃತಿ ।
ದೃಷ್ಟಿಪ್ರಸಾದಜನನಂ ಪುನರ್ಜನನಶಾತನಂ ॥ ೧೩೭ ॥

---

ನಾಗಿ ಅತ್ಯಂತ ರಮ್ಯವಾದ ದೇವಾಲಯವೊಂದನ್ನು ವರಣಾನದಿಯ ತೀರದಲ್ಲಿ ನಿರ್ಮಿಸಿರುವನು. ಆತನು ಯಾರೆಂಬುದನ್ನು ತಿಳಿಯೆವು.

೧೩೨. ಸ್ವಾಮಿಯೇ! ನಿನ್ನೆಯ ಸಾಯಂಕಾಲದವರೆಗೂ ಇಲ್ಲದಿದ್ದ ಶಿವಾಲಯವು ಇಂದುಮಾತ್ರ ನಮಗೆ ಗೋಚರವಾಗುತ್ತಿರುವುದು.'' ಇಂತೆಂದ ಗಣನಾಯಕರ ವಿಜ್ಞಾಪನೆಯನ್ನು ಕೇಳಿ ಮಹೇಶ್ವರನು ಪಾರ್ವತಿಯನ್ನು ಕುರಿತು ಹೇಳತೊಡಗಿದನು.

೧೩೩. ಸರ್ವಜ್ಞನಾದುದರಿಂದ ಸಮಸ್ತವೃತ್ತಾಂತವನ್ನೂ ತಿಳಿದವನಾದರೂ ಏನೂ ತಿಳಿಯದವನಂತೆಯೇ ನಟಿಸುತ್ತ, ''ಎಲೌ ಪರ್ವತರಾಜಪುತ್ರಿಯೇ! ಆ ದೇವಾಗಾರವನ್ನು ನೋಡಲು ಹೊರಡೋಣ'' ಎಂದು ಹೇಳಿದನು.

೧೩೪. ಅಗಸ್ತ್ಯಮುನಿಯೆ! ಇಂತೆಂದು ಮಹೇಶ್ವರನು ಗಿರಿಜೆಯೊಡನೆ ಉತ್ತಮವಾದ ರಥವೊಂದನ್ನೇರಿ ಆ ಪ್ರಾಸಾದವನ್ನು ನೋಡಬೇಕೆಂಬ ಕುತೂಹಲವನ್ನು ವ್ಯಕ್ತಗೊಳಿಸುತ್ತ ಹೊರಟನು.

೧೩೫. ಆಗ ವರಣಾನದಿಯ ದಡದಲ್ಲಿ ಒಂದು ರಾತ್ರಿಯೊಳಗಾಗಿ ನಿರ್ಮಿತವಾಗಿ ಅತ್ಯಂತ ಮನೋಹರವಾದ ಕಟ್ಟಡವಾಗಿ ಒಪ್ಪುತ್ತಿರುವ ಆ ದೇವಾಲಯವನ್ನು ಆ ಪರಮಶಿವನು ನೋಡುವವನಾದನು.

೧೩೬. ಬಳಿಕ ತನ್ನ ರಥದಿಂದ ಇಳಿದು ಗರ್ಭಗೃಹವನ್ನು ಪ್ರವೇಶಮಾಡಿದ ಕ್ಷಣದಲ್ಲಿಯೇ ಚಂದ್ರಕಾಂತಶಿಲೆಯಿಂದ ಮಾಡಲ್ಪಟ್ಟಿದ್ದ ಸರ್ವೋತ್ತಮವಾದ ಲಿಂಗವನ್ನು ಕಂಡನು.

೧೩೭. ಆ ಮಹಾಲಿಂಗವು ಕಾಂತಿಯಿಂದ ಪ್ರಜ್ವಲಿಸುತ್ತಿರುವುದೂ, ಮೋಕ್ಷ

ಕೇನೇದಂ ಸ್ಥಾಪಿತಂ ಲಿಂಗಂ ಯಾವಜ್ಜಿಜ್ಞಾಸತೀಶ್ವರಃ ।
ತಾವದ್ದದರ್ಶ ಪುರತಃ ಪ್ರಶಸ್ತಿಂ ಕೃತಸೂಚಿಕಾಂ ॥ ೧೩೮ ॥
ವಾಚಯಿತ್ವೈವ ಚ ಮನಾಙ್ಮನಸ್ಯೇವ ಮನೋಜಹೃತ್ ।
ಉವಾಚ ದೇವೀಂ ದಿಷ್ಟ್ಯೇತಿ ಪ್ರೇಕ್ಷಸ್ವಾತ್ಮಪಿತುಃ ಕೃತಿಂ ॥ ೧೩೯ ॥
ಉಮಾ ಶ್ರುತ್ವೇತಿ ಸಂಹೃಷ್ಟಾ ಕದಂಬಕುಸುಮಶ್ರಿಯಂ ।
ಆನಂದಾಂಕುರಲಕ್ಷ್ಮೀಮಿವದಂಗೇಷು ಪರಿಬಿಭ್ರತೀ ॥ ೧೪೦ ॥
ತತೋ ವ್ಯಜಿಜ್ಞಪದ್ದೇವಂ ದೇವೀ ಪಾದೌ ಪ್ರಣಮ್ಯ ಚ ।
ಅಸ್ಮಿಲ್ಲಿಂಗವರೇ ನಾಥ ತ್ವಯಾ ಸ್ಥೇಯಮಹರ್ನಿಶಂ ॥ ೧೪೧ ॥
ಅಸ್ಯ ಲಿಂಗಸ್ಯ ಯೇ ಭಕ್ತಾಃ ಶೈಲೇಶಸ್ಯ ಮಹೇಶಿತುಃ ।
ತೇಭ್ಯಸ್ತ್ವಂ ಮಹತೀಮೃದ್ಧಿಂ ದಾಸ್ಯಸೀಹ ಪರತ್ರ ಚ ॥ ೧೪೨ ॥

---

ಲಕ್ಷ್ಮಿಯ ಸಿದ್ಧಿಗೆ ಅಂಕುರಪ್ರಾಯವೂ, ನೋಡುವವರ ಕಣ್ಣುಗಳಿಗೆ ಪ್ರಸನ್ನತೆಯನ್ನುಂಟುಮಾಡುವುದೂ, ಜನನಮರಣರೂಪವಾದ ಸಂಸಾರವನ್ನು ನಾಶಗೊಳಿಸುವುದೂ ಆಗಿದ್ದಿತು.

೧೩೮. ಈ ಲಿಂಗವು ಯಾರಿಂದ ಸ್ಥಾಪಿಸಲ್ಪಟ್ಟತೆಂದು ಮಹೇಶ್ವರನು ತನ್ನಲ್ಲಿಯೇ ಚಿಂತಿಸುತ್ತಿರುವಂತೆಯೇ ನಿರ್ಮಿಸಿದವರ ಹೆಸರನ್ನು ಸೂಚಿಸುವ ತೆರನಲ್ಲಿ ದೇವಾಲಯದ ಮುಂಭಾಗದಲ್ಲಿ ಕೆತ್ತಲ್ಪಟ್ಟಿದ್ದ ಪ್ರಶಸ್ತಿಪತ್ರವನ್ನು ನೋಡಿದನು.

೧೩೯. ಮೊದಲು ತಾನು ಮನಸ್ಸಿನಲ್ಲಿಯೇ ಓದಿಕೊಂಡವನಂತೆ ನಟಿಸುತ್ತ ಆ ಮನ್ಮಥವೈರಿಯು ದೇವಿಯನ್ನು ಕುರಿತು, "ದಿಟವಾಗಿಯೂ ಇದು ನಿನ್ನ ತಂದೆಯಿಂದ ನಿರ್ಮಿತವಾದುದು ; ಇದನ್ನು ನೋಡು" ಎಂಬುದಾಗಿ ಹೇಳಿದನು.

೧೪೦. ಅದನ್ನು ಕೇಳಿ ಗೌರಿದೇವಿಯು ಆನಂದದಿಂದೆದ್ದ ಮೈನವಿರಿನ ಭಾಗ್ಯವುಳ್ಳವಳಾಗಿ ಅಂಗಾಂಗಗಳಲ್ಲಿಯೂ ಕದಂಬಪುಷ್ಪಗಳ ಕೆಂಪುಛಾಯೆಯನ್ನು ತಾಳಿದವಳಾದಳು.

೧೪೧. ಆಗ ದೇವಿಯು ನಾಥನ ಪಾದಗಳಿಗೆ ನಮಸ್ಕಾರವನ್ನು ಮಾಡಿ ಆತನನ್ನು ಕುರಿತು, "ಪ್ರಿಯನೆ! ಇನ್ನುಮೇಲೆ ಈ ಉತ್ತಮಲಿಂಗದಲ್ಲಿ ನೀನು ಅಹೋರಾತ್ರಗಳಲ್ಲಿಯೂ ನೆಲಸಿರಬೇಕು" ಎಂದು ಬಿನ್ನವಿಸಿಕೊಂಡಳು.

೧೪೨. "ಶೈಲೇಶ್ವರನಾಮಕವಾದ ಈ ಮಾಹೇಶ್ವರಲಿಂಗಕ್ಕೆ ಯಾರು ಭಕ್ತರಾಗಿರುವರೊ, ಅವರಿಗೆ ಇಹದಲ್ಲಿಯೂ ಪರದಲ್ಲಿಯೂ ಅಪರಿಮಿತಗಳಾದ ಭೋಗಗಳನ್ನು ಕರುಣಿಸುತ್ತಿರು."

ತಥೇತಿ ದೇವ ಉಕ್ತ್ವಾ ತಾಂ ಪಾರ್ವತೀಂ ಪುನರಬ್ರವೀತ್ ।
ವರಣಾಯಾಂ ಕೃತಸ್ನಾನೈಃ ಶೈಲೇಶೌ ಯೈಃ ಸಮರ್ಚಿತಃ ॥ ೧೪೩ ॥
ಪಿತೄನ್ಸಂತರ್ಪ್ಯ ಚ ಮುದಾ ದತ್ವಾ ದಾನಾನಿ ಶಕ್ತಿತಃ ।
ನ ತೇಷಾಂ ಪುನರಾವೃತ್ತಿರತ್ರ ಸಂಸಾರವರ್ತ್ಮನಿ ॥ ೧೪೪ ॥
ಶೈಲೇಶ್ವರೇ ಮಹಾಲಿಂಗೇ ನಿತ್ಯಂ ಸ್ಥಾಸ್ಯಾಮ್ಯಹಂ ಶುಭೇ ।
ಪ್ರದಾಸ್ಯಾಮಿ ಪರಾಂ ಮುಕ್ತಿಮೇತಲ್ಲಿಂಗಾರ್ಚಕೇ ಜನೇ ॥ ೧೪೫ ॥
ಶೈಲೇಶ್ವರಂ ಯೇ ದ್ರಕ್ಷ್ಯಂತಿ ವರಣಾಯಾಃ ಸುರೋಧಸಿ ।
ತೇಷಾಂ ಕಾಶ್ಯಾಂ ನಿವಸತಾಂ ದುಃಖಂ ನಾಭಿಭವಿಷ್ಯತಿ ॥ ೧೪೬ ॥
ಉಮಯಾಪಿ ವರೋ ದತ್ತಸ್ತತ್ರ ಲಿಂಗೇ ಘಟೋದ್ಭವ ।
ಶೈಲೇಶ್ವರಸ್ಯ ಯೇ ಭಕ್ತಾಸ್ತೇ ಮೇ ಪುತ್ರಾ ನ ಸಂಶಯಃ ॥ ೧೪೭ ॥
ಸ್ಕಂದ ಉವಾಚ :—
ಇತಿ ಶೈಲೇಶ್ವರಂ ಲಿಂಗಂ ಕಥಿತಂ ತೇ ಮಹಾಮುನೇ ।
ಇದಾನೀಂ ಕಥಯಿಷ್ಯಾಮಿ ರತ್ನೇಶ್ವರಸಮುದ್ಭವಂ ॥ ೧೪೮ ॥

---

೧೪೩—೧೪೪. ಹಾಗೆಯೇ ಆಗಲೆಂದು ಮಹೇಶ್ವರನು ಅಂಗೀಕರಿಸಿದನು. ಆತನು ಪುನಃ ಪಾರ್ವತಿಯನ್ನು ಕುರಿತು ಹೇಳತೊಡಗಿದನು. "ವರಣಾನದಿಯಲ್ಲಿ ಸ್ನಾನವನ್ನು ಮಾಡಿಕೊಂಡು ಶೈಲೇಶ್ವರನ ಪೂಜೆಯನ್ನು ನೆರವೇರಿಸಿ ಸಂತೋಷ ದಿಂದ ನನ್ನ ಸನ್ನಿಧಿಯಲ್ಲಿ ಪಿತೃಗಳಿಗೆ ತರ್ಪಣಾದಿಗಳನ್ನಿತ್ತು, ಯಾರು ತಮ್ಮ ತಮ್ಮ ಶಕ್ತಿಗನುಸಾರವಾಗಿ ದಾನಗಳನ್ನು ಕೊಡುವರೊ, ಅವರಿಗೆ ಭೂಲೋಕದಲ್ಲಿ ಪುನಃ ಸಂಸಾರದೆಶೆಯಲ್ಲಿ ಜನಿಸುವುದಿರುವುದಿಲ್ಲ.

೧೪೫. ಓ ಸರ್ವಮಂಗಳೆಯೆ! ನಾನು ಶೈಲೇಶ್ವರನಾಮಕವಾದ ಈ ಮಹಾ ಲಿಂಗದಲ್ಲಿ ನಿತ್ಯವೂ ನೆಲಸಿರುವವನಾಗಿ ಇದನ್ನು ಪೂಜಿಸುತ್ತಿರುವ ಜನರಿಗೆಲ್ಲ ಪುನರಾವೃತ್ತಿರಹಿತವಾದ ಮೋಕ್ಷಪದವಿಯನ್ನು ಕೊಡುವೆನು.

೧೪೬. ವರಣಾನದಿಯ ತೀರದಲ್ಲಿರುವ ಶೈಲೇಶ್ವರನನ್ನು ಯಾರು ನೋಡು ವರೊ, ಯಾರು ಈ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿರುವರೊ, ಅವರಿಗೆಂದಿಗೂ ದುಃಖವುಂಟಾಗಲಾರದು."

೧೪೭. ಘಟಜನ್ಮನಾದ ಅಗಸ್ತ್ಯನೆ! ಪಾರ್ವತಿಯೂ ಸಹ ಆ ಲಿಂಗದ ವಿಷಯವಾಗಿ ಒಂದು ವರವನ್ನಿತ್ತು, "ಯಾರು ಶೈಲೇಶ್ವರನಿಗೆ ಭಕ್ತರಾಗಿರುವರೊ, ಅವರು ನನಗೆ ಪುತ್ರಸಮಾನರೆಂಬುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದಳು.

೧೪೮. ಸ್ಕಂದನು ಹೇಳುತ್ತಾನೆ:—ಮಹಾಮುನಿಯೆ! ಇಂತು ನಿನಗೆ ಶೈಲೇಶ್ವರಮಹಾಲಿಂಗದ ವಿಷಯವನ್ನು ತಿಳಿಸಿರುವೆನು. ಇನ್ನು ರತ್ನೇಶ್ವರನು ಉದ್ಭವಿಸಿದ ಪ್ರಕಾರವನ್ನು ವಿಸ್ತರಿಸುವೆನು.

ಶ್ರುತ್ವಾ ಶೈಲೇಶಮಾಹಾತ್ಮ್ಯಂ ಶ್ರದ್ಧಯಾ ಪರಯಾ ನರಃ ।
ಪಾಪಕಂಚುಕಮುತ್ಸೃಜ್ಯ ಶಿವಲೋಕಮವಾಪ್ನುಯಾತ್ ॥ ೧೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಶೈಲೇಶಾದಿಲಿಂಗನಿರ್ಣಯವರ್ಣನಂ"
ನಾಮ ಷಟ್ಷಷ್ಟಿತಮೋಽಧ್ಯಾಯಃ

---

೧೪೯. ಶೈಲೇಶ್ವರನ ಮಾಹಾತ್ಮ್ಯವನ್ನು ಅತ್ಯಂತ ಶ್ರದ್ಧೆಯಿಂದ ಕೇಳಿದ ಮಾನವನು ಪಾಪರಾಶಿಯೆಂಬ ಕವಚವನ್ನು ಕಿತ್ತು ಬಿಸಟು ಶಿವಲೋಕವನ್ನು ಸೇರಿ ಸುಖಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಶೈಲೇಶಾದಿಲಿಂಗನಿರ್ಣಯವರ್ಣನ"ವೆಂಬ
ಅರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಷಷ್ಟಿತಮೋಽಧ್ಯಾಯಃ

### ರತ್ನೇಶ್ವರಪ್ರಶಂಸನವರ್ಣನಂ

ಅಗಸ್ತ್ಯ ಉವಾಚ:—

ರತ್ನೇಶ್ವರಸಮುತ್ಪತ್ತಿಂ ಕಥಯಸ್ವ ಷಡಾನನ ।
ರತ್ನಭೂತಂ ಮಹಾಲಿಂಗಂ ಯತ್ಕಾಶ್ಯಾಂ ಪರಿವರ್ಣ್ಯತೇ ॥ ೧ ॥
ಕೋಽಸ್ಯ ಲಿಂಗಸ್ಯ ಮಹಿಮಾ ಕೇನೈತಚ್ಚ ಪ್ರತಿಷ್ಠಿತಂ ।
ಏತಂ ವಿಸ್ತರತೋ ಬ್ರೂಹಿ ಗೌರೀಹೃದಯನಂದನ ॥ ೨ ॥

ಸ್ಕಂದ ಉವಾಚ:—

ರತ್ನೇಶ್ವರಸ್ಯ ಮಾಹಾತ್ಮ್ಯಂ ಕಥಯಿಷ್ಯಾಮಿ ತೇ ಮುನೇ ।
ಯಥಾ ಚ ತಸ್ಯ ಲಿಂಗಸ್ಯ ಪ್ರಾದುರ್ಭಾವೋಽಭವದ್ಭುವಿ ॥ ೩ ॥
ಶ್ರುತಂ ನಾಮಾಪಿ ಲಿಂಗಸ್ಯ ಯಸ್ಯ ಜನ್ಮತ್ರಯಾರ್ಜಿತಂ ।
ವೃಜಿನಂ ನಾಶಯೇತ್ತಸ್ಯ ಪ್ರಾದುರ್ಭಾವಂ ಬ್ರುವೇ ಮುನೇ ॥ ೪ ॥
ಶೈಲರಾಜೇನ ರತ್ನಾನಿ ಯಾನಿ ಪುಂಜೀಕೃತಾನ್ಯಹೋ ।
ಉತ್ತರೇ ಕಾಲರಾಜಸ್ಯ ತಾನಿ ಯಸ್ಯ ಗಿರೇರ್ವೃಷಾತ್ ॥ ೫ ॥

---

## ಕನ್ನಡದ ಅನುವಾದ

### ರತ್ನೇಶ್ವರಪ್ರಶಂಸನವರ್ಣನ

೧. ಅಗಸ್ತ್ಯನು ಪ್ರಶ್ನೆಮಾಡುತ್ತಾನೆ:—ಓ ಷಡಾನನ! ಕಾಶಿಯಲ್ಲಿರುವ ಲಿಂಗಗಳಲ್ಲೆಲ್ಲ ರತ್ನಪ್ರಾಯವೆಂದು ಬಹುವಿಧವಾಗಿ ವರ್ಣಿಸಲ್ಪಡುತ್ತಿರುವ ರತ್ನೇಶ್ವರವೆಂಬ ಮಹಾಲಿಂಗದ ಉತ್ಪತ್ತಿಯ ವಿಚಾರವನ್ನು ತಿಳಿಸು.

೨. ಈ ಲಿಂಗದ ಮಹಿಮೆಯೆಂತಹುದು? ಇದು ಯಾವ ಮಹಾತ್ಮನಿಂದ ಪ್ರತಿಷ್ಠಿಸಲ್ಪಟ್ಟಿತು? ಪಾರ್ವತೀಹೃದಯಾನಂದರೂಪನೆ! ಇದೆಲ್ಲವನ್ನೂ ವಿಸ್ತಾರವಾಗಿ ನನಗೆ ನಿರೂಪಿಸುವ ಅನುಗ್ರಹವನ್ನು ಮಾಡು.

೩. ಸ್ಕಂದನು ಹೇಳುತ್ತಾನೆ:—ಎಲೈ ಮುನಿವರ್ಯನೆ! ರತ್ನೇಶ್ವರಲಿಂಗದ ಮಾಹಾತ್ಮ್ಯವನ್ನೂ ಆ ಲಿಂಗವು ಭೂಲೋಕದಲ್ಲಿ ಬಂದು ನೆಲಸುವುದಕ್ಕೆ ಕಾರಣವನ್ನೂ ನಿನಗೆ ಹೇಳುವೆನು.

೪. ಮಹರ್ಷಿಯೆ! ಯಾವ ಲಿಂಗದ ಹೆಸರನ್ನು ಕೇಳುವುದರಿಂದಲೇ ಮೂರು ಜನ್ಮಗಳಲ್ಲಿ ಗಳಿಸಿದ ಸಮಸ್ತದುರಿತಗಳೂ ನಿರ್ಮೂಲವಾಗಿ ನಾಶವಾಗುವುವೊ, ಆ ಲಿಂಗದ ಪ್ರಾದುರ್ಭಾವವನ್ನು ವಿವರಿಸುವೆನು.

೫–೬. ಹಿಂದೆ ಹೇಳಿದಂತೆ ಪರ್ವತರಾಜನು ಕಾಲಭೈರವನಿಗೆ ಉತ್ತರದಲ್ಲಿ ತಾನು ತಂದಿದ್ದ ಸಕಲ ರತ್ನಗಳನ್ನೂ ರಾಶಿಯಾಗಿ ಒಡ್ಡಿದ್ದನಷ್ಟೆ. ಪುಣ್ಯಾತ್ಮ

ಸರ್ವರತ್ನಮಯಂ ಲಿಂಗಂ ಜಾತಂ ತತ್ಸುಕೃತಾತ್ಮನಃ ।
ಶಕ್ರಚಾಪಸಮಚ್ಛಾಯಂ ಸರ್ವರತ್ನದ್ಯುತಿಪ್ರದಂ ॥ ೬ ॥
ತಲ್ಲಿಂಗದರ್ಶನಾದೇವ ಜ್ಞಾನರತ್ನಮವಾಪ್ಯತೇ ।
ಶೈಲೇಶ್ವರಂ ಸಮಾಗತ್ಯ ಶಿವೌ ತತ್ರ ಸಮಾಗತೌ ॥ ೭ ॥
ಯತ್ರ ರತ್ನಮಯಂ ಲಿಂಗಮಾವಿರ್ಭೂತಂ ಸ್ವಯಂ ಮುನೇ ।
ತಸ್ಯ ಸ್ಫುರತ್ಪ್ರಭಾಜಾಲೈಸ್ತತಮಂಬರಮಂಡಲಂ ॥ ೮ ॥
ತತ್ರ ದೃಷ್ಟ್ವಾ ಶುಭಂ ಲಿಂಗಂ ಸರ್ವರತ್ನಸಮುದ್ಭವಂ ।
ಭವಾನ್ಯದೃಷ್ಟಪೂರ್ವಾ ಹಿ ಪರಿಪಪ್ರಚ್ಛ ಶಂಕರಂ ॥ ೯ ॥
ದೇವದೇವ ಜಗನ್ನಾಥ ಸರ್ವಭಕ್ತಾಭಯಪ್ರದ ।
ಕುತಸ್ತ್ವಮೇತಲ್ಲಿಂಗಂ ಹಿ ಸಪ್ತಪಾತಾಲಮೂಲವತ್ ॥ ೧೦ ॥
ಜ್ವಾಲಾಜಟಿಲಿತಾಕಾಶಂ ಪ್ರಭಾಭಾಸಿತದಿಙ್ಮುಖಂ ।
ಕಿಮಾಖ್ಯಂ ಕಿಂ ಸ್ವರೂಪಂ ಚ ಕಿಂ ಪ್ರಭಾವಂ ಭವಾಂತಕ ॥ ೧೧ ॥

---

ನಾದ ಆತನ ಸುಕೃತವಿಶೇಷದಿಂದ ಆ ರತ್ನರಾಶಿಯೆಲ್ಲವೂ ಸರ್ವರತ್ನಮಯವಾದ ಒಂದು ಲಿಂಗವಾಗಿ ಪರಿಣಮಿಸಿತು. ಬಗೆಬಗೆಯ ರತ್ನಗಳ ಕಾಂತಿಗಳಿಂದ ಕೂಡಿದ ಆ ಲಿಂಗವು ನೋಡುವವರಿಗೆ ಕಾಮನಬಿಲ್ಲಿಗೆ ಸಮಾನವಾದ ಬಣ್ಣಗಳಿಂದೊಪ್ಪುತ್ತಿದ್ದಿತು.

೭–೮. ದರ್ಶನಮಾಡುವುದರಿಂದಲೇ ಆ ಲಿಂಗವು ಮನುಷ್ಯನಿಗೆ ಆತ್ಮಜ್ಞಾನವೆಂಬ ರತ್ನವನ್ನೊದಗಿಸುವುದು. ಪಾರ್ವತೀಪರಮೇಶ್ವರರು ಆ ಶೈಲೇಶ್ವರಲಿಂಗದ ದರ್ಶನವನ್ನು ಮಾಡಿಕೊಂಡು ರತ್ನರಾಶಿಯು ತಾನಾಗಿಯೇ ಲಿಂಗರೂಪವನ್ನು ಧರಿಸಿ ನೆಲಸಿದ್ದ ಪ್ರದೇಶಕ್ಕೆ ಬಿಜಮಾಡಿದರು. ಎಲೈ ಮುನಿಯೆ! ಆ ರತ್ನಲಿಂಗದ ತೇಜಸ್ಸಿನ ಕಾಂತಿಯಿಂದ ಆಕಾಶಮಂಡಲವೆಲ್ಲವೂ ವ್ಯಾಪ್ತವಾಗಿದ್ದಿತು.

೯. ಸರ್ವರತ್ನಗಳಿಂದಲೂ ಮಾಡಲ್ಪಟ್ಟು ಹಿಂದೆಂದೂ ನೋಡದಿದ್ದ ಆ ಲಿಂಗವನ್ನು ಕಂಡು ಭವಾನಿಯು ವಿಸ್ಮಯಗೊಂಡು ಶಂಕರನನ್ನು ಕುರಿತು ಕೇಳತೊಡಗಿದಳು.

೧೦. ದೇವಾಧಿದೇವನೆ! ಲೋಕೇಶ್ವರನೆ! ಭಕ್ತರಿಗೆ ಅಭಯವನ್ನು ಕೊಟ್ಟು ಕಾಪಾಡುವವನೆ! ಏಳು ಪಾತಾಳಗಳ ಅಧೋಭಾಗದಿಂದ ಮೂಡಿ ಬಂದಿರುವಂತೆ ತೋರುತ್ತಿರುವ ಈ ಲಿಂಗವು ಎಲ್ಲಿಂದ ಪ್ರಾಪ್ತವಾಯಿತು ?

೧೧. ಈ ಲಿಂಗವು ಜ್ವಾಲೆಗಳಿಂದ ಆಕಾಶವನ್ನು ಆಚ್ಛಾದಿಸಿರುವುದು. ಕಾಂತಿಯಿಂದ ದಶದಿಕ್ಕುಗಳ ಮುಖಗಳನ್ನೂ ಬೆಳಗಿಸುತ್ತಿರುವುದು. ಎಲೈ ಸಂಸಾರಮೋಚಕನೆ! ಈ ಲಿಂಗದ ಹೆಸರೇನು ? ಇದರ ಸ್ವರೂಪವೇನು ? ಇದರ ಮಹತ್ತ್ವವೆಂತಹುದು ?

ಯಸ್ಯ ಸಂವೀಕ್ಷಣಾದೇವ ಮನೋ ಮೇಽತೀವ ಹೃಷ್ಟವತ್ ।
ಇಹೈವ ರಮತೇ ನಾಥ ಕಥಯೈತತ್ಪ್ರಸಾದತಃ ॥ ೧೨ ॥
ದೇವದೇವ ಉವಾಚ :—
ಶೃಣ್ವಪರ್ಣೇ ಸಮಾಖ್ಯಾಹ್ಯೇ ಯತ್ತ್ವಯಾಽಪೃಚ್ಛಿ ಪಾರ್ವತಿ ।
ಸ್ವರೂಪಮೇತಲ್ಲಿಂಗಸ್ಯ ಸರ್ವತೇಜೋನಿಧೇಃ ಪರಂ ॥ ೧೩ ॥
ತವ ಪಿತ್ರಾ ಹಿಮವತಾ ಗಿರಿರಾಜೇನ ಭಾಮಿನಿ ।
ತ್ವಾಮುದ್ದಿಶ್ಯ ಮಹಾರತ್ನಸಂಭಾರೋಽತ್ರಾಪ್ಯನಾಯಿ ಹಿ ॥ ೧೪ ॥
ಅತ್ರ ತಾನಿ ಚ ರತ್ನಾನಿ ರಾಶೀಕೃತ್ಯ ಹಿಮಾದ್ರಿಣಾ ।
ಸುಕೃತೋಪಾರ್ಜಿತಾನ್ಯೇವ ಯಯೌ ಸ್ವಸದನಂ ಪುನಃ ॥ ೧೫ ॥
ತವಾರ್ಥಂ ವಾ ಮಮಾರ್ಥಂ ವಾ ಶ್ರದ್ಧಯಾ ಯತ್ಸಮರ್ಪ್ಯತೇ ।
ಕಾಶ್ಯಾಂ ತಸ್ಯ ಪರೀಪಾಕೋ ಭವೇದೀದೃಗ್ವಿಧೋಽನಘೇ ॥ ೧೬ ॥
ಲಿಂಗಂ ರತ್ನೇಶ್ವರಾಖ್ಯಂ ವೈ ಮತ್ಸ್ವರೂಪಂ ಹಿ ಕೇವಲಂ ।
ಅಸ್ಯ ಪ್ರಭಾವೋ ಹಿ ಮಹಾನ್ವಾರಾಣಸ್ಯಾಮುಮೇ ಧ್ರುವಂ ॥ ೧೭ ॥

---

೧೨. ನಾಥನೆ! ಇದನ್ನು ನೋಡಿದ ಮಾತ್ರದಿಂದಲೇ ನನ್ನ ಮನಸ್ಸು ಬಹಳ ಹರ್ಷದಿಂದ ಕೂಡಿದುದಾಗಿ ಅಲ್ಲಿಯೇ ಓಲಾಡುತ್ತಿರುವುದು. ನನ್ನಲ್ಲಿ ದಯೆಯಿಟ್ಟು, ಇದರ ವಿಷಯವೆಲ್ಲವನ್ನೂ ತಿಳಿಸುವವನಾಗು.

೧೩. ಮಹಾದೇವನು ಹೇಳುತ್ತಾನೆ:—ಎಲೌ ಪಾರ್ವತಿಯೆ! ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು, ಕೇಳು. ಸಕಲ ತೇಜಸ್ಸುಗಳ ನಿಧಿಗೂ ಪರಾತ್ಪರವಾಗಿರುವುದೇ ಈ ಲಿಂಗದ ಸ್ವರೂಪವಾಗಿರುವುದು.

೧೪. ಪ್ರಿಯಳೆ! ಪರ್ವತರಾಜನೂ, ನಿನ್ನ ತಂದೆಯೂ ಆದ ಹಿಮವಂತನು ನಿನಗೆ ಕೊಡುವುದಕ್ಕಾಗಿ ಇಲ್ಲಿಗೆ ಮಹಾ ರತ್ನಗಳ ರಾಶಿಯೊಂದನ್ನು ತೆಗೆದು ಕೊಂಡು ಬಂದನು.

೧೫. ಆತನು ತನ್ನ ಪುಣ್ಯಬಲದಿಂದ ಆರ್ಜಿಸಿದ ಆ ರತ್ನಗಳನ್ನೆಲ್ಲ ಇಲ್ಲಿ ರಾಶಿಯಾಗಿ ಒಟ್ಟಿ ತನ್ನ ಮನೆಗೆ ಹಿಂದಿರುಗಿದನು.

೧೬. ಪಾಪರಹಿತಳೆ! ನಿನಗಾಗಲಿ ನನಗಾಗಲಿ ಕಾಶಿಯಲ್ಲಿ ಶ್ರದ್ಧೆಯಿಂದ ಯಾವುದನ್ನು ಭಕ್ತರು ಸಮರ್ಪಿಸುವರೊ, ಅದೆಲ್ಲವೂ ಈ ವಿಧವಾದ ರೂಪವನ್ನೇ ಹೊಂದುವುದು.

೧೭. ರತ್ನೇಶ್ವರವೆಂಬ ಹೆಸರುಳ್ಳ ಈ ಲಿಂಗವು ಕೇವಲ ನನ್ನ ಸ್ವರೂಪವೇ ಆಗಿರುವುದು. ಎಲೌ ಉಮೆಯೆ! ವಾರಾಣಸಿಯಲ್ಲಿ ಇದರ ಪ್ರಭಾವವು ನಿಜವಾಗಿಯೂ ಅಪರಿಮಿತವಾಗುವುದು.

ಸರ್ವೇಷಾಮಿಹ ಲಿಂಗಾನಾಂ ರತ್ನಭೂತಮಿದಂ ಪರಂ ।
ಅತೋ ರತ್ನೇಶ್ವರಂ ನಾಮ ಪರಂ ನಿರ್ವಾಣರತ್ನದಂ ॥ ೧೮ ॥
ಅನೇನೈವ ಸುವರ್ಣೇನ ಪಿತ್ರಾ ರಾಶೀಕೃತೇನ ಚ ।
ಪ್ರಾಸಾದಮಸ್ಯ ಲಿಂಗಸ್ಯ ವಿಧಾಪಯ ಮಹೇಶ್ವರಿ ॥ ೧೯ ॥
ಲಿಂಗಂ ಪ್ರಾಸಾದಕರಣಾತ್ಖಂಡಸ್ಫುಟಿತಸಂಸ್ಕೃತೇಃ ।
ಲಿಂಗಸ್ಥಾಪನಜಂ ಪುಣ್ಯಂ ಹೇಲಯೈವೇಹ ಲಭ್ಯತೇ ॥ ೨೦ ॥
ತಥೇತಿ ಭಗವತ್ಯೋಕ್ತಾ ಗಣಾಃ ಪ್ರಾಸಾದನಿರ್ಮಿತೌ ।
ಸೋಮನಂದಿಪ್ರಭೃತಯೋಽಸಂಖ್ಯಾ ವ್ಯಾಪಾರಿತಾ ಮುನೇ ॥ ೨೧ ॥
ಗಣೈಶ್ಚ ಕಾಂಚನಮಯೋ ನಾನಾಕೌತುಕಚಿತ್ರಿತಃ ।
ನಿರ್ಮಿತೋ ಯಾಮಮಾತ್ರೇಣ ಪ್ರಾಸಾದೋ ಮೇರುಶೃಂಗವತ್ ॥ ೨೨ ॥
ದೇವೀ ಪ್ರಹೃಷ್ಟವದನಾ ದೃಷ್ಟ್ವಾ ಪ್ರಾಸಾದನಿರ್ಮಿತಿಂ ।
ಗಣೇಭ್ಯೋ ವ್ಯತರದ್ಭೂರಿ ಸಮ್ಮಾನಂ ಪಾರಿತೋಷಿಕಂ ॥ ೨೩ ॥

---

೧೮. ಇಲ್ಲಿರುವ ಸಮಸ್ತ ಲಿಂಗಗಳಲ್ಲಿಯೂ ಇದು ರತ್ನಭೂತವಾಗಿರುವುದು. ಸರ್ವೋತ್ತಮವಾಗಿರುವುದು. ಆದುದರಿಂದಲೇ ಇದು ರತ್ನೇಶ್ವರವೆಂಬ ಅನ್ವರ್ಥನಾಮವನ್ನು ಪಡೆದು ಸೇವಿಸಿದವರಿಗೆ ಮೋಕ್ಷರತ್ನವನ್ನು ಕೈಗೂಡಿಸುತ್ತಿರುವುದು.

೧೯. ಮಹೇಶ್ವರಿಯೆ! ನಿನ್ನ ತಂದೆಯು ಇಲ್ಲಿ ರಾಶಿಯಾಗಿ ಸುರಿದು ಹೋಗಿರತಕ್ಕ ಚಿನ್ನದಿಂದಲೇ ಈ ಲಿಂಗಕ್ಕೆ ಒಂದು ಪ್ರಾಸಾದವನ್ನು ನಿರ್ಮಿಸು.

೨೦. ಶಿವಲಿಂಗಕ್ಕೆ ಹೊಸದಾಗಿ ಪ್ರಾಸಾದವನ್ನು ಕಟ್ಟಿಸುವುದರಿಂದಲೂ, ಬಿರುಕುಬಿಟ್ಟು ಶಿಥಿಲವಾಗಿರುವ ಶಿವಾಲಯವನ್ನು ಸರಿಪಡಿಸುವುದರಿಂದಲೂ, ಹೊಸ ಲಿಂಗವನ್ನು ಸ್ಥಾಪಿಸಿದ ಪುಣ್ಯವು ಅನಾಯಾಸವಾಗಿಯೇ ಲಭಿಸುವುದು.

೨೧. ಲೋಕಮಾತೆಯು ಹಾಗೆಯೇ ಆಗಲೆಂದು ಹೇಳಿ ಪ್ರಾಸಾದವನ್ನು ನಿರ್ಮಾಣಮಾಡುವುದಕ್ಕಾಗಿ ಸೋಮನಂದಿಯೇ ಮೊದಲಾದ ಅಸಂಖ್ಯಾಕರಾದ ಗಣಗಳನ್ನು ನಿಯೋಜಿಸಿದಳು.

೨೨. ಆ ಗಣಗಳಾದರೊ, ಒಂದು ಝಾಮದೊಳಗಾಗಿಯೇ ಮೇರುಪರ್ವತದ ಕೋಡುಗಲ್ಲಿನಂತೆ ಉನ್ನತವಾದ ಪ್ರಾಸಾದವನ್ನು ಅನೇಕಾಶ್ಚರ್ಯಗಳಿಂದೊಡಗೂಡಿರುವಂತೆ ಚಿನ್ನದಿಂದಲೇ ಕಟ್ಟಿ ಮುಗಿಸಿದರು.

೨೩. ಪ್ರಾಸಾದನಿರ್ಮಾಣವು ಇಷ್ಟುಬೇಗ ಮುಗಿದುದನ್ನು ಕಂಡು ದೇವಿಯು ಸಂತೋಷದಿಂದ ಅರಳಿದ ಮುಖವುಳ್ಳವಳಾಗಿ ಆ ಗಣಗಳಿಗೆ ಬಹಳವಾದ ಧನಾದಿಗಳನ್ನು ಪರಿತೋಷಕವಾಗಿ ಹಂಚಿಕೊಟ್ಟಳು.

ಪುನಶ್ಚ ದೇವೀ ಪಪ್ರಚ್ಛ ಪ್ರಣಿಪಾತಪುರಸ್ಸರಂ ।
ಮಹಿಮಾನಂ ಮಹಾದೇವಂ ಲಿಂಗಸ್ಯಾಸ್ಯ ಮಹಾಮುನೇ ॥ ೨೪ ॥

ದೇವದೇವ ಉವಾಚ :—

ಲಿಂಗಂ ತ್ವನಾದಿಸಂಸಿದ್ಧಮೇತದ್ದೇವಿ ಶುಭಪ್ರದಂ ।
ಆವಿರ್ಭೂತಮಿದಾನೀಂ ಚ ತ್ವತ್ಪಿತುಃ ಪುಣ್ಯಗೌರವಾತ್ ॥ ೨೫ ॥
ಗುಹ್ಯಾನಾಂ ಪರಮಂ ಗುಹ್ಯಂ ಕ್ಷೇತ್ರೇಽಸ್ಮಿಂಶ್ಚಿಂತಿತಪ್ರದಂ ।
ಕಲೌ ಕಲುಷಬುದ್ಧೀನಾಂ ಗೋಪನೀಯಂ ಪ್ರಯತ್ನತಃ ॥ ೨೬ ॥
ಯಥಾ ರತ್ನಂ ಗೃಹೇ ಗುಪ್ತಂ ನ ಕೈಶ್ಚಿತ್ ಜ್ಞಾಯತೇ ಪರೈಃ ।
ಅವಿಮುಕ್ತೇ ತಥಾ ಲಿಂಗಂ ರತ್ನಭೂತಂ ಗೃಹೇ ಮಮ ॥ ೨೭ ॥
ಯಾನಿ ಬ್ರಹ್ಮಾಂಡಮಧ್ಯೇಽತ್ರ ಸಂತಿ ಲಿಂಗಾನಿ ಪಾರ್ವತಿ ।
ತೈರರ್ಚಿತಾನಿ ಸರ್ವಾಣಿ ರತ್ನೇಶೋ ಯೈಃ ಸಮರ್ಚಿತಃ ॥ ೨೮ ॥
ಪ್ರಮಾದೇನಾಪಿ ಯೈರ್ಗೌರಿ ಲಿಂಗಂ ರತ್ನೇಶಮರ್ಚಿತಂ ।
ತೇ ಭವಂತ್ಯೇವ ನಿಯತಂ ಸಪ್ತದ್ವೀಪೇಶ್ವರಾ ನೃಪಾಃ ॥ ೨೯ ॥

---

೨೪. ಮಹಾಮುನಿಯೆ! ಪಾರ್ವತಿಯು ಮಹಾದೇವನಿಗೆ ನಮಸ್ಕಾರವನ್ನು ಮಾಡಿ ಆ ರತ್ನೇಶ್ವರಮಹಾಲಿಂಗದ ಮಹಿಮೆಯನ್ನು ತಿಳಿಸಬೇಕೆಂದು ಕೇಳಿಕೊಂಡಳು.

೨೫. ಮಹಾದೇವನು ಹೇಳುತ್ತಾನೆ:—ಎಲೌ ದೇವಿಯೆ! ಈ ಲಿಂಗವು ಅನಾದಿಕಾಲದಿಂದ ಇಲ್ಲಿ ನೆಲಸಿ ಶುಭಪ್ರದವಾಗಿರುವುದು. ಆದರೆ ನಿನ್ನ ತಂದೆಯು ಮಾಡಿದ ಪುಣ್ಯದ ಗೌರವದ ಫಲವಾಗಿ ಇದು ಈಗ ರೂಪುಗೊಂಡಿರುವುದು.

೨೬. ಈ ಕ್ಷೇತ್ರದಲ್ಲಿ ಈ ಲಿಂಗವು ರಹಸ್ಯಗಳಲ್ಲೆಲ್ಲ ಅತ್ಯಂತ ರಹಸ್ಯವಾದುದು. ಭಕ್ತರು ಚಿಂತಿಸಿದ ಸಕಲಾಭೀಷ್ಟಗಳನ್ನೂ ಕೊಡುವುದು. ಕಲಿಯುಗದಲ್ಲಿ ಸಹಜವಾದ ಕಲ್ಮಷಚಿತ್ತವುಳ್ಳವರಾದ ಮಾನವರ ದೃಷ್ಟಿಗೆ ಬೀಳದಂತೆ ಇದನ್ನು ಸರ್ವಥಾ ರಕ್ಷಿಸಬೇಕು.

೨೭. ಅಮೂಲ್ಯವಾದ ರತ್ನವು ಮನೆಯಲ್ಲಿರಲು ಅದು ಬಚ್ಚಿಡಲ್ಪಟ್ಟು ಇತರರಿಗೆ ಹೇಗೆ ತಿಳಿಯಲಾರದಾಗಿರುವುದೊ, ಹಾಗೆಯೇ ನನಗೆ ನಿವಾಸವಾದ ಅವಿಮುಕ್ತಕ್ಷೇತ್ರದಲ್ಲಿ ಈ ಲಿಂಗವು ರತ್ನಸಮಾನವಾಗಿ ಗುಪ್ತವಾಗಿರುವುದು.

೨೮. ಎಲೌ ಪಾರ್ವತಿಯೆ! ಈ ರತ್ನೇಶ್ವರಲಿಂಗವನ್ನು ಯಾರು ಪೂಜಿಸಿರುವರೊ, ಅವರು ಬ್ರಹ್ಮಾಂಡಾಂತರ್ಗತಗಳಾದ ಯಾವ ಲಿಂಗಗಳಿರುವುವೊ, ಅವುಗಳೆಲ್ಲವನ್ನೂ ಪೂಜಿಸಿದ ಪುಣ್ಯಕ್ಕೆ ಭಾಗಿಯಾಗುವರು.

೨೯. ಎಲೌ ಗೌರಿಯೆ! ಪ್ರಮಾದವಶದಿಂದಾದರೂ ಯಾರು ಈ ರತ್ನೇಶ್ವರನನ್ನು ಅರ್ಚಿಸಿರುವರೊ, ಅವರು ಖಂಡಿತವಾಗಿಯೂ ಜನ್ಮಾಂತರದಲ್ಲಿ ಸಪ್ತದ್ವೀಪಗಳಿಂದ ಕೂಡಿದ ಸಮಸ್ತ ಭೂಮಂಡಲಕ್ಕೂ ಚಕ್ರವರ್ತಿಗಳಾಗುವರು.

ತ್ರೈಲೋಕ್ಯೇ ಯಾನಿ ವಸ್ತೂನಿ ರತ್ನಭೂತಾನಿ ತಾನಿ ತು ।
ರತ್ನೇಶ್ವರಂ ಸಮಭ್ಯರ್ಚ್ಯ ಸಕೃತ್ಪ್ರಾಪ್ನೋತಿ ಮಾನವಃ ॥ ೩೦ ॥
ಪೂಜಯಿಷ್ಯಂತಿ ಯೇ ಲಿಂಗಂ ರತ್ನೇಶಂ ಕಾಮವರ್ಜಿತಾಃ ।
ತೇ ಸರ್ವೇ ಮದ್ಗಣಾ ಭೂತ್ವಾ ಪ್ರಾಂತೇ ದ್ರಕ್ಷ್ಯಂತಿ ಮಾಮಿಹ ॥ ೩೧ ॥
ರುದ್ರಾಣಾಂ ಕೋಟಿಜಪ್ಯೇನ ಯತ್ಫಲಂ ಪರಿಕೀರ್ತಿತಂ ।
ತತ್ಫಲಂ ಲಭ್ಯತೇ ದೇವಿ ರತ್ನೇಶಸ್ಯ ಸಮರ್ಚನಾತ್ ॥ ೩೨ ॥
ಲಿಂಗೇ ಚಾನಾದಿಸಂಸಿದ್ಧೇ ಯದ್ವೃತ್ತಂ ತದ್ಬ್ರವೀಮಿ ತೇ ।
ಇತಿಹಾಸಂ ಮಹಾಶ್ಚರ್ಯಂ ಸರ್ವಪಾಪನಿಕೃಂತನಂ ॥ ೩೩ ॥
ಪುರೇಹ ನರ್ತಕೀ ಕಾಚಿದಾಸೀನ್ನಾಟ್ಯಾರ್ಥಕೋವಿದಾ ।
ಸೈಕದಾ ಫಾಲ್ಗುನೇ ಮಾಸಿ ಶಿವರಾತ್ರ್ಯಾಂ ಕಲಾವತೀ ॥ ೩೪ ॥
ನನರ್ತ ಜಾಗರಂ ಪ್ರಾಪ್ಯ ಜಗೌ ಗೀತಂ ಚ ಪೇಶಲಂ ।
ಸ್ವಯಂ ಚ ವಾದಯಾಮಾಸ ನಾನಾವಾದ್ಯಾನಿ ವಾದ್ಯವಿತ್ ॥ ೩೫ ॥

---

೩೦. ಈ ರತ್ನೇಶ್ವರನನ್ನು ಒಂದು ಸಲ ಅರ್ಚನೆಮಾಡುವುದರಿಂದಲೇ ಮೂರು ಲೋಕಗಳಲ್ಲಿ ರತ್ನಪ್ರಾಯಗಳಾದ ಯಾವ ಯಾವ ವಸ್ತುಗಳಿರುವುವೊ, ಅವುಗಳೆಲ್ಲವನ್ನೂ ಮನುಷ್ಯನು ಸುಲಭವಾಗಿಯೇ ಪಡೆಯುವನು.

೩೧. ಇಲ್ಲಿರುವ ರತ್ನೇಶ್ವರನಾಮಕವಾದ ಲಿಂಗವನ್ನು ಫಲಾಪೇಕ್ಷೆಯಿಲ್ಲದೆ ಯಾರು ಪೂಜಿಸುತ್ತಿರುವರೊ, ಅವರೆಲ್ಲರೂ ನನ್ನ ಗಣಗಳಾಗಿ ಯಾವಾಗಲೂ ನನ್ನನ್ನು ಸಮೀಪದಲ್ಲಿಯೇ ನೋಡುತ್ತಿರುವರು.

೩೨. ದೇವಿಯೆ! ಮಹಾರುದ್ರಸೂಕ್ತವನ್ನು ಒಂದುಕೋಟಿ ಸಲ ಜಪಿಸುವುದರಿಂದ ಯಾವ ಪುಣ್ಯವು ಲಭಿಸುವುದೆಂದು ಹೇಳಲ್ಪಟ್ಟಿರುವುದೊ, ಅದೆಲ್ಲವೂ ರತ್ನೇಶ್ವರನ ಒಂದು ಪೂಜೆಯಿಂದಲೇ ಲಭಿಸುವುದು.

೩೩. ಅನಾದಿಕಾಲದಿಂದಲೂ ನೆಲೆಗೊಳಿಸಿರುವ ಈ ಲಿಂಗದ ವಿಷಯವಾಗಿ ಹಿಂದೆ ನಡೆದ ವಿಚಾರವನ್ನು ನಿನಗೆ ಹೇಳುವೆನು. ಈ ಇತಿಹಾಸವು ಮಹಾಶ್ಚರ್ಯಗಳಿಂದ ಕೂಡಿದುದೂ, ಸಮಸ್ತಪಾತಕಗಳನ್ನು ಕತ್ತರಿಸಿಹಾಕುವುದೂ ಆಗಿರುವುದು.

೩೪-೩೫. ಪೂರ್ವಕಾಲದಲ್ಲಿ ಈ ಅವಿಮುಕ್ತಕ್ಷೇತ್ರದಲ್ಲಿ ನಾಟ್ಯವನ್ನು ಮಾಡುವುದರಲ್ಲಿ ಅತ್ಯಂತ ಕೋವಿದಳಾದ ಒಬ್ಬಾನೊಬ್ಬ ನರ್ತಕಿಯಿದ್ದಳು. ಕಲಾವತಿಯೆಂಬ ಆಕೆಯು ಒಮ್ಮೆ ಫಾಲ್ಗುನಮಾಸದಲ್ಲಿ ಶಿವರಾತ್ರಿಯು ಪ್ರಾಪ್ತವಾಗಲು ರಾತ್ರಿಯಲ್ಲಿ ಜಾಗರಣೆಯನ್ನು ಮಾಡುತ್ತ ನೃತ್ಯವನ್ನು ಅರ್ಪಿಸಿದಳು. ಮನೋಹರವಾದ ಸಂಗೀತವನ್ನು ಹಾಡಿದಳು. ವಾದ್ಯಗಳನ್ನು ನುಡಿಸುವುದರಲ್ಲಿ ಕುಶಲಳಾಗಿದ್ದುದರಿಂದ ತಾನೇ ನಾನಾ ವಾದ್ಯಗಳನ್ನು ನುಡಿಸಿದಳು.

ತೇನ ತೌರ್ಯತ್ರಿಕೇಣಾಪಿ ಪ್ರೀಣಯಿತ್ವಾಥ ಸಾ ನಟೀ ।
ರತ್ನೇಶ್ವರಂ ಮಹಾಲಿಂಗಂ ದೇಶಮಿಷ್ಟಂ ಜಗಾಮ ಹ ॥ ೩೬ ॥
ಕಾಲಧರ್ಮವಶಂ ಯಾತಾ ತತ್ರ ಸಾ ವರನರ್ತಕೀ ।
ಸುತಾ ಗಂಧರ್ವರಾಜಸ್ಯ ವಸುಭೂತೇರ್ಬಭೂವ ಹ ॥ ೩೭ ॥
ಸಂಗೀತಸ್ಯ ಸವಾದ್ಯಸ್ಯ ತಸ್ಯ ಲಾಸ್ಯಸ್ಯ ಪುಣ್ಯತಃ ।
ತತ್ರೇಶಾಗ್ರೇ ಕೃತಸ್ಯೇಹ ಜಾಗರೇ ಶಿವರಾತ್ರಿಜೇ ॥ ೩೮ ॥
ರಮ್ಯಾ ರತ್ನಾವಲೀ ನಾಮ ರೂಪಲಾವಣ್ಯಶಾಲಿನೀ ।
ಕಲಾಕಲಾಪಕುಶಲಾ ಮಧುರಾಲಾಪವಾದಿನೀ ॥ ೩೯ ॥
ಪಿತುರಾನಂದಕೃನ್ನಿತ್ಯಂ ವಸುಭೂತೇರ್ಘಟೋದ್ಭವ ।
ಸರ್ವಗಂಧರ್ವಕುಶಲಾ ಗುಣರತ್ನಮಹಾಖನಿಃ ॥ ೪೦ ॥
ಮುನೇ ಸಖೀತ್ರಯಂ ತಸ್ಯಾಶ್ಚಾರುಚಾತುರ್ಯಭಾಜನಂ ।
ಶಶಿಲೇಖಾನಂಗಲೇಖಾ ಚಿತ್ರಲೇಖೇತಿ ನಾಮತಃ ॥ ೪೧ ॥

---

೩೬. ಆ ನರ್ತಕಿಯು ತನ್ನ ನೃತ್ಯಗೀತಾದಿಗಳಿಂದ ಮಹಾಲಿಂಗರೂಪಿಯಾದ ಆ ರತ್ನೇಶ್ವರನನ್ನು ಸಂತೋಷಗೊಳಿಸಿ ತನಗೆ ಇಷ್ಟಬಂದ ದೇಶಕ್ಕೆ ಹೊರಟುಹೋದಳು.

೩೭. ಉತ್ತಮ ನರ್ತಕಿಯಾದ ಆಕೆಯು ಅಲ್ಲಿಯೇ ಕಾಲಕ್ರಮದಲ್ಲಿ ಪಂಚತ್ವವನ್ನುಹೊಂದಿದಳು. ಬಳಿಕ ಆಕೆಯು ಗಂಧರ್ವರಾಜನಾದ ವಸುಭೂತಿಯ ಮಗಳಾಗಿ ಜನ್ಮವನ್ನು ಪಡೆದಳು.

೩೮. ಆಕೆಯು ಶಿವರಾತ್ರಿಯ ದಿನ ಜಾಗರಣೆಯನ್ನು ಮಾಡಿ ಮಹೇಶ್ವರನಿಗೋಸ್ಕರ ಸಂಗೀತವನ್ನೂ, ವಾದ್ಯವಾದನವನ್ನೂ, ನೃತ್ಯಸೇವೆಯನ್ನೂ ಒಪ್ಪಿಸಿದ ಪುಣ್ಯದ ಫಲವಾಗಿ ಆ ಜನ್ಮವನ್ನು ತಾಳಿದಳು.

೩೯. ಮನೋಹರಳಾದ ಆಕೆಯು ರತ್ನಾವಳಿಯೆಂಬ ಹೆಸರಿನಿಂದೊಪ್ಪುತ್ತ ರೂಪಲಾವಣ್ಯಗಳ ಗಣಿಯೆನಿಸಿ ಸಮಸ್ತ ಲಲಿತಕಲೆಗಳಲ್ಲಿಯೂ ಕುಶಲಳಾಗಿದ್ದುದಲ್ಲದೆ ಮಧುರವಾದ ಸ್ವರದಿಂದ ಗಾಯನವನ್ನೂ ಮಾಡುತ್ತಿದ್ದಳು.

೪೦. ಅಯ್ಯಾ ಘಟೋದ್ಭವನೆ! ಸಕಲ ಗಾಂಧರ್ವವಿದ್ಯೆಗಳಲ್ಲಿಯೂ ಕುಶಲಳಾಗಿ ಸದ್ಗುಣಗಳೆಂಬ ರತ್ನಗಳಿಗೆ ಮಹಾ ಖನಿಯಾಗಿ ಆಕೆಯು ತಂದೆಯಾದ ವಸುಭೂತಿಗೆ ನಿತ್ಯವೂ ಆನಂದವನ್ನುಂಟುಮಾಡುತ್ತಿದ್ದಳು.

೪೧. ಮುನಿವರ್ಯನೆ! ಅವಳಿಗೆ ಬಹಳ ಚಾತುರ್ಯವಂತರಾದ ಮೂವರು ಸಖಿಯರಿದ್ದರು. ಶಶಿಲೇಖಾ, ಅನಂಗಲೇಖಾ ಮತ್ತು ಚಿತ್ರಲೇಖೆಯರೆಂದು ಅವರ ಹೆಸರುಗಳು.

ತಿಸೃಭಿಸ್ತಾಭಿರೇಕತ್ರ ವಾಗ್ದೇವೀ ಪರಿಶೀಲಿತಾ ।
ತಾಭ್ಯಃ ಸರ್ವಾಃ ಕಲಾಃ ಪ್ರಾದಾತ್ಪರಿಪ್ರೀತಾ ಸರಸ್ವತೀ ॥ ೪೨ ॥
ಪ್ರಾಪ್ಯ ರತ್ನಾವಲೀ ಗೌರಿ ಸಾ ಜನ್ಮಾಂತರವಾಸನಾಂ ।
ರತ್ನೇಶ್ವರಸ್ಯ ಲಿಂಗಸ್ಯ ಜಗ್ರಾಹ ನಿಯತಂ ಶುಭಂ ॥ ೪೩ ॥
ರತ್ನಭೂತಸ್ಯ ಲಿಂಗಸ್ಯ ಕಾಶ್ಯಾಂ ರತ್ನೇಶ್ವರಸ್ಯ ವೈ ।
ನಿತ್ಯಂ ಸಂದರ್ಶನಂ ಪ್ರಾಪ್ಯ ವಕ್ಷ್ಯಾಮ್ಯಪಿ ವಚೋ ಮುಖೇ ॥ ೪೪ ॥
ಇತ್ಥಂ ನಿಯಮಪತ್ಯಾಸೀತ್ಸಾ ಗಂಧರ್ವಸುತೋತ್ತಮಾ ।
ತಾಭಿಃ ಸಖೀಭಿಃ ಸಹಿತಾ ನಿತ್ಯಂ ಲಿಂಗಂ ಚ ಪಶ್ಯತಿ ॥ ೪೫ ॥
ಏಕದಾರಾಧ್ಯ ರತ್ನೇಶಂ ಮನ್ಯೈತಲ್ಲಿಂಗಮುತ್ತಮಂ ।
ಸಮಾಸರ್ಜ ಚ ಸಾ ಬಾಲಾ ರಮ್ಯಯಾ ಗೀತಮಾಲಯಾ ॥ ೪೬ ॥
ಸಖ್ಯಃ ಪ್ರದಕ್ಷಿಣೀಕರ್ತುಂ ಲಿಂಗಂ ತಿಸ್ರೋಽಪ್ಯಮೋ ಗತಾಃ ।
ತಸ್ಯಾ ಗೀತೇನ ತುಷ್ಟೋಽಹಂ ಲಿಂಗಸ್ಥೋ ವರದೋಽಭವಂ ॥ ೪೭ ॥

---

೪೨. ಆ ಮೂವರು ಸಖಿಯರೊಡಗೂಡಿ ಆಕೆಯು ಒಮ್ಮೆ ಸರಸ್ವತಿಯ ದೃಷ್ಟಿಪಥಕ್ಕೆ ಬೀಳುವವಳಾದಳು. ಅವರ ವಿಷಯದಲ್ಲಿ ಸಂತಸಗೊಂಡ ಸರಸ್ವತೀ ದೇವಿಯು ಅವರೆಲ್ಲರಿಗೂ ಸಕಲ ಕಲೆಗಳನ್ನೂ ದಯೆಗೈದಳು.

೪೩. ಎಲೌ ಗೌರಿಯೆ! ಆ ರತ್ನಾವಳಿಯು ಪೂರ್ವಜನ್ಮದ ವಾಸನೆಯನ್ನು ಪಡೆದವಳಾಗಿ ರತ್ನೇಶ್ವರಲಿಂಗವನ್ನು ಪರಿಚರ್ಯೆಮಾಡವ ಪವಿತ್ರವಾದ ನಿಯಮವನ್ನು ಸ್ವೀಕರಿಸಿದಳು.

೪೪. ಕಾಶೀಕ್ಷೇತ್ರಕ್ಕೆ ರತ್ನಭೂತವಾಗಿರುವ ರತ್ನೇಶ್ವರಲಿಂಗವನ್ನು ಪ್ರತಿನಿತ್ಯದಲ್ಲಿಯೂ ದರ್ಶನಮಾಡಿದಮೇಲೆಯೇ ನಾನು ಬಾಯಿಯಿಂದ ಮಾತನಾಡುತ್ತೇನೆ.

೪೫. ಇಂತೆಂದು ಉತ್ತಮೆಯಾದ ಆ ಗಂಧರ್ವರಾಜಪುತ್ರಿಯು ನಿಯಮವನ್ನು ಧರಿಸಿದಳು. ನಿತ್ಯವೂ ತನ್ನ ಮೂವರು ಸಖಿಯರಿಂದೊಡಗೂಡಿ ಆ ಲಿಂಗವನ್ನು ಸಂದರ್ಶಿಸುತ್ತಲೇ ಇದ್ದಳು.

೪೬. ಒಮ್ಮೆ ಆ ಬಾಲಿಕೆಯು ಉತ್ತಮಲಿಂಗವಾದ ರತ್ನೇಶ್ವರನನ್ನು ಆರಾಧನೆಮಾಡಿ ಮನೋಹರಗಳಾದ ಸಂಗೀತಮಾಲೆಯನ್ನರ್ಪಿಸಿ ನನ್ನನ್ನು ಸಂತೋಷಗೊಳಿಸುತ್ತಿದ್ದಳು.

೪೭. ಎಲೌ ಉಮೆಯೆ! ಆಕೆಯ ಮೂವರು ಸಖಿಯರೂ ಲಿಂಗಕ್ಕೆ ಪ್ರದಕ್ಷಿಣೆಯನ್ನು ಮಾಡಲು ಹೊರಟುಹೋದರು. ಆಕೆಯ ಗಾಯನದಿಂದ ಲಿಂಗಾಂತರ್ಗತನಾದ ನಾನು ಸಂತುಷ್ಟನಾಗಿ ಆಕೆಗೆ ವರಪ್ರದನಾದೆನು.......

ಯಸ್ತ್ವಯಾ ರಂಸ್ಯತೇ ರಾತ್ರಾವದ್ಯ ಗಂಧರ್ವಕನ್ಯಕೇ ।
ತವನಾಮಸಮಾನಾಖ್ಯಃ ಸತೇ ಭರ್ತಾ ಭವಿಷ್ಯತಿ ॥ ೪೮ ॥
ಇತಿ ಲಿಂಗಾಂಬುಧೇರ್ಜಾತಾಂ ಪರಿಪೀಯ ವಚಸ್ಸುಧಾಂ ।
ಬಭೂವಾನಂದಸಂದೋಹಮಂಥರಾತೀವ ಹ್ರೀಮತೀ ॥ ೪೯ ॥
ಗತಾಥ ವ್ಯೋಮಮಾರ್ಗೇಣ ಸಖೀಭಿಃ ಸ್ವಪಿತುರ್ಗೃಹಂ ।
ಕಥಯಂತೀ ನಿಜೋದಂತಂ ತಮಾಲೀನಂ ಪುರೋ ಮುದಾ ॥ ೫೦ ॥
ತಾಭಿರ್ದಿಷ್ಟ್ಯೇತಿ ದಿಷ್ಟ್ಯೇತಿ ಸಖೀಭಿಃ ಪರಿಸಂದಿತಾ ।
ಅದ್ಯ ತೇ ವಾಂಛಿತಂ ಭಾವಿ ರತ್ನೇಶಸ್ಯ ಸಮರ್ಚನಾತ್ ॥ ೫೧ ॥
ಯದ್ಯಾಯಾತಿ ಸ ತೇ ರಾತ್ರಾವದ್ಯ ಕೌಮಾರಹಾರಕಃ ।
ಚೋರೋ ಬಾಹುಲತಾಪಾಶೌ ಪಾಶಿತವ್ಯೋಽತಿಯತ್ನತಃ ॥ ೫೨ ॥
ಗೋಚರೀಕ್ರಿಯತೇಽಸ್ಮಾಭಿರ್ಯಥಾ ಸ ಸುಕೃತೈಕಭೂಃ ।
ಪ್ರಾತರೇವ ತವ ಪ್ರೇಯಾನ್ರತ್ನೇಶಾದಿಷ್ಟ ಇಷ್ಟಕೃತ್ ॥ ೫೩ ॥

---

೪೮. "ಎಲೌ ಗಂಧರ್ವಪುತ್ರಿಯೆ! ಇಂದಿನ ರಾತ್ರಿಯಲ್ಲಿ ನಿನ್ನ ಹೆಸರಿಗೆ ಸಮಾನವಾದ ಹೆಸರುಳ್ಳ ಯಾವ ಪುರುಷನು ನಿನ್ನೊಡನೆ ರಮಿಸುವನೊ, ಅವನೇ ನಿನಗೆ ಪತಿಯಾಗುವನು."

೪೯. ಇಂತೆಂದು ಆ ಲಿಂಗದಿಂದ ಹೊರಟ ವಚನಾಮೃತವನ್ನು ಕೇಳಿ ಆ ರತ್ನಾವಳಿಯು ಆನಂದದ ಆಧಿಕ್ಯವನ್ನು ಹೊಂದಿ ಸ್ತಬ್ಧಳೂ ಲಜ್ಜಾನ್ವಿತಳೂ ಆಗಿ ನಿಂತುಬಿಟ್ಟಳು.

೫೦. ಬಳಿಕ ಸಂತೋಷದಿಂದ ತನ್ನ ಸಖಿಯರ ಮುಂದೆ ನಡೆದ ವೃತ್ತಾಂತವೆಲ್ಲವನ್ನೂ ವಿವರಿಸುತ್ತ ಆಕೆಯು ಅವರೊಡನೆ ಆಕಾಶಮಾರ್ಗದಿಂದಲೇ ತನ್ನ ತಂದೆಯ ಮನೆಯನ್ನು ಸೇರಿದಳು.

೫೧. ಅವರೂ ಆಕೆಯನ್ನು ಬಹುವಾಗಿ ಪ್ರಶಂಸಿಸಿ ಸಂತೋಷಗೊಳಿಸಿದರು. "ಎಲೌ ನಿನ್ನ ಅದೃಷ್ಟದಿಂದಲೇ ಈ ಸುಸಮಯವು ಪ್ರಾಪ್ತವಾಯಿತು. ರತ್ನೇಶ್ವರನನ್ನು ಪೂಜಿಸಿದುದರಿಂದ ಇಂದಿಗೆ ನಿನ್ನ ಇಷ್ಟಾರ್ಥವು ಕೈಗೂಡುವುದು.

೫೨. ನಿನ್ನ ಕೌಮಾರವನ್ನು ಹರಣಮಾಡುವ ಆ ಯುವಕನು ಇಂದು ರಾತ್ರಿಯಲ್ಲಿ ನಿನ್ನ ಬಳಿಗೆ ಬರುವವನಾದರೆ ಆ ನಿನ್ನ ಹೃದಯಚೋರನನ್ನು ನಿನ್ನ ನಿಡುದೋಳ್ಗಳೆಂಬ ಪಾಶಗಳಿಂದ ಸಾಹಸದಿಂದಾದರೂ ಬಂಧಿಸು.

೫೩. ರತ್ನೇಶ್ವರನ ಆದೇಶದಂತೆ ನಿನಗೆ ಸೌಖ್ಯವನ್ನು ಕೊಡುವವನೂ, ಸುಕೃತಮಾತ್ರದಿಂದ ಲಭ್ಯನೂ ಆದ ಆ ನಿನ್ನ ಪ್ರಿಯತಮನು ಪ್ರಾತಃಕಾಲದಲ್ಲಿಯಾದರೂ ನಮ್ಮ ಕಣ್ಣುಗಳಿಗೆ ಬೀಳಲು ಅದರಿಂದ ನಿನಗೇ ಅನುಕೂಲವಾಗುವುದು.

ಯಾತಾಸ್ವಸ್ಮಾಸು ಹೃಷ್ಟಾಸು ಭವತೀ ಪುಣ್ಯಗೌರವಾತ್ ।
ಅಹೋ ರತ್ನೇಶ್ವರಂ ಲಿಂಗಂ ಪ್ರತ್ಯಕ್ಷೀಕೃತವತ್ಯಸಿ ॥ ೫೪ ॥
ಅಹೋ ಭಾಗ್ಯೋದಯಂ ನೄಣಾಮಹೋ ಪುಣ್ಯಸಮುಚ್ಚಯಃ ।
ಏಕಸ್ಯೈವ ಭವೇತ್ಸಿದ್ಧಿರ್ಯದೇಕತ್ರಾಪಿ ತಿಷ್ಠತಾಂ ॥ ೫೫ ॥
ಸತ್ಯಂ ವದಂತಿ ನಾಸತ್ಯಂ ದೈವಪ್ರಾಧಾನ್ಯವಾದಿನಃ ।
ದೈವಮೇವ ಫಲೇದೇಕಂ ನೋದ್ಯಮೋ ನಾಪರಂ ಬಲಂ ॥ ೫೬ ॥
ಭವತ್ಯಾ ಅಪಿ ಚಾಸ್ಮಾಕಮೇಕ ಏವ ಹಿ ಚೋದ್ಯಮಃ ।
ಪರಂ ದೈವಂ ಫಲತ್ಯೇಕಂ ಯಥಾ ತವ ನ ನಃ ಪುರಃ ॥ ೫೭ ॥
ಲೋಕಾನಾಂ ವ್ಯವಹಾರೋಽಯಮಾಲಿ ಪ್ರೋಕ್ತಃ ಪ್ರಸಂಗತಃ ।
ಪರಂ ಮನೋರಥಾವಾಪ್ತಿಸ್ತವ ಯಾ ಸೈವ ನಃ ಸ್ಫುಟಂ ॥ ೫೮ ॥
ಇತಿ ಸಂವ್ಯಾಹರಂತೀನಾಮಸಂತೋಽಧ್ವಾತಿತುಚ್ಛವತ್ ।
ಕ್ಷಣಾತ್ತಾಸಾಂ ವ್ಯತಿಕ್ರಾಂತಃ ಪ್ರಾಪ್ತಾಶ್ಚ ಸ್ವಂಸ್ವಮಾಲಯಂ ॥ ೫೯ ॥

---

೫೪. ನಾವೆಲ್ಲರೂ ಸಂತೋಷದಿಂದ ಪ್ರದಕ್ಷಿಣೆಗಾಗಿ ಹೋಗಿರಲು ನೀನು ನಿನ್ನ ಪುಣ್ಯದ ಆಧಿಕ್ಯದಿಂದ ಲಿಂಗರೂಪಿಯಾದ ರತ್ನೇಶ್ವರನನ್ನು ಪ್ರತ್ಯಕ್ಷವಾಗಿ ಕಂಡುದು ಆಶ್ಚರ್ಯವೇ ಸರಿ.

೫೫. ಮನುಷ್ಯರ ಭಾಗ್ಯೋದಯವನ್ನೂ ಪುಣ್ಯದ ಪರಿಪಾಕವನ್ನೂ ಎಷ್ಟು ವಿಚಿತ್ರಗಳೆಂದು ಹೇಳೋಣ! ಒಂದೇ ಸ್ಥಳದಲ್ಲಿ ಅನೇಕ ಜನರಿದ್ದರೂ ಒಬ್ಬರಿಗೆ ಮಾತ್ರ ಸಾಕ್ಷಾತ್ಕಾರವು ಸಿದ್ಧಿಸುವುದು.

೫೬. ಸಕಲವೂ ದೈವವಿಲಾಸವೇ ಎಂದು ವಾದಿಸುವವರು ಯಾವಾಗಲೂ ನಿಜವನ್ನು ಹೇಳುವವರೇ ಹೊರತು ಅಸತ್ಯವನ್ನಾಡುವುದಿಲ್ಲ. ದೈವಿಕವಾದ ಅದೃಷ್ಟವೊಂದೇ ಫಲಕಾರಿಯಾಗುವುದೇ ಹೊರತು ಪುರುಷಕಾರವಾಗಲಿ ಇತರ ಪರಾಕ್ರಮವಾಗಲಿ ಫಲಿಸಲಾರದು.

೫೭. ನಿನಗೂ ನಮಗೂ ಒಂದೇ ಉದ್ಯಮವಾಗಿರುವುದಲ್ಲವೆ. ಆದರೂ ನಿನ್ನ ಅದೃಷ್ಟವು ಫಲೋನ್ಮುಖವಾದಂತೆ ನಮಗೆ ಮಾತ್ರ ಆಗಲಿಲ್ಲ.

೫೮. ಎಲೌ ಸಖಿಯೆ! ಪ್ರಸಂಗವೊದಗಿದ್ದರಿಂದ ಲೋಕವ್ಯವಹಾರವನ್ನನುಸರಿಸಿ ಇದೆಲ್ಲವನ್ನೂ ಹೇಳಿರುವೆವು. ಆದರೆ ನಿಜವಾಗಿಯೂ ಹೇಳುವುದಾದರೆ ನಿನ್ನ ಮನೋರಥವು ಈಡೇರುವುದೇ ನಮಗೂ ಇಷ್ಟವಾಗಿರುವುದು."

೫೯. ಈ ವಿಧವಾಗಿ ಅವರು ಮಾತನಾಡುತ್ತಿರಲು ಅಪಾರವಾದ ಮಾರ್ಗವೂ ಸಹ ಸ್ವಲ್ಪದೂರದಂತೆಯೇ ಒಂದು ಕ್ಷಣಮಾತ್ರದಲ್ಲಿ ಕಳೆದುಹೋಯಿತು. ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಅಥ ಪ್ರಾತಃ ಸಮುತ್ಥಾಯ ಪುನರೇಕತ್ರ ಸಂಗತಾಃ ।
ಸಾ ಚ ಮೌನವತೀ ತಾಭಿಃ ಪರಿಭುಕ್ತೇವ ಲಕ್ಷಿತಾ ॥ ೬೦ ॥
ತೂಷ್ಣೀಂ ಪ್ರಾಪ್ಯಾಥ ಕಾಶೀಂ ಸಾ ಸ್ನಾತ್ವಾ ಮಂದಾಕಿನೀಜಲೇ ।
ಸಖೀಭಿಃ ಸಹಿತಾಽಪಶ್ಯಲ್ಲಿಂಗಂ ರತ್ನೇಶ್ವರಂ ಮಮ ॥ ೬೧ ॥
ನಿರ್ವರ್ತ್ಯ ನಿಯಮಂ ಸಾಥ ಲಜ್ಜಾಮುಕುಲಿತೇಕ್ಷಣಾ ।
ನಿರ್ಬಂಧೇನ ವಯಸ್ಯಾಭಿಃ ಪರಿಪೃಷ್ಟಾ ಜಗಾದ ಹ ॥ ೬೨ ॥

ರತ್ನಾವಲ್ಯುವಾಚ :—

ಅಥ ರತ್ನೇಶಯಾತ್ರಾಯಾಃ ಪ್ರಯಾತಾಸು ಸ್ವಮಂದಿರಂ ।
ಭವತೀಷು ಸ್ಮರಂತ್ಯೇವ ತದ್ರತ್ನೇಶವಚೋಽಮೃತಂ ॥ ೬೩ ॥
ಸವಿಶೇಷಾಂಗಸಂಸ್ಕಾರಾಽವಿಶಂ ಸಂವೇಶಮಂದಿರಂ ।
ನಿದ್ರಾದರಿದ್ರನಯನಾ ತದ್ವಿಲೋಕನಲಾಲಸಾ ॥ ೬೪ ॥
ಬಲಾತ್ಸ್ವಪ್ನದಶಾಂ ಪ್ರಾಪ್ತಾ ಭಾವಿನೋಽರ್ಥಸ್ಯ ಗೌರವಾತ್ ।
ಆತ್ಮವಿಸ್ಮರಣೇ ಹೇತೂ ತತೋ ಮೇ ದ್ವೌ ಬಭೂವತುಃ ॥ ೬೫ ॥

---

೬೦. ಮಾರನೆಯ ದಿನದ ಪ್ರಾತಃಕಾಲದಲ್ಲಿ ಎದ್ದು ಎಲ್ಲರೂ ಎಂದಿನಂತೆ ಒಂದೆಡೆಯಲ್ಲಿ ಸೇರಿದರು. ಆ ರತ್ನಾವಳಿಯು ಮೌನವನ್ನು ಧರಿಸಿದ್ದಳಾದರೂ ಪುರುಷಭೋಗವನ್ನನುಭವಿಸಿದವಳಂತೆ ತೋರುತ್ತಿದ್ದಳು.

೬೧. ಆಕೆಯು ಮೌನದಿಂದಲೇ ಕಾಶೀಕ್ಷೇತ್ರವನ್ನು ಸೇರಿ ಸಖಿಯರೊಡಗೂಡಿ ಗಂಗಾನದಿಯ ಜಲದಲ್ಲಿ ಸ್ನಾನವನ್ನುಮಾಡಿ ನನ್ನ ರೂಪವಾದ ರತ್ನೇಶ್ವರಲಿಂಗವನ್ನು ನೋಡಿದಳು.

೬೨. ತನ್ನ ದೈನಂದಿನನಿಯಮವನ್ನೆಲ್ಲ ಮುಗಿಸಿಕೊಂಡು ಆಕೆಯು ನಾಚಿಕೆಯಿಂದ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು. ಸಖಿಯರು ರಾತ್ರಿಯಲ್ಲಿ ನಡೆದ ವಿಚಾರವನ್ನು ಕುರಿತು ಮತ್ತೆ ಮತ್ತೆ ನಿರ್ಬಂಧದಿಂದ ಪ್ರಶ್ನೆಮಾಡಲು ಆಕೆಯು ಹೇಳತೊಡಗಿದಳು.

೬೩. ರತ್ನಾವಳಿಯು ಹೇಳುತ್ತಾಳೆ:—"ನಿನ್ನೆ ರತ್ನೇಶ್ವರನ ಯಾತ್ರೆಯನ್ನು ಮುಗಿಸಿಕೊಂಡು ನಾವೆಲ್ಲರೂ ಹಿಂದಿರುಗಲು ನೀವು ನಿಮ್ಮ ಮನೆಗಳಿಗೆ ಹೊರಟು ಹೋದಿರಿ. ನಾನಾದರೊ ರತ್ನೇಶ್ವರನಾಡಿದ ಅಮೃತಮಯಗಳಾದ ಆ ನುಡಿಗಳನ್ನೇ ಸ್ಮರಿಸುತ್ತ ಕುಳಿತಿದ್ದೆನು.

೬೪. ವಿಶೇಷವಾದ ಅಂಗಲೇಪನವೇ ಮುಂತಾದುವುಗಳಿಂದ ಕೂಡಿ ನಾನು ಮಲಗುವ ಮನೆಯನ್ನು ಸೇರಿದರೂ ಉದ್ದಿಷ್ಟವರನನ್ನು ನೋಡಬೇಕೆಂಬ ಕುತೂಹಲದಿಂದಿದ್ದ ನನ್ನ ಕಣ್ಣುಗಳಿಗೆ ನಿದ್ರೆಯೇ ಬಾರದಾಯಿತು.

೬೫. ಆದರೂ ಮುಂದೆ ನಡೆಯಲಿರುವ ಕಾರ್ಯಗೌರವದಿಂದ ನನಗೆ

ತಂದ್ರೀ ನಂದನಸಂಸ್ಪರ್ಶೌ ಮಮ ಬೋಧಾಪಹಾರಕೌ ।
ತಂದ್ರ್ಯಾ ಪರವಶಾ ಚಾಸಂ ತತಸ್ತತ್ಸ್ಪರ್ಶನೇನ ಚ ॥ ೬೬ ॥
ನ ಜಾನೇ ತ್ವಥ ಕಿಂವೃತ್ತಿಂ ಕಾಹಂ ಕ್ವಾಹಂ ಸ ಚಾಥ ಕಃ ।
ತಂ ನಿರ್ಜಿಗಮಿಷುಂ ಸಖ್ಯೋ ಯಾವದ್ಧರ್ತುಂ ಪ್ರಸಾರಿತಃ ॥ ೬೭ ॥
ದೋಃ ಕಂಕಣೇನ ರಿಪುಣಾ ಕ್ವಣಿತಂ ತಾವದುತ್ಕಟಂ ।
ಮಹತಾ ಸಿಂಜಿತೇನಾಹಂ ತೇನಾಲ್ಪಂ ಪರಿಬೋಧಿತಾ ॥ ೬೮ ॥
ಸುಖಸಂತಾನಪೀಯೂಷಹ್ರದೇ ಪರಿನಿಮಜ್ಜ್ಯ ವೈ ।
ಕ್ಷಣೇನ ತದ್ವಿಯೋಗಾಗ್ನಿಕೀಲಾಸು ಪತಿತಾ ಬಲಾತ್ ॥ ೬೯ ॥
ಕಿಂ ಕುಲೀಯಃ ಸ ನೋ ವೇದ್ಮಿ ಕಿಂ ದೇಶೀಯಃ ಕಿಮಾಖ್ಯಕಃ ।
ದುನೋತಿ ನಿತರಾಂ ಸಖ್ಯಸ್ತದ್ವಿಶ್ಲೇಷಾನಲೋ ಮಹಾನ್ ॥ ೭೦ ॥
ಅನಲ್ಪೋತ್ಕಲಿತಂ ಚೇತಃ ಪುನಸ್ತತ್ಸಂಗಮಾಶಯಾ ।
ಪ್ರಾಣಾನಾಂ ಮೇ ಯಿಯಾಸೂನಾಮೇಕಮೇವ ಮಹೌಷಧಂ ॥ ೭೧ ॥

---

ಬಲಾತ್ಕಾರವಾದ ಸ್ವಪ್ನಾವಸ್ಥೆಯು ಸಂಭವಿಸಿತು. ಆಗ ನನಗೆ ಮೈಮರೆಯಲು ಎರಡು ಕಾರಣಗಳುಂಟಾದುವು.

೬೬. ದೇಹಾಲಸ್ಯವೊಂದು; ಎರಡನೆಯದೇ ಪ್ರಿಯನ ದೇಹಸಂಸ್ಪರ್ಶವು. ಇವೆರಡೂ ನನ್ನ ಪ್ರಜ್ಞೆಯನ್ನು ತಪ್ಪಿಸಿದುವು. ಆಲಸ್ಯದಿಂದ ಕೂಡಿದ್ದ ನಾನು ಆತನ ಸ್ಪರ್ಶಸೌಖ್ಯದಿಂದ ಮತ್ತೂ ಪರವಶಳಾದೆನು.

೬೭. ಆ ಸಮಯದಲ್ಲಿ ಏನು ನಡೆಯಿತೆಂಬುದನ್ನಾಗಲಿ, ನಾನು ಯಾರೆಂಬುದಾಗಲಿ, ಎಲ್ಲಿರುವೆನೆಂಬುದಾಗಲಿ, ಆತನು ಯಾರೆಂಬುದಾಗಲಿ ಯಾವುದೊಂದನ್ನೂ ತಿಳಿಯಲಾರದಿದ್ದೆನು. ಸಖಿಯರಿರಾ! ಹೊರಟು ಹೋಗುತ್ತಲಿರುವ ಆತನನ್ನು ತಡೆದು ನಿಲ್ಲಿಸಲು ನನ್ನ ಕೈಗಳನ್ನು ನೀಡಿದೆನು.

೬೮. ಆಗ ಶತ್ರುಸಮಾನವಾದ ಈ ನನ್ನ ಕೈಗಡವು ಗಟ್ಟಿಯಾಗಿ ಶಬ್ದ ಮಾಡಿತು. ದೊಡ್ಡದಾದ ಆ ಧ್ವನಿಯ ದೆಸೆಯಿಂದ ನಾನು ಸ್ವಲ್ಪ ಎಚ್ಚರಗೊಳಿಸಲ್ಪಟ್ಟೆನು.

೬೯. ಸೌಖ್ಯಪರಂಪರೆಯೆಂಬ ಅಮೃತಸರೋವರದಲ್ಲಿ ಓಲಾಡುತ್ತಿದ್ದ ನಾನು ನಿಮಿಷಮಾತ್ರದಲ್ಲಿಯೇ ಆತನ ವಿಯೋಗವೆಂಬ ಬೆಂಕಿಯ ಜ್ವಾಲೆಗಳಲ್ಲಿ ಬಲಾತ್ಕಾರವಾಗಿ ತಳ್ಳಲ್ಪಟ್ಟೆನು.

೭೦. ಸಖಿಯರಿರಾ! ಆತನು ಯಾವ ಕುಲದವನು? ಯಾವ ದೇಶದವನು? ಆತನ ಹೆಸರೇನು? ಯಾವುದನ್ನೂ ನಾನರಿಯೆನು. ಆತನ ಅಗಲಿಕೆಯೆಂಬ ಮಹಾಗ್ನಿಯು ಮಾತ್ರ ನನ್ನನ್ನು ಬಹಳವಾಗಿ ಸಂಕಟಗೊಳಿಸುತ್ತಿರುವುದು.

೭೧. ಪುನಃ ಆತನ ಸಂಗಮವನ್ನು ಹೊಂದಬೇಕೆಂಬ ನನ್ನ ಮನಸ್ಸು

ವಯಸ್ಯಾ ನಿಶಿ ಭುಕ್ತಸ್ಯ ತಸ್ಯೈವ ಪುನರೀಕ್ಷಣಂ ।
ಭವತೀನಾಮಧೀನಂ ಚ ತತ್ಪುನರ್ದರ್ಶನಂ ಮಮ ॥ ೭೨ ॥
ಕಾಽಲೀ ತಮಾಲಯಂ ವಕ್ತಿ ಸ್ನಿಗ್ಧಮುಗ್ಧೇ ಸಖೀಜನೇ ।
ತದ್ದರ್ಶನೇನ ಸ್ಥಾಸ್ಯಂತಿ ಪ್ರಾಣಾ ಯಾಸ್ಯಂತಿ ಚಾನ್ಯಥಾ ॥ ೭೩ ॥
ದಶಮ್ಯವಸ್ಥಾ ಸನ್ನಹ್ಯೇದ್ಬಾಧಿತುಂ ಮಾಧುನಾ ಭೃಶಂ ।
ಇತಿ ತಸ್ಯಾ ಗಿರಃ ಶೃತ್ವಾ ದೂನಾಯಾಂ ನಿತರಾಂ ಚ ಸಾ ॥ ೭೪ ॥
ಪ್ರವೇಪಮಾನಹೃದಯಾಃ ಪ್ರೋಚುರ್ವೀಕ್ಷ್ಯ ಪರಸ್ಪರಂ ॥ ೭೫ ॥

ಸಖ್ಯ ಊಚುಃ :–

ಯಸ್ಯ ಗ್ರಾಮೋ ನ ನೋ ನಾಮ ನಾನ್ವಯೋ ನಾಪಿ ಬುಧ್ಯತೇ ।
ಸ ಕಥಂ ಪ್ರಾಪ್ಯತೇ ಭದ್ರೇ ಕ ಉಪಾಯೋ ವಿಧೀಯತಾಂ ॥ ೭೬ ॥
ಇತಿ ರತ್ನಾವಲೀ ಶೃತ್ವಾ ಸ ಸಂದೇಹಾಂ ಚ ತದ್ಗಿರಂ ।
ವಯಸ್ಯಾಸ್ತದವಾಪ್ತೌ ಮೇ ಯೂಯಂ ಕುಂಠಿ ಮುಮೂರ್ಛ ಹ ॥೭೭॥

---

ಬಹಳವಾಗಿ ಕಳವಳಿಸುತ್ತಿರುವುದು. ದೇಹವನ್ನು ತ್ಯಜಿಸಲು ಆತುರಗೊಳ್ಳುತ್ತಿರುವ ನನ್ನ ಪ್ರಾಣಗಳನ್ನು ನಿಲ್ಲಿಸಲು ಒಂದೇ ಒಂದು ಮಹೌಷಧವಿರುವುದು.

೭೨. ಅದು ಯಾವುದೆಂದರೆ ರಾತ್ರಿಯಲ್ಲಿ ಯಾವನನ್ನು ಉಪಭೋಗಿಸಿದೆನೊ, ಆತನನ್ನು ಪುನಃ ನೋಡುವುದೇ ಆಗಿರುವುದು. ಗೆಳತಿಯರಿರಾ! ನನಗೆ ಆತನ ಪುನರ್ದರ್ಶನವನ್ನೊದಗಿಸುವುದು ನಿಮ್ಮ ಅಧೀನದಲ್ಲಿರುವುದು.

೭೩. ಸ್ನೇಹಿತರಿರಾ! ಸ್ನೇಹಪರರೂ ಋಜುಮಾರ್ಗದವರೂ ಆದ ಸಖಿಯರಲ್ಲಿ ಯಾವಳು ತಾನೆ ಕಪಟದ ಮಾತುಗಳನ್ನಾಡುವಳು? ಆತನನ್ನು ನೋಡುವುದರಿಂದಲೇ ನನ್ನ ಪ್ರಾಣಗಳು ನಿಲ್ಲುವುವು, ಇಲ್ಲದಿದ್ದಲ್ಲಿ ಹೊರಟುಹೋಗುವುವು.

೭೪–೭೫. ಬಹಳವಾಗಿ ಬಾಧಿಸುತ್ತಿರುವ ಈ ತಾಪದಿಂದ ಈಗ ನನಗೆ ಖಂಡಿತವಾಗಿಯೂ ಮರಣಾವಸ್ಥೆಯು ಪ್ರಾಪ್ತವಾಗುವುದು." ಇಂತೆಂದು ಪರಿತಪಿಸುತ್ತಿರುವ ಆ ಸಖಿಯ ಮಾತುಗಳೆಲ್ಲವನ್ನೂ ಕೇಳಿ ಆ ಮೂವರೂ ಕಂಪಿಸುತ್ತಿರುವ ಹೃದಯಗಳಿಂದ ತಮ್ಮಲ್ಲಿಯೇ ಇಂತೆಂದು ಮಾತನಾಡಿಕೊಂಡರು.

೭೬. ಸಖಿಯರು ಹೇಳುತ್ತಾರೆ:—ಮಂಗಳಾಂಗಿಯೆ! ಯಾವ ಪುರುಷನ ವಾಸಸ್ಥಳವಾಗಲಿ, ಹೆಸರಾಗಲಿ, ವಂಶವಾಗಲಿ ತಿಳಿಯದಿರುವೆವೊ, ಅವನನ್ನು ಪಡೆಯುವುದೆಂತು? ಇದಕ್ಕೆ ಉಪಾಯವನ್ನು ಹೇಳುವವಳಾಗು.

೭೭. ಇಂತೆಂದು ಅವರು ಸಂದೇಹಪೂರ್ವಕವಾಗಿ ಆಡಿದ ಮಾತುಗಳನ್ನು ಕೇಳಿ ರತ್ನಾವಳಿಯು, "ಎಲೌ ಸಖಿಯರಿರಾ! ನಾನು ಆತನನ್ನು ಪಡೆಯುವ ಉಪಾಯವನ್ನು ಸೂಚಿಸುವುದರಲ್ಲಿ ನಿಮ್ಮ ಬುದ್ಧಿಯು ಕುಂಠಿತ" ಎನ್ನುತ್ತಿರುವಂತೆಯೇ ಮೂರ್ಛಿತಳಾದಳು.

ಇತ್ಯರ್ಧೋಕ್ತೇನ ಸಾ ಬಾಲಾ ಯುಷ್ಮಾಕಂ ಕುಂಠಿತಶಕ್ತಯಃ ।
ಯುಷ್ಮಚ್ಛಕ್ತ್ಯಂ ತ್ವಿತಿ ತಯಾ ಯುಷ್ಮಾಕಂ ಕುಂಠೀತಿ ಭಾಷಿತಂ ॥ ೭೮ ॥
ತತಸ್ತಾಸ್ತ್ವರಿತಾಃ ಸಖ್ಯಃ ಪರಿತಾಪೋಪಹಾರಕಾನ್ ।
ಬಹುಶಃ ಶೀತಲೋಪಾಯಾಸ್ತ್ವ್ಯಧುರ್ನೋಹಪ್ರಶಾಂತಯೇ ॥ ೭೯ ॥
ವ್ಯಪೈತಿ ನ ಯದಾ ಮೂರ್ಛಾ ತತ್ತಚ್ಛೀತೋಪಚಾರತಃ ।
ತಸ್ಯಾಸ್ತದೈಕಯಾ ನೀತಂ ರತ್ನೇಶಸ್ನಪನೋದಕಂ ॥ ೮೦ ॥
ತದುಕ್ಷಣಾತ್ ಕ್ಷಣಾದೇವ ತಸ್ಯಾ ಮೂರ್ಛಾ ವಿರರಾಮ ಹ ।
ಸುಪ್ತೋತ್ಥಿತೇವ ಸಾಽವಾದೀನ್ಮುಹುಃ ಶಿವಶಿವೇತಿ ಚ ॥ ೮೧ ॥

ಸ್ಕಂದ ಉವಾಚ :—

ಶ್ರದ್ಧಾವಂತಂ ಸ್ವಭಕ್ತಾನಾಮುಪಸರ್ಗೇ ಮಹತ್ಯಪಿ ।
ನೋಪಾಯಾಂತರಮಸ್ತ್ಯೇವ ವಿನೇಶಚರಣೋದಕಂ ॥ ೮೨ ॥
ಯೇ ವ್ಯಾಧಯೋಽಪಿ ದುಃಸಾಧ್ಯಾ ಬಹಿರಂತಶ್ಶರೀರಗಾಃ ।
ಶ್ರದ್ಧಯೇಶೋದಕಸ್ಪರ್ಶಾತ್ತೇ ನಶ್ಯಂತ್ಯೇವ ನಾನ್ಯಥಾ ॥ ೮೩ ॥

---

೭೮. "ನಿಮ್ಮ ಬುದ್ಧಿಯು ಕುಂಠಿತವಾಯಿತು" ಎಂದು ಹೇಳಲು ಹೊರಟ ಆಕೆಯು "ಕುಂಠಿ" ಎಂಬ ಅರ್ಧೋಕ್ತಿಯಲ್ಲಿಯೇ ಮಾತನ್ನು ಮುಗಿಸಿಬಿಟ್ಟಳು.

೭೯–೮೦. ಆಗ ಆಕೆಯನ್ನು ಮೂರ್ಛೆಯಿಂದ ಎಬ್ಬಿಸುವುದಕ್ಕಾಗಿ ಸಖಿಯರೆಲ್ಲರೂ ವಿರಹತಾಪವನ್ನು ಶಮನಮಾಡುವ ಅನೇಕವಿಧಗಳಾದ ಶೀತಲೋಪಾಯಗಳನ್ನು ಬೇಗಬೇಗ ನಡೆಸಿದರು. ಅವರು ಎಷ್ಟೇ ಉಪಚರಿಸಿದರೂ ಆಕೆಯ ಮೂರ್ಛೆಯು ಕೊನೆಗಾಣದಿರಲು ಆ ಸಖಿಯರಲ್ಲಿ ಒಬ್ಬಳು ಹೋಗಿ ರತ್ನೇಶ್ವರನಿಗೆ ಅಭಿಷೇಕವನ್ನು ಮಾಡಿದ ತೀರ್ಥೋದಕವನ್ನು ತಂದಳು.

೮೧. ಅದನ್ನು ಪಾನಮಾಡಿಸಲು ಕ್ಷಣಕ್ಷಣಕ್ಕೂ ಆಕೆಯ ಮೂರ್ಛೆಯು ಕಳೆಯತೊಡಗಿತು. ಮಲಗಿ ಎದ್ದವಳಂತೆ ಆಕೆಯು ಮತ್ತೆ ಮತ್ತೆ ಶಿವನಾಮವನ್ನುಚ್ಚರಿಸುತ್ತ ಪ್ರಜ್ಞೆಯನ್ನು ಹೊಂದಿದಳು.

೮೨. ಸ್ಕಂದನು ಹೇಳುತ್ತಾನೆ:—ಶ್ರದ್ಧಾವಂತರೂ, ಮಹೇಶ್ವರನ ಭಕ್ತರೂ ಆದ ಮಹಾತ್ಮರಿಗೆ ಮಹಾವಿಪತ್ತುಗಳಲ್ಲಿಯೂ ಆತನ ಚರಣಾಮೃತದ ಸಂಸೇವನೆಗಿಂತ ಬೇರೆ ಉಪಾಯವಿರುವುದಿಲ್ಲ.

೮೩. ಶರೀರದ ಹೊರಗಾಗಲಿ, ಒಳಗಾಗಲಿ ಸರ್ವೋಪಾಯಗಳಿಂದಲೂ ಚಿಕಿತ್ಸೆಗೊಳಗಾಗದ ಮಹಾವ್ಯಾಧಿಗಳೂ ಸಹ ಪರಮೇಶ್ವರನ ಪಾದೋದಕವನ್ನು ಸ್ಪರ್ಶಮಾಡುವುದರಿಂದ ನಾಶವನ್ನು ಹೊಂದುವುದಲ್ಲದೆ ಎಂದಿಗೂ ಉಳಿಯಲಾರವು.

ಸೇವಿತಂ ಯೇನ ಸತತಂ ಭಗವಚ್ಛರಣೋದಕಂ ।
ತಂ ಬಾಹ್ಯಾಭ್ಯಂತರಶುಚಿಂ ನೋಪಸರ್ಪತಿ ದುರ್ಗತಿಃ ॥ ೮೪ ॥
ಆಧಿಭೌತಿಕತಾಪಂ ಚ ತಾಪಂ ವಾಪ್ಯಾಧಿದೈವಿಕಂ ।
ಆಧ್ಯಾತ್ಮಿಕಂ ತಥಾ ತಾಪಂ ಹರೇಚ್ಛ್ರೀಚರಣೋದಕಂ ॥ ೮೫ ॥
ವ್ಯಪೇತ ಸಂಜ್ವರಾ ಚಾಥ ಗಂಧರ್ವತನಯಾ ಮುನೇ ।
ಉಚಿತಜ್ಞೇತಿ ಹೋವಾಚ ತಾಃ ಸಖೀಃ ಸ್ನಿಗ್ಧಧೀರಧೀಃ ॥ ೮೬ ॥

ರತ್ನಾವಲ್ಯುವಾಚ :—

ಶಶಿಲೇಖೇಽನಂಗಲೇಖೇ ಚಿತ್ರಲೇಖೇ ಮದೀಹಿತೇ ।
ಯೂಯಂ ಕುಂಠಿತಸಾಮರ್ಥ್ಯಾ ಕುತೋ ವಸ್ತಾಃ ಕಲಾಃ ಕ್ವನಾ॥ ೮೭ ॥
ಮತ್ಪ್ರಿಯಃ ಪ್ರಾಪ್ಯತೇ ಸಂಯುಗುಪಾಯೋಽಸ್ತಿ ಮಯೇಕ್ಷಿತಃ ।
ರತ್ನೇಶ್ವರಾನುಗ್ರಹತೋಽನುತಿಷ್ಠತ ಹಿತಂ ಹಿತಾಃ ॥ ೮೮ ॥
ಶಶಿಲೇಖೇಽಭಿಲಷಿತಪ್ರಾಪ್ತ್ಯೈ ಲೇಖಾಂಸ್ತ್ವಮಾಲಿಖ ।
ಸಂಲಿಖಾನಂಗಲೇಖೇ ತ್ವಂ ಯೂನಃ ಸರ್ವಾನವನೀಚರಾನ್ ॥ ೮೯ ॥

---

೮೪. ಯಾವನು ನಿತ್ಯವಲ್ಲಿಯೂ ಪರಮಾತ್ಮನ ಪಾದೋದಕವನ್ನು ಸೇವಿಸುತ್ತಿರುವನೊ, ಆತನು ಒಳಗೂ ಹೊರಗೂ ಶುಚಿಯಾಗಿರುವುದರಿಂದ ಆತನನ್ನು ಎಂದಿಗೂ ದುರ್ಗತಿಯು ಸಮೀಪಿಸಲಾರದು.

೮೫. ಮಹಾದೇವನ ಪವಿತ್ರವಾದ ಚರಣೋದಕವು ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಗಳೆಂಬ ಮೂರು ವಿಧಗಳಾದ ಸಂಕಟಗಳನ್ನೂ ಪರಿಹರಿಸುವುದು.

೮೬. ಮುನಿವರ್ಯನೆ! ಇಂತು ಮೂರ್ಛೆಯು ಕಳೆದುಹೋಗಲು ಎಚ್ಚತ್ತ ಆ ಗಂಧರ್ವಪುತ್ರಿಯು ಕಾಲೋಚಿತಕಾರ್ಯವನ್ನು ತಿಳಿದವಳಾದುದರಿಂದ ಸ್ನೇಹದಿಂದಲೂ, ಧೈರ್ಯದಿಂದಲೂ ಕೂಡಿದ ಬುದ್ಧಿಗಳುಳ್ಳ ಸಖಿಯರನ್ನು ಕುರಿತು ಇಂತೆಂದಳು.

೮೭. ರತ್ನಾವಳಿಯು ಹೇಳುತ್ತಾಳೆ:—"ಶಶಿಲೇಖೆ! ಓ ಅನಂಗಲೇಖೆ! ಚಿತ್ರಲೇಖೆಯೆ! ನನ್ನ ಹಿತವನ್ನು ಸಾಧಿಸುವುದರಲ್ಲಿ ನೀವು ಏಕೆ ಇಷ್ಟು ಕುಂಠಿತವಾದ ಸಾಮರ್ಥ್ಯವುಳ್ಳವರಾದಿರಿ? ನಿಮ್ಮ ಆ ಕಲಾಕೌಶಲಗಳೆಲ್ಲವೂ ಎಲ್ಲಿಹೋದುವು?

೮೮. ನನ್ನ ಪ್ರಿಯನನ್ನು ಪಡೆಯಲು ರತ್ನೇಶ್ವರನ ಅನುಗ್ರಹದಿಂದ ನನಗೆ ಕಂಡುಬಂದಿರುವ ಉತ್ತಮೋಪಾಯವೊಂದಿರುವುದು. ನನಗೆ ಹಿತಚಿಂತಕರಾದ ನೀವು ಈ ಹಿತಕಾರ್ಯವನ್ನು ಮಾಡಿರಿ.

೮೯. ಎಲೌ ಶಶಿಲೇಖೆಯೆ! ನನ್ನ ಮನೋರಥಪ್ರಾಪ್ತಿಗಾಗಿ ನೀನು

ಚಿತ್ರಗೇ ಚಿತ್ರಲೇಖೇ ತ್ವಂ ಪಾತಾಲತಲಶಾಯಿನಃ ।
ಕಿಂಚಿದಾವಿರ್ಭವಚ್ಚಾರು ತಾರುಣ್ಯಾಲಂಕೃತೀರ್ಲಿಖ ॥ ೯೦ ॥
ಅಥಾಕರ್ಣ್ಯೇತಿ ತಾಃ ಸಖ್ಯಾಸ್ತಚ್ಚಾತುರ್ಯಂ ಪ್ರವರ್ಣ್ಯ ಚ ।
ಲಿಲಿಖುಃ ಕ್ರಮಶಃ ಸರ್ವ್ಯೋ ಯೂನೋ ಯೌವನಶೇವಧೀನ್ ॥ ೯೧ ॥
ನಿರ್ಯತ್ತೌಕ್ಯಮಾರಲಕ್ಷ್ಮೀಕಾಸ್ಸಮುತ್ತ್ವಶ್ರೀಸಮಾವೃತಾನ್ ।
ಪ್ರಾತಸ್ಸಂಧ್ಯೇವ ಗಂಧರ್ವೀ ನೃಪಾದ್ಯಾಂಸ್ತಾನಪೈಕ್ಷತ ॥ ೯೨ ॥
ಸರ್ವಾನ್ಸುರನಿಕಾಯಾನ್ಸಾ ವ್ಯಲೋಕತ ಶುಭೇಕ್ಷಣಾಃ ।
ನ ಚಾಂಚಲ್ಯಂ ಜಹಾವಕ್ಷ್ಣೋಸ್ತೇಷು ಸ್ವರ್ಲೋಕವಾಸಿಷು ॥ ೯೩ ॥
ತತೋ ಮಧ್ಯಮಲೋಕಸ್ಥಾನ್ಮುನಿರಾಜಕುಮಾರಕಾನ್ ।
ವಿಲೋಕ್ಯಾಪಿ ನ ಸಾ ಪ್ರೀತಿಂ ಕ್ವಾಪ್ಯಾಪ ಪ್ರೇಮನಿರ್ಭರಾ ॥ ೯೪ ॥

---

ಸಮಸ್ತ ದೇವತೆಗಳ ಚಿತ್ರಗಳನ್ನೂ ಬರೆದಿಡು. ಅನಂಗಲೇಖೆಯೆ! ನೀನು ಭೂಲೋಕದಲ್ಲಿರುವ ಸಮಸ್ತ ಯೋಗ್ಯಯುವಕರನ್ನೂ ಚಿತ್ರಿಸು.

೯೦. ಅನ್ವರ್ಥನಾಮವುಳ್ಳ ಚಿತ್ರಲೇಖೆಯೆ! ನೀನೂ ಪಾತಾಲಲೋಕದಲ್ಲಿ ವಾಸಮಾಡುತ್ತಿರುವವರೂ, ಮನೋಹರವಾದ ಯೌವನದಿಂದಲಂಕೃತರಾದವರೂ ಆದ ಸಕಲರನ್ನೂ ಬರೆಯುವವಳಾಗು.''

೯೧. ಆಗ ಆ ಸಖಿಯರು ಆಕೆಯ ಚಾತುರ್ಯದ ನುಡಿಯನ್ನು ಕೇಳಿ ಬಹು ವಿಧವಾಗಿ ಕೊಂಡಾಡುತ್ತ ಅದರಂತೆಯೇ ಮೂರುಲೋಕಗಳಲ್ಲಿಯೂ ನೆಲಸಿ ಯೌವನದ ಸೀಮಾಪುರುಷರೆನಿಸಿದ ಸಕಲ ಯುವಕರ ಚಿತ್ರಗಳನ್ನೂ ಕ್ರಮವಾಗಿ ಬರೆದರು.

೯೨. ಅವರೆಲ್ಲರೂ ನಿತ್ಯಯೌವನವೆಂಬ ಐಶ್ವರ್ಯದಿಂದ ಕೂಡಿದವರಾಗಿದ್ದರು. ಪೌರುಷಚಿಹ್ನೆಗಳಿಂದಲೂ ಅಲಂಕೃತರಾಗಿದ್ದರು. ಪ್ರಾತಃಕಾಲದ ಸಂಧ್ಯಾರಾಗದಂತೆ ಕೆಂಪೇರಿದ ಮುಖವುಳ್ಳವಳಾಗಿ ಆ ರತ್ನಾವಳಿಯು ರಾಜಕುಮಾರರೇ ಮೊದಲಾದ ಆ ಸಕಲರ ಚಿತ್ರಗಳನ್ನೂ ನೋಡುತ್ತಿದ್ದಳು.

೯೩. ಶುಭಲೋಚನೆಯಾದ ಆಕೆಯು ಸ್ವರ್ಗಲೋಕದಲ್ಲಿರುವ ಸಕಲ ದೇವತೆಗಳ ರೂಪಗಳನ್ನೂ ನೋಡಿದಳು. ಆದರೆ ಅವರ ಚಿತ್ರಗಳನ್ನು ನೋಡುವಾಗ ತನ್ನ ನೇತ್ರಗಳ ಚಾಂಚಲ್ಯವನ್ನು ತ್ಯಜಿಸಲಿಲ್ಲ. (ಯಾವೊಂದು ಚಿತ್ರವನ್ನೂ ನೆಟ್ಟದೃಷ್ಟಿಯಿಂದ ನೋಡಲಿಲ್ಲ.)

೯೪. ಬಳಿಕ ಮರ್ತ್ಯಲೋಕದಲ್ಲಿರುವ ಮುನಿಕುಮಾರರು, ರಾಜಪುತ್ರರು ಮೊದಲಾಗಿ ಸಕಲರನ್ನೂ ನೋಡಿದರೂ, ಕಾಮವಿಕಾರದಿಂದ ಕೂಡಿದವಳಾದರೂ ಆಕೆಯು ಯಾವ ಚಿತ್ರದಲ್ಲಿಯೂ ಪ್ರೀತಿಯನ್ನು ತೋರಿಸಲಿಲ್ಲ.

ಅಥ ರತ್ನಾವಲೀ ಬಾಲಾ ಕರ್ಣಾಭ್ಯರ್ಣವಿಲೋಚನಾ ।
ದೃಶೌ ವ್ಯಾಪಾರಯಾಮಾಸ ಬಲಿಸದ್ಮಯುವಸ್ವಪಿ ॥ ೯೫ ॥
ದಿತಿಜಾನ್ದನುಜಾನ್ವೀಕ್ಷ್ಯ ಸಾ ಗಂಧರ್ವಕುಮಾರಕಾನ್ ।
ರತಿಂ ಬಬಂಧ ನ ಕ್ವಾಪಿ ತಾಪಿತಾ ಮಾನ್ಮಥೈಃ ಶರೈಃ ॥ ೯೬ ॥
ಸುಧಾಕರಕರಸ್ಪೃಷ್ಟಾಪ್ಯತಿದೂನಾಂಗಯಷ್ಟಿಕಾ ।
ಪಶ್ಯಂತೀ ನಾಗಯೂನಂ ಸಾ ಕಿಂಚಿದುಚ್ಛ್ವಸಿತಾಽಭವತ್ ॥ ೯೭ ॥
ಭೋಗಿನಸ್ತಾನ್ನಿಲೋಕ್ಯಾಪಿ ಚಿತ್ರಂ ಚಿತ್ರಗತಾನಥ ।
ಮನಾಕ್ಸಂಭುಕ್ತಭೋಗೇವ ಕ್ಷಣಮಾಸೀತ್ಕುಮಾರಿಕಾ ॥ ೯೮ ॥
ಯೂನಃ ಪ್ರತ್ಯೇಕಮುದ್ರಾಕ್ಷೀದಶೇಷಾಂಛೇಷವಂಶಜಾನ್ ।
ತಕ್ಷಕಾನ್ವಯಗಾಂಸ್ತದ್ವದಥ ವಾಸುಕಿಗೋತ್ರಜಾನ್ ॥ ೯೯ ॥
ಪುಲೀಕಾನಂತಕರ್ಕೋಟಭದ್ರಸಂತಾನಗಾನಪಿ ।
ದೃಷ್ಟ್ವಾ ನಾಗಕುಮಾರಾಂಸ್ತಾನ್ ಶಂಖಚೂಡಮುಥೈಕ್ಷತ ॥ ೧೦೦ ॥

---

೯೫. ಆಮೇಲೆ ಆಕರ್ಣಾಂತನೇತ್ರಗಳುಳ್ಳ ಆ ರತ್ನಾವಳಿಯೆಂಬ ಬಾಲಿಕೆಯು ಪಾತಾಲಲೋಕಗಳಲ್ಲಿ ವಾಸಿಸುತ್ತಿರುವವರ ಚಿತ್ರಗಳ ಕಡೆಗೆ ತನ್ನ ದೃಷ್ಟಿಯನ್ನು ಪ್ರಸರಿಸಿದಳು.

೯೬. ಆಕೆಯು ಮನ್ಮಥನ ಬಾಣಗಳಿಂದ ಪರಿತಪಿಸುತ್ತಿದ್ದರೂ, ದೈತ್ಯರನ್ನೂ, ರಾಕ್ಷಸರನ್ನೂ, ಗಂಧರ್ವಪುತ್ರರನ್ನೂ ನೋಡಿ ಯಾವ ಯುವಕನ ಚಿತ್ರದಲ್ಲಿಯೂ ಅಭಿಲಾಷೆಯನ್ನು ತೋರಿಸಲಿಲ್ಲ.

೯೭. ಚಂದ್ರನ ಕಿರಣಗಳಿಂದ ಶೀತಲಗೊಳಿಸಲ್ಪಡುತ್ತಿದ್ದರೂ ಆಕೆಯ ದೇಹವು ವ್ಯಥೆಗೊಳಗಾಗಿದ್ದಿತು. ನಾಗಯುವಕರನ್ನು ನೋಡುತ್ತಿರಲು ಸ್ವಲ್ಪವಾಗಿ ಸಂತೋಷವನ್ನು ವ್ಯಕ್ತಪಡಿಸಿದಳು.

೯೮. ಚಿತ್ರಗತರಾದ ಅನೇಕ ನಾಗರನ್ನು ನೋಡಿದರೂ ಆಕೆಯು ಒಂದು ಕ್ಷಣಕಾಲ ಭೋಗವನ್ನನುಭವಿಸಿದವಳಂತೆ ತೋರುತ್ತಿದ್ದುದು ಆ ಕುಮಾರಿಕೆಯಲ್ಲಿ ವಿಚಿತ್ರವೇ ಸರಿ.

೯೯. ಬೇರೆಬೇರೆಯಾಗಿ ಶೇಷನ ವಂಶದವರನ್ನೂ, ತಕ್ಷಕನ ಸಂತತಿಯವರನ್ನೂ, ವಾಸುಕಿಯ ಗೊತ್ರೋದ್ಭವರನ್ನೂ ಆಕೆಯು ಸಂಪೂರ್ಣವಾಗಿ ಚಿತ್ರಗಳಲ್ಲಿ ವೀಕ್ಷಿಸಿದಳು.

೧೦೦. ಪುಲೀಕ, ಅನಂತ, ಕರ್ಕೋಟಕ, ಭದ್ರ ಮುಂತಾದ ಅನೇಕ ಗೋತ್ರಗಳಲ್ಲಿ ಹುಟ್ಟಿದ ನಾಗಕುಮಾರಕರನ್ನು ನೋಡುತ್ತ ಕಡೆಯಲ್ಲಿ ಶಂಖಚೂಡನೆಂಬ ನಾಗಕುಮಾರನ ಚಿತ್ರವನ್ನು ನೋಡಿದಳು.

ಶಂಖಚೂಡೇಕ್ಷಣಾದೇವ ಪರಾಂ ಲಜ್ಜಾಂ ಬಭಾರ ಸಾ ।
ಉದ್ಭಿನ್ನಪುಲಕಾಸ್ಯಾಸೀದಂಗಪ್ರತ್ಯಂಗಸಂಧಿಷು ॥ ೧೦೧ ॥
ತತ್ರಪಾಭರತೋಽಜ್ಞಾಯಿ ತತ್ಕೌಮಾರಹರೋ ಪರಃ ।
ತಯಾ ವೈದಗ್ಧ್ಯವರಯಾ ಕ್ಷಣತಶ್ಚಿತ್ರಲೇಖಯಾ ॥ ೧೦೨ ॥
ಅಥ ಚಿತ್ರಪಟೇ ಚಿತ್ರಲೇಖಾ ಚಿತ್ರಪಟಾಂಚಲಂ ।
ಪರಿಕ್ಷಿಪ್ಯಾನೃಣೋತ್ತೂರ್ಣಂ ಪರಿಹಾಸ್ಯೈಕಪೇಶಲಾ ॥ ೧೦೩ ॥
ರತ್ನಾವಲೀ ಚಿತ್ರಲೇಖಾಂ ಹ್ರಿಯಾ ಮೌನಾವಲಂಬಿನೀ ।
ದೃಶಾ ಕುಟಿಲಯಾದ್ರಾಕ್ಷೀತ್ಸ್ಫುರದ್ದಶನಾಂಬರಾ ॥ ೧೦೪ ॥
ಕಟಾಕ್ಷಿತಾನಂಗಲೇಖಾ ತಯಾಥ ಶಶಿಲೇಖಯಾ ।
ಚಿತ್ರಲೇಖಾಪರಿಕ್ಷಿಪ್ತಪಟಾಂಚಲಮಪಾಕರೋತ್ ॥ ೧೦೫ ॥
ವಸುಭೂತಿಸುತಾ ಸಾಥ ಕನ್ಯಾ ರತ್ನಾವಲೀ ಶುಭಾ ।
ಶಂಖಚೂಡಾನ್ವಯೇ ತಂ ರತ್ನಚೂಡಮವೈಕ್ಷತ ॥ ೧೦೬ ॥

---

೧೦೧. ಶಂಖಚೂಡನನ್ನು ನೋಡಿದ ಮಾತ್ರದಿಂದಲೇ ಆಕೆಯು ಅಪಾರವಾದ ಲಜ್ಜೆಯನ್ನು ತಾಳಿದಳು. ಶರೀರದ ಅಂಗಾಂಗಗಳಲ್ಲಿಯೂ ಸಂಧಿಗಳಲ್ಲಿಯೂ ಎದ್ದುನಿಂತು ಪುಳಕಾಂಕುರಗಳುಳ್ಳವಳಾದಳು.

೧೦೨. ಆಕೆಯ ಲಜ್ಜಾಭಾರದಿಂದಲೇ ಅವಳ ಸಖಿಯೂ ಇಂಗಿತಜ್ಞರಲ್ಲಿ ಉತ್ತಮಳೂ ಆದ ಚಿತ್ರಲೇಖೆಯು ಆತನೇ ಆಕೆಯ ಕೌಮಾರ್ಯವನ್ನು ಹರಣ ಮಾಡಿರಬಹುದೆಂಬುದನ್ನು ತಿಳಿದುಕೊಂಡಳು.

೧೦೩. ಚಿತ್ರಲೇಖನದಲ್ಲಿ ಸಮರ್ಥಳೂ, ಪರಿಹಾಸ್ಯಮಾಡುವುದರಲ್ಲಿ ಕುಶಲಳೂ ಆದ ಆ ಚಿತ್ರಲೇಖೆಯು ಚಿತ್ರಪಟಗಳ ಹೊದಿಕೆಯನ್ನು ಸೆಳೆದು ಬೇಗ ಅವುಗಳನ್ನು ಮರೆಮಾಡಿದಳು.

೧೦೪. ರತ್ನಾವಳಿಯಾದರೊ, ಲಜ್ಜೆಯಿಂದ ಮೌನವನ್ನವಲಂಬಿಸಿ, ತುಟಿಗಳು ಅದುರುತ್ತಿರಲು, ಕುಟಿಲವಾದ ದೃಷ್ಟಿಯಿಂದ ಚಿತ್ರಲೇಖೆಯನ್ನೇ ನೋಡುತ್ತಿದ್ದಳು.

೧೦೫. ಆಗ ಶಶಿಲೇಖೆಯ ಕಡೆಗಣ್ಣಿನ ನೋಟದಿಂದ ಪ್ರೇರಿತಳಾಗಿ ಅನಂಗಲೇಖೆಯೆಂಬ ಸಖಿಯು ಚಿತ್ರಲೇಖೆಯು ಹೊದಿಸಿದ್ದ ಮೇಲ್ಮುಸುಕನ್ನು ತೆಗೆದು ಚಿತ್ರಗಳನ್ನು ತೋರಿಸತೊಡಗಿದಳು.

೧೦೬. ವಸುಭೂತಿಯ ಪುತ್ರಿಯೂ, ಮಂಗಳಾಂಗಿಯೂ ಆದ ಆ ರತ್ನಾವಳಿಯು ಶಂಖಚೂಡನ ವಂಶದಲ್ಲಿ ಜನ್ಮವನ್ನು ತಳೆದಿದ್ದ ರತ್ನಚೂಡನ ಚಿತ್ರವನ್ನು ನೋಡಿದಳು.

ತದೀಕ್ಷಣಕ್ಷಣಾದ್ವೃಷ್ಟಿರಾನಂದಾಶ್ರುಭಿರಾವೃತಾ ।
ಕಪೋಲಭಿತ್ತಿರಭವತ್ಸ್ವೇದೋದಕಣಿಕಾಂಚಿತಾ ॥ ೧೦೭ ॥
ಚಕಂಪೇ ಗಾತ್ರಲತಿಕಾ ಧೃತರೋಮಾಂಚಕಂಚುಕಾ ।
ಚಿತ್ರನ್ಯಸ್ತೇವ ತಸ್ತಂಭ ಕ್ಷಣಂ ಮುಕುಲಿತಾನನಾ ॥ ೧೦೮ ॥
ತತಸ್ಸಾ ಚಿತ್ರಲೇಖಾ ತಾಮೇತ್ಯಾಶ್ವಾಸಯದಾತುರಾಂ ।
ಮೌತ್ಸುಕ್ಯಂ ವ್ರಜ ಗಂಧರ್ವಿ ಸಿದ್ಧಸ್ತೇಽದ್ಯ ಮನೋರಥಃ ॥ ೧೦೯ ॥
ಏತಸ್ಯಾವಗತಂ ಸರ್ವಂ ದೇಶನಾಮಾನ್ವಯಾದಿಕಂ ।
ಮಾವಿಷೀದಾಲಿ ಸುಲಭಸ್ತ್ವೇಷ ರತ್ನೇಶ್ವರಾರ್ಪಿತಃ ॥ ೧೧೦ ॥
ಅಹೋ ಸದೃಗ್ವರಾವಾಪ್ತ್ಯಾ ರತ್ನೇಶೇನಾಸಿ ತೋಷಿತಾ ।
ಉತ್ತಿಷ್ಠ ಯಾಮಃ ಸದನಂ ರತ್ನೇಶಃ ಸರ್ವದೋ ಹಿ ನಃ ॥ ೧೧೧ ॥
ಅಥ ದೈವವಶಾದ್ಯಾಂತ್ಯಸ್ತಾ ದೃಷ್ಟಾ ಗಗನಾಧ್ವಗಾಃ ।
ಸುಬಾಹುನಾ ದಾನವೇನ ಪಾತಾಲತಲವಾಸಿನಾ ॥ ೧೧೨ ॥

---

೧೦೭. ಆತನನ್ನು ನೋಡಿದ ಸಂತೋಷದಿಂದಲೇ ಆಕೆಯ ನೇತ್ರಗಳು ಆನಂದಬಾಷ್ಪಗಳ ಬಿಂದುಗಳಿಂದ ತುಂಬಿಕೊಂಡುವು. ಆಕೆಯ ಕೆನ್ನೆಗಳು ಕಿರು ಬೆವರಿನ ಹನಿಗಳಿಂದ ಕವಿದವುಗಳಾಗಿ ಕಾಣಿಸಿದುವು.

೧೦೮–೧೦೯. ಆಕೆಯ ಶರೀರವು ರೋಮಾಂಚವೆಂಬ ಕುಪ್ಪುಸವನ್ನು ತೊಟ್ಟು ನಡುಗತೊಡಗಿತು. ಸ್ವಲ್ಪಕಾಲದಲ್ಲಿಯೇ ಆಕೆಯು ಚಿತ್ರಲಿಖಿತಳಾದವಳಂತೆ ಮುಹೂರ್ತಕಾಲದವರೆಗೂ ಕಣ್ಣುಗಳನ್ನು ಮುಚ್ಚಿಕೊಂಡು ಸ್ತಂಭಿತಳಾಗಿ ನಿಂತಳು. ಆಗ ಸಖಿಯಾದ ಚಿತ್ರಲೇಖೆಯು ಸಮೀಪಕ್ಕೆ ಬಂದು ಕಾಮಾತುರಳಾಗಿದ್ದ ಆಕೆಯನ್ನು ಆಶ್ವಾಸನ ಮಾಡಿದಳು. "ಎಲೌ ಗಂಧರ್ವಕನ್ಯೆಯೆ! ನೀನು ಔತ್ಸುಕ್ಯವನ್ನು ಹೊಂದಬೇಡ. ನಿನ್ನ ಮನೋರಥವು ಇಂದಿಗೆ ಈಡೇರಿತು.

೧೧೦. ಈತನ ದೇಶ, ನಾಮ, ಕುಲಗಳೇ ಮುಂತಾದ ಸಕಲ ವಿಷಯವೂ ನನಗೆ ತಿಳಿದಿರುವುದು. ಸಖಿಯೆ! ನೀನು ದುಃಖಗೊಳ್ಳಬೇಡ. ರತ್ನೇಶ್ವರನಿಂದಲೇ ನಿನಗೆ ಪತಿಯಾಗಿ ನಿರ್ಣೀತನಾಗಿರುವ ಈತನು ಸುಲಭವಾಗಿ ಸಿಕ್ಕುವವನೇ ಆಗಿರುವನು.

೧೧೧. ಬಹಳ ಸಂತೋಷ! ನಿನಗೆ ಸದೃಶನಾದ ವರನನ್ನು ಹೊಂದಿಸಿ ರತ್ನೇಶ್ವರನು ನಿನ್ನನ್ನು ಸಂತೋಷಗೊಳಿಸಿರುವನು. ಏಳು, ಮನೆಗೆ ಹೋಗೋಣ. ರತ್ನೇಶ್ವರನೇ ನಮಗೆ ಇಷ್ಟಪ್ರದನಾಗಿರುವನಲ್ಲವೆ."

೧೧೨. ತರುವಾಯ ಆಕಾಶಮಾರ್ಗದಲ್ಲಿ ಪ್ರಯಾಣಮಾಡುತ್ತಿದ್ದ ಅವರೆಲ್ಲರೂ ದೈವವಶದಿಂದ ಪಾತಾಲತಲದಲ್ಲಿ ವಾಸಮಾಡುತ್ತಿದ್ದ ಸುಬಾಹುವೆಂಬ ರಾಕ್ಷಸನ ಕಣ್ಣುಗಳಿಗೆ ಗೋಚರಿಸಿದರು.

ಗೃಹೀತ್ವಾ ತಾಶ್ಚ ತಸ್ಯೋಽಪಿ ನಿರಗಾದ್ದಾನವೋ ಗೃಹಂ ।
ಹರಿರ್ವಿಕಟದಂಷ್ಟ್ರಾಸ್ಯಃ ಪ್ರಾಂತರೇ ಹರಿಣೀರಿವ ॥ ೧೧೩ ॥
ತಾಸ್ತಂ ವಿಲೋಕ್ಯ ಗಂಧರ್ವ್ಯೋ ದಂಷ್ಟ್ರಾವಿಕಟಿತಾನನಂ ।
ರುಧಿರಾರುಣನೇತ್ರಂ ಚ ಜಾತಾ ವೇಪಥುಭೂಮಯಃ ॥ ೧೧೪ ॥
ಹಾ ಮಾತರ್ಹಾ ಪಿತಸ್ತ್ರಾಹಿ ಹಾ ವಿಧೇ ಮಾ ವಿಧೇಹಿ ತತ್ ।
ಯದೇತ್ಕರ್ತುಮಾರಬ್ಧಮನಾಥಾಸ್ವತಿ ನಿಷ್ಠುರಂ ॥ ೧೧೫ ॥
ಹಾ ದೈವ ಮಂದಭಾಗ್ಯಾಭಿಃ ಕಿಮಸ್ಮಾಭಿರನುಷ್ಠಿತಂ ।
ಸುಕೃತೇತರವಾರ್ತಾಪಿ ನೋ ಚಿತ್ತೇ ವ್ಯಾಹೃತಾ ಕ್ವಚಿತ್ ॥ ೧೧೬ ॥
ಶಿಶುಕ್ರೀಡನಕಂ ಹಿತ್ವಾ ಹಿತ್ವಾ ರತ್ನೇಶ್ವರಾರ್ಚನಂ ।
ಪಿತ್ರೋಃ ಸ್ವಾಧೀನಸಚ್ಚೇಷ್ಟಾಮಿಷ್ಟಂ ವಿದ್ಮೋ ನ ಕಿಂಚನ ॥ ೧೧೭ ॥
ಅಧೋಭುವನಗಾ ದೀನಾ ಹೀನಾ ನಾಥೇನ ಕೋಽತ್ರ ನಃ ।
ತ್ರಾತಿ ತ್ರಾಣಾರ್ಥಿನೀರ್ಬಾಲಾಃ ಶಂಭೋ ರತ್ನೇಶ ಸರ್ವಗ ॥ ೧೧೮ ॥

---

೧೧೩. ಆ ದಾನವನು ನಾಲ್ವರನ್ನೂ ಸೆರೆಹಿಡಿದು ತನ್ನ ಮನೆಗೆ ಕರೆದು ಕೊಂಡು ಹೋದನು. ಭಯಂಕರಗಳಾದ ಕೋರೆದಾಡೆಗಳಿಂದ ಕೂಡಿದ ಮುಖ ವುಳ್ಳ ಆ ರಾಕ್ಷಸನು ಕಾಡಿನಲ್ಲಿ ಜಿಂಕೆಗಳನ್ನು ಹಿಡಿದುಕೊಂಡು ಹೋಗುತ್ತಿರುವ ಸಿಂಹವನ್ನು ಹೋಲುತ್ತಿದ್ದನು.

೧೧೪. ಗಂಧರ್ವಕನ್ನೆಯರು ಕೋರೆಹಲ್ಲುಗಳಿಂದ ಭಯಂಕರ ಮುಖವುಳ್ಳ ವನೂ, ರಕ್ತದಿಂದ ಕೆಂಪೇರಿದ ಕಣ್ಣುಗಳುಳ್ಳವನೂ ಆದ ಆ ರಾಕ್ಷಸನನ್ನು ಕಂಡು ಭಯದಿಂದ ನಡುಗುವ ದೇಹಗಳುಳ್ಳವರಾದರು.

೧೧೫. "ತಾಯಿಯೆ! ತಂದೆಯೆ! ನಮ್ಮನ್ನು ಕಾಪಾಡಿರಿ. ಎಲೈ ವಿಧಿಯೆ! ಅನಾಥರಾಗಿರುವ ನಮ್ಮಲ್ಲಿ ಇವನು ಮಾಡಲಾರಂಭಿಸಿರುವ ಕ್ರೂರಕರ್ಮವು ನೆರವೇರದಂತೆ ಅನುಗ್ರಹಿಸು.

೧೧೬-೧೧೭. ಅಯ್ಯೋ ದೈವವೆ! ಪಾಪಸಂಬಂಧವಾದ ಮಾತನ್ನು ಸಹ ಮನಸ್ಸಿನಲ್ಲಿ ಎಂದೂ ಯೋಚಿಸದಿರುವ ಮಂದಭಾಗ್ಯೆಯರಾದ ನಾವು ಮಾಡಿದ ಪಾತಕವಾದರೂ ಏನು? ಬಾಲ್ಯದಲ್ಲಿ ಆಡಿದ ಆಟಪಾಟಗಳನ್ನೂ, ರತ್ನೇಶ್ವರನ ಪೂಜೆಯನ್ನೂ, ತಂದೆಯ ಅಧೀನದಲ್ಲಿದ್ದು ವಿನಯದಿಂದ ವ್ಯವಹರಿಸುವುದನ್ನೂ ಬಿಟ್ಟರೆ ನಮಗೆ ಬೇರೆ ಯಾವುದೊಂದೂ ತಿಳಿದಿಲ್ಲವು.

೧೧೮. ನಾವು ಅಧೋಲೋಕಗಳಿಗೆ ಸೆಳೆಯಲ್ಪಡುತ್ತಿರುವವರೂ, ದೀನರೂ, ಅನಾಥರೂ ಆಗಿರುವೆವು. ಶಿವನೆ! ರತ್ನೇಶ್ವರನೆ! ಸರ್ವವ್ಯಾಪಿಯೆ! ರಕ್ಷಣ ವನ್ನಪೇಕ್ಷಿಸುತ್ತಿರುವ ಬಾಲಿಕೆಯರಾದ ನಮ್ಮನ್ನು ಇಲ್ಲಿ ರಕ್ಷಿಸುವವರು ಯಾರಿರುವರು?

ಇತ್ಥಂ ಗಂಧರ್ವತನಯಾ ವಿಲಪಂತೀಃ ಕೃಪಾತುರಂ ।
ಶುಶ್ರಾವ ನಾಗರಾಜೋಽಸೌ ರತ್ನಚೂಡೋ ಮಹಾಮನಾಃ ॥ ೧೧೯ ॥
ಕೋಽಸೌ ಮತ್ಸ್ವಾಮಿನೋ ನಾಮ ರತ್ನೇಶಸ್ಯ ಮಹೇಶಿತುಃ ।
ಲಿಂಗರಾಜಸ್ಯ ಗೃಹ್ಣಾತಿ ಕರ್ಮಬಂಧನಭೇದಿನಃ ॥ ೧೨೦ ॥
ಪುನರಪ್ಯಾರ್ತರಾವಂ ಸ ಶ್ರುತ್ವಾ ಬಾಲಾಮುಖೇರಿತಂ ।
ರತ್ನೇಶ ರಕ್ಷ ರಕ್ಷೇತಿ ಗೃಹೀತಾಸ್ತ್ರೋ ವಿನಿರ್ಯಯೌ ॥ ೧೨೧ ॥
ತಂ ವಸಾರಸಪಾನೇನ ಮಹಾಮಾಂಸನಿಷೇವಣಾತ್ ।
ಅತ್ಯಂತೋನ್ಮತ್ತದುಶ್ಚೇಷ್ಟಂ ರತ್ನಚೂಡೋ ನಿರೈಕ್ಷತ ॥ ೧೨೨ ॥
ಅತ್ಯಾಕ್ಷಿಪಚ್ಚ ರೇ ದುಷ್ಟ ಶಿಷ್ಟಕನ್ಯಾಪಕಾರಕ ।
ಮದ್ದೃಷ್ಟಿಗೋಚರಂ ಯಾತಃ ಕ್ವ ಯಾಸ್ಯಸ್ಯದ್ಯ ರೇಽಧಮ ॥ ೧೨೩ ॥
ಮಮ ಬಾಣಹತಪ್ರಾಣಃ ಪ್ರಯಾಣಂ ಕುರು ದುರ್ಮತೇ ।
ಆರ್ತತ್ರಾಣೋದ್ಯತಮತೇರ್ವೈವಸ್ವತಪುರಂ ಪ್ರತಿ ॥ ೧೨೪ ॥

---

೧೧೯. ಈ ವಿಧವಾಗಿ ಕೇಳುವವರಲ್ಲಿ ಕರುಣೆಯನ್ನುಂಟುಮಾಡುವಂತೆ ಪ್ರಲಾಪಗಳನ್ನು ಮಾಡುತ್ತಿರುವ ಗಂಧರ್ವಕನ್ಯೆಯರ ಆರ್ತನಾದವನ್ನು ಉದಾರ ಮನಸ್ಸಿನವನಾದ ರತ್ನಚೂಡನೆಂಬ ನಾಗರಾಜನು ಕೇಳಿದನು.

೧೨೦. ನನ್ನ ಸ್ವಾಮಿಯೂ, ಮಹೇಶ್ವರನೂ, ಲಿಂಗಗಳಲ್ಲಿ ಸರ್ವೋತ್ತಮನೂ, ಭಜಕರ ಕರ್ಮಬಂಧವನ್ನು ಭೇದಿಸುವವನೂ ಆದ ರತ್ನೇಶ್ವರನ ಹೆಸರನ್ನು ಹಿಡಿದು ಕೂಗುತ್ತಿರುವವರು ಯಾರಾಗಿರಬಹುದು ?

೧೨೧. ಪುನಃ ಆ ಬಾಲಿಕೆಯರು "ರತ್ನೇಶ್ವರಾ! ಕಾಪಾಡು, ಕಾಪಾಡು" ಎಂಬುದಾಗಿ ಆರ್ತರಾವವನ್ನು ಮಾಡುತ್ತಿರಲು ಅದನ್ನು ಕೇಳಿ ಆತನು ತನ್ನ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಹೊರಗೆ ಬಂದನು.

೧೨೨. ಪ್ರಾಣಿಗಳ ಹೃದಯರಸದ ಪಾನದಿಂದಲೂ, ಮಹಾಮೃಗಾದಿಗಳ ಮಾಂಸಸೇವನೆಯಿಂದಲೂ, ಅತಿಯಾಗಿ ಉನ್ಮತ್ತನಾಗಿ ಆ ದುಷ್ಟಕಾರ್ಯದಲ್ಲಿ ನಿರತನಾಗಿದ್ದ ಆ ರಾಕ್ಷಸನನ್ನು ರತ್ನಚೂಡನು ನೋಡಿದನು.

೧೨೩. "ಎಲೈ ದುಷ್ಟನೆ! ನೀಚನೆ! ಶಿಷ್ಟರ ಕನ್ಯೆಯರನ್ನು ಅಪಹರಿಸುವವನೆ! ನನ್ನ ದೃಷ್ಟಿಪಥಕ್ಕೆ ಬಿದ್ದೂ ಸಹ ನೀನು ಇಂದು ಎಲ್ಲಿಗೆ ತಪ್ಪಿಸಿಕೊಂಡು ಹೋಗುವೆ?" ಎಂಬುದಾಗಿ ಅವನನ್ನು ಗದರಿಸಿಕೊಂಡನು.

೧೨೪. "ಎಲವೊ ದುರ್ಬುದ್ಧಿಯೆ! ಆರ್ತರನ್ನು ರಕ್ಷಿಸುವುದರಲ್ಲಿ ಉದ್ಯುಕ್ತನಾಗಿರುವ ನನ್ನ ಬಾಣಗಳಿಂದ ಪ್ರಾಣಗಳನ್ನು ತ್ಯಜಿಸಿ ವೈವಸ್ವತನ ಲೋಕವನ್ನು ಕುರಿತು ಪ್ರಯಾಣಮಾಡು.

ರತ್ನೇಶ್ವರಸ್ಯ ಯೈರ್ನಾಮ ಪ್ರಲಯಾಪದ್ಯಪಿ ಸ್ಫುಟಂ ।
ಗೃಹೀತಂ ನ ಭವಾದೃಗ್ಭ್ಯಸ್ತೇಷು ಭೀತಿರ್ಭಯಾತ್ಮಸು ॥ ೧೨೫ ॥
ರತ್ನೇಶ್ವರಮಹಾನಾಮಕೃತತ್ರಾಣಾಸ್ತು ಯೇ ನರಾಃ ।
ತೇಷಾಂ ಜನ್ಮಜರಾವ್ಯಾಧಿಕಲಿಕಾಲಭಯಂ ಕುತಃ ॥ ೧೨೬ ॥
ಇತ್ಯುಕ್ತ್ವಾ ತಾ ಭಯತ್ರಸ್ತಾಸ್ತಸ್ಮುಖಪ್ರಹಿತೇಕ್ಷಣಾಃ ।
ವ್ಯಾಘ್ರಘ್ರಾತಾ ಇವ ಮೃಗೀಸ್ಸರ್ಭೈಷೀಷ್ಟೇತ್ಯುವಾಚ ಸಃ ॥ ೧೨೭ ॥
ಇತ್ಯಾಶ್ವಾಸ್ಯಾಥ ಗಂಧರ್ವೀಃ ಸ ವೈ ಭುಜಗರಾಜಜಃ ।
ಆಕರ್ಣಪೂರ್ಣಮಾಕೃಷ್ಯ ಕೋದಂಡಂ ಪ್ರಾಹಿಣೋಚ್ಛರಂ ॥ ೧೨೮ ॥
ಸೋಽಪಿ ಕ್ರುದ್ಧೋ ದನುಜರಾಟ್ ಪದಾಸ್ಪೃಷ್ಟಭುಜಂಗವತ್ ।
ಆವಿಧ್ಯ ಕಾಲದಂಡಾಭಂ ಪರಿಘಂ ವ್ಯಸೃಜನ್ಮಹತ್ ॥ ೧೨೯ ॥
ಹೃದಿ ರತ್ನೇಶ್ವರಂ ಲಿಂಗಂ ಯಸ್ಯ ಸಂಯುಗ್ನಿಜೃಂಭತೇ ।
ಅಲಾತದಂಡವತ್ತಸ್ಮಿನ್ಕಾಲದಂಡೋಽಪಿ ಜಾಯತೇ ॥ ೧೩೦ ॥

---

೧೨೫. ಯಾವ ಜನರು ಭಯದಿಂದ ಕೂಡಿದ ಅಂತಃಕರಣದಿಂದ ರತ್ನೇಶ್ವರನ ಹೆಸರನ್ನು ಜಪಿಸುತ್ತಿರುವರೊ, ಅವರಿಗೆ ಪ್ರಳಯದ ಆಪತ್ತಿನಲ್ಲಿಯೂ ಸಹ ನಿನ್ನಂತಹರಿಂದ ಭಯವುಂಟಾಗಲಾರದೆಂಬುದು ಸ್ಪಷ್ಟವು.

೧೨೬. ರತ್ನೇಶ್ವರನ ದಿವ್ಯನಾಮವನ್ನುಚ್ಚರಿಸಿ ಯಾವ ಮಾನವರು ಅದನ್ನೇ ಕವಚವನ್ನಾಗಿ ತೊಟ್ಟಿರುವರೊ, ಅವರಿಗೆ ಜನನ, ಮುಪ್ಪು, ರೋಗ, ಕಲಿಯ ಆವಿರ್ಭಾವ ಮುಂತಾದುವುಗಳ ಭಯವೆಲ್ಲಿಯದು ?

೧೨೭. ಇತೆಂದು ಹೇಳಿ, ಭಯದಿಂದ ನಡುಗುತ್ತ ಹುಲಿಯಿಂದ ವಾಸನೆ ಹಿಡಿಯಲ್ಪಟ್ಟ ಜಿಂಕೆಗಳಂತೆ ಚಪಲನೇತ್ರಗಳಿಂದ ತನ್ನ ಮುಖವನ್ನೇ ನೋಡುತ್ತಿರುವ ಆ ಕನ್ಯೆಯರನ್ನು ಕುರಿತು ರತ್ನಚೂಡನು, "ಭಯಪಡಬೇಡಿರಿ" ಎಂದು ಧೈರ್ಯವನ್ನು ಹೇಳಿದನು.

೧೨೮. ಅವರಿಗೆ ಅಭಯವನ್ನಿತ್ತು ನಾಗರಾಜಪುತ್ರನಾದ ಆತನು ತನ್ನ ಧನುವನ್ನು ತೆಗೆದುಕೊಂಡು ಹೆದೆಯೇರಿಸಿ ಬಾಣವನ್ನು ಸೇರಿಸಿ ಕಿವಿಯವರೆಗೂ ಸೆಳೆದು ಆ ದಾನವನಿಗೆ ಗುರಿಯಿಟ್ಟು ಹೊಡೆದನು.

೧೨೯. ಆ ರಾಕ್ಷಸನೂ ಕಾಲಿನಿಂದ ತುಳಿಯಲ್ಪಟ್ಟ ಸರ್ಪದಂತೆ ಕೋಪಗೊಂಡು ಯಮದಂಡಕ್ಕೆ ಸಮಾನವೆನಿಸಿದ ಮಹಾಪರಿಘವೊಂದನ್ನು ಗಿರ್ರನೆ ತಿರುಗಿಸಿ ರತ್ನಚೂಡನ ಮೇಲೆ ಪ್ರಯೋಗಿಸಿದನು.

೧೩೦. ಯಾವನ ಹೃದಯದಲ್ಲಿ ರತ್ನೇಶ್ವರಲಿಂಗವು ಚೆನ್ನಾಗಿ ಶೋಭಿಸುತ್ತಿರುವುದೊ, ಅವನಲ್ಲಿ ಕಾಲಯಮನ ದಂಡವೂ ಸಹ ತುಚ್ಛವಾದ ಕೊಳ್ಳಿಯ ಕೋಲಿನಂತೆ ಗತಸತ್ತ್ವವಾಗುವುದು.

ಅಂತರೇವ ಸ ಚಿಚ್ಛೇದ ಪರಿಘಂ ಸ್ವಮಹೇಷುಭಿಃ ।
ದುರ್ವೃತ್ತಸ್ಯ ಯಥೇಹಾಯುರ್ವಿಚ್ಛಿದ್ಯೇತಾಂತರೈವ ಹಿ ॥ ೧೩೧ ॥
ತತೋಽಸ್ಯ ಬಾಣಂ ಚಿಕ್ಷೇಪ ಕಾಲಾನಲಸಮಪ್ರಭಂ ।
ಸ ಬಾಣಸ್ತಸ್ಯ ಹೃದಯಂ ಪ್ರವಿಶ್ಯ ಪ್ರಗವೇಷ್ಯ ಚ ॥ ೧೩೨ ॥
ಪ್ರಾಣಾನಸ್ಯ ವಿನಿರ್ವಾಪ್ಯ ಸ್ವಯಂ ತೂಣಮಗಾತ್ಪುನಃ ।
ಹೃದಿಸ್ಥಂ ತಸ್ಯ ದೌರಾತ್ಮ್ಯಂ ಸರ್ವಾಂ ವಿಜ್ಞಾಯ ತತ್ತ್ವತಃ ॥ ೧೩೩ ॥
ದಿಗಂಗನಾಪುರಃ ಖ್ಯಾತುಮಿವ ನಾಗಾಶುಗೋಽ ಗತಃ ॥ ೧೩೪ ॥
ಅನ್ಯಾಯೋಪಾರ್ಜಿತೈರ್ದ್ರವ್ಯೈರ್ಯಃ ಸುಖಂ ಭೋಕ್ತುಮಿಚ್ಛತಿ ।
ತಾನಿ ದ್ರವ್ಯಾಣಿ ಯಾಂತ್ಯೇವ ಸಪ್ರಾಣಾನಿ ಕುತಃ ಸುಖಂ ॥ ೧೩೫ ॥
ಇತಿ ತಂ ದಾನವಂ ಹತ್ವಾ ನಾಗರಾಜೋಽ ಮಹಾಬಲೀ ।
ಪ್ರತ್ಯುವಾಚಾಥ ತಾಃ ಕನ್ಯಾಃ ಕಾ ಯೂಯಂ ಕಸ್ಯನಾತ್ಮಜಾಃ ॥ ೧೩೬ ॥
ದುರಾತ್ಮನಾ ಕುತೋಽನೇನ ಸಂಗತಾ ದನುಜನ್ಮನಾ ।
ಕ್ವ ವಾ ರತ್ನೇಶ್ವರಂ ಲಿಂಗಂ ಭವತೀಭಿರ್ವಿಲೋಕಿತಂ ॥ ೧೩೭ ॥

---

೧೩೧. ಪುರುಷನ ಪೂರ್ಣಾಯುರ್ದಾಯವಾದ ನೂರು ವರ್ಷಗಳಿಗೆ ಮಧ್ಯದಲ್ಲಿಯೇ ಯಮನು ದುಷ್ಕರ್ಮಿಯ ಜೀವನವನ್ನು ಕೊನೆಗಾಣಿಸುವಂತೆ ರತ್ನಚೂಡನು ಅಂತರಾಳದಲ್ಲಿಯೇ ಆ ಪರಿಘಾಯುಧವನ್ನು ತನ್ನ ಬಾಣಗಳಿಂದ ಕಡಿದುಹಾಕಿದನು.

೧೩೨–೧೩೪. ಬಳಿಕ ಆ ರತ್ನಚೂಡನು ಆತನನ್ನುದ್ದೇಶಿಸಿ ಪ್ರಳಯದ ಬೆಂಕಿಗೆ ಸಮಾನವಾದ ಒಂದು ಬಾಣವನ್ನು ಬಿಟ್ಟನು. ಬಾಣವು ಆ ರಾಕ್ಷಸನ ಹೃದಯವನ್ನು ಪ್ರವೇಶಿಸಿ ಅವನ ಒಂದೊಂದು ಪ್ರಾಣವನ್ನೂ ಹುಡುಕಿ ದೇಹದಿಂದ ಹೊರಡಿಸಿದಂತೆ ತೋರುತ್ತ ಪುನಃ ತನ್ನ ಬತ್ತಳಿಕೆಗೆ ಬಂದು ಸೇರಿಕೊಂಡಿತು. ಆ ನಾಗಾಸ್ತ್ರವಾದರೊ, ಸುಬಾಹುರಾಕ್ಷಸನ ಹೃದಯದಲ್ಲಿದ್ದ ದುಷ್ಟಭಾವವನ್ನು ಸಮೂಲವಾಗಿ ಯಥಾರ್ಥವಾಗಿ ತಿಳಿದು ಅದನ್ನು ದಿಗಂಗನೆಯರ ಮುಂಗಡೆ ವಿಸ್ತರಿಸಿ ಹೇಳಲುಬಂದಂತೆ ಕಾಣುತ್ತಿದ್ದಿತು.

೧೩೫. ಅನ್ಯಾಯದಿಂದಾರ್ಜಿಸಿದ ದ್ರವ್ಯದ ಸಹಾಯದಿಂದ ಯಾವನು ಸುಖಗಳನ್ನು ಪಡೆಯಲಪೇಕ್ಷಿಸುವನೊ, ಅವನ ಐಶ್ವರ್ಯವು ಪ್ರಾಣಗಳನ್ನೂ ಅಪಹರಿಸಿಕೊಂಡು ಹೋಗುತ್ತದೆಯಲ್ಲದೆ ಅವನಿಗೆ ಸುಖವೆತ್ತಣದು ?

೧೩೬. ಈ ರೀತಿಯಿಂದ ಆ ದಾನವನನ್ನು ಸಂಹರಿಸಿ ಮಹಾಬಲಶಾಲಿಯಾದ ಆ ನಾಗರಾಜನು ಆ ಕನ್ಯೆಯರನ್ನು ಕುರಿತು ಪ್ರಶ್ನೆಮಾಡಿದನು. "ನೀವು ಯಾರು ? ಯಾವಾತನ ಪುತ್ರಿಯರಾಗಿರುವಿರಿ ?

೧೩೭. ದುರಾತ್ಮನಾದ ಈ ರಾಕ್ಷಸನ ಸಂಪರ್ಕವು ನಿಮಗೆ ಹೇಗೆ ಉಂಟಾ

ಯಸ್ಯ ನಾಮಾಕ್ಷರೋಚ್ಚಾರಾದ್ವ್ಯಪೇತಪರಮಾಪದಃ ।
ರಮಾಯಮಾಶು ತದಾಖ್ಯಾತ ಯೇನ ಜಾನಾಮಿ ತತ್ತ್ವತಃ ॥ ೧೩೮ ॥
ಇತಿ ಶ್ರುತ್ವಾ ಗಿರಿಸ್ತಸ್ಯ ನಿತರಾಂ ಪ್ರೇಮನಿರ್ಭರಾಃ ।
ಪರಸ್ಪರಂ ಮುಖಂ ವೀಕ್ಷ್ಯ ಕೋಽಸೌ ಸ್ಯಾದ್ದೃಷ್ಟಪೂರ್ವವತ್ ॥ ೧೩೯ ॥
ಅಕಾರಣಸಖಾ ಕೋಽಸೌ ಪ್ರಾಂತರೇ ಸಮುಪಸ್ಥಿತಃ ।
ನಿಜಪ್ರಾಣಾನ್ಪಣೀಕೃತ್ಯ ಯೇನ ತ್ರಾತಾಃ ಸ್ಮ ಬಾಲಿಕಾಃ ॥ ೧೪೦ ॥
ಅಸ್ಯ ಸಂದರ್ಶನಾದೇವ ಸ್ವಭಾವಚಪಲಾನ್ಯಪಿ ।
ಮಂಥರಾಣೀಂದ್ರಿಯಾಣಿ ಸ್ಯುಃ ಪರಿಪೀಯ ಸುಧಾಮಿವ ॥ ೧೪೧ ॥
ಯಾತುಮನ್ಯತ್ರ ನೋ ನೇತ್ರೇ ಪ್ರೋತ್ಸಹೇತೇ ಯಥಾ ತಥಾ ।
ಅನ್ಯದ್ವಸ್ತ್ವಂತರಂ ಪ್ರೇಕ್ಷ್ಯ ರಮಣೀಯತರಂ ತ್ವಪಿ ॥ ೧೪೨ ॥
ವಚಃ ಪೀಯೂಷಮಾಧುರ್ಯಂ ನಿತರಾಂ ಪ್ರಾಪ್ಯ ನಃ ಶ್ರುತೀ ।
ಶಬ್ದಾಂತರಗ್ರಹಾಪೇಕ್ಷಾಂ ನ ಕುರ್ವೀತೇಽಸ್ವಜನ್ಮನಃ ॥ ೧೪೩ ॥

---

ಯಿತು? ಮತ್ತು ರತ್ನೇಶ್ವರಮಹಾಲಿಂಗವನ್ನು ನೀವು ಯಾವ ಪ್ರದೇಶದಲ್ಲಿ ನೋಡಿರುವಿರಿ.

೧೩೮. ಆತನ ನಾಮದ ಉಚ್ಚಾರಣೆಯಿಂದಲೇ ನಿಮ್ಮ ಭಯಂಕರವಾದ ಸಂಕಟವು ದೂರವಾಯಿತು. ಆದುದರಿಂದ ಈ ವಿಷಯಗಳೆಲ್ಲವೂ ನನಗೆ ಯಥಾರ್ಥವಾಗಿ ತಿಳಿಯುವಂತೆ ಶೀಘ್ರವಾಗಿ ವಿವರಿಸಿರಿ."

೧೩೯. ಇಂತೆಂದ ಆ ರತ್ನಚೂಡನನ್ನು ಕಂಡು ಸಖಿಯರೆಲ್ಲರೂ ಉಕ್ಕುತ್ತಿರುವ ಪ್ರೇಮದಿಂದ ಅಂತಃಕರಣವುಳ್ಳವರಾಗಿ ತಮ್ಮತಮ್ಮಲ್ಲಿಯೇ ಮುಖಗಳನ್ನು ನೋಡಿಕೊಳ್ಳುತ್ತ ಮಾತನಾಡಿಕೊಂಡರು. "ಈತನು ಯಾರಿರಬಹುದು? ಈತನನ್ನು ಹಿಂದೆಲ್ಲಿಯೋ ನೋಡಿದ ನೆನಪಾಗುತ್ತಿರುವುದು.

೧೪೦. ಮಾರ್ಗಮಧ್ಯದಲ್ಲಿ ನಮಗೆ ಸಿಕ್ಕು ನಿಷ್ಕಾರಣವಾಗಿಯೇ ಸಹಾಯವನ್ನು ಮಾಡಿ ಕಾಪಾಡಿದ ಈತನು ಯಾರು? ತನ್ನ ಪ್ರಾಣಗಳನ್ನೂ ಪಣವಾಗಿಟ್ಟು ಬಾಲಿಕೆಯರಾದ ನಮ್ಮನ್ನು ಸಂರಕ್ಷಿಸಿರುವನು.

೧೪೧. ಸ್ತ್ರೀಯರಿಗೆ ಸ್ವಭಾವವಾದ ಚಾಪಲ್ಯದಿಂದ ಕೂಡಿದ ನಮ್ಮ ಇಂದ್ರಿಯಗಳೂ ಸಹ ಈತನನ್ನು ನೋಡಿದ ಮಾತ್ರದಿಂದಲೇ ಅಮೃತಪಾನವನ್ನು ಮಾಡಿರುವುವೋ, ಎಂಬಂತೆ ಸ್ತಬ್ಧಗಳಾಗಿರುವುವು.

೧೪೨. ಅತ್ಯಂತ ರಮಣೀಯವಾದ ಇತರ ವಸ್ತುವನ್ನು ನೋಡಿದರೂ ನಮ್ಮ ಕಣ್ಣುಗಳು ಹೇಗೆ ಚಂಚಲವಾಗಿರುವುವೊ, ಹಾಗೆ ಈತನನ್ನು ನೋಡಿದ ಮೇಲೆ ಬೇರೆಡೆಗಳಿಗೆ ಹೋಗಲು ನಿರುತ್ಸಾಹಿಗಳಾಗಿರುವುವು.

೧೪೩. ಈತನ ಮಾತುಗಳೆಂಬ ಅಮೃತದ ಮಾಧುರ್ಯವನ್ನು ಸವಿದ

ಅಪ್ನುತಃ ಪಂಗುತಾಮೇತೌ ಪಾದೌ ನಶ್ಚಂಚಲಾವಪಿ ।
ಅಮುಂ ಯುವಾನಮಾಲೋಕ್ಯ ಚೋರಂ ನಃ ಸನ್ಮನೋಮಣೇಃ ॥೧೮೮॥
ಇತಿ ಬ್ರುವಂತ್ಯಸ್ತಾ ಬಾಲಾಃ ಪರಸ್ಪರಮನುಲ್ಬಣಂ ।
ದೃಷ್ಟ್ವಾಪಿ ಚಿತ್ರಮಧ್ಯಸ್ಥಂ ವಿವಿದುಸ್ತನ್ನ ಬಾಲಿಕಾಃ ॥ ೧೮೫ ॥
ಅತೀವ ಭೀಷಣಾಕಾರದನುಜಸ್ಯಾತಿಸಾಧ್ವಸಾತ್ ।
ಅಂಧೀಭೂತೇಕ್ಷಣಸ್ತಂ ನಾಜ್ಞಾಸಿತುರ್ಹರಿಣೇಕ್ಷಣಾಃ ॥ ೧೮೬ ॥
ಊಚುಶ್ಚ ತಂ ಯುವಾನಂ ತಾ ನಿಜಜೀವಿತರಕ್ಷಿಣಂ ।
ಯದಂಗ ಭವತಾ ಪೃಷ್ಟಂ ಸ್ನೇಹನಿರ್ಭರಚೇತಸಾ ॥ ೧೮೭ ॥
ತದಾಚಕ್ಷ್ಮಹೇ ಸರ್ವಮವಧೇಹಿ ಕ್ಷಣಂ ಮನಃ ।
ಇಯಂ ಗಂಧರ್ವರಾಜಸ್ಯ ವಸುಭೂತೇಸ್ತನೂದ್ಭವಾ ॥ ೧೮೮ ॥
ಕನ್ಯಾ ರತ್ನಾವಲೀ ನಾಮ ಗುಣರತ್ನಮಹಾಖನಿಃ ।
ವಯಂ ವಯಸ್ಯಾ ಏತಸ್ಯಾಶ್ಛಾಯೇವಾನುಗತಾಃ ಸದಾ ॥ ೧೮೯ ॥

---

ನಮ್ಮ ಶ್ರೋತ್ರೇಂದ್ರಿಯಗಳು, ಜನ್ಮಸ್ಥಳವಾದ ಆಕಾಶಕ್ಕೆ ಶಬ್ದವೇ ಸಹಜಗುಣವಾಗಿದ್ದರೂ, ಇತರ ಶಬ್ದಗಳನ್ನು ಮಾತ್ರ ಕೇಳಲು ಅಪೇಕ್ಷೆಪಡುವುದಿಲ್ಲ.

೧೮೮. ನಮ್ಮ ಮನಸ್ಸುಗಳೆಂಬ ಉತ್ತಮರತ್ನಗಳನ್ನಪಹರಿಸುತ್ತಿರುವ ಈ ಯುವಕನನ್ನು ನೋಡಿದಮೇಲೆ ಚಂಚಲಗಳಾದ ನಮ್ಮ ಪಾದಗಳೂ ಕುಂಟುತನವನ್ನು ಹೊಂದಿದಂತಿರುವುವು.''

೧೮೫. ಇಂತೆಂದು ತಮ್ಮ ತಮ್ಮಲ್ಲಿಯೇ ಸಾವಧಾನವಾಗಿ ಮಾತನಾಡಿಕೊಳ್ಳುತ್ತಿದ್ದರೂ ಆ ಬಾಲೆಯರು ಚಿತ್ರದಲ್ಲಿ ನೋಡಿದ್ದ ಆತನ ಸ್ವರೂಪವನ್ನು ಜ್ಞಾಪಿಸಿಕೊಳ್ಳಲಾರದಿದ್ದರು.

೧೮೬. ಜಿಂಕೆಯ ಕಣ್ಣುಗಳಂತೆ ಚಪಲ ನೇತ್ರಗಳುಳ್ಳ ಅವರು ಭಯಂಕರ ಸ್ವರೂಪನಾದ ಆ ರಾಕ್ಷಸನ ಮಹಾಸಾಹಸದಿಂದ ಕತ್ತಲುಕವಿದ ಕಣ್ಣುಗಳಿಂದ ಆತನನ್ನು ತಿಳಿಯಲಿಲ್ಲ.

೧೮೭–೧೯೯. ತಮ್ಮ ಪ್ರಾಣಗಳನ್ನು ಸಂರಕ್ಷಿಸಿದ ಆ ಯುವಕನನ್ನು ಕುರಿತು ಇಂತೆಂದು ಹೇಳತೊಡಗಿದರು. ''ಅಯ್ಯಾ! ನಮ್ಮಲ್ಲಿನ ಸ್ನೇಹದಿಂದ ತುಂಬಿದ ಅಂತಃಕರಣವುಳ್ಳವನಾದ ನೀನು ಯಾವ ವಿಷಯವನ್ನು ಕುರಿತು ಪ್ರಶ್ನೆಮಾಡಿದೆಯೊ, ಅದೆಲ್ಲವನ್ನೂ ಸಮಗ್ರವಾಗಿ ಹೇಳುವೆವು. ಕ್ಷಣಕಾಲ ಸಮಾಹಿತ ಮನಸ್ಕನಾಗಿ ಕೇಳು. ಈಕೆಯು ಗಂಧರ್ವರಾಜನಾದ ವಸುಭೂತಿಯೆಂಬುವನ ಮಗಳು. ರತ್ನಾವಳಿಯೆಂಬ ಹೆಸರಿನ ಈ ಕನ್ಯೆಯು ಸಕಲ ಸದ್ಗುಣಗಳೆಂಬ ರತ್ನಗಳ ಗಣಿಯೆನಿಸಿರುವಳು. ನಾವು ಈಕೆಯ ಸಖಿಯರು. ಯಾವಾಗಲೂ ನೆರಳಿನಂತೆ ಈಕೆಯೊಡನೆ ಸಂಚರಿಸುತ್ತಿರುವೆವು.

ಆರಭ್ಯ ಬಾಲ್ಯಮಪ್ಯೇಷಾ ಲಿಂಗಂ ರತ್ನೇಶ್ವರಾಭಿಧಂ ।
ಯಾತಿ ಪಿತ್ರಾಪ್ಯನುಜ್ಞಾತಾ ಕಾಶ್ಯಾಮರ್ಚಯಿತುಂ ಸದಾ ॥ ೧೫೦ ॥
ವರೋಽಪಿ ದತ್ತಸ್ತೇನಾಸ್ಯೈ ಪ್ರಸನ್ನೇನಾಥ ಶಂಭುನಾ ।
ಹರಿಷ್ಯತೀತಿ ಯಃ ಸ್ವಪ್ನೇ ಕೌಮಾರಂ ತೇ ಕುಮಾರಿಕೇ ॥ ೧೫೧ ॥
ತವ ನಾಮಸಮಾನಾಖ್ಯಃ ಸ ತೇ ಭರ್ತಾ ಭವಿಷ್ಯತಿ ।
ಯುವಾನಂ ಸ್ವಪ್ನಭೋಕ್ತಾರಂ ಪ್ರಾಪ್ಯಾಪ್ಯೇಷಾ ಸುದುಃಖಿತಾ ॥ ೧೫೨ ॥
ಪುನಸ್ತದ್ವಿರಹೋತ್ಥೇನ ವಹ್ನಿನಾತೀವ ತಾಪಿತಾ ।
ಕಲಾಕೌಶಲ್ಯತೋಽಸ್ಮಾಭಿಃ ಸೋಽಪಿ ಚಿತ್ರೇ ಪ್ರದರ್ಶಿತಃ ॥ ೧೫೩ ॥
ಯಸ್ಯ ನ ಗ್ರಾಮ ನಾಮಾಪಿ ನಾನ್ವಯೋಽಪ್ಯವಬುಧ್ಯತೇ ।
ತಂ ದೃಷ್ಟ್ವಾ ಚಿತ್ರಲಿಖಿತಮಪ್ಯೇಷಾ ಜೀವಿತಾ ಪುನಃ ॥ ೧೫೪ ॥
ತತೋ ರತ್ನೇಶ್ವರಂ ನತ್ವಾ ಸ್ವಗೃಹಾಯೋತ್ಸುಕಾಭವತ್ ।
ಯಾಂತೀಸ್ತತೋಽನಯಾ ಸಾರ್ಧಂ ಪ್ರಾಂತರೇ ಗಗನಾಧ್ವನಿ ॥ ೧೫೫ ॥
ಅತರ್ಕಿತಾಗಮಶ್ಚಾಸ್ಮಾನ್ಧೃತ್ವಾ ಪಾತಾಲಮಾವಿಶತ್ ।
ಅನಂತರಂ ಭವಾನೇವ ತಂ ವೇತ್ತಿ ದನುಜಾಧಮಂ ॥ ೧೫೬ ॥

---

೧೫೦. ಈಕೆಯು, ಬಾಲ್ಯಮೊದಲುಗೊಂಡು ತಂದೆಯ ಅನುಜ್ಞೆಯನ್ನನುಸರಿಸಿ ಕಾಶಿಯಲ್ಲಿರುವ ರತ್ನೇಶ್ವರನೆಂಬ ಮಹಾಲಿಂಗವನ್ನು ಪೂಜಿಸುವುದಕ್ಕಾಗಿ ನಿತ್ಯವೂ ಅಲ್ಲಿಗೆ ಹೋಗುತ್ತಿರುವಳು.

೧೫೧–೧೫೨. ಈಕೆಯ ಪೂಜೆಯಿಂದ ಪ್ರಸನ್ನನಾದ ಪರಮೇಶ್ವರನು ಈಕೆಗೆ "ಎಲೌ ಕನ್ಯೆಯೆ! ಸ್ವಪ್ನದಲ್ಲಿ ನಿನ್ನ ಕನ್ಯಾತ್ವವನ್ನು ಯಾವನು ಹರಣಮಾಡುವನೊ, ನಿನ್ನ ಹೆಸರಿಗೆ ಸಮಾನವಾದ ಹೆಸರುಳ್ಳ ಆತನೇ ನಿನಗೆ ಪತಿಯಾಗುವನು" ಎಂಬುದಾಗಿ ವರವನ್ನೂ ದಯಪಾಲಿಸಿದನು. ಸ್ವಪ್ನದಲ್ಲಿ ಭೋಗವನ್ನು ಕೊಟ್ಟ ಯುವಕನನ್ನು ಹೊಂದಿಯೂ ಈಕೆಯು ಅತ್ಯಂತ ದುಃಖಿತೆಯಾಗಿರುವಳು.

೧೫೩. ಬಳಿಕ ವಿರಹದಿಂದುಂಟಾದ ಪರಿತಾಪವೆಂಬ ಬೆಂಕಿಯಿಂದ ಬಹುವಾಗಿ ಬೆಂದಿರುವಳು. ನಾವು ನಮ್ಮ ಕಲಾಚಾತುರ್ಯದಿಂದ ಆತನ ಚಿತ್ರವನ್ನು ಬರೆದು ತೋರಿಸಿದೆವು.

೧೫೪. ಯಾವ ಪುರುಷನ ವಾಸಸ್ಥಳವಾಗಲಿ, ಹೆಸರಾಗಲಿ, ವಂಶಾವಳಿಯಾಗಲಿ ತಿಳಿಯದಿದ್ದೆವೊ, ಆತನ ರೂಪವನ್ನು ಚಿತ್ರಪಟದಲ್ಲಿ ನೋಡುತ್ತಲೆ ಈಕೆಗೆ ಪುನಃ ಜೀವವು ಬಂದಂತಾಯಿತು.

೧೫೫–೧೫೬. ಬಳಿಕ ಈಕೆಯು ರತ್ನೇಶ್ವರನಿಗೆ ಪ್ರಣಾಮಗಳನ್ನು ಮಾಡಿ ತನ್ನ ಮನೆಗೆ ಹೋಗಲು ಉತ್ಸುಕಳಾದಳು. ನಾವೂ ಸಹ ಈಕೆಯೊಡನೆ ಆಕಾಶಮಾರ್ಗದಲ್ಲಿ ಹೋಗುತ್ತಿರಲು ಮಧ್ಯದಲ್ಲಿಯೇ ತರ್ಕಿಸಲಾಗದ ಬಲಶಾಲಿಯೊಬ್ಬನು

ಅಂಗ ಇತ್ಯೇವ ವೃತ್ತಾಂತೋ ನಿಜೋಽಸ್ಮಾಭಿರುದೀರಿತಃ ।
ಪ್ರಸಾದಂ ಕುರು ಚಾಸ್ಮಾಕಂ ಪುರಃ ಕೋಽಸಿ ಕೃಪಾನಿಧೇ ॥ ೧೫೭ ॥
ಯದಾಪ್ರಭೃತಿ ಚಾಸ್ಮಾಭಿಃ ಸ ದೃಷ್ಟೋ ದುಷ್ಟದಾನವಃ ।
ತದಾಪ್ರಭೃತಿ ನೋ ನೇತ್ರೇ ವಿದ್ಯುತೇವ ಹತಪ್ರಭೇ ॥ ೧೫೮ ॥
ಕಾಂದಿಶೀಕಾ ಭಯತ್ರಾತರ್ನ ವಿದ್ಮಃ ಕಿಂಚಿದೇವ ಹಿ ।
ಕ್ವ ವಯಂ ಕಾ ವಯಂ ಕಸ್ತ್ವಂ ಕಿಂ ಜಾತಂ ಕಿಂ ಭವಿಷ್ಯತಿ ॥ ೧೫೯ ॥
ನಿಶಮ್ಯೇತಿ ಸ ಪುಣ್ಯಾತ್ಮಾ ನಾಗರಾಜಕುಮಾರಕಃ ।
ಆಶ್ವಾಸಯಿತ್ವಾ ಭಯತ್ರಸ್ತಾಃ ಪ್ರೋವಾಚೇದಂ ಚ ಪುಣ್ಯಧೀಃ ॥ ೧೬೦ ॥
ಮಯಾ ಸಹ ಸಮಾಯಾತ ರತ್ನೇಶಂ ದರ್ಶಯಾಮಿ ವಃ ।
ಇತ್ಯಾಹೂಯ ಸ ತಾ ನಿನ್ಯೇ ಕ್ರೀಡಾವಾಪೀಂ ಸುಖೋದಕಾಂ ॥ ೧೬೧ ॥
ವಿಚಿತ್ರಮಣಿಸೋಪಾನಾಂ ಹಂಸಕೋಕಕೃತಾರವಾಂ ।
ಕವೀನಾಂ ವಾಸಿತವ್ಯಾಜಾತ್ಸ್ವಾಗತಂ ಕುರ್ವತೀಮಿವ ॥ ೧೬೨ ॥

---

ನಮ್ಮನ್ನು ಎತ್ತಿಕೊಂಡು ಪಾತಾಲವನ್ನು ಕುರಿತು ಹೋಗುತ್ತಿದ್ದನು. ಬಳಿಕ ನಡೆದುದೆಲ್ಲವನ್ನೂ, ಆ ರಾಕ್ಷಸಾಧಮನು ಯಾರೆಂಬುದನ್ನೂ ನೀನೇ ತಿಳಿದಿರುವೆ.

೧೫೭. ಸೌಮ್ಯನಾದ ಓ ಕೃಪಾಸಮುದ್ರನೆ! ಇಂತು ನಮ್ಮ ವೃತ್ತಾಂತವೆಲ್ಲವನ್ನೂ ಯಥಾರ್ಥವಾಗಿ ತಿಳಿಸಿರುವೆವು. ನಮ್ಮಲ್ಲಿ ಪ್ರಸನ್ನನಾಗು. ನಮ್ಮ ಮುಂದೆ ನಿಂತಿರುವ ನೀನು ಯಾರಾಗಿರುವೆ?

೧೫೮. ಯಾವಕಾಲದಲ್ಲಿ ನಾವು ಆ ದುಷ್ಟರಾಕ್ಷಸನನ್ನು ನೋಡಿದೆವೊ, ಆ ಕ್ಷಣದಿಂದ ನಮ್ಮ ನೇತ್ರಗಳು ಮಿಂಚಿನ ಬಳ್ಳಿಯನ್ನು ಕಂಡ ಕಣ್ಣುಗಳಂತೆ ಜ್ಯೋತಿಃಶೂನ್ಯವಾಗಿರುವುವು.

೧೫೯. ಭಯದಿಂದ ಸಂರಕ್ಷಿಸಿದ ಮಹಾತ್ಮನೆ! ಹೆದರಿಕೊಂಡು ಓಡಲೆಳಸಿದ ನಾವು ಎಲ್ಲಿರುವೆವೆಂಬುದನ್ನಾಗಲಿ, ಯಾರೆಂಬುದನ್ನಾಗಲಿ, ನೀನು ಯಾರೆಂಬುದನ್ನಾಗಲಿ, ನಡೆದುದೇನೆಂಬುದನ್ನಾಗಲಿ, ಮುಂದೇನಾಗುವುದೆಂಬುದನ್ನಾಗಲಿ ಒಂದನ್ನೂ ತಿಳಿಯೆವು.''

೧೬೦. ಪುಣ್ಯಾತ್ಮನೂ, ಶುಭಬುದ್ಧಿಯೂ ಆದ ಆ ನಾಗರಾಜಪುತ್ರನು ಆ ಕನ್ಯಕೆಯರಾಡಿದ ಮಾತುಗಳನ್ನು ಕೇಳಿ ಭಯದಿಂದ ನಡುಗುತ್ತಿರುವ ಅವರನ್ನು ಸಮಾಧಾನಗೊಳಿಸಿ ಇಂತೆಂದು ಹೇಳತೊಡಗಿದನು.

೧೬೧. ''ಎಲೌ ಕನ್ಯೆಯರೆ! ನನ್ನೊಡನೆ ಬನ್ನಿರಿ. ನಿಮಗೆ ರತ್ನೇಶ್ವರನ ದರ್ಶನವನ್ನು ಮಾಡಿಸುವೆನು.'' ಇಂತೆಂದು ಕರೆದು ಅವನು ಅವರನ್ನು ಸುಖೋಷ್ಣವಾದ ಉದಕದಿಂದ ಭರಿತವಾದ ಉದ್ಯಾನದ ಸರೋವರಕ್ಕೆ ಕರೆದುಕೊಂಡು ಹೋದನು.

೧೬೨. ಆ ಸರೋವರವು ವಿಚಿತ್ರಗಳಾದ ಮಣಿಗಳಿಂದ ಮಾಡಿದ ಸೋಪಾನ

ತತ್ರ ತೇನಾಭ್ಯನುಜ್ಞಾತಾಃ ಕ್ರೀಡಾವಾಪ್ಯಾಂ ನಿಮಜ್ಜ್ಯ ತಾಃ ।
ಸಚೈಲಪುಷ್ಪಾಭರಣಾಃ ಪ್ರೋನ್ಮಮಜ್ಜುಸ್ತತಃ ಪುನಃ ॥ ೧೬೩ ॥
ಬಹಿರ್ನಿರ್ಗತ್ಯ ಗಂಧರ್ವ್ಯಃ ಪಶ್ಯಂತಃ ಸ್ಥಗಿತಾ ಇವ ।
ರತ್ನೇಶಾಲಯಮಾಲೋಕ್ಯ ಕಾಲರಾಜಸಮೀಪತಃ ॥ ೧೬೪ ॥
ಪರಸ್ಪರಂ ತತಃ ಪ್ರೋಚುರ್ಗಂಧರ್ವ್ಯೋ ವಿಸ್ಮಿತಾ ಇವ ।
ಸ್ವಪ್ನೋಽಯಂ ಕಿಂ ನು ವಾ ಸತ್ಯಂ ಖೇಲೋ ರತ್ನೇಶ್ವರಸ್ಯ ವಾ ॥ ೧೬೫ ॥
ವಯಮೇವ ಹಿ ವಾ ಭ್ರಾಂತಾ ಗಂಧರ್ವ್ಯೋ ನ ವಯಂ ಕಿಮು ।
ಕಿಮೇತನ್ನೈವ ಜಾನೀಮ ಐಂದ್ರಜಾಲಿಕಖೇಲವತ್ ॥ ೧೬೬ ॥
ವಿಷೋತ್ತರವಹಾ ಗಂಗಾ ಸ್ಫುಟಮೇವ ಭವೇದಿಹ ।
ಶಂಖಚೂಡಸ್ಯ ವಾಪ್ಯೇಷಾ ಶಂಖಚೂಡಾಲಯಸ್ತ್ವಸೌ ॥ ೧೬೭ ॥
ಏತತ್ಪಂಚನದಂ ತೀರ್ಥಮೇಷ ವಾಗೀಶ್ವರಾಲಯಃ ।
ಯಸ್ಯ ಸಂದರ್ಶನಾದೇವ ವಾಗ್ವಿಭೂತಿರ್ವಿಜೃಂಭತೇ ॥ ೧೬೮ ॥

---

ಗಳಿಂದಲೂ, ಹಂಸ, ಚಕ್ರವಾಕ ಪಕ್ಷಿಗಳ ಧ್ವನಿಯಿಂದಲೂ, ಇತರ ಜಲಚರ ಪಕ್ಷಿಗಳ ಕೂಜಿತಗಳಿಂದಲೂ ತಮ್ಮನ್ನು ಆಹ್ವಾನಿಸುತ್ತಿರುವಂತೆ ತೋರುತ್ತಿದ್ದಿತು.

೧೬೩. ಅಲ್ಲಿ ಆತನ ಅನುಜ್ಞೆಯನ್ನು ಪಡೆದು ಅವರೆಲ್ಲರೂ ಇದ್ದಂತೆಯೇ ಬಟ್ಟೆಗಳು, ಹೂವುಗಳು, ಆಭರಣಗಳೊಡನೆಯೇ ಆ ಕ್ರೀಡಾಸರೋವರದ ನೀರಿನಲ್ಲಿ ಮುಳುಗಿ ಪುನಃ ಮೇಲಕ್ಕೆದ್ದು ಬಂದರು.

೧೬೪. ಆ ಗಂಧರ್ವಕನ್ಯೆಯರು ಮೇಲಕ್ಕೆ ಬರುತ್ತಲೇ ಕಾಲರಾಜನ ಸಮೀಪದಲ್ಲಿ ಮೆರೆಯುತ್ತಿರುವ ರತ್ನೇಶ್ವರನ ದೇವಾಲಯವನ್ನು ಕಂಡು ಚಿತ್ರದ ಗೊಂಬೆಗಳಂತೆ ನಿಶ್ಚೇಷ್ಟರಾದರು.

೧೬೫. ಆ ಸ್ತ್ರೀಯರು ತಮ್ಮ ತಮ್ಮಲ್ಲಿಯೇ ವಿಸ್ಮಿತರಾಗಿ ಹೇಳಿಕೊಳ್ಳ ತೊಡಗಿದರು. "ನಾವು ನೋಡಿದುದು ಸ್ವಪ್ನವೊ? ಅಥವಾ ಸತ್ಯವೊ? ಅಲ್ಲದೆ ರತ್ನೇಶ್ವರನ ಕ್ರೀಡಾವಿಶೇಷವೊ?

೧೬೬. ನಾವೇ ಭ್ರಾಂತಿಗೊಂಡಿರುವೆವೊ? ಅಥವಾ ನಾವು ನಿಜವಾಗಿಯೂ ಗಂಧರ್ವ ಕನ್ಯೆಯರೇ ಅಲ್ಲವೇನು? ಇಂದ್ರಜಾಲಿಕನು ತೋರಿಸುವ ಮಾಯೆಯಂತಿರುವ ಇದೆಲ್ಲವೂ ಏನೆಂಬುದನ್ನೇ ತಿಳಿಯಲಾರದವರಾಗಿರುವೆವಲ್ಲ!

೧೬೭. ನಮ್ಮೆದುರಿನಲ್ಲಿರುವುದೇ ಉತ್ತರವಾಹಿನಿಯಾದ ಗಂಗಾನದಿಯು ಸ್ಫುಟವಾಗಿದೆ. ಇದೇ ಶಂಖಚೂಡತೀರ್ಥವು. ಅದೇ ಶಂಖಚೂಡೇಶ್ವರನ ದೇವಾಲಯವು.

೧೬೮. ಇದೇ ಪಂಚನದತೀರ್ಥವು. ಇಲ್ಲಿರುವುದೇ ವಾಗೀಶ್ವರಾಲಯವು. ಇವರ ಸಂದರ್ಶನದಿಂದಲೇ ವಾಗ್ವೈಭವವು ಮನುಷ್ಯನಲ್ಲಿ ವಿಜೃಂಭಿಸುವುದು.

ಶಂಖಚೂಡೇಶ್ವರಶ್ಚೈಷ ಶಂಖಚೂಡಪ್ರತಿಷ್ಠಿತಃ ।
ಯಸ್ಯ ಸಂದರ್ಶನಾತ್ಪುಂಸಾಂ ನ ಭಯಂ ಕಾಲಸರ್ಪಜಂ ॥ ೧೯೯ ॥
ಏಷಾ ಮಂದಾಕಿನೀನಾಮ ದೀರ್ಘಿಕಾ ಪುಣ್ಯತೋಯಭೃತ್ ।
ಯಸ್ಯಾಂ ಕೃತೋದಕಾ ಮರ್ತ್ಯಾ ಮರ್ತ್ಯಲೋಕೇ ವಿಶಂತಿ ನ ॥ ೧೨೦ ॥
ಅಸಾವಾಶಾಪುರೀ ದೇವೀ ಯಾ ಸ್ತುತಾ ತ್ರಿಪುರಾರಿಣಾ ।
ತ್ರಿಪುರಂ ಜಾತುಕಾಮೇನ ಮಂದಾಕಿನ್ಯಾಸ್ತಟೇ ಶುಭೇ ॥ ೧೨೧ ॥
ಯಾದ್ಯಾಪಿ ಪೂಜಿತಾ ಮರ್ತ್ಯೈರಾಶಾಂ ಪೂರಯತೇಽರ್ಥಿನಾಂ ।
ಮಂದಾಕಿನ್ಯಾಃ ಪ್ರತೀಚ್ಯಾಂ ತು ಏಷ ಸಿದ್ಧ್ಯಷ್ಟಕೇಶ್ವರಃ ॥ ೧೨೨ ॥
ಭವೇದ್ಯಸ್ಯ ಸಪರ್ಯಾತೋ ಗೃಹೇ ಸಿದ್ಧ್ಯಷ್ಟಕಂ ಸ್ಫುಟಂ ।
ಕುಂಡಂ ಸಿದ್ಧ್ಯಷ್ಟಕಾಖ್ಯಂ ಚ ತತ್ರೈವ ವಿರಜೋದಕಂ ॥ ೧೨೩ ॥
ಯತ್ರ ಸ್ನಾತ್ವಾ ಕೃತಶ್ರಾದ್ಧೋ ವಿರಜಸ್ಕೋ ದಿವಂ ವ್ರಜೇತ್ ।
ಮೂರ್ತ್ಯಸ್ತಾಃ ಸಿದ್ಧಯಶ್ಚಾಷ್ಟೌ ಯಾಃ ಕಾಶ್ಯಾಂ ಸರ್ವಸಿದ್ಧಿದಾಃ ॥ ೧೨೪ ॥

---

೧೧೯. ಶಂಖಚೂಡನಿಂದ ಪ್ರತಿಷ್ಠಾಪಿತವಾದ ಶಂಖಚೂಡೇಶ್ವರಲಿಂಗವೇ ಇದು. ಇದರ ದರ್ಶನದಿಂದ ಮನುಷ್ಯರಿಗೆ ಕಾಳಸರ್ಪಗಳ ಭಯವೆಂದಿಗೂ ಉಂಟಾಗಲಾರದು.

೧೨೦. ಇದೇ ಪುಣ್ಯೋದಕದ ನಿದಾನವಾದ ಮಂದಾಕಿನಿಯೆಂಬ ಹೆಸರಿನ ನದಿಯು. ಇದರಲ್ಲಿ ಸ್ನಾನಸಂಧ್ಯಾವಂದನಾದಿ ಕಾರ್ಯಗಳನ್ನು ಮಾಡಿದ ಮಾನವರು ಪುನಃ ಮರ್ತ್ಯಲೋಕದಲ್ಲಿ ಪ್ರವೇಶಿಸುವುದಿಲ್ಲ.

೧೨೧. ಪೂರ್ವದಲ್ಲಿ ತ್ರಿಪುರಾಸುರರನ್ನು ನಿಗ್ರಹಿಸುವ ವೇಳೆಯಲ್ಲಿ ಮಹೇಶ್ವರನಿಂದ ಸ್ತೋತ್ರಮಾಡಲ್ಪಟ್ಟ ಆಶಾಪುರೀ ದೇವತೆಯೇ ಪವಿತ್ರವಾದ ಗಂಗಾನದಿಯ ದಡದಲ್ಲಿ ಕಾಣುತ್ತಿರುವುದು.

೧೨೨. ಇಂದಿಗೂ ಅದನ್ನು ಪೂಜಿಸಲು ಮನುಷ್ಯರು ತಮ್ಮ ಅಭಿಲಾಷೆಗಳೆಲ್ಲವನ್ನೂ ಪಡೆಯುವರು. ಮಂದಾಕಿನಿಗೆ ಪಶ್ಚಿಮದಲ್ಲಿರುವ ಈ ಮೂರ್ತಿಯೇ ಅಷ್ಟಸಿದ್ಧೀಶ್ವರನು.

೧೨೩. ಈತನನ್ನು ಸೇವಿಸುವುದರಿಂದ ಮನುಷ್ಯನ ಮನೆಯಲ್ಲಿ ಅಷ್ಟಸಿದ್ಧಿಗಳೂ ತಾಂಡವವಾಡುತ್ತಿರುವುವು. ಇದು ನಿಜವು. ಇಲ್ಲಿಯೇ ನಿರ್ಮಲೋದಕಭರಿತವಾದ ಅಷ್ಟಸಿದ್ಧಿಕುಂಡವೂ ಇರುವುದು.

೧೨೪. ಇದರಲ್ಲಿ ಸ್ನಾನವನ್ನು ಮಾಡಲು ಮನುಷ್ಯನು ಸಕಲ ಕಲ್ಮಷಗಳನ್ನೂ ಕಳೆದುಕೊಂಡು, ಪಿತೃಶ್ರಾದ್ಧಗಳನ್ನು ಮಾಡಿ ಸ್ವರ್ಗವನ್ನು ಸೇರುವನು. ಕಾಶಿಯಲ್ಲಿ ಮೂರ್ತಿಗೊಂಡು ನೆಲಸಿರುವ ಅಷ್ಟಸಿದ್ಧಿಗಳೂ ಉಪಾಸಕರಿಗೆ ಸಕಲ ಕಾರ್ಯಗಳಲ್ಲಿ ಸಿದ್ಧಿಯನ್ನು ಕೈಗೂಡಿಸುವರು.

ಸರ್ವಸಿದ್ಧಿಪ್ರದಶ್ಚಾಸೌ ಮಹಾರಾಜವಿನಾಯಕಃ ।
ವಿನಾಯಕಾಃ ಪ್ರಣಶ್ಯಂತಿ ಯಸ್ಮೈ ಪ್ರಣಮತಾಂ ನೃಣಾಂ ॥ ೧೭೫ ॥
ಅಸೌ ಸಿದ್ಧೇಶ್ವರಸ್ಯೋಚ್ಚೈಃ ಪ್ರಾಸಾದಃ ಕಾಂಚನೋಜ್ಜ್ವಲಃ ।
ರತ್ನಧ್ವಜಪತಾಕಾಶ್ಚ ಸಿದ್ಧಿಃ ಸ್ಯಾದ್ಯದ್ವಿಲೋಕನಾತ್ ॥ ೧೭೬ ॥
ಕ್ಷೇತ್ರಸ್ಯ ಮಧ್ಯಮೇ ಭಾಗೇ ಮಧ್ಯಮೇಶ್ವರ ಏಷ ವೈ ।
ಮಧ್ಯಾಧೋಲೋಕಯೋರ್ಮಧ್ಯೇ ನ ವಸೇದ್ಯಸ್ಯ ವೀಕ್ಷಣಾತ್॥ ೧೭೭ ॥
ಮಧ್ಯಮೇಶಂ ಸಮಭ್ಯರ್ಚ್ಯ ನರೋ ಮಧ್ಯಮವಿಷ್ಟಪೇ ।
ಆಸಮುದ್ರಕ್ಷಿತೀಂದ್ರಃ ಸ್ಯಾತ್ತತೋ ಮೋಕ್ಷಂ ಚ ವಿಂದತಿ ॥ ೧೭೮ ॥
ಐರಾವತೇಶ್ವರಂ ಲಿಂಗಂ ತತ್ಪ್ರಾಚ್ಯಾಮಿಷ್ಟಸಿದ್ಧಿಕೃತ್ ।
ದೃಶ್ಯತೇ ಯತ್ಪತಾಕಾಯಾಂ ರಮ್ಯ ಐರಾವತೋ ಗಜಃ ॥ ೧೭೯ ॥
ವೃದ್ಧಕಾಲೇಶ್ವರಸ್ಯೈಷ ಪ್ರಾಸಾದೋ ರತ್ನನಿರ್ಮಿತಃ ।
ಪ್ರತಿದರ್ಶಂ ವಸೇದ್ಯತ್ರ ರಾತ್ರೌ ಚಂದ್ರಃ ಸತಾರಕಃ ॥ ೧೮೦ ॥

---

೧೭೫. ಈತನೇ ಸಕಲಸಿದ್ಧಿಗಳನ್ನು ಕೊಡುವ ಮಹಾರಾಜವಿನಾಯಕನು. ಈತನಿಗೆ ನಮಸ್ಕಾರಗಳನ್ನುಮಾಡುವ ಭಕ್ತರಿಗೆ ಕಾರ್ಯಗಳಲ್ಲಿ ಸಮಸ್ತವಿಘ್ನಗಳೂ ನಾಶವನ್ನು ಹೊಂದುವುವು.

೧೭೬. ಮುಂದೆ ಇರುವುದೇ ಎತ್ತರವಾದ ಚಿನ್ನದಿಂದ ನಿರ್ಮಿತವಾದ ಸಿದ್ಧೇಶ್ವರನ ದೇವಾಲಯವು. ಇವುಗಳೇ ನವರತ್ನಖಚಿತಗಳಾದ ಧ್ವಜಪತಾಕೆಗಳು. ಈ ದೇವಾಲಯದ ಆಲೋಕನಮಾತ್ರದಿಂದಲೇ ಸಿದ್ಧಿಯುಂಟಾಗುವುದು.

೧೭೭. ವಾರಾಣಸೀಕ್ಷೇತ್ರದ ಮಧ್ಯಭಾಗದಲ್ಲಿರುವ ಮಧ್ಯಮೇಶ್ವರನೇ ಈತನು. ಈತನನ್ನು ನೋಡುವ ಮನುಷ್ಯನು ಭೂಲೋಕ ಮೊದಲುಗೊಂಡು ಪಾತಾಲದವರೆಗಣ ಅಧೋಲೋಕಗಳಲ್ಲಿ ಜನ್ಮವನ್ನು ತಾಳುವುದಿಲ್ಲ.

೧೭೮. ಕ್ಷೇತ್ರಮಧ್ಯದ ದೇವಾಲಯದಲ್ಲಿರುವ ಮಧ್ಯಮೇಶ್ವರನನ್ನು ಪೂಜಿಸಲು ಮಾನವನು ಸಮುದ್ರಮುದ್ರಿತವಾದ ಭೂಮಂಡಲಕ್ಕೆಲ್ಲ ಸಾರ್ವಭೌಮನಾಗಿ ಕೊನೆಯಲ್ಲಿ ಮೋಕ್ಷವನ್ನೂ ಸಹ ಪಡೆಯುವನು.

೧೭೯. ಅದಕ್ಕೆ ಪೂರ್ವದಿಕ್ಕಿನಲ್ಲಿ ಐರಾವತೇಶ್ವರಲಿಂಗವು ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತ ನೆಲಸಿರುವುದು. ಆ ದೇವಾಲಯದ ಪತಾಕೆಯಲ್ಲಿ ರಮ್ಯವಾದ ಐರಾವತಗಜವು ಕಂಗೊಳಿಸುತ್ತಿರುವುದು.

೧೮೦. ಇದೇ ನವರತ್ನನಿರ್ಮಿತವಾದ ವೃದ್ಧಕಾಳೇಶ್ವರನ ಪ್ರಾಸಾದವು. ಇದರೊಳಗೆ ಪ್ರತಿ ಅಮಾವಾಸ್ಯೆಯಲ್ಲಿ ರಾತ್ರಿಯವೇಳೆ ಚಂದ್ರನು ನಕ್ಷತ್ರಗಣಗಳಿಂದ ಕೂಡಿ ವಾಸಮಾಡುವನು.

ಯಸ್ಯ ಸಂದರ್ಶನಾನ್ನೄಣಾಂ ನ ಕಾಲಃ ಪ್ರಭವೇದ್ಭವೇ ।
ನ ಕಲಿಃ ಪ್ರಭವೇತ್ಸತ್ಯಂ ನ ಚ ಕಲ್ಮಷರಾಶಯಃ ॥ ೧೮೧ ॥
ಇತಿ ಯಾವತ್ಕಥಾಂ ಚಕ್ರುಃ ಸಂಭ್ರಾಂತಾ ಇವ ಬಾಲಿಕಾಃ ।
ತಾವದ್ವಸುವಿಭೂತಿಃ ಸ ಗಂಧರ್ವಸ್ತ್ವರಯಾ ಯಯೌ ॥ ೧೮೨ ॥
ನಾರದಾಚ್ಛೃತವೃತ್ತಾಂತಃ ಸುಬಾಹುದನುಜನ್ಮನಃ ।
ರತ್ನಾವಲೀ ಸುತಾ ಪ್ರೀತಾ ಸಸಖೀಕಾ ಯಥಾ ಹೃತಾ ॥ ೧೮೩ ॥
ರತ್ನೇಶ್ವರಾತ್ಸಮಾಯಾಂತೀ ಶೂನ್ಯೇ ಗಗನವರ್ತ್ಮನಿ ।
ಯಥಾನಯಚ್ಚ ಪಾತಾಲಂ ಯಥಾ ಯುದ್ಧಮಭೂತ್ಪುನಃ ॥ ೧೮೪ ॥
ಯಥಾ ರತ್ನೇಶಭಕ್ತೇನ ರತ್ನಚೂಡೇನ ಘಾತಿತಃ ।
ಸ ಸುಬಾಹುರ್ದನುಜನುರ್ಮಹೇಷ್ವಾಸೇನ ಚೇಷುಣಾ ॥ ೧೮೫ ॥
ಯಥಾ ಚ ಪೃಷ್ಟವೃತ್ತಾಂತೋ ವಾಪೀಮಾರ್ಗೇಣ ಚಾನಯನ್ ।
ಶಂಖಚೂಡಸ್ಯ ವಾಪೀಂ ತಾಂ ಪಾತಾಲೇಷು ಪ್ರವರ್ತಿನೀಂ ॥ ೧೮೬ ॥

---

೧೮೧. ಆ ಲಿಂಗದ ಸಂದರ್ಶನವನ್ನು ಮಾಡಿದರಿಗೆ ಸಂಸಾರದಲ್ಲಿ ಕಾಲ ಪಾಶಗಳ ಬಂಧವಾಗಲಿ, ಕಲಿಪುರುಷನ ವಿಜೃಂಭಣವಾಗಲಿ, ಪಾತಕ ಸಮೂಹ ಗಳಾಗಲಿ ನಿಜವಾಗಿಯೂ ಸಂಭವಿಸಲಾರವು.''

೧೮೨. ಇಂತು ಮೊದಲಾಗಿ ಆ ಗಂಧರ್ವಕನ್ಯೆಯರು ಭ್ರಾಂತಿಗೊಂಡು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿರಲು ಅಷ್ಟರಲ್ಲಿಯೇ ರತ್ನಾವಳಿಯ ತಂದೆಯಾದ ವಸುಭೂತಿಯೆಂಬ ಗಂಧರ್ವರಾಜನು ಸತ್ವರನಾಗಿ ಅಲ್ಲಿಗೆ ಬಂದನು.

೧೮೩. ಆತನು ಪ್ರಿಯಪುತ್ರಿಯಾದ ರತ್ನಾವಳಿಯು ಸಖೀಸಮೇತಳಾಗಿ ಸುಬಾಹುರಾಕ್ಷಸನಿಂದ ಅಪಹರಿಸಲ್ಪಟ್ಟ ವಿವರವನ್ನೆಲ್ಲ ನಾರದಮಹರ್ಷಿಯ ಮೂಲಕ ಕೇಳಿ ಅಲ್ಲಿಗೆ ಬಂದು ಸೇರಿದನು.

೧೮೪–೧೮೬. ರತ್ನೇಶ್ವರನ ದರ್ಶನದಿಂದ ಹಿಂದಿರುಗುತ್ತಿದ್ದ ಆ ನಾಲ್ವ ರನ್ನೂ ರಾಕ್ಷಸನು ನಿರ್ಜನವಾದ ಆಕಾಶಮಾರ್ಗದಲ್ಲಿ ಹಿಡಿದು ಪಾತಾಲ ಲೋಕಕ್ಕೆ ತೆಗೆದುಕೊಂಡು ಹೋದುದನ್ನೂ, ಮಹಾಯುದ್ಧವು ಪ್ರಕ್ರಾಂತವಾದ ವಿಷಯವನ್ನೂ, ರತ್ನೇಶ್ವರನ ಭಕ್ತನಾದ ರತ್ನಚೂಡನಿಂದ ಆ ರಾಕ್ಷಸನು ಹತ ನಾದುದನ್ನೂ, ಮಹಾಧನ್ವನಾದ ರತ್ನಚೂಡನು ಒಂದು ಬಾಣದಿಂದಲೇ ಆ ಸುಬಾಹುರಾಕ್ಷಸನನ್ನು ನಿಗ್ರಹಿಸಿದುದನ್ನೂ, ಅವರ ವೃತ್ತಾಂತವೆಲ್ಲವನ್ನೂ ಕೇಳಿ ಕುಂಡದ ಮಾರ್ಗದಿಂದ ಭೂಲೋಕಕ್ಕೆ ಕರೆದುಕೊಂಡು ಬಂದುದನ್ನೂ, ಪಾತಾಲ ಲೋಕಗಳಲ್ಲಿಯೂ ವ್ಯಾಪಿಸಿರುವ ಆ ಶಂಖಚೂಡ ಕುಂಡವನ್ನು ಸೇರಿ ಮುಳುಗಿದ ಪರಿಯನ್ನೂ, ಮೇಲಕ್ಕೆ ಬರಲು ಬಾಲೆಯರು ಕಾಶೀಕ್ಷೇತ್ರವನ್ನು ಕಂಡು

ಯಥಾ ಚ ಪ್ರಾಪ್ಯ ನಿರ್ಯಾತಾಃ ಕಾಶೀಂ ದೃಷ್ಟ್ವಾಪಿ ಬಾಲಿಕಾಃ ।
ಭೃಶಂ ಸಂಭ್ರಾಂತಿಮಾಪನ್ನಾಃ ಪಶ್ಯಂತ್ಯೋಽಪಿ ಸಮುತ್ಸುಕಾಃ ॥ ೧೮೭ ॥
ದೃಷ್ಟ್ವಾ ಚ ಗಂಧರ್ವರಾಜಸ್ತಾಂ ಪುನರ್ಜಾತಾಮಿವಾತ್ಮಜಾಂ ।
ಸವಯಸ್ಯಾಮನವಮ್ಲಾನಮುಖಪಂಕಜಸುಶ್ರಿಯಂ ॥ ೧೮೮ ॥
ಪರಿಷ್ವಜ್ಯ ಸಮಾಘ್ರಾಯ ಲಲಾಟಫಲಕಂ ಮುಹುಃ ।
ಅಂಕಮಾರೋಪ್ಯ ಪಪ್ರಚ್ಛ ಸರ್ವಂ ವೃತ್ತಾಂತಮಾದರಾತ್ ॥ ೧೮೯ ॥
ಅಥ ಸಾ ಕಥಯಾಮಾಸ ದನುಜಾಪಹೃತೇಃ ಕಥಾಂ ।
ರತ್ನೇಶ್ವರಂ ವರಾವಾಪ್ತಿಂ ಸ್ವಪ್ನಾವಸ್ಥಾಂ ವಿಹಾಯ ಚ ॥ ೧೯೦ ॥
ರತ್ನಾವಲೀಮನೋವೃತ್ತಿಂ ವಿಜ್ಞಾಯಾಥ ಮುಖೇಂಗಿತೈಃ ।
ಶಶಿಲೇಖಾ ಸಮಾಚಷ್ಟ ಸ್ಪಷ್ಟವರ್ಣೈಃ ಸವಿಸ್ತರಂ ॥ ೧೯೧ ॥
ತುತೋಷ ನಿತರಾಂ ಸೋಽಥ ಗಂಧರ್ವಾಧಿಪತಿಃ ಕೃತೀ ।
ಪ್ರಭಾವಂ ವರ್ಣಯಾಮಾಸ ಮುದಾ ರತ್ನೇಶ್ವರಸ್ಯ ಚ ॥ ೧೯೨ ॥

---

ಅತ್ಯಂತವಾದ ಸಂಭ್ರಮವನ್ನು ಹೊಂದಿದುದನ್ನೂ, ನೋಡಿದುದನ್ನೂ ನಂಬಲಾರದ ಔತ್ಸುಕ್ಯದಿಂದ ಅವರು ಕೂಡಿರುವ ವಿಷಯವನ್ನೂ ಆತನು ನಾರದನಿಂದ ತಿಳಿದುಕೊಂಡನು.

೧೮೮–೧೮೯. ಪುನಃ ಜನ್ಮವನ್ನು ಪಡೆದಂತಿರುವ ಆ ತನ್ನ ಮಗಳು ಸಖಿಯರಿಂದೊಡಗೂಡಿ ಬಾಡದಿರುವ ಮುಖಕಮಲದ ಕಾಂತಿಯಿಂದ ಶೋಭಿಸುತ್ತಿರುವುದನ್ನು ಕಂಡು ಗಂಧರ್ವರಾಜನಾದ ವಸುಭೂತಿಯು ಆಕೆಯನ್ನು ಆಲಿಂಗಿಸಿ ಪುನಃ ಪುನಃ ಹಣೆಯನ್ನು ಮೂಸಿನೋಡುತ್ತ ಆದರದಿಂದ ತೊಡೆಯಮೇಲೆ ಕುಳ್ಳಿರಿಸಿಕೊಂಡು ನಡೆದ ವಿಚಾರವೆಲ್ಲವನ್ನೂ ಕೇಳತೊಡಗಿದನು.

೧೯೦. ಆಗ ಆಕೆಯು ತಮ್ಮನ್ನು ಅಪಹರಿಸಿಕೊಂಡುಹೋದ ರಾಕ್ಷಸನ ವೃತ್ತಾಂತವೆಲ್ಲವನ್ನೂ ಹೇಳಿದಳಾದರೂ, ರತ್ನೇಶ್ವರನ ವಿಷಯವನ್ನಾಗಲಿ, ತನಗೆ ವರವು ದೊರೆತುದನ್ನಾಗಲಿ, ಸ್ವಪ್ನದಲ್ಲಿ ನಡೆದುದನ್ನಾಗಲಿ ತಿಳಿಸಲಿಲ್ಲ.

೧೯೧. ಆದರೆ ಆಕೆಯ ಮುಖಭಾವದಿಂದ ರತ್ನಾವಳಿಯ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡು ಸಖಿಯಾದ ಶಶಿಲೇಖೆಯು ಸ್ಪಷ್ಟವಾಕ್ಯಗಳಿಂದ ವಿಸ್ತಾರವಾಗಿ ನಿರೂಪಿಸಿದಳು.

೧೯೨. ಗಂಧರ್ವರಾಜನಾದರೊ, ಎಲ್ಲವನ್ನೂ ಕೇಳಿ ಅಭಿಜ್ಞನಾದುದರಿಂದ ಅಪರಿಮಿತವಾದ ಸಂತೋಷವನ್ನು ಹೊಂದಿದನು. ಮತ್ತು ಮುದಿತನಾಗಿ ರತ್ನೇಶ್ವರನ ಮಹಾಮಹಿಮೆಯನ್ನು ಬಹುವಿಧವಾಗಿ ಕೊಂಡಾಡಿದನು.

ಸ್ಕಂದ ಉವಾಚ :—
ಆಕರ್ಣಯ ಮುನಿಶ್ರೇಷ್ಠ ವಿಂಧ್ಯವೃದ್ಧಿನಿವರ್ಧನ ।
ಪ್ರತ್ಯಹಂ ರತ್ನಚೂಡೋಽಪಿ ವಾಪೀಮಾರ್ಗೇಣ ಸಂಯಮೀ ॥ ೧೯೩ ॥
ನಾಗಲೋಕಾತ್ಸಮಾಗತ್ಯ ಸ್ನಾತ್ವಾ ಮಂದಾಕಿನೀಜಲೇ ।
ರತ್ನೇಶ್ವರಂ ಸಮಭ್ಯರ್ಚ್ಯ ರತ್ನಾಂಜಲ್ಯಷ್ಟಕೇನ ವೈ ।
ಸುವರ್ಣಪಂಕಜಾನ್ಯಷ್ಟೌ ಸಮರ್ಪಯತಿ ಹೃಷ್ಟವತ್ ॥ ೧೯೪ ॥
ಏಕದಾ ಸ್ವಪ್ನಸಮಯೇ ರತ್ನೇಶೋ ಲಿಂಗರೂಪಧೃಕ್ ।
ರತ್ನಚೂಡಮುವಾಚೇದಂ ನಿಜಭಕ್ತಂ ದೃಢವ್ರತಂ ॥ ೧೯೫ ॥
ದಾನವೇನ ಹೃತಾಂ ಕನ್ಯಾಂ ಮೋಚಯಿಷ್ಯತಿ ಯಾಂ ಭವಾನ್ ।
ತಂ ದಾನವಂ ರಣೇ ಜಿತ್ವಾ ಸಾ ತೇ ಪತ್ನೀ ಭವಿಷ್ಯತಿ ॥ ೧೯೬ ॥
ಇತಿ ಸ್ಮರನ್ವರಂ ಸೋಽಥ ನಾಗರಾಜೋ ಮಹಾಮನಾಃ ।
ತಾಂ ಕನ್ಯಾಂ ದಾನವಂ ಹತ್ವಾ ವಿಮೋಚ್ಯ ನಿಜವೀರ್ಯತಃ ॥ ೧೯೭ ॥
ವಾಪೀಮಾರ್ಗೇಣ ಪಾತಾಲಾದಾನಿನಾಯ ಪುನರ್ಮಹೀಂ ।
ಸ್ವಯಂ ಚ ಸಾಧಯಾಂಚಕ್ರೇ ಪ್ರತ್ಯಹಂ ನಿಯಮಂ ಸುಧೀಃ ॥ ೧೯೮ ॥

---

೧೯೩–೧೯೪. ಸ್ಕಂದನು ಹೇಳುತ್ತಾನೆ:—ವಿಂಧ್ಯಪರ್ವತದ ಅಭಿವೃದ್ಧಿಯನ್ನು ತಡೆಗಟ್ಟಿದ ಓ ಮುನಿಶ್ರೇಷ್ಠನೆ! ಕೇಳುವವನಾಗು. ರತ್ನಚೂಡನೂ ಸಹ ಸಂಯಮಸಹಿತನಾಗಿ ಪ್ರತಿನಿತ್ಯವೂ ಆ ಕುಂಡದ ಮಾರ್ಗವಾಗಿ ನಾಗಲೋಕದಿಂದ ಮೇಲಕ್ಕೆ ಬಂದು ಗಂಗಾನದಿಯ ನೀರಿನಲ್ಲಿ ಸ್ನಾನವನ್ನು ಮಾಡಿಕೊಂಡು, ರತ್ನೇಶ್ವರಮಹಾಲಿಂಗವನ್ನು ಎಂಟು ಬೊಗಸೆಗಳ ತುಂಬ ನವರತ್ನಗಳಿಂದಲೂ ಪೂಜಿಸಿ ಸಂತುಷ್ಟಾಂತರಂಗನಾಗಿ ಎಂಟು ಚಿನ್ನದ ಕಮಲಗಳನ್ನರ್ಪಿಸುತ್ತಿದ್ದನು.

೧೯೫. ಒಮ್ಮೆ ಸ್ವಪ್ನದಲ್ಲಿ ಲಿಂಗರೂಪವನ್ನು ಧರಿಸಿ ರತ್ನೇಶ್ವರನು ತನ್ನ ಭಕ್ತನೂ, ನಿಶ್ಚಂಚಲವ್ರತವನ್ನು ಕೈಗೊಂಡವನೂ ಆದ ರತ್ನಚೂಡನನ್ನು ಕುರಿತು ಮುಂದೆ ಹೇಳುವಂತೆ ಸಂದೇಶವನ್ನಿತ್ತನು.

೧೯೬. "ನೀನು ಶೀಘ್ರದಲ್ಲಿಯೇ ರಾಕ್ಷಸನೊಬ್ಬನು ಅಪಹರಿಸುತ್ತಿರುವ ಕನ್ಯಾರತ್ನವನ್ನು ಕಂಡು ಆ ರಾಕ್ಷಸನನ್ನು ಯುದ್ಧದಲ್ಲಿ ಸಂಹರಿಸಿ ಆಕೆಯನ್ನು ಬಿಡಿಸುವೆ. ಆ ಕನ್ಯೆಯೇ ನಿನಗೆ ಪತ್ನಿಯಾಗುವಳು."

೧೯೭. ಮಹಾ ಪ್ರಾಜ್ಞನಾದ ಆ ನಾಗರಾಜನು ಈ ವರವನ್ನು ಸ್ಮರಿಸಿಕೊಂಡು ಸುಬಾಹುರಾಕ್ಷಸನನ್ನು ತನ್ನ ಭುಜಪರಾಕ್ರಮದಿಂದ ನಿಗ್ರಹಿಸಿ ರತ್ನಾವಳಿಯೆಂಬ ಆ ಕನ್ಯಾರತ್ನವನ್ನು ಸಂಕಟದಿಂದ ಬಿಡಿಸಿದನು.

೧೯೮. ಮತ್ತು ಕುಂಡದ ಮಾರ್ಗದಿಂದಲೇ ಪುನಃ ಭೂಲೋಕಕ್ಕೆ ಆ ಸಖಿಯರೆಲ್ಲರನ್ನೂ ಕರೆದುಕೊಂಡುಬಂದು ಬಿಟ್ಟನು. ಧೀಮಂತನಾದ ಆತನು ಎಂದಿನಂತೆಯೇ ತನ್ನ ನಿಯಮವನ್ನು ಪ್ರತಿನಿತ್ಯವೂ ಸಾಧಿಸುತ್ತಿದ್ದನು.

ಲಿಂಗಂ ಸಮುರ್ಚ್ಯ ಯಿತ್ವಾಥ ಕೃತ್ವಾ ಚಾಪಿ ಪ್ರದಕ್ಷಿಣಂ ।
ಯಾವದ್ಬಹಿಃ ಸಮಾಗಚ್ಛೇದ್ರತ್ನೇಶಮಂಡಪಾತ್ ॥ ೧೯೯ ॥
ತಾವದ್ಗಂಧರ್ವರಾಜಾಯ ತಾಭಿಃ ಸ ವಸುಭೂತಯೇ ।
ಸೋಽಯಂ ಸೋಽಯಂ ಯುವಾ ಧನ್ಯಸ್ತರ್ಜನ್ಯಗ್ರೇಣ ದರ್ಶಿತಃ ॥ ೨೦೦ ॥
ಗಂಧರ್ವರಾಜಸ್ತಂ ದೃಷ್ಟ್ವಾ ನಾಗರಾಜಕುಮಾರಕಂ ।
ಅತೀವ ಸ್ಮೇರನಯನಃ ಸಂಪ್ರಹೃಷ್ಟತನೂರುಹಃ ॥ ೨೦೧ ॥
ಮನಸ್ಯೇನಂ ಚ ಸಂವರ್ಣ್ಯ ತದ್ರೂಪಂ ಸ ವಯೋಽನ್ವಯಂ ॥ ೨೦೨ ॥
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ರತ್ನೇಶೇನ ವರಾರ್ಪಣಾತ್ ।
ಕನ್ಯಾ ಧನ್ಯತರಾ ಚೇಯಮನುರೂಪೋಽಸ್ತಿ ಯತ್ಪತಿಃ ॥ ೨೦೩ ॥
ಸಂಪ್ರಧಾರ್ಯೇತಿ ಹೃದ್ಯೇನಂ ಸಮಾಕಾರ್ಯ ಚ ಸುಂದರಂ ।
ಪೃಷ್ಟ್ವಾ ತನ್ನಾಮಗೋತ್ರಂ ಚ ಗಣಯಿತ್ವಾ ಬಲಾಬಲಂ ॥ ೨೦೪ ॥
ರತ್ನೇಶ್ವರಸ್ಯ ಪುರತಸ್ತಸ್ಮೈ ಕನ್ಯಾಂ ದದೌ ಮುದಾ ।
ನೀತ್ವಾ ಗಂಧರ್ವಲೋಕಂ ಚ ಕೃತಕೌತುಕಮಂಗಲಂ ॥ ೨೦೫ ॥

---

೧೯೯. ಆ ದಿವಸವೂ ಎಂದಿನಂತೆಯೇ ರತ್ನೇಶ್ವರ ಲಿಂಗಕ್ಕೆ ಪೂಜೆಯನ್ನು ಮಾಡಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮುಗಿಸಿಕೊಂಡು ಮನೋಹರವಾದ ರತ್ನೇಶ್ವರ ದೇವಾಲಯದಿಂದ ಹೊರಗೆ ಬಂದನು.

೨೦೦. ಆ ಕ್ಷಣದಲ್ಲಿಯೇ ಕನ್ಯಕೆಯರು ಗಂಧರ್ವಾಧಿಪತಿಯಾದ ವಸುಭೂತಿಗೆ ಆತನನ್ನು ಮುಂಬೆರಳಿನ ಕೊನೆಯಿಂದ ತೋರಿಸುತ್ತ "ನಮ್ಮನ್ನು ಬಿಡಿಸಿದ ಧನ್ಯನಾದ ಯುವಕನು ಈತನೇ" ಎಂದು ಹೇಳಿದರು.

೨೦೧. ನಾಗರಾಜನ ಪುತ್ರನಾದ ಆತನನ್ನು ಕಂಡು ಗಂಧರ್ವರಾಜನು ಕೊನೆಗಣ್ಣುಗಳಿಂದ ನಗೆಯನ್ನು ಹೊರಸೂಸುತ್ತ ಅಪಾರವಾದ ಸಂತೋಷದಿಂದ ಪುಳಕಾಂಕಿತವಾದ ದೇಹವುಳ್ಳವನಾದನು.

೨೦೨–೨೦೩. ಆತನ ರೂಪವನ್ನೂ, ವಯಸ್ಸನ್ನೂ, ಸತ್ಕುಲವನ್ನೂ ಕಂಡು ತನ್ನ ಮನಸ್ಸಿನಲ್ಲಿಯೇ ಸದೃಶವರನೆಂದು ಪ್ರಶಂಸಿಸಿದನು. "ನಾನು ಧನ್ಯನಾದೆನು. ರತ್ನೇಶ್ವರನು ಅನುರೂಪನಾದ ವರನನ್ನು ತೋರಿಸಿ ನನ್ನನ್ನನುಗ್ರಹಿಸಿದನು. ಇಂತಹ ಸದೃಶಾವಯವನಾದ ಪತಿಯನ್ನು ಪಡೆಯುವ ನನ್ನ ಪುತ್ರಿಯೂ ಅತ್ಯಂತ ಧನ್ಯಳೇ ಸರಿ."

೨೦೪. ಇಂತೆಂದು ಮನಸ್ಸಿನಲ್ಲಿ ಚಿಂತಿಸಿ ಆ ಸುಂದರಯುವಕನನ್ನು ಬಳಿಗೆ ಕರೆದು ಉಪಚರಿಸಿ ಆತನ ಹೆಸರು ಗೋತ್ರಗಳನ್ನು ಕೇಳಿ ವಸುಭೂತಿಯು ವಧೂವರರಿಗೆ ಬಲಾಬಲಗಳನ್ನು ಗುಣಿಸಿ ನೋಡಿದನು.

೨೦೫. ಬಳಿಕ ಸಂತೋಷದಿಂದ ರತ್ನೇಶ್ವರನ ಸಮ್ಮುಖದಲ್ಲಿ ಆತನಿಗೆ ಕನ್ಯಾ

ಮಧುಪರ್ಕೇಣ ಸಂಪೂಜ್ಯ ಪಾಣಿಮುಗ್ರಾಹಯತ್ತತಃ ।
ವೈವಾಹಿಕೇನ ವಿಧಿನಾ ದದೌ ರತ್ನಾನ್ಯನೇಕಶಃ ॥ ೨೦೬ ॥
ಶಶಿಲೇಖಾನಂಗಲೇಖಾ ಚಿತ್ರಲೇಖಾಪಿ ಕುಂಭಜ ।
ವಿಜ್ಞಾಪ್ಯಸ್ವಜನೇತಾರಂ ವರಯಾಮಾಸ ತಂ ಪತಿಂ ॥ ೨೦೭ ॥
ಉಪಯಮ್ಯ ಚತಸ್ರೋಽಪಿ ಸ ಗಂಧರ್ವಸುತಾಃ ಶುಭಾಃ ।
ರತ್ನಚೂಡೋ ಜಗಾಮಾಥ ತಾಭಿಃ ಸ್ವಪಿತೃಮಂದಿರಂ ॥ ೨೦೮ ॥
ಯಥಾ ಚತಸೃಭಿಃ ಸಾರ್ಧಂ ಶ್ರುತಿಭಿಃ ಪ್ರಣವಃ ಶಿವಂ ।
ಸ್ವಪಿತ್ರೋಶ್ಚರಣೇ ನತ್ವಾ ನವೋಢಾಭಿಃ ಸ ನಾಗರಾಟ್ ॥ ೨೦೯ ॥
ವಿನಿವೇದಿತವೃತ್ತಾಂತೋ ರತ್ನೇಶಾನುಗ್ರಹಸ್ಯ ಚ ।
ಉವಾಸ ತಾಭಿಃ ಸಸುಖಂ ಪಿತೃಭ್ಯಾಮಭಿನಂದಿತಃ ॥ ೨೧೦ ॥

ಈಶ್ವರ ಉವಾಚ :—

ರತ್ನೇಶ್ವರಸ್ಯ ಲಿಂಗಸ್ಯ ಮಮ ಸ್ಥಾವರರೂಪಿಣಃ ।
ಸರ್ವೇಷಾಂ ಸರ್ವದಸ್ಯಾಸ್ಯ ಪ್ರಭಾವೋ ಗಿರಿಜೇಽತುಲಃ ॥ ೨೧೧ ॥

---

ದಾನವನ್ನು ಮಾಡಿದನು. ಮತ್ತು ಗಂಧರ್ವಲೋಕಕ್ಕೆ ಕರೆದುಕೊಂಡು ಹೋಗಿ ಆತನಿಗೆ ಅಭ್ಯಂಜನಾದಿ ಮಂಗಳ ಕಾರ್ಯಗಳನ್ನು ಮಾಡಿಸಿದನು.

೨೦೬. ಮಧುಪರ್ಕದಿಂದ ವರನನ್ನು ಪೂಜಿಸಿ ಮಗಳ ಕೈಯನ್ನು ಆತನ ಕೈಯಲ್ಲಿ ಇಟ್ಟನು. ವಿವಾಹಮಹೋತ್ಸವವನ್ನು ವಿಧ್ಯುಕ್ತರೀತಿಯಿಂದ ನೆರವೇರಿಸಿ ಮಗಳಿಗೆ ಅನೇಕ ರತ್ನಗಳನ್ನು ಪಾರಿಬರ್ಹವಾಗಿ ಕೊಟ್ಟನು.

೨೦೭—೨೦೮. ಕುಂಭಸಂಭವನೆ! ಶಶಿಲೇಖೆ, ಅನಂಗಲೇಖೆ ಮತ್ತು ಚಿತ್ರಲೇಖೆಯೆಂಬ ಆಕೆಯ ಸಖಿಯರೂ ತಮ್ಮ ತಂದೆಗಳಿಗೆ ವಿಜ್ಞಾಪಿಸಿಕೊಂಡು ಆ ರತ್ನಚೂಡನನ್ನೇ ಪತಿಯಾಗಿ ವರಿಸಿದರು. ಇಂತು ಸುಂದರಿಯರಾದ ನಾಲ್ವರು ಗಂಧರ್ವಕನ್ಯೆಯರನ್ನೂ ವಿವಾಹಮಾಡಿಕೊಂಡು ಆ ರತ್ನಚೂಡನು ಅವರೊಡಗೂಡಿ ತನ್ನ ತಂದೆಯ ಅರಮನೆಗೆ ಪ್ರಯಾಣವನ್ನು ಬೆಳಸಿದನು.

೨೦೯. ನಾಲ್ಕು ವೇದಗಳಿಂದ ಅನುಸರಿಸಲ್ಪಟ್ಟ ಪ್ರಣವವು ಪರಮಶಿವನಲ್ಲಿ ಹೇಗೆ ಆತ್ಮವನ್ನರ್ಪಿಸುವುದೊ, ಹಾಗೆ ಆ ನಾಗರಾಜಕುಮಾರನು ತನ್ನ ನಾಲ್ವರು ನೂತನ ವಧುಗಳೊಡನೆ ತಂದೆಯ ಪಾದಗಳಿಗೆ ನಮಸ್ಕರಿಸಿದನು.

೨೧೦. ರತ್ನೇಶ್ವರನ ಅನುಗ್ರಹವು ಲಭಿಸಿದ ಸಮಸ್ತ ವೃತ್ತಾಂತವನ್ನೂ ಅವರಲ್ಲಿ ನಿವೇದನೆ ಮಾಡಿ ತಾಯಿತಂದೆಗಳ ಆಶೀರ್ವಾದಗಳನ್ನು ಪಡೆದು ತನ್ನ ಹೆಂಡಿರೊಡನೆ ಸುಖವಾಗಿ ವಾಸಮಾಡುತ್ತಿದ್ದನು.

೨೧೧. ಈಶ್ವರನು ಹೇಳುತ್ತಾನೆ:—ಎಲೌ ಗಿರಿಜೆಯೆ! ನನ್ನ ಸ್ಥಾವರ ರೂಪವೂ, ಸರ್ವರಿಗೂ ಸರ್ವಾಭೀಷ್ಟಪ್ರದವೂ ಆದ ಈ ರತ್ನೇಶ್ವರಲಿಂಗದ ಮಹಿಮೆಯು ಅಪ್ರಮೇಯವಾಗಿರುವುದು.

ಅಸ್ಮಿನ್ಲಿಂಗೇ ಪರಾಂ ಸಿದ್ಧಿಂ ಪ್ರಾಪ್ತಾಃ ಸಿದ್ಧಾಃ ಸಹಸ್ರಶಃ ।
ಗುಪ್ತಮಾಸೀದಿದಂ ಲಿಂಗಮದ್ಯ ಯಾವತ್ಸುಮಧ್ಯಮೇ ॥ ೨೧೨ ॥
ತವ ಪಿತ್ರಾ ಹಿಮವತಾ ಮಮ ಭಕ್ತೇನ ಸರ್ವಥಾ ।
ಪುಣ್ಯಾರ್ಜಿತೈರ್ಮಹಾರತ್ನೈ ರತ್ನೇಶಃ ಪ್ರಕಟೀಕೃತಃ ॥ ೨೧೩ ॥
ಅಸ್ಮಿನ್ಲಿಂಗೇ ಮಮ ಪ್ರೀತಿರ್ನಿತರಾಮದ್ರಿರಾಜಜೇ ।
ವಾರಾಣಸ್ಯಾಮಿದಂ ಲಿಂಗಂ ಪೂಜನೀಯಂ ಪ್ರಯತ್ನತಃ ॥ ೨೧೪ ॥
ನಾನಾರತ್ನಾನಿ ಲಭ್ಯಂತೇ ರತ್ನೇಶಾನುಗ್ರಹಾದುಮೇ ।
ಸ್ತ್ರೀರತ್ನಪುತ್ರರತ್ನಾದಿ ಸ್ವರ್ಗಮೋಕ್ಷಾವಪಿ ಪ್ರಿಯೇ ॥ ೨೧೫ ॥
ಯೋಽತ್ರ ರತ್ನೇಶ್ವರಂ ನತ್ವಾ ಮೃತೋ ದೇಶಾಂತರೇಷ್ವಪಿ ।
ಸ ಸ ಸ್ವರ್ಗಾದಿಹಾಗಚ್ಛೇತ್ಕಲ್ಪಕೋಟಿಶತೈರಪಿ ॥ ೨೧೬ ॥
ಅಸಿತಾಯಾಂ ಚತುರ್ದಶ್ಯಾಮುಪೋಷ್ಯ ನಿಶಿ ಜಾಗರಾತ್ ।
ರತ್ನೇಶಸನ್ನಿಧೌ ದೇವಿ ಮಮ ಸಾನ್ನಿಧ್ಯಮಾಪ್ನುಯಾತ್ ॥ ೨೧೭ ॥

---

೨೧೨. ಈ ಲಿಂಗದ ಸಂಸೇವನೆಯಿಂದ ಸಾವಿರಾರು ಸಿದ್ಧರು ಸರ್ವೋತ್ಕೃಷ್ಟ ವಾದ ಮೋಕ್ಷಸಿದ್ಧಿಯನ್ನು ಪಡೆದರು. ಬಡನಡುವಿನ ಓ ಬಾಲೆಯೆ! ಇಂದಿನ ವರೆಗೂ ಈ ಲಿಂಗವು ಗುಪ್ತವಾಗಿಯೇ ಇದ್ದಿತು.

೨೧೩. ನಿನ್ನ ತಂದೆಯೂ, ನನ್ನ ಉತ್ತಮ ಭಕ್ತನೂ ಆದ ಹಿಮವಂತನು ಸಮರ್ಪಿಸಿದ ಪುಣ್ಯಾರ್ಜಿತಗಳಾದ ಮಹಾರತ್ನಗಳ ರಾಶಿಯಿಂದ ಈಗ ರತ್ನೇಶ್ವರನು ಬಹಿರಂಗವಾಗಿ ಕಾಣುತ್ತಿರುವನು.

೨೧೪. ಪರ್ವತರಾಜಪುತ್ರಿಯೆ! ಈ ಲಿಂಗದಲ್ಲಿ ನನಗೆ ವಿಶೇಷವಾದ ಅಭಿಮಾನವಿರುವುದು. ವಾರಾಣಸೀಕ್ಷೇತ್ರದಲ್ಲಿ ಈ ಲಿಂಗವನ್ನು ಪ್ರತಿಯೊಬ್ಬ ಮಾನವನೂ ಪ್ರಯತ್ನದಿಂದ ಪೂಜಿಸಬೇಕು.

೨೧೫. ಪ್ರಿಯೆಯಾದ ಉಮೆಯೆ! ಈ ರತ್ನೇಶ್ವರನ ಅನುಗ್ರಹದ ಬಲದಿಂದ ಸ್ತ್ರೀರತ್ನ, ಪುತ್ರರತ್ನಗಳೇ ಮುಂತಾದ ಬಹುವಿಧ ರತ್ನಗಳೂ, ಸ್ವರ್ಗಾದಿ ಭೋಗಗಳೂ, ಮೋಕ್ಷವೂ ಮನುಷ್ಯನಿಗೆ ಲಭಿಸುವುವು.

೨೧೬. ಯಾವನು ಇಲ್ಲಿ ಒಮ್ಮೆ ರತ್ನೇಶ್ವರನಿಗೆ ನಮಸ್ಕಾರವನ್ನು ಮಾಡು ವನೊ, ಅವನು ದೇಶಾಂತರಗಳಲ್ಲಿ ಮರಣವನ್ನು ಹೊಂದಿದರೂ ಸ್ವರ್ಗಲೋಕ ವನ್ನು ಸೇರಿ ನೂರುಕೋಟಿ ಕಲ್ಪಗಳಾದರೂ ಪುನಃ ಭೂಲೋಕದಲ್ಲಿ ಜನ್ಮವನ್ನೆತ್ತು ವುದಿಲ್ಲ.

೨೧೭. ಎಲೌ ದೇವಿಯೆ! ಪ್ರತಿಮಾಸದ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ಉಪವಾಸವನ್ನು ಮಾಡಿ ಯಾವನು ರತ್ನೇಶ್ವರನ ಸನ್ನಿಧಿಯಲ್ಲಿ ಜಾಗರಣೆಯನ್ನು ಮಾಡುವನೊ, ಅವನು ನನ್ನ ಸಾನ್ನಿಧ್ಯವನ್ನು ಪಡೆಯುವನು.

ಅಸ್ಯ ಲಿಂಗಸ್ಯ ಪೂರ್ವೇಣ ತ್ವಯಾ ಜನ್ಮಾಂತರೇ ಪ್ರಿಯೇ ।
ದಾಕ್ಷಾಯಣೀಶ್ವರಂ ಲಿಂಗಂ ಮದ್ಭಕ್ತ್ಯಾತ್ರ ಪ್ರತಿಷ್ಠಿತಂ ॥ ೨೧೮ ॥
ತಸ್ಯ ಸಂದರ್ಶನಾದೇವ ನ ನರೋ ಯಾತಿ ದುರ್ಗತಿಂ ।
ಅಂಬಿಕಾನಾಮ ಗೌರೀ ತ್ವಂ ತತ್ರಾಹಂ ಚಾಂಬಿಕೇಶ್ವರಃ ॥ ೨೧೯ ॥
ಮೂರ್ತಃ ಷಡಾನನಸ್ತತ್ರ ತವ ಪುತ್ರಃ ಸುಮಧ್ಯಮೇ ।
ಏತತ್ತ್ರಯಂ ನರೋ ದೃಷ್ಟ್ವಾ ನ ಗರ್ಭಂ ಪ್ರವಿಶೇದುಮೇ ॥ ೨೨೦ ॥
ರತ್ನೇಶ್ವರಸ್ಯ ಮಾಹಾತ್ಮ್ಯಂ ಮಯಾ ತೇ ಸಮುದೀರಿತಂ ।
ಗೋಪನೀಯಂ ಪ್ರಯತ್ನೇನ ಕಲಿಕಲ್ಮಷಚೇತಸಾಂ ॥ ೨೨೧ ॥
ಇದಂ ರತ್ನೇಶ್ವರಾಖ್ಯಾನಂ ಯಃ ಪಠಿಷ್ಯತಿ ಸರ್ವದಾ ।
ಸ ಪುತ್ರಪೌತ್ರಪಶುಭಿರ್ನ ವಿಯುಜ್ಯೇತ ಕರ್ಹಿಚಿತ್ ॥ ೨೨೨ ॥
ಶ್ರುತ್ವಾ ರತ್ನೇಶ್ವರೋತ್ಪತ್ತಿಂ ಸೇತಿಹಾಸಂ ನರೋತ್ತಮಃ ।
ಅನೂಢೋ ಲಭತೇ ಸತ್ಯಂ ಕನ್ಯಾರತ್ನಂ ಕುಲೋಚಿತಂ ॥ ೨೨೩ ॥

---

೨೧೮. ಪ್ರಿಯೆಯೆ! ಈ ಲಿಂಗದ ಪೂರ್ವದಿಕ್ಕಿಗೆ ನನ್ನಲ್ಲಿದ್ದ ಭಕ್ತ್ಯತಿಶಯದಿಂದ ಜನ್ಮಾಂತರದಲ್ಲಿ ನಿನ್ನಿಂದಲೇ ದಾಕ್ಷಾಯಣೀಶ್ವರವೆಂಬ ಲಿಂಗವೊಂದು ಇಲ್ಲಿ ಸ್ಥಾಪಿತವಾಗಿದ್ದಿತು.

೨೧೯. ಅದನ್ನು ದರ್ಶನಮಾಡುವ ಮಾತ್ರದಿಂದ ಮನುಷ್ಯನೆಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ಗೌರಿಯೆ! ಅಲ್ಲಿ ನೀನು ಅಂಬಿಕೆಯೆಂಬ ಹೆಸರಿನಿಂದಿರುವೆ. ನಾನು ಅಂಬಿಕೇಶ್ವರನಾಗಿರುವೆನು.

೨೨೦. ಸುಂದರಿಯಾದ ಉಮೆಯೆ! ನಿನ್ನ ಪುತ್ರನಾದ ಷಣ್ಮುಖನೂ ಅಲ್ಲಿಯೇ ಮೂರ್ತಿಗೊಂಡಿರುವನು. ಈ ಮೂವರು ದೇವತೆಗಳನ್ನೂ ನೋಡಿದ ಮನುಷ್ಯನು ಪುನಃ ಜನನಿಯ ಗರ್ಭದಲ್ಲಿ ಪ್ರವೇಶಮಾಡುವುದಿಲ್ಲ.

೨೨೧. ಇಂತು ರತ್ನೇಶ್ವರನ ಮಹಾಮಾಹಾತ್ಮ್ಯವು ನನ್ನಿಂದ ನಿನಗೆ ಹೇಳಲ್ಪಟ್ಟಿರುವುದು. ಕಲಿಯಿಂದ ದೂಷಿತವಾದ ಮನಸ್ಸುಳ್ಳ ದುಷ್ಟರಿಗೆ ತಿಳಿಯದಂತೆ ಇದನ್ನು ಪ್ರಯತ್ನದಿಂದ ರಹಸ್ಯಗೊಳಿಸಬೇಕು.

೨೨೨. ಈ ರತ್ನೇಶ್ವರನ ಆಖ್ಯಾನವನ್ನು ಯಾವನು ಸರ್ವಕಾಲದಲ್ಲಿಯೂ ಪಠಿಸುತ್ತಿರುತ್ತಾನೆಯೊ, ಅವನು ಎಂದಿಗೂ ಪುತ್ರಪೌತ್ರಸಂತತಿಯಿಂದಾಗಲಿ, ಪಶುಗಳೇ ಮುಂತಾದ ಸಂಪತ್ತಿನಿಂದಾಗಲಿ ವಿಯೋಗವನ್ನು ಹೊಂದುವುದಿಲ್ಲ.

೨೨೩. ರತ್ನಾವಳಿಯ ಇತಿಹಾಸದಿಂದ ಕೂಡಿದ ರತ್ನೇಶ್ವರನ ಉತ್ಪತ್ತಿಯ ಕ್ರಮವನ್ನು ಕೇಳಲು ಮದುವೆಯಿಲ್ಲದವನು ಸತ್ಕುಲಪ್ರಸೂತಳಾದ ಕನ್ಯಾರತ್ನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

ಕನ್ಯಾಪೀಮಂ ಸಮಾಕರ್ಣ್ಯ ತ್ವಿತಿಹಾಸಂ ಮನೋರಮಂ ।
ಶ್ರದ್ಧಯಾ ಸತ್ಪತಿಂ ಪ್ರಾಪ್ಯ ಭವಿಷ್ಯತಿ ಪತಿವ್ರತಾ ॥ ೨೨೪ ॥
ಇತಿಹಾಸಮಿಮಂ ಶೃತ್ವಾ ನಾರೀ ವಾ ಪುರುಷೋಽಪಿ ವಾ ।
ನ ಜಾತ್ವಿಷ್ಟವಿಯೋಗಾಗ್ನಿತಾಪೇನ ಪರಿತಪ್ಯತೇ ॥ ೨೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ರತ್ನೇಶ್ವರ ಪ್ರಶಂಸನವರ್ಣನಂ"
ನಾಮ ಸಪ್ತಷಷ್ಟಿತಮೋಽಧ್ಯಾಯಃ

---

೨೨೪. ಮನೋಹರವಾದ ಈ ಇತಿಹಾಸವನ್ನು ಶ್ರದ್ಧೆಯಿಂದ ಕೇಳಿದ ಕನ್ಯೆಯೂ ಕೂಡ ಶ್ರವಣದ ಫಲವಾಗಿ ಉತ್ತಮ ಪತಿಯನ್ನು ಪಡೆದು ಪತಿವ್ರತೆಯಾಗಿ ಬಾಳುವಳು.

೨೨೫. ಈ ಇತಿಹಾಸವನ್ನು ಕೇಳಿದ ಸ್ತ್ರೀಯಾಗಲಿ ಪುರುಷನಾಗಲಿ ಎಂದಿಗೂ ಇಷ್ಟವಿಯೋಗವೆಂಬ ಅಗ್ನಿಯ ತಾಪದಿಂದ ಬಸವಳಿಯುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ರತ್ನೇಶ್ವರ ಪ್ರಶಂಸನವರ್ಣನ" ವೆಂಬ ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಷಷ್ಟಿತಮೋಽಧ್ಯಾಯಃ

### ಕೃತ್ತಿವಾಸ ಸಮುದ್ಭವೋಪವರ್ಣನಂ

ಸ್ಕಂದ ಉವಾಚ:—

ಅನ್ಯಚ್ಚ ಶೃಣು ವಿಪ್ರೇಂದ್ರ ವೃತ್ತಾಂತಂ ತತ್ರ ಸಂಭವಂ ।
ಮಹಾಶ್ಚರ್ಯಪ್ರಜನನಂ ಮಹಾಪಾತಕಹಾರಿ ಚ ॥ ೧ ॥
ಇತ್ಥಂ ಕಥಾಂ ಪ್ರಕುರ್ವಾಣೇ ರತ್ನೇಶಸ್ಯ ಮಹೇಶ್ವರೇ ।
ಕೋಲಾಹಲೋ ಮಹಾನಾಸೀತ್ತ್ರಾತ ತ್ರಾತೇತಿ ಸರ್ವದಾ ॥ ೨ ॥
ಮಹಿಷಾಸುರಪುತ್ರೋಽಸೌ ಸಮಾಯಾತಿ ಗಜಾಸುರಃ ।
ಪ್ರಮಥನ್ಪ್ರಮಥಾನ್ಸರ್ವಾನ್ನಿಜವೀರ್ಯಮಹೋದ್ಧತಃ ॥ ೩ ॥
ಯತ್ರ ಯತ್ರ ಧರಾಯಾಂ ಸ ಚರಣಂ ಪ್ರಮಿಣೋತಿ ಹಿ ।
ಅಚಲೋಲ್ಲೋಲಯಾಂಚಕ್ರೇ ತತ್ರ ತತ್ರಾಸ್ಯ ಭಾರತಃ ॥ ೪ ॥
ಊರುವೇಗೇನ ತರವಃ ಪತಂತಿ ಶಿಖರೈಃ ಸಹ ।
ಯಸ್ಯ ದೋರ್ದಂಡಘಾತೇನ ಚೂರ್ಣಾಃ ಸ್ಯುಶ್ಚ ಶಿಲೋಚ್ಚಯಾಃ ॥ ೫ ॥

---

### ಕನ್ನಡದ ಅನುವಾದ

#### ಕೃತ್ತಿವಾಸ ಸಮುದ್ಭವವರ್ಣನ

೧. ಸ್ಕಂದನು ಹೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ಆ ರತ್ನೇಶ್ವರಕ್ಷೇತ್ರದಲ್ಲಿ ನಡೆದ ಮತ್ತೊಂದು ವಿಚಾರವನ್ನು ತಿಳಿಸುವೆನು, ಕೇಳು. ಈ ಚರಿತ್ರೆಯು ಅತ್ಯಂತಾಶ್ಚರ್ಯವನ್ನುಂಟುಮಾಡುವುದಾಗಿಯೂ, ಕೇಳುವವರ ಪಾತಕಗಳನ್ನು ಕಳೆಯುವುದೂ ಆಗಿರುವುದು.

೨. ಹಿಂದೆ ಹೇಳಿದಂತೆ ಮಹೇಶ್ವರನು ಪಾರ್ವತಿಯೊಡನೆ ರತ್ನೇಶ್ವರನ ವಿಷಯವಾದ ಪ್ರಸಂಗವನ್ನು ಮಾಡುತ್ತಿರಲು ಸರ್ವತ್ರದಲ್ಲಿಯೂ "ಕಾಪಾಡು; ಕಾಪಾಡು" ಎಂಬುದಾಗಿ ಮಹತ್ತರವಾದ ಕೋಲಾಹಲ ಶಬ್ದವುಂಟಾಯಿತು.

೩. ಮಹಿಷಾಸುರನ ಮಗನಾದ ಗಜಾಸುರನು ತನ್ನ ಪರಾಕ್ರಮದ ಮದದಿಂದ ಸಮಸ್ತ ಪ್ರಮಥಗಣಗಳನ್ನೂ ಮಥನಮಾಡುತ್ತ ಉನ್ಮತ್ತನಾಗಿ ಈ ಕಡೆಗೇ ಬರುತ್ತಿರುವನು.

೪. ಎಲ್ಲಿ ಎಲ್ಲಿ ಆ ರಾಕ್ಷಸನು ಹೆಜ್ಜೆಯನ್ನು ಭೂಮಿಯಲ್ಲಿಟ್ಟನೊ, ಅಲ್ಲೆಲ್ಲ ಅಚಲವಾದ ಭೂಮಿಯೂ ಸಹ ಅವನ ಭಾರದಿಂದ ನಡುಗಿತು. (ಅವನ ಪದಾಘಾತದಿಂದ ಭೂಮಿಯಲ್ಲಿಯೂ ಪರ್ವತರೂಪಗಳಾದ ನಿಶ್ಚಂಚಲಗಳಾದ ಅಲೆಗಳುಂಟಾದುವು.)

೫. ಅವನ ತೊಡೆಗಳ ರಭಸದಿಂದ ಮಹಾವೃಕ್ಷಗಳೂ ಶಾಖೆವಿಶಾಖೆ

ಯಸ್ಯ ಮೌಲಿಜಸಂಘರ್ಷಾದ್ಘನಾ ವ್ಯೋಮ ತ್ಯಜಂತ್ಯಪಿ ।
ನೀಲಿಮಾನಂ ನ ಚಾದ್ಯಾಪಿ ಜಹ್ಯುಸ್ತತ್ಕೇಶಸಂಗಜಂ ॥ ೬ ॥
ಯಸ್ಯ ನಿಶ್ವಾಸಸಂಭಾರೈರುತ್ತರಂಗಾ ಮಹಾಬ್ಧಯಃ ।
ನದ್ಯೋಽಪ್ಯಮುಂಡಕಲ್ಲೋಲಾ ಭವಂತಿ ತಿಮಿಭಿಃ ಸಹ ॥ ೭ ॥
ಯೋಜನಾನಾಂ ಸಹಸ್ರಾಣಿ ನವ ಯಸ್ಯ ಸಮುಚ್ಛ್ರಯಃ ।
ತಾವಾನೇವ ಹಿ ವಿಸ್ತಾರಸ್ತನೋರ್ಮಾಯಾವಿನೋಽಸ್ಯ ಹಿ ॥ ೮ ॥
ಯಸ್ನೇತ್ರಯೋಃ ಪಿಂಗಲಿಮಾ ತಥಾ ತರಲಿಮಾ ಪುನಃ ।
ವಿದ್ಯುತಾ ನೋಜ್ಝ್ಯತೇಽದ್ಯಾಪಿ ಸೋಽಯಮಾಯಾತಿ ಸತ್ವರಃ ॥ ೯ ॥
ಯಾಂ ಯಾಂ ದಿಶಂ ಸಮಭ್ಯೇತಿ ಸೋಽಯಂ ದುಸ್ಸಹದಾನವಃ ।
ಸಾ ಸಾ ಸನಿಮ್ನಾಭವೇದಸ್ಯ ಸಾಧ್ವಸಾದಿವ ದಿಗ್ಧ್ರುವಂ ॥ ೧೦ ॥
ಬ್ರಹ್ಮಲಬ್ಧವರಶ್ಚಾಯಂ ತೃಣೀಕೃತಜಗತ್ತ್ರಯಃ ।
ಅವಧ್ಯೋಽಹಂ ಭವಾನೀಹ ಸ್ತ್ರೀಪುಂಸ್ಯೈಃ ಕಾಮನಿರ್ಜಿತೈಃ ॥ ೧೧ ॥

---

ಗಳೊಡನೆ ನೆಲಕ್ಕೆ ಬೀಳುತ್ತಿರುವುವು. ಅವನ ಎರಡು ಬಾಹುಗಳ ಹೊಡೆತಗಳಿಂದ ಪರ್ವತಶಿಲೆಗಳೂ ಚೂರ್ಣಿತಗಳಾಗುತ್ತಿರುವುವು.

೬. ಅವನ ಕಿರೀಟದ ಸಂಘಟ್ಟನದಿಂದ ಮೇಘಗಳೂ ಆಕಾಶವನ್ನು ಬಿಡುತ್ತಿರುವುವು. ಅವನ ತಲೆಕೂದಲುಗಳ ಸಂಪರ್ಕದಿಂದುಂಟಾದ ನೀಲವರ್ಣವನ್ನು ಇಂದಿಗೂ ಬಿಡದಿರುವುವು.

೭. ಅವನ ನಿಶ್ವಾಸದ ರಭಸದಿಂದ ಸಮುದ್ರಗಳಲ್ಲಿಯೂ ಮಹಾತರಂಗಗಳು ಏಳುತ್ತಿರುವುವು. ನದಿಗಳೂ ತಮ್ಮಲ್ಲಿ ವಾಸಮಾಡುವ ತಿಮಿ, ತಿಮಿಂಗಲಗಳೊಡನೆ ಬಹುವಾಗಿ ಕ್ಷೋಭವನ್ನು ಹೊಂದುತ್ತಿರುವುವು.

೮. ಅವನ ಎತ್ತರವು ಒಂಬತ್ತುಸಾವಿರ ಯೋಜನವಿರುವುದು. ಮಹಾಮಾಯಾವಿಯಾದ ಅವನ ದೇಹದ ಅಗಲವೂ ಅಷ್ಟೇ ಇರುವುದು.

೯. ಅವನ ನೇತ್ರಗಳಿಂದಲೇ ರಕ್ತವರ್ಣವನ್ನೂ ಚಾಂಚಲ್ಯವನ್ನೂ ಕುಡಿಮಿಂಚುಗಳು ಕಸಿದುಕೊಂಡು ಇಂದಿಗೂ ಬಿಡದಿರುವುವು. ಇಂತಹ ರಾಕ್ಷಸನು ವೇಗವಾಗಿ ಬರುತ್ತಿರುವನು.

೧೦. ದುರ್ನಿವಾರ್ಯನಾದ ಆ ರಾಕ್ಷಸನು ಯಾವ ಯಾವ ದಿಕ್ಕಿಗೆ ಪ್ರಯಾಣಮಾಡುವನೊ, ಆಯಾ ದಿಕ್ಕಿನ ಭೂಭಾಗವೆಲ್ಲವೂ ಅವನ ರಭಸಕ್ಕೆ ಸಿಕ್ಕಿ ನಿಜವಾಗಿಯೂ ನಿಮ್ನೋನ್ನತಭಾವವಿಲ್ಲದಂತೆ ಸಮವಾಗಿರುವುದು.

೧೧. ಪೂರ್ವದಲ್ಲಿ ಜನರು ಬ್ರಹ್ಮದೇವನಿಂದ, "ಕಾಮಾತುರತೆಗೆ ಒಳಪಟ್ಟಿರುವ ಸ್ತ್ರೀಯರಿಂದಾಗಲಿ ಪುರುಷರಿಂದಾಗಲಿ ನಾನು ಮರಣವನ್ನು ಹೊಂದಬಾರದು" ಎಂದು ವರವನ್ನು ಪಡೆದು ಈಗ ಮೂರುಲೋಕಗಳನ್ನೂ ಹುಲ್ಲುಕಡ್ಡಿಗೆ ಸಮಾನವಾಗಿ ಕಾಣುತ್ತಿರುವನು.

ತತಸ್ತ್ರಿಶೂಲಹೇತಿಸ್ತಮಾಯಾಂತಂ ದೈತ್ಯಪುಂಗವಂ ।
ವಿಜ್ಞಾಯಾವಧ್ಯಮನ್ಯೇನ ಶೂಲೇನಾಭಿಜಘಾನ ತಂ ॥ ೧೨ ॥
ಪ್ರೋತಸ್ತೇನ ತ್ರಿಶೂಲೇನ ಸ ಚ ದೈತ್ಯೋ ಗಜಾಸುರಃ ।
ಛತ್ರೀಕೃತಮಿವಾತ್ಮಾನಂ ಮನ್ಯಮಾನೋ ಜಗೌ ಹರಂ ॥ ೧೩ ॥

ಗಜಾಸುರ ಉವಾಚ :—

ತ್ರಿಶೂಲಪಾಣೇ ದೇವೇಶ ಜಾನೇ ತ್ವಾಂ ಸ್ಮರಹಾರಿಣಂ ।
ತವ ಹಸ್ತೇ ಮಮ ವಧಃ ಶ್ರೇಯಾನೇವ ಪುರಾಂತಕ ॥ ೧೪ ॥
ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಅವಧೇಹಿ ಮಮೇರಿತಂ ।
ಸತ್ಯಂ ಬ್ರವೀಮಿ ನಾಸತ್ಯಂ ಮೃತ್ಯುಂಜಯ ವಿಚಾರಯ ॥ ೧೫ ॥
ತ್ವಮೇಕೋ ಜಗತಾಂ ವಂದ್ಯೋ ವಿಶ್ವಸ್ಯೋಪರಿ ಸಂಸ್ಥಿತಃ ।
ಅಹಂ ತ್ವದುಪರಿಷ್ಟಾಚ್ಚ ಸ್ಥಿತೋಽಸ್ಮೀತಿ ಜಿತಂ ಮಯಾ ॥ ೧೬ ॥
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ತ್ವತ್ತ್ರಿಶೂಲಾಗ್ರಸಂಸ್ಥಿತಃ ।
ಕಾಲೇನ ಸರ್ವೈರ್ಮರ್ತವ್ಯಂ ಶ್ರೇಯಸೇ ಮೃತ್ಯುರೀದೃಶಃ ॥ ೧೭ ॥

---

೧೨. ಇಂತೆಂದ ಪ್ರಮಥಗಣಗಳ ಆರ್ತನಾದವನ್ನು ಕೇಳಿ ರಾಕ್ಷಸನು ಸಮೀಪಿಸುತ್ತಿರುವುದನ್ನೂ ಅವನು ಇತರರಿಂದ ವಧಾರ್ಹನಲ್ಲವೆಂಬುದನ್ನೂ ತಿಳಿದು ತ್ರಿಶೂಲಧಾರಿಯಾದ ಮಹೇಶ್ವರನು ತನ್ನ ಶೂಲದಿಂದಲೇ ಅವನನ್ನು ತಿವಿದನು.

೧೩. ತ್ರಿಶೂಲದಿಂದ ಚುಚ್ಚಿ ತನ್ನನ್ನು ಛತ್ರದಂತೆ ಮೇಲಕ್ಕೆ ಎತ್ತಿ ಹಿಡಿದಿರುವ ಆ ಮಹಾದೇವನನ್ನು ಕಂಡು ದಾನವೇಶ್ವರನಾದ ಗಜಾಸುರನು ಇಂತೆಂದು ಹೇಳತೊಡಗಿದನು.

೧೪. ಗಜಾಸುರನು ಹೇಳುತ್ತಾನೆ:—ತ್ರಿಶೂಲಹಸ್ತನೆ! ದೇವಾಧಿದೇವನೆ! ತ್ರಿಪುರಧ್ವಂಸಿಯೆ! ನೀನು ಮನ್ಮಥನನ್ನು ನಿಗ್ರಹಿಸಿರುವೆಯೆಂಬುದನ್ನು ತಿಳಿದಿರುವೆನು. ನಿನ್ನ ಕೈಗಳಿಂದ ವಧೆಯಾಗುವುದೇ ನನಗೆ ಶ್ರೇಯಸ್ಕರವು.

೧೫. ಆದರೆ ಒಂದು ವಿಷಯವನ್ನು ವಿಜ್ಞಾಪಿಸಿಕೊಳ್ಳಲಿಚ್ಛಿಸುವೆನು. ನಾನು ಹೇಳುವ ಮಾತುಗಳನ್ನು ಅವಧಾರಣಮಾಡು. ಎಲೈ ಮೃತ್ಯುಂಜಯನೆ! ನಾನು ಸತ್ಯವಾಗಿ ನುಡಿಯುತ್ತಿರುವನೇ ಅಲ್ಲದೆ ಅಸತ್ಯವನ್ನಾಡುವವನಲ್ಲವೆಂಬುದನ್ನು ವಿಚಾರಿಸಿ ನೋಡು.

೧೬. ನೀನೊಬ್ಬನೇ ಲೋಕಗಳಿಗೆಲ್ಲ ಪೂಜ್ಯನಾಗಿರುವೆ. ಈ ಬ್ರಹ್ಮಾಂಡದ ಮೇಲೂ ನೆಲಸಿರುವೆ. ನಾನಾದರೊ ಈಗ ನಿನಗೂ ನಿನ್ನ ತಲೆಯಮೇಲೆ ಇರುವೆನಾದುದರಿಂದ ನಿನ್ನನ್ನೂ ಕೂಡ ಜಯಿಸಿದಂತೆಯೇ ಆಯಿತು.

೧೭. ನಿನ್ನ ತ್ರಿಶೂಲದ ಕೊನೆಯಲ್ಲಿ ಸಿಕ್ಕಿಕೊಂಡಿರುವ ನಾನೇ ಧನ್ಯನು. ನನ್ನಲ್ಲಿ ಮಹದನುಗ್ರಹವನ್ನು ಮಾಡಿರುವೆ. ನಿಯಮಿತಕಾಲವೊದಗಲು

ಇತಿ ತಸ್ಯ ವಚಃ ಶ್ರುತ್ವಾ ದೇವದೇವಃ ಕೃಪಾನಿಧಿಃ ।
ಪ್ರೋವಾಚ ಪ್ರಹಸಚ್ಛಂಭುರ್ಘಟೋದ್ಭವ ಗಜಾಸುರಂ ॥ ೧೮ ॥
ಈಶ್ವರ ಉವಾಚ :—
ಗಜಾಸುರ ಪ್ರಸನ್ನೋಽಸ್ಮಿ ಮಹಾಪೌರುಷ ತೇ ವಧೇ ।
ಸ್ವಾನುಕೂಲಂ ವರಂ ಬ್ರೂಹಿ ದದಾಮಿ ಸುಮತೇಽಸುರ ॥ ೧೯ ॥
ಇತ್ಯಾಕರ್ಣ್ಯ ಸ ದೈತ್ಯೇಂದ್ರಃ ಪ್ರತ್ಯುವಾಚ ಮಹೇಶ್ವರಂ ।
ಗಜಾಸುರ ಉವಾಚ :—
ಯದಿ ಪ್ರಸನ್ನೋ ದಿಗ್ವಾಸಸ್ತದಾ ನಿತ್ಯಂ ವಸಾನ ಮೇ ॥ ೨೦ ॥
ಇಮಾಂ ಕೃತ್ತಿಂ ವಿರೂಪಾಕ್ಷ ತ್ವತ್ತ್ರಿಶೂಲಾಗ್ನಿಪಾವಿತಾಂ ।
ಸ್ವಪ್ರಮಾಣಾಂ ಸುಖಸ್ಪರ್ಶಾಂ ರಣಾಂಗಣಪಣೀಕೃತಾಂ ॥ ೨೧ ॥
ಇಷ್ಟಗಂಧಿಃ ಸದೈವಾಸ್ತು ಸದೈವಾಸ್ತ್ವತಿಕೋಮಲಾ ।
ಸದೈವ ನಿರ್ಮಲಾಚಾಸ್ತು ಸದೈವಾಸ್ತ್ವತಿಮಂಡನಂ ॥ ೨೨ ॥

---

ಸಕಲರೂ ಮರಣವನ್ನು ಹೊಂದಲೇಬೇಕು. ಆದರೆ ಇಂತಹ ಮರಣವೇ ಶ್ರೇಯಸ್ಕಾರಕವು.''

೧೮. ಎಲೈ ಅಗಸ್ತ್ಯನೆ! ಇಂತೆಂದ ಮಾತುಗಳನ್ನು ಕೇಳಿ ದೇವತಾಸಾರ್ವಭೌಮನೂ, ಕೃಪಾಸಾಗರನೂ ಆದ ಮಹೇಶ್ವರನು ಗಟ್ಟಿಯಾಗಿ ನಗುತ್ತ ಗಜಾಸುರನನ್ನು ಕುರಿತು ಹೇಳತೊಡಗಿದನು.

೧೯. ಈಶ್ವರನು ಹೇಳುತ್ತಾನೆ:— ರಾಕ್ಷಸಕುಲದಲ್ಲಿ ಜನಿಸಿದವನಾದರೂ ಸದ್ಬುದ್ಧಿಯುಳ್ಳ ಗಜಾಸುರನೆ! ನೀನು ಪರಾಕ್ರಮದ ಪರಾಕಾಷ್ಠೆಯನ್ನು ಹೊಂದಿದವನು. ನಿನ್ನಲ್ಲಿ ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು.

೨೦–೨೧. ಈ ಮಾತುಗಳನ್ನು ಕೇಳಿ ಆ ರಾಕ್ಷಸೇಂದ್ರನು ಮಹಾದೇವನಿಗೆ ಪ್ರತ್ಯುತ್ತರವನ್ನು ಕೊಟ್ಟನು. ಗಜಾಸುರನು ಹೇಳುತ್ತಾನೆ:—ದಿಗಂಬರನೆ! ನೀನು ಪ್ರಸನ್ನನಾಗಿರುವೆಯಾದರೆ ಇನ್ನುಮೇಲೆ ಯಾವಾಗಲೂ ನನ್ನ ಈ ಚರ್ಮವನ್ನೇ ಅಚ್ಛಾದಿಸಿಕೊಂಡಿರು. ತ್ರಿಲೋಚನನೆ! ಇದು ನಿನ್ನ ತ್ರಿಶೂಲದ ಅಗ್ನಿಯಿಂದ ಶುದ್ಧಿಗೊಳಿಸಲ್ಪಟ್ಟಿರುವುದು. ನಿನ್ನ ಆಕಾರಕ್ಕೆ ಸದೃಶವೂ, ಶರೀರಕ್ಕೆ ಮೃದುವೂ, ಯುದ್ಧರಂಗದಲ್ಲಿ ಪಣವಾಗಿಡಲ್ಪಟ್ಟುದೂ ಆಗಿರುವುದು.

೨೨. ಈ ಚರ್ಮವೇ ನಿನಗೆ ಇಷ್ಟವಾದ ಸುಗಂಧವುಳ್ಳದುದೂ, ಅತ್ಯಂತ ಕೋಮಲವೂ, ಯಾವಾಗಲೂ ನಿರ್ಮಲವೂ, ಸರ್ವೋತ್ತಮವಾದ ಭೂಷಣದಂತೆ ಅಲಂಕಾರಪ್ರಾಯವೂ ಆಗಿಗಲಿ.

ಮಹಾತಪೋಽನಲಜ್ವಾಲಾಃ ಪ್ರಾಪ್ಯಾಪಿ ಸುಚಿರಂ ವಿಭೋ ।
ನ ದಗ್ಧಾ ಕೃತ್ತಿರೇಷಾ ಮೇ ಪುಣ್ಯಗಂಧನಿಧಿಸ್ತತಃ ॥ ೨೩ ॥
ಯದಿ ಪುಣ್ಯವತೀ ನೈಷಾ ಮಮ ಕೃತ್ತಿರ್ದಿಗಂಬರ ।
ತದಾ ತ್ವದಂಗಸಂಗೋಽಸ್ಯಾಃ ಕಥಂ ಜಾತೋ ರಣಾಂಗಣೇ ॥ ೨೪ ॥
ಅನ್ಯಂ ಚ ಮೇ ವರಂ ದೇಹಿ ಯದಿ ತುಷ್ಟೋಽಸಿ ಶಂಕರ ।
ನಾಮಾಸ್ತು ಕೃತ್ತಿವಾಸಾಸ್ತೇ ಪ್ರಾರಭ್ಯಾದ್ಯತನಂ ದಿನಂ ॥ ೨೫ ॥
ಇತಿ ತಸ್ಯ ವಚಃ ಶ್ರುತ್ವಾ ತಥೇತ್ಯುಕ್ತ್ವಾ ಚ ಶಂಕರಃ ।
ಪುನಃ ಪ್ರೋವಾಚ ತಂ ದೈತ್ಯಂ ಭಕ್ತಿನಿರ್ಮಲಮಾನಸಂ ॥ ೨೬ ॥

ಈಶ್ವರ ಉವಾಚ :—

ಶೃಣು ಪುಣ್ಯನಿಧೇ ದೈತ್ಯ ವರಮನ್ಯಂ ಸುದುರ್ಲಭಂ ।
ಅವಿಮುಕ್ತೇ ಮಹಾಕ್ಷೇತ್ರೇ ರಣತ್ಯಕ್ತಕಲೇವರ ॥ ೨೭ ॥
ಇದಂ ಪುಣ್ಯಶರೀರಂ ತೇ ಕ್ಷೇತ್ರೇಽಸ್ಮಿನ್ಮುಕ್ತಿಸಾಧನೇ ।
ಮಮ ಲಿಂಗಂ ಭವತ್ವತ್ರ ಸರ್ವೇಷಾಂ ಮುಕ್ತಿದಾಯಕಂ ॥ ೨೮ ॥

---

೨೩. ಸರ್ವೇಶ್ವರನೆ! ನಿನ್ನ ಮಹಾತಪಸ್ಸಿನ ಬೆಂಕಿಯ ಜ್ವಾಲೆಗಳನ್ನು ಸಮೀಪಿಸಿದರೂ ಈ ಚರ್ಮವು ಬಹುಕಾಲವಾದರೂ ಭಸ್ಮೀಭೂತವಾಗಲಿಲ್ಲ. ಆದುದರಿಂದಲೇ ಇದು ಪುಣ್ಯ ಮತ್ತು ಸುಗಂಧಗಳಿಂದ ಕೂಡಿರುವುದು.

೨೪. ದಿಗ್ವಾಸನೆ! ಈ ನನ್ನ ಚರ್ಮವು ಪುಣ್ಯದಿಂದ ಕೂಡಿದುದಲ್ಲದಿದ್ದರೆ, ಈ ಯುದ್ಧಭೂಮಿಯಲ್ಲಿ ಇದಕ್ಕೆ ನಿನ್ನ ದೇಹದ ಮತ್ತು ಆಯುಧಗಳ ಸಂಸ್ಪರ್ಶವು ಹೇಗೆ ಉಂಟಾಗುತ್ತಿದ್ದಿತು ?

೨೫. ಶಂಕರನೆ! ನೀನು ಸಂತುಷ್ಟನಾಗಿದ್ದರೆ ನನಗೆ ಮತ್ತೊಂದು ವರವನ್ನೂ ಕೊಡು. ಇಂದಿನ ದಿನ ಮೊದಲುಗೊಂಡು ನಿನಗೆ ಕೃತ್ತಿವಾಸನೆಂಬ ಹೆಸರೂ ಪ್ರಸಿದ್ಧವಾಗುವುದಾಗಲಿ.''

೨೬. ಇಂತೆಂದ ಮಾತುಗಳನ್ನು ಕೇಳಿ ಶಂಕರನು ಹಾಗೇಯೇ ಆಗಲೆಂದು ಅಂಗೀಕರಿಸಿ ಶಿವಭಕ್ತಿಯಿಂದ ಪರಿಶುದ್ಧವಾದ ಮನಸ್ಸುಳ್ಳ ಆ ರಾಕ್ಷಸೇಶ್ವರನನ್ನು ಕುರಿತು ಪುನಃ ಹೇಳತೊಡಗಿದನು.

೨೭–೨೮. ಈಶ್ವರನು ಹೇಳುತ್ತಾನೆ:—ಪುಣ್ಯನಿಧಿಯಾದ ದೈತ್ಯನೆ! ನಿನಗೆ ಅತ್ಯಂತ ದುರ್ಲಭವಾದ ಮತ್ತೊಂದು ವರವನ್ನು ಕೊಡುವೆನು, ಕೇಳು. ನೀನು ಅವಿಮುಕ್ತವೆಂಬ ಆ ಮಹಾಕ್ಷೇತ್ರದಲ್ಲಿ ಯುದ್ಧವನ್ನುಮಾಡಿ ದೇಹವನ್ನು ತ್ಯಜಿಸಿರುವೆ. ಮುಕ್ತಿಗೆ ಸಾಧನವಾದ ಈ ಕ್ಷೇತ್ರದಲ್ಲಿ ತ್ಯಕ್ತವಾದ ನಿನ್ನ ಪವಿತ್ರ ದೇಹವು ನನ್ನ ಲಿಂಗವಾಗಿ ನೆಲಸಿ ಸಕಲ ಮಾನವರಿಗೂ ಮೋಕ್ಷಪ್ರದವಾಗಿ ಬೆಳಗಲಿ.

ಕೃತ್ತಿವಾಸೇಶ್ವರಂ ನಾಮ ಮಹಾಪಾತಕನಾಶನಂ ।
ಸರ್ವೇಷಾಮೇವ ಲಿಂಗಾನಾಂ ಶಿರೋಭೂತಮಿದಂ ಪರಂ ॥ ೨೯ ॥
ಯಾವಂತಿ ಸಂತಿ ಲಿಂಗಾನಿ ವಾರಾಣಸ್ಯಾಂ ಮಹಾಂತ್ಯಪಿ ।
ಉತ್ತಮಂ ತಾವತಾಮೇತದುತ್ತಮಾಂಗವದುತ್ತಮಂ ॥ ೩೦ ॥
ಮಾನವಾನಾಂ ಹಿತಾಯಾತ್ರ ಸ್ಥಾಸ್ಯೇಽಹಂ ಸಪರಿಗ್ರಹಃ ।
ದೃಷ್ಟೇನಾನೇನ ಲಿಂಗೇನ ಪೂಜಿತೇನ ಸ್ತುತೇನ ಚ ।
ಕೃತಕೃತ್ಯೋ ಭವೇನ್ಮರ್ತ್ಯಃ ಸಂಸಾರಂ ನ ವಿಶೇತ್ಪುನಃ ॥ ೩೧ ॥
ರುದ್ರಾಃ ಪಾಶುಪತಾಃ ಸಿದ್ಧಾ ಋಷಯಸ್ತತ್ತ್ವಚಿಂತಕಾಃ ।
ಶಾಂತಾ ದಾಂತಾ ಜಿತಕ್ರೋಧಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥ ೩೨ ॥
ಅವಿಮುಕ್ತೇ ಸ್ಥಿತಾ ಯೇ ತು ಮಮ ಭಕ್ತಾ ಮುಮುಕ್ಷವಃ ।
ಮಾನಾಪಮಾನಯೋಸ್ತುಲ್ಯಾಃ ಸಮಲೋಷ್ಟಾಶ್ಮಕಾಂಚನಾಃ ॥ ೩೩ ॥

---

೨೯. ಕೃತ್ತಿವಾಸೇಶ್ವರನೆಂಬ ಈ ಲಿಂಗವು ಮಹಾಪಾತಕಗಳನ್ನೂ ನಾಶಗೊಳಿಸುವುದು. ಇದು ಈ ಕ್ಷೇತ್ರದಲ್ಲಿರುವ ಸಮಸ್ತಲಿಂಗಗಳಿಗೂ ಉತ್ತಮವೆನಿಸಿ ಶಿರೋಭೂತವಾಗಿರುವುದು.

೩೦. ದೇಹದಲ್ಲಿರುವ ಸರ್ವಾವಯವಗಳಲ್ಲಿಯೂ ತಲೆಯು ಎಂತು ಪ್ರಧಾನವಾಗಿದ್ದುಕೊಂಡು ಉತ್ತಮಾಂಗವೆನಿಸಿರುವುದೊ, ಹಾಗೆಯೇ ಈ ಲಿಂಗವೂ ಕಾಶೀಕ್ಷೇತ್ರದಲ್ಲಿರುವ ಮಹಾವೈಭವಯುಕ್ತಗಳಾದ ಸಮಸ್ತ ಲಿಂಗಗಳಲ್ಲಿಯೂ ಸರ್ವೋತ್ತಮವೆನಿಸಿರುವುದು.

೩೧. ಸಕಲಮಾನವರಿಗೂ ಹಿತವನ್ನುಂಟುಮಾಡುವವನಾಗಿ ನಾನು ಪರಿವಾರ ಸಮೇತವಾಗಿ ಇಲ್ಲಿ ನೆಲೆಸುವೆನು. ಈ ಲಿಂಗವನ್ನು ನೋಡುವುದರಿಂದಲೂ, ಪೂಜಿಸುವುದರಿಂದಲೂ, ಸ್ತೋತ್ರಮಾಡುವುದರಿಂದಲೂ ಮಾನವನು ಕೃತಕೃತ್ಯನಾಗುವುದು ಮಾತ್ರವಲ್ಲದೆ ದೇಹವನ್ನು ಬಿಟ್ಟಮೇಲೆ ಪುನಃ ಸಂಸಾರದಲ್ಲಿ ಪ್ರವೇಶವನ್ನನುಭವಿಸುವುದಿಲ್ಲವು.

೩೨-೩೩. ಏಕಾದಶರುದ್ರರು, ಪಶುಪತಿಯ ಭಕ್ತರಾದ ಸಿದ್ಧರು, ಪರತತ್ತ್ವವನ್ನು ಕುರಿತು ಚಿಂತೆಮಾಡುತ್ತಿರುವ ಮಹರ್ಷಿಗಳು, ಶಮ ದಮ ಸಮನ್ವಿತರು, ಕ್ರೋಧವನ್ನು ಜಯಿಸಿದವರು, ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸುವವರು, ಅಪರಿಗ್ರಹವ್ರತಿಗಳು, ಮುಂತಾದ ಯಾವ ನನ್ನ ಭಕ್ತರು ಮೋಕ್ಷವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಅವಿಮುಕ್ತಕ್ಷೇತ್ರದಲ್ಲಿ ನೆಲೆಸಿ, ಮಾನಾವಮಾನಗಳನ್ನು ಸಮಾನವೆಂದೆಣಿಸಿ, ಮಣ್ಣು, ಕಲ್ಲು, ಚಿನ್ನಗಳನ್ನೊಂದಾಗಿ ಕಾಣುತ್ತಿರುವರೊ, ಅವರನ್ನು ಅನುಗ್ರಹಿಸುವುದಕ್ಕಾಗಿಯೇ ನಾನು ಕೃತ್ತಿವಾಸೇಶ್ವರ ಲಿಂಗದಲ್ಲಿ ಸಾನ್ನಿಧ್ಯವನ್ನಿಟ್ಟಿರುವೆನು.

ಕೃತ್ತಿವಾಸೇಶ್ವರೇ ಲಿಂಗೇ ಸ್ಥಾಸ್ಯೇಽಹಂ ತದನುಗ್ರಹೇ ।
ದಶಕೋಟಿಸಹಸ್ರಾಣಿ ತೀರ್ಥಾನಿ ಪ್ರತಿವಾಸರಂ ॥ ೩೪ ॥
ತ್ರಿಕಾಲಮಾಗಮಿಷ್ಯಂತಿ ಕೃತ್ತಿವಾಸೇ ನ ಸಂಶಯಃ ।
ಕಲಿದ್ವಾಪರಸಂಭೂತಾ ನರಾಃ ಕಲ್ಮಷಬುದ್ಧಯಃ ॥ ೩೫ ॥
ಸದಾಚಾರವಿನಿರ್ಮುಕ್ತಾಃ ಸತ್ಯಶೌಚಪರಾಙ್ಮುಖಾಃ ।
ಮಾಯಯಾ ದಂಭಲೋಭಾಭ್ಯಾಂ ಮೋಹಾಹಂಕೃತಿಸಂಯುತಾಃ॥ ೩೬ ॥
ಶೂದ್ರಾನ್ನಸೇವಿನೋ ವಿಪ್ರಾ ಜಿಹ್ವಾಲಾ ಅಪಿ ಲಾಲಸಾಃ ।
ಸಂಧ್ಯಾಸ್ನಾನಜಪೇಜ್ಯಾಸು ದೂರೀಕೃತಮನೋಧಿಯಃ ॥ ೩೭ ॥
ಕೃತ್ತಿವಾಸೇಶ್ವರಂ ಪ್ರಾಪ್ಯ ಸರ್ವಪಾಪವಿವರ್ಜಿತಾಃ ।
ಸುಖೇನ ಮೋಕ್ಷಮೇಷ್ಯಂತಿ ಯಥಾ ಸುಕೃತಿನಸ್ತಥಾ ॥ ೩೮ ॥
ಕೃತ್ತಿವಾಸೇಶ್ವರಂ ಲಿಂಗಂ ಸೇವ್ಯಂ ಕಾಶ್ಯಾಂ ತತೋ ನರೈಃ ।
ಜನ್ಮಾಂತರಸಹಸ್ರೇಷು ಮೋಕ್ಷೋಽನ್ಯತ್ರ ಸುದುರ್ಲಭಃ ॥ ೩೯ ॥
ಕೃತ್ತಿವಾಸೇಶ್ವರೇ ಲಿಂಗೇ ಲಭ್ಯಸ್ತ್ವೇಕೇನ ಜನ್ಮನಾ ।
ಪೂರ್ವಜನ್ಮಕೃತಂ ಪಾಪಂ ತಪೋದಾನಾದಿಭಿಃ ಶತೈಃ ।
ನಶ್ಯೇತ್ಸದ್ಯೋ ವಿನಶ್ಯೇತ ಕೃತ್ತಿವಾಸೇಶ್ವರೇಕ್ಷಣಾತ್ ॥ ೪೦ ॥

---

೩೪. ಪ್ರತಿದಿವಸದ ತ್ರಿಸಂಧ್ಯೆಗಳಗಲ್ಲಿಯೂ ಕೃತ್ತಿವಾಸೇಶ್ವರನ ಸನ್ನಿಧಿಯಲ್ಲಿ ಹತ್ತುಸಾವಿರ ಕೋಟಿಗಳ ಸಂಖ್ಯೆಯ ತೀರ್ಥಗಳು ಬಂದು ಸೇರುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

೩೫–೩೮. ದ್ವಾಪರ ಮತ್ತು ಕಲಿಯುಗಗಳಲ್ಲಿ ಹುಟ್ಟಿ ಕಲುಷಾತ್ಮರಾದ ಮಾನವರೂ, ಸದಾಚಾರಗಳನ್ನು ಬಿಟ್ಟವರೂ, ಸತ್ಯವಚನಶೌಚಗಳಿಂದ ಪರಾಙ್ಮುಖರೂ, ಮಾಯೆಯಿಂದಲೂ, ದಂಭಲೋಭಗಳಿಂದಲೂ, ಮೋಹಾಹಂಕಾರಗಳಿಂದಲೂ ಕೂಡಿದವರೂ, ಶೂದ್ರಾನ್ನವನ್ನು ಸ್ವೀಕರಿಸಿದ ಬ್ರಾಹ್ಮಣರೂ, ಬಗೆ ಬಗೆಯ ಊಟಗಳಲ್ಲಿ ಜಿಹ್ವಾಚಾಪಲ್ಯವುಳ್ಳವರೂ, ಸಂಧ್ಯಾವಂದನ ಸ್ನಾನ ಜಪಗಳೇ ಮುಂತಾದ ನಿತ್ಯಕರ್ಮಗಳಲ್ಲಿಯೂ, ಯಜ್ಞಯಾಗಾದಿ ನೈಮಿತ್ತಿಕ ಕಾಮ್ಯಕರ್ಮಗಳಲ್ಲಿಯೂ ಮನಸ್ಸುಬುದ್ಧಿಗಳನ್ನು ದೂರಗೊಳಿಸಿರುವವರೂ, ಕೃತ್ತಿವಾಸೇಶ್ವರಲಿಂಗವನ್ನು ಸೇರಿದುದರಿಂದ ತಮ್ಮ ಸಮುಸ್ತ ಪಾಪಗಳನ್ನೂ ನೀಗಿದವರಾಗಿ ಸುಕೃತಗಳನ್ನುಮಾಡಿದ ಭಕ್ತರಂತೆಯೇ ಸುಲಭವಾಗಿ ಮೋಕ್ಷಪದವಿಯನ್ನು ಹೊಂದಿ ಸುಖಿಸುವರು.

೩೯. ಆದುದರಿಂದ ಕಾಶಿಯಲ್ಲಿ ಪ್ರತಿಯೊಬ್ಬನೂ ಕೃತ್ತಿವಾಸೇಶ್ವರಲಿಂಗವನ್ನು ಸೇವಿಸಬೇಕು. ಇಲ್ಲದಿದ್ದರೆ ಸಾವಿರಾರು ಜನ್ಮಾಂತರಗಳು ಕಳೆದರೂ ಮೋಕ್ಷವು ದುರ್ಲಭವಾಗುವುದು.

೪೦. ಆದರೆ ಕೃತ್ತಿವಾಸೇಶ್ವರ ಲಿಂಗದ ಸಂಸೇವನೆಯಿಂದ ಒಂದು ಜನ್ಮ

ಕೃತ್ತಿವಾಸೇಶ್ವರಂ ಲಿಂಗಂ ಯೇಽರ್ಚಯಿಷ್ಯಂತಿ ಮಾನವಾಃ ।
ಪ್ರವಿಷ್ಟಾಸ್ತೇ ಶರೀರೇ ಮೇ ತೇಷಾಂ ನಾಸ್ತಿ ಪುನರ್ಭವಃ ॥ ೪೧ ॥
ಅವಿಮುಕ್ತೇಽತ್ರ ವಸ್ತವ್ಯಂ ಜಪ್ತವ್ಯಂ ಶತರುದ್ರಿಯಂ ।
ಕೃತ್ತಿವಾಸೇಶ್ವರೋ ದೇವೋ ದ್ರಷ್ಟವ್ಯಶ್ಚ ಪುನಃ ಪುನಃ ॥ ೪೨ ॥
ಸಪ್ತಕೋಟಿಮಹಾರುದ್ರೈಃ ಸುಜಪ್ತೈರ್ಯತ್ಫಲಂ ಭವೇತ್ ।
ತತ್ಫಲಂ ಲಭ್ಯತೇ ಕಾಶ್ಯಾಂ ಪೂಜನಾತ್ಕೃತ್ತಿವಾಸಸಃ ॥ ೪೩ ॥
ಮಾಘಕೃಷ್ಣಚತುರ್ದಶ್ಯಾಮುಪೋಷ್ಯ ನಿಶಿ ಜಾಗ್ರಯಾತ್ ।
ಕೃತ್ತಿವಾಸೇಶಮಭ್ಯರ್ಚ್ಯ ಯಃ ಸಮಾಯಾತ್ಪರಾಂ ಗತಿಂ ॥ ೪೪ ॥
ಶುಕ್ಲಾಯಾಂ ಪಂಚದಶ್ಯಾಂ ಯಶ್ಚೈತ್ರ್ಯಾಂ ಕರ್ತಾ ಮಹೋತ್ಸವಂ ।
ಕೃತ್ತಿವಾಸೇಶ್ವರೇ ಲಿಂಗೇ ನ ಸ ಗರ್ಭಂ ಪ್ರವೇಕ್ಷ್ಯತೇ ॥ ೪೫ ॥
ಕಥಯಿತ್ವೇತಿ ದೇವೇಶಸ್ತತ್ಕೃತ್ತಿಂ ಪರಿಗೃಹ್ಯ ಚ ।
ಗಜಾಸುರಸ್ಯ ಮಹತೀಂ ಪ್ರಾವೃಣೋದ್ಧರಿದಂಬರ ॥ ೪೬ ॥

---

ದಲ್ಲಿಯೇ ಲಭ್ಯವಾಗುವುದು. ಪೂರ್ವಜನ್ಮಗಳಲ್ಲಿ ಮಾಡಿದ ಪಾತಕಗಳು ಪ್ರಾಯಶಃ ತಪಸ್ಸು, ದಾನಗಳೇ ಮುಂತಾದ ಸತ್ಕರ್ಮಗಳಿಂದ ಮೆಲ್ಲಮೆಲ್ಲಗೆ ಕ್ಷೀಣಿಸುವುವು. ಕೃತ್ತಿವಾಸೇಶ್ವರನ ದರ್ಶನದಿಂದಲಾದರೊ, ಕ್ಷಣಮಾತ್ರ ದಿಂದಲೇ ಸಕಲ ಪಾಪರಾಶಿಯೂ ಭಸ್ಮವಾಗಿ ಪರಿಣಮಿಸುವುದು.

೪೧. ಯಾವ ಮನುಷ್ಯರು ಕೃತ್ತಿವಾಸೇಶ್ವರಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಿರುವರೊ, ಅವರು ನನ್ನ ಶರೀರದಲ್ಲಿಯೇ ಪ್ರವಿಷ್ಟರಾಗುವರು. ಅವರಿಗೆ ಪುನರ್ಜನ್ಮವೆಂಬುದಿಲ್ಲ.

೪೨. ಮನುಷ್ಯಜನ್ಮವನ್ನು ಪಡೆದಮೇಲೆ ಅವಿಮುಕ್ತಕ್ಷೇತ್ರದಲ್ಲಿ ವಾಸ ಮಾಡಬೇಕು. ಶತರುದ್ರಿಯದ ಜಪವನ್ನು ಮಾಡಬೇಕು. ಮತ್ತೆ ಮತ್ತೆ ಕೃತ್ತಿವಾಸೇಶ್ವರನ ದರ್ಶನವನ್ನು ಮಾಡುತ್ತಿರಬೇಕು.

೪೩. ಮಹಾರುದ್ರಮಂತ್ರಗಳನ್ನು ಸ್ವರಸಹಿತವಾಗಿ ಏಳುಕೋಟಿಸಲ ಜಪಿಸುವುದರಿಂದ ಯಾವ ಫಲವು ಲಭಿಸುವುದೋ, ಕಾಶಿಯಲ್ಲಿರುವ ಕೃತ್ತಿವಾಸೇಶ್ವರನನ್ನು ಪೂಜಿಸುವುದರಿಂದಲೂ ಅದೇ ಫಲವೇ ಸಿಕ್ಕುವುದು.

೪೪. ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ಉಪವಾಸ ದಿಂದ ಜಾಗರಣೆಯನ್ನು ಮಾಡಬೇಕು. ಆ ಕಾಲದಲ್ಲಿ ಕೃತ್ತಿವಾಸೇಶ್ವರಲಿಂಗ ವನ್ನು ಪೂಜಿಸಿದ ಮನುಷ್ಯನು ಪರಮಪದವಿಯನ್ನು ಪಡೆಯುವನು.

೪೫. ಯಾವನು ಕೃತ್ತಿವಾಸೇಶ್ವರಲಿಂಗಕ್ಕೆ ಚೈತ್ರಶುಕ್ಲಪಕ್ಷದ ಪೌರ್ಣಮಿಯ ದಿವಸದಲ್ಲಿ ಯಾತ್ರಾದಿ ಮಹೋತ್ಸವವನ್ನು ನಡೆಸುವನೊ, ಅವನು ದೇಹವನ್ನು ತ್ಯಜಿಸಿದಮೇಲೆ ಪುನಃ ಗರ್ಭವನ್ನು ಪ್ರವೇಶಿಸುವುದಿಲ್ಲ.

೪೬. ಇಂತೆಂದು ಹೇಳುತ್ತ ದಿಗಂಬರನಾಗಿದ್ದ ಆ ಮಹೇಶ್ವರನು ಗಜಾ

ಮಹಾಮಹೋತ್ಸವೋ ಜಾತಸ್ತಸ್ಮಿನ್ನಹನಿ ಕುಂಭಜ ।
ಕೃತ್ತಿವಾಸತ್ವಮಾಪೇದೇ ಯಸ್ಮಿನ್ದೇವೋ ದಿಗಂಬರಃ ॥ ೪೭ ॥
ಯತ್ರ ಛತ್ರೀಕೃತೋ ದೈತ್ಯಃ ಶೂಲಮಾರೋಪ್ಯ ಭೂತಲೇ ।
ತಚ್ಛೂಲೋತ್ಪಾಟನಾಜ್ಜಾತಂ ತತ್ರ ಕುಂಡಂ ಮಹತ್ತರಂ ॥ ೪೮ ॥
ತಸ್ಮಿನ್ಕುಂಡೇ ನರಃ ಸ್ನಾತ್ವಾ ಕೃತ್ವಾ ಚ ಪಿತೃತರ್ಪಣಂ ।
ಕೃತ್ತಿವಾಸೇಶ್ವರಂ ದೃಷ್ಟ್ವಾ ಕೃತಕೃತ್ಯೋ ನರೋ ಭವೇತ್ ॥ ೪೯ ॥

ಸ್ಕಂದ ಉವಾಚ :—

ತಸ್ಮಿಂಸ್ತೀರ್ಥೇ ತು ಯದ್ವೃತ್ತಂ ತದಗಸ್ತೇ ನಿಶಾಮಯ ।
ಕಾಕಾ ಹಂಸತ್ವಮಾಪನ್ನಾಸ್ತತ್ತೀರ್ಥಸ್ಯ ಪ್ರಭಾವತಃ ॥ ೫೦ ॥
ಏಕದಾ ಕೃತ್ತಿವಾಸೇ ತು ಚೈತ್ರ್ಯಾಂ ಯಾತ್ರಾಽಭವತ್ಪುರಾ ।
ಅನ್ನಂ ರಾಶೀಕೃತಂ ತತ್ರ ಹ್ಯುಪಹಾರಸಮುದ್ಭವಂ ॥ ೫೧ ॥
ಬಹುದೇವಲಕೈರ್ವಿಪ್ರ ತಂ ದೃಷ್ಟ್ವಾ ಪಕ್ಷಿಣೋಽಮಿಲನ್ ।
ಪರಸ್ಪರಂ ತದನ್ನಾರ್ಥಂ ಯುದ್ಧ್ಯಂತೋ ವ್ಯೋಮವರ್ತ್ಮನಿ ॥ ೫೨ ॥

---

ಸುರನ ವಿಶಾಲವಾದ ಚರ್ಮವನ್ನು ಸ್ವೀಕರಿಸಿ ಅದನ್ನು ತನ್ನ ದೇಹಕ್ಕೆ ಸುತ್ತಿಕೊಂಡನು.

೪೭. ಎಲೈ ಕುಂಭಸಂಭವನೆ! ಆ ದಿವಸದಲ್ಲಿ ದಿಗಂಬರನಾಗಿದ್ದ ಮಹಾದೇವನು ಕೃತ್ತಿವಾಸನೆಂಬ ಹೆಸರನ್ನು ಪಡೆದನಾದುದರಿಂದ ಅಂದು ಮೂರು ಲೋಕಗಳಲ್ಲಿಯೂ ಮಹತ್ತರವಾದ ಮಹೋತ್ಸವವುಂಟಾಯಿತು.

೪೮. ರಾಕ್ಷಸನನ್ನು ತ್ರಿಶೂಲಕ್ಕೇರಿಸಿ ಛತ್ರಿಯಂತೆ ಹಿಡಿದುಕೊಂಡು ಪರಮೇಶ್ವರನು ವಿಜೃಂಭಿಸಿದನಷ್ಟೆ. ಆ ತ್ರಿಶೂಲದ ದಂಡವನ್ನು ಭೂಮಿಯಿಂದ ಕಿತ್ತು ತೆಗೆದ ಸ್ಥಳದಲ್ಲಿ ವಿಶಾಲವಾದ ಕುಂಡವೊಂದು ನಿರ್ಮಿತವಾಯಿತು.

೪೯. ಆ ಕುಂಡದಲ್ಲಿ ಸ್ನಾನವನ್ನುಮಾಡಿ ಪಿತೃತರ್ಪಣಗಳನ್ನು ನೆರವೇರಿಸಿ, ಕೃತ್ತಿವಾಸೇಶ್ವರನ ದರ್ಶನವನ್ನು ತೆಗೆದುಕೊಳ್ಳಲು ಮನುಷ್ಯನು ಕೃತಕೃತ್ಯತೆಯನ್ನು ಪಡೆಯುವನು.

೫೦. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮುನಿಯೆ! ಆ ತೀರ್ಥದಲ್ಲಿ ಹಿಂದೆ ನಡೆದ ಆಶ್ಚರ್ಯವೊಂದನ್ನು ತಿಳಿಸುವೆನು, ಕೇಳು. ಆ ತೀರ್ಥಪ್ರಭಾವದ ಫಲವಾಗಿ ಕಾಗೆಗಳೂ ಹಂಸಗಳಾಗಿ ಪರಿಣಾಮವನ್ನು ಹೊಂದಿದುವು.

೫೧. ಪೂರ್ವದಲ್ಲಿ ಒಮ್ಮೆ ಚೈತ್ರಮಾಸದ ಪೌರ್ಣಮಿಯ ದಿನದಲ್ಲಿ ಕೃತ್ತಿವಾಸೇಶ್ವರನಿಗೆ ಮಹೋತ್ಸವವು ನಡೆಯಿತು. ಪರಮೇಶ್ವರನ ನೈವೇದ್ಯಕ್ಕಾಗಿ ಸಿದ್ಧಗೊಳಿಸಲ್ಪಟ್ಟಿದ್ದ ಅನ್ನವು ಅಲ್ಲಿ ರಾಶಿಯಾಗಿ ಸುರಿಯಲ್ಪಟ್ಟಿದ್ದಿತು.

೫೨. ಬ್ರಾಹ್ಮಣಶ್ರೇಷ್ಠನೆ! ಅನೇಕ ದೇವತಾರ್ಚಕರಿಂದ ಕೂಡಿದ್ದ ಆ ಅನ್ನ

ಬಲಿಪುಷ್ಟೈರಪುಷ್ಟಾಂಗಾ ರಟಂತಃ ಕರಟಾಃ ಕಟು ।
ಬಲಿಭಿಶ್ಚಾತಿಪುಷ್ಟಾಂಗೈರಬಲಾಶ್ಚಂಚುಭಿರ್ಹತಾಃ ॥ ೫೩ ॥
ತೇ ಹಂಸ್ಯಮಾನಾ ನ್ಯಪತಂಸ್ತಸ್ಮಿನ್ಕುಂಡೇ ನಭೋಂಗಣಾತ್ ।
ಆಯುಃಶೇಷೇಣ ಸಂತ್ರಾತಾ ಹಂಸೀಭೂತಾಸ್ತು ವಾಯಸಾಃ ॥ ೫೪ ॥
ಆಶ್ಚರ್ಯಪಂತಸ್ತತ್ರತ್ಯಾ ಯಾತ್ರಾಯಾಂ ಮಿಲಿತಾ ಜನಾಃ ।
ಊಚುರಂಗುಲಿನಿರ್ದೇಶೈರಹೋ ಪಶ್ಯತ ಪಶ್ಯತ ॥ ೫೫ ॥
ಅಸ್ಮಾಸು ವೀಕ್ಷಮಾಣೇಷು ಕಾಕಾಃ ಕುಂಡೇಽತ್ರ ಯೇಽಪತನ್ ।
ಧಾರ್ತರಾಷ್ಟ್ರಾಸ್ತು ತೇ ಜಾತಾಸ್ತೀರ್ಥಸ್ಯಾಸ್ಯ ಪ್ರಭಾವತಃ ॥ ೫೬ ॥
ಹಂಸತೀರ್ಥಂ ತದಾರಭ್ಯ ಕೃತ್ತಿವಾಸಸಮೀಪತಃ ।
ನಾಮ್ನಾ ಖ್ಯಾತಮಭೂಲ್ಲೋಕೇ ತತ್ಕುಂಡಂ ಕಲಶೋದ್ಭವ ॥ ೫೭ ॥
ಅತೀವಮಲಿನಾತ್ಮಾನೋ ಮಹಾಮಲಿನಕರ್ಮಭಿಃ ।
ಕ್ಷಣಾನ್ನಿರ್ಮಲತಾಂ ಯಾಂತಿ ಹಂಸತೀರ್ಥಕೃತೋದಕಾಃ ॥ ೫೮ ॥

---

ರಾಶಿಯನ್ನು ನೋಡಿ ಬಹುಪಕ್ಷಿಗಳು ಅಲ್ಲಿ ಸೇರಿ ಆ ಅನ್ನಕ್ಕಾಗಿ ತಮ್ಮ ತಮ್ಮ ಲ್ಲಿಯೇ ಕಲಹಗಳನ್ನುಮಾಡುತ್ತ ಆಕಾಶದಲ್ಲಿ ಹಾರುತ್ತಿದ್ದುವು.

೫೩. ಬಲ್ಯನ್ನದಿಂದ ಪುಷ್ಟಾಂಗಗಳುಳ್ಳ ಕಾಗೆಗಳು ಕೃಶಶರೀರಗಳುಳ್ಳ ಕಾಗೆಗಳನ್ನು ಪೀಡಿಸಲು ಅವು ಕರ್ಕಶವಾಗಿ ಕೂಗುತ್ತಿದ್ದುವು. ಅನೇಕ ದುರ್ಬಲ ಪಕ್ಷಿಗಳನ್ನು ಬಲಿಷ್ಠಗಳಾದ ಕಾಗೆಗಳು ತಮ್ಮ ಬಲವಾದ ತೀಕ್ಷ್ಣತುಂಡಗಳಿಂದ ಚುಚ್ಚಿ ಕೊಂದುವು.

೫೪. ಇಂತು ಪೀಡಿಸಲ್ಪಟ್ಟ ಪಕ್ಷಿಗಳು ಸ್ವಲ್ಪವಾದ ಆಯುಶ್ಶೇಷದಿಂದ ಉಳಿಸಲ್ಪಟ್ಟು ಆಕಾಶದಿಂದ ಆ ಕುಂಡದೊಳಕ್ಕೆ ಬಿದ್ದುವು. ಆ ಮಾತ್ರದಿಂದಲೇ ಆ ಕಾಗೆಗಳು ಹಂಸಗಳಾಗಿ ರೂಪಾಂತರವನ್ನು ಹೊಂದಿದುವು.

೫೫. ಮಹೋತ್ಸವಕ್ಕಾಗಿ ಅಲ್ಲಿ ನೆರೆದಿದ್ದ ಜನರೆಲ್ಲರೂ ಈ ದೃಶ್ಯವನ್ನು ಕಂಡು ಆಶ್ಚರ್ಯಭರಿತರಾದರು. ಅವರು ಒಬ್ಬರೊಬ್ಬರಿಗೆ ಬೆರಳುಗಳಿಂದ ತೋರಿಸುತ್ತ ಹೇಳತೊಡಗಿದರು. "ಆಹಾ! ಆಶ್ಚರ್ಯವನ್ನು ನೋಡಿರಿ.

೫೬. ನಾವು ನೋಡುತ್ತಿರುವಂತೆಯೇ ಈ ಕುಂಡದಲ್ಲಿ ಬಿದ್ದ ಕಾಗೆಗಳೆಲ್ಲವೂ ಈ ತೀರ್ಥದ ಮಹಾಮಾಹಾತ್ಮ್ಯದಿಂದ ಕೃಷ್ಣಪಾದಗಳೂ ಕೊಕ್ಕುಗಳೂ ಉಳ್ಳ ಉತ್ತಮಜಾತಿಯ ಹಂಸಗಳಾಗಿ ಮೇಲಕ್ಕೆ ಬರುತ್ತಿರುವುವು."

೫೭. ಕಲಶಜನ್ಮನೆ! ಅಂದು ಮೊದಲಾಗಿ ಕೃತ್ತಿವಾಸೇಶ್ವರನ ಸಮೀಪ ದಲ್ಲಿರುವ ಆ ತೀರ್ಥವು ಹಂಸತೀರ್ಥವೆಂಬ ಹೆಸರಿನಿಂದ ಭೂಮಂಡಲದಲ್ಲೆಲ್ಲ ಪ್ರಖ್ಯಾತಿಯನ್ನು ಪಡೆದಿರುವುದು.

೫೮. ಅತ್ಯಂತ ನಿಕೃಷ್ಟಗಳಾದ ಮಹಾಪಾತಕಗಳನ್ನು ಮಾಡಿದುದರಿಂದ

ಕಾಶ್ಯಾಂ ಸದೈವ ವಸ್ತವ್ಯಂ ಸ್ನಾತವ್ಯಂ ಹಂಸತೀರ್ಥಕೇ ।
ದ್ರಷ್ಟವ್ಯಃ ಕೃತ್ತಿವಾಸೇಶಃ ಪ್ರಾಪ್ತವ್ಯಂ ಪರಮಂ ಪದಂ ॥ ೫೯ ॥
ಕಾಶ್ಯಾಂ ಲಿಂಗಾನ್ಯನೇಕಾನಿ ಮುನೇ ಸಂತಿ ಪದೇ ಪದೇ ।
ಕೃತ್ತಿವಾಸೇಶ್ವರಂ ಲಿಂಗಂ ಸರ್ವಲಿಂಗಶಿರಃ ಸ್ಮೃತಂ ॥ ೬೦ ॥
ಕೃತ್ತಿವಾಸಂ ಸಮಾರಾಧ್ಯ ಭಕ್ತಿಯುಕ್ತೇನ ಚೇತಸಾ ।
ಸರ್ವಲಿಂಗಾರಾಧನಜಂ ಫಲಂ ಕಾಶ್ಯಾಮವಾಪ್ಯತೇ ॥ ೬೧ ॥
ಜಪೋ ದಾನಂ ತಪೋ ಹೋಮಸ್ತರ್ಪಣಂ ದೇವತಾರ್ಚನಂ ।
ಸನ್ನಿಧಾನೇ ಕೃತ್ತಿವಾಸಸ್ಯ ಕೃತಂ ಸರ್ವಮನಂತಕಂ ॥ ೬೨ ॥
ತೀರ್ಥಂ ತ್ವನಾದಿಸಂಸಿದ್ಧಮೇತತ್ಕಲಶಸಂಭವ ।
ಪುನರ್ದೇವಸ್ಯ ಸಾನ್ನಿಧ್ಯಾದ್ವ್ಯಕ್ತಮಾಸೀನ್ಮಹೇಶಿತುಃ ॥ ೬೩ ॥
ಏತಾನಿ ಸಿದ್ಧಲಿಂಗಾನಿ ಚ್ಛನ್ನಾನಿ ಸ್ಯುರ್ಯುಗೇ ಯುಗೇ ।
ಅವಾಪ್ಯ ಶಂಭುಸಾನ್ನಿಧ್ಯಂ ಪುನರಾವಿರ್ಭವಂತಿ ಹಿ ॥ ೬೪ ॥

---

ಕಲ್ಮಷಸಹಿತವಾದ ಅಂತಃಕರಣಗಳುಳ್ಳವರೂ ಸಹ ಆ ತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡುವುದರಿಂದ ಒಂದು ಕ್ಷಣದಲ್ಲಿಯೇ ಪರಿಶುದ್ಧರಾಗುವರು.

೫೯. ಕಾಶಿಯಲ್ಲಿಯೇ ಯಾವಾಗಲೂ ವಾಸಮಾಡಬೇಕು. ಹಂಸತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಕೃತ್ತಿವಾಸೇಶ್ವರನ ದರ್ಶನವನ್ನು ಮಾಡಬೇಕು. ಪರಮಪದವನ್ನು ಪಡೆಯಬೇಕು.

೬೦. ಅಯ್ಯಾ ಮುನಿವರ್ಯನೆ! ಕಾಶೀಕ್ಷೇತ್ರದಲ್ಲಿ ಹೆಜ್ಜೆಹೆಜ್ಜೆಗೂ ಅನೇಕ ಲಿಂಗಗಳು ನೆಲಸಿರುವುವು. ಆದರೆ ಈ ಕೃತ್ತಿವಾಸೇಶ್ವರವೆಂಬ ಲಿಂಗವು ಸಕಲ ಲಿಂಗಗಳಿಗೂ ಶಿರೋಭೂತವೆಂದು ಸ್ಮೃತವಾಗಿರುವುದು.

೬೧. ಕಾಶೀಕ್ಷೇತ್ರದಲ್ಲಿರುವ ಕೃತ್ತಿವಾಸೇಶ್ವರನನ್ನು ಭಕ್ತಿಭರಿತವಾದ ಮನಸ್ಸಿನಿಂದ ಪೂಜೆಮಾಡಿದುದರಿಂದ ಸಮಸ್ತಲಿಂಗಗಳನ್ನೂ ಪೂಜಿಸಿದ ಪುಣ್ಯವು ಮನುಷ್ಯನಿಗೆ ಲಭಿಸುವುದು.

೬೨. ಜಪವಾಗಲಿ, ದಾನವಾಗಲಿ, ತಪಸ್ಸಾಗಲಿ, ಹೋಮವಾಗಲಿ, ಪಿತೃತರ್ಪಣವಾಗಲಿ, ದೇವತಾಪೂಜೆಯಾಗಲಿ, ಕೃತ್ತಿವಾಸೇಶ್ವರನ ಸನ್ನಿಧಿಯಲ್ಲಿ ಮಾಡಲ್ಪಟ್ಟುದಾದರೆ ಅನಂತಫಲದಾಯಕವೆನಿಸುವುದು.

೬೩. ಕಲಶೋದ್ಭವನೆ! ಈ ತೀರ್ಥವು ಅನಾದಿಕಾಲದಿಂದಲೂ ಇಲ್ಲಿ ನೆಲಸಿರುವುದು. ಇದು ಗಜಾಸುರನನ್ನು ನಿಗ್ರಹಿಸಲುದ್ಯುಕ್ತನಾದ ಮಹೇಶ್ವರನ ಸಾನ್ನಿಧ್ಯವಿಶೇಷದ ಫಲವಾಗಿ ಪ್ರಕಟಗೊಂಡಿರುವುದು.

೬೪. ಈ ಕ್ಷೇತ್ರದಲ್ಲಿರುವ ಸಿದ್ಧಲಿಂಗಗಳೆಲ್ಲವೂ ಅನಾದಿಕಾಲದಿಂದ ನೆಲಸಿರುವುವಾದರೂ ಪ್ರತಿಯೊಂದು ಯುಗಾಂತ್ಯದಲ್ಲಿಯೂ ಅದೃಶ್ಯಗಳಾಗುವುವು.

ಹಂಸತೀರ್ಥಸ್ಯ ಪರಿತೋ ಲಿಂಗಾನಾಮಯುತಂ ಮುನೇ ।
ಪ್ರತಿಷ್ಠಿತಂ ಮುನಿವರ್ಯೈರತ್ರಾಸ್ತಿ ದ್ವಿಶತೋತ್ತರಂ ॥ ೬೫ ॥
ಏಕೈಕಂ ಸಿದ್ಧಿದಂ ನೄಣಾಮವಿಮುಕ್ತನಿವಾಸಿನಾಂ ।
ಲಿಂಗಂ ಕಾತ್ಯಾಯನೇಶಾದಿ ಚ್ಯವನೇಶಾಂತಮೇವ ಹಿ ॥ ೬೬ ॥
ಲೋಮಶೇಶಂ ಮಹಾಲಿಂಗಂ ಲೋಮಶೇನ ಪ್ರತಿಷ್ಠಿತಂ ।
ಕೃತ್ತಿವಾಸಃಪ್ರತೀಚ್ಯಾಂ ತು ತದ್ದೃಷ್ಟ್ವಾ ಕ್ವಾಂತಕಾದ್ಭಯಂ ॥ ೬೭ ॥
ಮಾಲತೀಶಂ ಶುಭಂ ಲಿಂಗಂ ಕೃತ್ತಿವಾಸೋತ್ತರೇ ಮಹತ್ ।
ಸಮರ್ಚಯಿತ್ವಾ ತಲ್ಲಿಂಗಂ ರಾಜಾ ಗಜಪತಿರ್ಭವೇತ್ ॥ ೬೮ ॥
ಅಂತಕೇಶ್ವರಲಿಂಗಂ ಚ ಲಿಂಗಂ ತದ್ರುದ್ರದಿಕ್ಸ್ಥಿತಂ ।
ಅತಿಪಾಪೋಽಪಿ ನಿಷ್ಪಾಪೋ ಜಾಯತೇ ತದ್ವಿಲೋಕನಾತ್ ॥ ೬೯ ॥
ಜನಕೇಶಂ ಮಹಾಲಿಂಗಂ ತತ್ಪಾರ಼್್ಶ್ವೇ ಜ್ಞಾನದಂ ಪರಂ ।
ತಲ್ಲಿಂಗವರಿವಸ್ಯಾತೋ ಬ್ರಹ್ಮಜ್ಞಾನಮವಾಪ್ಯತೇ ॥ ೭೦ ॥

---

ಮೂರನೆಯ ಯುಗದಲ್ಲಿ ಪರಮೇಶ್ವರನು ಪುನಃ ಕಾಶಿಯನ್ನು ಸೇರಲು ಆತನ ಸಾನ್ನಿಧ್ಯವನ್ನು ಹೊಂದಿ ಕಾಣಿಸಿಕೊಳ್ಳುವುವು.

೬೫. ಮಹಾಮುನಿಯೆ! ಈ ಹಂಸತೀರ್ಥದ ಸುತ್ತಲೂ ಹತ್ತುಸಾವಿರದ ಇನ್ನೂರು ಮಹಾಲಿಂಗಗಳು ಅನೇಕ ಮುನಿವರ್ಯರಿಂದ ಪ್ರತಿಷ್ಠಿತಗಳಾಗಿರುವುವು.

೬೬. ಇವುಗಳಲ್ಲಿ ಒಂದೊಂದೇ ಕಾಶೀಕ್ಷೇತ್ರವಾಸಿಗಳಾದ ಸಕಲಮಾನವರನ್ನೂ ಸಿದ್ಧರನ್ನಾಗಿ ಮಾಡಲು ಶಕ್ತಿಯುಳ್ಳದ್ದಾಗಿರುವುದು. ಕಾತ್ಯಾಯನೀಶ್ವರನೇ ಮೊದಲಾಗಿ ಚ್ಯವನೇಶ್ವರನು ಕೊನೆಯಾಗಿರುವ ಅನೇಕ ಲಿಂಗಗಳಿರುವುವು.

೬೭–೬೮. ಲೋಮಶಮಹರ್ಷಿಯಿಂದ ಪ್ರತಿಷ್ಠಿತವಾದ ಲೋಮಶೇಶ್ವರ ಮಹಾಲಿಂಗವು ಕೃತ್ತಿವಾಸೇಶ್ವರನಿಗೆ ಪಶ್ಚಿಮದಲ್ಲಿರುವುದು. ಅದನ್ನು ನೋಡಿದವನಿಗೆ ಯಮಧರ್ಮರಾಜನ ಭಯವೆಲ್ಲಿಯದು? ಕೃತ್ತಿವಾಸನಿಗೆ ಉತ್ತರದಲ್ಲಿ ಮಾಲತೀಶ್ವರವೆಂಬ ಪವಿತ್ರವಾದ ಮಹಾಲಿಂಗವಿರುವುದು. ಆ ಲಿಂಗಕ್ಕೆ ಸಪರ್ಯೆಯನ್ನು ಭಕ್ತಿಯಿಂದ ಮಾಡಿದ ರಾಜನು ಗಜಪತಿಯಾಗುವನು.

೬೯. ಅದರ ಈಶಾನ್ಯ ದಿಕ್ಕಿನಲ್ಲಿ ಅಂತಕೇಶ್ವರನಾಮಕವಾದ ಲಿಂಗವೊಂದಿರುವುದು. ಅದನ್ನು ದರ್ಶನಮಾಡುವುದರಿಂದ ಮಹಾಪಾಪಗಳನ್ನು ಮಾಡಿದವನೂ ಸಹ ಪಾಪರಹಿತನಾಗುವನು.

೭೦. ಆ ಅಂತಕೇಶ್ವರನಿಗೆ ಪಕ್ಕದಲ್ಲಿಯೇ ಜ್ಞಾನಪ್ರದವೂ, ಸರ್ವೋತ್ತಮವೂ ಆದ ಜನಕೇಶ್ವರಮಹಾಲಿಂಗವಿರುವುದು. ಆ ಲಿಂಗದ ಪೂಜೆಯನ್ನು ಮಾಡುವುದರಿಂದ ಮಾನವನು ಬ್ರಹ್ಮಜ್ಞಾನವನ್ನು ಪಡೆಯುವನು.

ತದುತ್ತರೇ ಮಹಾಮೂರ್ತಿರಸಿಂತಾಗೋಽಸ್ತಿ ಭೈರವಃ ।
ತಸ್ಯ ದರ್ಶನತಃ ಪುಂಸಾಂ ನ ಭವೇದ್ಯಮದರ್ಶನಂ ॥ ೭೧ ॥
ಶುಷ್ಕೋದರೀ ಚ ತತ್ರಾಸ್ತಿ ದೇವೀ ವಿಕಟಲೋಚನಾ ।
ಕೃತ್ತಿವಾಸಾದುದೀಚ್ಯಾಂ ತು ಕಾಶೀಪ್ರತ್ಯೂಹಭಕ್ಷಿಣೀ ॥ ೭೨ ॥
ಅಗ್ನಿಜಿಹ್ವೋಽಸ್ತಿ ವೇತಾಲಸ್ತಸ್ಯಾ ದೇವ್ಯಾಸ್ತು ನೈರ್ಋತೇ ।
ದದಾತಿ ವಾಂಛಿತಾಂ ಸಿದ್ಧಿಂ ಸೋಽರ್ಚಿತೋ ಭೌಮವಾಸರೇ ॥ ೭೩ ॥
ವೇತಾಲಕುಂಡಂ ತತ್ರಾಸ್ತಿ ಸರ್ವವ್ಯಾಧಿವಿಘಾತಕೃತ್ ।
ತತ್ಕುಂಡೋದಕಸಂಸ್ಪರ್ಶಾದ್ವ್ರಣವಿಸ್ಫೋಟರುಗ್ವ್ರಜೇತ್ ॥ ೭೪ ॥
ವೇತಾಲಕುಂಡೇ ಸುಸ್ನಾತೋ ವೇತಾಲಂ ಪ್ರಣಿಪತ್ಯ ಚ ।
ಲಭೇತ ವಾಂಛಿತಾಂ ಸಿದ್ಧಿಂ ದುರ್ಲಭಾಂ ಸರ್ವದೇಹಿಭಿಃ ॥ ೭೫ ॥
ಗಣೋಽಸ್ತಿ ತತ್ರ ದ್ವಿಭುಜಶ್ಚತುಷ್ಪಾತ್ಪಂಚಶೀರ್ಷಕಃ ।
ತಸ್ಯ ಸಂವೀಕ್ಷಣಾದೇವ ಪಾಪಂ ಯಾತಿ ಸಹಸ್ರಧಾ ॥ ೭೬ ॥

---

೭೧. ಆ ಲಿಂಗದ ಉತ್ತರದಲ್ಲಿ ಭೈರವನ ಕಪ್ಪುಬಣ್ಣದ ಮಹಾಮೂರ್ತಿಯೊಂದು ನೆಲಸಿರುವುದು. ಅದನ್ನು ದರ್ಶನಮಾಡಿದ ಮನುಷ್ಯರಿಗೆ ಯಮರಾಜನ ದರ್ಶನವುಂಟಾಗುವುದಿಲ್ಲ.

೭೨. ಕೃತ್ತಿವಾಸೇಶ್ವರನಿಗೆ ಉತ್ತರದಲ್ಲಿ ಕ್ರೂರನೇತ್ರಗಳುಳ್ಳ ಶುಷ್ಕೋದರಿಯೆಂಬ ದೇವಿಯಿರುವಳು. ಆಕೆಯು ಕಾಶೀಕ್ಷೇತ್ರದ ಮತ್ತು ಕ್ಷೇತ್ರವಾಸಿಗಳ ಸಕಲ ವಿಘ್ನಗಳನ್ನೂ ಭಕ್ಷಣಮಾಡುತ್ತಿರುವಳು.

೭೩. ಆ ದೇವಿಗೆ ನೈಋತ್ಯ ಮೂಲೆಯಲ್ಲಿ ಅಗ್ನಿಜಿಹ್ವನೆಂಬ ಬೇತಾಲನು ಪ್ರತಿಷ್ಠಿತನಾಗಿರುವನು. ಮಂಗಳವಾರದಲ್ಲಿ ಆತನನ್ನು ಪೂಜಿಸಲು ಅಭೀಷ್ಟಗಳ ಸಿದ್ಧಿಗಳನ್ನೆಲ್ಲ ಕೈಗೂಡಿಸುವನು.

೭೪. ಅಲ್ಲಿರುವ ಬೇತಾಲಕುಂಡವು ಸಕಲ ರೋಗಗಳನ್ನೂ ನಾಶಮಾಡುವುದಾಗಿರುವುದು. ಆ ಕುಂಡದ ನೀರನ್ನು ಮುಟ್ಟುವುದರಿಂದಲೇ ವ್ರಣ, ವಿಸ್ಫೋಟಗಳೇ ಮುಂತಾದ ರೋಗಗಳೆಲ್ಲವೂ ಮಾಯವಾಗುವುವು.

೭೫. ಬೇತಾಳಕುಂಡದಲ್ಲಿ ಸ್ನಾನವನ್ನು ತೀರಿಸಿಕೊಂಡು ಬೇತಾಳನಿಗೆ ನಮಸ್ಕಾರವನ್ನು ಮಾಡಲು ಮನುಷ್ಯನು ಸಕಲ ಜೀವರಿಗೂ ದುರ್ಲಭಗಳಾದ ಇಷ್ಟಾರ್ಥಗಳ ಸಿದ್ಧಿಯನ್ನೂ ಸಹ ಪಡೆಯುವನು.

೭೬. ಅಲ್ಲಿಯೇ ಎರಡು ಭುಜಗಳೂ, ನಾಲ್ಕು ಕಾಲುಗಳೂ, ಐದು ತಲೆಗಳೂ ಇರುವ ಗಣನಾಯಕನೊಬ್ಬನಿರುವನು. ಆತನನ್ನು ನೋಡುವ ಮಾತ್ರದಿಂದಲೇ ಪಾಪಗಳು ಸಾವಿರಪಾಲಾಗಿ ನಾಶವಾಗುವುವು.

ತದುತ್ತರೇ ಮುನೇ ರುದ್ರಶ್ಚತುಃಶೃಂಗೋಽಸ್ತಿ ಭೀಷಣಃ ।
ತ್ರಿಪಾದಸ್ತು ದ್ವಿಶೀರ್ಷಾ ಚ ಹಸ್ತಾಃ ಸ್ಯುಃ ಸಪ್ತ ಏವ ಹಿ ॥ ೭೭ ॥
ರೋರೂಯತೇ ವೃಷಾಕಾರಸ್ತ್ರಿಧಾ ಬದ್ಧಃ ಸ ಕುಂಭಜ ।
ಕಾಶೀವಿಘ್ನಕರಾ ಯೇ ಚ ಯೇ ಕಾಶ್ಯಾಂ ಪಾಪಬುದ್ಧಯಃ ॥ ೭೮ ॥
ತೇಷಾಂ ಚ ಸಂಭಿದಾಂ ಕರ್ತುಮಹಂ ಧೃತಕುಠಾರಕಃ ।
ಯೇ ಕಾಶ್ಯಾಂ ವಿಘ್ನಹರ್ತಾರೋ ಯೇ ಕಾಶ್ಯಾಂ ಧರ್ಮಬುದ್ಧಯಃ ॥
ಸುಧಾಘಟಕರಶ್ಚಾಹಂ ತದ್ವಂಶಪರಿಷೇಕಕೃತ್ ।
ತಂ ದೃಷ್ಟ್ವಾ ವೃಷರುದ್ರಂ ವೈ ಪೂಜಯಿತ್ವಾ ತು ಭಕ್ತಿತಃ ॥ ೮೦ ॥
ಮಹಾಮಹೋಪಚಾರೈಶ್ಚ ನ ವಿಘ್ನೈರಭಿಭೂಯತೇ ।
ಮಣಿಪ್ರದೀಪೋ ನಾಗೋಽಸ್ತಿ ತಸ್ಮಾದ್ರುದ್ರಾದುದಗ್ದಿಶಿ ॥ ೮೧ ॥
ಮಣಿಕುಂಡಂ ತದಗ್ರೇ ತು ವಿಷವ್ಯಾಧಿಹರಂ ಪರಂ ।
ತಸ್ಮಿನ್ಕುಂಡೇ ಕೃತಸ್ನಾನಸ್ತಂ ನಾಗಂ ಪರಿವೀಕ್ಷ್ಯ ಚ ॥ ೮೨ ॥

---

೭೭. ಎಲೈ ಮುನಿಯೆ! ಅದರ ಉತ್ತರದಲ್ಲಿಯೇ ರುದ್ರನಿರುವನು. ಆತನಿಗೆ ನಾಲ್ಕು ಕೋಡುಗಳೂ, ಮೂರು ಪಾದಗಳೂ, ಎರಡು ತಲೆಗಳೂ, ಏಳು ಕೈಗಳೂ ಅಳವಡಿಸಿರುವ ಭಯಂಕರ ದೇಹವಿರುವುದು.*

೭೮–೮೧. ಕುಂಭೋದ್ಭವನೆ! ಮೂರು ಬಂಧಗಳಿಗೆ ಸಿಲುಕಿದ ವೃಷಭಾಕಾರನಾದ ಆತನು ಇಂತೆಂದು ಉದ್ಘೋಷಿಸುತ್ತಿರುವನು. "ಕಾಶೀಕ್ಷೇತ್ರಕ್ಕೆ ವಿಘ್ನವನ್ನುಂಟುಮಾಡುವ ಜನರು ಯಾರೊ, ಯಾರು ಕಾಶಿಯಲ್ಲಿ ಪಾಪಬುದ್ಧಿಯುಳ್ಳವರಾಗುವರೊ, ಅವರ ನಿಗ್ರಹವನ್ನು ಮಾಡಲು ನಾನು ಕೊಡಲಿಯನ್ನೆತ್ತಿ ನಿಂತಿರುವೆನು. ಯಾರು ಕಾಶಿಯಲ್ಲಿ ವಿಘ್ನಗಳನ್ನು ಪರಿಹರಿಸುವರೊ, ಅಲ್ಲಿ ಧರ್ಮಕಾರ್ಯಗಳನ್ನು ಮಾಡಬೇಕೆಂಬ ಬುದ್ಧಿಯುಳ್ಳವರೊ, ಅವರಿಗೆ ನಾನು ಅಮೃತಕಳಶವನ್ನು ಕೈಯಲ್ಲಿ ಹಿಡಿದು ವಂಶವನ್ನು ಸೇಚನಮಾಡುತ್ತಿರುವೆನು. ವೃಷರುದ್ರನಾಮಕನಾದ ಆ ದೇವತೆಯನ್ನು ನೋಡಿ ಭಕ್ತಿಯಿಂದ ಯಥಾಶಕ್ತಿಯಾಗಿ ಮಹೋಪಚಾರಗಳಿಂದ ಪೂಜೆಯನ್ನೆಸಗಿದ ಮನುಷ್ಯನು ಎಂದಿಗೂ ವಿಘ್ನಗಳಿಂದ ಪರಾಜಯವನ್ನು ಹೊಂದುವುದಿಲ್ಲ. ಆ ರುದ್ರನಿಗೆ ಉತ್ತರದಿಕ್ಕಿನಲ್ಲಿ ಮಣಿಪ್ರದೀಪನೆಂಬ ನಾಗನು ಪ್ರತಿಷ್ಠಿತನಾಗಿರುವನು.

೮೨. ಆತನ ಇದಿರಿನಲ್ಲಿಯೇ ಮಣಿಕುಂಡವಿರುವುದು. ಅದು ಸಮಸ್ತ

---

* "ಚತ್ವಾರಿ ಶೃಂಗಾ ತ್ರಯೋಽಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋಽಸ್ಯ। ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಗ್ಂ ಆವಿವೇಶ" ಎಂಬ ಮಂತ್ರದ ಅಭಿಪ್ರಾಯದಂತೆ ಮಹೇಶ್ವರನು ನಾಲ್ಕು ವೇದಗಳನ್ನೇ ಶೃಂಗಗಳನ್ನಾಗಿಯೂ, ಮೂರು ಸವನಗಳನ್ನೇ ಪಾದಗಳನ್ನಾಗಿಯೂ, ಪ್ರಾಯಣೀಯ, ಉದಯನೀಯ ಹೋಮಗಳನ್ನೇ ತಲೆಗಳನ್ನಾಗಿಯೂ, ವೇದದ ಏಳು ಛಂದಸ್ಸುಗಳನ್ನೇ ಏಳು ಹಸ್ತಗಳನ್ನಾಗಿಯೂ ಪಡೆದಿರುವನು. ಮಂತ್ರ, ಬ್ರಾಹ್ಮಣ ಮತ್ತು ಕಲ್ಪಗಳಿಂದ ಬದ್ಧನಾದ ಈತನನ್ನೇ ಋತ್ವಿಜರು ಯಾಗಶಾಲೆಗಳಲ್ಲಿ ಋಗ್ಯಜುಸ್ಸಾಮಗಳಿಂದ ಸ್ತೋತ್ರಮಾಡುವರು.

ಮಣಿಮಾಣಿಕ್ಯಸಂಪೂರ್ಣಂ ಗಜಾಶ್ವರಥಸಂಕುಲಂ ।
ಸ್ತ್ರೀರತ್ನಪುತ್ರರತ್ನೈಶ್ಚ ಸಮೃದ್ಧಂ ರಾಜ್ಯಮಾಪ್ನುಯಾತ್ ॥ ೮೩ ॥
ಕೃತ್ತಿವಾಸೇಶ್ವರಂ ಲಿಂಗಂ ಕಾಶ್ಯಾಂ ಯೈರ್ನ ವಿಲೋಕಿತಂ ।
ತೇ ಮರ್ತ್ಯಲೋಕೇ ಭಾರಾಯ ಭುವೋ ಭೂತಾ ನ ಸಂಶಯಃ ॥ ೮೪ ॥

ಸ್ಕಂದ ಉವಾಚ :—

ಕೃತ್ತಿವಾಸಃಸಮುತ್ಪತ್ತಿಂ ಯೇ ಶ್ರೋಷ್ಯಂತೀಹ ಮಾನವಾಃ ।
ತಲ್ಲಿಂಗದರ್ಶನಾಚ್ಛ್ರೇಯೋ ಲಪ್ಸ್ಯಂತೇ ನಾತ್ರ ಸಂಶಯಃ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಕೃತ್ತಿವಾಸಃ ಸಮುದ್ಭವೋಪವರ್ಣನಂ" ನಾಮಾಷ್ಟಷಷ್ಟಿತಮೋಽಧ್ಯಾಯಃ

---

ವಿಷವ್ಯಾಧಿಗಳನ್ನೂ ಪರಿಹರಿಸುವ ಉತ್ಕೃಷ್ಟತೀರ್ಥವಾಗಿರುವುದು. ಆ ಕುಂಡದಲ್ಲಿ ಸ್ನಾನವನ್ನು ಮಾಡಿಕೊಂಡು ಮನುಷ್ಯನು ನಾಗರಾಜನ ದರ್ಶನವನ್ನು ಮಾಡಬೇಕು.

೮೩. ಆ ನರನು ರತ್ನಮಾಣಿಕ್ಯಗಳಿಂದ ಕೂಡಿದುದೂ, ಆನೆ ಕುದುರೆ ತೇರುಗಳಿಂದ ಶೋಭಿಸುವುದೂ, ಸ್ತ್ರೀರತ್ನ ಪುತ್ರರತ್ನಗಳಿಂದ ಬೆಳಗುವುದೂ ಆದ ಸರ್ವಸಮೃದ್ಧಿಯುಳ್ಳ ರಾಜ್ಯದ ಆಡಳಿತವನ್ನು ಹೊಂದುವನು.

೮೪. ಕಾಶೀಕ್ಷೇತ್ರದಲ್ಲಿ ಕೃತ್ತಿವಾಸೇಶ್ವರಲಿಂಗವನ್ನು ಯಾರು ನೋಡುವುದಿಲ್ಲವೊ, ಅವರು ಈ ಮರ್ತ್ಯಲೋಕದಲ್ಲಿ ಜನಿಸಿದರೂ ಕೇವಲ ಭೂಮಿಗೆ ಭಾರಪ್ರಾಯರೇ ಆಗಿರುವರೆಂಬುದರಲ್ಲಿ ಸಂದೇಹವಿಲ್ಲ.

೮೫. ಸ್ಕಂದನು ಹೇಳುತ್ತಾನೆ:—ಯಾವ ಮಾನವರು ಕೃತ್ತಿವಾಸೇಶ್ವರ ಲಿಂಗದ ಉತ್ಪತ್ತಿಯ ಈ ಚರಿತ್ರೆಯನ್ನು ಕೇಳುವರೊ, ಅವರು ಆ ಲಿಂಗದ ದರ್ಶನವನ್ನು ಮಾಡಿದ ಪುಣ್ಯವನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಕೃತ್ತಿವಾಸ ಸಮುದ್ಭವವರ್ಣನ"ವೆಂಬ ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

## ಅಥೈಕೋನಸಪ್ತತಿತಮೋಽಧ್ಯಾಯಃ

### ಅಷ್ಟಷಷ್ಟ್ಯಾಯತನಸಮಾಗಮವರ್ಣನಂ

ಸ್ಕಂದ ಉವಾಚ :—

ಶೃಣ್ವಗಸ್ತ್ಯ ತಪೋರಾಶೇ ಕಾಶ್ಯಾಂ ಲಿಂಗಾನಿ ಯಾನಿ ವೈ ।
ಸೇವಿತಾನಿ ನೃಣಾಂ ಮುಕ್ತ್ಯೈ ಭವೇಯುರ್ಭಾವಿತಾತ್ಮನಾಂ || ೧ ||
ಕೃತ್ತಿಪ್ರಾವರಣಂ ಯತ್ರ ಕೃತಂ ದೇವೇನ ಲೀಲಯಾ ।
ರುದ್ರಾವಾಸ ಇತಿ ಖ್ಯಾತಂ ತತ್ಸ್ಥಾನಂ ಸರ್ವಸಿದ್ಧಿದಂ || ೨ ||
ಸ್ಥಿತೇ ತತ್ರೋಮಯಾ ಸಾರ್ಧಂ ಸ್ವೇಚ್ಛಯಾ ಕೃತ್ತಿವಾಸಸಿ ।
ಆಗತ್ಯ ನಂದೀ ವಿಜ್ಞಪ್ತಿಂ ಚಕ್ರೇ ಪ್ರಣತಿಪೂರ್ವಕಂ || ೩ ||
ದೇವದೇವೇಶ ವಿಶ್ವೇಶ ಪ್ರಾಸಾದಾಃ ಸುಮನೋಹರಾಃ ।
ಸರ್ವರತ್ನಮಯಾ ರಮ್ಯಾಃ ಸಾಷ್ಟಾ ಷಷ್ಟಿರಭೂದಿಹ || ೪ ||
ಭೂರ್ಭುವಃಸ್ವಸ್ತಲೇ ಯಾನಿ ಶುಭಾನ್ಯಾಯತನಾನಿ ಹಿ ।
ಮುಕ್ತಿದಾನ್ಯಪಿ ತಾನೀಹ ಮಯಾ ನೀತಾನಿ ಸರ್ವತಃ || ೫ ||

---

### ಕನ್ನಡದ ಅನುವಾದ

#### ಅಷ್ಟಷಷ್ಟ್ಯಾಯತನ ಸಮಾಗಮವರ್ಣನ

೧. ಸ್ಕಂದನು ಹೇಳುತ್ತಾನೆ:—ತಪೋರಾಶಿಯಾದ ಅಗಸ್ತ್ಯನೆ! ಭಕ್ತಿ ಭರಿತಾಂತಃಕರಣಗಳುಳ್ಳ ಮನುಷ್ಯರಿಗೆ ಸೇವನೆಯಿಂದಲೇ ಮೋಕ್ಷವನ್ನೊದಗಿಸಿ ಕೊಡುವ ಯಾವಯಾವ ಲಿಂಗಗಳು ಕಾಶಿಯಲ್ಲಿರುವುವೊ, ಅವುಗಳನ್ನು ವಿವರಿಸುವೆನು, ಕೇಳು.

೨. ದೇವೇಶ್ವರನು ಲೀಲಾಕೌತುಕದಿಂದ ಗಜಾಸುರನ ಚರ್ಮವನ್ನು ಎಲ್ಲಿ ನಿಂತು ಧರಿಸಿಕೊಂಡನೊ, ಆ ಸ್ಥಳವು ರುದ್ರಾವಾಸವೆಂಬುದಾಗಿ ಪ್ರಖ್ಯಾತವಾಗಿ ಸರ್ವಸಿದ್ಧಿಗಳನ್ನೂ ಕೊಡುತ್ತಿರುವುದು.

೩. ಕೃತ್ತಿವಾಸೇಶ್ವರನು ಪಾರ್ವತೀದೇವಿಯೊಡನೆ ಸ್ವೇಚ್ಛೆಯಾಗಿ ವಿಹರಿಸುತ್ತ ಅಲ್ಲಿಯೇ ನಿಂತುಬಿಡಲು ನಂದಿಯು ಅಲ್ಲಿಗೆ ಬಂದು ಪ್ರಣಾಮವನ್ನು ಮಾಡಿ ಇಂತೆಂದು ವಿಜ್ಞಾಪನೆಯನ್ನು ಮಾಡಿಕೊಂಡನು.

೪. "ದೇವಾಧಿದೇವನೆ! ಲೋಕೇಶ್ವರನೆ! ಅತ್ಯಂತ ಮನೋಹರಗಳೂ, ಸಕಲ ರತ್ನಮಯಗಳೂ, ರಮ್ಯಗಳೂ ಆದ ಅರುವತ್ತೆಂಟು ಪ್ರಾಸಾದಗಳನ್ನು ಇಲ್ಲಿ ತಂದು ಸ್ಥಾಪಿಸಿರುವೆನು.

೫. ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳಲ್ಲಿ ಮಂಗಳಕರಗಳೂ,

ಯತೋ ಯಚ್ಚ ಸಮಾನೀತಂ ಯತ್ರ ಯಚ್ಚ ಕೃತಾಸ್ಪದಂ ।
ಕಥಯಿಷ್ಯಾಮ್ಯಹಂ ನಾಥ ಕ್ಷಣಂ ತದವಧಾರ್ಯತಾಂ ॥ ೬ ॥
ಸ್ಥಾಣುರ್ನಾಮ ಮಹಾಲಿಂಗಂ ದೇವದೇವಸ್ಯ ಮೋಕ್ಷದಂ ।
ಕುರುಕ್ಷೇತ್ರಾದಿಹೋದ್ಭೂತಂ ಕಲಶೇಶೋಽಸ್ತಿ ತತ್ರ ವೈ ॥ ೭ ॥
ತದಗ್ರೇ ಸನ್ನಿಹತ್ಯಾಖ್ಯಾ ಮಹಾಪುಷ್ಕರಿಣೀ ಶುಭಾ ।
ಲೋಲಾರ್ಕಪಶ್ಚಿಮೇ ಭಾಗೇ ಕುರುಕ್ಷೇತ್ರಸ್ಥಲೀ ತು ಸಾ ॥ ೮ ॥
ತತ್ರ ಸ್ನಾತಂ ಹುತಂ ಜಪ್ತಂ ತಪ್ತಂ ದತ್ತಂ ಶುಭಾರ್ಥಿಭಿಃ ।
ಕುರುಕ್ಷೇತ್ರಾದ್ಭವೇತ್ಸತ್ಯಂ ಕೋಟಿಕೋಟಿಗುಣಾಧಿಕಂ ॥ ೯ ॥
ನೈಮಿಷಾದ್ದೇವದೇವೋಽತ್ರ ಬ್ರಹ್ಮಾವರ್ತೇನ ಸಂಯುತಃ ।
ತತ್ರಾಂಶಮಾತ್ರಂ ಸಂಸ್ಥಾಪ್ಯ ಕಾಶ್ಯಾಮಾವಿರಭೂದ್ವಿಭೋ ॥ ೧೦ ॥
ಢುಂಢಿರಾಜೋತ್ತರೇ ಭಾಗೇ ಸಿದ್ಧಿದಂ ಸಾಧಕಸ್ಯ ವೈ ।
ಲಿಂಗಂ ವೈ ದೇವದೇವಾಖ್ಯಂ ತದಗ್ರೇ ಕೂಪ ಉತ್ತಮಃ ।
ಬ್ರಹ್ಮಾವರ್ತ ಇತಿ ಖ್ಯಾತಃ ಪುನರಾವೃತ್ತಿಹೃನ್ನೃಣಾಂ ॥ ೧೧ ॥

---

ಮುಕ್ತಿಪ್ರದಗಳೂ ಆದ ಯಾವ ಯಾವ ಲಿಂಗಗಳಿರುವುವೊ, ಅವುಗಳನ್ನು ನಾನು ಎಲ್ಲೆಡೆಗಳಿಂದಲೂ ಸಂಗ್ರಹಿಸಿ ಇಲ್ಲಿಗೆ ತಂದಿರುವೆನು.

೬. ಎಲ್ಲಿಂದ ಯಾವುದನ್ನು ತಂದಿರುವೆನೊ, ಯಾವುದು ಎಲ್ಲಿ ಸ್ಥಾಪಿತವಾಗಿರುವುದೊ, ಅದೆಲ್ಲವನ್ನೂ ವಿವರಿಸುವೆನು. ಸ್ವಾಮಿಯೆ! ಒಂದು ಕ್ಷಣಕಾಲ ಅದನ್ನು ಏಕಚಿತ್ತನಾಗಿ ಕೇಳು.

೭–೮. ಮೋಕ್ಷಪ್ರದವಾದ ಸ್ಥಾಣುವೆಂಬ ಮಹಾಲಿಂಗವು ಕುರುಕ್ಷೇತ್ರದಿಂದ ಇಲ್ಲಿಗೆ ತರಲ್ಪಟ್ಟಿರುವುದು. ಅಲ್ಲಿ ದೇವಾಧಿದೇವನ ಕಲಾಶೇಷವು ಮಾತ್ರ ಉಳಿದಿರುವುದು. ಅದರ ಇದಿರಿನಲ್ಲಿಯೇ ಸನ್ನಿಹತಿಯೆಂಬ ಹೆಸರಿನ ಪವಿತ್ರವಾದ ಮಹಾ ಪುಷ್ಕರಿಣಿಯೊಂದಿರುವುದು. ಲೋಲಾರ್ಕನಿಗೆ ಪಶ್ಚಿಮದಿಕ್ಕಿನಲ್ಲಿರುವ ಈ ತೀರ್ಥವೇ ನಿಜವಾದ ಕುರುಕ್ಷೇತ್ರಸ್ಥಳವೆಂದು ತಿಳಿಯಬೇಕು.

೯. ಶ್ರೇಯೋಭಿಲಾಷೆಯಿಂದ ಕೂಡಿದವರು ಅಲ್ಲಿ ಮಾಡಿದ ಸ್ನಾನ, ಹೋಮ, ಜಪ, ತಪಸ್ಸು, ದಾನಾದಿ ಸತ್ಕಾರ್ಯಗಳೆಲ್ಲವೂ ಸಾಕ್ಷಾತ್ತಾಗಿ ಕುರುಕ್ಷೇತ್ರದಲ್ಲಿ ಮಾಡಿದ ಕರ್ಮಗಳಿಗಿಂತಲೂ ಕೋಟಿಕೋಟಿಯಷ್ಟು ಗುಣಾಧಿಕ್ಯವನ್ನು ಪಡೆಯುವುವೆಂಬುದು ಸತ್ಯವೆಂದು ತಿಳಿಯಬೇಕು.

೧೦. ಸರ್ವೇಶ್ವರನೆ! ನೈಮಿಷಾರಣ್ಯದಲ್ಲಿ ಅಂಶಮಾತ್ರವನ್ನು ಅವಶೇಷವಾಗಿ ಉಳಿಸಿ ಅಲ್ಲಿದ್ದ ದೇವದೇವನನ್ನು ಬ್ರಹ್ಮಾವರ್ತಕೂಪದೊಡನೆ ತೆಗೆದುಕೊಂಡು ಬಂದು ಕಾಶಿಯಲ್ಲಿ ಸಂಸ್ಥಾಪಿಸಿರುವೆನು.

೧೧. ದೇವದೇವನೆಂಬ ಹೆಸರಿನ ಆ ಲಿಂಗವು ಢುಂಢಿರಾಜನಿಗೆ ಉತ್ತರಭಾಗದಲ್ಲಿ ನೆಲಸಿ ಪೂಜೆಮಾಡುವವರಿಗೆ ಕಾರ್ಯಸಿದ್ಧಿಯನ್ನು ಕೊಡುತ್ತಿರುವುದು.

ತತ್ಕೂಪಾದ್ಭಿಃ ಕೃತಸ್ನಾನೋ ದೇವದೇವಂ ಸಮರ್ಚ್ಯ ಚ ।
ತತ್ಪುಣ್ಯಂ ನೈಮಿಶಾರಣ್ಯಾತ್ಕೋಟಿಕೋಟಿಗುಣಂ ಸ್ಮೃತಂ ॥ ೧೨ ॥
ಗೋಕರ್ಣಾದಯುತರ್ನಾದತ್ರ ಸ್ವಯಮಾವಿರಭೂನ್ಮಹತ್ ।
ಲಿಂಗಂ ಮಹಾಬಲಂ ನಾಮ ಸಾಂಬಾದಿತ್ಯಸಮೀಪತಃ ॥ ೧೩ ॥
ದರ್ಶನಾತ್ಸ್ಪರ್ಶನಾದತ್ರ ಕ್ಷಣಾದೇನೋ ಮಹಾಬಲಂ ।
ವಾತಾಹತಸ್ತೂಲರಾಶಿರಿವ ವಿದ್ರಾತಿ ದೂರತಃ ॥ ೧೪ ॥
ಕಪಾಲಮೋಚನಪುರೋ ದೃಷ್ಟ್ವಾ ಲಿಂಗಂ ಮಹಾಬಲಂ ।
ಮಹಾಬಲಮವಾಪ್ನೋತಿ ನಿರ್ವಾಣನಗರಂ ವ್ರಜೇತ್ ॥ ೧೫ ॥
ಋಣಮೋಚನತಃ ಪ್ರಾಚ್ಯಾಂ ಪ್ರಭಾಸಕ್ಷೇತ್ರಸತ್ತಮಾತ್ ।
ಶಶಿಭೂಷಣಸಂಜ್ಞಂ ತು ಲಿಂಗಮತ್ರ ಪ್ರತಿಷ್ಠಿತಂ ॥ ೧೬ ॥
ತಲ್ಲಿಂಗಸೇವನಾನ್ಮರ್ತ್ಯಃ ಶಶಿಭೂಷಣತಾಂ ವ್ರಜೇತ್ ।
ಪ್ರಭಾಸಕ್ಷೇತ್ರಯಾತ್ರಾಯಾಃ ಪುಣ್ಯಂ ಪ್ರಾಪ್ನೋತಿ ಕೋಟಿಕೃತ್ ॥ ೧೭ ॥

---

ಆ ಲಿಂಗದ ಮುಂದುಗಡೆಯಲ್ಲಿಯೇ ಉತ್ತಮವಾದ ಕೂಪವೂ ಇರುವುದು. ಬ್ರಹ್ಮಾವರ್ತವೆಂಬ ಹೆಸರುಳ್ಳ ಆ ಕೂಪವು ಸ್ನಾನಮಾಡಿದ ಮಾನವರ ಸಂಸಾರದ ಪುನರಾವೃತ್ತಿಯನ್ನು ಪರಿಹರಿಸುವುದು.

೧೨. ಆ ಕೂಪದ ನೀರಿನಲ್ಲಿ ಸ್ನಾನವನ್ನು ಮಾಡಿ ದೇವದೇವನನ್ನು ಪೂಜಿಸಿದವನ ಪುಣ್ಯವು ನೈಮಿಷಾರಣ್ಯದಲ್ಲಿ ಅದೇ ಸೇವೆಯನ್ನು ನಡೆಸಿದುದರ ಕೋಟಿ ಕೋಟಿ ಗುಣಿತಫಲವನ್ನು ಹೋಲುವುದೆಂದು ಹೇಳಲ್ಪಟ್ಟಿರುವುದು.

೧೩. ಗೋಕರ್ಣಕ್ಷೇತ್ರದಿಂದ ಇಲ್ಲಿ ಒಂದು ಮಹಾಲಿಂಗವು ತಾನಾಗಿಯೇ ಉದ್ಭವಿಸಿರುವುದು. ಮಹಾಬಲೇಶ್ವರನೆಂಬ ಹೆಸರುಳ್ಳ ಆ ಲಿಂಗವು ಸಾಂಬಾದಿತ್ಯನಿಗೆ ಸಮೀಪದಲ್ಲಿ ನೆಲಸಿರುವುದು.

೧೪. ಆ ಲಿಂಗದ ದರ್ಶನ ಮತ್ತು ಸ್ಪರ್ಶನಗಳನ್ನು ಮಾಡುವುದರಿಂದ ಮಹಾಬಲಿಷ್ಠವಾದ ಪಾತಕವೂ ಸಹ ಕ್ಷಣಮಾತ್ರದಲ್ಲಿಯೇ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಹತ್ತಿಯ ರಾಶಿಯಂತೆ ದೂರಕ್ಕೆ ಹಾರಿಹೋಗುವುದು.

೧೫. ಕಪಾಲಮೋಚನಕ್ಕೆ ಎದುರಿನಲ್ಲಿರುವ ಮಹಾಬಲೇಶ್ವರಲಿಂಗವನ್ನು ನೋಡಿದ ಮನುಷ್ಯನು ವಿಪುಲವಾದ ದೇಹಬಲವನ್ನು ಪಡೆಯುವುದು ಮಾತ್ರವಲ್ಲದೆ ಕೈವಲ್ಯಪದವಿಯನ್ನೂ ಹೊಂದುವನು.

೧೬. ಋಣಮೋಚನಕ್ಕೆ ಪೂರ್ವದಿಕ್ಕಿನಲ್ಲಿ ಉತ್ತಮ ಕ್ಷೇತ್ರವಾದ ಪ್ರಭಾಸದಿಂದ ತರಲ್ಪಟ್ಟ ಶಶಿಭೂಷಣವೆಂಬ ಹೆಸರುಳ್ಳ ಲಿಂಗವು ಪ್ರತಿಷ್ಠಾಪಿತವಾಗಿರುವುದು.

೧೭. ಆ ಲಿಂಗವನ್ನು ಸಂಸೇವಿಸುವುದರಿಂದ ಮಾನವನು ಚಂದ್ರಶೇಖರನ

ಉಜ್ಜಯಿನ್ಯಾ ಮಹಾಕಾಲಃ ಸ್ವಯಮತ್ರಾಗತೋ ವಿಭುಃ ।
ಯನ್ನಾಮಸ್ಮರಣಾದೇವ ನ ಭಯಂ ಕಲಿಕಾಲತಃ ॥ ೧೮ ॥
ಪ್ರಣವಾಖ್ಯಾನ್ಮಹಾಲಿಂಗಾತ್ಪ್ರಾಚ್ಯಾಂ ಕಲ್ಮಷನಾಶನಂ ।
ಮಹಾಕಾಲಾಭಿಧಂ ಲಿಂಗಂ ದರ್ಶನಾನ್ಮೋಕ್ಷದಂ ಪರಂ ॥ ೧೯ ॥
ಅಯೋಗಂಧೇಶ್ವರಂ ಲಿಂಗಂ ಪುಷ್ಕರಾತ್ತೀರ್ಥಸತ್ತಮಾತ್ ।
ಆವಿರಾಸೀದಿಹ ಮಹತ್ಪುಷ್ಕರೇಣ ಸಹೈವ ತು ॥ ೨೦ ॥
ಮತ್ಸ್ಯೋದರ್ಯುತ್ತರೇ ಭಾಗೇ ದೃಷ್ಟ್ವಾಽಯೋಗಂಧವಿಶ್ವರಂ ।
ಸ್ನಾತ್ವಾಽಯೋಗಂಧಕುಂಡೇ ತು ಭವಾತ್ತಾರಯತೇ ಪಿತೄನ್ ॥ ೨೧ ॥
ಮಹಾನಾದೇಶ್ವರಂ ಲಿಂಗಮಟ್ಟಹಾಸಾದಿಹಾಗತಂ ।
ತ್ರಿಲೋಚನಾದುದೀಚ್ಯಾಂ ತು ತದ್ದೃಷ್ಟ್ವಾ ಮುಕ್ತಯೇ ಮತಂ ॥ ೨೨ ॥
ಮಹೋತ್ಕಟೇಶ್ವರಂ ಲಿಂಗಂ ಮರುತ್ಕೋಟಾದಿಹಾಗತಂ ।
ಕಾಮೇಶ್ವರೋತ್ತರೇ ಭಾಗೇ ದೃಷ್ಟಂ ವಿಮಲಸಿದ್ಧಿದಂ ॥ ೨೩ ॥

---

ಭಾವವನ್ನು ಹೊಂದುವನು. ಮತ್ತು ಪ್ರಭಾಸಕ್ಷೇತ್ರಕ್ಕೆ ಯಾತ್ರೆಯನ್ನು ಮಾಡಿದ ಪುಣ್ಯಕ್ಕೆ ಕೋಟಿಗುಣಿತವಾದ ಪುಣ್ಯವನ್ನು ಪಡೆಯುವನು.

೧೮. ಉಜ್ಜಯಿನೀ ನಗರದಿಂದ ಸರ್ವೇಶ್ವರನಾದ ಮಹಾಕಾಲನು ತಾನೇ ಇಲ್ಲಿಗೆ ಬಂದಿರುವನು. ಆತನ ಹೆಸರನ್ನು ಸ್ಮರಣಮಾಡುವುದರಿಂದಲೇ ಘೋರವಾದ ಕಲಿಕಾಲದ ಭಯವು ಮನುಷ್ಯರಿಗುಂಟಾಗಲಾರದು.

೧೯. ಈ ಮಹಾಕಾಲೇಶ್ವರವೆಂಬ ಲಿಂಗವು ಪ್ರಣವನಾಮಕವಾದ ಮಹಾಲಿಂಗದ ಪೂರ್ವದಲ್ಲಿ.ನೆಲಸಿರುವುದು. ಇದು ಕಲ್ಮಷಗಳನ್ನು ಹದಗೆಡಿಸುವುದಾಗಿ ದರ್ಶನದಿಂದಲೇ ಮೋಕ್ಷವನ್ನು ಕೊಡುವ ಉತ್ತಮಲಿಂಗವೆನಿಸಿರುವುದು.

೨೦. ತೀರ್ಥೋತ್ತಮವೆನಿಸಿದ ಪುಷ್ಕರಕ್ಷೇತ್ರದಿಂದ ಅಯೋಗಂಧೇಶ್ವರವೆಂಬ ಲಿಂಗವೊಂದು ಇಲ್ಲಿ ತಾನಾಗಿಯೇ ಆವಿರ್ಭವಿಸಿ ವಿಶಾಲವಾದ ತಟಾಕದೊಡನೆಯೂ ಕೂಡಿಕೊಂಡಿರುವುದು.

೨೧. ಮತ್ಸ್ಯೋದರೀತೀರ್ಥಕ್ಕೆ ಉತ್ತರಪಾರ್ಶ್ವದಲ್ಲಿರುವ ಅಯೋಗಂಧೇಶ್ವರನನ್ನು ನೋಡಿ ಅಯೋಗಂಧವೆಂಬ ಕುಂಡದಲ್ಲಿ ಸ್ನಾನಮಾಡಿದ ಮನುಷ್ಯನು ಪಿತೃಗಳನ್ನು ಉದ್ಧರಿಸುವನು.

೨೨. ಅಟ್ಟಹಾಸಕ್ಷೇತ್ರದಿಂದ ಇಲ್ಲಿಗೆ ಮಹಾನದೇಶ್ವರಲಿಂಗವು ಆಗಮಿಸಿರುವುದು. ತ್ರಿಲೋಚನನಿಗೆ ಉತ್ತರದಿಕ್ಕಿನಲ್ಲಿರುವ ಆ ಲಿಂಗವು ನೋಡಿದ ಮಾತ್ರದಿಂದಲೇ ಮೋಕ್ಷಪ್ರದವೆಂದು ತಿಳಿಯಲ್ಪಟ್ಟಿರುವುದು.

೨೩. ಮರುತ್ಕೋಟವೆಂಬ ಮಹಾಕ್ಷೇತ್ರದಿಂದ ಮಹೋತ್ಕಟೇಶ್ವರವೆಂಬ

ವಿಶ್ವಸ್ಥಾನಾದಿಹಾಯಾತಂ ಲಿಂಗಂ ವೈ ವಿಮಲೇಶ್ವರಂ ।
ಸ್ವರ್ಗೇಶಾತ್ಪಶ್ಚಿಮೇ ಭಾಗೇ ದೃಷ್ಟಂ ವಿಮಲಸಿದ್ಧಿದಂ ॥ ೨೪ ॥
ಮಹಾವ್ರತಂ ಮಹಾಲಿಂಗಂ ಮಹೇಂದ್ರಾದಿಹ ಸಂಸ್ಥಿತಂ ।
ಸ್ಕಂದೇಶ್ವರಸಮೀಪೇ ತು ಮಹಾವ್ರತಫಲಪ್ರದಂ ॥ ೨೫ ॥
ವೃಂದಾರಕರ್ಷಿವೃಂದಾನಾಂ ಸ್ತುವತಾಂ ಪ್ರಥಮೇ ಯುಗೇ ।
ಉತ್ಪನ್ನಂ ಯನ್ಮಹಾಲಿಂಗಂ ಭೂಮಿಂ ಭಿತ್ವಾ ಸುದುರ್ಭಿದಾಂ ॥ ೨೬ ॥
ಮಹಾದೇವೇತಿ ತೈರುಕ್ತಂ ಯನ್ಮನೋರಥಪೂರಣಾತ್ ।
ವಾರಾಣಸ್ಯಾಂ ಮಹಾದೇವಾಸ್ತದಾರಭ್ಯಾಭವಚ್ಚ ಯತ್ ॥ ೨೭ ॥
ಮುಕ್ತಿಕ್ಷೇತ್ರಂ ಕೃತಂ ಯೇನ ಮಹಾಲಿಂಗೇನ ಕಾಶಿಕಾ ।
ಅವಿಮುಕ್ತೇ ಮಹಾದೇವಂ ಯೋ ದ್ರಕ್ಷ್ಯತ್ಯತ್ರ ಮಾನವಃ ॥ ೨೮ ॥
ಶಂಭುಲೋಕೇ ಗಮಸ್ತಸ್ಯ ಯತ್ರ ತಸ್ಯ ಮೃತಸ್ಯ ಹಿ ।
ಅವಿಮುಕ್ತೇ ಪ್ರಯತ್ನೇನ ತತ್ಸಂಸೇವ್ಯಂ ಮುಮುಕ್ಷುಭಿಃ ॥ ೨೯ ॥

---

ಲಿಂಗವು ಇಲ್ಲಿ ಬಂದು ನೆಲಸಿರುವುದು. ಕಾಮೇಶ್ವರನಿಗೆ ಉತ್ತರಭಾಗದಲ್ಲಿರುವ ಈ ಲಿಂಗವನ್ನು ನೋಡಿದವರಿಗೆ ಇದು ಸುಲಭವಾಗಿಯೇ ಕಾರ್ಯಸಿದ್ಧಿಯನ್ನು ಅನುಗ್ರಹಿಸುವುದು.

೨೪. ವಿಶ್ವಸ್ಥಾನದಿಂದ ವಿಮಲೇಶ್ವರವೆಂಬ ಲಿಂಗವು ಇಲ್ಲಿಗೆ ಬಂದಿರುವುದು. ಸ್ವರ್ಗೇಶ್ವರನಿಗೆ ಪಶ್ಚಿಮಭಾಗದಲ್ಲಿರುವ ಈ ಲಿಂಗವನ್ನು ನೋಡುವುದರಿಂದಲೇ ಮನುಷ್ಯನು ಇಷ್ಟಸಿದ್ಧಿಗಳನ್ನು ಪಡೆಯುವನು.

೨೫–೨೭. ಮಹೇಂದ್ರಪರ್ವತದಿಂದ ಮಹಾವ್ರತವೆಂಬ ಉತ್ತಮಲಿಂಗವು ಇಲ್ಲಿಗೆ ಬಂದು ನೆಲಸಿರುವುದು. ಸ್ಕಂದೇಶ್ವರನಿಗೆ ಸಮೀಪದಲ್ಲಿರುವ ಈ ಲಿಂಗವು ಸೇವನೆಯಿಂದ ಮಹಾವ್ರತಗಳನ್ನಾಚರಿಸಿದ ಫಲವನ್ನು ಕೊಡುವುದು. ಮೊದಲನೆಯ ಕೃತಯುಗದಲ್ಲಿ ದೇವರ್ಷಿಗಳ ಸಮೂಹಗಳೆಲ್ಲವೂ ಸ್ತೋತ್ರಮಾಡುತ್ತಿರಲು ಈ ಲಿಂಗವು ಅತ್ಯಂತ ದುರ್ಭೇದ್ಯವಾದ ಭೂಮಿಯನ್ನೂ ಭೇದಿಸಿಕೊಂಡು ಕಾಣಿಸಿಕೊಂಡಿತು. ಮತ್ತು ಅವರ ಮನೋರಥಗಳನ್ನು ಪೂರೈಸಿದುದರಿಂದ ಆ ಲಿಂಗವನ್ನು ಅವರು ಮಹಾದೇವನೆಂದು ಕರೆದರು. ಅಂದು ಮೊದಲಾಗಿ ಕಾಶಿಯಲ್ಲಿರುವ ಆ ಲಿಂಗವು ಮಹಾದೇವನೆಂದೇ ಹೆಸರನ್ನು ಪಡೆದಿರುವುದು.

೨೮–೨೯. ಈ ಮಹಾಲಿಂಗದ ಪ್ರಭಾವದಿಂದಲೇ ಕಾಶೀಪ್ರದೇಶವು ಮುಕ್ತಿಕ್ಷೇತ್ರವಾಗಿ ಮಾಡಲ್ಪಟ್ಟಿರುವುದು. ಅವಿಮುಕ್ತಕ್ಷೇತ್ರವೆಂಬ ಈ ಪ್ರದೇಶದಲ್ಲಿರುವ ಮಹಾದೇವನನ್ನು ಯಾವ ಮಾನವನು ಬಂದು ನೋಡುವನೊ, ಅವನು ಯಾವ ಸ್ಥಳದಲ್ಲಿ ಮರಣವನ್ನು ಹೊಂದಿದರೂ ಪರಮೇಶ್ವರನ ನಿವಾಸವಾದ ಕೈಲಾಸದಲ್ಲಿಯೇ ವಾಸಮಾಡುವನು. ಆದುದರಿಂದ ಮೋಕ್ಷವನ್ನಪೇಕ್ಷಿಸುವವರು ಅವಿಮುಕ್ತಕ್ಷೇತ್ರದಲ್ಲಿ ಈ ಲಿಂಗವನ್ನು ಪ್ರಯತ್ನದಿಂದ ಸೇವಿಸಬೇಕು.

ಕಲ್ಪಾಂತರೇಽಪಿ ನ ತ್ಯಕ್ತಂ ಕದಾಪ್ಯಾನಂದಕಾನನಂ ।
ಯೇನ ಲಿಂಗಸ್ವರೂಪೇಣ ಮಹಾದೇವೇನ ಸರ್ವದಾ ॥ ೩೦ ॥
ತತ್ಪ್ರಾಸಾದೋಽಯಮಮಲಃ ಸರ್ವರತ್ನಮಯಃ ಶುಭಃ ।
ಹಿರಣ್ಯಗರ್ಭತೀರ್ಥಾಚ್ಚ ಪ್ರತೀಚ್ಯಾಂ ಕ್ಷೇತ್ರರಕ್ಷಕಂ ॥ ೩೧ ॥
ವಾರಾಣಸ್ಯಾಮಧಿಷ್ಠಾತ್ರೀ ದೇವತಾ ಸಾಭಿಲಾಷದಾ ।
ಮಹಾದೇವೇತಿ ಸಂಜ್ಞಾ ವೈ ಸರ್ವಲಿಂಗಸ್ವರೂಪಿಣೀ ॥ ೩೨ ॥
ವಾರಾಣಸ್ಯಾಂ ಮಹಾದೇವೋ ದೃಷ್ಟೋ ಯೈರ್ಲಿಂಗರೂಪಧೃಕ್ ।
ತೇನ ತ್ರೈಲೋಕ್ಯಲಿಂಗಾನಿ ದೃಷ್ಟಾನೀಹ ನ ಸಂಶಯಃ ॥ ೩೩ ॥
ವಾರಾಣಸ್ಯಾಂ ಮಹಾದೇವಂ ಸಮಭ್ಯರ್ಚ್ಯ ಸಕೃನ್ನರಃ ।
ಆಭೂತಸಂಪ್ಲವಂ ಯಾವಚ್ಛಿವಲೋಕೇ ವಸೇನ್ಮುದಾ ॥ ೩೪ ॥
ಪವಿತ್ರೇಪರ್ವಣಿ ಸದಾ ಶ್ರಾವಣೇ ಮಾಸಿ ಯತ್ನತಃ ।
ಲಿಂಗೇ ಪವಿತ್ರಮಾರೋಪ್ಯ ಮಹಾದೇವೇ ನ ಗರ್ಭಭಾಕ್ ॥ ೩೫ ॥
ಪಿತಾಮಹೇಶ್ವರಂ ಲಿಂಗಂ ಗಯಾತೀರ್ಥಾದಿಹಾಗತಂ ।
ಫಲ್ಗುಪ್ರಭೃತಿಭಿಸ್ತೀರ್ಥೈಃ ಸಾರ್ಧಕೋಟ್ಯೈಷ್ಟಸಂಮಿತೈಃ ॥ ೩೬ ॥

---

೩೦. ಕಲ್ಪಾಂತರಗಳಲ್ಲಿಯೂ ಸಹ ಈ ಆನಂದಕಾನನಪ್ರದೇಶವು ಲಿಂಗರೂಪಿಯಾದ ಮಹಾದೇವನಿಂದ ಸರ್ವಾತ್ಮನಾ ಎಂದಿಗೂ ಪರಿತ್ಯಕ್ತವಾಗಲಿಲ್ಲ.

೩೧. ಆ ಮಹಾದೇವನ ಅಪ್ರತಿಮವೂ, ಸಕಲರತ್ನಮಂದಿರವೂ, ಪವಿತ್ರವೂ ಆದ ದೇವಾಲಯವು ಹಿರಣ್ಯಗರ್ಭತೀರ್ಥಕ್ಕೆ ಪಶ್ಚಿಮದಲ್ಲಿ ನೆಲಸಿ ಕ್ಷೇತ್ರವನ್ನು ಸಂರಕ್ಷಿಸುತ್ತಿರುವುದು.

೩೨. ಸಮಸ್ತಲಿಂಗಗಳ ಸ್ವರೂಪವನ್ನೂ ತಾಳಿರುವ ದೇವತೆಯು ವಾರಾಣಸಿಯಲ್ಲಿ ಅಧಿಷ್ಠಾನಮಾಡಿರುವವಳಾಗಿ ಮಹಾದೇವನೆಂಬ ಹೆಸರಿನಿಂದಲೇ ಭಕ್ತರ ಸಕಲಾಭೀಷ್ಟಗಳನ್ನೂ ಸಂಪೂರ್ಣಗೊಳಿಸುತ್ತಿರುವಳು.

೩೩. ವಾರಾಣಸಿಯಲ್ಲಿ ಲಿಂಗರೂಪವನ್ನು ಧರಿಸಿರುವ ಮಹಾದೇವನನ್ನು ಯಾರು ನೋಡಿರುತ್ತಾರೆಯೊ, ಅವರು ಮೂರುಲೋಕಗಳಲ್ಲಿ ನೆಲಸಿರುವ ಸಮಸ್ತ ಲಿಂಗಗಳನ್ನೂ ನೋಡಿದವರಿಗೆ ಸಮರೆಂಬುದರಲ್ಲಿ ಸಂಶಯವಿಲ್ಲ.

೩೪. ವಾರಾಣಸಿಯಲ್ಲಿ ನೆಲಸಿರುವ ಮಹಾದೇವನನ್ನು ಒಮ್ಮೆಯಾದರೂ ಪೂಜಿಸಿದ ಮಾನವನು ಪಂಚಭೂತಗಳ ಪ್ರಳಯವಾಗುವವರೆಗೂ ಸಂತೋಷವುಳ್ಳವನಾಗಿ ಶಿವಲೋಕದಲ್ಲಿ ವಾಸಮಾಡುತ್ತಿರುವನು.

೩೫. ಪ್ರತಿವರ್ಷದ ಶ್ರಾವಣಮಾಸದಲ್ಲಿ ಶುಕ್ಲಚತುರ್ದಶಿಯ ದಿನದಲ್ಲಿ ಪ್ರಯತ್ನಪೂರ್ವಕವಾಗಿ ಮಹಾದೇವೇಶ್ವರನ ಲಿಂಗದಲ್ಲಿ ಪವಿತ್ರಸೂತ್ರವನ್ನು ಧಾರಣೆಮಾಡಿಸಲು ಪುನಃ ಗರ್ಭವಾಸಕ್ಕೆ ಮನುಷ್ಯನು ಭಾಗಿಯಾಗಲಾರನು.

೩೬. ಪುಣ್ಯಕರವಾದ ಗಯಾಕ್ಷೇತ್ರದಿಂದ ಪಿತಾಮಹೇಶ್ವರಲಿಂಗವು ಇಲ್ಲಿಗೆ

ಧರ್ಮೇಣ ಯತ್ರ ವೈ ತಪ್ತಂ ಯುಗಾನಾಮಯುತಂ ಶತಂ ।
ಸಾಕ್ಷೀಕೃತ್ಯ ಮಹಾಲಿಂಗಂ ಶ್ರೀಮದ್ಧರ್ಮೇಶ್ವರಾಭಿಧಂ ॥ ೩೭ ॥
ಪಿತಾಮಹೇಶ್ವರಂ ಲಿಂಗಂ ಸಮಭ್ಯರ್ಚ್ಯ ನರೋ ಮುದಾ ।
ತ್ರಿಃಸಪ್ತಕುಲಸಂಯುಕ್ತೋ ಮುಚ್ಯತೇ ನಾತ್ರ ಸಂಶಯಃ ॥ ೩೮ ॥
ಪ್ರಯಾಗಾತ್ತೀರ್ಥರಾಜಾಚ್ಚ ಶೂಲಟಂಕೋ ಮಹೇಶ್ವರಃ ।
ತೀರ್ಥರಾಜೇನ ಸಹಿತಃ ಸ್ಥಿತ ಆಗತ್ಯ ವೈ ಸ್ವಯಂ ॥ ೩೯ ॥
ನಿರ್ವಾಣಮಂಡಪಾದ್ರಮ್ಯಾದವಾಚ್ಯಾಮತಿ ನಿರ್ಮಲಃ ।
ಪ್ರಾಸಾದೋ ಮೇರುಣಾ ಯಸ್ಯ ಸ್ಪರ್ಧತೇ ಕಾಂಚನೋಜ್ಜ್ವಲಃ ॥ ೪೦ ॥
ದೇವೇನೈವ ವರೋ ದತ್ತೋ ಯತ್ರ ಪೂರ್ವಯುಗಾಂತರೇ ।
ಪೂಜ್ಯೋ ಮಹೇಶ್ವರಃ ಕಾಶ್ಯಾಂ ಪ್ರಥಮಂ ಕಲುಷಾಪಹಃ ॥ ೪೧ ॥
ಯಃ ಪ್ರಯಾಗ ಇಹ ಸ್ನಾತೋ ನಮಸ್ಯತಿ ಮಹೇಶ್ವರಂ ।
ಸಮಭ್ಯರ್ಚ್ಯ ವಿಧಾನೇನ ಮಹಾಸಂಭಾರವಿಸ್ತರೈಃ ॥ ೪೨ ॥

---

ಬಂದಿರುವುದು. ಅದು ಫಲ್ಗುವೇ ಮೊದಲಾದ ಎಂಟೂವರೆಕೋಟಿ ಸಂಖ್ಯೆಯ ತೀರ್ಥಗಳಿಂದೊಡಗೂಡಿ ಇಲ್ಲಿ ನೆಲಸಿರುವುದು.

೩೭. ಆ ಲಿಂಗವನ್ನೇ ಪೂರ್ವದಲ್ಲಿ ಧರ್ಮರಾಜನು ಹತ್ತುಲಕ್ಷ ಯುಗಗಳ ಕಾಲದವರೆಗೂ ತಪಸ್ಸಿನಿಂದಾರಾಧಿಸಿದನು. ಆತನಿಗೆ ಸಾಕ್ಷಾತ್ಕರಿಸಿದ ಈ ಲಿಂಗವು ಅಂದಿನಿಂದ ಶ್ರೀಮದ್ಧರ್ಮೇಶ್ವರವೆಂಬ ಹೆಸರನ್ನು ಪಡೆದಿರುವುದು.

೩೮. ಯಾವನು ಸಂತೋಷದಿಂದ ಪಿತಾಮಹೇಶ್ವರಲಿಂಗವನ್ನು ಪೂಜಿಸುವನೊ, ಅವನು ಇಪ್ಪತ್ತೊಂದು ಕುಲಗಳೊಡನೆ ಮೋಕ್ಷವನ್ನು ಹೊಂದುವನು. ಇದರಲ್ಲಿ ಸಂದೇಹವಿಲ್ಲ.

೩೯. ತೀರ್ಥರಾಜವೆಂದು ಪ್ರಸಿದ್ಧವಾಗಿರುವ ಪ್ರಯಾಗದಿಂದ ಉತ್ತಮ ತೀರ್ಥದೊಡಗೂಡಿ ಮಹೇಶ್ವರನು ಶೂಲಟಂಕನೆನಿಸಿ ತಾನೇ ಇಲ್ಲಿಗೆ ಬಿಜಯ ಮಾಡಿಸಿ ಪ್ರತಿಷ್ಠಿತನಾಗಿರುವನು.

೪೦. ರಮ್ಯವಾದ ನಿರ್ವಾಣಮಂಟಪದಿಂದೀಚೆಗೆ ಕಾಂಚನದಿಂದಲಂಕೃತವಾಗಿ ಉಜ್ಜ್ವಲವಾಗಿರುವ ದೇವಾಲಯವೊಂದು ಅತಿಸ್ವಚ್ಛತೆಯಿಂದ ಕೂಡಿ ಔನ್ನತ್ಯದಿಂದ ಮೇರುಪರ್ವತದೊಡನೆ ಸ್ಪರ್ಧಿಸುತ್ತಿರುವುದು.

೪೧. ಅಲ್ಲಿಯೇ ಮುನ್ನ ಯುಗಾಂತರದಲ್ಲಿ "ಕಲ್ಮಷನಾಶಕನಾದ ಮಹೇಶ್ವರನೇ ಕಾಶಿಯಲ್ಲಿ ಮೊದಲ ಪೂಜೆಯನ್ನು ಪಡೆಯಲು ಅರ್ಹನು" ಎಂಬುದಾಗಿ ದೇವದೇವನಿಂದಲೇ ವರವು ಕೊಡಲ್ಪಟ್ಟಿತು.

೪೨-೪೩. ಯಾವ ಮಾನವನು ಈ ಪ್ರಯಾಗತೀರ್ಥದಲ್ಲಿ ಸ್ನಾನವನ್ನು ಮಾಡಿ ಮಹೇಶ್ವರನನ್ನು ಅನೇಕವಿಧ ಪೂಜಾಸಾಮಗ್ರಿಗಳಿಂದ ವಿಧ್ಯುಕ್ತವಿಧಾನ

ಪ್ರಯಾಗಸ್ನಾನಜಾತ್ಪುಣ್ಯಾಚ್ಛೂಲಟಂಕವಿಲೋಕನಾತ್ ।
ಸಪ್ರಾಪ್ನುಯಾನ್ನಸಂದೇಹಃ ಪುಣ್ಯಂ ಕೋಟಿಗುಣೋತ್ತರಂ ॥ ೪೩ ॥
ಶಂಕುಕರ್ಣಾನ್ಮಹಾಕ್ಷೇತ್ರಾನ್ಮಹಾತೇಜ ಇತೀರಿತಂ ।
ಲಿಂಗಮಾವಿರಭೂದತ್ರ ಮಹಾತೇಜೋ ವಿವೃದ್ಧಿದಂ ॥ ೪೪ ॥
ಮಹಾತೇಜೋನಿಧಿಸ್ತಸ್ಯ ಪ್ರಾಸಾದೋಽತೀವ ನಿರ್ಮಲಃ ।
ಜ್ವಾಲಾಜಟಿಲಿತಾಕಾಶೋ ಮಾಣಿಕ್ಯೈರೇವ ನಿರ್ಮಿತಃ ॥ ೪೫ ॥
ತಲ್ಲಿಂಗದರ್ಶನಾತ್ಸ್ಪರ್ಶಾತ್ಸ್ತವನಾಚ್ಚ ಸಮರ್ಚನಾತ್ ।
ಪ್ರಾಪ್ಯತೇ ತತ್ಪರಂ ಧಾಮ ಯತ್ರ ಗತ್ವಾ ನ ಶೋಚತೇ ॥ ೪೬ ॥
ವಿನಾಯಕೇಶ್ವರಾತ್ಪೂರ್ವಂ ಮಹಾತೇಜಃ ಸಮರ್ಚನಾತ್ ।
ತೇಜೋಮಯೇನ ಯಾನೇನ ಯಾತಿ ಮಾಹೇಶ್ವರಂ ಪದಂ ॥ ೪೭ ॥
ರುದ್ರಕೋಟಿಸಮಾಖ್ಯಾತಾತ್ತೀರ್ಥಾತ್ಪರಮಪಾವನಂ ।
ಮಹಾಯೋಗೀಶ್ವರಂ ಲಿಂಗಮಾವಿಶ್ಚಕ್ರೇ ಸ್ವಯಂ ಪರಂ ॥ ೪೮ ॥

---

ದಿಂದ ಪೂಜಿಸಿ ಆತನಿಗೆ ನಮಸ್ಕರಿಸುವನೊ, ಅವನು ಪ್ರಯಾಗಕ್ಷೇತ್ರದಲ್ಲಿ ಸ್ನಾನವನ್ನು ಮಾಡಿ ಶೂಲಟಂಕೇಶ್ವರನ ದರ್ಶನವನ್ನು ಮಾಡಿದ ಪುಣ್ಯಕ್ಕೆ ಕೋಟಿ ಗುಣಿತವಾದ ಪುಣ್ಯವನ್ನು ಪಡೆಯುವನೆಂಬುದರಲ್ಲಿ ಸಂದೇಹವಿಲ್ಲ.

೪೪. ಶಂಕುಕರ್ಣವೆಂಬ ಮಹಾಕ್ಷೇತ್ರದಿಂದ ಮಹಾತೇಜವೆಂದು ಕರೆಯಲ್ಪಡುತ್ತಿರುವ ಮಹಾಲಿಂಗವು ತಾನೇ ಇಲ್ಲಿ ಆವಿರ್ಭವಿಸಿರುವುದು. ಇದು ಭಜಿಸಿದವರಿಗೆ ಮಹತ್ತರವಾದ ತೇಜಸ್ಸನ್ನು ಅಭಿವೃದ್ಧಿಗೊಳಿಸುವುದು.

೪೫. ಈ ಲಿಂಗವು ಮಹಾತೇಜಸ್ಸಿನ ನಿಧಿಯಾಗಿರುವುದು. ಇದರ ಪ್ರಾಸಾದವಾದರೊ, ಅತ್ಯಂತ ನಿರ್ಮಲವೂ, ಕಾಂತಿಯಿಂದ ಆಕಾಶವನ್ನೆಲ್ಲ ತುಂಬಿರುವುದೂ ಆಗಿ ಕೇವಲ ನವರತ್ನಗಳಿಂದಲೇ ನಿರ್ಮಿಸಲ್ಪಟ್ಟಿರುವುದು.

೪೬. ಈ ಲಿಂಗದ ದರ್ಶನ, ಸ್ಪರ್ಶನ, ಸ್ತೋತ್ರ, ಸಮರ್ಚನೆಗಳನ್ನು ಮಾಡುವುದರಿಂದ ಮನುಷ್ಯನು ಶೋಕಕ್ಕೆಡೆಗೊಡದಿರುವಂತಹ ಪರಮಪದಕ್ಕೆ ಹೋಗಿ ಸೇರುವನು.

೪೭. ವಿನಾಯಕೇಶ್ವರನಿಗೆ ಪೂರ್ವದಲ್ಲಿರುವ ಈ ಮಹಾತೇಜೋಲಿಂಗವನ್ನು ಪೂಜಿಸುವುದರಿಂದ ತೇಜಸ್ಸಿನಿಂದೊಡಗೂಡಿದ ವಿಮಾನದಲ್ಲಿ ಕುಳಿತು ಮಹೇಶ್ವರನ ಸ್ಥಾನವನ್ನು ಪಡೆಯುವನು.

೪೮. ಪರಮಪವಿತ್ರವೆನಿಸಿದ ರುದ್ರಕೋಟಿಯೆಂಬ ಹೆಸರಿನ ತೀರ್ಥದಿಂದ ಉತ್ತಮವಾದ ಮಹಾಯೋಗೀಶ್ವರವೆಂಬ ಲಿಂಗವು ತಾನಾಗಿಯೇ ಇಲ್ಲಿಗೆ ಬಂದು ನೆಲಸಿರುವುದು.

ಪಾರ್ವತೀಶ್ವರಲಿಂಗಸ್ಯ ಸಮೀಪೇ ಸರ್ವಸಿದ್ಧಿಕೃತ್ ।
ತಲ್ಲಿಂಗದರ್ಶನಾತ್ಪುಂಸಾಂ ಕೋಟಿಲಿಂಗಫಲಂ ಭವೇತ್ ॥ ೪೯ ॥
ತತ್ಪ್ರಾಸಾದಸ್ಯ ಪರಿತೋ ರುದ್ರಾಣಾಂ ಕೋಟಿಸಂಮಿತಾಃ ।
ಪ್ರಾಸಾದಾ ರಮ್ಯಸಂಸ್ಥಾನಾ ನಿರ್ಮಿತಾ ರುದ್ರಮೂರ್ತಿಭಿಃ ॥ ೫೦ ॥
ಕಾಶ್ಯಾಂ ರುದ್ರಸ್ಥಲೀ ಸಾ ತು ಪಠ್ಯತೇ ವೇದವಾದಿಭಿಃ ।
ರುದ್ರಸ್ಥಲ್ಯಾಂ ಮೃತಾ ಯೇ ವೈ ಕೃಮಿಕೀಟಪತಂಗಕಾಃ ॥ ೫೧ ॥
ಪಶುಪಕ್ಷಿಮೃಗಾ ಮರ್ತ್ಯಾ ಮ್ಲೇಚ್ಛಾ ವಾಪ್ಯಥ ದೀಕ್ಷಿತಾಃ ।
ತೇಷಾಂ ತು ರುದ್ರಭೂತಾನಾಂ ಪುನರಾವೃತ್ತಿರತ್ರ ನ ॥ ೫೨ ॥
ಜನ್ಮಾಂತರಸಹಸ್ರೇ ವಾ ಯತ್ಪಾಪಂ ಸಮುಪಾರ್ಜಿತಂ ।
ರುದ್ರಸ್ಥಲೀಂ ಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಂ ॥ ೫೩ ॥
ಅಕಾಮೋ ವಾ ಸಕಾಮೋ ವಾ ತಿರ್ಯಗ್ಯೋನಿಗತೋಽಪಿ ವಾ ।
ರುದ್ರಸ್ಥಲ್ಯಾಂ ತ್ಯಜನ್ಪ್ರಾಣಾನ್ಪರಂ ನಿರ್ವಾಣಮಾಪ್ನುಯಾತ್ ॥ ೫೪ ॥

---

೪೯. ಇದು ಪಾರ್ವತೀಶ್ವರಲಿಂಗದ ಸಮೀಪದಲ್ಲಿಯೇ ನೆಲಸಿರುವುದಾಗಿ ಸಕಲ ಸಿದ್ಧಿಗಳನ್ನೂ ಉಂಟುಮಾಡುತ್ತಿರುವುದು. ಆ ಲಿಂಗವನ್ನು ನೋಡುವ ಮಾತ್ರದಿಂದಲೇ ಕೋಟಿಲಿಂಗದರ್ಶನದ ಪುಣ್ಯವು ಲಭಿಸುವುದು.

೫೦. ಆ ದೇವಾಲಯದ ಸುತ್ತಲೂ ರುದ್ರರಿಗೆ ಮನೋಹರಗಳಾದ ಒಂದು ಕೋಟಿ ಸಂಖ್ಯೆಯ ಪ್ರಾಸಾದಗಳು ನೆಲಸಿರುವುವು. ಅವುಗಳೆಲ್ಲವೂ ರುದ್ರ ಮೂರ್ತಿಗಳಿಂದ ನಿರ್ಮಿಸಲ್ಪಟ್ಟವುಗಳು.

೫೧–೫೨. ಕಾಶಿಯಲ್ಲಿ ಈ ಪ್ರದೇಶವನ್ನು ವೇದವಾದಿಗಳಾದವರು ರುದ್ರ ಸ್ಥಳಿಯೆಂದೇ ಕರೆಯುತ್ತಿರುವರು. ಈ ರುದ್ರಸ್ಥಳಿಯಲ್ಲಿ ದೇಹವನ್ನು ತ್ಯಜಿಸಿದ ಕ್ರಿಮಿಗಳೇ ಆಗಲಿ, ಕೀಟಗಳಾಗಲಿ, ಪಶುಗಳಾಗಲಿ, ಪಕ್ಷಿಗಳಾಗಲಿ, ವನ್ಯ ಮೃಗಗಳಾಗಲಿ, ಮ್ಲೇಚ್ಛರಾಗಲಿ, ಯಜ್ಞದೀಕ್ಷಿತರಾಗಲಿ, ಎಲ್ಲರೂ ರುದ್ರಗಣ ಗಳೇ ಆಗುವರು. ಅವರಿಗೆ ಪುನಃ ಮರ್ತ್ಯಲೋಕದಲ್ಲಿ ಜನ್ಮವು ಸಂಭವಿಸು ವುದಿಲ್ಲ.

೫೩. ಹಿಂದಿನ ಸಾವಿರಾರು ಜನ್ಮಗಳಲ್ಲಿ ಸಂಪಾದಿಸಿದ ಯಾವ ಪಾಪರಾಶಿ ಯುಂಟೋ, ಅದೆಲ್ಲವೂ ರುದ್ರಸ್ಥಳಿಯನ್ನು ಪ್ರವೇಶಮಾಡಿದ ಮನುಜನಿಗೆ ಆ ಕ್ಷಣದಲ್ಲಿಯೇ ನಾಶವಾಗುವುದು.

೫೪. ಇಚ್ಛಾಪೂರ್ವಕವಾಗಿಯಾಗಲಿ, ಯಾದೃಚ್ಛಿಕವಾಗಿಯಾಗಲಿ ನೀಚ ಯೋನಿಯಲ್ಲಿ ಜನಿಸಿದ ಪ್ರಾಣಿಯಾದರೂ ರುದ್ರಸ್ಥಳದಲ್ಲಿ ಪ್ರಾಣಗಳನ್ನು ತ್ಯಜಿಸಲು ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯುವನು.

ಸ್ವಯಮೇಕಾಂಬರಕ್ಷೇತ್ರಾತ್ಕೃತ್ತಿವಾಸಾ ಇಹಾಗತಃ ।
ಕೃತ್ತಿವಾಸಸಿ ಲಿಂಗೇಽತ್ರ ಸ್ವಯಮೇವ ವ್ಯವಸ್ಥಿತಃ ॥ ೫೫ ॥
ಅಸ್ಮಿನ್ಸ್ಥಾನೇ ಸಭಕ್ತಾನಾಂ ಸಾಂಬಃ ಸರ್ಷಿಗಣೋ ವಿಭುಃ ।
ಸ್ವಯಂ ಚೋಪದಿಶೇದ್ಬ್ರಹ್ಮ ಶ್ರುತೌ ಶ್ರುತಿಭಿರೀಡಿತಂ ॥ ೫೬ ॥
ಕ್ಷೇತ್ರೇಽತ್ರ ಸಿದ್ಧಿದೇ ಪ್ರಾಪ್ತಶ್ಚಂಡೀಶೋ ಮರುಜಾಂಗಲಾತ್ ।
ಪ್ರಚಂಡಪಾಪಸಂಘಾತಂ ಖಂಡಯೇಚ್ಛತದೇಕ್ಷಣಾತ್ ॥ ೫೭ ॥
ಪಾಶಪಾಣಿಗಣಾಧ್ಯಕ್ಷಸಮೀಪೇ ಯಃ ಪ್ರಪಶ್ಯತಿ ।
ಚಂಡೀಶ್ವರಂ ಮಹಾಲಿಂಗಂ ಸ ಯಾತಿ ಪರಮಾಂ ಗತಿಂ ॥ ೫೮ ॥
ಕಾಲಂಜರಾನ್ನೀಲಕಂಠಸ್ತಿಷ್ಠೇದತ್ರ ಸ್ವಯಂ ವಿಭುಃ ।
ಗಣೇಶಾದ್ದಂತಕೂಟಾಖ್ಯಾತ್ಸಮೀಪೇ ಭವನಾಶನಃ ॥ ೫೯ ॥
ನೀಲಕಂಠೇಶ್ವರಂ ಲಿಂಗಂ ಕಾಶ್ಯಾಂ ಯೈಃ ಪರಿಪೂಜಿತಂ ।
ನೀಲಕಂಠಾಸ್ತ ಏವ ಸ್ಯುಸ್ತ ಏವ ಶಶಿಭೂಷಣಾಃ ॥ ೬೦ ॥

---

೫೫. ಏಕಾಂಬರ (ಭುವನೇಶ್ವರ) ಕ್ಷೇತ್ರದಿಂದ ಕೃತ್ತಿವಾಸೇಶ್ವರನು ತಾನೇ ಇಲ್ಲಿಗೆ ಬಂದಿರುವನು. ಮತ್ತು ಇಲ್ಲಿರುವ ಕೃತ್ತಿವಾಸೇಶ್ವರ ಲಿಂಗದಲ್ಲಿಯೇ ತನ್ನ ಸಾನ್ನಿಧ್ಯವನ್ನು ಪ್ರಕಟಿಸಿರುವನು.

೫೬. ಲೋಕೇಶ್ವರನಾದ ಆತನು ಈ ಸ್ಥಾನದಲ್ಲಿ ಗಿರಿಜಾಸಮೇತನೂ, ಮಹರ್ಷಿಗಣಸೇವಿತನೂ ಆಗಿ ತನ್ನ ಭಕ್ತರಿಗೆ ತಾನೇ ವೇದಪ್ರತಿಪಾದ್ಯವಾದ ಬ್ರಹ್ಮತತ್ತ್ವವನ್ನು ಕಿವಿಯಲ್ಲಿ ಉಪದೇಶಮಾಡುವನು.

೫೭. ಮರುಜಾಂಗಲವೆಂಬ ಕ್ಷೇತ್ರವಿಶೇಷದಿಂದ ಚಂಡೀಶ್ವರನು ಸಮಸ್ತ ಸಿದ್ಧಿಪ್ರದವಾದ ಈ ಕ್ಷೇತ್ರದಲ್ಲಿ ಪ್ರಾಪ್ತನಾಗಿರುವನು. ಈತನನ್ನು ನೋಡಿದ ಮಾತ್ರದಿಂದಲೇ ಪ್ರಚಂಡವಾದ ಪಾಪಸಮೂಹವನ್ನೂ ನೂರಾರು ಪಾಲಾಗಿ ಖಂಡಿಸುವನು.

೫೮. ಯಾವನು ಪಾಶಪಾಣಿಯೆಂಬ ಗಣಪತಿಯ ಸಮೀಪದಲ್ಲಿರುವ ಚಂಡೀಶ್ವರನೆಂಬ ಮಹಾಲಿಂಗದ ದರ್ಶನ ಮಾಡುವನೋ ಆತನು ಉತ್ತಮವಾದ ಸದ್ಗತಿಯನ್ನು ಪಡೆಯುವನು.

೫೯. ಲೋಕಸ್ವಾಮಿಯಾದ ನೀಲಕಂಠೇಶ್ವರನು ಕಾಲಂಜರಕ್ಷೇತ್ರದಿಂದ ಇಲ್ಲಿಗೆ ತಾನಾಗಿಯೆ ಬಂದು ನೆಲಸಿರುವನು. ದಂತಕೂಟನೆಂಬ ಗಣಪತಿಯ ಸಮೀಪದಲ್ಲಿರುವ ಈತನು ಭಜಕರ ಸಂಸಾರತಾಪವನ್ನು ನಾಶಗೊಳಿಸುವನು.

೬೦. ಕಾಶಿಯಲ್ಲಿ ಈ ನೀಲಕಂಠೇಶ್ವರಲಿಂಗವು ಯಾರಿಂದ ಪೂಜಿಸಲ್ಪಡುವುದೊ, ಅವರು ನೀಲಕಂಠವುಳ್ಳವರೂ, ಚಂದ್ರಶೇಖರರೂ ಆಗುವರು.

ಕಾಶ್ಮೀರಾದಿಹ ಸಂಪ್ರಾಪ್ತಂ ಲಿಂಗಂ ವಿಜಯಸಂಜ್ಞಿತಂ ।
ಸದಾ ವಿಜಯದಂ ಪುಂಸಾಂ ಪ್ರಾಚ್ಯಾಂ ಶಾಲಕಟಂಕಟಾತ್ ॥ ೬೧ ॥
ರಣೇ ರಾಜಕುಲೇ ದ್ಯೂತೇ ವಿವಾದೇ ಸರ್ವದೈವ ಹಿ ।
ವಿಜಯೋ ಜಾಯತೇ ಪುಂಸಾಂ ವಿಜಯೇಶಸಮರ್ಚನಾತ್ ॥ ೬೨ ॥
ಊರ್ಧ್ವರೇತಾಸ್ತ್ರಿದಂಡಾಯಾಃ ಸಂಪ್ರಾಪ್ತೋಽತ್ರ ಸ್ವಯಂ ವಿಭುಃ ।
ಕೂಶ್ಮಾಂಡಕಂ ಗಣಾಧ್ಯಕ್ಷಂ ಪುರಸ್ಕೃತ್ಯ ವ್ಯವಸ್ಥಿತಃ ॥ ೬೩ ॥
ಊರ್ಧ್ವಾಂ ಗತಿಮವಾಪ್ನೋತಿ ವೀಕ್ಷಣಾದೂರ್ಧ್ವರೇತಸಃ ।
ಊರ್ಧ್ವರೇತಸಿ ಯೇ ಭಕ್ತಾ ನ ಹಿ ತೇಷಾಮಧೋಗತಿಃ ॥ ೬೪ ॥
ಮುಂಡಲೇಶ್ವರತಃ ಕ್ಷೇತ್ರಾಲ್ಲಿಂಗಂ ಶ್ರೀಕಂಠಸಂಜ್ಞಿತಂ ।
ವಿನಾಯಕಾನ್ಮುಂಡಸಂಜ್ಞಾದುತ್ತರಸ್ಯ ವ್ಯವಸ್ಥಿತಂ ॥ ೬೫ ॥
ಶ್ರೀಕಂಠಸ್ಯ ಚ ಯೇ ಭಕ್ತಾಃ ಶ್ರೀಕಂಠಾ ಏವ ತೇ ನರಾಃ ।
ನೇಹ ಶ್ರಿಯಾ ವಿಯುಜ್ಯಂತೇ ನ ಪರತ್ರ ಕದಾಚನ ॥ ೬೬ ॥

---

೬೧. ಕಾಶ್ಮೀರದೇಶದಿಂದ ಇಲ್ಲಿಗೆ ವಿಜಯನಾಮಕವಾದ ಲಿಂಗವು ಸಂಪ್ರಾಪ್ತವಾಗಿರುವುದು. ಶಾಲಕಟಂಕಟನಿಗೆ ಪೂರ್ವದಿಕ್ಕಿನಲ್ಲಿರುವ ಈ ಲಿಂಗವು ಮಾನವರಿಗೆ ನಿತ್ಯವೂ ವಿಜಯವನ್ನು ಕೊಡುತ್ತಿರುವುದು.

೬೨. ಈ ವಿಜಯೇಶ್ವರಲಿಂಗವನ್ನು ಪೂಜಿಸುವುದರಿಂದ ಮನುಷ್ಯರಿಗೆ ಯುದ್ಧದಲ್ಲಿಯೂ, ರಾಜಾಸ್ಥಾನದಲ್ಲಿಯೂ, ದ್ಯೂತದಲ್ಲಿಯೂ, ವಾಗ್ವಾದಗಳಲ್ಲಿಯೂ ನಿತ್ಯವೂ ವಿಜಯವೇ ಲಭಿಸುತ್ತಿರುವುದು.

೬೩. ತ್ರಿದಂಡನಗರದಿಂದ ಊರ್ಧ್ವರೇತಸೇಶ್ವರನು ಇಲ್ಲಿಗೆ ತಾನೇ ಪ್ರಾಪ್ತನಾಗಿರುವನು. ಮತ್ತು ಇಲ್ಲಿ ಕೂಶ್ಮಾಂಡಕನೆಂಬ ಗಣಪತಿಯನ್ನು ಮುಂದುಮಾಡಿಕೊಂಡು ಪ್ರತಿಷ್ಠೆಯನ್ನೂ ಪಡೆದಿರುವನು.

೬೪. ಊರ್ಧ್ವರೇತಸೇಶ್ವರನನ್ನು ನೋಡುವುದರಿಂದ ಭಕ್ತನು ಉತ್ತಮಗತಿಯನ್ನೂ ಪಡೆಯುವನು. ಊರ್ಧ್ವರೇತಸೇಶ್ವರನಿಗೆ ಯಾರು ಭಕ್ತರಾಗಿರುವರೊ, ಅವರಿಗೆಂದಿಗೂ ಅಧೋಗತಿಯುಂಟಾಗಲಾರದು.

೬೫. ಮುಂಡಲೇಶ್ವರವೆಂಬ ಕ್ಷೇತ್ರದಿಂದ ಶ್ರೀಕಂಠನೆಂಬ ಹೆಸರಿನ ಲಿಂಗವು ಇಲ್ಲಿಗೆ ಬಂದಿರುವುದು. ಆ ಲಿಂಗವು ಮುಂಡವಿನಾಯಕ ಸ್ವಾಮಿಗೆ ಉತ್ತರದಿಕ್ಕಿನಲ್ಲಿ ಪ್ರತಿಷ್ಠಿತವಾಗಿರುವುದು.

೬೬. ಯಾರು ಶ್ರೀಕಂಠನಿಗೆ ಭಕ್ತರಾಗಿರುವರೊ, ಆ ಮನುಷ್ಯೋತ್ತಮರು ನೀಲಕಂಠರೇ ಎಂಬುದರಲ್ಲಿ ಸಂದೇಹವಿಲ್ಲ. ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಅವರಿಗೆ ಎಂದಿಗೂ ಐಶ್ವರ್ಯವಿಯೋಗವಾಗುವುದಿಲ್ಲ.

ಭಾಗಲಾಂಡಾನ್ಮಹಾತೀರ್ಥಾತ್ಕಪರ್ದೀಶ್ವರಸಂಜ್ಞಿತಃ ।
ಪಿಶಾಚಮೋಚನೇ ತೀರ್ಥೇ ಸ್ವಯಮಾವಿರಭೂದ್ವಿಭುಃ ॥ ೬೭ ॥
ಕಪರ್ದೀಶಂ ಸಮಭ್ಯರ್ಚ್ಯ ನ ನರೋ ನಿರಯಂ ವ್ರಜೇತ್ ।
ನ ಪಿಶಾಚತ್ವಮಾಪ್ನೋತಿ ಕೃತ್ವಾತ್ರಾಪ್ಯಘಮುತ್ತಮಂ ॥ ೬೮ ॥
ಆಮ್ರಾತಕೇಶ್ವರಾತ್ ಕ್ಷೇತ್ರಾಲ್ಲಿಂಗಂ ಸೂಕ್ಷ್ಮೇಶಸಂಜ್ಞಿತಂ ।
ಸ್ವಯಮಭ್ಯಾಗತಂ ಚಾತ್ರ ಕ್ಷೇತ್ರೇ ವೈ ಶ್ರೇಯಸಾಂ ಪದೇ ॥ ೬೯ ॥
ವಿಕಟದ್ವಿಜಸಂಜ್ಞಸ್ಯ ಗಣೇಶಸ್ಯ ಸಮೀಪತಃ ।
ದೃಷ್ಟ್ವಾ ಸೂಕ್ಷ್ಮೇಶ್ವರಂ ಲಿಂಗಂ ಗತಿಂ ಸೂಕ್ಷ್ಮಾಮವಾಪ್ನುಯಾತ್ ॥
ಸಂಪ್ರಾಪ್ತಮಿಹ ದೇವೇಶಂ ಜಯಂತಂ ಮಧುಕೇಶ್ವರಾತ್ ।
ಲಂಬೋದರಾದ್ಗಣಪತೇಃ ಪುರಸ್ತಾತ್ತದವಸ್ಥಿತಂ ॥ ೭೧ ॥
ಜಯಂತೇಶ್ವರಮಾಲೋಕ್ಯ ಸ್ನಾತ್ವಾ ಗಂಗಾಜಲೇ ಶುಭೇ ।
ಪ್ರಾಪ್ನುಯಾದ್ವಾಂಛಿತಾಂ ಸಿದ್ಧಿಂ ಸರ್ವತ್ರ ವಿಜಯೀ ಭವೇತ್ ॥ ೭೨ ॥

---

೬೭. ಭಾಗಲಾಂಡವೆಂಬ ಮಹಾತೀರ್ಥದಿಂದ ಕಪರ್ದೀಶ್ವರಸಂಜ್ಞಕವಾದ ಮಾಹೇಶ್ವರಲಿಂಗವು ತಾನೇ ಆವಿರ್ಭವಿಸಿ ಪಿಶಾಚಮೋಚನತೀರ್ಥದ ಸಮೀಪದಲ್ಲಿಯೇ ಕಂಗೊಳಿಸುತ್ತಿರುವುದು.

೬೮. ಕರ್ಪರ್ದೀಶ್ವರನನ್ನು ಚೆನ್ನಾಗಿ ಪೂಜಿಸಿದ ಮನುಷ್ಯನೆಂದಿಗೂ ನರಕವನ್ನು ಸೇರುವುದಿಲ್ಲ. ಈ ಲೋಕದಲ್ಲಿ ಮಹತ್ತರವಾದ ಪಾತಕವನ್ನು ಮಾಡಿದವನೂ ಸಹ ಪಿಶಾಚಜನ್ಮವನ್ನು ಪಡೆಯುವುದಿಲ್ಲ.

೬೯. ಅಮ್ರಾತಕೇಶ್ವರವೆಂಬ ಕ್ಷೇತ್ರದಿಂದ ಸೂಕ್ಷ್ಮೇಶ್ವರನಾಮಕವಾದ ಲಿಂಗವು ಬಂದು ಸಕಲ ಶ್ರೇಯಸ್ಸುಗಳಿಗೂ ನಿವಾಸಭೂತವೆನಿಸಿದ ಈ ವಾರಾಣಸೀ ಕ್ಷೇತ್ರದಲ್ಲಿ ನೆಲಸಿರುವುದು.

೭೦. ವಿಕಟದಂತನೆಂಬ ಹೆಸರುಳ್ಳ ಗಣಪತಿಗೆ ಸಮೀಪದಲ್ಲಿರುವ ಈ ಸೂಕ್ಷ್ಮೇಶ್ವರಲಿಂಗವನ್ನು ನೋಡಿದವನು ಸೂಕ್ಷ್ಮವಾದ ಬ್ರಹ್ಮಪದವಿಯನ್ನು ಹೊಂದಿ ಆನಂದಿಸುವನು.

೭೧. ಮಧುಕೇಶ್ವರಕ್ಷೇತ್ರದಿಂದ ಜಯಂತೇಶ್ವರನೆಂಬ ದೇವೇಶ್ವರನು ಇಲ್ಲಿಗೆ ಪ್ರಾಪ್ತನಾಗಿರುವನು. ಆ ಲಿಂಗವು ಲಂಬೋದರನೆಂಬ ಗಣಪತಿಗೆ ಮುಂದುಗಡೆಯಲ್ಲಿ ನಿಂತಿರುವುದು.

೭೨. ಪರಮಪಾವನವಾದ ಗಂಗಾನದಿಯ ಜಲದಲ್ಲಿ ಮಿಂದು ಜಯಂತೇಶ್ವರಲಿಂಗದ ದರ್ಶನವನ್ನು ತೆಗೆದುಕೊಳ್ಳುವ ಮಾನವನು ತನ್ನ ಮನಸ್ಸಿನಲ್ಲಿ ಬಯಸಿದ ಇಷ್ಟಾರ್ಥವನ್ನು ಪಡೆಯುವನಲ್ಲದೆ ಸಕಲ ಉದ್ಯಮಗಳಲ್ಲಿಯೂ ವಿಜಯವನ್ನೂ ಹೊಂದುವನು.

ಪ್ರಾದುಶ್ಚಕಾರ ದೇವೇಶಃ ಶ್ರೀಶೈಲಾತ್ತ್ರಿಪುರಾಂತಕಃ ।
ಶ್ರೀಶೈಲಶಿಖರಂ ದೃಷ್ಟ್ವಾ ಯತ್ಫಲಂ ಸಮುದೀರಿತಂ
ತ್ರಿಪುರಾಂತಕಮಾಲೋಕ್ಯ ತತ್ಫಲಂ ಹೇಲಯಾಪ್ಯತೇ । ॥ ೭೩ ॥
ವಿಶ್ವೇಶಾತ್ಪಶ್ಚಿಮೇ ಭಾಗೇ ತ್ರಿಪುರಾಂತಕಮೀಶ್ವರಂ
ಸಂಪೂಜ್ಯ ಪರಯಾ ಭಕ್ತ್ಯಾ ನ ನರೋ ಗರ್ಭಮಾವಿಶೇತ್ । ॥ ೭೪ ॥
ಸೌಮ್ಯಸ್ಥಾನಾದಿಹಾಯಾತೋ ಭಗವಾನ್ಕುಕ್ಕುಟೇಶ್ವರಃ
ವಕ್ರತುಂಡಗಣಾಧ್ಯಕ್ಷಸಮೀಪೇ ಸೋಽಪತಿಷ್ಠತೇ । ॥ ೭೫ ॥
ತದ್ದರ್ಶನಾದರ್ಚನಾಚ್ಚ ಕರಸ್ಥಾಃ ಸರ್ವಸಿದ್ಧಯಃ
ಜಾಲೇಶ್ವರಾತ್ತ್ರಿಶೂಲೀ ಚ ಸ್ವಯಮೀಶಃ ಸಮಾಗತಃ । ॥ ೭೬ ॥
ಕೂಟದಂತಾದ್ಗಣಪತೇಃ ಪುರಸ್ತಾತ್ಸರ್ವಸಿದ್ಧಿದಃ
ರಾಮೇಶ್ವರಾನ್ಮಹಾಕ್ಷೇತ್ರಾಜ್ಜಟೀದೇವಃ ಸಮಾಗತಃ । ॥ ೭೭ ॥
ಏಕದಂತೋತ್ತರೇ ಭಾಗೇ ಸೋಽರ್ಚಿತಃ ಸರ್ವಕಾಮದಃ
ತ್ರಿಸಂಧ್ಯಾಕ್ಷೇತ್ರತೋ ದೇವಸ್ತ್ರ್ಯಂಬಕೋಽಸ್ತಿ ಸಮಾಗತಃ । ॥ ೭೮ ॥
ತ್ರಿಮುಖಾತ್ಪೂರ್ವದಿಗ್ಭಾಗೇ ಪೂಜಿತಸ್ತ್ರ್ಯಂಬಕಸ್ತ್ವಕೃತ್ ॥ ೭೯ ॥

---

೭೩–೭೫. ಶ್ರೀಶೈಲದಿಂದ ದೇವೋತ್ತಮನಾದ ತ್ರಿಪುರಾಂತಕೇಶ್ವರನು ಇಲ್ಲಿ ಪ್ರಾದುರ್ಭವಿಸಿರುವನು. ಶ್ರೀ ಶೈಲದ ಶಿಖರವನ್ನು ನೋಡುವವರಿಗೆ ಯಾವ ಪುಣ್ಯವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದೊ, ಅದೇ ಈ ತ್ರಿಪುರಾಂತಕಲಿಂಗದ ದರ್ಶನದಿಂದ ಅನಾಯಾಸವಾಗಿಯೇ ಮನುಷ್ಯನಿಗೆ ಲಭಿಸುವುದು. ವಿಶ್ವೇಶ್ವರನಿಗೆ ಪಶ್ಚಿಮಭಾಗದಲ್ಲಿರುವ ತ್ರಿಪುರಾಂತಕ ಮಹೇಶ್ವರಲಿಂಗವನ್ನುಅತ್ಯಂತವಾದ ಭಕ್ತಿಯಿಂದ ಪೂಜೆಮಾಡಲು ಮನುಷ್ಯನು ಪುನಃ ಗರ್ಭವಾಸವನ್ನು ಅನುಭವಿಸುವುದಿಲ್ಲ. ಸೌಮ್ಯಸ್ಥಾನವೆಂಬ ಕ್ಷೇತ್ರವಿಶೇಷದಿಂದ ಇಲ್ಲಿಗೆ ತ್ರಿಲೋಕಾಧಿಪತಿಯಾದ ಕುಕ್ಕುಟೇಶ್ವರನು ಆಗಮಿಸಿರುವನು.

೭೬. ಆತನು ವಕ್ರತುಂಡಗಣಪತಿಯ ಸಮೀಪದಲ್ಲಿಯೇ ನೆಲಸಿರುವನು. ಆತನನ್ನು ದರ್ಶನಮಾಡಿ ಪೂಜಿಸುವುದರಿಂದ ಸಕಲ ಸಿದ್ಧಿಗಳೂ ಕರತಲಗತಗಳಾಗುವುವು.

೭೭. ಜಾಲೇಶ್ವರದಿಂದ ತ್ರಿಶೂಲಿಯೆಂಬ ಈಶ್ವರನು ತಾನೇ ಸಮಾಗಮಿಸಿರುವನು. ಕೂಟದಂತ ಗಣಪತಿಗೆ ಮುಂದೆ ಇರುವ ಈ ಲಿಂಗವು ಸಮಸ್ತೈಶ್ವರ್ಯಪ್ರಾಪಕವಾಗಿರುವುದು.

೭೮. ಸೇತುಬಂಧರಾಮೇಶ್ವರದಿಂದ ಜಟಾಮುಂಡಿತನಾದ ದೇವದೇವನು ಇಲ್ಲಿಗೈತಂದಿರುವನು. ಏಕದಂತಗಣಪತಿಯ ಉತ್ತರದಿಕ್ಕಿನಲ್ಲಿ ನೆಲಸಿರುವ ಆ ಲಿಂಗವನ್ನು ಪೂಜಿಸಲು ಸಕಲಾಭೀಷ್ಟಗಳನ್ನೂ ಕೊಡುವುದು.

೭೯. ತ್ರಿಸಂಧ್ಯವೆಂಬ ಕ್ಷೇತ್ರದಿಂದ ತ್ರ್ಯಂಬಕನೆಂಬ ಮಹಾದೇವನು ಆಗಮಿ

ಹರೇಶ್ವರೋ ಹರಿಶ್ಚಂದ್ರಾತ್ ಕ್ಷೇತ್ರಾದತ್ರ ಸಮಾಗತಃ ।
ಹರಿಶ್ಚಂದ್ರೇಶ್ವರಪುರಃ ಪೂಜಿತೋ ಜಯದಃ ಸದಾ ॥ ೮೦ ॥
ಇಹ ಶರ್ವಃ ಸಮಾಯಾತಃ ಸ್ಥಾನಾನ್ಮಧ್ಯಮಹೇಶ್ವರಾತ್ ।
ಚತುರ್ವೇದೇಶ್ವರಂ ಲಿಂಗಂ ಪುರೋಧಾಯ ವ್ಯವಸ್ಥಿತಂ ॥ ೮೧ ॥
ಶರ್ವಂ ಲಿಂಗಂ ಸಮಭ್ಯರ್ಚ್ಯ ಕಾಶ್ಯಾಂ ಪರಮಸಿದ್ಧಿಕೃತ್ ।
ನ ಜಾತು ಜಂತುಪದವೀಂ ಪ್ರಾಪ್ನುಯಾತ್ಕ್ವಾಪಿ ಮಾನವಃ ॥ ೮೨ ॥
ಸ್ಥಲೇಶ್ವರಾನ್ಮಹಾಲಿಂಗಂ ಪ್ರಾದುರ್ಭೂತಂ ಪರಂ ತ್ವಿಹ ।
ಯತ್ರ ಯಜ್ಞೇಶ್ವರಂ ಲಿಂಗಂ ಸರ್ವಲಿಂಗಫಲಪ್ರದಂ ॥ ೮೩ ॥
ಮಹಾಲಿಂಗಂ ಸಮಭ್ಯರ್ಚ್ಯ ಮಹಾಶ್ರದ್ಧಾಸಮನ್ವಿತಃ ।
ಮಹತೀಂ ಶ್ರಿಯಮಾಪ್ನೋತಿ ಲೋಕೇಽತ್ರ ಚ ಪರತ್ರ ಚ ॥ ೮೪ ॥
ಇಹ ಲಿಂಗಂ ಸಹಸ್ರಾಕ್ಷಂ ಸುವರ್ಣಾಖ್ಯಾತ್ಸಮಾಗತಂ ।
ಯಸ್ಯ ಸಂದರ್ಶನಾತ್ಪುಂಸಾಂ ಜ್ಞಾನಚಕ್ಷುಃ ಪ್ರಜಾಯತೇ ॥ ೮೫ ॥

---

ಸಿರುವನು. ತ್ರಿವಕ್ತ್ರಗಣಪತಿಯಿಂದ ಪೂರ್ವದಿಗ್ಭಾಗದಲ್ಲಿರುವ ಆತನು ಪೂಜಿಸದ ಭಕ್ತರಿಗೆ ಮಾಹೇಶ್ವರತ್ವವನ್ನನುಗ್ರಹಿಸುವನು.

೮೦. ಹರಿಶ್ಚಂದ್ರಕ್ಷೇತ್ರದಿಂದ ಹರೇಶ್ವರನು ಇಲ್ಲಿಗೆ ಬಂದು ಸೇರಿರುವನು. ಹರಿಶ್ಚಂದ್ರೇಶ್ವರನ ಮುಂಭಾಗದಲ್ಲಿರುವ ಈ ಲಿಂಗವನ್ನು ಪೂಜಿಸಿದವನಿಗೆ ಸರ್ವ ಕಾಲದಲ್ಲಿಯೂ ವಿಜಯವನ್ನು ಕೊಡುತ್ತಿರುವನು.

೮೧. ಮಧ್ಯಮಹೇಶ್ವರವೆಂಬ ಕ್ಷೇತ್ರೋತ್ತಮದಿಂದ ಇಲ್ಲಿಗೆ ಶರ್ವೇಶ್ವರನು ಬಂದಿರುವನು. ಆ ಶರ್ವೇಶ್ವರಲಿಂಗವು ಚತುರ್ವೇದೇಶ್ವರಲಿಂಗವನ್ನು ಎದುರಾಗಿಟ್ಟುಕೊಂಡೇ ನೆಲಸಿರುವುದು.

೮೨. ಕಾಶೀಕ್ಷೇತ್ರದಲ್ಲಿ ಸಮಸ್ತಸಿದ್ಧಿಗಳನ್ನೂ ಕೈಗೂಡಿಸುವ ಶರ್ವಲಿಂಗವನ್ನು ಪೂಜೆಮಾಡಲು ಮಾನವನು ಎಂದಿಗೂ ಎಲ್ಲಿಯೂ ಕ್ರಿಮಿಕೀಟಾದಿ ನೀಚ ಜನ್ಮಗಳನ್ನು ಪಡೆಯುವುದಿಲ್ಲ.

೮೩. ಸ್ಥಳೇಶ್ವರದಿಂದ ಸರ್ವೋತ್ತಮವಾದ ಮಹಾಲಿಂಗವು ಇಲ್ಲಿ ಪ್ರಾದುರ್ಭವಿಸಿರುವುದು. ಸಮಸ್ತಲಿಂಗಗಳನ್ನರ್ಚಿಸಿದ ಫಲವನ್ನೂ ಕೊಡುವುದಾಗಿ ಯಜ್ಞೇಶ್ವರಲಿಂಗದ ಸಮೀಪದಲ್ಲಿ ನೆಲಸಿರುವುದು.

೮೪. ಯಾವ ಮನುಷ್ಯನು ಮಹತ್ತರವಾದ ಶ್ರದ್ಧೆಯಿಂದ ಈ ಮಹಾಲಿಂಗವನ್ನು ಪೂಜಿಸುತ್ತಾನೆಯೋ, ಅವನು ಈ ಲೋಕದಲ್ಲಿಯೂ ಪರಲೋಕಗಳಲ್ಲಿಯೂ ಮಹದೈಶ್ವರ್ಯವನ್ನು ಹೊಂದುತ್ತಾನೆ.

೮೫. ಸುವರ್ಣವೆಂಬ ಹೆಸರಿನ ಕ್ಷೇತ್ರದಿಂದ ಸಹಸ್ರಾಕ್ಷೇಶ್ವರವೆಂಬ ಲಿಂಗವು ಇಲ್ಲಿಗೆ ಬಂದಿರುವುದು. ಅದನ್ನು ನೋಡುವುದರಿಂದಲೇ ಮನುಷ್ಯರಿಗೆ ಜ್ಞಾನಲೋಚನವೂ ದಿವ್ಯದೃಷ್ಟಿಯೂ ಉಂಟಾಗುವುವು.

ಶೈಲೇಶ್ವರಾದವಾಚ್ಯಾಂ ತು ಸಹಸ್ರಾಕ್ಷೇಶ್ವರಂ ವಿಭುಂ ।
ದೃಷ್ಟ್ವಾ ಜನ್ಮಸಹಸ್ರಾಣಾಂ ಶತಾನಾಂ ಪಾತಕಂ ತ್ಯಜೇತ್ ॥ ೮೬ ॥
ಹರ್ಷಿತಾದ್ಧರ್ಷಿತಂ ಚಾತ್ರ ಪ್ರಾದುರಾಸೀತ್ತಮೋಹರಂ ।
ಲಿಂಗಂ ಹರ್ಷಪ್ರದಂ ಪುಂಸಾಂ ದರ್ಶನಾತ್ಸ್ಪರ್ಶನಾದಪಿ ॥ ೮೭ ॥
ಮಂತ್ರೇಶ್ವರಸಮೀಪೇ ತು ಪ್ರಾಸಾದೇ ಹರ್ಷಿತೇಶಿತುಃ ।
ತದ್ವಿಲೋಕನತಃ ಪುಂಸಾಂ ನಿತ್ಯಂ ಹರ್ಷಪರಂಪರಾ ॥ ೮೮ ॥
ಇಹ ಸ್ವಯಂ ಸಮಾಯಾತೋ ರುದ್ರೋ ರುದ್ರಮಹಾಲಯಾತ್ ।
ಯಸ್ಯ ದರ್ಶನತೋ ಯಾಂತಿ ರುದ್ರಲೋಕೇ ನರಾಃ ಸ್ಫುಟಂ ॥ ೮೯ ॥
ಯೈಸ್ತು ರುದ್ರೇಶ್ವರಂ ಲಿಂಗಂ ಕಾಶ್ಯಾಮತ್ರ ಸಮರ್ಚಿತಂ ।
ತೇ ರುದ್ರರೂಪಿಣೋ ಮರ್ತ್ಯಾ ವಿಜ್ಞೇಯಾ ನಾತ್ರ ಸಂಶಯಃ ॥ ೯೦ ॥
ತ್ರಿಪುರೇಶಸಮೀಪೇ ತು ದೃಷ್ಟ್ವಾ ರುದ್ರೇಶ್ವರಂ ವಿಭುಂ ।
ರುದ್ರಾಸ್ತ ಏವ ವಿಜ್ಞೇಯಾ ಜೀವಂತೋಽಪಿ ಮೃತಾ ಅಪಿ ॥ ೯೧ ॥

---

೮೬. ಶೈಲೇಶ್ವರನಿಗೆ ಕೆಳಗಡೆಯಲ್ಲಿರುವ ಲೋಕೇಶ್ವರನಾದ ಸಹಸ್ರಾಕ್ಷೇಶ್ವರಲಿಂಗವನ್ನು ನೋಡಿದ ಮಾತ್ರದಿಂದ ಲಕ್ಷಾಂತರ ಜನ್ಮಗಳಲ್ಲಿ ಮಾಡಿದ ಪಾತಕವೂ ನಿರ್ಮೂಲವಾಗುವುದು.

೮೭. ಹರ್ಷಿತಕ್ಷೇತ್ರದಿಂದ ಅಜ್ಞಾನಾಂಧಕಾರವನ್ನು ನಾಶಗೊಳಿಸುವ ಹರ್ಷಿತೇಶ್ವರವೆಂಬ ಲಿಂಗವು ಇಲ್ಲಿ ಉದ್ಭೂತವಾಗಿರುವುದು. ಈ ಲಿಂಗವು ದರ್ಶನದಿಂದಲೂ ಸ್ಪರ್ಶನದಿಂದಲೂ ಮಾನವರಿಗೆ ಅತ್ಯಂತ ಹರ್ಷವನ್ನುಂಟು ಮಾಡುವುದು.

೮೮. ಈ ಹರ್ಷಿತೇಶ್ವರನ ದೇವಾಲಯವು ಮಂತ್ರೇಶ್ವರನ ಸಮೀಪದಲ್ಲಿರುವುದು. ಅದರ ದರ್ಶನ ಮಾತ್ರದಿಂದಲೇ ಮಾನವರಿಗೆ ನಿತ್ಯವೂ ಆನಂದಪರಂಪರೆಗಳು ಸಂಭವಿಸುತ್ತಿರುವುವು.

೮೯. ರುದ್ರಮಹಾಲಯವೆಂಬ ಕ್ಷೇತ್ರದಿಂದ ರುದ್ರೇಶ್ವರನೆಂಬ ಮಹಾದೇವನು ತಾನಾಗಿಯೇ ಬಂದು ನೆಲಸಿರುವನು. ಆ ಲಿಂಗದ ದರ್ಶನದಿಂದ ನಿಶ್ಚಯವಾಗಿಯೂ ಮನುಷ್ಯರು ರುದ್ರಲೋಕವನ್ನು ಸೇರುವರು.

೯೦. ಈ ಕಾಶಿಯಲ್ಲಿ ಯಾರಿಂದ ಈ ರುದ್ರೇಶ್ವರಲಿಂಗವು ಚೆನ್ನಾಗಿ ಪೂಜಿಸಲ್ಪಟ್ಟಿರುವುದೋ, ಆ ಮನುಷ್ಯರನ್ನು ರುದ್ರಸ್ವರೂಪರೆಂದೇ ತಿಳಿದುಕೊಳ್ಳಬೇಕೆಂಬುದರಲ್ಲಿ ಸಂದೇಹವಿಲ್ಲ.

೯೧. ತ್ರಿಪುರೇಶ್ವರನ ಸಮೀಪದಲ್ಲಿರುವ ರುದ್ರೇಶ್ವರಸ್ವಾಮಿಯನ್ನು ನೋಡಿರುವ ಮನುಷ್ಯರು ಜೀವಿಸಿದ್ದರೂ ಮೃತರಾಗಿದ್ದರೂ ಅವರನ್ನು ರುದ್ರಗಣಗಳೆಂದೇ ತಿಳಿಯಬೇಕು.

ಅಗಾದಿಹ ಮಹಾದೇವೋ ವೃಷೇಶೋ ವೃಷಭಧ್ವಜಾತ್ ।
ಬಾಣೇಶ್ವರಸ್ಯ ಲಿಂಗಸ್ಯ ಸಮೀಪೇ ವೃಷದಃ ಸದಾ ॥ ೯೨ ॥
ಇಹಾಗತಂ ತು ಕೇದಾರಾದೀಶಾನೇಶ್ವರಸಂಜ್ಞಿತಂ ।
ತದ್ದ್ರಷ್ಟವ್ಯಂ ಪ್ರತೀಚ್ಯಾಂ ಚ ಲಿಂಗಂ ಪ್ರಹ್ಲಾದಕೇಶವಾತ್ ॥ ೯೩ ॥
ಈಶಾನೇಶಂ ಸಮಭ್ಯರ್ಚ್ಯ ಸ್ನಾತ್ವೋತ್ತರವಹಾಂಭಸಿ ।
ವಸೇದೀಶಾನನಗರೇ ಈಶಾನಸದೃಶಪ್ರಭಃ ॥ ೯೪ ॥
ಭೈರವಾದ್ಭೈರವೀ ಮೂರ್ತಿರತ್ರಾಯಾತಾ ಮನೋಹರಾ ।
ಸಂಹಾರಭೈರವೋ ನಾಮ ದ್ರಷ್ಟವ್ಯಃ ಸ ಪ್ರಯತ್ನತಃ ॥ ೯೫ ॥
ಪೂಜನಾತ್ಸರ್ವಸಿದ್ಧ್ಯೈ ಸ ಪ್ರಾಚ್ಯಾಂ ಖರ್ವವಿನಾಯಕಾತ್ ।
ಸಂಹಾರಭೈರವಃ ಕಾಶ್ಯಾಂ ಸಂಹರೇದಘಸಂತತಿಂ ॥ ೯೬ ॥
ಉಗ್ರಃ ಕನಖಲಾತ್ತೀರ್ಥಾದಾವಿರಾಸೇಹ ಸಿದ್ಧಿದಃ ।
ತದ್ವಿಲೋಕನತೋ ನೄಣಾಮುಗ್ರಂ ಪಾಪಂ ಪ್ರಣಶ್ಯತಿ ॥ ೯೭ ॥

---

೯೨. ವೃಷಭಧ್ವಜವೆಂಬ ಕ್ಷೇತ್ರದಿಂದ ವೃಷಭೇಶ್ವರನೆಂಬ ಮಹೇಶ್ವರನು ಇಲ್ಲಿಗೆ ಬಂದಿರುವನು. ಆತನ ಲಿಂಗವು ಬಾಣೇಶ್ವರಲಿಂಗದಲ್ಲಿಯೇ ಶಾಶ್ವತವಾಗಿ ಪ್ರತಿಷ್ಠಿತವಾಗಿರುವುದು. ಮತ್ತು ಭಕ್ತರಿಗೆ ಅಭಿವೃದ್ಧಿಯನ್ನು ಕೊಡುತ್ತಿರುವುದು.

೯೩. ಕೇದಾರದಿಂದ ಇಲ್ಲಿಗೆ ಈಶಾನೇಶ್ವರವೆಂಬ ಹೆಸರಿನ ಲಿಂಗವು ಬಂದಿರುವುದು. ಪ್ರಹ್ಲಾದಕೇಶವಮೂರ್ತಿಗೆ ಪಶ್ಚಿಮದಿಕ್ಕಿನಲ್ಲಿ ಸ್ಥಾಪಿತವಾಗಿರುವ ಆ ಲಿಂಗವನ್ನು ಪ್ರತಿಯೊಬ್ಬರೂ ಅವಶ್ಯಕವಾಗಿ ನೋಡಬೇಕು.

೯೪. ಉತ್ತರವಾಹಿನಿಯಾದ ಗಂಗೆಯಲ್ಲಿ ಸ್ನಾನವನ್ನು ಮಾಡಿ ಈಶಾನೇಶ್ವರನನ್ನು ಪೂಜಿಸಿದವನು ಮಹೇಶ್ವರನಿಗೆ ಸಮಾನವಾದ ದೇಹಕಾಂತಿಯುಳ್ಳವನಾಗಿ ಕೈಲಾಸನಗರಿಯಲ್ಲಿಯೇ ವಾಸಮಾಡುವನು.

೯೫. ಭೈರವಕ್ಷೇತ್ರದಿಂದ ಮನೋಹರವಾದ ಭೈರವೇಶ್ವರಲಿಂಗವು ಇಲ್ಲಿಗೆ ಬಂದು ನೆಲಸಿರುವುದು. ಸಂಹಾರಭೈರವವೆಂಬ ಹೆಸರುಳ್ಳ ಈ ಲಿಂಗವನ್ನು ಪ್ರಯತ್ನಪೂರ್ವಕವಾಗಿ ನೋಡಬೇಕು.

೯೬. ಖರ್ವವಿನಾಯಕನಿಗೆ ಪೂರ್ವದಿಕ್ಕಿನಲ್ಲಿರುವ ಈ ಸಂಹಾರಭೈರವನು ಸಕಲಾಭೀಷ್ಟಸಿದ್ಧಿಗಾಗಿ ತನ್ನನ್ನು ಪೂಜಿಸುವ ಕಾಶೀನಿವಾಸಿಗಳಿಗೆಲ್ಲರಿಗೂ ಪಾಪಪರಂಪರೆಯನ್ನು ನಾಶಗೊಳಿಸುವನು.

೯೭. ಸಿದ್ಧಿಪ್ರದನಾದ ಉಗ್ರೇಶ್ವರನು ಇಲ್ಲಿಗೆ ಕನಖಲಕ್ಷೇತ್ರದಿಂದ ಬಂದು ನೆಲಸಿರುವನು. ಆತನ ದರ್ಶನದಿಂದ ಮನುಷ್ಯರಿಗೆ ಅತ್ಯುಗ್ರಗಳಾದ ಪಾತಕಗಳೂ ನಾಶವಾಗುವುವು.

ಉಗ್ರಂ ಲಿಂಗಂ ಸದಾ ಸೇವ್ಯಂ ಪ್ರಾಚ್ಯಾಮರ್ಕವಿನಾಯಕಾತ್ ।
ಅತ್ಯುಗ್ರಾ ಅಪಿ ನಶ್ಯೇಯುರುಪಸರ್ಗಾಸ್ತದರ್ಚನಾತ್ ॥ ೯೮ ॥
ವಸ್ತ್ರಾಪಥಾನ್ಮಹಾಕ್ಷೇತ್ರಾದ್ಭವೋನಾಮ ಸ್ವಯಂ ವಿಭುಃ ।
ಭೀಮಚಂಡೀಸಮೀಪೇ ತು ಪ್ರಾದುರಾಸೀದಿಹ ಪ್ರಭೋ ॥ ೯೯ ॥
ಭವೇಶ್ವರಂ ಸಮಭ್ಯರ್ಚ್ಯ ಭವೇ ನಾವಿರ್ಭವೇನ್ನರಃ ।
ಪ್ರಭುರ್ಭವತಿ ಸರ್ವೇಷಾಂ ರಾಜ್ಞಾಮಾಜ್ಞಾಕೃತಾಮಿಹ ॥ ೧೦೦ ॥
ದೇವದಾರುವನಾದ್ದಂಡೀ ದಂಡಯನ್ಪಾತಕಾವಲೀಃ ।
ವಾರಾಣಸ್ಯಾಂ ಸಮಾಗತ್ಯ ಸ್ಥಿತೋ ಲಿಂಗಾಕೃತಿರ್ವಿಭುಃ ॥ ೧೦೧ ॥
ಪ್ರಾಚ್ಯಾಂ ದಂಡೀಶ್ವರಃ ಪೂಜ್ಯಃ ಸ ದೇಹಲಿವಿನಾಯಕಾತ್ ।
ತಸ್ಯಾರ್ಚನೇನ ಮರ್ತ್ಯಾನಾಂ ನ ಪುನರ್ಭವ ಈಕ್ಷ್ಯತೇ ॥ ೧೦೨ ॥
ಭದ್ರಕರ್ಣಹ್ರದಾದತ್ರ ಭದ್ರಕರ್ಣಹ್ರದಾನ್ವಿತಃ ।
ಶಿವಃ ಸಾಕ್ಷಾದಿಹಾಯಾತಃ ಸರ್ವೇಷಾಂ ಶಿವದೋಽರ್ಚಿತಃ ॥ ೧೦೩ ॥

---

೯೮. ಅರ್ಕವಿನಾಯಕಸ್ವಾಮಿಗೆ ಪೂರ್ವದಿಕ್ಕಿನಲ್ಲಿರುವ ಈ ಉಗ್ರೇಶ್ವರ ಲಿಂಗವನ್ನು ನಿತ್ಯವೂ ಸೇವಿಸತಕ್ಕದ್ದು. ಆತನ ಪೂಜೆಯ ಪುಣ್ಯದಿಂದ ಅತ್ಯುಗ್ರಗಳಾದ ವಿಘ್ನಗಳೂ ವಿನಾಶವನ್ನು ಹೊಂದುವುವು.

೯೯. ಎಲೈ ಮಹಾದೇವನೆ! ವಸ್ತ್ರಾಪಥವೆಂಬ ಮಹಾಕ್ಷೇತ್ರದಿಂದ ಭವೇಶ್ವರನೆಂಬ ಹೆಸರಿನ ಸ್ವಾಮಿಯು ತಾನೇ ಇಲ್ಲಿಗೆ ಬಂದು ಭೀಮಚಂಡಿಯ ಸಮೀಪದಲ್ಲಿಯೇ ಪ್ರಾದುರ್ಭವಿಸಿರುವನು.

೧೦೦. ಈ ಭವೇಶ್ವರನನ್ನು ಪೂಜಿಸಿದವನು ಪುನಃ ಸಂಸಾರದಲ್ಲಿ ಜನನವನ್ನು ಪಡೆಯಲಾರನು. ಮತ್ತು ತನ್ನ ಆಜ್ಞೆಗಳನ್ನು ಪಾಲಿಸುವ ಅನೇಕ ರಾಜರನ್ನು ಸ್ವಾಧೀನಗೊಳಿಸಿಕೊಂಡು ಚಕ್ರವರ್ತಿಯೆನಿಸುವನು.

೧೦೧. ದೇವದಾರುವನದಿಂದ ದಂಡೀಶ್ವರನು ವಾರಾಣಸೀಕ್ಷೇತ್ರಕ್ಕೆ ಆಗಮಿಸಿ ಭಕ್ತರ ಪಾಪಕೋಟಿಗಳನ್ನೆಲ್ಲ ದಂಡಿಸುತ್ತ ಲಿಂಗದ ರೂಪವನ್ನು ಧರಿಸಿ ನೆಲಸಿರುವನು.

೧೦೨. ದೇಹಲಿವಿನಾಯಕನಿಗೆ ಪೂರ್ವದಲ್ಲಿರುವ ಆ ದಂಡೀಶ್ವರನು ಸಕಲರಿಗೂ ಪೂಜ್ಯನು. ಆತನನ್ನು ಪೂಜಿಸಿದುದರಿಂದ ಮನುಷ್ಯರಿಗೆ ಪುನರ್ಜನ್ಮವೆಂಬುದು ಕಾಣುವುದಿಲ್ಲ.

೧೦೩. ಭದ್ರಕರ್ಣತೀರ್ಥದಿಂದ ಆ ತೀರ್ಥಾಭಿಮಾನಿದೇವತೆಯೊಡನೆ ಕೂಡಿದ ಶಿವನು ತಾನೇ ಸಾಕ್ಷಾತ್ಕರಿಸಿ ಬಂದಿರುವನು. ಆತನನ್ನು ಪೂಜಿಸಲು ಸಕಲರಿಗೂ ಮಂಗಳವನ್ನುಂಟುಮಾಡುವನು.

ಉದ್ದಂಡಾಖ್ಯಾದ್ಗಣಪತೇಃ ಪ್ರಾಚ್ಯಾಂ ತತ್ತೀರ್ಥಮುತ್ತಮಂ ।
ಭದ್ರಕರ್ಣಹ್ರದೇ ಸ್ನಾತ್ವಾಭ್ಯರ್ಚ್ಯ ಲಿಂಗಂ ಶಿವಾಹ್ವಯಂ ॥ ೧೦೪ ॥
ಸರ್ವತ್ರ ಶಿವಮಾಪ್ನೋತಿ ಭದ್ರಕರ್ಣೇಶಪೂಜನಾತ್ ।
ಶೃಣುಯಾತ್ಸರ್ವಭೂತಾನಾಂ ಭದ್ರಂ ಪಶ್ಯತಿ ಚಾಕ್ಷಿಭಿಃ ॥ ೧೦೫ ॥
ಶಂಕರಶ್ಚ ಹರಿಶ್ಚಂದ್ರಾತ್ತ್ವತ್ಪುರಃ ಪ್ರತಿಭಾಸತೇ ।
ತತ್ಪೂಜನಾಜ್ಜನಾನಾಂ ನ ಜನನೀಜಠರೇ ಜನಿಃ ॥ ೧೦೬ ॥
ಯಮಲಿಂಗಾನ್ಮಹಾತೀರ್ಥಾತ್ಕಾಲಲಿಂಗಮಿಹ ಸ್ಥಿತಂ ।
ಕಲಶೇಶ ಇತಿ ಖ್ಯಾತಂ ಚಂದ್ರೇಶಾತ್ಪಶ್ಚಿಮೇನ ಚ ॥ ೧೦೭ ॥
ಯಮತೀರ್ಥೇ ನರಃ ಸ್ನಾತ್ವಾ ಮಿತ್ರಾವರುಣದಕ್ಷಿಣೇ ।
ಕಾಲಲಿಂಗಂ ಸಮಾಲೋಕ್ಯ ಕಲಿಕಾಲಭಯಂ ಕುತಃ ॥ ೧೦೮ ॥
ತತ್ರ ಭೌಮಚತುರ್ದಶ್ಯಾಂ ಯಸ್ತು ಯಾತ್ರಾಂ ಕರಿಷ್ಯತಿ ।
ಅಪಿ ಪಾತಕಯುಕ್ತಃ ಸ ಯಮಯಾತ್ರಾಂ ನ ಯಾಸ್ಯತಿ ॥ ೧೦೯ ॥

---

೧೦೪–೧೦೫. ಉತ್ತಮವಾದ ಆ ತೀರ್ಥವು ಉದ್ದಂಡಗಣಪತಿಗೆ ಪೂರ್ವ ದಿಕ್ಕಿನಲ್ಲಿ ಕಂಗೊಳಿಸುತ್ತಿರುವುದು. ಭದ್ರಕರ್ಣವೆಂಬ ತಟಾಕದಲ್ಲಿ ಸ್ನಾನವನ್ನು ಮಾಡಿ ಶಿವನಾಮಕವಾದ ಆ ಲಿಂಗವನ್ನು ಅಭ್ಯರ್ಚಿಸಲು ಭದ್ರಕರ್ಣೇಶ್ವರನ ಪೂಜೆಯ ಫಲವಾಗಿ ಮನುಷ್ಯನು ಸಕಲ ಕಾರ್ಯಗಳಲ್ಲಿಯೂ ಮಂಗಳವನ್ನೇ ಪಡೆಯುತ್ತಿರುವನು. ಸಕಲ ಭೂತಗಳಲ್ಲಿಯೂ ಮಂಗಳವನ್ನೇ ಕೇಳುವನು. ಮತ್ತು ನೇತ್ರಗಳಿಂದಲೂ ಮಂಗಳರೂಪಗಳನ್ನೇ ನೋಡುವನು.

೧೦೬. ಹರಿಶ್ಚಂದ್ರಕ್ಷೇತ್ರದಿಂದ ಬಂದಿರುವ ಶಂಕರನು ನಿನ್ನ ಇದಿರಿನಲ್ಲಿಯೇ ಪ್ರಕಾಶಿಸುತ್ತಿರುವನು. ಆತನನ್ನು ಪೂಜಿಸುವುದರಿಂದ ಜನರಿಗೆ ಪುನಃ ತಾಯಿಯ ಗರ್ಭದಲ್ಲಿ ಜನ್ಮಗಳು ಸಂಭವಿಸುವುದಿಲ್ಲ.

೧೦೭. ಯಮಲಿಂಗವೆಂಬ ಮಹಾತೀರ್ಥದಿಂದ ಕಾಲಲಿಂಗವು ಇಲ್ಲಿಗೆ ಬಂದಿರುವುದು. ಚಂದ್ರೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿರುವ ಈ ಲಿಂಗವು ಕಲಶೇಶ್ವರನೆಂದು ಪ್ರಖ್ಯಾತಿಯನ್ನು ಪಡೆದಿರುವುದು.

೧೦೮. ಮಿತ್ರಾವರುಣರಿಗೆ ದಕ್ಷಿಣದಲ್ಲಿರುವ ಯಮತೀರ್ಥದಲ್ಲಿ ಸ್ನಾನವನ್ನು ಮಾಡಿ ಕಾಲಲಿಂಗವನ್ನು ವಿಲೋಕಿಸಿದ ಮನುಷ್ಯನಿಗೆ ಕಲಿಕಾಲದಿಂದುಂಟಾಗುವ ಭಯವೆಲ್ಲಿಯದು ?

೧೦೯. ಮಂಗಳವಾರದ ದಿನ ಚತುರ್ದಶಿಯು ಪ್ರಾಪ್ತವಾಗಲು ಆ ಲಿಂಗವಿದ್ದಲ್ಲಿಗೆ ಯಾವನು ಯಾತ್ರೆಯನ್ನು ಮಾಡುವನೊ, ಅವನು ಪಾತಕಗಳಿಂದ ಕೂಡಿದವನಾದರೂ ಯಮಲೋಕಕ್ಕೆ ಪ್ರಯಾಣವನ್ನು ಮಾಡುವುದಿಲ್ಲ.

ನೇಪಾಲಾಚ್ಚ ಮಹಾಕ್ಷೇತ್ರಾದಾಯಾತಃ ಪಶುಪತಿಸ್ತ್ವಿಹ ।
ಯತ್ರ ಪಾಶುಪತೋ ಯೋಗ ಉಪದಿಷ್ಟಃ ಪಿನಾಕಿನಾ ॥ ೧೧೦ ॥
ಭವತಾ ದೇವದೇವೇಸ ಬ್ರಹ್ಮಾದಿಭ್ಯೋ ವಿಮುಕ್ತಯೇ ।
ತಸ್ಯ ಸಂದರ್ಶನಾದೇವ ಪಶುಪಾಶೈರ್ವಿಯುಜ್ಯತೇ ॥ ೧೧೧ ॥
ಕರವೀರಕತೀರ್ಥಾಚ್ಚ ಕಪಾಲೀಶ ಇಹಾಗತಃ ।
ಕಪಾಲಮೋಚನೇ ತೀರ್ಥೇ ದ್ರಷ್ಟವ್ಯಃ ಸ ಪ್ರಯತ್ನತಃ ॥ ೧೧೨ ॥
ತದ್ವಿಲೋಕನಮಾತ್ರೇಣ ಬ್ರಹ್ಮಹತ್ಯಾ ವಿಲೀಯತೇ ।
ಉಮಾಪತಿರ್ದೇವಿಕಾಯಾ ಇಹಾಗತ್ಯ ವ್ಯವಸ್ಥಿತಃ ॥ ೧೧೩ ॥
ದೃಷ್ಟಃ ಪಶುಪತಿಃ ಪ್ರಾಚ್ಯಾಂ ಹರೇತ್ಪಾಪಂ ಚಿರಾರ್ಜಿತಂ ।
ಲಿಂಗಂ ಮಹೇಶ್ವರಾತ್ಕ್ಷೇತ್ರಾದಿಹ ದೀಪ್ತೇಶಸಂಜ್ಞಿತಂ ॥ ೧೧೪ ॥
ಉಮೋಮಾಪತಿ ತಿಷ್ಠೇತ ದೀಪ್ತ್ಯೈ ಚೇಹ ಪರತ್ರ ಚ ।
ಭುಕ್ತಿಮುಕ್ತಿಪ್ರದಂ ಲಿಂಗಂ ದೀಪ್ತೇಶಂ ಕಾಶಿಮಧ್ಯಗಂ ॥ ೧೧೫ ॥

---

೧೧೦–೧೧೧. ನೇಪಾಳಮಹಾಕ್ಷೇತ್ರದಿಂದ ಇಲ್ಲಿಗೆ ಪಶುಪತಿಯು ತಾನೇ ಆಗಮಿಸಿರುವನು. ಆ ಕ್ಷೇತ್ರದಲ್ಲಿಯೇ ಪಿನಾಕಧಾರಿಯಾದ ಮಹೇಶ್ವರನೂ ದೇವಾಧಿದೇವನೂ ಆದ ನೀನು ಬ್ರಹ್ಮಾದಿ ದೇವತೆಗಳನ್ನು ಸಂಸಾರದಿಂದ ಬಿಡಿಸಲು ಪಾಶುಪತಯೋಗವನ್ನು ಅವರಿಗೆ ಉಪದೇಶಮಾಡಿದೆಯಲ್ಲವೆ. ಆ ಪಶುಪತಿಯನ್ನು ನೋಡಿದ ಮಾತ್ರದಿಂದಲೇ ಮನುಷ್ಯನು ಪಶುವೃತ್ತಿಗೆ ಕಾರಣವಾದ ದೇಹಪಾಶದಿಂದ ಬಿಡುಗಡೆಯನ್ನು ಹೊಂದುವನು.

೧೧೨. ಕರವೀರಕತೀರ್ಥದಿಂದ ಇಲ್ಲಿಗೆ ಕಪಾಲೀಶ್ವರನು ಆಗಮಿಸಿರುವನು. ಕಪಾಲಮೋಚನತೀರ್ಥದಲ್ಲಿರುವ ಆ ಕಪಾಲೇಶ್ವರ ಲಿಂಗವನ್ನು ಪ್ರಯತ್ನ ಪೂರ್ವಕವಾಗಿ ಪ್ರತಿ ಮಾನವನೂ ದರ್ಶನಮಾಡಬೇಕು.

೧೧೩. ಆತನನ್ನು ಸಂದರ್ಶಿಸುವ ಮಾತ್ರದಿಂದಲೇ ಬ್ರಹ್ಮಹತ್ಯೆಯಂತಹ ಮಹಾಪಾತಕವೂ ನಾಶವಾಗುವುದು. ದೇವಿಕಾಕ್ಷೇತ್ರದಿಂದ ಉಮಾಪತಿಯು ಇಲ್ಲಿಗೆ ಬಂದು ವ್ಯವಸ್ಥಿತನಾಗಿರುವನು.

೧೧೪. ಪಶುಪತೀಶ್ವರನಿಗೆ ಪೂರ್ವದಲ್ಲಿರುವ ಆತನನ್ನು ನೋಡಲು ಬಹು ಕಾಲದಿಂದಾರ್ಜಿತಗಳಾದ ಪಾತಕಗಳನ್ನೂ ಪರಿಹರಿಸುವನು. ಮಹೇಶ್ವರನ ಕ್ಷೇತ್ರವಾದ ಕೈಲಾಸದಿಂದ ದೀಪ್ತೇಶ್ವರವೆಂಬ ಲಿಂಗವು ಪ್ರಾಪ್ತವಾಗಿರುವುದು.

೧೧೫. ಆ ಲಿಂಗವು ಉಮಾಪತಿಯ ಸಮೀಪದಲ್ಲಿಯೇ ನೆಲಸಿ ಇಹ ದಲ್ಲಿಯೂ ಪರದಲ್ಲಿಯೂ ದೇಹಕಾಂತಿಯನ್ನು ಕೊಡುವುದಾಗಿರುವುದು. ಕಾಶೀ ಕ್ಷೇತ್ರದ ಮಧ್ಯಭಾಗದಲ್ಲಿರುವ ಈ ದೀಪ್ತೇಶ್ವರಲಿಂಗವು ಭಕ್ತರಿಗೆ ಭೋಗ ಮೋಕ್ಷಗಳೆರಡನ್ನೂ ಕೊಡುತ್ತಿರುವುದು.

ಕಾಯಾರೋಹಣತಃ ಕ್ಷೇತ್ರಾದಾಚಾರ್ಯೋ ನಕುಲೀಶ್ವರಃ ।
ಶಿಷ್ಯೈಃ ಪರಿವೃತಸ್ತಿಷ್ಠೇನ್ಮಹಾಪಾಶುಪತವ್ರತೈಃ ॥ ೧೧೬ ॥
ದಕ್ಷಿಣೇ ಹಿ ಮಹಾದೇವಾದ್ದೃಷ್ಟೋ ಜ್ಞಾನಂ ಪ್ರಯಚ್ಛತಿ ।
ಅಜ್ಞಾನಂ ನಾಶಯೇತ್ಕ್ಷಿಪ್ರಂ ಗರ್ಭಸಂಸ್ಕೃತಿಹೇತುಕಂ ॥ ೧೧೭ ॥
ಗಂಗಾಸಾಗರತಶ್ಚಾಯಾದಮರೇಶ ಇತೀರಿತಂ ।
ಲಿಂಗಂ ಯದ್ದರ್ಶನಾದೇವ ನಾಮರತ್ವಂ ಹಿ ದುರ್ಲಭಂ ॥ ೧೧೮ ॥
ಸಪ್ತಗೋದಾವರೀತೀರ್ಥಾದ್ದೇವೋ ಭೀಮೇಶ್ವರಃ ಪ್ರಭುಃ ।
ಪ್ರಕಾಶತೇ ಲಿಂಗರೂಪೀ ಭುಕ್ತ್ಯೈ ಮುಕ್ತ್ಯೈ ನೃಣಾಮಿಹ ॥ ೧೧೯ ॥
ನಕುಲೀಶಾತ್ಪುರೋಭಾಗೇ ದೃಷ್ಟ್ವಾ ಭೀಮೇಶ್ವರಂ ಪ್ರಭುಂ ।
ಮಹಾಭೀಮಾನಿ ಪಾಪಾನಿ ಪ್ರಣಶ್ಯಂತಿ ಹಿ ತತ್‌ಕ್ಷಣಾತ್ ॥ ೧೨೦ ॥
ಭೂತೇಶ್ವರಾದ್ಭಸ್ಮಗಾತ್ರಃ ಪ್ರಾದುರಾಸೀದಿಹ ಸ್ವಯಂ ।
ಭೀಮೇಶಾದ್ದಕ್ಷಿಣೇ ಭಾಗೇ ತದಭ್ಯರ್ಚ್ಯಂ ಪ್ರಯತ್ನತಃ ॥ ೧೨೧ ॥

---

೧೧೬. ಕಾಯಾರೋಹಣವೆಂಬ ಕ್ಷೇತ್ರದಿಂದ ನಕುಲೀಶ್ವರನೆಂಬ ಆಚಾರ್ಯನು ಮಹಾ ಮಹೇಶ್ವರ ವ್ರತಗಳಲ್ಲಿ ನಿರತರಾಗಿರುವ ಶಿಷ್ಯಗಣಗಳಿಂದ ಪರಿವೃತನಾಗಿ ಬಂದು ಇಲ್ಲಿ ನೆಲಸಿರುವನು.

೧೧೭. ಮಹಾದೇವನಿಗೆ ದಕ್ಷಿಣದಿಕ್ಕಿನಲ್ಲಿರುವ ಈತನು ದರ್ಶನಮಾತ್ರದಿಂದ ಜ್ಞಾನವನ್ನು ಕೊಡುವನಲ್ಲದೆ ಜನನಮರಣರೂಪವಾದ ಸಂಸಾರಕ್ಕೆ ಕಾರಣವಾದ ಅಜ್ಞಾನವನ್ನು ಶೀಘ್ರವಾಗಿಯೇ ನಾಶಮಾಡುವನು.

೧೧೮. ಗಂಗಾಸಾಗರದಿಂದ ಇಲ್ಲಿಗೆ ಅಮರೇಶ್ವರನು ಬಂದು ಪ್ರಸಿದ್ಧನಾಗಿರುವನು. ಆ ಲಿಂಗವನ್ನು ದರ್ಶನಮಾಡುವ ಮಾತ್ರದಿಂದಲೇ ಮನುಷ್ಯನಿಗೆ ದೇವತೆಗಳ ಸ್ವರ್ಗಪದವಿಯೂ ದುರ್ಲಭವೆನಿಸುವುದಿಲ್ಲ.

೧೧೯. ಸಪ್ತಗೋದಾವರೀತೀರ್ಥದಿಂದ ಪ್ರಭುವಾದ ಭೀಮೇಶ್ವರನು ಸನ್ನಿಹಿತನಾಗಿರುವನು. ಆತನೇ ಮನುಷ್ಯರಿಗೆ ಭುಕ್ತಿಮುಕ್ತಿಗಳನ್ನು ಕೊಡುತ್ತ ಲಿಂಗರೂಪವನ್ನು ಧರಿಸಿ ಇಲ್ಲಿ ಪ್ರಕಾಶಿಸುತ್ತಿರುವನು.

೧೨೦. ನಕುಲೀಶ್ವರನಿಗೆ ಮುಂದುಗಡೆಯಲ್ಲಿರುವ ಲೋಕನಾಯಕನಾದ ಭೀಮೇಶ್ವರನನ್ನು ನೋಡಲು ಅತ್ಯಂತ ಭಯಂಕರಗಳಾದ ಪಾತಕಗಳೂ ಸಹ ಒಂದು ಕ್ಷಣದಲ್ಲಿಯೇ ನಾಶವಾಗುವುವು.

೧೨೧–೧೨೨. ಭೂತೇಶ್ವರಕ್ಷೇತ್ರದಿಂದ ಬಂದ ಭಸ್ಮಗಾತ್ರನು ಇಲ್ಲಿ ತಾನೇ ಲಿಂಗರೂಪದಿಂದ ಆವಿರ್ಭವಿಸಿರುವನು. ಆತನು ಭೀಮೇಶ್ವರನಿಗೆ ದಕ್ಷಿಣಭಾಗದಲ್ಲಿ ನೆಲಸಿರುವನು. ಆತನನ್ನು ಪ್ರಯತ್ನಪೂರ್ವಕವಾಗಿ ಪೂಜಿಸಿದವನು ಒಂದು ನೂರು ವರ್ಷಗಳವರೆಗೂ ಪಾಶುಪತಯೋಗವನ್ನು ಚೆನ್ನಾಗಿ ಅಭ್ಯಾಸಮಾಡು

ಸಂಯುಕ್ತಾಪಶುಪತಾದ್ಯೋಗಾದಭ್ಯಸ್ತಾಚ್ಚ ಸಮಾಃ ಶತಂ ।
ಯತ್ಪ್ರಾಪ್ಯತೇ ಫಲಂ ತಸ್ಮಾದ್ಭಸ್ಮಗಾತ್ರವಿಲೋಕನಾತ್ ॥ ೧೨೨ ॥
ನಕುಲೀಶ್ವರತೋ ದೇವಃ ಸ್ವಯಂಭೂರಿತಿ ವಿಶ್ರುತಃ ।
ಆತ್ಮನಾ ಪ್ರಕಟೀಭೂತಃ ಕಾಶ್ಯಾಂ ಲಿಂಗಾಕೃತಿರ್ಹರಃ ॥ ೧೨೩ ॥
ಸ್ವಯಂಭುಲಿಂಗಂ ಸಂಪೂಜ್ಯ ಸ್ನಾತ್ವಾ ಸಿದ್ಧಹ್ರದೇ ನರಃ ।
ಮಹಾಲಕ್ಷ್ಮೀಶ್ವರಪುರೋ ನ ಭೂಯೋ ಜನ್ಮಭಾಗ್ಭವೇತ್ ॥ ೧೨೪ ॥
ಪ್ರಯಾಗತೀರ್ಥನಿಕಟೇ ಪ್ರಾಸಾದೋ ವಿದ್ರುಮಪ್ರಭಃ ।
ವಾರಾಹಸ್ಯ ಮಹಾನೇಷ ಧರಣೀನಾಮ್ನ ಏವ ಹಿ ॥ ೧೨೫ ॥
ವಿಂಧ್ಯಪರ್ವತತಃ ಪ್ರಾಪ್ತೋ ದೇವಂ ಶ್ರುತ್ವಾ ಸಮಾಗತಂ ।
ಸಗಣಂ ಸರ್ಷಿದೇವಂ ಚ ಮಂದರಾದ್ರತ್ನಕಂದರಾತ್ ॥ ೧೨೬ ॥
ಕಾಶ್ಯಾಂ ಧರಣಿವಾರಾಹೋ ದ್ರಷ್ಟವ್ಯಃ ಸಪ್ರಯತ್ನತಃ ।
ಆಪತ್ಸಮುದ್ರಸಂಮಗ್ನಮುದ್ಧರೇಚ್ಛರಣಾಗತಂ ॥ ೧೨೭ ॥

---

ವುದರಿಂದ ಯಾವ ಫಲವನ್ನು ಪಡೆಯುವನೊ, ಅದನ್ನೇ ಭಸ್ಮಗಾತ್ರೇಶ್ವರನ ದರ್ಶನದಿಂದ ಹೊಂದುವನು.

೧೨೩. ನಕುಲೀಶ್ವರಕ್ಷೇತ್ರದಿಂದ ಸ್ವಯಂಭುವೆಂದು ಪ್ರಖ್ಯಾತನಾಗಿರುವ ದೇವೋತ್ತಮನು ಬಂದಿರುವನು. ಕಾಶಿಯಲ್ಲಿ ಲಿಂಗಾಕೃತಿಯನ್ನು ಸ್ವೀಕರಿಸಿ ತನ್ನ ಸ್ವರೂಪವನ್ನೇ ಇಲ್ಲಿ ಪ್ರಕಟಗೊಳಿಸುತ್ತಿರುವನು.

೧೨೪. ಸಿದ್ಧತೀರ್ಥದಲ್ಲಿ ಸ್ನಾನವನ್ನು ಮಾಡಿ ಮಹಾಲಕ್ಷ್ಮೀಶ್ವರನ ಮುಂಭಾಗದಲ್ಲಿ ನೆಲಸಿರುವ ಸ್ವಯಂಭುಲಿಂಗವನ್ನು ಪೂಜೆಮಾಡಿದ ಮನುಷ್ಯನು ಪುನಃ ಜನ್ಮಕ್ಕೆ ಭಾಗಿಯಾಗುವುದಿಲ್ಲ.

೧೨೫. ಪ್ರಯಾಗತೀರ್ಥದ ಸಮೀಪದಲ್ಲಿಯೇ ಹವಳದಂತೆ ಕಾಂತಿಯುಕ್ತ ವಾದ ಒಂದು ದೇವಾಲಯವು ಕಾಣುತ್ತಿರುವುದು. ಅದು ಧರಣೀವರಾಹ ಸ್ವಾಮಿಯ ನಿವಾಸವಾದ ಮಹಾ ಮಂಟಪವು.

೧೨೬. ಆತನು ಮಹಾದೇವನು ನವರತ್ನಮಯಗಳಾದ ಗಿರಿಕಂದರಗಳಿಂದ ಕೂಡಿದ ಮಂದರಪರ್ವತದಿಂದ ಗಣಗಳೊಡನೆಯೂ ಋಷಿಗಳೊಡನೆಯೂ ದೇವತೆಗಳೊಡನೆಯೂ ಕೂಡಿ ಕಾಶಿಯನ್ನು ಪ್ರವೇಶಮಾಡಿದನೆಂಬ ವಾರ್ತೆಯನ್ನು ಕೇಳಿ ವಿಂಧ್ಯಪರ್ವತದಿಂದ ಇಲ್ಲಿಗೆ ಬಿಜಮಾಡಿದನು.

೧೨೭. ಕಾಶಿಯಲ್ಲಿರುವ ಧರಣೀವರಾಹಸ್ವಾಮಿಯನ್ನು ಸರ್ವರೂ ಅವಶ್ಯಕವಾಗಿ ನೋಡಬೇಕು. ಆತನು ಆಪತ್ಪರಂಪರೆಯೆಂಬ ಸಮುದ್ರದಲ್ಲಿ ಮುಳುಗಿ ಸಂಕಟಪಡುತ್ತಿರುವ ಭಕ್ತನನ್ನು ಶರಣುಹೊಕ್ಕ ಮಾತ್ರದಿಂದಲೇ ಉದ್ಧರಿಸುವನು.

ಕರ್ಣಿಕಾರಾದ್ಗಣಾಧ್ಯಕ್ಷಃ ಕರ್ಣಿಕಾರಪ್ರಸೂನರುಕ್ ।
ಸಮುಚ್ಯೋರ್ಯಂ ಗದಾಖಡ್ಗೀ ಉಪಸರ್ಗಸಹಸ್ರಕೃತ್ ॥ ೧೨೮ ॥
ತಸ್ಮಾದ್ಧರಣಿವಾರಾಹಾತ್ಪ್ರತೀಚ್ಯಾಂ ದಿಶಿ ಸಂಸ್ಥಿತಂ ।
ಪೂಜಯಿತ್ವಾ ಗಣಾಧ್ಯಕ್ಷಂ ಗಾಣಾಪತ್ಯಪದಂ ಲಭೇತ್ ॥ ೧೨೯ ॥
ಹೇಮಕೂಟಾದ್ವಿರೂಪಾಕ್ಷಂ ಲಿಂಗಮುತ್ರಾವಿರಾಸ ಹ ।
ಮಹೇಶ್ವರಾದವಾಚ್ಯಾಂ ಚ ದೃಷ್ಟಂ ಸಂಸಾರತಾರಕಂ ॥ ೧೩೦ ॥
ಗಂಗಾದ್ವಾರಾದ್ಧಿಮಸ್ಥೇಶಂ ಲಿಂಗಂ ಹಿಮಸಮಪ್ರಭಂ ।
ಬ್ರಹ್ಮನಾಲಾತ್ಪ್ರತೀಚ್ಯಾಂ ಚ ದ್ರಷ್ಟವ್ಯಮಿಹ ಸಿದ್ಧಿದಂ ॥ ೧೩೧ ॥
ಗಣಾಧಿಪಶ್ಚ ಕೈಲಾಸಾದ್ಗಣಾ ಅನ್ಯೇ ಮಹಾಬಲಾಃ ।
ಕೈಲಾಸಾದ್ರೇಃ ಸಮಾಯಾತಾಃ ಸಪ್ತಕೋಟಿಮಿತಾ ಪ್ರಭೋ ॥ ೧೩೨ ॥
ದುರ್ಗಾಣಿ ತೈಃ ಕೃತಾನೀಹ ಸಪ್ತ ಸ್ವರ್ಗಸಮಾನಿ ಚ ।
ಸದ್ವಾರಾಣಿ ಸಯಂತ್ರಾಣಿ ಕಪಾಟವಿಕಟಾನಿ ಚ ॥ ೧೩೩ ॥

---

೧೨೮. ಕರ್ಣಿಕಾರಕ್ಷೇತ್ರದಿಂದ ಕರ್ಣಿಕಾರಪುಷ್ಪದ ದೇಹವರ್ಣದಿಂದ ಕೂಡಿದ ಗಣಾಧ್ಯಕ್ಷನು ಪ್ರಾಪ್ತನಾಗಿರುವನು. ಗದೆಯನ್ನು ಕೈಯಲ್ಲಿ ಹಿಡಿದು ಭಕ್ತರ ಸಮಸ್ತ ವಿಘ್ನಗಳನ್ನೂ ನಿರ್ಮೂಲಗೊಳಿಸುವ ಆತನನ್ನು ಸಕಲರೂ ಭಕ್ತಿಯಿಂದ ಪೂಜಿಸಬೇಕು.

೧೨೯. ಆ ಧರಣೀವರಾಹಸ್ವಾಮಿಯ ದೇವಾಲಯಕ್ಕೆ ಪಶ್ಚಿಮದಲ್ಲಿ ಸಂಸ್ಥಾಪಿತನಾಗಿರುವ ಗಣಾಧ್ಯಕ್ಷನನ್ನು ಪೂಜೆಮಾಡಲು ಗಣಾಧ್ಯಕ್ಷಪದವಿಯು ಮನುಷ್ಯನಿಗೆ ಲಭಿಸುವುದು.

೧೩೦. ಹೇಮಕೂಟಪರ್ವತದಿಂದ ವಿರೂಪಾಕ್ಷಲಿಂಗವು ಇಲ್ಲಿ ಆವಿರ್ಭಾವವನ್ನು ತಾಳಿರುವುದು. ಮಹೇಶ್ವರನ ಕೆಳಗಡೆಗೆ ಇರುವ ಈ ಲಿಂಗವು ಭಕ್ತರನ್ನು ಸಂಸಾರದಿಂದ ಕಡೆಹಾಯಿಸುವುದು.

೧೩೧. ಗಂಗಾದ್ವಾರದಿಂದ ಹಿಮಸಮಾನವಾದ ಶುದ್ಧಪ್ರಭೆಯಿಂದ ಕೂಡಿದ ಹಿಮಸ್ಥೇಶ್ವರಲಿಂಗವು ಬಂದಿರುವುದು. ಬ್ರಹ್ಮನಾಳಕ್ಕೆ ಪಶ್ಚಿಮದಲ್ಲಿ ನೆಲಸಿ ಸಕಲಸಿದ್ಧಿಪ್ರದವಾಗಿರುವ ಈ ಲಿಂಗವು ಎಲ್ಲರಿಂದಲೂ ನೋಡಲ್ಪಡತಕ್ಕದ್ದು.

೧೩೨. ಮಹಾದೇವನೆ! ಕೈಲಾಸಪರ್ವತದಿಂದ ಮಹಾಗಣಪತಿಯೂ ಬಂದಿರುವನಲ್ಲದೆ ಅಲ್ಲಿದ್ದ ಏಳುಕೋಟಿ ಸಂಖ್ಯೆಯ ಮಹಾಬಲಶಾಲಿಗಳಾದ ರುದ್ರಗಣಗಳೆಲ್ಲರೂ ಇಲ್ಲಿಗೆ ಆಗಮಿಸಿರುವರು.

೧೩೩. ಅವರಿಂದ ಇಲ್ಲಿ ಸ್ವರ್ಗಲೋಕಗಳಿಗೆ ಸದೃಶಗಳೆನಿಸಿ ದ್ವಾರಗಳಿಂದಲೂ, ಯಂತ್ರವಿಶೇಷಗಳಿಂದಲೂ, ಬಾಗಿಲುಗಳಿಂದಲೂ ಕೂಡಿ ದುಸ್ಸಾಧ್ಯಗಳಾದ ಏಳು ದುರ್ಗಗಳು ನಿರ್ಮಿತಗಳಾಗಿರುವುವು.

ಕೋಟಿಕೋಟಿಭಟಾಢ್ಯಾಣಿ ಸರ್ವರ್ಧಿಸಹಿತಾನ್ಯಪಿ ।
ಸುವರ್ಣರೂಪ್ಯತಾಮ್ರೈಶ್ಚ ಕಾಂಸ್ಯರೀತಿಕಸೀಸಕೈಃ ॥ ೧೩೪ ॥
ಅಯಸ್ಕಾಂತೇನ ಕಾಂತಾನಿ ದೃಢಾನ್ಯಭ್ರಂಲಿಹಾನ್ಯಪಿ ।
ತತಃ ಶೈಲಂ ಮಹಾದುರ್ಗಂ ತೈಃ ಕಾಶೀಪರಿತಃ ಕೃತಂ ॥ ೧೩೫ ॥
ಪರಿಖಾಪಿ ಕೃತಾ ನಿಮ್ನಾ ಮತ್ಸ್ಯೋದರ್ಯಾ ಜಲಾವಿಲಾ ।
ಮತ್ಸ್ಯೋದರೀ ದ್ವಿಧಾ ಜಾತಾ ಬಹಿರಂತಶ್ಚರಾ ಪುನಃ ॥ ೧೩೬ ॥
ತಚ್ಚ ತೀರ್ಥಂ ಮಹತ್ಖ್ಯಾತಂ ಮಿಲಿತಂ ಗಾಂಗವಾರಿಭಿಃ ।
ಯದಾ ಸಂಹಾರಮಾರ್ಗೇಣ ಗಂಗಾಂಭಃ ಪ್ರಸರೇದಿಹ ॥ ೧೩೭ ॥
ತದಾ ಮತ್ಸ್ಯೋದರೀ ತೀರ್ಥಂ ಲಭ್ಯತೇ ಪುಣ್ಯಗೌರವಾತ್ ।
ಸೂರ್ಯಾಚಂದ್ರಮಸೋಃ ಪರ್ವಃ ತದಾ ಕೋಟಿಗುಣಂ ಶತಂ ॥ ೧೩೮ ॥
ಸರ್ವಪರ್ವಾಣಿ ತತ್ರೈವ ಸರ್ವತೀರ್ಥಾನಿ ತತ್ರ ವೈ ।
ತತ್ರೈವ ಸರ್ವಲಿಂಗಾನಿ ಗಂಗಾ ಮತ್ಸ್ಯೋದರೀ ಯತಃ ॥ ೧೩೯ ॥

---

೧೩೪–೧೩೫. ಅವುಗಳು ಅಸಂಖ್ಯಾತಕೋಟಿ ಯೋಧರಿಂದ ತುಂಬಿ ಸಕಲ ಸಾಮಗ್ರೀಸಹಿತಗಳಾಗಿರುವುವು. ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ಸೀಸ, ಕಬ್ಬಿಣ ಮುಂತಾದ ಅನೇಕಲೋಹಗಳ ಕಳಶತೋರಣಾದಿಗಳಿಂದ ಕಂಗೊಳಿಸುತ್ತಿರುವುವು. ಭದ್ರವಾದ ಅಡಿಗಲ್ಲುಗಳಮೇಲೆ ಕಟ್ಟಲ್ಪಟ್ಟು ಮೇಘಮಂಡಲವನ್ನು ಮುಟ್ಟುತ್ತಿರುವುವು. ಮತ್ತು ಕಾಶಿಯ ಸುತ್ತಲೂ ಅತ್ಯಂತ ದುರ್ಗಮವಾದ ಪರ್ವತವೊಂದನ್ನು ಅವರು ಉಂಟುಮಾಡಿರುವರು.

೧೩೬. ಅದರ ಸುತ್ತಲೂ ಬಹಳ ಆಳವಾದ ಕೊತ್ತಳವೊಂದನ್ನೂ ನಿರ್ಮಿಸಿ ಅದನ್ನು ಮತ್ಸ್ಯೋದರೀನದಿಯ ಜಲದಿಂದ ತುಂಬಿರುವರು. ಆದುದರಿಂದ ಮತ್ಸ್ಯೋದರಿಯು ಇಲ್ಲಿ ಬಹಿರ್ಗಾಮಿಯೂ ಅಂತಃಪ್ರವಾಹಿನಿಯೂ ಎಂಬುದಾಗಿ ಎರಡು ರೂಪಗಳಿಂದ ಪ್ರವಹಿಸುತ್ತಿರುವುದು.

೧೩೭–೧೩೮. ಆ ನದಿಯು ಗಂಗಾನದಿಯ ನೀರಿನೊಡನೆ ಸೇರುವ ಪ್ರದೇಶವೇ ಮಹಾತೀರ್ಥವೆಂದು ಪ್ರಖ್ಯಾತವಾಗಿರುವುದು. ಗಂಗಾಪ್ರವಾಹವು ವಿಪರೀತಕ್ರಮದಿಂದ (ದಕ್ಷಿಣ ವಾಹಿನಿಯಾಗಿ) ಯಾವಾಗ ಪ್ರವಹಿಸುವುದೊ, ಆಗ ಮಾತ್ರ ಭಕ್ತರ ಪುಣ್ಯಗೌರವದಿಂದ ಮತ್ಸ್ಯೋದರೀತೀರ್ಥವು ಲಭಿಸುವುದು. ಆ ಸಮಯವು ಸೂರ್ಯಚಂದ್ರರ ಗ್ರಹಣಗಳಿಗಿಂತಲೂ ನೂರುಕೋಟಿಯಷ್ಟು ಮಹಾತ್ಮ್ಯವುಳ್ಳ ಪರ್ವಕಾಲವೆಂದು ತಿಳಿಯಬೇಕು.

೧೩೯. ಅಲ್ಲಿಯೇ ಸಕಲ ಪರ್ವಕಾಲಗಳೂ ಸಮಸ್ತ ತೀರ್ಥಗಳೂ, ಭೂಲೋಕದ ಸಮಸ್ತಲಿಂಗಗಳೂ, ಗಂಗಾಮತ್ಸ್ಯೋದರೀನದಿಗಳ ಸಂಗಮಪ್ರದೇಶದಲ್ಲಿ ಸನ್ನಿಹಿತಗಳಾಗಿರುವುವು.

ಮತ್ಸ್ಯೋದರ್ಯಾಂ ಹಿ ಯೇ ಸ್ನಾತ್ವಾ ಯತ್ರ ಕುತ್ರಾಪಿ ಮಾನವಾಃ ।
ಕೃತಪಿಂಡಪ್ರದಾನಾಸ್ತೇ ನ ಮಾತುರುದರೇಶಯಾಃ ॥ ೧೪೦ ॥
ಅವಿಮುಕ್ತಮಿದಂ ಕ್ಷೇತ್ರಂ ಮತ್ಸ್ಯಾಕಾರತ್ವಮಾಪ್ನುಯಾತ್ ।
ಪರಿತಃ ಸ್ವರ್ಧುನಿಸಾವಾರಿ ಸಂಸಾರಿ ಪರಿವೀಕ್ಷ್ಯತೇ ॥ ೧೪೧ ॥
ಮತ್ಸ್ಯೋದರ್ಯಾಂ ಕೃತಸ್ನಾನಾ ಯೇ ನರಾಸ್ತೇ ನರೋತ್ತಮಾಃ ।
ಕೃತ್ವಾಪಿ ಬಹುಪಾಪಾನಿ ನೇಕ್ಷಂತೇ ಭಾಸ್ಕರೇಃ ಪುರೀಂ ॥ ೧೪೨ ॥
ಕಿಂ ಸ್ನಾತ್ವಾ ಬಹುತೀರ್ಥೇಷು ಕಿಂ ತಪ್ತ್ವಾ ದುಷ್ಕರಂ ತಪಃ ।
ಯದಾ ಮತ್ಸ್ಯೋದರೀ ಸ್ನಾತಾ ಕುತೋ ಗರ್ಭಭಯಂ ತತಃ ॥ ೧೪೩ ॥
ಯತ್ರ ಯತ್ರ ಹಿ ಲಿಂಗಾನಿ ನೃದೇವರ್ಷಿಕೃತಾನ್ಯಪಿ ।
ತತ್ರ ಮತ್ಸ್ಯೋದರೀಂ ಪ್ರಾಪ್ಯ ಸುಸ್ನಾತೋ ಮೋಕ್ಷಭಾಜನಂ ॥ ೧೪೪ ॥
ಸಂತಿ ತೀರ್ಥಾನ್ಯನೇಕಾನಿ ಭೂರ್ಭುವಸ್ಸ್ವರ್ಗತಾನ್ಯಪಿ ।
ನ ಸಮಾನಿ ಪರಂ ತಾನಿ ಕೋಟ್ಯಂಶೇನಾಪಿ ನಿಶ್ಚಿತಂ ॥ ೧೪೫ ॥

---

೧೪೦. ಮತ್ಸ್ಯೋದರೀತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವ ಮಾನವರು ಪಿತೃಗಳನ್ನುದ್ದೇಶಿಸಿ ಪಿಂಡಪ್ರದಾನಗಳನ್ನು ಮಾಡುವರೊ, ಅವರು ಎಲ್ಲಿಯೂ ಯಾವ ಕಾಲಕ್ಕೂ ಪುನಃ ತಾಯಿಯ ಉದರದಲ್ಲಿ ಶಯನಮಾಡುವುದಿಲ್ಲ.

೧೪೧. ಕಾಲಾಂತರದಲ್ಲಿ ಈ ಅವಿಮುಕ್ತ ಕ್ಷೇತ್ರವು ಮತ್ಸ್ಯದ ಆಕಾರವನ್ನು ತಾಳುವುದು. ಆಗ ಇದರ ಸುತ್ತಲೂ ಗಂಗಾನದಿಯ ಜಲವು ಪ್ರವಹಿಸುವುದು ಕಂಡುಬರುವುದು.

೧೪೨. ಮತ್ಸ್ಯೋದರಿಯಲ್ಲಿ ಯಾವ ಮಾನವರು ಸ್ನಾನವನ್ನು ಮಾಡುವರೊ, ಅವರೇ ಮನುಷ್ಯೋತ್ತಮರು. ಅವರು ಅನೇಕ ಪಾಪಗಳನ್ನು ಮಾಡಿದ್ದರೂ ಎಂದಿಗೂ ಯಮರಾಜನ ಪಟ್ಟಣವನ್ನು ನೋಡುವುದಿಲ್ಲ.

೧೪೩. ಅನೇಕತೀರ್ಥಗಳಲ್ಲಿ ಸ್ನಾನಮಾಡಿದುದರಿಂದೇನು? ದುಸ್ಸಾಧ್ಯವಾದ ತಪಸ್ಸನ್ನಾಚರಿಸಿದುದರಿಂದ ಫಲವೇನು? ಒಮ್ಮೆ ಮನುಷ್ಯರು ಮತ್ಸ್ಯೋದರಿಯಲ್ಲಿ ಸ್ನಾನವನ್ನು ಮಾಡಿದಮೇಲೆ ಅವರಿಗೆ ಪುನಃ ತಾಯಿಯರ ಗರ್ಭದಲ್ಲಿ ವಾಸಮಾಡುವ ಭಯವೆಲ್ಲಿಯದು?

೧೪೪. ಮನುಷ್ಯರಿಂದಲೂ, ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸ್ಥಾಪಿತಗಳಾದ ಲಿಂಗಗಳಿರುವ ಕ್ಷೇತ್ರಗಳು ಎಲ್ಲೆಲ್ಲಿರುವುವೊ, ಅವೆಲ್ಲವುಗಳನ್ನು ಸೇವಿಸುವುದಕ್ಕಿಂತಲೂ ಮತ್ಸ್ಯೋದರಿಯನ್ನು ಸೇರಿ ವಿಧ್ಯುಕ್ತವಾಗಿ ಸ್ನಾನ ಮಾಡಲು ಮನುಷ್ಯನು ಮೋಕ್ಷಕ್ಕೆ ಭಾಗಿಯಾಗುವನು.

೧೪೫. ಭೂಲೋಕ, ಭುವರ್ಲೋಕ, ಸುವರ್ಲೋಕಗಳಲ್ಲಿ ಅನೇಕ ತೀರ್ಥಗಳು ನೆಲಸಿರುವುವು. ಆದರೆ ಅವುಗಳೆಲ್ಲವೂ ಸೇರಿದರೂ ಈ ತೀರ್ಥದ ಒಂದು ಕೋಟ್ಯಂಶಕ್ಕೂ ಸರಿದೂಗಲಾರವೆಂಬುದು ನಿಶ್ಚಯವು.

ಇತ್ಥಂ ತೀರ್ಥಂ ಕೃತಂ ತೇನ ವಿಭೋ ಕೈಲಾಸವಾಸಿನಾ ।
ಗಣಾಧಿಪೇನ ಸುಮಹತ್ಸುಮಹೋದಾರಕರ್ಮಣಾ ॥ ೧೪೬ ॥
ಭೂರ್ಭುವಃ ಸಂಜ್ಞಕಂ ಲಿಂಗಂ ಪರ್ವತಾದ್ಗಂಧಮಾದನಾತ್ ।
ಸ್ವಯಮಾವಿರಭೂದತ್ರ ತಸ್ಮಾತ್ಪ್ರಾಚ್ಯಾಂ ಗಣಾಧಿಪಾತ್ ॥ ೧೪೭ ॥
ವಿಲೋಕ್ಯ ಭೂರ್ಭುವಂ ಲಿಂಗಂ ಭೂರ್ಭುವಃಸ್ವರ್ಮಹಃ ಪರೇ ।
ನಿವಸಂತಿ ಜನಾಃ ಪುಣ್ಯಾಃ ಸುಚಿರಂ ದಿವ್ಯಭೋಗಿನಃ ॥ ೧೪೮ ॥
ಹಾಟಕೇಶಂ ಮಹಾಲಿಂಗಂ ಭೋಗವತ್ಯಾ ಸಮಾಯುತಂ ।
ಸಪ್ತಪಾತಾಲತಲತ ಇಹಾಯಾತಂ ಸ್ವಯಂ ವಿಭೋ ॥ ೧೪೯ ॥
ಶೇಷವಾಸುಕಿಮುಖ್ಯೈಶ್ಚ ತತ್ಪ್ರಾಸಾದೋ ಮಹಾನಿಹ ।
ಮಣಿಮಾಣಿಕ್ಯರತ್ನೌಘೈರ್ನಿರಮಾಯಿ ಪ್ರಯತ್ನತಃ ॥ ೧೫೦ ॥
ತಲ್ಲಿಂಗಂ ಹಾಟಕಮಯಂ ರತ್ನಮಾಲಾಭಿರರ್ಚಿತಂ ।
ಈಶಾನೇಶ್ವರತಃ ಪ್ರಾಚ್ಯಾಂ ಪೂಜನೀಯಂ ಪ್ರಯತ್ನತಃ ॥ ೧೫೧ ॥

---

೧೪೬. ಎಲೈ ಸ್ವಾಮಿಯೆ! ಇಂತು ಏಳುಕೋಟಿ ಗಣಗಳಿಂದೊಡಗೂಡಿ ಉದಾರಕರ್ಮನಿರತನೂ, ಕೈಲಾಸನಿವಾಸಿಯೂ ಆದ ಗಣಪತಿಯಿಂದ ಈ ತೀರ್ಥವು ಮಹಾಪ್ರಭಾವವುಳ್ಳದ್ದಾಗಿ ಮಾಡಲ್ಪಟ್ಟಿತು.

೧೪೭. ಭೂರ್ಭುವಲಿಂಗವೆಂಬುದು ಗಂಧಮಾದನಪರ್ವತಪ್ರದೇಶದಿಂದ ಇಲ್ಲಿಗೆ ಬಂದು ಆ ಗಣಾಧಿಪತಿಗೆ ಪೂರ್ವದಿಕ್ಕಿನಲ್ಲಿ ತಾನೇ ಆವಿರ್ಭೂತವಾಗಿರುವುದು.

೧೪೮. ಈ ಭೂರ್ಭುವಲಿಂಗವನ್ನು ನೋಡಿದ ಜನರು ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳಿಗಿಂತಲೂ ಮೇಲೆ ಹೋಗಿ ಪುಣ್ಯವಂತರಾಗಿ ಬಹಳ ಕಾಲದವರೆಗೂ ದಿವ್ಯಭೋಗಗಳನ್ನನುಭವಿಸುತ್ತ ಇರುವರು.

೧೪೯. ಪಾತಾಲಗಂಗೆಯಿಂದ ಇಲ್ಲಿಗೆ ಹಾಟಕೇಶ್ವರಲಿಂಗವು ಬಂದು ನೆಲಸಿರುವುದು. ಸ್ವಾಮಿಯೆ! ಅದು ಏಳು ಪಾತಾಳಗಳ ಅಧೋಭಾಗದಿಂದ ತಾನೇ ತಾನಾಗಿ ಅವತರಿಸಿರುವುದು.

೧೫೦. ಶೇಷ, ವಾಸುಕಿಗಳೇ ಮೊದಲಾದ ಅನೇಕ ನಾಗರು ಅದಕ್ಕಾಗಿ ಇಲ್ಲಿ ಮಣಿ, ಮಾಣಿಕ್ಯ, ನವರತ್ನಗಳ ರಾಶಿಗಳಿಂದ ಮಹತ್ತರವಾದ ದೇವಾಲಯವೊಂದನ್ನು ಬಹುಪ್ರಯಾಸದಿಂದ ನಿರ್ಮಿಸಿರುವರು.

೧೫೧. ಆ ಲಿಂಗವು ಚಿನ್ನದಿಂದಲೇ ಮಾಡಿದುದಾಗಿ ನವರತ್ನಗಳ ಮಾಲೆಗಳಿಂದಲೇ ಪೂಜಿಸಲ್ಪಡುತ್ತಿರುವುದು. ಈಶಾನೇಶ್ವರನಿಗೆ ಪೂರ್ವದಿಕ್ಕಿನಲ್ಲಿರುವ ಆ ಲಿಂಗವನ್ನು ಪ್ರತಿಯೊಬ್ಬನೂ ಪ್ರಯತ್ನಪೂರ್ವಕವಾಗಿ ಪೂಜಿಸತಕ್ಕದ್ದು.

ಭಕ್ತಿತೋಽಭ್ಯರ್ಚ್ಯ ತಲ್ಲಿಂಗಂ ನರಃ ಸರ್ವಸಮೃದ್ಧಿಮಾನ್ ।
ಭುಕ್ತ್ವಾಭೋಗಾನಸಂಖ್ಯಾತಾನಂತೇ ನಿರ್ವಾಣಮೃಚ್ಛತಿ ॥ ೧೫೨ ॥
ಆಕಾಶಾತ್ತಾರಕಾಲಿಂಗಂ ಜ್ಯೋತೀರೂಪಮಿಹಾಗತಂ ।
ಜ್ಞಾನವಾಪ್ಯಾಃ ಪುರೋಭಾಗೇ ತಲ್ಲಿಂಗಂ ತಾರಕೇಶ್ವರಂ ॥ ೧೫೩ ॥
ತಾರಕಂ ಜ್ಞಾನಮಾಪ್ನೋತಿ ತಲ್ಲಿಂಗಸ್ಯ ಸಮರ್ಚನಾತ್ ।
ಜ್ಞಾನವಾಪ್ಯಾಂ ನರಃ ಸ್ನಾತ್ವಾ ತಾರಕೇಶಂ ವಿಲೋಕ್ಯ ಚ ॥ ೧೫೪ ॥
ಕೃತಸಂಧ್ಯಾದಿನಿಯಮಃ ಪರಿತರ್ಪ್ಯ ಪಿತಾಮಹಾನ್ ।
ಧೃತಮೌನವ್ರತೋ ಧೀಮಾನಾವಲ್ಲಿಂಗವಿಲೋಕನಂ ॥ ೧೫೫ ॥
ಮುಚ್ಯತೇ ಸರ್ವಪಾಪೇಭ್ಯಃ ಪುಣ್ಯಂ ಪ್ರಾಪ್ನೋತಿ ಶಾಶ್ವತಂ ।
ಪ್ರಾಂತೇ ಚ ತಾರಕಂ ಜ್ಞಾನಂ ಯಸ್ಮಾದ್ಜ್ಞಾನಾದ್ವಿಮುಚ್ಯತೇ ॥ ೧೫೬ ॥
ಕಿರಾತಾಚ್ಚ ಕಿರಾತೇಶ ಇಹ ಚಾವಿರ್ಭಭೂವ ಹ ।
ಕಿರಾತರೂಪೋ ಭಗವಾನ್ಯತ್ರ ದೇವೋಽಭವತ್ಪುರಾ ॥ ೧೫೭ ॥

---

೧೫೨. ಆ ಲಿಂಗವನ್ನು ಭಕ್ತಿಯಿಂದ ಪೂಜೆಮಾಡಿದ ಮನುಷ್ಯನು ಸಮಸ್ತ ಸಮೃದ್ಧಿಗಳನ್ನೂ ಪಡೆಯುವನು. ಈ ಲೋಕದಲ್ಲಿ ಅಸಂಖ್ಯಾಕಗಳಾದ ಭೋಗಗಳನ್ನನುಭವಿಸಿ ಕಡೆಯಲ್ಲಿ ಮೋಕ್ಷವನ್ನು ಪಡೆಯುವನು.

೧೫೩. ಆಕಾಶದಿಂದ ತಾರಕಲಿಂಗವು ಜ್ಯೋತೀರೂಪದಿಂದ ಇಲ್ಲಿಗೆ ಬಂದಿರುವುದು. ಆ ತಾರಕೇಶ್ವರಲಿಂಗವು ಜ್ಞಾನವಾಪೀತೀರ್ಥಕ್ಕೆ ಮುಂಭಾಗದಲ್ಲಿಯೇ ಪ್ರತಿಷ್ಠಿತವಾಗಿರುವುದು.

೧೫೪–೧೫೫. ಆ ಲಿಂಗವನ್ನು ಅರ್ಚನೆಮಾಡುವುದರಿಂದ ಮನುಷ್ಯನು ತಾರಕಜ್ಞಾನವನ್ನು ಪಡೆಯುವನು. ಜ್ಞಾನವಾಪಿಯಲ್ಲಿ ಸ್ನಾನವನ್ನು ಮಾಡಿಕೊಂಡು ಪ್ರತಿಯೊಬ್ಬ ಭಕ್ತನೂ ತಾರಕೇಶ್ವರಲಿಂಗವನ್ನು ಸಂದರ್ಶಿಸಿ, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪಿತೃಪಿತಾಮಹಾದಿಗಳಿಗೆ ತರ್ಪಣಗಳನ್ನಿತ್ತು ಸಂತೋಷಗೊಳಿಸಿ, ಆ ಲಿಂಗದ ದರ್ಶನವಾಗುವವರೆಗೂ ಮೌನವ್ರತವನ್ನು ಧಾರಣಮಾಡಿರಬೇಕು.

೧೫೬. ಆತನು ಸಮಸ್ತಪಾತಕಗಳಿಂದಲೂ ಮುಕ್ತನಾಗುವನು. ಶಾಶ್ವತವಾದ ಪುಣ್ಯವನ್ನೂ ಸಂಪಾದಿಸುವನು. ಅಂತ್ಯದಲ್ಲಿ ತಾರಕಜ್ಞಾನವನ್ನು ಪಡೆದು ಜ್ಞಾನದ ಮಾರ್ಗದಲ್ಲಿಯೇ ನಡೆದು ಸಂಸಾರದಿಂದ ಬಿಡುಗಡೆಯನ್ನೂ ಹೊಂದುವನು.

೧೫೭. ಕಿರಾತತೀರ್ಥದಿಂದ ಕಿರಾತೇಶ್ವರನು ಇಲ್ಲಿ ಆವಿರ್ಭಾವವನ್ನು ತಳೆದಿರುವನು. ಆ ತೀರ್ಥದ ಸಮೀಪದಲ್ಲಿಯೇ ಮಹಾದೇವನು ಅರ್ಜುನನಿಗಾಗಿ ಕಿರಾತನ ವೇಷವನ್ನು ಧರಿಸಿ ಬಂದನು.

ತತ್ಕಿರಾತೇಶ್ವರಂ ಲಿಂಗಂ ಭಾರಭೂತೇಶ್ವರಾದನು ।
ನಮಸ್ಕೃತ್ಯ ನರೋ ಜಾತು ನ ಮಾತುರುದರೇಶಯಃ ॥ ೧೫೮ ॥
ಲಂಕಾಪುರ್ಯಾ ಸಮಾಗಚ್ಛನ್ಮರುಕೇಶ್ವರಸಂಜ್ಞಕಂ ।
ಲಿಂಗಂ ಯದರ್ಚನಾತ್ಪುಂಸಾಂ ನ ಭಯಂ ರಕ್ಷಸಾಂ ಭವೇತ್ ॥ ೧೫೯ ॥
ನೈಋರ್ತ್ಯಾಂ ದಿಶಿ ತಲ್ಲಿಂಗಂ ನೈಋರ್ತೇಶ್ವರಸಂಜ್ಞಕಂ ।
ಪೌರಸ್ತ್ಯಾ ರಾಘವಾತ್ಪಶ್ಚಾತ್ಪೂಜಿತಂ ಸರ್ವದುಷ್ಟಹೃತ್ ॥ ೧೬೦ ॥
ಪುಣ್ಯಂ ಜಲಪ್ರಿಯಂ ಲಿಂಗಂ ಜಲಲಿಂಗಂ ಸ್ಥಲಾದಪಿ ।
ಆಯಾತಂ ತಚ್ಚ ಗಂಗಾಯಾ ಜಲಮಧ್ಯೇ ವ್ಯವಸ್ಥಿತಂ ॥ ೧೬೧ ॥
ತತ್ಪ್ರಾಸಾದೋಽದ್ಭುತತರೋ ಮಧ್ಯೇಗಂಗಂ ನಿರೀಕ್ಷ್ಯತೇ ।
ಸರ್ವಧಾತುಮಯಃ ಶ್ರೇಷ್ಠಃ ಸರ್ವರತ್ನಮಯಃ ಶುಭಃ ॥ ೧೬೨ ॥
ಅದ್ಯಾಪಿ ದೃಶ್ಯತೇ ಕೈಶ್ಚಿತ್ಪುಣ್ಯಸಂಭಾರಗೌರವಾತ್ ।
ಶ್ರೇಷ್ಠಂ ಲಿಂಗಮಿಹಾಯಾತಂ ತೀರ್ಥಾತ್ಕೋಟೇಶ್ವರಾದಪಿ ॥ ೧೬೩ ॥

---

೧೫೮. ಭಾರಭೂತೇಶ್ವರನಿಗೆ ಸಮೀಪದಲ್ಲಿರುವ ಆ ಕಿರಾತೇಶ್ವರಲಿಂಗವನ್ನು ನಮಸ್ಕರಿಸಿದ ಮಾನವನು ಎಂದಿಗೂ ತಾಯಿಯ ಗರ್ಭದಲ್ಲಿ ಪುನಃ ವಾಸಮಾಡುವುದಿಲ್ಲ.

೧೫೯. ಲಂಕಾಪುರಿಯಿಂದ ಇಲ್ಲಿಗೆ ಮರುಕೇಶ್ವರನಾಮಕವಾದ ಲಿಂಗವು ಆಗಮಿಸಿರುವುದು. ಅದನ್ನು ಅರ್ಚನೆ ಮಾಡುವುದರಿಂದ ಮನುಷ್ಯರಿಗೆಂದಿಗೂ ರಾಕ್ಷಸರ ಭಯವೆಂಬುದಿರುವುದಿಲ್ಲ.

೧೬೦. ಈ ಕ್ಷೇತ್ರದ ನೈಋರ್ತ್ಯದಿಕ್ಕಿನಲ್ಲಿ ನೈಋರ್ತೇಶ್ವರಲಿಂಗವು ಪ್ರತಿಷ್ಠಿತವಾಗಿರುವುದು. ವಿಭೀಷಣನು ಪ್ರತಿಷ್ಠಿಸಿರುವ ರಾಮಚಂದ್ರಸ್ವಾಮಿಗೆ ಪಶ್ಚಿಮದಲ್ಲಿರುವ ಆ ಲಿಂಗವನ್ನು ಪೂಜಿಸಲು ಸಮಸ್ತ ದೋಷಗಳೂ ದೂರವಾಗುವುದು.

೧೬೧. ಸ್ಥಳಲಿಂಗವೆಂಬ ಕ್ಷೇತ್ರದಿಂದ ಪವಿತ್ರವೂ ಜಲಪ್ರಿಯವೂ ಆದ ಜಲಲಿಂಗವೆಂಬುದು ಇಲ್ಲಿಗೆ ಬಂದಿರುವುದು. ಅದು ಗಂಗಾನದಿಯ ಪ್ರವಾಹದ ಮಧ್ಯದಲ್ಲಿಯೇ ಸ್ಥಾಪಿತವಾಗಿರುವುದು.

೧೬೨. ಅದರ ದೇವಾಲಯವಾದರೊ, ಸಕಲ ಧಾತುಗಳಿಂದಲೂ, ಸಮಸ್ತ ರತ್ನಗಳಿಂದಲೂ ನಿರ್ಮಿತವಾಗಿ ಶ್ರೇಷ್ಠವೂ ಮಂಗಳಕರವೂ ಆಗಿ ನೋಡುವವರಿಗೆ ಅದ್ಭುತವಾಗಿ ಕಾಣುತ್ತ ಗಂಗಾನದಿಯ ಮಧ್ಯದಲ್ಲಿ ಕಾಣುತ್ತಿರುವುದು.

೧೬೩. ಇಂದಿಗೂ ಕೆಲವರಿಗೆ ಮಾತ್ರ ಅವರವರ ಪುಣ್ಯಕರ್ಮಗಳ ಪರಿಪಾಕದ ಬಲದಿಂದ ಅದು ದೃಷ್ಟಿಗೆ ಬೀಳುತ್ತಿರುವುದು. ಕೋಟೇಶ್ವರಸ್ಥಾನದಿಂದಲೂ ಇಲ್ಲಿಗೆ ಶ್ರೇಷ್ಠವಾದ ಲಿಂಗವು ಬಂದಿರುವುದು.

ಕೋಟಿಲಿಂಗೇಕ್ಷಣೇ ಪುಣ್ಯಂ ತಲ್ಲಿಂಗಸ್ಯ ನಿರೀಕ್ಷಣಾತ್ ।
ಶ್ರೇಷ್ಠಂ ಜ್ಯೇಷ್ಠೇಶ್ವರಾತ್ಪಶ್ಚಾಚ್ಛ್ರೇಷ್ಠಸಿದ್ಧಿಪ್ರದಾಯಕಂ ॥ ೧೬೪ ॥
ವಡವಾಸ್ಯಾತ್ಸಮುದ್ಭೂತಂ ಲಿಂಗಮತ್ರಾನಲೇಶ್ವರಂ ।
ನಲೇಶ್ವರಾತ್ಪುರೋಭಾಗೇ ಪೂಜಿತಂ ಸರ್ವಸಿದ್ಧಿದಂ ॥ ೧೬೫ ॥
ಆಗತ್ಯ ವಿರಜಸ್ತೀರ್ಥಾದ್ದೇವದೇವಸ್ತ್ರಿಲೋಚನಃ ।
ಲಿಂಗೇ ತ್ವನಾದಿಸಂಸಿದ್ಧೇ ಹ್ಯವತಸ್ಥೇ ತ್ರಿವಿಷ್ಟಪೇ ॥ ೧೬೬ ॥
ಪುಣ್ಯೇ ಪಿಲಿಪಿಲಾತೀರ್ಥೇ ಸರ್ವೇಷಾಂ ತಾರಕಪ್ರದೇ ।
ಆವಿಶ್ಚಕ್ರೇ ಸ್ವಯಂ ದೇವ ಓಂಕಾರೋಽಮರಕಂಟಕಾತ್ ॥ ೧೬೭ ॥
ತದಾದ್ಯಂ ತಾರಕಕ್ಷೇತ್ರಂ ಯದಾ ಗಂಗಾ ನ ಚಾಗತಾ ।
ಯದೈವಾವಿರಭೂತ್ಕಾಶೀ ತ್ರೈಲೋಕ್ಯೋದ್ಧರಣಾಯ ವೈ ॥ ೧೬೮ ॥
ತದಾಪ್ರಭೃತಿ ತಲ್ಲಿಂಗಂ ಸ್ವಯಮಾವಿರಭೂತ್ತತಃ ।
ಮಹಿಮಾನಂ ಸ ತಸ್ಯಾನ್ಯಃ ಪರಿವೇತ್ತಿ ವಿಭೋಽಚ್ಯುತೇ ॥ ೧೬೯ ॥

---

೧೬೪—೧೬೫. ಆ ಲಿಂಗವನ್ನು ದರ್ಶನಮಾಡುವುದರಿಂದ ಕೋಟಿಲಿಂಗಗಳನ್ನು ದರ್ಶನಮಾಡಿದ ಪುಣ್ಯವು ಲಭಿಸುವುದು. ಶ್ರೇಷ್ಠವಾದ ಆ ಲಿಂಗವು ಜ್ಯೇಷ್ಠೇಶ್ವರನಿಗೆ ಪಶ್ಚಿಮದಲ್ಲಿ ನೆಲಸಿ ಸೇವಿಸುವವರಿಗೆ ಉತ್ತಮಸಿದ್ಧಿಗಳನ್ನು ಕೈಗೂಡಿಸುವುದು. ವಡವಾಸ್ಯತೀರ್ಥದಿಂದ ಇಲ್ಲಿಗೆ ಅನಲೇಶ್ವರಲಿಂಗವು ಬಂದು ಆವಿರ್ಭವಿಸಿರುವುದು. ನಲೇಶ್ವರನಿಗೆ ಮುಂಭಾಗದಲ್ಲಿರುವ ಈ ಲಿಂಗವನ್ನು ಪೂಜಿಸಿದವರಿಗೆ ಸಕಲ ಸಿದ್ಧಿಗಳನ್ನೂ ಕೊಡುತ್ತಿರುವುದು.

೧೬೬. ವಿರಜಸ್ತೀರ್ಥದಿಂದ (ನಾಭಿಗಯಾಕ್ಷೇತ್ರದಿಂದ) ದೇವೋತ್ತಮನಾದ ತ್ರಿಲೋಚನೇಶ್ವರನು ಇಲ್ಲಿಗೆ ಬಂದು ಅನಾದಿಕಾಲದಿಂದಲೂ ನೆಲಸಿರುವ ತ್ರಿವಿಷ್ಟಪಲಿಂಗದಲ್ಲಿ ಸನ್ನಿಹಿತನಾಗಿರುವನು.

೧೬೭. ಅಮರಕಂಟಕಕ್ಷೇತ್ರದಿಂದ ಓಂಕಾರೇಶ್ವರನೆಂಬ ಮಹಾದೇವನು ತಾನಾಗಿಯೇ ಇಲ್ಲಿಗೈತಂದು ಸಮಸ್ತರಿಗೂ ಸಂಸಾರತಾರಕವೂ, ಪುಣ್ಯಪ್ರದವೂ ಆದ ಪಿಲಿಪಿಲಾತೀರ್ಥದಲ್ಲಿ ಆವಿರ್ಭೂತನಾಗಿರುವನು.

೧೬೮. ಈ ಲಿಂಗವು ಅನಾದಿಯಾದುದು. ಪ್ರಣವವೇ ಇದಕ್ಕೆ ಉಪಲಬ್ಧಿಸ್ಥಾನವಾಗಿರುವುದು. ಮೂರುಲೋಕಗಳನ್ನುದ್ಧರಿಸುವುದಕ್ಕಾಗಿ ಗಂಗೆಯು ಇಲ್ಲಿಗೆ ಬರುವುದಕ್ಕೂ ಕಾಶೀಕ್ಷೇತ್ರವು ನಿರ್ಮಾಣವಾಗುವುದಕ್ಕೂ ಮೊದಲೇ ಈ ಲಿಂಗವು ಇಲ್ಲಿ ಪ್ರತಿಷ್ಠಿತವಾಯಿತು.

೧೬೯. ಈ ಮಹಾಲಿಂಗವು ತಾನೇ ಪ್ರಣವಾಕಾರವನ್ನು ತಾಳಿ ಇಲ್ಲಿ ಆವಿರ್ಭವಿಸಿತು. ಮಹೇಶ್ವರನೊಬ್ಬನನ್ನುಳಿದು ಮತ್ತೆ ಯಾವನೂ ಆ ಓಂಕಾರೇಶ್ವರಲಿಂಗದ ಮಹಿಮೆಯನ್ನು ಸಮಗ್ರವಾಗಿ ತಿಳಿಯಲಾರನು.

ಏತಾನ್ಯಾಯತನಾನೀಶ ಆನಿನಾಯ ಮಹಾಂತಿ ಚ ।
ಶೇಷಯಿತ್ವಾಂಶಮಾತ್ರಂ ಚ ತಸ್ಮಿನ್ಕ್ಷೇತ್ರೇ ನಿಜೇ ನಿಜೇ ॥ ೧೭೦ ॥
ಇಹಾಯಾತಾನಿ ಪುಣ್ಯಾನಿ ಸರ್ವಭಾವೇನ ನಾನ್ಯಥಾ ।
ಪ್ರಾಸಾದಾಃ ಸರ್ವತಶ್ಚೈಷಾಂ ರಮ್ಯಾ ಅಭ್ರಂಲಿಹಾ ವಿಭೋ ॥ ೧೭೧ ॥
ಬಹುಧಾತುಮಯಾಶ್ಚಿತ್ರಾಃ ಸರ್ವರತ್ನಸಮುಜ್ಜ್ವಲಾಃ ।
ಯೇಷಾಂ ಕಲಶಮಾತ್ರಸ್ಯ ದರ್ಶನಾನ್ಮುಕ್ತಿರಾಪ್ಯತೇ ॥ ೧೭೨ ॥
ಶ್ರುತ್ವಾಪಿ ನಾಮ ಚೈತೇಷಾಂ ಲಿಂಗಾನಾಂ ಸುರಸತ್ತಮ ।
ಅಪಿ ಜನ್ಮಸಹಸ್ರೋತ್ಥಾಃ ಕ್ಷೀಯಂತೇ ಪಾಪರಾಶಯಃ ॥ ೧೭೩ ॥
ಇದಾನೀಂ ಕೋ ನಿದೇಶೋಽತ್ರ ಮಯಾನುಷ್ಠೇಯ ಈಶಿತಃ ।
ಪ್ರಸಾದೀಕ್ರಿಯತಾಂ ಸೋಽಪಿ ಸಿದ್ಧೋ ಮಂತವ್ಯ ಏವ ಹಿ ॥ ೧೭೪ ॥

ಸ್ಕಂದ ಉವಾಚ:—

ಶ್ರುತ್ವೇತಿ ನಂದಿನೋ ವಾಕ್ಯಂ ದೇವದೇವೇಶ್ವರೋ ಹರಃ ।
ಶ್ರದ್ಧಾಪ್ರಸಾದ್ಯ ಶೈಲಾದಿಮಿದಂ ಪ್ರೋವಾಚ ಕುಂಭಜ ॥ ೧೭೫ ॥

---

೧೭೦. ಮಹೇಶ್ವರನೇ! ಈ ಸಕಲ ಕ್ಷೇತ್ರಗಳಿಂದಲೂ ಮಾಹೇಶ್ವರಲಿಂಗಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಅಂಶಗಳನ್ನು ಮಾತ್ರ ಉಳಿಸಿ ಎಲ್ಲವೂ ಇಲ್ಲಿಗೆ ಬಂದು ಮಹಾಫಲದಾಯಕಗಳಾಗಿ ನೆಲಸಿರುವುವು.

೧೭೧. ಈ ಪುಣ್ಯಲಿಂಗಗಳೆಲ್ಲವೂ ತಮ್ಮ ಸರ್ವಾಂಶದಿಂದ ಇಲ್ಲಿಗೆ ಬಂದಿರುವವಲ್ಲದೆ ಅನ್ಯಥಾ ಅಲ್ಲ. ಎಲೈ ಸ್ವಾಮಿಯೆ! ಇವುಗಳಿಗಾಗಿ ನಿರ್ಮಿತಗಳಾಗಿರುವ ಪ್ರಾಸಾದಗಳೂ ಸಹ ಸರ್ವಪ್ರಕಾರದಿಂದಲೂ ಮನೋಹರಗಳೂ ಆಕಾಶವನ್ನು ಚುಂಬಿಸುವುವುಗಳೂ ಆಗಿ ಮೆರೆಯುತ್ತಿರುವುವು.

೧೭೨. ಅನೇಕ ಧಾತುಗಳಿಂದ ಕೂಡಿ ವಿಚಿತ್ರಗಳೂ ಸಕಲರತ್ನಗಳಿಂದ ಅಲಂಕೃತಗಳೂ ಆಗಿರುವುವು. ಅವುಗಳಲ್ಲಿ ಒಂದೊಂದರ ಕಳಶವನ್ನು ನೋಡುವುದರಿಂದಲೇ ಮೋಕ್ಷವು ಕರಗತವಾಗುವುದು.

೧೭೩–೧೭೪. ದೇವದೇವೋತ್ತಮನೆ! ಈ ಮಹಾಲಿಂಗಗಳ ಹೆಸರುಗಳನ್ನು ಕೇಳಿದರೂ ಸಹ ಸಾವಿರಾರು ಜನ್ಮಗಳಲ್ಲಿ ಸಂಚಿತಗಳಾದ ಪಾತಕಗಳು ಕ್ಷಯವನ್ನು ಹೊಂದುವುವು. ಈಗ ನನಗೆ ಅಪ್ಪಣೆಯೇನು ? ನಾನು ಮಾಡಬೇಕಾದ ಕರ್ತವ್ಯದಲ್ಲಿ ನೀನೇ ಆಜ್ಞಾಪಿಸಬೇಕು. ನಿನ್ನ ಇಚ್ಛೆಯನ್ನು ಸಂತೋಷದಿಂದ ನನಗೆ ತಿಳಿಸಿದರೆ ಅದು ಸಿದ್ಧವೆಂದೇ ತಿಳಿಯುವುದಾಗಲಿ.

೧೭೫. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ಇಂತೆಂದ ನಂದೀಶ್ವರನ ಮಾತುಗಳನ್ನು ಕೇಳಿ ದೇವದೇವನೂ ಲೋಕನಾಯಕನೂ ಆದ ಹರನು ಶ್ರದ್ಧೆಯಿಂದ ನಂದಿಯನ್ನು ಆದರಿಸಿ ಇಂತೆಂದು ಹೇಳತೊಡಗಿದನು.

ಶ್ರೀ ದೇವದೇವ ಉವಾಚ:—

ಸಾಧೂಕ್ಕೃತಂ ತ್ವಯಾ ನಂದಿನ್ಸದಾನಂದವಿಧಾಯಕ ।
ವಿಧೇಹಿ ಮೇ ನಿದೇಶಂ ಚ ಚಂಡೀರ್ವ್ಯಾಪಾರಯಾಧುನಾ ॥ ೧೭೬ ॥
ನವಕೋಟ್ಯಸ್ತು ಚಾಮುಂಡಾ ಯಾ ಯತ್ರ ನಿವಸಂತಿ ಹಿ ।
ಸ್ವದೇವತಾಭಿಃ ಸಹಿತಾ ಭೂತವೇತಾಲಭೈರವೈಃ ॥ ೧೭೭ ॥
ತಾಃ ಪುರೀರಕ್ಷಣಾರ್ಥಾಯ ಸವಾಹನಬಲಾಯುಧಾಃ ।
ಪ್ರತಿದುರ್ಗಂ ದುರ್ಗರೂಪಾಃ ಪರಿತಃ ಪರಿವಾಸಯ ॥ ೧೭೮ ॥

ಸ್ಕಂದ ಉವಾಚ:—

ನಂದಿನಂ ಸಂನಿವೇಶ್ಯೇತಿ ಮೃಡಾನ್ಯಾ ಸಹಿತೋ ಮೃಡಃ ।
ಯಯೌ ತ್ರೈವಿಷ್ಟಪಂ ಕ್ಷೇತ್ರಂ ಮುಕ್ತಿಬೀಜಪ್ರರೋಹಣಂ ॥ ೧೭೯ ॥
ಶಿಲಾದತನಯೋಽಪ್ಯೈಶೀಂ ಮೂರ್ಧ್ನಾಜ್ಞಾಂ ವಿಧಾಯ ಚ ।
ಆಹೂಯ ಸರ್ವತೋ ದುರ್ಗಾಃ ಪ್ರತಿದುರ್ಗಂ ನ್ಯವೇಶಯತ್ ॥ ೧೮೦ ॥
ನಿಶಮ್ಯಾಧ್ಯಾಯಮೇತಂ ಚ ಪುಣ್ಯಾಯತನಗರ್ಭಿಣಂ ।
ನರಃ ಸ್ವರ್ಗಾಪವರ್ಗೈಶ್ಚ ಪ್ರಾಪ್ನುಯಾಚ್ಛ್ರದ್ಧಯಾ ಕ್ರಮಾತ್ ॥ ೧೮೧ ॥

---

೧೭೬. ಮಹಾದೇವನು ಹೇಳುತ್ತಾನೆ:—ನಿತ್ಯವೂ ನಮಗೆ ಅನಂದವನ್ನುಂಟುಮಾಡುತ್ತಿರುವ ಎಲೈ ನಂದಿಯೆ! ನೀನು ಮಾಡಿದುದು ಯುಕ್ತವಾಗಿಯೇ ಇರುವುದು. ಈಗ ನಾನು ಹೇಳುವಂತೆ ಮಾಡು. ಚಂಡಿಕೆಯರನ್ನು ಅವರವರ ಕಾರ್ಯದಲ್ಲಿ ನಿಯೋಗಿಸು.

೧೭೭. ಒಂಬತ್ತು ಕೋಟಿ ಸಂಖ್ಯೆಯ ಚಾಮುಂಡೆಯರು ತಮ್ಮ ಅನುಯಾಯಿಗಳಾದ ಭೂತ, ಭೇತಾಳ, ಭೈರವಾದಿ ಗಣಗಳೊಡಗೂಡಿ ಎಲ್ಲೆಲ್ಲಿಯೂ ವಾಸಮಾಡುತ್ತಿರುವರಲ್ಲವೆ.

೧೭೮. ಈ ಕ್ಷೇತ್ರವನ್ನು ರಕ್ಷಿಸುವುದಕ್ಕಾಗಿ ವಾಹನ, ಸೈನ್ಯ, ಆಯುಧಗಳಿಂದ ಸಹಿತರೂ ದುರ್ಗಾರೂಪಿಣಿಯರೂ ಆದ ಅವರನ್ನೆಲ್ಲ ಸುತ್ತಲೂ ಇರುವ ಪ್ರತಿಯೊಂದು ದುರ್ಗದಲ್ಲಿಯೂ ವಾಸಿಸುತ್ತಿರುವಂತೆ ಆಜ್ಞೆಯನ್ನು ಮಾಡು.

೧೭೯. ಸ್ಕಂದನು ಹೇಳುತ್ತಾನೆ:—ಇಂತೆಂದು ನಂದೀಶ್ವರನಿಗೆ ಅಪ್ಪಣೆಯನ್ನು ಮಾಡಿ ಮಹಾದೇವನು ಪಾರ್ವತೀಸಮೇತನಾಗಿ ಮೋಕ್ಷಬೀಜಕ್ಕೆ ಅಂಕುರಪ್ರಾಯವೆನಿಸಿದ ಸ್ವರ್ಗಲೋಕವನ್ನು ಕುರಿತು ಪ್ರಯಾಣಮಾಡಿದನು.

೧೮೦. ಶಿಲಾದ ಪುತ್ರನಾದ ನಂದಿಯೂ ಕೂಡ ಮಹೇಶ್ವರನ ಆಜ್ಞೆಯನ್ನು ತಲೆಯಲ್ಲಿ ಧರಿಸಿ ಎಲ್ಲೆಡೆಗಳಿಂದಲೂ ದುರ್ಗೆಯರನ್ನು ಬರಮಾಡಿಕೊಂಡು ಒಂದೊಂದು ದುರ್ಗದಲ್ಲಿಯೂ ಅವರನ್ನು ನೆಲೆಗೊಳಿಸಿದನು.

೧೮೧. ಕ್ರಮವಾಗಿ ಪುಣ್ಯಕ್ಷೇತ್ರಗಳ ನಾಮಗಳನ್ನೊಳಕೊಂಡಿರುವ

ಶ್ರುತ್ವಾಷ್ಟಷಷ್ಟಿನಾಮೇತಾಂ ವೈ ಮಹಾಯತನಸಂಶ್ರಯಾಂ ।
ನ ಜಾತುಪ್ರವಿಶೇನ್ಮರ್ತ್ಯೋ ಜನನ್ಯಾ ಜಾಠರೀಂ ದರೀಂ ॥ ೧೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಅಷ್ಟಷಷ್ಟ್ಯಾಯತನಸಮಾಗಮ
ವರ್ಣನಂ" ನಾಮ್ಯೈಕೋನಸಪ್ತತಿತಮೋಽಧ್ಯಾಯಃ

---

ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಲು ಮನುಷ್ಯನು ಸ್ವರ್ಗಮೋಕ್ಷಗಳೆರಡನ್ನೂ ಸುಲಭವಾಗಿ ಸಾಧಿಸುವನು.

೧೮೨. ಅರುವತ್ತೆಂಟು ಮಹಾಸ್ಥಾನಗಳ ಹೆಸರುಗಳಿರುವ ಈ ಅಧ್ಯಾಯವನ್ನು ಕೇಳಿದ ಮಾನವನು ಪುನಃ ತಾಯಿಯ ಗರ್ಭವೆಂಬ ಮಹಾಗುಹೆಯನ್ನು ಎಂದಿಗೂ ಪ್ರವೇಶಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಅಷ್ಟಷಷ್ಟ್ಯಾಯತನ ಸಮಾಗಮವರ್ಣನ"ವೆಂಬ
ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತಿತಮೋಽಧ್ಯಾಯಃ

### ದೇವತಾಧಿಷ್ಠಾನವರ್ಣನಂ

ಅಗಸ್ತ್ಯ ಉವಾಚ :—

ಕಾತ್ಯಾಯನೇಯ ಕಥಯ ನಂದಿನಾ ವಿಶ್ವನಂದಿನಾ ।
ಯಥಾ ವ್ಯಾಪಾರಿತಾ ದೇವ್ಯೋ ದೇವದೇವನಿದೇಶತಃ ॥ ೧ ॥
ಅವಿಮುಕ್ತಸ್ಯ ರಕ್ಷಾರ್ಥಂ ಯತ್ರ ಯಾ ದೇವತಾಃ ಸ್ಥಿತಾಃ ।
ಪ್ರಸಾದಂ ಕುರು ಮೇ ದೇವ ತಾಃ ಸಮಾಚಕ್ಷ್ವ ತತ್ತ್ವತಃ ॥ ೨ ॥
ಇತ್ಯಗಸ್ತ್ಯುದಿತಂ ಶ್ರುತ್ವಾ ಮಹಾದೇವತನೂದ್ಭವಃ ।
ಕಥಯಾಮಾಸ ಯಾ ಯತ್ರ ಸ್ಥಿತಾಽಽನಂದವನೇ ಮುದಾ ॥ ೩ ॥

ಸ್ಕಂದ ಉವಾಚ :—

ವಾರಾಣಸ್ಯಾಂ ವಿಶಾಲಾಕ್ಷೀ ಕ್ಷೇತ್ರಸ್ಯ ಪರಮೇಷ್ಟದಾ ।
ವಿಶಾಲತೀರ್ಥಂ ಗಂಗಾಯಾಂ ಕೃತ್ವಾ ಪೃಷ್ಠೇ ವ್ಯವಸ್ಥಿತಾ ॥ ೪ ॥
ಸ್ನಾತ್ವಾ ವಿಶಾಲತೀರ್ಥೇ ವೈ ವಿಶಾಲಾಕ್ಷೀಂ ಪ್ರಣಮ್ಯ ಚ ।
ವಿಶಾಲಾಂ ಲಭತೇ ಲಕ್ಷ್ಮೀಂ ಪರತ್ರೇಹ ಚ ಶರ್ಮದಾಂ ॥ ೫ ॥

---

## ಕನ್ನಡದ ಅನುವಾದ

### ದೇವತಾಧಿಷ್ಠಾನವರ್ಣನ

೧. ಅಗಸ್ತ್ಯನು ಕೇಳುತ್ತಾನೆ :—ಪಾರ್ವತೀನಂದನನೆ! ಲೋಕಾನಂದಕರನಾದ ನಂದಿಯು ಮಹಾದೇವನ ಅಪ್ಪಣೆಯನ್ನನುಸರಿಸಿ ದುರ್ಗಾದೇವಿಯರನ್ನು ತಮ್ಮ ತಮ್ಮ ಕೆಲಸಗಳಲ್ಲಿ ಹೇಗೆ ನಿಯೋಜಿಸಿದನೆಂಬುದನ್ನು ವಿವರಿಸು.

೨. ಅವಿಮುಕ್ತಕ್ಷೇತ್ರವನ್ನು ರಕ್ಷಿಸುವುದಕ್ಕಾಗಿ ಯಾವ ದೇವಿಯರು ಎಲ್ಲಿ ಸ್ಥಾಪಿಸಲ್ಪಟ್ಟರು? ಷಣ್ಮುಖಸ್ವಾಮಿಯೆ! ನನ್ನಲ್ಲಿ ಅನುಗ್ರಹಮಾಡಿ ಅವರ ಹೆಸರುಗಳನ್ನೂ ಯಥಾರ್ಥವಾಗಿ ತಿಳಿಸುವವನಾಗು.

೩. ಇಂತೆಂದು ಅಗಸ್ತ್ಯನು ಹೇಳಿದುದನ್ನು ಕೇಳಿ ಮಹೇಶ್ವರನ ಪುತ್ರನಾದ ಸ್ಕಂದನು ಆನಂದವನದಲ್ಲಿ ಯಾವ ದೇವಿಯರು ಎಲ್ಲಿ ಸ್ಥಾಪಿತವಾಗಿರುವರೆಂಬುದನ್ನು ಸಂತೋಷದಿಂದ ವಿವರಿಸಿದನು.

೪. ಸ್ಕಂದನು ಹೇಳುತ್ತಾನೆ :—ವಾರಾಣಸೀಕ್ಷೇತ್ರಕ್ಕೆ ಪರಮಪ್ರಿಯವನ್ನುಂಟುಮಾಡುವ ವಿಶಾಲಾಕ್ಷಿಯು ಗಂಗಾನದಿಯಲ್ಲಿರುವ ವಿಶಾಲತೀರ್ಥವನ್ನು ಹಿಂಭಾಗದಲ್ಲಿ ತಾಳಿರುವಂತೆ ಪ್ರತಿಷ್ಠಿತಳಾಗಿರುವಳು.

೫. ಈ ವಿಶಾಲತೀರ್ಥದಲ್ಲಿ ಸ್ನಾನವನ್ನು ಮಾಡಿ ವಿಶಾಲಾಕ್ಷಿಗೆ ನಮಸ್ಕಾರ

ಭಾದ್ರಕೃಷ್ಣತೃತೀಯಾಯಾಮುಪೋಷಣಪರೈರ್ನೃಭಿಃ ।
ಕೃತ್ವಾ ಜಾಗರಣಂ ರಾತ್ರೌ ವಿಶಾಲಾಕ್ಷೀಸಮೀಪತಃ ॥ ೬ ॥
ಪ್ರಾತರ್ಭೋಜ್ಯಾಃ ಪ್ರಯತ್ನೇನ ಚತುರ್ದಶಕುಮಾರಿಕಾಃ ।
ಅಲಂಕೃತಾ ಯಥಾಶಕ್ತ್ಯಾ ಸ್ರಗಂಬರವಿಭೂಷಣೈಃ ॥ ೭ ॥
ವಿಧಾಯ ಪಾರಣಂ ಪಶ್ಚಾತ್ಪುತ್ರಭೃತ್ಯಸಮನ್ವಿತೈಃ ।
ಸಂಯಗ್ವಾರಾಣಸೀವಾಸಫಲಂ ಲಭ್ಯೇತ ಕುಂಭಜ ॥ ೮ ॥
ತಸ್ಯಾಂ ತಿಥೌ ಮಹಾಯಾತ್ರಾ ಕಾರ್ಯಾ ಕ್ಷೇತ್ರನಿವಾಸಿಭಿಃ ।
ಉಪಸರ್ಗಪ್ರಶಾಂತ್ಯರ್ಥಂ ನಿರ್ವಾಣಕಮಲಾಪ್ತಯೇ ॥ ೯ ॥
ವಾರಾಣಸ್ಯಾಂ ವಿಶಾಲಾಕ್ಷೀ ಪೂಜನೀಯಾ ಪ್ರಯತ್ನತಃ ।
ಧೂಪೈರ್ದೀಪೈಃ ಶುಭೈರ್ಮಾಲ್ಯೈರುಪಹಾರೈರ್ಮನೋಹರೈಃ ॥ ೧೦ ॥
ಮಣಿಮುಕ್ತಾದ್ಯಲಂಕಾರೈರ್ವಿಚಿತ್ರೋಲ್ಲೋಚಚಾಮರೈಃ ।
ಶುಭೈರನುಪಭುಕ್ತೈಶ್ಚ ದುಕೂಲೈರ್ಗಂಧವಾಸಿತೈಃ ॥ ೧೧ ॥

---

ವನ್ನು ಮಾಡಲು ಪರಲೋಕದಲ್ಲಿಯೂ, ಇಹಲೋಕದಲ್ಲಿಯೂ ಸೌಖ್ಯವನ್ನುಂಟು ಮಾಡುವ ಅಪಾರವಾದ ಐಶ್ವರ್ಯವು ಮಾನವನಿಗೆ ಲಭಿಸುವುದು.

೬. ಭಾದ್ರಪದಮಾಸದ ಕೃಷ್ಣತೃತೀಯೆಯದಿನ ಮನುಷ್ಯರು ಉಪವಾಸವನ್ನು ಮಾಡಿ ರಾತ್ರಿಯಲ್ಲಿ ವಿಶಾಲಾಕ್ಷಿಯ ಸಮ್ಮುಖದಲ್ಲಿಯೇ ಜಾಗರಣೆಯನ್ನು ಮಾಡಿ ಕಳೆಯಬೇಕು.

೭. ಮಾರನೆಯ ದಿನ ಪ್ರಾತಃಕಾಲದಲ್ಲಿ ಪ್ರಯತ್ನಪೂರ್ವಕವಾಗಿ ಹದಿನಾಲ್ಕುಜನ ಕನ್ಯೆಯರನ್ನು ಕರೆದು ಶಕ್ತ್ಯನುಸಾರವಾಗಿ ಹೂವುಗಳು, ವಸ್ತ್ರಗಳು, ಆಭರಣಗಳಿಂದ ಅವರನ್ನು ಅಲಂಕರಿಸಿ ಮೃಷ್ಟಾನ್ನಭೋಜನದಿಂದ ತೃಪ್ತಿಗೊಳಿಸಬೇಕು.

೮. ಎಲೈ ಕುಂಭಸಂಭವನೆ! ಬಳಿಕ ಭಕ್ತನಾದವನು ಮಕ್ಕಳು, ಸೇವಕರೇ ಮೊದಲಾದವರೊಡಗೂಡಿ ಪಾರಣೆಯನ್ನು ಮಾಡಲು ಅವನಿಗೆ ವಾರಾಣಸೀ ಕ್ಷೇತ್ರದ ವಾಸವನ್ನು ಸಾಂಗವಾಗಿ ಮಾಡಿದ ಫಲವು ಲಭಿಸುವುದು.

೯. ಆ ತಿಥಿಯ ದಿನದಲ್ಲಿಯೇ ಕ್ಷೇತ್ರವಾಸಿಗಳಾದವರು ಸಕಲಾರಿಷ್ಟಗಳ ನಿವಾರಣೆಗಾಗಿಯೂ, ಮೋಕ್ಷಲಕ್ಷ್ಮಿಯ ಪ್ರಾಪ್ತಿಗಾಗಿಯೂ ವಿಶಾಲಾಕ್ಷಿಗೆ ಮಹೋತ್ಸವವನ್ನು ನೆರವೇರಿಸಬೇಕು.

೧೦. ವಾರಾಣಸಿಯಲ್ಲಿರುವ ವಿಶಾಲಾಕ್ಷಿಯು ಪ್ರಯತ್ನದಿಂದಲಾದರೂ ಧೂಪ, ದೀಪ, ಪವಿತ್ರಪುಷ್ಪಮಾಲೆಗಳು, ಮನೋಹರಗಳಾದ ನೈವೇದ್ಯಗಳು ಮುಂತಾದುವುಗಳಿಂದ ಪೂಜಿಸಲ್ಪಡಬೇಕು.

೧೧. ಮುತ್ತುರತ್ನಗಳ ಆಭರಣಗಳಿಂದಲೂ, ವಿಚಿತ್ರವಾದ ಶ್ವೇತಛತ್ರ

ಮೋಕ್ಷಲಕ್ಷ್ಮೀಸಮೃದ್ಧ್ಯರ್ಥಂ ಯತ್ರ ಕುತ್ರ ನಿವಾಸಿಭಿಃ ।
ಅಪ್ಯಲ್ಪಮಪಿ ಯದ್ದತ್ತಂ ವಿಶಾಲಾಕ್ಷ್ಯೈ ನರೋತ್ತಮೈಃ ॥ ೧೨ ॥
ತದಾನಂತ್ಯಾಯ ಜಾಯೇತ ಮುನೇ ಲೋಕದ್ವಯೇಽಪಿ ಹಿ ।
ವಿಶಾಲಾಕ್ಷೀ ಮಹಾಪೀಠೇ ದತ್ತಂ ಜಪ್ತಂ ಹುತಂ ಸ್ತುತಂ ॥ ೧೩ ॥
ಮೋಕ್ಷಸ್ತಸ್ಯ ಪರೀಪಾಕೋ ನಾತ್ರ ಕಾರ್ಯಾ ವಿಚಾರಣಾ ।
ವಿಶಾಲಾಕ್ಷೀಸಮರ್ಚಾತೋ ರೂಪಸಂಪತ್ತಿಯುಕ್ಪತಿಃ ॥ ೧೪ ॥
ಪ್ರಾಪ್ಯತೇಽತ್ರ ಕುಮಾರೀಭಿರ್ಗುಣಶೀಲಾದ್ಯಲಂಕೃತಃ ।
ಗುರ್ವಿಣೀಭಿಃ ಸುತನಯೋ ವಂಧ್ಯಾಭಿರ್ಗರ್ಭಸಂಭವಃ ॥ ೧೫ ॥
ಅಸೌಭಾಗ್ಯವತೀಭಿಶ್ಚ ಸೌಭಾಗ್ಯಂ ಮಹದಾಪ್ಯತೇ ।
ವಿಧವಾಭಿರ್ನ ವೈಧವ್ಯಂ ಪುನರ್ಜನ್ಮಾಂತರೇ ಕ್ವಚಿತ್ ॥ ೧೬ ॥
ಸೀಮಂತಿನೀಭಿಃ ಪುಂಭಿರ್ವಾ ಪರಂ ನಿರ್ವಾಣಮಿಚ್ಛುಭಿಃ ।
ಶ್ರುತ್ವಾ ದೃಷ್ಟ್ವಾರ್ಚಿತಾ ಕಾಶ್ಯಾಂ ವಿಶಾಲಾಕ್ಷ್ಯಭಿಲಾಷದಾ ॥ ೧೭ ॥

---

ಚಾಮರಗಳಿಂದಲೂ, ಪರಿಶುದ್ಧಗಳೂ, ಧರಿಸಲ್ಪಡದವುಗಳೂ, ಸುಗಂಧವಿಶಿಷ್ಟಗಳೂ ಆದ ರೇಷ್ಮೆಯ ವಸ್ತ್ರಗಳಿಂದಲೂ ಆಕೆಯನ್ನು ಪೂಜಿಸಬೇಕು.

೧೨. ಮೋಕ್ಷಲಕ್ಷ್ಮಿಯ ಅನುಗ್ರಹವನ್ನು ಬಯಸುವ ಮನುಷ್ಯೋತ್ತಮರು ಎಲ್ಲಿಯೆ ವಾಸಮಾಡುತ್ತಿದ್ದರೂ ವಿಶಾಲಾಕ್ಷಿಗಾಗಿ ಕೊಟ್ಟ ಅತ್ಯಲ್ಪವಾದ ಉಪಾಯನವೂ ಕೂಡ ಇಹಪರಲೋಕಗಳೆರಡರಲ್ಲಿಯೂ ಅನಂತ ಫಲದಾಯಕವಾಗುವುದರಲ್ಲಿ ಸಂದೇಹವಿಲ್ಲ.

೧೩. ವಿಶಾಲಾಕ್ಷಿಯ ಮಹಾಪೀಠದ ಸನ್ನಿಧಿಯಲ್ಲಿ ಮಾಡಿದ ದಾನವಾಗಲಿ, ಜಪವಾಗಲಿ, ಹೋಮವಾಗಲಿ, ಎಲ್ಲದಕ್ಕೂ ಮೋಕ್ಷವೊಂದೇ ಫಲವೆಂಬ ವಿಷಯದಲ್ಲಿ ವಿಚಾರಿಸಬೇಕಾದ ಕಾರ್ಯವಿಲ್ಲವು.

೧೪. ಈ ವಿಶಾಲಾಕ್ಷಿಯನ್ನು ಕುಮಾರಿಯರು ಪೂಜೆಮಾಡುವುದರಿಂದ ರೂಪ, ಐಶ್ವರ್ಯಗಳುಳ್ಳವನೂ, ಗುಣಸೌಶೀಲ್ಯಾದಿಗಳಿಂದಲಂಕೃತನೂ ಆದ ಉತ್ತಮಪತಿಯು ಲಭಿಸುವನು.

೧೫. ಈಕೆಯ ಸೇವೆಯಿಂದ ಗರ್ಭವತಿಯರು ಸತ್ಪುತ್ರರನ್ನು ಪಡೆಯುವರು. ಹುಟ್ಟುಬಂಜೆಯರಿಗೂ ಸಹ ಗರ್ಭವನ್ನು ಧರಿಸುವ ಸಂಭವವುಂಟಾಗುವುದು.

೧೬. ಸೌಭಾಗ್ಯರಹಿತರಾದ ಸ್ತ್ರೀಯರಿಗೂ ಮಹತ್ತರವಾದ ಧನಧಾನ್ಯಾದಿ ಸೌಭಾಗ್ಯಗಳ ಪ್ರಾಪ್ತಿಯಾಗುವುದು. ವಿಧವೆಯರಿಗೆ ಎಂದಿಗೂ ಜನ್ಮಾಂತರಗಳಲ್ಲಿ ವೈಧವ್ಯವು ಸಂಭವಿಸುವುದಿಲ್ಲ.

೧೭. ಸುಮಂಗಲಿಯರಾಗಲಿ, ಪುರುಷರಾಗಲಿ ಸರ್ವೋತ್ತಮವಾದ

ತತೋಽನ್ಯಲ್ಲಲಿತಾತೀರ್ಥಂ ಗಂಗಾಕೇಶವಸನ್ನಿಧೌ ।
ತತ್ರಾಸ್ತಿ ಲಲಿತಾ ದೇವೀ ಕ್ಷೇತ್ರರಕ್ಷಾಕರೀ ಪರಾ ॥ ೧೮ ॥
ಸಾ ಚ ಪೂಜ್ಯಾ ಪ್ರಯತ್ನೇನ ಸರ್ವಸಂಪತ್ಸಮೃದ್ಧಯೇ ।
ಲಲಿತಾಪೂಜಕಾನಾಂ ಚ ಜಾತು ವಿಘ್ನೋ ನ ಜಾಯತೇ ॥ ೧೯ ॥
ಇಷೇ ಕೃಷ್ಣದ್ವಿತೀಯಾಯಾಂ ಲಲಿತಾಂ ಪರಿಪೂಜ್ಯ ವೈ ।
ನಾರೀ ವಾ ಪುರುಷೋ ವಾಪಿ ಲಭತೇ ವಾಂಛಿತಂ ಪದಂ ॥ ೨೦ ॥
ಸ್ನಾತ್ವಾ ಚ ಲಲಿತಾತೀರ್ಥೇ ಲಲಿತಾಂ ಪ್ರಣಿಪತ್ಯ ವೈ ।
ಲಭೇತ್ಸರ್ವತ್ರ ಲಾಲಿತ್ಯಂ ಯದ್ವಾ ತದ್ವಾಽನುಲಪ್ಯ ಚ ॥ ೨೧ ॥
ಮುನೇ ವಿಶ್ವಭುಜಾ ಗೌರೀ ವಿಶಾಲಾಕ್ಷೀಪುರಃ ಸ್ಥಿತಾ ।
ಸಂಹರಂತೀ ಮಹಾವಿಘ್ನಂ ಕ್ಷೇತ್ರಭಕ್ತಿಜುಷಾಂ ಸದಾ ॥ ೨೨ ॥
ಶಾರದಂ ನವರಾತ್ರಂ ಚ ಕಾರ್ಯಾ ಯಾತ್ರಾ ಪ್ರಯತ್ನತಃ ।
ದೇವ್ಯಾ ವಿಶ್ವಭುಜಾ ಯಾ ವೈ ಸರ್ವಕಾಮಸಮೃದ್ಧಯೇ ॥ ೨೩ ॥

---

ಮೋಕ್ಷವನ್ನಪೇಕ್ಷಿಸಲು ಅವರಿಂದ ಕೇಳಲ್ಪಟ್ಟರೂ, ನೋಡಲ್ಪಟ್ಟರೂ, ಪೂಜಿಸಲ್ಪಟ್ಟರೂ ವಿಶಾಲಾಕ್ಷಿಯು ಅವರ ಸಕಲಾಭೀಷ್ಟಗಳನ್ನೂ ಸಲ್ಲಿಸುವಳು.

೧೮. ಬಳಿಕ ಗಂಗಾಕೇಶವಸ್ವಾಮಿಯ ಸನ್ನಿಧಿಯಲ್ಲಿ ಲಲಿತಾತೀರ್ಥವೆಂಬ ಮತ್ತೊಂದು ತೀರ್ಥವಿರುವುದು. ಅಲ್ಲಿ ಕ್ಷೇತ್ರಪಾಲಕಿಯೂ ಸರ್ವೋತ್ತಮೆಯೂ ಆದ ಲಲಿತಾದೇವಿಯು ನೆಲಸಿರುವಳು.

೧೯. ಸಕಲೈಶ್ವರ್ಯಸಮೃದ್ಧಿಯನ್ನಪೇಕ್ಷಿಸುವವರು ಆಕೆಯನ್ನು ಪ್ರಯತ್ನದಿಂದ ಪೂಜಿಸಬೇಕು. ಲಲಿತಾದೇವಿಯನ್ನರ್ಚಿಸಿದವರಿಗೆಂದಿಗೂ ಕಾರ್ಯಗಳಲ್ಲಿ ವಿಘ್ನಗಳುಂಟಾಗುವುದಿಲ್ಲ.

೨೦. ಆಶ್ವಯುಜಮಾಸದ ಕೃಷ್ಣಪಕ್ಷದ ದ್ವಿತೀಯೆಯ ದಿನದಲ್ಲಿ ಲಲಿತೆಯನ್ನು ಚೆನ್ನಾಗಿ ಪೂಜೆಮಾಡಿದ ಸ್ತ್ರೀಯರಾಗಲಿ, ಪುರುಷರಾಗಲಿ ತಮ್ಮ ಅಭೀಷ್ಟಗಳನ್ನು ಪಡೆಯುವರು.

೨೧. ಲಲಿತಾತೀರ್ಥದಲ್ಲಿ ಸ್ನಾನವನ್ನು ಮಾಡಿ ಲಲಿತಾದೇವಿಗೆ ನಮಸ್ಕರಿಸಿ ಎಷ್ಟು ಅಲ್ಪವಾಗಿ ಆಕೆಯನ್ನು ಸ್ತೋತ್ರಮಾಡಿದರೂ ಸರ್ವತ್ರದಲ್ಲಿಯೂ ಮನುಷ್ಯರಿಗೆ ಸೌಭಾಗ್ಯವೇ ಲಭಿಸುತ್ತಿರುವುದು.

೨೨. ಎಲೈ ಅಗಸ್ತ್ಯಮಹರ್ಷಿಯೆ! ವಿಶಾಲಾಕ್ಷಿಯ ಸಮ್ಮುಖದಲ್ಲಿಯೇ ವಿಶ್ವಭುಜಾಗೌರಿಯು ಸನ್ನಿಹಿತಳಾಗಿ ಕ್ಷೇತ್ರದಲ್ಲಿ ಭಕ್ತಿಭರಿತರಾಗಿರುವವರ ಮಹಾವಿಘ್ನಗಳನ್ನೆಲ್ಲ ನಾಶಗೊಳಿಸುತ್ತಿರುವಳು.

೨೩. ಸಮಸ್ತಕಾಮಗಳನ್ನೂ ಪಡೆಯುವುದಕ್ಕಾಗಿ ಆ ವಿಶ್ವಭುಜಾದೇವಿಗೆ ಪ್ರಯತ್ನದಿಂದ ಶರನ್ನವರಾತ್ರಿಯ ದಿವಸಗಳಲ್ಲಿ ಮಹಾಯಾತ್ರೆಯನ್ನೂ ಉತ್ಸವವನ್ನೂ ನಡೆಸಬೇಕು.

ಯೋ ನ ವಿಶ್ವಭುಜಾಂ ದೇವೀಂ ವಾರಾಣಸ್ಯಾಂ ನಮೇನ್ನರಃ ।
ಕುತೋ ಮಹೋಪಸರ್ಗೇಭ್ಯಸ್ತಸ್ಯ ಶಾಂತಿರ್ದುರಾತ್ಮನಾಂ ॥ ೨೪ ॥
ಯೈಸ್ತು ವಿಶ್ವಭುಜಾ ದೇವೀ ವಾರಾಣಸ್ಯಾಂ ಸ್ತುತಾರ್ಚಿತಾ ।
ನ ಹಿ ತಾನ್ವಿಘ್ನಸಂಘಾತೋ ಬಾಧತೇ ಸುಕೃತಾತ್ಮನಾಂ ॥ ೨೫ ॥
ಅನ್ಯಾಸ್ತಿ ಕಾಶ್ಯಾಂ ವಾರಾಹೀ ಕ್ರತುವಾರಾಹಸನ್ನಿಧೌ ।
ತಂ ಪ್ರಣಮ್ಯ ನರೋ ಭಕ್ತ್ಯಾ ವಿಪದಬ್ಧೌ ನ ಮಜ್ಜತಿ ॥ ೨೬ ॥
ಶಿವದೂತೀ ತು ತತ್ರೈವ ದ್ರಷ್ಟವ್ಯಾಽಽಪದ್ವಿನಾಶಿನೀ ।
ಆನಂದವನರಕ್ಷಾರ್ಥಮುದ್ಯಚ್ಛೂಲಾರಿತರ್ಜಿನೀ ॥ ೨೭ ॥
ವಜ್ರಹಸ್ತಾ ತಥಾ ಚೈಂದ್ರೀ ಗಜರಾಜರಥಾಸ್ಥಿತಾ ।
ಇಂದ್ರೇಶಾದ್ದಕ್ಷಿಣೇ ಭಾಗೇಽರ್ಚಿತಾ ಸಂಪತ್ಕರೀ ಸದಾ ॥ ೨೮ ॥
ಸ್ಕಂದೇಶ್ವರಸಮೀಪೇ ತು ಕೌಮಾರೀ ಬರ್ಹಿಯಾನಗಾ ।
ಪ್ರೇಕ್ಷಣೀಯಾ ಪ್ರಯತ್ನೇನ ಮಹಾಫಲಸಮೃದ್ಧಯೇ ॥ ೨೯ ॥

---

೨೪. ಯಾವ ಮಾನವನು ವಾರಾಣಸಿಯಲ್ಲಿರುವ ಆ ವಿಶ್ವಭುಜಾದೇವಿಗೆ ನಮಸ್ಕಾರವನ್ನು ಮಾಡುವುದಿಲ್ಲವೊ, ಆ ದುರಾತ್ಮನಿಗೆ ಮಹಾವಿಘ್ನಗಳಿಂದ ಬಿಡುಗಡೆಯೆಲ್ಲಿಯದು ?

೨೫. ಯಾರಿಂದ ಕಾಶೀಕ್ಷೇತ್ರದಲ್ಲಿರುವ ವಿಶ್ವಭುಜಾದೇವಿಯು ಸ್ತುತಿಸಲ್ಪಟ್ಟು ಪೂಜಿತಳಾಗುವಳೊ, ಆ ಪುಣ್ಯಾತ್ಮರನ್ನು ವಿಘ್ನಗಳ ಸಮೂಹಗಳೆಂದಿಗೂ ಬಾಧಿಸಲಾರವು.

೨೬. ಕಾಶಿಯಲ್ಲಿ ಯಜ್ಞವರಾಹಸ್ವಾಮಿಯ ಸನ್ನಿಧಿಯಲ್ಲಿ ವಾರಾಹೀ ನಾಮಕಳಾದ ಮತ್ತೊಬ್ಬ ದೇವತೆಯಿರುವಳು. ಆಕೆಗೆ ಭಕ್ತಿಯಿಂದ ನಮುಸ್ಕರಿಸಿದ ಮನುಷ್ಯನು ವಿಪತ್ತುಗಳೆಂಬ ಸಮುದ್ರದಲ್ಲಿ ಮುಳುಗುವುದಿಲ್ಲ.

೨೭. ಅಲ್ಲಿಯೇ ನೆಲಸಿರುವ ಸರ್ವಾಪದ್ವಿನಿವಾರಕಳಾದ ಶಿವದೂತಿಯೂ ಸಂದರ್ಶಿಸಲರ್ಹಳಾಗಿರುವಳು. ಆಕೆಯು ಆನಂದವನವನ್ನು ರಕ್ಷಿಸುವುದಕ್ಕಾಗಿ ಶೂಲವನ್ನು ಎತ್ತಿಹಿಡಿದು ಶತ್ರುಗಳನ್ನು ಭಯಗೊಳಿಸುತ್ತಿರುವಳು.

೨೮. ಬಳಿಕ ಐರಾವತವಾಹನವನ್ನೇರಿ ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವ ಇಂದ್ರಿಯೂ ಅಲ್ಲಿಯೇ ನೆಲಸಿರುವಳು. ಈಕೆಯು ಇಂದ್ರೇಶ್ವರನಿಗೆ ದಕ್ಷಿಣಭಾಗದಲ್ಲಿ ಪ್ರತಿಷ್ಠಿತಳಾಗಿ ಪೂಜಿಸಿದವರಿಗೆ ನಿತ್ಯವೂ ಸರ್ವಸಂಪತ್ತುಗಳನ್ನು ನೀಡುತ್ತಿರುವಳು.

೨೯. ಸ್ಕಂದೇಶ್ವರನ ಸಮೀಪದಲ್ಲಿರುವ ಕೌಮಾರಿಯು ನವಿಲಿನ ವಾಹನವನ್ನು ಹೊಂದಿರುವಳು. ಕ್ಷೇತ್ರವಾಸದ ಮಹಾಫಲವನ್ನು ಪಡೆಯಬಯಸುವವರೆಲ್ಲಕೂ ಈಕೆಯನ್ನು ಆವಶ್ಯಕವಾಗಿ ನೋಡಲೇಬೇಕು.

ಮಹೇಶ್ವರಾದ್ದಕ್ಷಿಣತೋ ದೇವೀ ಮಾಹೇಶ್ವರೀ ನರೈಃ ।
ವೃಷಯಾನವತೀ ಪೂಜ್ಯಾ ಮಹಾವೃಷಸಮೃದ್ಧಿದಾ ॥ ೩೦ ॥
ನಿರ್ವಾಣನರಸಿಂಹಸ್ಯ ಸಮೀಪೇ ಮೋಕ್ಷಕಾಂಕ್ಷಿಭಿಃ ।
ನಾರಸಿಂಹೀ ಸಮರ್ಚ್ಯಾ ಚ ಸಮುದ್ಯಚ್ಚಕ್ರರಮ್ಯದೋಃ ॥ ೩೧ ॥
ಹಂಸಯಾನವತೀ ಬ್ರಾಹ್ಮೀ ಬ್ರಹ್ಮೇಶಾತ್ಪಶ್ಚಿಮೇ ಸ್ಥಿತಾ ।
ಗಲತ್ಕಮಂಡಲುಜಲಚುಲಕಾತಾಡಿತಾಹಿತಾ ॥ ೩೨ ॥
ಬ್ರಹ್ಮವಿದ್ಯಾಪ್ರಬೋಧಾರ್ಥಂ ಕಾಶ್ಯಾಂ ಪೂಜ್ಯಾ ದಿನೇ ದಿನೇ ।
ಬ್ರಾಹ್ಮಣೈರ್ಯತಿಭಿರ್ನಿತ್ಯಂ ನಿಜತತ್ತ್ವಾವಬೋಧಿಭಿಃ ॥ ೩೩ ॥
ಶಾರ್ಙ್ಗಚಾಪವಿನಿರ್ಮುಕ್ತಮಹೇಷುಭಿರಿತಸ್ತತಃ ।
ಉತ್ಸಾದಯಂತೀಂ ಪ್ರತ್ಯೂಹಾನ್ಕಾಶ್ಯಾಂ ನಾರಾಯಣೀಂ ಶ್ರಯೇತ್ ॥
ಪ್ರತೀಚ್ಯಾಂ ಗೋಪಗೋವಿಂದಾದ್ಭ್ರಾಮ್ಯಚ್ಚಕ್ರೋಚ್ಚತರ್ಜಿನೀಂ ।
ನಾರಾಯಣೀಂ ಯಃ ಪ್ರಣಮೇತ್ತಸ್ಯ ಕಾಶ್ಯಾಂ ಮಹೋದಯಃ ॥ ೩೫ ॥

---

೩೦. ಮಹೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಮಾಹೇಶ್ವರಿಯು ನೆಲಸಿರುವಳು. ವೃಷಭವಾಹನೆಯಾದ ಆಕೆಯನ್ನು ಮನುಷ್ಯರು ಪೂಜಿಸಲು ಅಸಂಖ್ಯಾತವಾದ ಗೋಸಂಪತ್ತಿಯನ್ನು ಪಡೆಯುವರು.

೩೧. ಮೋಕ್ಷಾಭಿಲಾಷೆಯುಳ್ಳ ಜನರು ನಿರ್ವಾಣನರಸಿಂಹದೇವನ ಸಮೀಪದಲ್ಲಿರುವ ನಾರಸಿಂಹಿಯನ್ನು ಪೂಜಿಸಬೇಕು. ಆಕೆಯು ಕೈಯಲ್ಲಿ ಸುದರ್ಶನಚಕ್ರವನ್ನು ಹಿಡಿದು ಕಂಗೊಳಿಸುತ್ತಿರುವಳು.

೩೨. ಹಂಸವಾಹನಯುತಳಾದ ಬ್ರಾಹ್ಮಿಯು ಬ್ರಹ್ಮೇಶ್ವರನಿಗೆ ಪಶ್ಚಿಮದಲ್ಲಿ ನಿಂತಿರುವಳು. ಕಮಂಡಲುವಿನ ಜಲವನ್ನು ಬಾಯಿಂದುಗುಳುವ ಮಾತ್ರದಿಂದಲೇ ಸಕಲ ಶತ್ರುಗಳನ್ನೂ ನಿಗ್ರಹಿಸುತ್ತಿರುವಳು.

೩೩. ಆತ್ಮತತ್ತ್ವವನ್ನರಿಯಬೇಕೆನ್ನುವ ಅಭಿಲಾಷೆಯುಳ್ಳ ಬ್ರಾಹ್ಮಣರೂ ಸನ್ಯಾಸಿಗಳೂ ಬ್ರಹ್ಮವಿದ್ಯೆಯ ಪ್ರಬೋಧನೆಗೋಸ್ಕರ ಕಾಶಿಯಲ್ಲಿರುವ ಈಕೆಯನ್ನು ಪ್ರತಿದಿನದಲ್ಲಿಯೂ ಪೂಜಿಸಬೇಕು.

೩೪. ಮತ್ತು ಶಾರ್ಙ್ಗವೆಂಬ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಜಾಲಗಳಿಂದ ಕಾಶೀಕ್ಷೇತ್ರವಾಸಿಗಳ ಸಮಸ್ತ ವಿಘ್ನಗಳನ್ನೂ ದಿಕ್ಕಾಪಾಲಾಗಿ ಚೆದರಿಸುತ್ತಿರುವ ನಾರಾಯಣಿಯನ್ನೂ ಜನರು ಆಶ್ರಯಿಸಬೇಕು.

೩೫. ಗೋಪಗೋವಿಂದನಿಗೆ ಪಶ್ಚಿಮದಲ್ಲಿ ನಿಂತು ತರ್ಜನಿಯ ಬೆರಳಿನಿಂದ ಚಕ್ರಾಯುಧವನ್ನು ತಿರುಗಿಸುತ್ತಿರುವ ನಾರಾಯಣಿಗೆ ಯಾವನು ಪ್ರಣಾಮವನ್ನು ಮಾಡುವನೋ, ಅವನಿಗೆ ಕಾಶಿಯಲ್ಲಿ ಮಹಾವೈಭವವುಂಟಾಗುವುದು.

ತತೋ ಗೌರೀಂ ವಿರೂಪಾಕ್ಷೀಂ ದೇವಯಾನ್ಯಾ ಉದಗ್ದಿಶಿ ।
ಪೂಜಯಿತ್ವಾ ನರೋ ಭಕ್ತ್ಯಾ ವಾಂಛಿತಾಂ ಲಭತೇ ಶ್ರಿಯಂ ॥ ೩೬ ॥
ಶೈಲೇಶ್ವರೀ ಸಮಭ್ಯರ್ಚ್ಯಾ ಶೈಲೇಶ್ವರಸಮೀಪಗಾ ।
ತರ್ಜಯಂತೀ ಚ ತರ್ಜನ್ಯಾ ಸಂಸರ್ಗಮುಪಸರ್ಗಜಂ ॥ ೩೭ ॥
ಚಿತ್ರಕೂಪೇ ನರಃ ಸ್ನಾತ್ವಾ ವಿಚಿತ್ರಫಲದೇ ನೃಣಾಂ ।
ಚಿತ್ರಗುಪ್ತೇಶ್ವರಂ ವೀಕ್ಷ್ಯ ಚಿತ್ರಘಂಟಾಂ ಪ್ರಪೂಜ್ಯ ಚ ॥ ೩೮ ॥
ಬಹುಪಾತಕಯುಕ್ತೋಽಪಿ ತ್ಯಕ್ತಧರ್ಮಪಥೋಽಪಿ ವಾ ।
ನ ಚಿತ್ರಗುಪ್ತಲೇಖ್ಯಃ ಸ್ಯಾಚ್ಚಿತ್ರಘಂಟಾರ್ಚಕೋ ನರಃ ॥ ೩೯ ॥
ಯೋಷಿದ್ವಾ ಪುರುಷೋ ವಾಪಿ ಚಿತ್ರಘಂಟಾಂ ನ ಯೋಽರ್ಚಯೇತ್ ।
ಕಾಶ್ಯಾಂ ವಿಘ್ನಸಹಸ್ರಾಣಿ ತಂ ಸೇವಂತೇ ಪದೇ ಪದೇ ॥ ೪೦ ॥
ಚೈತ್ರಶುಕ್ಲತೃತೀಯಾಯಾಂ ಕಾರ್ಯಾ ಯಾತ್ರಾ ಪ್ರಯತ್ನತಃ ।
ಮಹಾಮಹೋತ್ಸವಃ ಕಾರ್ಯೋ ನಿಶಿ ಜಾಗರಣಂ ತಥಾ ॥ ೪೧ ॥

---

೩೬. ದೇವಯಾನಿಗೆ ಉತ್ತರದಿಕ್ಕಿನಲ್ಲಿರುವ ವಿರೂಪಾಕ್ಷಿಯೆಂಬ ಗೌರಿಯನ್ನು ಭಕ್ತಿಯಿಂದ ಪೂಜಿಸಿದ ಮನುಜನು ಅಪೇಕ್ಷಿಸಿದ ಸಕಲೈಶ್ವರ್ಯವನ್ನೂ ಅನಾಯಾಸವಾಗಿ ಪಡೆಯುವನು.

೩೭. ಶೈಲೇಶ್ವರನಿಗೆ ಸಮೀಪದಲ್ಲಿರುವ ಶೈಲೇಶ್ವರಿಯೂ ಸಕಲರಿಗೆ ಪೂಜಾರ್ಹಳಾಗಿರುವಳು. ಎತ್ತಿದ್ದ ಮುಂಬೆರಳಿನಿಂದ ವಿಘ್ನಕೃತಗಳಾದ ಸಮಸ್ತ ದೋಷಗಳನ್ನೂ ದೂರಗೊಳಿಸುತ್ತಿರುವಳು.

೩೮. ಮಾನವರಿಗೆ ವಿಚಿತ್ರಫಲಗಳನ್ನು ಕೊಡುವ ಚಿತ್ರಕೂಪದಲ್ಲಿ ಸ್ನಾನವನ್ನು ಮಾಡಿ ಚಿತ್ರಗುಪ್ತೇಶ್ವರನನ್ನು ನೋಡಿ ಚಿತ್ರಘಂಟೆಯನ್ನು ಮಾನವನು ಪೂಜಿಸಬೇಕು.

೩೯. ಈ ಚಿತ್ರಘಂಟೆಯನ್ನು ಪೂಜಿಸಿದ ಮನುಷ್ಯನು ಅನೇಕ ಪಾತಕಗಳನ್ನು ಮಾಡಿದವನಾದರೂ ಧರ್ಮಮಾರ್ಗವನ್ನು ತ್ಯಜಿಸಿದವನಾದರೂ ಜನರ ಕೃತ್ಯಾಕೃತ್ಯಗಳನ್ನುಲ್ಲೇಖಿಸುವ ಚಿತ್ರಗುಪ್ತನ ಬರವಣಿಗೆಗೆ ವಿಷಯನಾಗುವುದಿಲ್ಲ.

೪೦. ಸ್ತ್ರೀಯಾಗಲಿ ಪುರುಷನಾಗಲಿ ಯಾರು ಈ ಚಿತ್ರಘಂಟೆಯನ್ನು ಪೂಜಿಸುವುದಿಲ್ಲವೊ, ಅವನಿಗೆ ಕಾಶೀಕ್ಷೇತ್ರದಲ್ಲಿ ಅಡಿಗಡಿಗೂ ಸಾವಿರಾರು ವಿಘ್ನಗಳು ಮೇಲಿಂದಮೇಲೆ ಬರುತ್ತಿರುವುವು.

೪೧. ಚೈತ್ರಮಾಸದ ಶುಕ್ಲ ತೃತೀಯೆಯಲ್ಲಿ ಆ ಚಿತ್ರಘಂಟೆಗೆ ಮಹಾಯಾತ್ರೆಯನ್ನು ನಡೆಸಬೇಕು. ಪ್ರಯತ್ನದಿಂದ ಮಹೋತ್ಸವವನ್ನು ನಡೆಸಿ ರಾತ್ರಿಯಲ್ಲಿ ಜಾಗರಣೆಯನ್ನೂ ಮಾಡಬೇಕು.

ಮಹಾಪೂಜೋಪಕರಣೈಶ್ಚಿತ್ರಘಂಟಾಂ ಸಮರ್ಚ್ಯ ಚ ।
ಶೃಣೋತಿ ನಾಂತಕಸ್ಯೇಹ ಘಂಟಾಂ ಮಹಿಷಕಂಠಗಾಂ ॥ ೪೨ ॥
ಚಿತ್ರಾಂಗದೇಶ್ವರಪ್ರಾಚ್ಯಾಂ ಚಿತ್ರಗ್ರೀವಂ ಪ್ರಣಮ್ಯ ಚ ।
ನ ಜಾತು ಜಂತುರ್ವೀಕ್ಷೇತ ವಿಚಿತ್ರಾಂ ಯಮಯಾತನಾಂ ॥ ೪೩ ॥
ಭದ್ರಕಾಲೀಂ ನರೋ ದೃಷ್ಟ್ವಾ ನಾಭದ್ರಂ ಪಶ್ಯತಿ ಕ್ವಚಿತ್ ।
ಭದ್ರನಾಗಸ್ಯ ಪುರತೋ ಭದ್ರವಾಪ್ಯಾಂ ಕೃತೋದಕಃ ॥ ೪೪ ॥
ಹರಸಿದ್ಧಿಂ ಪ್ರಯತ್ನೇನ ಪೂಜಯಿತ್ವಾ ನರೋತ್ತಮಃ ।
ಮಹಾಸಿದ್ಧಿಮವಾಪ್ನೋತಿ ಪ್ರಾಚ್ಯಾಂ ಸಿದ್ಧಿವಿನಾಯಕಾತ್ ॥ ೪೫ ॥
ವಿಧಿಂ ಸಂಪೂಜ್ಯ ವಿಧಿವದ್ವಿವಿಧೈರುಪಹಾರಕೈಃ ।
ವಿವಿಧಾಂ ಲಭತೇ ಸಿದ್ಧಿಂ ವಿಧೀಶ್ವರಸಮೀಪಗಾಂ ॥ ೪೬ ॥
ಪ್ರಯಾಗತೀರ್ಥೇ ಸುಸ್ನಾತೋ ಜನೋ ನಿಗಡಭಂಜನೀಂ ।
ಸಭಾಜಯಿತ್ವಾ ನೋ ಜಾತು ನಿಗಡೈಃ ಪರಿಬಾಧ್ಯತೇ ॥ ೪೭ ॥

---

೪೨. ಬಹುವಿಧಗಳಾದ ಪೂಜಾಸಾಮಗ್ರಿಗಳಿಂದ ಚಿತ್ರಘಂಟೆಯ ಪೂಜೆಯನ್ನು ಮಾಡಿದವನು ಆಯುರವಸಾನದಲ್ಲಿ ಯಮಧರ್ಮರಾಜನ ವಾಹನವಾದ ಮಹಿಷದ ಕೊರಳಲ್ಲಿ ಕಟ್ಟಿರುವ ಘಂಟೆಯ ಧ್ವನಿಯನ್ನು ಕೇಳುವುದಿಲ್ಲ.

೪೩. ಚಿತ್ರಾಂಗದೇಶ್ವರನಿಗೆ ಪಶ್ಚಿಮದಲ್ಲಿರುವ ಚಿತ್ರಗ್ರೀವಾದೇವಿಗೆ ನಮಸ್ಕಾರವನ್ನು ಮಾಡಲು ಯಾವ ಪ್ರಾಣಿಯೂ ಎಂದಿಗೂ ವಿಚಿತ್ರಗಳಾದ ಯಮಲೋಕದ ಯಾತನೆಗಳನ್ನನುಭವಿಸುವುದಿಲ್ಲ.

೪೪. ಭದ್ರನಾಗನ ಮುಂದಿರುವ ಭದ್ರವಾಪಿಯಲ್ಲಿ ಸ್ನಾನಾಹ್ನಿಕಗಳನ್ನು ಮಾಡಿಕೊಂಡು ಭದ್ರಕಾಳಿಯನ್ನು ನೋಡಿದ ಮನುಷ್ಯನೆಂದಿಗೂ ಅಮಂಗಳಗಳನ್ನು ನೋಡುವುದಿಲ್ಲ.

೪೫. ಸಿದ್ಧಿವಿನಾಯಕನ ಪೂರ್ವಕ್ಕಿರುವ ಹರಸಿದ್ಧಿಯನ್ನು ಪ್ರಯತ್ನದಿಂದ ಪೂಜಿಸಿದ ಮನುಜೋತ್ತಮನು ಸಮಸ್ತ ಕಾರ್ಯಗಳಲ್ಲಿಯೂ ಮಹಾಸಿದ್ಧಿಯನ್ನೇ ಪಡೆಯುತ್ತಿರುವನು.

೪೬. ವಿಧೀಶ್ವರನ ಸಮೀಪದಲ್ಲಿ ನೆಲಸಿರುವ ವಿಧಿಯನ್ನು ವಿಧ್ಯುಕ್ತರೀತಿಯಿಂದ ಬಹುವಿಧಗಳಾದ ಉಪಚಾರಗಳಿಂದ ಪೂಜೆಮಾಡಲು ಸರ್ವತೋಮುಖವಾದ ಸಿದ್ಧಿಯನ್ನು ನರನು ಪಡೆಯುವನು.

೪೭. ಪ್ರಯಾಗತೀರ್ಥದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿ ಯಾವ ಜನರು ನಿಗಡಭಂಜನಿಯನ್ನು ಪೂಜಿಸುವರೊ, ಅವರು ಎಂದಿಗೂ ಶೃಂಖಲೆಗಳಿಂದ ಬಂಧಿತರಾಗುವುದಿಲ್ಲ.

ಭೌಮವಾರೇ ಸದಾ ಪೂಜ್ಯಾ ದೇವೀ ನಿಗಡಭಂಜನೀ ।
ಕೃತ್ವೈಕಭುಕ್ತಂ ಭಕ್ತ್ಯಾತ್ರ ಬಂದೀಮೋಕ್ಷಣಕಾಮ್ಯಯಾ ॥ ೪೮ ॥
ಸಂಸಾರಬಂಧವಿಚ್ಛಿತ್ತಿಮಪಿ ಯಚ್ಛತಿ ಸಾರ್ಚಿತಾ ।
ಗಣನಾ ಶೃಂಖಲಾದೀನಾಂ ಕಾ ಚ ತಸ್ಯಾಃ ಸಮರ್ಚನಾತ್ ॥ ೪೯ ॥
ದೂರಸ್ಥೋಽಪಿ ಹಿ ಯೋ ಬಂಧುಃ ಸೋಽಪಿ ಕ್ಷಿಪ್ರಂ ಸಮೇಷ್ಯತಿ ।
ವಂದೀಪದಜುಷಾಂ ಪುಂಸಾಂ ಶ್ರದ್ಧಯಾ ನಾತ್ರ ಸಂಶಯಃ ॥ ೫೦ ॥
ಕಿಂಚಿನ್ನಿಯಮಮಾಲಂಬ್ಯ ಯದಿ ಸಾ ಪರಿವೇಷಿತಾ ।
ಕಾಮಾನ್ಪೂರಯತಿ ಕ್ಷಿಪ್ರಂ ಕಾಶೀಸಂದೇಹಹಾರಿಣೀ ॥ ೫೧ ॥
ಘನಟಂಕಕರಾ ದೇವೀ ಭಕ್ತಬಂಧನಭೇದಿನೀ ।
ಕಂ ಕಂ ನ ಪೂರಯೇತ್ಕಾಮಂ ತೀರ್ಥರಾಜಸಮೀಪಗಾ ॥ ೫೨ ॥
ದೇವೀ ಪಶುಪತೇಃ ಪಶ್ಚಾದಮೃತೇಶ್ವರಸನ್ನಿಧೌ ।
ಸ್ನಾತ್ವಾ ಚೈವಾಮೃತೇ ಕೂಪೇ ನಮನೀಯಾ ಪ್ರಯತ್ನತಃ ॥ ೫೩ ॥

---

೪೮. ಬಂಧನದಲ್ಲಿರುವವರ ಬಿಡುಗಡೆಯನ್ನಪೇಕ್ಷಿಸುವವರು ಮಂಗಳವಾರದಲ್ಲಿ ಏಕಭುಕ್ತವನ್ನು ಮಾಡಿ ಇಲ್ಲಿ ಭಕ್ತಿಯಿಂದ ನಿಗಡಭಂಜನೀದೇವಿಯನ್ನು ಸದಾ ಪೂಜೆಮಾಡಬೇಕು.

೪೯. ಆಕೆಯನ್ನು ಪೂಜಿಸಲು ಸಂಸಾರಬಂಧದ ಬಿಡುಗಡೆಯನ್ನೂ ಅನುಗ್ರಹಿಸುವಳು. ಆಕೆಯ ಪೂಜೆಯನ್ನು ಮಾಡಿದವರಿಗೆ ಯಾವ ವಿಧವಾದ ಶೃಂಖಲೆಗಳು ತಾನೆ ಗಣನೆಗೆ ಬರುವುವು?

೫೦. ಶ್ರದ್ಧೆಯಿಂದ ನಿಗಡಭಂಜನೀದೇವಿಯ ಪಾದಗಳಲ್ಲಿ ಭಕ್ತಿಯನ್ನಿಟ್ಟ ಮಾನವರಿಗೆ ದೂರದಲ್ಲಿರುವ ಬಂಧುವೂ ಸಹ ಕ್ಷಿಪ್ರದಲ್ಲಿಯೇ ಸಮೀಪಕ್ಕೆ ಬಂದು ಸೇರುವನು. ಇದರಲ್ಲಿ ಸಂದೇಹವಿಲ್ಲ.

೫೧. ಅತ್ಯಲ್ಪವಾದ ನಿಯಮವನ್ನು ಸ್ವೀಕರಿಸಿ ಆಕೆಯನ್ನು ಸೇವಿಸಿದರೂ, ಕಾಶೀಕ್ಷೇತ್ರದಲ್ಲಿ ಸದ್ಗತಿಯ ಸಂಬಂಧವಾದ ಸಂದೇಹವನ್ನೆಲ್ಲ ನಾಶಮಾಡುವ ಆಕೆಯು ಸದ್ಯದಲ್ಲಿಯೇ ಸೇವಕರ ಸಮಸ್ತ ಇಷ್ಟಾರ್ಥವನ್ನು ಪೂರೈಸುವಳು.

೫೨. ಪ್ರಯಾಗತೀರ್ಥದ ಸಮೀಪದಲ್ಲಿ ನೆಲಸಿರುವವಳೂ, ಭಕ್ತರ ಬಂಧನಗಳನ್ನು ಭೇದಿಸುವವಳೂ ಆದ ಘನಟಂಕಕರೆಯೆಂಬ ದೇವಿಯು ಭಕ್ತರ ಯಾವ ಯಾವ ಅಭಿಲಾಷೆಗಳನ್ನು ಈಡೇರಿಸಲಾರಳು?

೫೩. ಪಶುಪತಿಗೆ ಹಿಂದುಗಡೆಯಲ್ಲಿಯೂ ಅಮೃತೇಶ್ವರನ ಸಮ್ಮುಖದಲ್ಲಿಯೂ ದೇವಿಯೊಬ್ಬಳಿರುವಳು. ಅಮೃತಕೂಪದಲ್ಲಿ ಸ್ನಾನವನ್ನು ಮಾಡಿ ಅವಶ್ಯಕವಾಗಿ ಆಕೆಗೆ ನಮಸ್ಕರಿಸಬೇಕು.

ಪೂಜಯಿತ್ವಾ ನರೋ ಭಕ್ತ್ಯಾ ದೇವತಾಮಮೃತೇಶ್ವರೀಂ ।
ಅಮೃತತ್ವಂ ಭಜೇದೇವ ತತ್ಪಾದಾಂಬುಜಸೇವನಾತ್ ॥ ೫೪ ॥
ಧಾರಯಂತೀಂ ಮಹಾಮಾಯಾಮಮೃತಸ್ಯ ಕಮಂಡಲುಂ ।
ದಕ್ಷಿಣೇಽಭಯದಾಂ ವಾಮೇ ಧ್ಯಾತ್ವಾ ಕೋ ನಾಽಮೃತತ್ವಭಾಕ್ ॥೫೫॥
ಸಿದ್ಧಲಕ್ಷ್ಮೀ ಜಗದ್ಧಾತ್ರೀ ಪ್ರತೀಚ್ಯಾಮಮೃತೇಶ್ವರಾತ್ ।
ಪ್ರಪಿತಾಮಹಲಿಂಗಸ್ಯ ಪುರತಃ ಸಿದ್ಧಿದಾರ್ಚಿತಾ ॥ ೫೬ ॥
ಪ್ರಾಸಾದಂ ಸಿದ್ಧಲಕ್ಷ್ಮ್ಯಾಶ್ಚ ವಿಲೋಕ್ಯ ಕಮಲಾಕೃತಿಂ ।
ಲಕ್ಷ್ಮೀವಿಲಾಸಸಂಜ್ಞಂ ಚ ಕೋ ನ ಲಕ್ಷ್ಮೀಂ ಸಮಾಪ್ನುಯಾತ್ ॥ ೫೭ ॥
ತತಃ ಕುಬ್ಜಾ ಜಗನ್ಮಾತಾ ನಲಕೂಬರಲಿಂಗತಃ ।
ಪೂಜನೀಯಾ ಪುರೋ ಭಾಗೇ ಪ್ರಪಿತಾಮಹಪಶ್ಚಿಮೇ ॥ ೫೮ ॥
ಉಪಸರ್ಗಾನಶೇಷಾಂಶ್ಚ ಕುಬ್ಜಾ ಹರತಿ ಪೂಜಿತಾ ।
ತಸ್ಮಾತ್ಕುಬ್ಜಾ ಪ್ರಯತ್ನೇನ ಪೂಜ್ಯಾ ಕಾಶ್ಯಾಂ ಶುಭಾರ್ಥಿಭಿಃ ॥ ೫೯ ॥

---

೫೪. ಅಮೃತೇಶ್ವರಿಯೆಂಬ ಈ ದೇವಿಯನ್ನು ಭಕ್ತಿಯಿಂದ ಪೂಜೆಮಾಡಲು ಮಾನವನು ಆಕೆಯ ಪಾದಗಳ ಸೇವನೆಯಿಂದ ದೇವತೆಗಳ ಪದವಿಯನ್ನೇ ಪಡೆಯುವುದು ದಿಟವು.

೫೫. ಮಹಾಮಾಯಾಸ್ವರೂಪಿಣಿಯಾಗಿ ಬಲಗೈಯಲ್ಲಿ ಅಮೃತದ ಕಳಶವನ್ನು ಧರಿಸಿಕೊಂಡು ಎಡಗೈಯಿಂದ ಅಭಯ ಮುದ್ರೆಯನ್ನು ಪ್ರದರ್ಶಿಸುತ್ತಿರುವ ಆಕೆಯನ್ನು ಧ್ಯಾನಿಸಿದ ಯಾವನು ತಾನೆ ಅಮೃತತ್ವಕ್ಕೆ ಭಾಗಿಯಾಗುವುದಿಲ್ಲ?

೫೬. ಅಮೃತೇಶ್ವರನಿಗೆ ಪಶ್ಚಿಮದಲ್ಲಿಯೂ ಪಿತಾಮಹಲಿಂಗಕ್ಕೆ ಮುಂದುಗಡೆಯಲ್ಲಿಯೂ ಇರುವ ಲೋಕೇಶ್ವರಿಯಾದ ಸಿದ್ಧಲಕ್ಷ್ಮಿಯು ಪೂಜಿತಳಾದರೆ ಸಕಲ ಸಿದ್ಧಿಗಳನ್ನೂ ಕೊಡುವಳು.

೫೭. ಕಮಲದ ಆಕಾರವುಳ್ಳದುದೂ ಲಕ್ಷ್ಮೀವಿಲಾಸವೆಂದು ಪ್ರಸಿದ್ಧವಾದುದೂ ಆದ ಸಿದ್ಧಲಕ್ಷ್ಮಿಯ ಪ್ರಾಸಾದವನ್ನು ನೋಡಿದ ಮಾತ್ರದಿಂದಲೇ ಐಶ್ವರ್ಯವನ್ನು ಯಾವನು ಪಡೆಯುವುದಿಲ್ಲ?

೫೮. ಬಳಿಕ ನಲಕೂಬರಲಿಂಗಕ್ಕೆ ಎದುರಿನಲ್ಲಿಯೂ ಪಿತಾಮಹೇಶ್ವರನಿಗೆ ಪಶ್ಚಿಮದಲ್ಲಿಯೂ ಇರುವ ಲೋಕಮಾತೆಯಾದ ಕುಬ್ಜಾದೇವಿಯು ಪೂಜೆಗೆ ಅರ್ಹಳಾಗಿ ನೆಲಸಿರುವಳು.

೫೯. ಆಕೆಯು ಪೂಜೆಗೊಂಡರೆ ಸಮಸ್ತ ವಿಘ್ನಗಳನ್ನೂ ನಿಶ್ಶೇಷವಾಗಿ ನಾಶಮಾಡುವಳು. ಆದುದರಿಂದ ಶುಭಫಲಗಳನ್ನಿಚ್ಛಿಸುವವರು ಪ್ರಯತ್ನಪೂರ್ವಕವಾಗಿ ಕುಬ್ಜಾದೇವಿಯನ್ನು ಪೂಜಿಸಬೇಕು.

ಕುಬ್ಜಾಂಬರೇಶ್ವರಂ ಲಿಂಗಂ ನಲಕೂಬರಪಶ್ಚಿಮೇ ।
ತ್ರಿಲೋಕಸುಂದರೀ ಗೌರೀ ತತ್ರಾರ್ಚ್ಯಾರ್ಭೀಷ್ಟದಾಯಿನೀ ॥ ೬೦ ॥
ತ್ರಿಲೋಕಸುಂದರೀ ಸಿದ್ಧಿಂ ದದ್ಯಾತ್ರೈಲೋಕ್ಯಸುಂದರೀಂ ।
ವೈಧವ್ಯಂ ನಾಪ್ಯತೇ ಕ್ವಾಪಿ ತಸ್ಯಾ ದೇವ್ಯಾಃ ಸಮರ್ಚನಾತ್ ॥ ೬೧ ॥
ದೀಪ್ತಾ ನಾಮ ಮಹಾಶಕ್ತಿಃ ಸಾಂಬಾದಿತ್ಯಸಮೀಪಗಾ ।
ದೇದೀಪ್ಯಮಾನಲಕ್ಷ್ಮೀಕಾ ಜಾಯಂತೇ ತತ್ಸಮರ್ಚನಾತ್ ॥ ೬೨ ॥
ಶ್ರೀಕಂಠಸನ್ನಿಧೌ ದೇವೀ ಮಹಾಲಕ್ಷ್ಮೀರ್ಜಗಜ್ಜನಿಃ ।
ಸ್ನಾತ್ವಾ ಶ್ರೀಕುಂಡತೀರ್ಥೇ ತು ಸಮರ್ಚ್ಯಾ ಜಗದಂಬಿಕಾ ॥ ೬೩ ॥
ಪಿತ್ರೂನ್ಸಂತರ್ಪ್ಯ ವಿಧಿವತ್ತೀರ್ಥೇ ಶ್ರೀಕುಂಡಸಂಜ್ಞಕೇ ।
ದತ್ವಾ ದಾನಾನಿ ವಿಧಿವನ್ನ ಲಕ್ಷ್ಮ್ಯಾ ಪರಿಮುಚ್ಯತೇ ॥ ೬೪ ॥
ಲಕ್ಷ್ಮೀಕ್ಷೇತ್ರಂ ಮಹಾಪೀಠಂ ಸಾಧಕಸ್ಯೈವ ಸಿದ್ಧಿದಂ ।
ಸಾಧಯಂಸ್ತತ್ರ ಮಂತ್ರಾಂಶ್ಚ ನರಃ ಸಿದ್ಧಿಮವಾಪ್ನುಯಾತ್ ॥ ೬೫ ॥

---

೬೦. ನಲಕೂಬರೇಶ್ವರನಿಗೆ ಪಶ್ಚಿಮದಲ್ಲಿ ಕುಬ್ಜಾಂಬರೇಶ್ವರವೆಂಬ ಲಿಂಗವು ಸ್ಥಾಪಿತವಾಗಿರುವುದು. ಅಲ್ಲಿರುವ ಸಕಲಾಭೀಷ್ಟದಾಯಿನಿಯಾದ ತ್ರಿಲೋಕ ಸುಂದರಿಯೆಂಬ ದುರ್ಗಿಯು ಸರ್ವರಿಗೂ ಸಂಪೂಜ್ಯಳಾಗಿರುವಳು.

೬೧. ತ್ರಿಲೋಕಸುಂದರೀದೇವಿಯು ಮೂರು ಲೋಕಗಳಲ್ಲಿಯೂ ಅತಿ ಶಯಿತವಾದ ಸಿದ್ಧಿಯನ್ನು ಅನುಗ್ರಹಿಸುವಳು. ಆ ದೇವಿಯನ್ನು ಪೂಜಿಸಿದ ಯಾವ ಸ್ತ್ರೀಯಳೂ ಎಂದಿಗೂ ವೈಧವ್ಯವನ್ನು ಹೊಂದುವುದಿಲ್ಲ.

೬೨. ಸಾಂಬಾದಿತ್ಯನ ಸಮೀಪದಲ್ಲಿ ದೀಪ್ತಾನಾಮಕಳಾದ ಮಹಾಶಕ್ತಿಯು ಸ್ಥಾಪಿತಳಾಗಿರುವಳು. ಆಕೆಯ ಪೂಜೆಯಿಂದ ಮಾನವರು ಅತ್ಯಂತ ಪ್ರಕಾಶ ಮಾನವಾದ ಕಾಂತಿಯುಳ್ಳವರಾಗಿರುವರು.

೬೩. ಶ್ರೀಕಂಠೇಶ್ವರನ ಸನ್ನಿಧಿಯಲ್ಲಿ ಲೋಕಜನನಿಯಾದ ಮಹಾಲಕ್ಷ್ಮಿ ಯೆಂಬ ದೇವಿಯಿರುವಳು. ಶ್ರೀಕಂಠಕುಂಡವೆಂಬ ತೀರ್ಥದಲ್ಲಿ ಮಜ್ಜನವನ್ನು ಮಾಡಿ ಆ ಜಗದಂಬೆಯ ಪೂಜೆಯನ್ನು ಕೈಗೊಳ್ಳಬೇಕು.

೬೪. ಶ್ರೀಕುಂಡನಾಮಕವಾದ ಈ ತೀರ್ಥದಲ್ಲಿ ವಿಧಿಯಿಂದ ಪಿತೃಗಳಿಗೆ ತರ್ಪಣಗಳನ್ನಿತ್ತು ಸಂಕಲ್ಪಪೂರ್ವಕವಾಗಿ ದಾನಗಳನ್ನು ಕೊಡುವವನು ಎಂದಿಗೂ ಐಶ್ವರ್ಯಹೀನನಾಗುವುದಿಲ್ಲ.

೬೫. ಈ ಲಕ್ಷ್ಮೀಕ್ಷೇತ್ರವು ಮಹಾಪೀಠವೆನಿಸಿ ಸಾಧಕರಿಗೆ ಕ್ಷಿಪ್ರದಲ್ಲಿಯೇ ಸಿದ್ಧಿಯನ್ನು ಮಾಡಿಕೊಡುವುದು. ಅಲ್ಲಿ ಮಂತ್ರಗಳ ಸಾಧನೆಗಳನ್ನು ಮಾಡು ವುದರಿಂದ ಮನುಷ್ಯನು ಮಂತ್ರಸಿದ್ಧಿಯನ್ನು ಪಡೆಯುವನು.

ಸಂತಿ ಪೀಠಾನ್ಯನೇಕಾನಿ ಕಾಶ್ಯಾಂ ಸಿದ್ಧಿಕರಾಣ್ಯಪಿ ।
ಮಹಾಲಕ್ಷ್ಮೀಪೀಠಸಮಂ ನಾನ್ಯಲ್ಲಕ್ಷ್ಮೀಕರಂ ಪರಂ ॥ ೬೬ ॥
ಮಹಾಲಕ್ಷ್ಮ್ಯಷ್ಟಮೀಂ ಪ್ರಾಪ್ಯ ತತ್ರ ಯಾತ್ರಾಕೃತಾಂ ನೃಣಾಂ ।
ಸಂಪೂಜಿತೇಹ ವಿಧಿವತ್ಪದ್ಮಾ ಸದ್ಮ ನ ಮುಂಚತಿ ॥ ೬೭ ॥
ಉತ್ತರೇ ತು ಮಹಾಲಕ್ಷ್ಮ್ಯಾ ಹಯಕಂಠೀ ಕುಠಾರಧೃಕ್ ।
ಕಾಶೀವಿಘ್ನಮಹಾವೃಕ್ಷಾಂಶ್ಛಿನತ್ತಿ ಪ್ರತಿವಾಸರಂ ॥ ೬೮ ॥
ಕೌರ್ಮೀ ಶಕ್ತಿರ್ಮಹಾಲಕ್ಷ್ಮೀದಕ್ಷಿಣೇ ಪಾಶಪಾಣಿಕಾ ।
ಬಧ್ನಾತಿ ವಿಘ್ನಸಂಘಾತಂ ಕ್ಷೇತ್ರಸ್ಯಾಸ್ಯ ಪ್ರತಿಕ್ಷಣಂ ॥ ೬೯ ॥
ಸಾ ಪೂಜಿತಾ ಸುತಾ ಮರ್ತ್ಯೈಃ ಕ್ಷೇತ್ರಸಿದ್ಧಿಂ ಪ್ರಯಚ್ಛತಿ ।
ವಾಯವ್ಯಾಂ ಚ ಶಿಖೀ ಚಂಡೀ ಕ್ಷೇತ್ರರಕ್ಷಾಕರೀ ಪರಾ ॥ ೭೦ ॥
ಖಾದಂತೀ ವಿಘ್ನಸಂಘಾತಂ ಶಿಖೀ ಶಬ್ದಂ ಕರೋತಿ ಚ ।
ತಸ್ಯಾಃ ಸಂದರ್ಶನಾತ್ಪುಂಸಾಂ ನಶ್ಯಂತಿ ವ್ಯಾಧಯೋಽಖಿಲಾಃ ॥ ೭೧ ॥

---

೬೬. ಕಾಶೀಪ್ರದೇಶದಲ್ಲಿ ಸಿದ್ಧಿಪ್ರದಗಳಾಗಿರುವ ಅನೇಕ ಸನ್ನಿಧಾನಗಳಿರುವುವು. ಆದರೆ ಮಹಾಲಕ್ಷ್ಮೀ ಪೀಠಕ್ಕೆ ಸಮಾನವಾದುದಾಗಲಿ ಅದಕ್ಕಿಂತ ಉತ್ತಮವಾದುದಾಗಲಿ ಲಕ್ಷ್ಮೀಪ್ರದವಾದುದು ಮತ್ತೊಂದಿಲ್ಲವು.

೬೭. ಮಹಾಲಕ್ಷ್ಮಿಯ ಅಷ್ಟಮಿಯ ದಿನದಲ್ಲಿ ಅಲ್ಲಿ ಮಹಾ ಯಾತ್ರೆಯನ್ನು ಮಾಡುವ ಮನುಷ್ಯರಿಂದ ಪೂಜೆಯನ್ನು ಕೈಕೊಂಡ ಮಹಾಲಕ್ಷ್ಮಿಯು ಅವರ ಮನೆಗಳನ್ನೆಂದಿಗೂ ತ್ಯಜಿಸುವುದಿಲ್ಲ.

೬೮. ಮಹಾಲಕ್ಷ್ಮಿಗೆ ಉತ್ತರದಲ್ಲಿಯೇ ಹಯಕಂಠೀದೇವಿಯು ಕುಠಾರವನ್ನು ಧರಿಸಿ ನಿಂತಿರುವಳು. ಪ್ರತಿ ದಿನದಲ್ಲಿಯೂ ಕಾಶೀಕ್ಷೇತ್ರದ ವಿಘ್ನಗಳೆಂಬ ಮಹಾವೃಕ್ಷಗಳನ್ನು ಕತ್ತರಿಸಿಹಾಕುತ್ತಿರುವಳು.

೬೯. ಮಹಾಲಕ್ಷ್ಮಿಗೆ ದಕ್ಷಿಣದಲ್ಲಿರುವ ಕೌರ್ಮಿಯೆಂಬ ಶಕ್ತಿದೇವತೆಯು ಪಾಶಹಸ್ತೆಯಾಗಿರುವಳು. ಆಕೆಯು ಕ್ಷಣಕ್ಷಣದಲ್ಲಿಯೂ ಈ ಕಾಶೀಕ್ಷೇತ್ರದ ವಿಘ್ನಸಮೂಹಗಳನ್ನು ಕಟ್ಟಿಹಾಕುವಳು.

೭೦. ಆಕೆಯನ್ನು ಪೂಜಿಸಿ ಸ್ತೋತ್ರಮಾಡಲು ಮನುಷ್ಯರಿಗೆ ಕ್ಷೇತ್ರವಾಸದ ಸಿದ್ಧಿಯನ್ನು ಕೊಡುವಳು. ಕ್ಷೇತ್ರದ ವಾಯುವ್ಯದಿಕ್ಕಿನಲ್ಲಿ ಶಿಖಿಯೆಂಬ ಚಂಡಿಕೆಯೊಬ್ಬಳು ಕ್ಷೇತ್ರದ ಸಂರಕ್ಷಣೆಯನ್ನು ಮಾಡುತ್ತಿರುವಳು.

೭೧. ಶಿಖೀದೇವಿಯು ವಿಘ್ನಕೋಟಿಗಳನ್ನೆಲ್ಲ ಭಕ್ಷಣೆಮಾಡಿ ಗರ್ಜಿಸುತ್ತಿರುವಳು. ಆಕೆಯ ಸಂದರ್ಶನವನ್ನು ಮಾಡುವುದರಿಂದ ಮನುಷ್ಯರಿಗೆ ಸಕಲ ವ್ಯಾಧಿಗಳೂ ನಾಶವಾಗುವುವು.

ಭೀಮಚಂಡ್ಯುತ್ತರದ್ವಾರಂ ಸದಾ ರಕ್ಷೇದತಂದ್ರಿತಾ ।
ಭೀಮೇಶ್ವರಸ್ಯ ಪುರತಃ ಪಾಶಮುದ್ಗರಧಾರಿಣೀ ॥ ೭೨ ॥
ಭೀಮಚಂಡೀಂ ನರೋ ದೃಷ್ಟ್ವಾ ಭೀಮಕುಂಡೇ ಕೃತೋದಕಃ ।
ಭೀಮಾಕೃತೀನ್ನ ವೈ ಪಶ್ಯೇದ್ಯಾಮ್ಯಾನ್ದೂತಾನ್ಕ್ಷಿತಿಕ್ಷಿತಿ ॥ ೭೩ ॥
ಭಾಗವಕ್ತ್ರೇಶ್ವರೀ ದೇವೀ ದಕ್ಷಿಣೇ ವೃಷಭಧ್ವಜಾತ್ ।
ಅಹರ್ನಿಶಂ ಭಕ್ಷಯತಿ ವಿಘ್ನಾನ್ವಿಘತರುಪಲ್ಲವಾನ್ ॥ ೭೪ ॥
ತಸ್ಯಾ ದೇವ್ಯಾಃ ಪ್ರಸಾದೇನ ಕಾಶೀವಾಸಃ ಪ್ರಲಭ್ಯತೇ ।
ಅತಶ್ಛಾಗೇಶ್ವರೀಂ ದೇವೀಂ ಮಹಾಷ್ಟಮ್ಯಾಂ ಪ್ರಪೂಜಯೇತ್ ॥ ೭೫ ॥
ತಾಲಜಂಘೇಶ್ವರೀ ದೇವೀ ತಾಲವೃಕ್ಷಕೃತಾಯುಧಾ ।
ಉತ್ಸಾದಯತಿ ವಿಘ್ನೌಘಾನಾನಂದವನಮಧ್ಯಗಾನ್ ॥ ೭೬ ॥
ಸಂಗಮೇಶ್ವರಲಿಂಗಸ್ಯ ದಕ್ಷಿಣೇ ವಿಕಟಾನನಾಂ ।
ತಾಲಜಂಘೇಶ್ವರೀಂ ನತ್ವಾ ನ ವಿಘ್ನೈರಭಿಭೂಯತೇ ॥ ೭೭ ॥

---

೭೨. ಭೀಮೇಶ್ವರನಿಗೆ ಸಮ್ಮುಖದಲ್ಲಿರುವ ಭೀಮಚಂಡಿಯು ಕ್ಷೇತ್ರದ ಉತ್ತರದ್ವಾರವನ್ನು ಯಾವಾಗಲೂ ಜಾಗರೂಕಳಾಗಿ ರಕ್ಷಿಸುತ್ತ ಕೈಗಳಲ್ಲಿ ಪಾಶ, ಮುದ್ಗರಗಳನ್ನು ಧರಿಸಿರುವಳು.

೭೩. ಭೀಮಕುಂಡದಲ್ಲಿ ಸ್ನಾನಾದಿಗಳನ್ನು ಮಾಡಿ ಭೀಮಚಂಡಿಯನ್ನು ನೋಡಿದವನೇ ಪುಣ್ಯವಂತನೆನ್ನಬೇಕು. ಆ ಮನುಷ್ಯನೆಂದಿಗೂ ಭಯಂಕರ ರೂಪರಾದ ಯಮದೂತರನ್ನು ನೋಡುವುದಿಲ್ಲ.

೭೪. ವೃಷಭಧ್ವಜನಿಗೆ ದಕ್ಷಿಣದಲ್ಲಿ ಛಾಗವಕ್ತ್ರೇಶ್ವರಿಯೆಂಬ ದೇವಿಯಿರುವಳು. ವಿಘ್ನಸಮೂಹಗಳೆಂಬ ಗಿಡದ ಚಿಗುರೆಲೆಗಳನ್ನು ಹಗಲುರಾತ್ರಿಗಳಲ್ಲಿಯೂ ಎಡಬಿಡದೆ ಭಕ್ಷಿಸುತ್ತಿರುವಳು.

೭೫. ಆ ದೇವಿಯ ಪ್ರಸಾದದಿಂದಲೇ ಮನುಜರಿಗೆ ಕಾಶೀಕ್ಷೇತ್ರದ ವಾಸವು ಲಭಿಸುವುದು. ಆದುದರಿಂದ ಛಾಗೇಶ್ವರೀದೇವಿಯನ್ನು ಆಶ್ವಯುಜ ಶುಕ್ಲಪಕ್ಷದ ಅಷ್ಟಮಿಯ ದಿವಸದಲ್ಲಿ ಪೂಜಿಸಬೇಕು.

೭೬. ತಾಲಜಂಘೇಶ್ವರಿಯೆಂಬ ದೇವಿಯು ತಾಲವೃಕ್ಷವನ್ನೇ ಆಯುಧವಾಗಿ ಕೈಯಲ್ಲಿ ಹಿಡಿದಿರುವಳು. ಆನಂದವನದ ಮಧ್ಯದಲ್ಲಿ ಸಂಭವಿಸುವ ಸಮಸ್ತ ವಿಘ್ನಗಳನ್ನೂ ಉಚ್ಚಾಟನೆಮಾಡುತ್ತಿರುವಳು.

೭೭. ಸಂಗಮೇಶ್ವರಲಿಂಗಕ್ಕೆ ದಕ್ಷಿಣದಿಕ್ಕಿನಲ್ಲಿರುವ ವಿಕೃತಮುಖವುಳ್ಳ ತಾಲಜಂಘೇಶ್ವರಿಗೆ ನಮಸ್ಕಾರವನ್ನು ಮಾಡಿದ ನರನೆಂದಿಗೂ ವಿಘ್ನಪರಂಪರೆಗಳಲ್ಲಿ ಮುಳುಗುವುದಿಲ್ಲವು.

ಉದ್ದಾಲಕೇಶ್ವರಾಲ್ಲಿಂಗಾತ್ತೀರ್ಥೆ ಉದ್ದಾಲಕಾಭಿಧೇ ।
ಯಾಮ್ಯಾಂ ಚ ಯಮದಂಷ್ಟ್ರಾಖ್ಯಾ ಚರ್ವಯೇದ್ವಿಘ್ನಸಂಹತಿಂ ॥ ೭೮ ॥
ಪ್ರಣತಾ ಯಮದಂಷ್ಟ್ರಾ ಯೈಸ್ತೀರ್ಥೇ ಚೋದ್ದಾಲಕಾಭಿಧೇ ।
ಕೃತ್ವಾಪಿ ಪಾಪಸಂಘಾತಂ ನ ಯಮಾದ್ಬಿಭ್ಯತೀಹ ತೇ ॥ ೭೯ ॥
ದಾರುಕೇಶ್ವರತೀರ್ಥೇ ತು ದಾರುಕೇಶಸಮೀಪತಃ ।
ಪಾತಾಲತಾಲುವದನಾಮಾಕಾಶೋಷ್ಠೀಂ ಧರಾಧರಾಂ ॥ ೮೦ ॥
ಕಪಾಲಕರ್ತ್ರೀಹಸ್ತಾಂ ಚ ಬ್ರಹ್ಮಾಂಡಕವಲಪ್ರಿಯಾಂ ।
ಶುಷ್ಕೋದರೀಂ ಸ್ನಾಯುಬದ್ಧಾಂ ಚರ್ಮಮುಂಡೇತಿ ವಿಶ್ರುತಾಂ ॥ ೮೧ ॥
ಕ್ಷೇತ್ರಸ್ಯ ಪೂರ್ವದಿಗ್ಭಾಗಂ ರಕ್ಷಂತೀಂ ವಿಘ್ನಸಂಘತಃ ।
ಲಸತ್ಸಹಸ್ರದೋರ್ದಂಡಾಂ ಜ್ವಲತ್ಕೇಕರವೀಕ್ಷಣಾಂ ॥ ೮೨ ॥
ಪಾರಾವಾರಪ್ರಸೃಮರಹಸ್ತನ್ಯಸ್ತಾರಿಮೋದಕಾಂ ।
ದ್ವೀಪಿಕೃತ್ತಿಪರೀಧಾನಾಂ ಕಟುಕಟ್ಟಾಟ್ಟಹಾಸಿನೀಂ ॥ ೮೩ ॥

---

೭೮. ಉದ್ದಾಲಕೇಶ್ವರವೆಂಬ ಲಿಂಗಕ್ಕೆ ದಕ್ಷಿಣದಲ್ಲಿ ಉದ್ದಾಲಕತೀರ್ಥವೆಂಬುದೊಂದಿರುವುದು. ಅದರ ಸಮೀಪದಲ್ಲಿರುವ ಯಮದಂಷ್ಟ್ರಾನಾಮಕಳಾದ ಚಂಡಿಯು ವಿಘ್ನರಾಶಿಗಳನ್ನೆಲ್ಲ ಭಕ್ಷಣಮಾಡುವಳು.

೭೯. ಉದ್ದಾಲಕನ ಹೆಸರಿನ ತೀರ್ಥದಲ್ಲಿರುವ ಯಮದಂಷ್ಟ್ರಾದೇವಿಗೆ ಯಾರು ಪ್ರಣಾಮಗಳನ್ನು ಮಾಡುವರೊ, ಅವರು ಪಾಪರಾಶಿಯನ್ನೇ ಮಾಡಿದ್ದರೂ ಯಮಧರ್ಮರಾಜನಿಗೆ ಭಯಪಡುವುದಿಲ್ಲ.

೮೦. ದಾರುಕೇಶ್ವರತೀರ್ಥದಲ್ಲಿ ದಾರುಕೇಶ್ವರನ ಸಮೀಪದಲ್ಲಿಯೇ ಪಾತಾಲವೇ ದವಡೆಯೂ, ಆಕಾಶವೇ ಮೇಲ್ತುಟಿಯೂ, ಭೂಮಿಯೇ ಕೆಳಮಟಿಯೂ ಆಗಿರುವ ಮುಖವುಳ್ಳ ದೇವಿಯೊಬ್ಬಳಿರುವಳು.

೮೧. ಆಕೆಯು ಕಪಾಲವನ್ನೂ ಚೂರಿಯನ್ನೂ ಕೈಗಳಲ್ಲಿ ಹಿಡಿದು ಬ್ರಹ್ಮಾಂಡವನ್ನೇ ನುಂಗುವ ಆಶೆಯಿಂದಿರುವಳು. ಕೃಶವಾದ ಹೊಟ್ಟೆಯಿಂದಲೂ ನರಗಳು ಬಿಗಿದಿರುವ ದೇಹದಿಂದಲೂ ಕೂಡಿರುವ ಆಕೆಯು ಚರ್ಮಮುಂಡೆಯೆಂಬುದಾಗಿ ಪ್ರಖ್ಯಾತಳಾಗಿರುವಳು.

೮೨. ಕ್ಷೇತ್ರದ ಪೂರ್ವದಿಕ್ಕನ್ನು ಸಮಸ್ತ ವಿಘ್ನಗಳಿಂದ ಆಕೆಯು ರಕ್ಷಿಸುತ್ತಿರುವಳು. ಮೆರೆಯುತ್ತಿರುವ ಅಸಂಖ್ಯಾಕಗಳಾದ ಬಾಹುಗಳಿಂದಲೂ ತೀಕ್ಷ್ಣದೃಷ್ಟಿಯಿಂದ ಕೆಳಗೆ ನೋಡುತ್ತಿರುವ ಕಣ್ಣುಗಳಿಂದಲೂ ಆಕೆಯು ಕೂಡಿರುವಳು.

೮೩. ಅಸಂಖ್ಯಾಕವಾಗಿ ಕಾಣುತ್ತಿರುವ ಕೈಗಳಲ್ಲಿ ಚಕ್ರ, ಮೋದಕಗಳನ್ನು ಹಿಡಿದಿರುವವಳೂ, ಗಜಚರ್ಮವನ್ನೇ ವಸ್ತ್ರವಾಗಿ ಸ್ವೀಕರಿಸಿರುವವಳೂ, ತೀಕ್ಷ್ಣವೂ ಕ್ರೂರವೂ ಆದ ಅಟ್ಟಹಾಸಧ್ವನಿಯುಳ್ಳವಳೂ ಆಗಿರುವಳು.

ಮೃಣಾಲನಾಲವತ್ತೀವ್ರಂ ಚರ್ವಂತೀಮಸ್ಥಿ ಪಾಪಿನಃ ।
ಶೂಲಾಗ್ರಪ್ರೋತದುರ್ವೃತ್ತಕ್ಷೇತ್ರದ್ರೋಹಿಕಲೇವರಾಂ ॥ ೮೪ ॥
ಕಪಾಲಮಾಲಾಭರಣಾಂ ಮಹಾಭೀಷಣರೂಪಿಣೀಂ ।
ಚರ್ಮಮುಂಡಾಂ ನರೋ ನತ್ವಾ ಕ್ಷೇತ್ರವಿಘ್ನೈರ್ನ ಬಾಧ್ಯತೇ ॥ ೮೫ ॥
ಯಥೈವ ಚರ್ಮಮುಂಡೈಷಾ ಮಹಾರುಂಡಾಪಿ ತಾದೃಶೀ ।
ಏತಾವಾನೇವ ಭೇದೋಽಸ್ಯಾ ರುಂಡಸ್ರಗ್ಭೂಷಣಾ ಸ್ತ್ರಿಯಂ ॥ ೮೬ ॥
ಕ್ಷೇತ್ರರಕ್ಷಾಂ ಪ್ರಕುರುತ ಉಭೇ ದೇವ್ಯೌ ಮಹಾಬಲೇ ।
ಹಸಂತ್ಯೌ ಕರತಾಲೀಭಿರನ್ಯೋನ್ಯಂ ದೋಃಪ್ರಸಾರಣಾತ್ ॥ ೮೭ ॥
ಹಯಗ್ರೀವೇಶ್ವರೇ ತೀರ್ಥೇ ಲೋಲಾರ್ಕಾದುತ್ತರೇ ಸದಾ ।
ಮಹಾರುಂಡಾ ಪ್ರಚಂಡಾಸ್ಯಾ ತಿಷ್ಠತೇ ಭಕ್ತವಿಘ್ನಹೃತ್ ॥ ೮೮ ॥
ಚರ್ಮಮುಂಡಾ ಮಹಾರುಂಡಾ ಕಥಿತೇ ಯೇ ತು ದೇವತೇ ।
ತಯೋರಂತರತಸ್ತಿಷ್ಠೇಚ್ಚಾಮುಂಡಾ ಮುಂಡರೂಪಿಣೀ ॥ ೮೯ ॥

---

೮೪. ಪಾಪಿಗಳ ಮೂಳೆಗಳನ್ನು ಕಮಲದ ದಂಟನಂತೆ ಅನಾಯಾಸವಾಗಿ ಅಗೆದು ಚೂರ್ಣಿಸುತ್ತಿರುವಳು. ದುರಾಚಾರಿಗಳೂ ಕ್ಷೇತ್ರದ್ರೋಹಿಗಳೂ ಆದವರ ದೇಹಗಳನ್ನೆಲ್ಲ ತನ್ನ ಶೂಲದ ಕೊನೆಯಲ್ಲಿ ಏರಿಸಿಕೊಂಡಿರುವಳು.

೮೫. ಕಪಾಲಗಳ ಮಾಲೆಯನ್ನೇ ಆಭರಣವನ್ನಾಗಿಟ್ಟುಕೊಂಡು ಮಹಾ ಭಯಂಕರ ರೂಪಳಾದ ಈ ಚರ್ಮಮುಂಡಾದೇವಿಗೆ ನಮಸ್ಕರಿಸಿದ ಮನುಷ್ಯನು ಕ್ಷೇತ್ರದಲ್ಲಿ ಯಾವ ವಿಘ್ನಗಳ ಬಾಧೆಗೂ ಸಿಕ್ಕುವುದಿಲ್ಲ.

೮೬. ಈ ಚರ್ಮಮುಂಡಿಯು ಹೇಗೆ ಇರುವಳೊ, ಮಹಾರುಂಡೆಯೂ ಹಾಗೆಯೇ ಇರುವಳು. ಇವರಿಬ್ಬರಲ್ಲಿ ಇಷ್ಟುಮಾತ್ರ ಭೇದವಿರುವುದು. ಈ ಮಹಾ ರುಂಡೆಯು ತಲೆಗಳಿಲ್ಲದ ದೇಹಗಳ ಮಾಲೆಯನ್ನು ಧರಿಸಿರುವಳು.

೮೭. ಮಹಾಬಲಶಾಲಿಗಳಾದ ಈ ಇಬ್ಬರು ದೇವಿಯರೂ ನಗುತ್ತ ಕೈ ಚಪ್ಪಾಳೆಗಳನ್ನು ಹಾಕುತ್ತ, ಪರಸ್ಪರವಾಗಿ ಕೈಗಳನ್ನು ನೀಡುತ್ತ ಕ್ಷೇತ್ರದ ಸಂರಕ್ಷಣೆಯನ್ನು ಮಾಡುತ್ತಿರುವರು.

೮೮. ಭಕ್ತರ ವಿಘ್ನಗಳನ್ನು ಪರಿಹರಿಸುವ ಮಹಾರುಂಡೆಯು ಯಾವಾಗಲೂ ಭಯಂಕರಮುಖವುಳ್ಳವಳಾಗಿ ಲೋಲಾರ್ಕನಿಗೆ ಉತ್ತರದಲ್ಲಿರುವ ಹಯಗ್ರೀವೇಶ್ವರತೀರ್ಥದಲ್ಲಿ ನೆಲೆಗೊಂಡಿರುವಳು.

೮೯. ಮೇಲೆಹೇಳಿದ ಚರ್ಮಮುಂಡಾ ಮತ್ತು ಮಹಾರುಂಡಾ ಎಂಬಿಬ್ಬರು ದೇವತೆಗಳಿಗೂ ಮಧ್ಯದಲ್ಲಿಯೇ ಮುಂಡಗಳಿಂದಲೇ ನಿರ್ಮಿತವಾದ ದೇಹವುಳ್ಳವಳಂತೆ ತೋರುತ್ತಿರುವ ಚಾಮುಂಡಿಯು ಸ್ಥಿತಳಾಗಿರುವಳು.

ಏತಾಸ್ತಿಸ್ರಃ ಪ್ರಯತ್ನೇನ ಪೂಜ್ಯಾಃ ಕ್ಷೇತ್ರನಿವಾಸಿಭಿಃ ।
ಧನಧಾನ್ಯಪ್ರದಾಶ್ಚೈತಾಃ ಪುತ್ರಪೌತ್ರಪ್ರದಾ ಇಮಾಃ ॥ ೯೦ ॥
ಉಪಸರ್ಗಾನಮೂನ್ ಘ್ನಂತಿ ದದ್ಯುರ್ನೈಃಶ್ರೇಯಸೀಂ ಶ್ರಿಯಂ ।
ಸ್ಮೃತಾ ದೃಷ್ಟಾ ನತಾಃ ಸ್ಪೃಷ್ಟಾಃ ಪೂಜಿತಾಃ ಶ್ರದ್ಧಯಾ ನರೈಃ ॥ ೯೧ ॥
ಮಹಾರುಂಡಾ ಪ್ರತೀಚ್ಯಾಂ ಚ ದೇವೀ ಸ್ವಪ್ನೇಶ್ವರೀ ಶುಭಾ ।
ಭವಿಷ್ಯಂ ಕಥಯೇತ್ಸ್ವಪ್ನೇ ಭಕ್ತಸ್ಯಾಗ್ರೇ ಶುಭಾಶುಭಂ ॥ ೯೨ ॥
ತತ್ರ ಸ್ವಪ್ನೇಶ್ವರಂ ಲಿಂಗಂ ದೇವೀಂ ಸ್ವಪ್ನೇಶ್ವರೀಂ ತಥಾ ।
ಸ್ನಾತ್ವಾಸಿಸಂಗಮೇ ಪುಣ್ಯೇ ಯಸ್ಮಿನ್ಕಸ್ಮಿಂಸ್ಥಿತಾವಪಿ ॥ ೯೩ ॥
ಉಪೋಷಣಪರೋ ಧೀಮಾನ್ನಾರೀ ವಾ ಪುರುಷೋಽಪಿ ವಾ ।
ಸಂಪೂಜ್ಯ ಸ್ಥಂಡಿಲಶಯಃ ಸ್ವಪ್ನೇ ಭಾವಿ ವಿಲೋಕಯೇತ್ ॥ ೯೪ ॥
ಅದ್ಯಾಪಿ ಪ್ರತ್ಯಯಸ್ತತ್ರ ಕಾರ್ಯಾ ಏಷ ವಿಜಾನತಾ ।
ಭೂತಂ ಭಾವಿ ಭವತ್ಸರ್ವಂ ವದೇತ್ಸ್ವಪ್ನೇಶ್ವರೀ ನಿಶಿ ॥ ೯೫ ॥

---

೯೦. ಕಾಶೀಕ್ಷೇತ್ರದಲ್ಲಿ ವಾಸಮಾಡುವವರು ಈ ಮೂರು ದೇವತೆಯರನ್ನೂ ಅವಶ್ಯಕವಾಗಿ ಪೂಜಿಸಬೇಕು. ಇವರೇ ಧನಧಾನ್ಯಸಮೃದ್ಧಿಯನ್ನು ಕೊಡುವರು. ಇವರೇ ಪುತ್ರಪೌತ್ರಾದಿ ವಂಶವೃದ್ಧಿಯನ್ನೂ ಅನುಗ್ರಹಿಸುವರು.

೯೧. ಈ ಮೂವರೇ ಸಕಲ ವಿಘ್ನಗಳನ್ನೂ ನಾಶಗೊಳಿಸಿ ಮೋಕ್ಷಾಖ್ಯವಾದ ಐಶ್ವರ್ಯವನ್ನು ಕೊಡುವರು. ಆದುದರಿಂದ ಮನುಷ್ಯರು ಇವರನ್ನು ಭಕ್ತಿಯಿಂದ ಸ್ಮರಿಸಬೇಕು. ನೋಡಬೇಕು. ನಮಸ್ಕರಿಸಬೇಕು. ಸ್ಪರ್ಶಿಸಬೇಕು. ಪೂಜಿಸಬೇಕು.

೯೨. ಮಹಾರುಂಡಾದೇವಿಗೆ ಪಶ್ಚಿಮದಲ್ಲಿ ಪರಮಮಂಗಳೆಯಾದ ಸ್ವಪ್ನೇಶ್ವರಿಯೆಂಬ ದೇವಿಯಿರುವಳು. ಆಕೆಯು ಭಕ್ತನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಮುಂದೆ ಬರಲಿರುವ ಶುಭಾಶುಭಗಳನ್ನು ತಿಳಿಸುವಳು.

೯೩–೯೪. ಪುಣ್ಯತಮವಾದ ಅಸಿಗಂಗಾಸಂಗಮದಲ್ಲಿ ಸ್ನಾನವನ್ನು ಮಾಡಿ ಯಾವ ತಿಥಿಯಲ್ಲಿಯೇ ಆದರೂ ಸ್ವಪ್ನೇಶ್ವರಲಿಂಗವನ್ನೂ ಸ್ವಪ್ನೇಶ್ವರೀದೇವಿಯನ್ನೂ ಪೂಜಿಸಿ ಬುದ್ಧಿವಂತರಾದ ಸ್ತ್ರೀಯರೇ ಆಗಲಿ ಪುರುಷರೇ ಆಗಲಿ ಉಪವಾಸವ್ರತವನ್ನಾಚರಿಸಿ ನೆಲದಮೇಲೆ ಮಲಗಿರಲು ಸ್ವಪ್ನದಲ್ಲಿ ಮುಂದೆಯಾಗುವುದೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವರು.

೯೫. ಇಂದಿಗೂ ಸಹ ಪ್ರಾಜ್ಞನಾದ ಮನುಷ್ಯನು ಈ ವಿಷಯದಲ್ಲಿ ಪೂರ್ಣವಿಶ್ವಾಸವನ್ನಿಡತಕ್ಕದ್ದು. ಸ್ವಪ್ನೇಶ್ವರಿಯು ರಾತ್ರಿಯಲ್ಲಿ ಸ್ವಪ್ನದಲ್ಲಿ ಕಾಣಿಸಿಕೊಂಡು ಹಿಂದೆ ನಡೆದುದನ್ನೂ, ಮುಂದೆ ನಡೆಯುವುದನ್ನೂ, ಈಗ ನಡೆಯುತ್ತಿರುವುದನ್ನೂ ಎಲ್ಲವನ್ನೂ ಹೇಳುವಳು.

ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ನಿಶಿ ವಾ ದಿವಾ ।
ಪ್ರಯತ್ನತಃ ಸಮುಚ್ಚರ್ಯಾ ಸಾ ಕಾಶ್ಯಾಂ ಜ್ಞಾನಾರ್ಥಿಭಿರ್ನರೈಃ ॥ ೯೩ ॥
ಸ್ವಪ್ನೇಶ್ವರ್ಯಾಶ್ಚ ವಾರುಣ್ಯಾಂ ದುರ್ಗಾದೇವೀ ವ್ಯವಸ್ಥಿತಾ ।
ಕ್ಷೇತ್ರಸ್ಯ ದಕ್ಷಿಣಂ ಭಾಗಂ ಸಾ ಸದೈವಾಭಿರಕ್ಷತಿ ॥ ೯೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದೇವತಾಧಿಷ್ಠಾನವರ್ಣನಂ"
ನಾಮ ಸಪ್ತತಿತಮೋಽಧ್ಯಾಯಃ

---

೯೩. ಆದುದರಿಂದ ಭವಿಷ್ಯದ್ಜ್ಞಾನವನ್ನು ಅಪೇಕ್ಷಿಸುವ ನರರು ಅಷ್ಟಮಿ, ನವಮಿ, ಅಥವ ಚತುರ್ದಶಿಯ ತಿಥಿಗಳಲ್ಲಿ ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ಕಾಶಿಯಲ್ಲಿರುವ ಈಕೆಯನ್ನು ಪ್ರಯತ್ನದಿಂದ ಅರ್ಚಿಸಬೇಕು.

೯೭. ಈ ಸ್ವಪ್ನೇಶ್ವರಿಗೆ ಪಶ್ಚಿಮದಲ್ಲಿ ದುರ್ಗಾದೇವಿಯು ಪ್ರತಿಷ್ಠಿತಳಾಗಿರುವಳು. ಆಕೆಯು ಸರ್ವಕಾಲದಲ್ಲಿಯೂ ವಾರಾಣಸೀಕ್ಷೇತ್ರದ ದಕ್ಷಿಣಭಾಗವನ್ನು ಚೆನ್ನಾಗಿ ಸಂರಕ್ಷಿಸುತ್ತಿರುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ದೇವತಾಧಿಷ್ಠಾನ ವರ್ಣನ"ವೆಂಬ
ಎಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕಸಪ್ತತಿತಮೋಽಧ್ಯಾಯಃ

### ದುರ್ಗಾಪರಾಕ್ರಮವರ್ಣನಂ

ಅಗಸ್ತ್ಯ ಉವಾಚ:—

ಕಥಂ ದುರ್ಗೇತಿ ನೈ ನಾಮ ದೇವ್ಯಾ ಜಾತಮುಮಾಸುತ ।
ಕಥಂ ಚ ಕಾಶ್ಯಾಂ ಸಾ ಸೇವ್ಯಾ ಸಮಾಚಕ್ಷ್ವೇತಿ ಮಾಮಿಹ ॥ ೧ ॥

ಸ್ಕಂದ ಉವಾಚ:—

ಕಥಯಾಮಿ ಮಹಾಬುದ್ಧೇ ಯಥಾ ಕಲಶಸಂಭವ ।
ದುರ್ಗಾ ನಾಮ ಭವೇದ್ದೇವ್ಯಾ ಯಥಾ ಸೇವ್ಯಾ ಚ ಸಾಧಕೈಃ ॥ ೨ ॥
ದುರ್ಗೋಽನಾಮ ಮಹಾದೈತ್ಯೋ ರುರುದೈತ್ಯಾಂಗಜೋಽಭವತ್ ।
ಯಶ್ಚ ತಪ್ತ್ವಾ ತಪಸ್ತೀವ್ರಂ ಪುಂಭ್ಯೋಽಜೇಯತ್ವಮಾಪ್ತವಾನ್ ॥ ೩ ॥
ತತಸ್ತೇನಾಖಿಲಾ ಲೋಕಾ ಭೂರ್ಭುವಸ್ಸ್ವರ್ಮುಖಾ ಅಪಿ ।
ಸ್ವಸಾತ್ಕೃತಾ ವಿನಿರ್ಜಿತ್ಯ ರಣೇ ಸ್ವಭುಜಸಾರತಃ ॥ ೪ ॥
ಸ್ವಯಮಿಂದ್ರಃ ಸ್ವಯಂ ವಾಯುಃ ಸ್ವಯಂ ಚಂದ್ರಃ ಸ್ವಯಂ ಯಮಃ ।
ಸ್ವಯಮಗ್ನಿಃ ಸ್ವಯಂ ಪಾಶೀ ಧನದೋಽಭೂತ್ಸ್ವಯಂ ಬಲೀ ॥ ೫ ॥

---

### ಕನ್ನಡದ ಅನುವಾದ

#### ದುರ್ಗಾಪರಾಕ್ರಮವರ್ಣನವು

೧. ಅಗಸ್ತ್ಯನು ಹೇಳುತ್ತಾನೆ:—ಪಾರ್ವತೀನಂದನನೆ! ದೇವಿಗೆ ದುರ್ಗೆ ಯೆಂಬ ಹೆಸರು ಹೇಗೆ ಪ್ರಾಪ್ತವಾಯಿತು? ಕಾಶಿಯಲ್ಲಿ ಆಕೆಯನ್ನು ಯಾವ ಪ್ರಕಾರದಿಂದ ಸೇವಿಸಬೇಕು? ಇದೆಲ್ಲವನ್ನೂ ನನಗೆ ವಿವರವಾಗಿ ಹೇಳುವವನಾಗು.

೨. ಸ್ಕಂದನು ಹೇಳುತ್ತಾನೆ:—ಮಹಾಬುದ್ಧಿವಂತನಾದ ಕುಂಭೋದ್ಭವನೆ! ಕೇಳು. ದೇವಿಗೆ ದುರ್ಗೆಯೆಂಬ ಹೆಸರು ಬಂದ ಪ್ರಕಾರವನ್ನೂ ಸಾಧಕರು ಆಕೆಯನ್ನು ಹೇಗೆ ಸೇವಿಸಬೇಕೆಂಬುದನ್ನೂ ನಿರೂಪಿಸುವೆನು.

೩. ಪೂರ್ವದಲ್ಲಿ ರುರುವೆಂಬ ರಾಕ್ಷಸನ ಮಗನಾದ ದುರ್ಗನೆಂಬ ಮಹಾ ದೈತ್ಯನೊಬ್ಬನು ಅವತರಿಸಿದ್ದನು. ಆತನು ಉಗ್ರವಾದ ತಪಸ್ಸನ್ನಾಚರಿಸಿ ಸಮಸ್ತ ಪುರುಷರಿಂದ ಅಜೇಯನಾಗುವಂತೆ ವರವನ್ನು ಪಡೆದಿದ್ದನು.

೪. ಮತ್ತು ಭೂಲೋಕ, ಭುವರ್ಲೋಕ, ಸ್ವರ್ಗಗಳೇ ಮುಂತಾದ ಹದಿನಾಲ್ಕು ಲೋಕಗಳನ್ನೂ ತನ್ನ ಭುಜಪರಾಕ್ರಮದಿಂದ ಜಯಿಸಿ ಆ ರಾಕ್ಷಸನು ಯುದ್ಧದುರ್ಮದನಾಗಿ ಬ್ರಹ್ಮಾಂಡವನ್ನೇ ವಶಗೊಳಿಸಿಕೊಂಡಿದ್ದನು.

೫. ಬಲಶಾಲಿಯಾದ ತಾನೇ ಎಲ್ಲರ ಅಧಿಕಾರಗಳನ್ನೂ ವಹಿಸಿಕೊಂಡು,

ಸ್ಸಯಮೀಶಾನರುದ್ರಾರ್ಕವಸೂನಾಂ ಪದಮಾದದೇ ।
ತತ್ಸಾಧ್ವಸಾದ್ವಿಮುಕ್ತಾನಿ ತಪಾಂಸ್ಯತಿತಪಸ್ವಿಭಿಃ ॥ ೬ ॥
ನ ವೇದಾಧ್ಯಯನಂ ಚಕ್ರುರ್ಬ್ರಾಹ್ಮಣಾಸ್ತದ್ಭಯಾರ್ದಿತಾಃ ।
ಯಜ್ಞವಾಟಾ ವಿನಿರ್ಧ್ವಸ್ತಾಸ್ತದ್ಭೃತ್ಯೈರತಿದುಸ್ಸಹೈಃ ॥ ೭ ॥
ವಿಧ್ವಸ್ತಾ ಬಹುಶಃ ಸಾಧ್ವ್ಯಸ್ತೈರಮಾರ್ಗಕೃತಾಸ್ಪದೈಃ ।
ಪ್ರಸಭಂ ಚ ಪರಸ್ವಾನಿ ಅಪಹೃತ್ಯ ದುರಾಸದಾಃ ॥ ೮ ॥
ಅಭೋಕ್ಷ್ಯಿಷುರ್ದುರಾಚಾರಾಃ ಕ್ರೂರಕರ್ಮಪರಿಗ್ರಹಾಃ ।
ನದ್ಯೋ ವಿಮಾರ್ಗಗಾ ಆಸಞ್ಜ್ವಲಂತಿ ನ ತಥಾಗ್ನಯಃ ॥ ೯ ॥
ಜ್ಯೋತೀಂಷಿ ನ ಪ್ರದೀಪ್ಯಂತಿ ತದ್ಭಯಾಕುಲಿತಾನ್ಯಹೋ ।
ದಿಗ್ವಧೂವಸನಾನ್ಯಾಸನ್ನಿಚ್ಛಾಯಾನಿ ಸಮಂತತಃ ॥ ೧೦ ॥
ಧರ್ಮಕ್ರಿಯಾ ವಿಲುಪ್ತಾಶ್ಚ ಪ್ರವೃತ್ತಾಃ ಸುಕೃತೇತರಾಃ ।
ತ ಏವ ಜಲಧೀಭೂಯ ವವೃಷುರ್ನಿಜಲೀಲಯಾ ॥ ೧೧ ॥

---

ಇಂದ್ರನೂ, ವಾಯುವೂ, ಚಂದ್ರನೂ, ಯಮನೂ, ಅಗ್ನಿಯೂ, ವರುಣನೂ, ಕುಬೇರನೂ ಆಗಿ ರಾಜ್ಯಭಾರವನ್ನು ಮಾಡುತ್ತಿದ್ದನು.

೬. ತಾನೇ ಈಶಾನ, ರುದ್ರ, ಸೂರ್ಯ, ಅಷ್ಟವಸುಗಳ ಪದವಿಗಳನ್ನು ಆಕ್ರಮಿಸಿಕೊಂಡಿದ್ದನು. ಆತನ ಪರಾಕ್ರಮದ ಫಲವಾಗಿ ತಪಸ್ವಿಗಳು ತಮ್ಮ ತಮ್ಮ ತಪೋವ್ರತಗಳನ್ನೂ ಸಹ ತ್ಯಜಿಸಿದ್ದರು.

೭. ಅವನ ಭಯದಿಂದ ಕೂಡಿದವರಾಗಿ ಬ್ರಾಹ್ಮಣರು ತಮ್ಮ ವೇದಾಧ್ಯಯನಗಳನ್ನೂ ಮಾಡುತ್ತಿರಲಿಲ್ಲ. ಅತ್ಯಂತ ದುಸ್ಸಾಧ್ಯರಾದ ಅವನ ಪರಿವಾರದವರಿಂದ ಅವರ ಯಜ್ಞವಾಟಿಕೆಗಳೆಲ್ಲವೂ ಧ್ವಂಸಗೊಳಿಸಲ್ಪಟ್ಟುವು.

೮. ದುರಾಚಾರಗಳಲ್ಲಿ ಸ್ವೇಚ್ಛೆಯಾಗಿ ವರ್ತಿಸಲು ಅವಕಾಶವನ್ನು ಪಡೆದ ಅವರಿಂದ ಅನೇಕ ಸಾಧ್ವೀಮಣಿಯರು ಭಂಗಗೊಳಿಸಲ್ಪಟ್ಟರು. ಬಲಾತ್ಕಾರದಿಂದ ಪರರ ಸ್ವತ್ತುಗಳನ್ನು ಕಸಿದುಕೊಂಡು ಅವರು ದುರ್ಗ್ರಾಹ್ಯರಾಗಿದ್ದರು.

೯. ದುಷ್ಟಾಚಾರನಿರತರೂ ಕ್ರೂರಕರ್ಮಗಳನ್ನು ಮಾಡುವವರೂ ಆಗಿ ಅವರು ಸರ್ವಸ್ವವನ್ನೂ ತಾವೇ ಉಪಭೋಗಿಸುತ್ತಿದ್ದರು. ಅವರ ಭಯದಿಂದ ನದಿಗಳೂ ಉತ್ಪಥಗಾಮಿಗಳಾದುವು. ಅಗ್ನಿಗಳು ಮುನ್ನಿನಂತೆ ಜ್ವಲಿಸುತ್ತಿರಲಿಲ್ಲ.

೧೦. ಅವರ ಭಯದ ವ್ಯಾಕುಲತೆಯಿಂದ ಸೂರ್ಯಚಂದ್ರರೇ ಮೊದಲಾದ ಜ್ಯೋತಿಗಳೂ ಬೆಳಗುತ್ತಿರಲಿಲ್ಲ. ದಿಕ್ಕಾಮಿನಿಯರ ವಸ್ತ್ರಗಳೆಲ್ಲವೂ ಯಾವಾಗಲೂ ಕಾಂತಿಹೀನಗಳಾಗಿರುತ್ತಿದ್ದುವು.

೧೧. ಧರ್ಮಕಾರ್ಯಗಳೆಲ್ಲವೂ ಲೋಪಗೊಂಡುವು. ಅಧರ್ಮಗಳು ಬಹಳವಾಗಿ ವೃದ್ಧಿಯನ್ನು ಹೊಂದಿದುವು. ಅವುಗಳೇ ತಮ್ಮ ಸ್ವೇಚ್ಛೆಯಿಂದ ಮೇಘಾಕಾರಗಳನ್ನು ಹೊಂದಿ ಫಲಗಳೆಂಬ ಮಳೆಯನ್ನು ಕರೆಯುತ್ತಿದ್ದವು.

ಸಸ್ಯಾನಿ ತದ್ಭಯಾತ್ಸೂತೇ ತ್ವನುಪ್ತಾಪಿ ವಸುಂಧರಾ ।
ಸರ್ವೈವ ಫಲಿನೋ ಜಾತಾಸ್ತರವೋಽಪ್ಯವಕೇಶಿನಃ ॥ ೧೨ ॥
ಬಂದೀಕೃತಾಃ ಸುರರ್ಷೀಣಾಂ ಪತ್ನ್ಯಸ್ತೇನಾತಿದರ್ಪಿಣಾ ।
ದಿವೌಕಸಃ ಕೃತಾಸ್ತೇನ ಸಮಸ್ತಾಃ ಕಾನನೌಕಸಃ ॥ ೧೩ ॥
ಮರ್ತ್ಯಾ ಅಮರ್ತ್ಯಾನ್ಸ್ವಗೃಹಂ ಪ್ರಾಪ್ತಾನಪಿ ಭಯಾರ್ದಿತಾಃ ।
ಅಪಿ ಸಂಭಾಷಮಾತ್ರೇಣ ನಾರ್ಚಯಂತಿ ವಿಪಜ್ಜುಷಃ ॥ ೧೪ ॥

ಸ್ಕಂದ ಉವಾಚ :—

ನ ಕೌಲೀನಂ ನ ಸದ್ವೃತ್ತಂ ಮಹತ್ತ್ವಾಯ ಪ್ರಕಲ್ಪತೇ ।
ಏಕಮೇವ ಪದಂ ಶ್ರೇಯಃ ಪದಭ್ರಂಶೋ ಹಿ ಲಾಘವಂ ॥ ೧೫ ॥
ವಿಪದ್ಯಾಪಿ ಹಿ ತೇ ಧನ್ಯಾ ಸ ಯೇ ದೈನ್ಯಪ್ರಣೋದಿತಾಃ ।
ಧನ್ಯೈರ್ಮಲಿನಚಿತ್ತಾನಾಮಾಲಭಂತೇಽಂಗಣಂ ಕ್ವಚಿತ್ ॥ ೧೬ ॥
ಪಂಚತ್ವಮೇವ ಹಿ ವರಂ ಲೋಕೇ ಲಾಘವವರ್ಜಿತಂ ।
ನಾಮರತ್ವಮಪಿ ಶ್ರೇಯೋ ಲಾಘವೇನ ಸಮನ್ವಿತಂ ॥ ೧೭ ॥

---

೧೨. ಆ ರಾಕ್ಷಸೇಶ್ವರನ ಭಯದಿಂದ ಭೂಮಿಯು ಬೀಜವಾಪನೆಯಿಲ್ಲದೆಯೇ ಸಸ್ಯಗಳನ್ನು ಬೆಳೆಸುತ್ತಿದ್ದಳು. ಫಲಕಾಲವನ್ನು ಮೀರಿ ಮುದಿಯಾದ ಮರಗಳೂ ಸಹ ನಿತ್ಯವೂ ಫಲಗಳನ್ನು ಕೊಡುತ್ತಿದ್ದುವು.

೧೩. ಅತ್ಯಂತ ದರ್ಪದಿಂದೊಡಗೂಡಿದ ಅವನಿಂದ ದೇವರ್ಷಿಗಳ ಪತ್ನಿಯರೂ ಬಂಧನಕ್ಕೊಳಗಾಗಿದ್ದರು. ಮತ್ತು ಅವನಿಂದ ಸಮಸ್ತ ದೇವತೆಗಳೂ ನಿರ್ಜಿತರಾಗಿ ವನವಾಸಕ್ಕೆ ಕಳುಹಿಸಲ್ಪಟ್ಟರು.

೧೪. ಅವನ ಭಯದಿಂದ ಮುಳುಗಿದವರೂ, ಅವನಿಂದ ವಿಪತ್ತನ್ನು ನಿರೀಕ್ಷಿಸುವವರೂ ಆಗಿ ಮನುಷ್ಯರು ತಮ್ಮ ಮನೆಗಳಿಗೆ ಸಾಕ್ಷಾತ್ತಾಗಿ ಬಂದ ದೇವತೆಗಳನ್ನೂ ಉಚಿತ ಸ್ವಾಗತದ ಮಾತುಗಳಿಂದಲೂ ಸತ್ಕರಿಸುವಂತಿರಲಿಲ್ಲ.

೧೫. ಸ್ಕಂದನು ಹೇಳುತ್ತಾನೆ:—ಆ ದುರ್ಗದೈತ್ಯನ ಆಳ್ವಿಕೆಯಲ್ಲಿ ಸತ್ಕುಲಜನನವಾಗಲಿ, ಸದಾಚಾರಗಳಾಗಲಿ ಮಹತ್ತ್ವಕ್ಕೆ ಕಾರಣಗಳಲ್ಲ. ಐಶ್ವರ್ಯವೊಂದೇ ಔನ್ನತ್ಯಕ್ಕೆ ಕಾರಣವೂ ದಾರಿದ್ರ್ಯವೊಂದೇ ಪದಭ್ರಂಶಕ್ಕೆ ಕಾರಣವೂ ಆಗಿದ್ದುವು.

೧೬. ವಿಪತ್ತುಗಳಲ್ಲಿ ಸಿಕ್ಕಿದ್ದರೂ ಸಹ ಯಾರು ದೌರ್ಭಾಗ್ಯದಿಂದ ಚೋದಿತರಾಗಿ ಧನಾಶೆಯಿಂದ ದುಷ್ಟಚಿತ್ತವುಳ್ಳವರ ಮನೆಗಳ ಬಾಗಿಲುಗಳನ್ನು ಕಾಯುವುದಿಲ್ಲವೋ, ಅವರೇ ಪರಮಧನ್ಯರೆನಿಸುವರು.

೧೭. ಮರ್ಯಾದೆಯನ್ನು ಕಳೆದುಕೊಂಡವನಿಗೆ ಲೋಕದಲ್ಲಿ ಮರಣವೇ ಶ್ರೇಯಸ್ಕರವು. ಅವಮರ್ಯಾದೆಯಿಂದ ಕೂಡಿದ ಸ್ವರ್ಗಲೋಕವಾಸವೂ ಸಹ ಮನುಷ್ಯನಿಗೆ ಎಂದೂ ಶ್ರೇಯಸ್ಸನ್ನುಂಟುಮಾಡಲಾರದು.

ತ ಏವ ಲೋಕೇ ಜೀವಂತಿ ಪುಣ್ಯಭಾಜಸ್ತ ಏವ ವೈ ।
ವಿಪದ್ಯಾಪಿ ನ ಗಾಂಭೀರ್ಯಂ ಯಚ್ಚೇತೋಽಬ್ಧಿಃ ಪರಿತ್ಯಜೇತ್ ॥ ೧೮ ॥
ಕದಾಚಿತ್ಸಂಪದುದಯಃ ಕದಾಚಿದ್ವಿಪದುದ್ಗಮಃ ।
ದೈವಾದ್ದ್ವಯಮಪಿ ಪ್ರಾಪ್ಯ ಧೀರೋ ಧೈರ್ಯಂ ನ ಹಾಪಯೇತ್ ॥ ೧೯ ॥
ಉದಯಾನುದಯೌ ಪ್ರಾಜ್ಞೈರ್ದೃಷ್ಟವ್ಯೌ ಪುಷ್ಪದಂತಯೋಃ ।
ಸದೈಕರೂಪತಾಽತ್ಯಾಜ್ಯಾ ಹರ್ಷಾಹರ್ಷೌ ತತೋಽಧ್ರುವೌ ॥ ೨೦ ॥
ಯಸ್ತ್ವಾಪದಂ ಸಮಾಸಾದ್ಯ ದೈನ್ಯಗ್ರಸ್ತೋ ವಿಪದ್ಯತೇ ।
ತಸ್ಯ ಲೋಕದ್ವಯಂ ನಷ್ಟಂ ತಸ್ಮಾದ್ದೈನ್ಯಂ ವಿವರ್ಜಯೇತ್ ॥ ೨೧ ॥
ಆಪದ್ಯಪಿ ಹಿ ಯೇ ಧೀರಾ ಇಹಲೋಕೇ ಪರತ್ರ ಚ ।
ನ ತಾನ್ಪುನಃ ಸ್ಪೃಶೇದಾಪತ್ತದ್ಧೈರ್ಯೇಣಾವಧೀರಿತಾ ॥ ೨೨ ॥
ಭ್ರಷ್ಟರಾಜ್ಯಾಶ್ಚ ವಿಬುಧಾ ಮಹೇಶಂ ಶರಣಂ ಗತಾಃ ।
ಸರ್ವಜ್ಞೇನ ತತೋ ದೇವೀ ಪ್ರೇರಿತಾಽಸುರಮರ್ದನೇ ॥ ೨೩ ॥

---

೧೮. ಯಾವ ಪುಣ್ಯಪುರುಷರ ಚಿತ್ತವೆಂಬ ಮಹಾಸಮುದ್ರವು ಮಹಾವಿಪತ್ತುಗಳಲ್ಲಿಯೂ ತನ್ನ ಗಾಂಭೀರ್ಯವನ್ನು ತ್ಯಜಿಸುವುದಿಲ್ಲವೊ, ಅವರೇ ಲೋಕದಲ್ಲಿ ಜೀವಂತರು. ಅವರೇ ಪುಣ್ಯಭಾಗಿಗಳು.

೧೯. ಕೆಲವುವೇಳೆ ಐಶ್ವರ್ಯವು ಪ್ರಾಪ್ತವಾಗುವುದು. ಕೆಲವು ಸಮಯಗಳಲ್ಲಿ ವಿಪತ್ತುಗಳೇ ಮೇಲೆ ಮೇಲೆ ಒದಗುವುವು. ಅದೃಷ್ಟದ ಪರಿಣಾಮವಾಗಿ ಎರಡನ್ನೂ ಹೊಂದಿದ ಧೀರನು ತನ್ನ ಮನಸ್ಸಿನ ಸ್ಥೈರ್ಯವನ್ನು ಬಿಡಬಾರದು.

೨೦. ಪ್ರಾಜ್ಞರಾದವರು ಸೂರ್ಯಚಂದ್ರರ ಉದಯಾಸ್ತಮಾನಗಳನ್ನು ಕುರಿತು ಚಿಂತಿಸಬೇಕು. ಅವುಗಳಂತೆಯೇ ಹರ್ಷದುಃಖಗಳೂ ಕ್ಷಣಿಕಗಳಾದುದರಿಂದ ಸೂರ್ಯಚಂದ್ರರಂತೆ ತಾವೂ ತಮ್ಮ ಸತ್ಯಸ್ವರೂಪವನ್ನು ತ್ಯಜಿಸಬಾರದು.

೨೧. ಯಾವನು ಆಪತ್ತುಗಳು ಬರಲು ದೈನ್ಯದಿಂದ ಕೂಡಿದವನಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವನೊ, ಅವನಿಗೆ ಉಭಯಲೋಕಗಳೂ ನಷ್ಟಗಳಾಗುವುವು. ಆದುದರಿಂದ ಮನಸ್ಸಿನ ದೈನ್ಯವನ್ನು ಯಾವಾಗಲೂ ಬಿಡಬೇಕು.

೨೨. ಆಪತ್ಕಾಲದಲ್ಲಿಯೂ ಯಾವ ಮಾನವರು ಧೈರ್ಯವನ್ನವಲಂಬಿಸಿರುವರೊ, ಅವರ ಧೈರ್ಯದಿಂದ ಪರಾಜಿತವಾದ ವಿಪತ್ತುಗಳು ಇಹದಲ್ಲಾಗಲಿ ಪರದಲ್ಲಾಗಲಿ ಪುನಃ ಅವರನ್ನು ಪೀಡಿಸುವುದಿಲ್ಲ.

೨೩. ಇಂತು ರಾಜ್ಯಾಧಿಕಾರವನ್ನು ಕಳೆದುಕೊಂಡ ದೇವತೆಗಳು ಮಹೇಶ್ವರನನ್ನು ಶರಣುಹೊಕ್ಕರು. ಸರ್ವಜ್ಞನಾದ ಆತನು ವರದ ಸೂಕ್ಷ್ಮವನ್ನರಿತು ರಾಕ್ಷಸನನ್ನು ನಿಗ್ರಹಿಸಲು ದೇವಿಯನ್ನು ಪ್ರೇರಿಸಿದನು.

ಮಹೇಶ್ವರೀಂ ಸಮಾಸಾದ್ಯ ಭವಾನ್ಯಾಜ್ಞಾಂ ಪ್ರಹೃಷ್ಟವತ್ ।
ಅಮರ್ತ್ಯಾನಾಮಭಯಂ ದತ್ವಾ ಸಮರಾಯೋಪಚಕ್ರಮೇ ॥ ೨೪ ॥
ಕಾಲರಾತ್ರಿಂ ಸಮಾಹೂಯ ಕಾಂತ್ಯಾ ತ್ರೈಲೋಕ್ಯಸುಂದರೀಂ ।
ಪ್ರೇಷಯಾಮಾಸ ರುದ್ರಾಣೀ ತಮಾಹ್ವಾತುಂ ಸುರದ್ರುಹಂ ॥ ೨೫ ॥
ಕಾಲರಾತ್ರೀ ಸಮಾಸಾದ್ಯ ತಂ ದೈತ್ಯಂ ದುಷ್ಟಚೇಷ್ಟಿತಂ ।
ಉವಾಚ ದೈತ್ಯಾಧಿಪತೇ ತ್ಯಜ ತ್ರೈಲೋಕ್ಯಸಂಪದಂ ॥ ೨೬ ॥
ತ್ರಿಲೋಕೀಂ ಲಭತಾಮಿಂದ್ರಸ್ತ್ವಂ ತು ಯಾಹಿ ರಸಾತಲಂ ।
ಪ್ರವರ್ತಂತಾಂ ಕ್ರಿಯಾಃ ಸರ್ವಾ ವೇದೋಕ್ತಾ ವೇದವಾದಿನಾಂ ॥ ೨೭ ॥
ಅಥ ಚೇದ್ಗರ್ವಲೇಶೋಽಸ್ತಿ ತದಾಯಾಹಿ ಸಮಾಜಯೇ ।
ಅಥವಾ ಜೀವಿತಾಕಾಂಕ್ಷೀ ತದಿಂದ್ರಂ ಶರಣಂ ವ್ರಜ ॥ ೨೮ ॥
ಇತಿ ವಕ್ತುಂ ಮಹಾದೇವ್ಯಾ ಮಹಾಮಂಗಲರೂಪಯಾ ।
ತ್ವದಂತಿಕೇ ಪ್ರೇಷಿತಾಹಂ ಮೃತ್ಯುಸ್ತೇ ತದುಪೇಕ್ಷಯಾ ॥ ೨೯ ॥

---

೨೪. ಮಹಾದೇವನ ಆಜ್ಞೆಯನ್ನು ಸಂತೋಷದಿಂದ ಸ್ವೀಕರಿಸಿ ಭವಾನೀ ದೇವಿಯು ದೇವತೆಗಳೆಲ್ಲರಿಗೂ ಅಭಯವನ್ನಿತ್ತು ಆ ರಾಕ್ಷಸನೊಡನೆ ಯುದ್ಧವನ್ನು ಮಾಡಲನುವಾಗಿ ನಿಂತಳು.

೨೫. ದೇಹಕಾಂತಿಯಿಂದ ತ್ರಿಲೋಕಸುಂದರಿಯೆನಿಸಿದ ಕಾಲರಾತ್ರಿಯನ್ನು ಹತ್ತಿರಕ್ಕೆ ಕರೆದು ಪಾರ್ವತಿಯು ಆ ರಾಕ್ಷಸನನ್ನು ಯುದ್ಧಕ್ಕೆ ಕರೆಯುವಂತೆ ಹೇಳಿಕೊಟ್ಟು ಕಳುಹಿಸಿದಳು.

೨೬. ಕಾಲರಾತ್ರಿಯಾದರೊ ದುರಾಚಾರನಿರತನಾಗಿದ್ದ ಆ ದೈತ್ಯನ ಬಳಿಗೆ ಬಂದು ಹೇಳತೊಡಗಿದಳು. ಎಲೈ ರಾಕ್ಷಸಾಧಿಪತಿಯೇ! ನಿನ್ನ ಅಧೀನದಲ್ಲಿರುವ ಮೂರುಲೋಕಗಳ ಐಶ್ವರ್ಯವೆಲ್ಲವನ್ನೂ ತ್ಯಜಿಸು.

೨೭. ಈ ಸ್ವರ್ಗ, ಮರ್ತ್ಯ, ಪಾತಾಲಲೋಕಗಳ ಆಧಿಪತ್ಯವನ್ನು ಮಹೇಂದ್ರನು ಪಡೆಯಲಿ. ನೀನು ರಸಾತಲಕ್ಕೆ ಹೊರಡು. ವೇದವಾದಿಗಳಾದ ಆಸ್ತಿಕಜನರ ವೇದೋಕ್ತಕರ್ಮಗಳೆಲ್ಲವೂ ಎಂದಿನಂತೆ ನಡೆದುಬರಲಿ.

೨೮. ಅಥವ ನಿನಗೇನಾದರೂ ಪೌರುಷವಿರುವುದಾದರೆ ಯುದ್ಧವನ್ನು ಮಾಡಲು ಮುಂದಕ್ಕೆ ಬಾ. ಇಲ್ಲದಿದ್ದರೆ ಪ್ರಾಣಗಳ ಮೇಲಿನ ಆಶೆಯಿಂದ ಮಹೇಂದ್ರನನ್ನೇ ಶರಣು ಹೋಗುವವನಾಗು.

೨೯. ಈ ಮಾತುಗಳನ್ನು ಹೇಳುವುದಕ್ಕಾಗಿಯೇ ನಾನು ಸರ್ವಮಂಗಳಸ್ವರೂಪಿಣಿಯಾದ ಮಹಾದೇವಿಯಿಂದ ನಿನ್ನ ಬಳಿಗೆ ಕಳುಹಿಸಲ್ಪಟ್ಟಿರುವೆನು. ಈ ಸಂದೇಶವನ್ನು [illegible] ನಿನಗೆ [illegible].

ಅತೋ ಯದುಚಿತಂ ಕರ್ತುಂ ತದ್ವಿಧೇಹಿ ಮಹಾಸುರ ।
ಪರಂ ಹಿತಂ ಚೇಚ್ಛೃಣುಯಾಜ್ಜೀವಗ್ರಾಹಂ ತತೋ ವ್ರಜ ॥ ೩೦ ॥
ಇತ್ಯಾಕರ್ಣ್ಯ ವಚೋ ದೇವ್ಯಾ ಮಹಾಕಾಲ್ಯಾಃ ಸ ದೈತ್ಯರಾಟ್ ।
ಪ್ರಜಜ್ವಾಲ ತದಾ ಕ್ರೋಧಾದ್ಗೃಹ್ಯತಾಂ ಗೃಹ್ಯತಾಮಿಯಂ ॥ ೩೧ ॥
ತ್ರೈಲೋಕ್ಯಮೋಹಿನೀ ಹ್ಯೇಷಾ ಪ್ರಾಪ್ತಾ ಮದ್ಭಾಗ್ಯಗೌರವೈಃ ।
ತ್ರೈಲೋಕ್ಯರಾಜ್ಯಸಂಪತ್ತಿವಲ್ಲ್ಯಾಃ ಫಲಮಿದಂ ಮಹತ್ ॥ ೩೨ ॥
ಏತದರ್ಥಂ ಹಿ ದೇವರ್ಷಿನೃಪಾ ಬಂದೀಕೃತಾ ಮಯಾ ।
ಅನಾಯಾಸೇನ ಮೇ ಪ್ರಾಪ್ತಾ ಗೃಹಮೇಷಾ ಶುಭೋದಯಾತ್ ॥ ೩೩ ॥
ಅವಶ್ಯಂ ಯಸ್ಯ ಯೋಗ್ಯಂ ಯತ್ತತ್ತಸ್ಯೇಹೋಪತಿಷ್ಠತೇ ।
ಅರಣ್ಯೇ ವಾ ಗೃಹೇ ವಾಪಿ ಯತೋ ಭಾಗ್ಯಸ್ಯ ಗೌರವಾತ್ ॥ ೩೪ ॥
ಅಂತಃಪುರಚರಾ ಏತಾಂ ನಯಂತ್ವಂತಃಪುರಂ ಮಹತ್ ।
ಅನಯಾ ಸದಲಂಕೃತ್ಯಾ ಮಮ ರಾಷ್ಟ್ರಮಲಂಕೃತಂ ॥ ೩೫ ॥

---

೩೦. ಎಲೈ ಮಹಾಸುರನೆ! ಆದುದರಿಂದ ನಿನಗೆ ಯಾವುದು ಉಚಿತವೆಂದು ತೋರುವುದೊ ಅದನ್ನು ಮಾಡು. ಆದರೆ ನನ್ನ ಹಿತವಾಕ್ಯವನ್ನು ಕೇಳುವೆಯಾದರೆ ಆಕೆಯನ್ನೇ ಶರಣುಹೊಕ್ಕು ಜೀವವನ್ನುಳಿಸಿಕೊ.

೩೧. ಮಹಾಕಾಳರಾತ್ರೀದೇವಿಯ ಈ ಮಾತುಗಳೆಲ್ಲವನ್ನೂ ಕೇಳುತ್ತಿರುವಂತೆಯೇ ಆ ರಾಕ್ಷಸರಾಜನು ಕೋಪದಿಂದ ಉರಿಯುತ್ತ ಪರಿವಾರದವರನ್ನು ಕುರಿತು ಇಂತೆಂದನು. ಇವಳನ್ನು ಹಿಡಿಯಿರಿ, ಹಿಡಿಯಿರಿ.

೩೨. ಮೂರು ಲೋಕಗಳನ್ನೂ ಮೋಹಗೊಳಿಸುತ್ತಿರುವ ಇವಳು ಇಂದು ನನ್ನ ಭಾಗ್ಯಗೌರವದ ಫಲವಾಗಿ ಲಭಿಸಿದಳು. ನನ್ನ ತ್ರಿಲೋಕಾಧಿಪತ್ಯವೆಂಬ ಬಳ್ಳಿಗೆ ಇವಳ ಲಾಭವೇ ಮಹತ್ತರವಾದ ಫಲವಾಗಿರುವುದು.

೩೩. ಇವಳಿಗೋಸ್ಕರವಾಗಿಯೇ ದೇವತೆಗಳನ್ನೂ, ಮಹರ್ಷಿಗಳನ್ನೂ, ರಾಜರನ್ನೂ ನಾನು ಸೆರೆಯಲ್ಲಿಡಿಸಿದೆನು. ನನ್ನ ಪೂರ್ವಪುಣ್ಯದ ಶುಭೋದಯದಿಂದಲೇ ಇವಳು ಅನಾಯಾಸವಾಗಿ ನನ್ನ ಮನೆಯಲ್ಲಿಯೇ ಸಿಕ್ಕಿರುವಳು.

೩೪. ಯಾವನಿಗೆ ಪೂರ್ವ ಪುಣ್ಯದ ಬಲದಿಂದ ಯಾವುದು ಲಭಿಸಬೇಕಾಗಿರುವುದೊ, ಅವನು ಅರಣ್ಯದಲ್ಲಿದ್ದರೂ, ಮನೆಯಲ್ಲಿದ್ದರೂ ಆ ಕರ್ಮಫಲವು ಅವನಿಗೆ ಅವಶ್ಯಕವಾಗಿ ಲಭಿಸುವುದು.

೩೫. ನನ್ನ ಅಂತಃಪುರದ ದಾಸಿಯರು ಇವಳನ್ನು ವಿಶಾಲವಾದ ಅಂತಃಪುರಕ್ಕೆ ಕರೆದೊಯ್ಯಲಿ. ಈ ಸ್ತ್ರೀರತ್ನವೆಂಬ ಭೂಷಣದಿಂದ ನನ್ನ ರಾಷ್ಟ್ರವೆಲ್ಲವೂ ಅಲಂಕೃತವಾಯಿತೆಂದು ತಿಳಿಯುವೆನು.

ಅಹೋ ಮಹೋದಯಶ್ಚಾದ್ಯ ಜಾತೋ ಮಮ ಮಹಾಮತೇಃ ।
ಕೇವಲಂ ನ ಮಮೈಕಸ್ಯ ಸರ್ವದೈತ್ಯಾನ್ವಯಸ್ಯ ಚ ॥ ೩೬ ॥
ನೃತ್ಯಂತು ಪಿತರಶ್ಚಾದ್ಯ ಮೋದಂತಾಂ ಬಾಂಧವಾಃ ಸುಖಂ ।
ಮೃತ್ಯುಃ ಕಾಲೋಽಂತಕೋ ದೇವಾಃ ಪ್ರಾಪ್ನುಯಾಂತ್ವದ್ಯ ಮೇ ಭಯಂ ॥
ಇತಿ ಯಾವತ್ಸಮಾಯಾತಾಸ್ತಾಂ ನೇತುಂ ಸೌವಿದಲ್ಲಕಾಃ ।
ತಾವತ್ತಯಾ ಕಾಲರಾತ್ರ್ಯಾ ಪ್ರತ್ಯುಕ್ತೋ ದೈತ್ಯಪುಂಗವಃ ॥ ೩೮ ॥

ಕಾಲರಾತ್ರ್ಯುವಾಚ :—

ದೈತ್ಯರಾಜ ಮಹಾಪ್ರಾಜ್ಞ ನೈತದ್ಯುಕ್ತಂ ಭವಾದೃಶಾಂ ।
ವಯಂ ದೂತ್ಯಃ ಪರವಶಾ ರಾಜನೀತಿವಿದುತ್ತಮ ॥ ೩೯ ॥
ಅಲ್ಪೋಽಪಿ ದೂತಸಂಬಾಧಾಂ ನ ವಿದಧ್ಯಾತ್ಕದಾಚನ ।
ಕಿಂ ಪುನರ್ಯೇ ಭವಾದೃಕ್ಷಾ ಮಹಾಂತೋ ಬಲಿನೋಽಧಿಪಾಃ ॥ ೪೦ ॥
ದೂತೀಷು ಕೋಽನುರಾಗೋಽಯಂ ಮಹಾರಾಜಾಲ್ಪಿಕಾಸ್ವಿಹ ।
ಅನಾಯಾಸೇನ ಚ ವಯಮಾಯಾಸ್ಯಾಮಸ್ತದಾಗಮಾತ್ ॥ ೪೧ ॥

---

೩೬. ಮಹಾ ಪ್ರಾಜ್ಞನಾದ ನನಗೆ ಇಂದು ಮಹೋತ್ಸವವೇ ಉಂಟಾದಂತಾಯಿತು. ಕೇವಲ ನನಗೆ ಮಾತ್ರವೇ ಅಲ್ಲ. ಸಮಸ್ತ ರಾಕ್ಷಸಕುಲಕ್ಕೂ ಇಂದಿನ ದಿನವು ಶುಭದಿವಸವೇ ಎಂದು ನಿಶ್ಚಯಿಸುವೆನು.

೩೭. ಇಂದು ಪಿತೃದೇವತೆಗಳೆಲ್ಲರೂ ನರ್ತನಗಳನ್ನು ಮಾಡಲಿ. ಬಂಧು ಬಳಗದವರೆಲ್ಲರೂ ಸೌಖ್ಯಸಂತೋಷಗಳುಳ್ಳವರಾಗಲಿ. ಮೃತ್ಯುವಿಗೂ, ಕಾಲನಿಗೂ, ಅಂತಕನಿಗೂ, ದೇವತೆಗಳಿಗೂ ಇಂದು ನನ್ನ ಭಯವುಂಟಾಗಲಿ.

೩೮. ಇಂತೆಂದ ಅವನ ಮಾತುಗಳನ್ನು ಕೇಳಿ ಅಂತಃಪುರದ ಕಂಚುಕಿಗಳು ಅವಳನ್ನು ಕರೆದುಕೊಂಡು ಹೋಗಲು ಬರುತ್ತಿರುವಂತೆಯೇ ಆ ಕಾಲರಾತ್ರಿಯು ರಾಕ್ಷಸೇಂದ್ರನನ್ನು ಕುರಿತು ಇಂತೆಂದು ಪ್ರತ್ಯುತ್ತರವನ್ನಿತ್ತಳು.

೩೯. ಕಾಲರಾತ್ರಿಯು ಹೇಳುತ್ತಾಳೆ:—ಎಲೈ ರಾಕ್ಷಸೇಂದ್ರನೆ! ನೀನು ಮಹಾ ಪ್ರಾಜ್ಞನು. ರಾಜನೀತಿವಿಶಾರದರಲ್ಲಿ ಅಗ್ರಗಣ್ಯನು. ನಿನ್ನಂತಹವರಿಗೆ ಈ ಕಾರ್ಯವು ತಕ್ಕುದಲ್ಲ. ನಾವು ಸ್ವಾಮಿನಿಯ ಸಂದೇಶವನ್ನು ತಿಳಿಸುವ ದೂತಿಕೆಯರು ಮಾತ್ರ. ಅವಳಿಗೆ ಪರವಶರು.

೪೦. ಅಲ್ಪರಾಜನಾದರೂ ಎಂದಿಗೂ ದೂತನಿಗೆ ಯಾವ ವಿಧವಾದ ಬಾಧೆಯನ್ನೂ ಮಾಡಬಾರದೆಂದಮೇಲೆ ಮಹಾತ್ಮರೂ, ಬಲಿಷ್ಠರೂ, ಅಧಿಕಾರಸಹಿತರೂ ಆದಂತಹ ನಿನ್ನ ಸಮಾನರ ವಿಷಯವನ್ನು ಬೇರೆ ಹೇಳಬೇಕೆ?

೪೧. ಮಹಾರಾಜನೆ! ಅಲ್ಪರಾದ ನನ್ನಂತಹ ದೂತಿಕೆಯರಲ್ಲಿ ನಿನಗೇಕೆ ಇಂತಹ ಅನುರಾಗ? ... ನಾವು ... ನಿನ್ನಲ್ಲಿಗೆ ಬರುವ

ವಿಜಿತ್ಯ ಸಮರೇ ತಾಂ ತು ಸ್ವಾಮಿನೀಂ ಮಮ ದೈತ್ಯಪ ।
ಮಾದೃಶೀನಾಂ ಸಹಸ್ರಾಣಿ ಪರಿಭುಂಕ್ಷ್ವ ಯಥೇಚ್ಛಯಾ ॥ ೪೨ ॥
ಅದ್ಯೈವ ತೇ ಮಹಾಸೌಖ್ಯಂ ಭಾವಿ ತಸ್ಯಾ ವಿಲೋಕನಾತ್ ।
ಬಾಂಧವಾನಾಂ ಸುಖಂ ತೇಽದ್ಯ ಭವಿತಾ ಸಹಪೂರ್ವಜೈಃ ॥ ೪೩ ॥
ಸಂಪತ್ಸ್ಯಂತೇಽದ್ಯ ತೇ ಕಾಮಾಃ ಸರ್ವೇ ಯೇ ಚಿರಚಿಂತಿತಾಃ ।
ಅಬಲಾ ಸಾ ಚ ಮುಗ್ಧಾ ಚ ತಸ್ಯಾಸ್ತ್ರಾತಾ ನ ಕಶ್ಚನ ॥ ೪೪ ॥
ಸರ್ವರೂಪಮಯೀ ಚೈವ ತಾಂ ಭವಾನ್ದ್ರಷ್ಟುಮರ್ಹತಿ ।
ಅಹಂ ಹಿ ದರ್ಶಯಿಷ್ಯಾಮಿ ಯತ್ರ ಸಾಽಸ್ತಿ ಜಗತ್ಪನಿಃ ॥ ೪೫ ॥
ಧೃತಾಯಾಮಪಿ ಚೈಕಸ್ಯಾಂ ಕಸ್ತೇ ಕಾಮೋ ಭವಿಷ್ಯತಿ ।
ಅಹಂ ತೇ ಸನ್ನಿಧಿಂ ನೈವ ತ್ಯಕ್ಷ್ಯಾಮ್ಯದ್ಯದಿನಾವಧಿ ॥ ೪೬ ॥
ತತೋ ನಿವಾರಯೈತಾನ್ಮಾಮಾದಿತ್ಸೂನ್ಸೌವಿದಲ್ಲಕಾನ್ ।
ಇತಿ ಶ್ರುತ್ವಾ ವಚಸ್ತಸ್ಯಾಃ ಸ ಕಾಮುಕ್ರೋಧನೋಹಿತಃ ॥ ೪೭ ॥

---

ಳಾದರೆ ಅವಳೊಡನೆಯೇ ನಾವೂ ಸಹ ಅನಾಯಾಸವಾಗಿಯೇ ನಿನ್ನ ಅಂತಃಪುರಕ್ಕೆ ಬರುವೆವು.

೪೨. ದೈತ್ಯೇಂದ್ರನೇ! ನನ್ನ ಒಡತಿಯಾದ ಆ ದೇವಿಯನ್ನು ಯುದ್ಧದಲ್ಲಿ ಜಯಿಸಿದರೆ ನನ್ನಂತಹ ಸಾವಿರಾರು ದಾಸಿಯರನ್ನು ನೀನು ಮನಬಂದಂತೆ ಉಪಭೋಗಿಸಲು ಶಕ್ತನಾಗುವೆ.

೪೩. ಆಕೆಯನ್ನು ನೋಡುವುದರಿಂದ ಇಂದೇ ನಿನಗೆ ಮಹಾ ಸೌಖ್ಯವು ಪ್ರಾಪ್ತವಾಗಲಿರುವುದು. ನಿನ್ನ ಬಂಧುಬಳಗದವರಿಗೂ ಅವರ ಪೂರ್ವಜರಿಗೂ ಸಹ ಸುಖವುಂಟಾಗುವುದು.

೪೪–೪೫. ನೀನು ಬಹುಕಾಲದಿಂದಲೂ ಮನಸ್ಸಿನಲ್ಲಿ ಅಪೇಕ್ಷಿಸುತ್ತಿದ್ದ ಅಭಿಲಾಷೆಗಳೆಲ್ಲವೂ ಇಂದು ನಿನಗೆ ಕೈಗೂಡುವುವು. ನಮ್ಮ ರಾಣಿಯಾದರೊ, ಅಬಲೆಯು (ವಿಷ್ಣುವಿನಂತೆ ಪರಾಕ್ರಮವಂತಳು ಅಥವ ಅಪರಿಮಿತ ಬಲಶಾಲಿಯು) ಮತ್ತು ಮುಗ್ಧೆಯು (ಸರ್ವಾಂಗ ಸುಂದರಿಯು). ಅವಳಿಗೆ ಬೇರೆ ಯಾರೊಬ್ಬ ರಕ್ಷಕನೂ ಇರುವುದಿಲ್ಲ. ಅವಳು ಸರ್ವರೂಪವನ್ನು ಧರಿಸಿರುವಳು. ಅವಳನ್ನು ನೀನು ಅವಶ್ಯಕವಾಗಿ ನೋಡಲೇಬೇಕು. ಲೋಕದಲ್ಲಿ ಸೌಂದರ್ಯದ ಗಣಿಯೆನಿಸಿದ ಆಕೆಯಿರುವ ಸ್ಥಳವನ್ನು ನಾನೇ ನಿನಗೆ ತೋರಿಸುವೆನು.

೪೬. ಏಕಾಕಿನಿಯಾದ ನನ್ನನ್ನುಮಾತ್ರ ಹಿಡಿದುಕೊಂಡುದರಿಂದ ನಿನಗೆ ಯಾವ ಪ್ರಯೋಜನವಾದೀತು? ನಾನೇ ಇಂದು ಮೊದಲುಕೊಂಡು ನಿನ್ನ ಸನ್ನಿಧಿಯನ್ನೆಂದಿಗೂ ತ್ಯಜಿಸುವುದಿಲ್ಲ.

೪೭–೪೮. ಆದುದರಿಂದ ನನ್ನನ್ನು ಕರೆದುಕೊಂಡುಹೋಗಲು ಸುತ್ತುವರೆ

ತಾಮೇವ ಬಹ್ವಮಂಸ್ತೈಕಾಂ ದೂತೀಂ ಮೃತ್ಯೋರಿಪಾಸುರಃ ।
ಶುದ್ಧಾಂತರಕ್ಷಿಣಶ್ಚೈತಾಂ ಶುದ್ಧಾಂತಂ ಪ್ರಾಪಯಂತ್ವರಂ ॥ ೪೮ ॥
ಇತಿ ತೇನ ಸಮಾದಿಷ್ಟಾಃ ಸರ್ವೇ ವರ್ಷವರಾ ಮುನೇ ।
ತಾಂ ಧರ್ತುಮುದ್ಯಮಂ ಚಕ್ರುರ್ಬಲೇನ ಬಲವತ್ತರಾಃ ॥ ೪೯ ॥
ಸಾ ತಾನ್ಭಸ್ಮೀಚಕಾರಾಶು ಹುಂಕಾರಜನಿತಾಗ್ನಿನಾ ।
ತತೋ ದೈತ್ಯಪತಿಃ ಕ್ರುದ್ಧೋ ದೃಷ್ಟ್ವಾ ತಾನ್ಭಸ್ಮಸಾತ್ಕೃತಾನ್ ॥ ೫೦ ॥
ಕ್ಷಣೇನೈವ ತಯಾ ದೂತ್ಯಾ ದೈತ್ಯಾನ್ಸ್ತ್ರ್ಯಯುತಸಂಮಿತಾನ್ ।
ದೃಶಾ ವ್ಯಾಪಾರಯಾಮಾಸ ದುರ್ಧರಂ ದುರ್ಮುಖಂ ಖರಂ ॥ ೫೧ ॥
ಸೀರಪಾಣಿಂ ಪಾಶಪಾಣಿಂ ಸುರೇಂದ್ರದಮನಂ ಹನುಂ ।
ಯಜ್ಞಾರಿಂ ಖಡ್ಗಲೋಮಾನಮುಗ್ರಾಸ್ಯಂ ದೇವಕಂಪನಂ ॥ ೫೨ ॥
ಬದ್ಧ್ವಾ ಪಾಶೈರಿಮಾಂ ದುಷ್ಟಾಮಾನಯಂತ್ವಾಶು ದಾನವಾಃ ।
ವಿಧ್ವಸ್ತಕೇಶವೇಶಾಂ ಚ ವಿಸ್ರಸ್ತಾಂಬರಭೂಷಣಾಂ ॥ ೫೩ ॥

---

ದಿರುವ ಇವರನ್ನೆಲ್ಲ ಹಿಂದಕ್ಕೆ ಕಳಿಸು. ಇಂತೆಂದ ಆ ಕಾಳರಾತ್ರಿಯ ಮಾತುಗಳನ್ನು ಕೇಳಿ ಕಾಮದಿಂದಲೂ ಕೋಪದಿಂದಲೂ ಮೋಹಗೊಂಡ ಆ ರಾಕ್ಷಸನು ಮೃತ್ಯುದೇವತೆಯ ದೂತಿಕೆಯಂತಿದ್ದ ಏಕಾಕಿನಿಯಾದ ಅವಳನ್ನೇ ಬಹುವಾಗಿ ಅಪೇಕ್ಷಿಸುವವನಾದನು. ಮತ್ತು ತನ್ನ ಅಂತಃಪುರದ ರಕ್ಷಕರನ್ನು ಕರೆದು "ಇವಳನ್ನು ಶೀಘ್ರವಾಗಿ ಅಂತಃಪುರದೊಳಕ್ಕೆ ಕೊಂಡುಹೋಗಿರಿ" ಎಂದು ಅಪ್ಪಣೆಯನ್ನಿತ್ತನು. ಎಲೈ ಮುನಿಯೆ! ಇಂತೆಂದು ಆತನಿಂದ ಆದೇಶವನ್ನು ಪಡೆದವರಾಗಿ ಅತ್ಯಂತ ಬಲಶಾಲಿಗಳಾದ ಅಂತಃಪುರದ ನಪುಂಸಕರೆಲ್ಲರೂ ಅವಳನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಹೋಗಲು ಪ್ರಯತ್ನವನ್ನು ಮಾಡಿದರು.

೫೦. ಆಕೆಯಾದರೊ, ಅವರನ್ನೆಲ್ಲ ಕ್ಷಣಮಾತ್ರದಲ್ಲಿಯೇ ಹುಂಕಾರದಿಂದ ಜನಿಸಿದ ಬೆಂಕಿಯಿಂದ ಸುಟ್ಟುಬಿಟ್ಟಳು. ಅವರೆಲ್ಲರೂ ಭಸ್ಮೀಭೂತರಾದುದನ್ನು ನೋಡಿ ಆ ರಾಕ್ಷಸೇಶ್ವರನು ಮಹಾಕೋಪವನ್ನು ತಾಳಿದನು.

೫೧–೫೨. ಮುವ್ವತ್ತುಸಾವಿರ ಸಂಖ್ಯೆಯುಳ್ಳ ತನ್ನ ರಾಕ್ಷಸರನ್ನೆಲ್ಲ ಆ ದೂತಿಯು ನಾಶಮಾಡಿದುದನ್ನು ಕಂಡು ದುರ್ಗರಾಕ್ಷಸನು ದುರ್ಧರ, ದುರ್ಮುಖ, ಖರ, ಸೀರಪಾಣಿ, ಪಾಶಪಾಣಿ, ಸುರೇಂದ್ರಶತ್ರು, ಹನು, ಯಜ್ಞಶತ್ರು, ಖಡ್ಗಲೋಮ, ಉಗ್ರಾಸ್ಯ, ದೇವಕಂಪನರೆಂಬ ನಾಯಕರನ್ನು ಕಣ್ಣುಸಂಜ್ಞೆಯಿಂದಲೇ ಕಾರ್ಯದಲ್ಲಿ ನಿಯೋಜಿಸಿದನು.

೫೩. ಎಲೈ ರಾಕ್ಷಸರಿರಾ! ಪಾಶಗಳಿಂದ ಇವಳನ್ನು ಬಿಗಿದು ಕಟ್ಟಿ ಕೆದರಿದ ಕೂದಲುಗಳುಳ್ಳವಳೂ ಸಡಲಿದ ವಸ್ತ್ರಾಭರಣಗಳುಳ್ಳವಳೂ ಆದ ಇವಳನ್ನು ಶೀಘ್ರವಾಗಿ ಸೆಳೆದು ತನ್ನಿರಿ.

ಇತಿ ದೈತ್ಯಾಧಿಪಾದೇಶಾದ್ದುರ್ಧರಪ್ರಮುಖಾಸ್ತತಃ ।
ಪಾಶಾಸಿಮುದ್ಗರಧರಾಸ್ತಾಮಾದಾತುಂ ಕೃತೋದ್ಯಮಾಃ ॥ ೫೪ ॥
ಗಿರೀಂದ್ರಗುರುವರ್ಷ್ಮಾಣಃ ಶಸ್ತ್ರಾಸ್ತ್ರೋದ್ಯತಪಾಣಯಃ ।
ದಿಗಂತಂ ತೇ ಪರಿಪ್ರಾಪ್ತಾಸ್ತದುಚ್ಛ್ವಾಸಾನಿಲಾಹತಾ ॥ ೫೫ ॥
ತೇಷೂಡ್ಡೀನೇಷು ದೈತ್ಯೇಷು ಶತಕೋಟಿಮಿತೇಷು ಚ ।
ನಿರ್ಜಗಾಮ ತತಃ ಸಾ ತು ಕಾಲರಾತ್ರಿರ್ನಭೋಽಧ್ವಗಾ ॥ ೫೬ ॥
ತತಸ್ತಾಂತು ವಿನಿರ್ಯಾಂತೀಮನುಜಗ್ಮುರ್ಮಹಾಸುರಾಃ ।
ಕೋಟಿಕೋಟಿ ಸಹಸ್ರಾಣಿ ಪೂರಯಿತ್ವಾ ತು ರೋದಸೀ ॥ ೫೭ ॥
ದುರ್ಗೋನಾಮ ಮಹಾದೈತ್ಯಃ ಶತಕೋಟಿರಥಾವೃತಃ ।
ಗಜಾನಾಮರ್ಬುದಶತದ್ವಯೇನ ಪರಿವಾರಿತಃ ॥ ೫೮ ॥
ಕೋಟ್ಯರ್ಬುದೇನ ಸಹಿತೋ ಹಯಾನಾಂ ವಾತರಂಹಸಾಂ ।
ಪದಾತಿಭಿರಸಂಖ್ಯಾತೈಃ ಪಚ್ಚೂರ್ಣಿತಶಿಲೋಚ್ಚಯೈಃ ॥ ೫೯ ॥

---

೫೪. ಇಂತೆಂದ ರಾಕ್ಷಸೇಂದ್ರನ ಅಪ್ಪಣೆಯಂತೆ ದುರ್ಧರನೇ ಮೊದಲಾದ ರಾಕ್ಷಸರು ಪಾಶಗಳು, ಕತ್ತಿಗಳು, ಮುದ್ಗರಗಳು ಮುಂತಾದ ಆಯುಧಗಳನ್ನು ತೆಗೆದುಕೊಂಡು ಅವಳನ್ನು ಕಟ್ಟಿಹಾಕುವ ಪ್ರಯತ್ನವನ್ನು ಮಾಡಿದರು.

೫೫. ಪರ್ವತೋತ್ತಮಗಳಂತೆ ಸ್ಥೂಲಗಳಾದ ದೇಹಗಳುಳ್ಳವರೂ, ಶಸ್ತ್ರಾಸ್ತ್ರಗಳನ್ನು ಕೈಗಳಲ್ಲಿ ಎತ್ತಿ ಹಿಡಿದವರೂ ಆದ ಆ ರಾಕ್ಷಸರೆಲ್ಲರೂ ಆಕೆಯ ಉಸಿರಿನ ಗಾಳಿಯ ಹೊಡೆತದಿಂದಲೇ ದಿಕ್ಕುಗಳ ಕೊನೆಗಳನ್ನು ಹೋಗಿ ಸೇರಿದರು.

೫೬. ಇಂತು ನೂರುಕೋಟಿ ಸಂಖ್ಯೆಯ ಆ ರಾಕ್ಷಸರೆಲ್ಲರೂ ದಿಕ್ಪಾಪಾಲಾಗಿ ಚೆದರಿಹೋಗಲು ಆ ಕಾಳರಾತ್ರಿಯು ಆಕಾಶಮಾರ್ಗನ್ನು ಸೇರಿ ದುರ್ಗದೈತ್ಯನ ಆಸ್ಥಾನದಿಂದ ಹೊರಡಲನುವಾದಳು.

೫೭. ಬಳಿಕ ಹೊರಡುತ್ತಿರುವ ಆಕೆಯನ್ನು ಸಾವಿರ ಕೋಟಿಕೋಟಿ ಸಂಖ್ಯೆಯ ರಾಕ್ಷಸಶ್ರೇಷ್ಠರು ಭೂಮ್ಯಾಕಾಶಗಳ ಅಂತರವೆಲ್ಲವನ್ನೂ ಆವರಿಸಿಕೊಂಡು ಅನುಸರಿಸಿ ಹೊರಡುವವರಾದರು.

೫೮-೫೯. ದುರ್ಗನಾಮಕನಾದ ಆ ಮಹಾದೈತ್ಯನೂ ನೂರು ಕೋಟಿ ರಥಗಳಿಂದ ಪರಿವಾರಿತನಾಗಿ ಹೊರಟನು. ಎರಡುನೂರು ಅರ್ಬುದ ಸಂಖ್ಯೆಯ ಮದ್ದಾನೆಗಳಿಂದಲೂ, ವಾಯುವೇಗದಿಂದೋಡುವ ಒಂದುಕೋಟಿ ಅರ್ಬುದ ಕುದುರೆಗಳ ಸಮೂಹದಿಂದಲೂ, ಪಾದಘಾತದಿಂದ ಮಹಾಶಿಲೆಗಳನ್ನೂ ಧೂಳಿಗೊಳಿಸುತ್ತಿರುವ ಲೆಕ್ಕವಿಲ್ಲದ ಪದಾತಿದಳದಿಂದಲೂ, ಅವನು ಪರಿವಾರಿತನಾಗಿದ್ದನು.

ಉದಾಯುಧೈರ್ಮಹಾಭೀಮೈಃ ಕೃತತ್ರಿಜಗತೀಭಯೈಃ ।
ಸಮೇತಃ ಸ ಮಹಾದೈತ್ಯೋ ದುರ್ಗಃ ಕ್ರುದ್ಧೋ ವಿನಿರ್ಯಯೌ ॥ ೬೦ ॥
ಅಥ ದೃಷ್ಟ್ವಾ ಮಹಾದೇವೀಂ ವಿಂಧ್ಯಾಚಲಕೃತಾಲಯಾಂ ।
ಆಗತ್ಯ ಕಾಲರಾತ್ರ್ಯಾ ಚ ನಿವೇದಿತತದಾಗತಂ ॥ ೬೧ ॥
ಮಹಾಭುಜಸಹಸ್ರಾಢ್ಯಾಂ ಮಹಾತೇಜೋಽಭಿಬೃಂಹಿತಾಂ ।
ತತ್ರದ್ಘೋರಶಸ್ತ್ರಪ್ರಹರಣಾಂ ರಣಕೌತುಕಸಾದರಾಂ ॥ ೬೨ ॥
ಪ್ರೋದ್ಯಚ್ಚಂದ್ರಸಹಸ್ರಾಂಶುನಿರ್ಮಾರ್ಜಿತಶುಭಾನನಾಂ ।
ಲಾವಣ್ಯವಾರ್ಧಿನಿರ್ಗಚ್ಛಚ್ಚಂಚಚ್ಚಂದ್ರೈಕಚಂದ್ರಿಕಾಂ ॥ ೬೩ ॥
ಮಹಾಮಾಣಿಕ್ಯನಿಚಯರೋಚಿಃಖಚಿತವಿಗ್ರಹಾಂ ।
ತ್ರೈಲೋಕ್ಯರಮ್ಯನಗರೀಸುಪ್ರಕಾಶಪ್ರದೀಪಿಕಾಂ ॥ ೬೪ ॥
ಹರನೇತ್ರಾಗ್ನಿನಿರ್ದಗ್ಧಕಾಮವೀರತಾವಿರುಧಂ ।
ಲಸತ್ಸೌಂದರ್ಯಸಂಭಾರಜಗನ್ಮೋಹನಮಹೌಷಧಿಂ ॥ ೬೫ ॥

---

೬೦. ಆಯುಧಗಳನ್ನೆತ್ತಿ ಹಿಡಿದವರೂ, ಮಹಾಭಯಂಕರಸ್ವರೂಪರೂ, ಮೂರುಲೋಕಗಳಿಗೂ ಭಯವನ್ನುಂಟುಮಾಡುವವರೂ ಆದ ಸೈನ್ಯಗಳಿಂದ ಸಮೇತನಾಗಿ ಕೋಪದಿಂದ ಆ ದುರ್ಗರಾಕ್ಷಸನೂ ಹೊರಟನು.

೬೧. ಮತ್ತು ವಿಂಧ್ಯಾಚಲದಲ್ಲಿ ವಾಸಮಾಡಿಕೊಂಡಿದ್ದ ಆ ಭವಾನೀದೇವಿಯನ್ನು ಕಂಡನು. ಕಾಳರಾತ್ರಿಯೂ ಅಲ್ಲಿಗೆ ಬಂದು ಅವನು ಮಾಡಿದ ಅಪರಾಧವನ್ನೆಲ್ಲ ಒಡತಿಗೆ ಬಿನ್ನವಿಸಿದಳು.

೬೨. ಆ ದೇವಿಯು ಸಾವಿರಾರು ಬಲಿಷ್ಠಗಳಾದ ಮಹಾಭುಜಗಳುಳ್ಳವಳೂ, ಮಹಾತೇಜಸ್ಸಿನಿಂದ ಉಜ್ಜ್ವಲಿಸುತ್ತಿರುವವಳೂ, ಕೈಗಳಲ್ಲಿ ಅನೇಕ ವಿಧಗಳಾದ ಘೋರಾಯುಧಗಳನ್ನು ಹಿಡಿದಿರುವವಳೂ, ಯುದ್ಧವೆಂಬ ಕೌತುಕವನ್ನು ಆದರದಿಂದೆದುರುನೋಡುತ್ತಿರುವವಳೂ ಆಗಿದ್ದಳು.

೬೩. ಪೂರ್ಣಚಂದ್ರನ ಸಹಸ್ರಾರು ಕಿರಣಗಳಿಂದ ಶುಭ್ರಗೊಳಿಸಲ್ಪಟ್ಟ ಮುಖಕಮಲವುಳ್ಳವಳೂ, ಸೌಂದರ್ಯವೆಂಬ ಸಮುದ್ರದಿಂದ ಮೇಲಕ್ಕೇಳುತ್ತಿರುವ ಉಜ್ಜ್ವಲಚಂದ್ರನ ಬೆಳದಿಂಗಳಿನಂತಿರುವವಳೂ ಆಗಿದ್ದಳು.

೬೪. ಮಹಾಮಾಣಿಕ್ಯಾಭರಣಗಳ ಸಮೂಹದ ಕಾಂತಿಯಿಂದ ಕೆತ್ತಿದ್ದ ವಿಗ್ರಹದಂತಿರುವವಳೂ, ಮೂರು ಲೋಕಗಳೆಂಬ ಮನೋಹರ ನಗರಗಳನ್ನು ಪ್ರಕಾಶಗೊಳಿಸುವ ಪ್ರದೀಪವೂ ಆಗಿ ತೋರುತ್ತಿದ್ದಳು.

೬೫. ಮಹೇಶ್ವರನ ಕಣ್ಣಿನ ಬೆಂಕಿಯಿಂದ ಸುಟ್ಟುಹೋದ ಮನ್ಮಥನನ್ನು ಪುನರುಜ್ಜೀವಗೊಳಿಸುವ ಔಷಧಲತೆಯಂತೆಯೂ, ಉತ್ತಮ ಸೌಂದರ್ಯಸಾಮಗ್ರಿಗಳಿಂದ ಮೂರುಲೋಕಗಳನ್ನು ಸಮ್ಮೋಹನಗೊಳಿಸುವ ಉತ್ತಮೌಷಧದಂತೆಯೂ ತೋರುತ್ತಿದ್ದಳು.

ವಿಷಮೇಷುಶರೈರ್ಭಿನ್ನಹೃದಯೋ ದೈತ್ಯಪುಂಗವಃ ।
ಆದಿಷ್ಟವಾನ್ಮಹಾಸೈನ್ಯನಾಯಕಾನುಗ್ರಶಾಸಿನಃ ॥ ೬೬ ॥
ಅಯಿ ಜಂಭ ಮಹಾಜಂಭ ಕುಜಂಭ ವಿಕಟಾನನ ।
ಲಂಬೋದರ ಮಹಾಕಾಯ ಮಹಾದಂಷ್ಟ್ರ ಮಹಾಹನೋ ॥ ೬೭ ॥
ಪಿಂಗಾಕ್ಷ ಮಹಿಷಗ್ರೀವ ಮಹೋಗ್ರಾತ್ಯುಗ್ರವಿಗ್ರಹ ।
ಕ್ರೂರಾಕ್ಷ ಕ್ರೋಧನಾಕ್ರಂದ ಸಂಕ್ರಂದನ ಮಹಾಭಯ ॥ ೬೮ ॥
ಜಿತಾಂತಕ ಮಹಾಬಾಹೋ ಮಹಾವಕ್ತ್ರ ಮಹೀಧರ ।
ದುಂದುಭೇ ದುಂದುಭಿರವ ಮಹಾದುಂದುಭಿನಾಸಿಕ ॥ ೬೯ ॥
ಉಗ್ರಾಸ್ಯ ದೀರ್ಘದಶನ ಮೇಘಕೇಶ ವೃಕಾನನ ।
ಸಿಂಹಾಸ್ಯ ಸೂಕರಮುಖ ಶಿವಾರಾವ ಮಹೋತ್ಕಟ ॥ ೭೦ ॥
ಶುಕತುಂಡ ಪ್ರಚಂಡಾಸ್ಯ ಭೀಮಾಕ್ಷ ಕ್ಷುದ್ರಮಾನಸ ।
ಉಲೂಕನೇತ್ರ ಕಂಕಾಸ್ಯ ಕಾಕತುಂಡ ಕರಾಲವಾಕ್ ॥ ೭೧ ॥
ದೀರ್ಘಗ್ರೀವ ಮಹಾಜಂಘ ಕ್ರಮೇಲಕಶಿರೋಧರ ।
ರಕ್ತಬಿಂದೋ ಜಪಾನೇತ್ರ ವಿದ್ಯುಜ್ಜಿಹ್ವಾಗ್ನಿತಾಪನ ॥ ೭೨ ॥
ಧೂಮ್ರಾಕ್ಷ ಧೂಮ್ರನಿಶ್ವಾಸ ಚಂಡ ಚಂಡಾಂಶುತಾಪನ ।
ಮಹಾಭೀಷಣಮುಖ್ಯಾಶ್ಚ ಶೃಣ್ವಂತ್ವಾಜ್ಞಾಂ ಮಮಾದರಾತ್ ॥ ೭೩ ॥

---

೬೬. ಇಂತಹ ಮೋಹನರೂಪವುಳ್ಳ ಆಕೆಯನ್ನು ಕಂಡು ಮನ್ಮಥನ ಬಾಣಗಳಿಗೆ ಗುರಿಯಾಗಿ ಕದಡಿದ ಮನಸ್ಸುಳ್ಳ ಆ ರಾಕ್ಷಸೇಶ್ವರನು ಉಗ್ರಶಾಸನವನ್ನಿತ್ತು ತನ್ನ ಮಹಾಸೈನ್ಯದ ನಾಯಕರಿಗೆ ಅಪ್ಪಣೆಮಾಡಿದನು.

೬೭–೭೩. ಎಲೈ ಜಂಭ, ಮಹಾಜಂಭ, ಕುಜಂಭ, ವಿಕಟಾನನ, ಲಂಬೋದರ, ಮಹಾಕಾಯ, ಮಹಾದಂಷ್ಟ್ರ, ಮಹಾಹನು, ಪಿಂಗಾಕ್ಷ, ಮಹಿಷಕಂಠ, ಅತ್ಯಂತ ಉಗ್ರಶರೀರನಾದ ಮಹೋಗ್ರ, ಕ್ರೂರಾಕ್ಷ, ಕ್ರೋಧನ, ಮಹೇಂದ್ರನಿಗೆ ಮಹಾಭಯವನ್ನುಂಟುಮಾಡುವ ಆಕ್ರಂದ, ಅಂತಕನನ್ನು ಜಯಿಸಿದ ಮಹಾಬಾಹು, ಮಹಾವಕ್ತ್ರ, ಮಹೀಧರ, ದುಂದುಭಿಯಂತೆ ಗಂಭೀರಧ್ವನಿಯುಳ್ಳ ದುಂದುಭಿ, ಮಹಾದುಂದುಭಿನಾಸಿಕ, ಉಗ್ರಾಸ್ಯ, ದೀರ್ಘದಶನ, ಮೇಘಕೇಶ, ವೃಕಾನನ, ಸಿಂಹಾಸ್ಯ, ಸೂಕರಮುಖ, ಶಿವಾರಾವ, ಮಹೋತ್ಕಟ, ಶುಕತುಂಡ, ಪ್ರಚಂಡಾಸ್ಯ, ಭೀಮಾಕ್ಷ, ಕ್ಷುದ್ರಮಾನಸ, ಉಲೂಕನೇತ್ರ, ಕಂಕಾಸ್ಯ, ಕಾಕತುಂಡ, ಕರಾಳಭಾಷಿ, ದೀರ್ಘಗ್ರೀವ, ಒಂಟೆಯ ಕತ್ತುಳ್ಳ ಮಹಾಜಂಘ, ರಕ್ತಬಿಂದು, ಜಪಾನೇತ್ರ, ವಿದ್ಯುಜ್ಜಿಹ್ವ, ಅಗ್ನಿತಾಪನ, ಧೂಮ್ರಾಕ್ಷ, ಧೂಮ್ರನಿಶ್ವಾಸ, ಚಂಡ, ಸೂರ್ಯತಾಪನ, ಮಹಾಭೀಷಣರೇ ಮುಖ್ಯರಾದ ಸೇನಾನಾಯಕರಿರ! ಈ ನನ್ನ ಅಪ್ಪಣೆಯನ್ನು ಆದರದಿಂದ ಕೇಳಿರಿ.

ಭವತ್ಸ್ವೇತೇಷು ಚಾನ್ಯೇಷು ಯ ಏತಾಂ ವಿಂಧ್ಯವಾಸಿನೀಂ ।
ಧೃತ್ವಾ ನೇಷ್ಯತಿ ಬುದ್ಧ್ಯಾ ವಾ ಬಲೇನಾಪಿ ಛಲೇನ ವಾ ॥ ೭೪ ॥
ತಸ್ಯಾಹಮಿಂದ್ರಪದವೀಮದ್ಯ ದಾಸ್ಯಾಮ್ಯಸಂಶಯಂ ।
ದೃಷ್ಟ್ವೈತಾಂ ಸುಂದರೀಮದ್ಯ ಮನೋ ಮೇ ವ್ಯಾಕುಲಂ ಭವೇತ್ ॥ ೭೫ ॥
ಯಾಂತು ಕ್ಷಿಪ್ರಂ ನ ಯಾವನ್ಮೇ ಪಂಚೇಷುಶರಪೀಡಿತಂ ।
ಮನೋ ವಿಫಲತಾಂ ಗಚ್ಛೇದೇತತ್ಪ್ರಾಪ್ತೇರಭಾವತಃ ॥ ೭೬ ॥
ಇತ್ಯಾಕರ್ಣ್ಯ ವಚಸ್ತಸ್ಯ ದುರ್ಗಸ್ಯ ದನುಜೇಶಿತುಃ ।
ಪ್ರೋಚುಃ ಸರ್ವೇ ತದಾ ದೈತ್ಯಾಃ ಪ್ರಬದ್ಧಕರಸಂಪುಟಾಃ ॥ ೭೭ ॥
ಅವಧೇಹಿ ಮಹಾರಾಜ ಕಿಮೇತತ್ಕರ್ಮ ದುಷ್ಕರಂ ।
ಅನಾಥಾಯಾಸ್ತಥೈಕಸ್ಯಾ ಅಬಲಾಯಾ ವಿಶೇಷತಃ ॥ ೭೮ ॥
ಅಸ್ಯಾ ಆನಯನೇ ಕೋಽಯಂ ಮಹಾಯತ್ನವಿಧಿಃ ಪ್ರಭೋ ।
ಕೋಽಸ್ಮಾನ್ಪ್ರಲಯಕಾಲಾಗ್ನಿಮಹಾಜ್ವಾಲಾವಲೀಸಮಾನ್ ॥ ೭೯ ॥
ಸಹೇತ ತ್ರಿಷು ಲೋಕೇಷು ತ್ವತ್ಪ್ರಸಾದಾತ್ಕೃತೋದ್ಯಮಾನ್ ।
ಯದಾದೇಶೋ ಭವೇದದ್ಯ ತದೇಂದ್ರಂ ಸಮರುದ್ಗಣಂ ॥ ೮೦ ॥

---

೭೪–೭೬. ಇಲ್ಲಿ ನೆರೆದಿರುವ ನಿಮ್ಮಲ್ಲಾಗಲಿ ಇತರರಲ್ಲಿಯಾಗಲಿ ಯಾವನು ಈ ವಿಂಧ್ಯಪರ್ವತನಿವಾಸಿನಿಯನ್ನು ಧೈರ್ಯದಿಂದಲಾಗಲಿ, ಬುದ್ಧಿಯಿಂದಾಗಲಿ, ಪರಾಕ್ರಮದಿಂದಾಗಲಿ, ಹಟದಿಂದಾಗಲಿ ಸೆಳೆದುಕೊಂಡು ಬರುವನೊ, ಆವನಿಗೆ ನಾನು ಮಹೇಂದ್ರನ ಪದವಿಯನ್ನು ಇಂದೇ ಕೊಡುವೆನು. ಇದರಲ್ಲಿ ಸಂದೇಹ ಪಡಬೇಡಿ. ಇಂದು ಈ ಸುಂದರಿಯನ್ನು ನೋಡಿ ನನ್ನ ಮನಸ್ಸು ವ್ಯಾಕುಲಗೊಂಡಿರುವುದು. ಆದಕಾರಣ ಮನ್ಮಥನ ಬಾಣಗಳಿಗೆ ತುತ್ತಾದ ನನ್ನ ಮನಸ್ಸು ಅವಳನ್ನು ಹೊಂದಲಾರದೆ ಕೆಟ್ಟು ಹೋಗುವುದಕ್ಕೆ ಮುಂಚೆಯೇ ವೇಗವಾಗಿ ನೀವೆಲ್ಲರೂ ಅವಳ ಬಳಿಗೆ ಹೊರಡಿರಿ.

೭೭. ರಾಕ್ಷಸರಾಜನಾದ ದುರ್ಗನ ಮಾತುಗಳನ್ನು ಕೇಳಿ ಆ ದೈತ್ಯರೆಲ್ಲರೂ ಕೈಗಳನ್ನು ಮುಗಿದುಕೊಂಡು ಆಗ ಅವನಿಗೆ ಹೇಳತೊಡಗಿದರು.

೭೮. ಎಲೈ ಮಹಾರಾಜನೆ! ನಮ್ಮ ಮಾತುಗಳನ್ನು ಲಾಲಿಸು. ಇದು ಯಾವ ಮಹಾಕಾರ್ಯವು? ಇವಳು ರಕ್ಷಕರಿಲ್ಲದವಳು. ಏಕಾಕಿನಿಯು. ಅಲ್ಲದೆ ಅಬಲೆಯೂ ಆಗಿರುವಳಲ್ಲವೆ.

೭೯–೮೧. ಸ್ವಾಮಿಯೆ! ಇವಳನ್ನು ಕರೆತರುವುದಕ್ಕಾಗಿ ಇಷ್ಟು ಮಹಾ ಪ್ರಯತ್ನದ ಅವಶ್ಯಕತೆಯೇನು? ಪ್ರಳಯಕಾಲದ ಬೆಂಕಿಯ ಜ್ವಾಲೆಗಳ ಸಮೂಹಕ್ಕೆ ಸಮಾನರೂ, ನಿನ್ನ ಅನುಗ್ರಹದಿಂದ ಕಾರ್ಯದಲ್ಲಿ ಉದ್ಯುಕ್ತರಾದವರೂ ಆದ ನಮ್ಮನ್ನು ಮೂರು ಲೋಕಗಳಲ್ಲಿಯೂ ಯಾರು ತಾನೆ ಎದುರಿಸುವವರಿರುವರು? ಈಗಲೇ ನಿನ್ನ ಅಪ್ಪಣೆಯಾಗುವುದಾದರೆ ಸಕಲ ದೇವಗಣಗಳೊಡನೆಯೂ,

ಸಾಂತಃಪುರಂ ಸಮಾನೀಯ ಕ್ಷಿಪ್ನುಮಸ್ತ್ವತ್ಪದಾಗ್ರತಃ ।
ಭೂರ್ಭುವಸ್ಸ್ವರಿದಂ ಸರ್ವಂ ತ್ವದಾಜ್ಞಾವಶವರ್ತಿತಂ ॥ ೮೧ ॥
ಮಹರ್ಜನಸ್ತಪಃ ಸತ್ಯಲೋಕಾಸ್ತ್ವದಧಿಕಾರಿಣಃ ।
ತತ್ರಾಪ್ಯಸಾಧ್ಯಂ ನಾಸ್ಮಾಕಂ ತ್ವನ್ನಿದೇಶಾನ್ಮಹಾಸುರ ॥ ೮೨ ॥
ವೈಕುಂಠನಾಯಕೋ ನಿತ್ಯಂ ತ್ವದಾಜ್ಞಾ ಪರಿಪಾಲಕಃ ।
ಯಾನಿ ರಮ್ಯಾನಿ ರತ್ನಾನಿ ತಾನಿ ಸಂಪ್ರೇಷಯನ್ಮುದಾ ॥ ೮೩ ॥
ಅಸ್ಮಾಭಿರೇವ ಸಂತ್ಯಕ್ತಃ ಕೈಲಾಸಾಧಿಪತಿಃ ಸ ವೈ ।
ವಿಷಾಶೀ ಚಾತಿನಿಃಸ್ಸತ್ವಾದ್ಭಸ್ಮಕೃತ್ಯಹಿಭೂಷಣಃ ॥ ೮೪ ॥
ಅರ್ಧಾಂಗೇಸಾಸ್ಮದ್ಭಯತೋ ಯೋಷಿದೇಕಾ ನಿಗೂಹಿತಾ ।
ತಸ್ಯ ಗ್ರಾಮೇಽಪಿ ಸಕಲೇ ದ್ವಿತೀಯೋ ನ ಚತುಷ್ಪದಃ ॥ ೮೫ ॥
ಏಕೋ ಜರದ್ಗವಃ ಸೋಽಪಿ ನಾನ್ಯಸ್ಮಾತ್ಪರಿಜೀವತಿ ।
ಶ್ಮಶಾನವಾಸಿನಃ ಸರ್ವೇ ಸರ್ವೇ ಕೌಪೀನವಾಸಸಃ ॥ ೮೬ ॥

---

ಅಂತಃಪುರಸ್ತ್ರೀಯರೊಡನೆಯೂ ಕೂಡಿದ ಮಹೇಂದ್ರನನ್ನೇ ಕ್ಷಣಮಾತ್ರದಲ್ಲಿ ಸೆಳೆದು ತಂದು ನಿನ್ನ ಪಾದಗಳ ಮುಂದೆ ಕೆಡಹುವೆವು. ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳೆಲ್ಲವೂ ನಿನ್ನ ಆಜ್ಞೆಯನ್ನನುಸರಿಸಿಯೇ ನಡೆದು ಬರುತ್ತಿರುವುವು.

೮೨. ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳೂ ಕೂಡ ನಿನ್ನ ಅಧಿಕಾರಕ್ಕೇ ಒಳಪಟ್ಟಿರುವುವು. ಮಹಾದೈತ್ಯನೆ! ಅವುಗಳಲ್ಲಿಯೂ ನಿನ್ನ ಅಪ್ಪಣೆಯನ್ನು ಪಾಲಿಸುವ ನಮಗೆ ಅಸಾಧ್ಯವಾದುದು ಯಾವುದೂ ಇಲ್ಲ.

೮೩. ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನೂ ಸಹ ಸಂತೋಷದಿಂದ ತನ್ನಲ್ಲಿರುವ ಮನೋಹರ ಅಮೂಲ್ಯ ರತ್ನಗಳನ್ನು ನಿನಗೆ ಕಾಣಿಕೆಯಾಗಿ ಕಳುಹಿಸಿ ನಿತ್ಯವೂ ನಿನ್ನ ಅಪ್ಪಣೆಗಳನ್ನೇ ಪರಿಪಾಲಿಸುತ್ತಿರುವನು.

೮೪. ಕೈಲಾಸಾಧಿಪತಿಯಾದ ಈಶ್ವರನೂ ನಮ್ಮ ಉಪೇಕ್ಷೆಯಿಂದಲೇ ತನ್ನ ಸ್ಥಾನದಲ್ಲಿರುವವನಲ್ಲದೆ ಬೇರೆಯಲ್ಲ. ಅವನು ವಿಷಪಾನಮಾಡುವವನು. ಪರಾಕ್ರಮರಹಿತನು. ಭಸ್ಮವನ್ನೂ, ಗಜಚರ್ಮವನ್ನೂ, ಹಾವುಗಳನ್ನೂ ಮೈಗೆ ಅಲಂಕರಿಸಿಕೊಂಡಿರುವನು.

೮೫. ನಮ್ಮ ಭಯದಿಂದಲೇ ಯಾವಾಗಲೂ ಅರ್ಧದೇಹದಲ್ಲಿ ಒಬ್ಬ ಸ್ತ್ರೀಯನ್ನಾಲಿಂಗಿಸಿಕೊಂಡಿರುವನು. ಅವನ ನಿವಾಸವನ್ನೆಲ್ಲ ಹುಡುಕಿದರೂ ಎರಡನೆಯ ಚತುಷ್ಪಾದಪ್ರಾಣಿಯು ಯಾವುದೂ ಇಲ್ಲ.

೮೬. ಅಲ್ಲಿರುವುದೆಂದರೆ ಅವನ ವಾಹನವಾದ ಮುದಿಯೆತ್ತೊಂದೆ. ಅದೂ ಸಹ ಮತ್ತೆ ಯಾರನ್ನೂ ಆಶ್ರಯಿಸುವಂತಿಲ್ಲ. ಅವನ ಪರಿವಾರದವರಾದರೊ, ಎಲ್ಲರೂ ಸ್ಮಶಾನವಾಸಿಗಳೇ. ಎಲ್ಲರೂ ಕೌಪೀನಮಾತ್ರವನ್ನು ಧರಿಸಿರುವವರೆ.

ಸರ್ವೇ ವಿಭೂತಿಧವಲಾಃ ಸರ್ವೇಽಪ್ಯೇಕಕಪರ್ದಿನಃ ।
ಸಮಸ್ತೇ ನಗರೇ ತಸ್ಯ ವಸಂತ್ಯೇವಂವಿಧಾ ಗಣಾಃ ॥ ೮೭ ॥
ತೇಷಾಂ ಗಣಾನಾಂ ಕಿಂ ಕುರ್ಮೋ ದರಿದ್ರಾಣಾಂ ವಯಂ ವಿಭೋ ।
ಸಮುದ್ರಾ ರತ್ನಸಂಭಾರಂ ಪ್ರತ್ಯಹಂ ಪ್ರೇಷಯಂತಿ ಚ ॥ ೮೮ ॥
ನಾಗಾ ವರಾಕಾಶ್ಚಾಸ್ಮಾಕಂ ಸಾಯಂ ಸಾಯಂ ಸ್ವಯಂ ಪ್ರಭೋ ।
ಪ್ರದೀಪಯಂತಿ ಸತತಂ ಫಣಾರತ್ನಪ್ರದೀಪಕಾಃ ॥ ೮೯ ॥
ಕಲ್ಪದ್ರುಮಾಃ ಕಾಮಗವೀ ಚಿಂತಾಮಣಿಗಣಾ ಬಹು ।
ತವ ಪ್ರಸಾದಾದಸ್ಮಾಕಮಪಿ ತಿಷ್ಠಂತಿ ವೇಶ್ಮಸು ॥ ೯೦ ॥
ವಾಯುರ್ವ್ಯಜನತಾಂ ಯಾತಸ್ತ್ವಾಂ ಸೇವೇತ ಪ್ರಯತ್ನತಃ ।
ಸ್ವಚ್ಛಾನ್ಯಂಬೂನಿ ವರುಣಃ ಪ್ರತ್ಯಹಂ ಪೂರಯತ್ಯಹೋ ॥ ೯೧ ॥
ವಾಸಾಂಸಿ ಕ್ಷಾಲಯೇದಗ್ನಿಶ್ಚಂದ್ರಶ್ಛತ್ರಧರಃ ಸ್ವಯಂ ।
ಸೂರ್ಯಃ ಪ್ರಕಾಶಯೇನ್ನಿತ್ಯಂ ಕ್ರೀಡಾವಾಪ್ಯಂಬುಜಾನಿ ಚ ॥ ೯೨ ॥

---

೮೭. ಎಲ್ಲರೂ ವಿಭೂತಿಲೇಪನದಿಂದ ಬೆಳ್ಳಗಿರುವ ದೇಹಗಳಿಂದೊಡಗೂಡಿರುವರು. ತಲೆಗೂದಲನ್ನು ಜಡೆಮುಡಿಹಾಕಿರುವರು. ಆ ಮಹೇಶ್ವರನ ಲೋಕದಲ್ಲೆಲ್ಲ ಈ ವಿಧರಾದ ಗಣಗಳೇ ವಾಸಮಾಡುತ್ತಿರುವರು.

೮೮. ಮಹಾರಾಜನೆ! ದರಿದ್ರರಾದ ಆತನ ಗಣಗಳಿಂದ ನಮಗೆ ಪ್ರಯೋಜನವೇನು? ಅವರನ್ನು ಕಟ್ಟಿಕೊಂಡು ಏನು ಮಾಡೋಣ? ಸಪ್ತ ಸಮುದ್ರಗಳ ಅಧಿಪತಿಗಳೂ ನಿತ್ಯವೂ ತಮ್ಮಲ್ಲಿರುವ ನವರತ್ನ ಸಂಭಾರಗಳನ್ನು ಕಳುಹಿಸುತ್ತಿರುವರು.

೮೯. ಪ್ರಭುವೆ! ನೀಚರಾದ ನಾಗರೂ ಪ್ರತಿದಿನದ ಸಾಯಂಕಾಲದಲ್ಲಿಯೂ ನಮ್ಮ ಮನೆಗಳನ್ನು ತಮ್ಮ ಹೆಡೆಗಳೊಳಗಿನ ರತ್ನಗಳೆಂಬ ದೀಪಗಳಿಂದ ತಾವೇ ಪ್ರಕಾಶಗೊಳಿಸುತ್ತಿರುವರು.

೯೦. ನಿನ್ನ ಅನುಗ್ರಹದಿಂದ ಅನೇಕಗಳಾದ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿಗಳ ಸಮೂಹಗಳು ನಮ್ಮ ಮನೆಗಳ ಅಂಗಳಗಳಲ್ಲಿಯೇ ಯಾವಾಗಲೂ ಸನ್ನಿಹಿತಗಳಾಗಿರುವುವು.

೯೧. ವಾಯುದೇವನೇ ಬೀಸಣಿಗೆಯಾಗಿ ನಿನ್ನನ್ನು ಭಯಭಕ್ತಿಗಳಿಂದ ಸೇವಿಸುತ್ತಿರುವನು. ವರುಣನು ನಿತ್ಯವೂ ಪರಿಶುದ್ಧಗಳಾದ ಜಲಗಳನ್ನು ಪಾಕಶಾಲೆಯಲ್ಲಿ ಸಿದ್ಧಗೊಳಿಸುತ್ತಿರುವನು.

೯೨. ಅಗ್ನಿಯು ವಸ್ತ್ರಗಳನ್ನು ಶುಭ್ರಗೊಳಿಸುತ್ತಿರುವನು. ಚಂದ್ರನು ತಾನೇ ಶ್ವೇತಚ್ಛತ್ರವನ್ನು ಹಿಡಿದಿರುವನು. ನಿನ್ನ ಉದ್ಯಾನದ ಕ್ರೀಡಾಸರೋವರಗಳಲ್ಲಿರುವ ಕಮಲಗಳನ್ನು ಸೂರ್ಯನು ನಿತ್ಯವೂ ಅರಳಿಸುತ್ತಿರುವನು.

ಕಸ್ತ್ವತ್ಪ್ರಸಾದಂ ನೇಕ್ಷೇತ ಮರ್ತ್ಯಾಮರ್ತ್ಯೋರಗೇಷು ಚ ।
ಸರ್ವೇ ತ್ವಾಮುಪಜೀವಂತಿ ಸುರಾಸುರಖಗಾದಯಃ ॥ ೯೩ ॥
ಪಶ್ಯ ನಃ ಪೌರುಷಂ ರಾಜನ್ನಾನಯಾಮೋ ಬಲಾದಿಮಾಂ ।
ಇತ್ಯುಕ್ತ್ವಾ ಯುಗಪತ್ಸರ್ವೇ ಕ್ಷುಬ್ಧಾ ಸ್ತ್ಯೋಯಧಯೋ ಯಥಾ ॥ ೯೪ ॥
ಸಂವರ್ತಕಾಲಮಾಸಾದ್ಯ ಪ್ಲಾವಿತುಂ ಜಗತೀಮಿಮಾಂ ।
ರಣತೂರ್ಯನಿನಾದಶ್ಚ ಸಮುತ್ತಸ್ಥೌ ಸಮಂತತಃ ॥ ೯೫ ॥
ರೋಮಾಂಚಿತಾ ಯಚ್ಛ್ರವಣಾತ್ಕಾತರಾ ಅಪ್ಯಕಾತರಾ
ತತೋ ದೇವಾ ಭಯತ್ರಸ್ತಾಶ್ಚಕಂಪೇ ಚ ವಸುಂಧರಾ ॥ ೯೬ ॥
ಕ್ಷುಬ್ಧಾ ಅಂಬುಧಯಃ ಸರ್ವೇ ಪೇತುರ್ನಕ್ಷತ್ರಮಾಲಿಕಾಃ ।
ರೋದಸೀಮಂಡಲಂ ವ್ಯಾಪ್ತಂ ತೇನ ತೂರ್ಯರವೇಣ ವೈ ॥ ೯೭ ॥
ತತೋ ಭಗವತೀ ದೇವೀ ಸ್ವಶರೀರಸಮುದ್ಭವಾಃ ।
ಶಕ್ತೀರುತ್ಪಾದಯಾಮಾಸ ಶತಶೋಽಥ ಸಹಸ್ರಶಃ ॥ ೯೮ ॥
ತಾಭಿಃ ಶಕ್ತಿಭಿರೇತೇಷಾಂ ಬಲಿನಾಂ ದಿತಿಜನ್ಮನಾಂ ।
ಪ್ರತ್ಯೇಕಂ ಪರಿತೋ ರುದ್ಧ ಉದ್ವೇಲಃ ಸೈನ್ಯಸಾಗರಃ ॥ ೯೯ ॥

---

೯೩. ಮರ್ತ್ಯಲೋಕ, ದೇವಲೋಕ, ನಾಗಲೋಕಗಳಲ್ಲಿ ಯಾವನು ನಿನ್ನ ಸುಪ್ರಸನ್ನತೆಯನ್ನು ಎದುರುನೋಡುವುದಿಲ್ಲ? ದೇವ, ರಾಕ್ಷಸ, ಪಕ್ಷಿಗಳೆಲ್ಲರೂ ನಿನ್ನ ಅನುಗ್ರಹದಿಂದಲೇ ಜೀವಿಸುತ್ತಿರುವರು.

೯೪–೯೫. ರಾಜೇಂದ್ರನೆ! ನಮ್ಮ ಪೌರುಷವನ್ನಾದರೂ ನೋಡು. ಬಲದಿಂದಲೇ ಇವಳನ್ನು ಕರೆದುಕೊಂಡು ಬರುವೆವು. ಇಂತೆಂದು ಆ ರಾಕ್ಷಸರೆಲ್ಲರೂ ಪ್ರಳಯಸಮಯದಲ್ಲಿ ಸಮಸ್ತ ಭೂಮಂಡಲವನ್ನೂ ಮುಳುಗಿಸಲು ಉಕ್ಕಿ ಬರುವ ಸಪ್ತಸಮುದ್ರಗಳಂತೆ ಒಮ್ಮೆಯೇ ಹೊರಟರು. ಸರ್ವತ್ರದಲ್ಲಿಯೂ ಯುದ್ಧಕ್ಕೆ ಸನ್ನದ್ಧರನ್ನಾಗಿ ಮಾಡುವ ರಣವಾದ್ಯಗಳು ಭೋರ್ಗರೆದುವು.

೯೬. ಆ ಶಬ್ದವನ್ನು ಕೇಳುವುದರಿಂದಲೇ ಮಹಾಧೈರ್ಯಶಾಲಿಗಳೂ ಸಹ ರೋಮಾಂಚವನ್ನು ತಳೆದು ಕಾತರರಾದರು. ಆಗ ದೇವತೆಗಳೂ ಭಯದಿಂದ ನಡುಗಿದರು. ಭೂದೇವಿಯೂ ಕಂಪಿಸಿದಳು.

೯೭. ಸಕಲ ಸಮುದ್ರಗಳೂ ಉಕ್ಕಿ ಬಂದುವು. ಆಕಾಶದಿಂದ ನಕ್ಷತ್ರಗಳು ಮಳೆಗರೆದುವು. ಆ ತೂರ್ಯವಾದ್ಯಗಳ ಧ್ವನಿಯಿಂದ ಭೂಮ್ಯಾಕಾಶಗಳ ಅಂತರಾಳವೆಲ್ಲವೂ ವ್ಯಾಪ್ತವಾಯಿತು.

೯೮–೯೯. ಆಗ ಸರ್ವಶಕ್ತಳಾದ ದೇವಿಯು ತನ್ನ ಶರೀರದಿಂದಲೇ ನೂರು ಗಟ್ಟಲೆಯಾಗಿಯೂ ಸಾವಿರಗಟ್ಟಲೆಯಾಗಿಯೂ ಅನೇಕ ಶಕ್ತಿಯರನ್ನು ಹೊರಗೆಡವಿದಳು. ಈ ಬಲಿಷ್ಠರಾದ ದಾನವರ ಮಿತಿಮೀರಿದ ಸೈನ್ಯಸಮುದ್ರವೆಲ್ಲವೂ

ಶಸ್ತ್ರಾಸ್ತ್ರಾಣಿ ಮಹಾದೈತ್ಯೈರ್ಯಾನ್ಯುತ್ಸೃಷ್ಟಾನಿ ಸಂಗರೇ ।
ತಾಭಿಃ ಶಕ್ತಿಭಿರುಗ್ರಾಣಿ ತೃಣೀಕೃತ್ಯೋಜ್ಝಿತಾನ್ಯರಂ ॥ ೧೦೦ ॥
ತತೋಽತಿಕೋಪಪೂರ್ಣಾಸ್ತೇ ಜಂಭಮುಖ್ಯಾಃ ಸುರಾರಯಃ ।
ಅಸಿಚಕ್ರಭುಶುಂಡೀಭಿರ್ಗದಾಮುದ್ಗರತೋಮರೈಃ ॥ ೧೦೧ ॥
ಭಿಂದಿಪಾಲೈಶ್ಚ ಪರಿಘೈಃ ಕುಂತೈಃ ಶಲ್ಯೈಶ್ಚ ಶಕ್ತಿಭಿಃ ।
ಅರ್ಧಚಂದ್ರೈಃ ಕ್ಷುರಪ್ರೈಶ್ಚ ನಾರಾಚೈಶ್ಚ ಶಿಲೀಮುಖೈಃ ॥ ೧೦೨ ॥
ಮಹಾಭಲ್ಲೈಃ ಪರಶುಭಿರ್ಭಿದುರೈರ್ಮರ್ಮಭೇದಿಭಿಃ ।
ವೃಕ್ಷೋಪಲಮಹಾವರ್ಷೈರ್ವವೃಷುರ್ಜಲದಾ ಇವ ॥ ೧೦೩ ॥
ಅಥ ಸಾ ವಿಂಧ್ಯನಿಲಯಾ ಮಹಾಮಾಯಾ ಮಹೇಶ್ವರೀ ।
ಆದಾಯೋದ್ದಂಡಕೋದಂಡಂ ವಾಯವ್ಯಾಸ್ತ್ರೇಣ ಹೇಲಯಾ ॥ ೧೦೪ ॥
ದೈತ್ಯಾಸ್ತ್ರಶಸ್ತ್ರಜಾಲಾನಿ ಪರಿಚಿಕ್ಷೇಪ ದೂರತಃ ।
ತತೋ ಮಹಾಸುರೋ ದುರ್ಗೋ ವೀಕ್ಷ್ಯ ಸೈನ್ಯಂ ನಿರಾಯುಧಂ ॥ ೧೦೫ ॥

---

ಬೇರೆ ಬೇರೆಯಾಗಿ ಆ ಶಕ್ತಿಯರಿಂದ ಸುತ್ತುವರೆಯಲ್ಪಟ್ಟು ತಡೆಯನ್ನು ಹೊಂದಿತು.

೧೦೦. ಬಳಿಕ ಮಹಾಯುದ್ಧವುರವಣಿಸಿತು. ಆ ಯುದ್ಧದಲ್ಲಿ ಮಹಾದೈತ್ಯರು ಯಾವ ಯಾವ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಪ್ರಯೋಗಿಸಿದರೊ, ಅವುಗಳೆಲ್ಲವನ್ನೂ ಆ ಶಕ್ತಿಯರು ಹುಲ್ಲುಕಡ್ಡಿಗಳಂತೆ ಮುರಿದು ಬಿಸುಟರು.

೧೦೧–೧೦೩. ಇದರಿಂದ ಅತ್ಯಂತಕೋಪಗೊಂಡವರಾಗಿ ಜಂಭನೇ ಮೊದಲಾದ ರಾಕ್ಷಸರೆಲ್ಲರೂ ಕತ್ತಿ, ಚಕ್ರ, ಭುಸುಂಡಿ, ಗದೆ, ಮುದ್ಗರ, ತೋಮರ, ಭಿಂಡಿಪಾಲ, ಪರಿಘ, ಕುಂತ, ಶಲ್ಯ, ಶಕ್ತಿ, ಅರ್ಧಚಂದ್ರ, ಕ್ಷುರಪ್ರ, ಬಾಣಗಳು, ಶಿಲೀಮುಖ, ಮಹಾಭಲ್ಲ, ಗಂಡಗೊಡಲಿ, ಮರ್ಮಭೇದಿಗಳಾದ ವಜ್ರಾಸ್ತ್ರಗಳು, ಮಹಾವೃಕ್ಷಗಳು, ಶಿಲೆಗಳು, ಮುಂತಾದುವುಗಳಿಂದ ಪ್ರಳಯಕಾಲದ ಮೇಘಗಳಂತೆ ಮಳೆಯನ್ನು ಸುರಿಸತೊಡಗಿದರು.

೧೦೪–೧೦೫. ಮಹಾಮಾಯಾಸ್ವರೂಪಿಣಿಯೂ ಮಹೇಶ್ವರನ ಅನಪಾಯಿನಿಯೂ ಆದ ವಿಂಧ್ಯವಾಸಿನಿಯು ಪ್ರಚಂಡವಾದ ತನ್ನ ಬಿಲ್ಲನ್ನು ತೆಗೆದುಕೊಂಡು ಅವಲೀಲೆಯಿಂದಲೇ ಅದರಲ್ಲಿ ವಾಯುವ್ಯಾಸ್ತ್ರವನ್ನು ಸಂಧಿಸಿ ದೂರದಿಂದಲೇ ಆ ರಾಕ್ಷಸರ ಅಸ್ತ್ರಶಸ್ತ್ರ ಸಮೂಹಗಳೆಲ್ಲವನ್ನೂ ನಾಶಗೊಳಿಸಿದಳು. ಆಗ ಮಹಾದೈತ್ಯನಾದ ದುರ್ಗನು ತನ್ನ ಸೈನ್ಯವೆಲ್ಲವೂ ಆಯುಧಹೀನವಾಗಿರುವುದನ್ನು ಕಂಡನು.

ಜ್ವಲಂತೀಂ ಶಕ್ತಿಮಾದಾಯ ತಾಂ ದೇವೀಂ ಪ್ರತಿ ಸೋಽಕ್ಷಿಪತ್ ।
ತಾಂ ತು ಶಕ್ತಿಂ ಸಮಾಯಾಂತೀಂ ಮಹಾವೇಗವತೀಂ ರಣೇ ॥ ೧೦೬ ॥
ನಿಜಚಾಪವಿನಿರ್ಮುಕ್ತೈರ್ಬಾಣೈಶ್ಚೂರ್ಣೀಚಕಾರ ಸಾ ।
ಭಗ್ನಾಂ ಶಕ್ತಿಂ ಸಮಾಲೋಕ್ಯ ತತೋ ದುರ್ಗೋ ಮಹಾಸುರಃ ॥ ೧೦೭ ॥
ಚಕ್ರಂ ಚ ಪ್ರೇಷಯಾಮಾಸ ದೈತ್ಯಚಕ್ರಾತಿಹರ್ಷದಂ ।
ತಚ್ಚ ದೇವ್ಯಾ ಶರಶತೈರಂತರೈವಾಣುವತ್ಕೃತಂ ॥ ೧೦೮ ॥
ತತಃ ಶಾರ್ಙ್ಗಂ ಸಮಾದಾಯ ಧನುಃ ಶಕ್ರಧನುರ್ಯಥಾ ।
ಹೃದಿ ವಿವ್ಯಾಧ ಬಾಣೇನ ತಾಂ ದೇವೀಮಮರಾರ್ದನಃ ॥ ೧೦೯ ॥
ಸ ಚ ಬಾಣಸ್ತಯಾ ದೇವ್ಯಾ ನಿಜಬಾಣೈರ್ಮಹಾಜವೈಃ ।
ನಿವಾರಿತೋಽಪಿ ವೇಗೇನ ತಾಂ ದೇವೀಮಭ್ಯಗಾನ್ಮುನೇ ॥ ೧೧೦ ॥
ತತಃ ಕೋದಂಡದಂಡೇನ ಆಶುಗೇನ ತಮಾಶುಗಂ ।
ಹತ್ವಾ ನಿವಾರಯಾಮಾಸ ಕಾಲದಂಡಮಿವಾಪರಂ ॥ ೧೧೧ ॥

---

೧೦೬–೧೦೮. ಆಗ ಆ ರಾಕ್ಷಸನು ಜ್ವಲಿಸುತ್ತಿರುವ ಶಕ್ತ್ಯಾಯುಧವೊಂದನ್ನು ತೆಗೆದುಕೊಂಡು ಭಗವತಿಯ ಕಡೆಗೆ ಬೀಸಿದನು. ಯುದ್ಧರಂಗದಲ್ಲಿ ಮಹಾವೇಗದಿಂದ ತನ್ನ ಕಡೆಗೆ ಬರುತ್ತಿರುವ ಆ ಶಕ್ತಿಯನ್ನು ಆಕೆಯು ತನ್ನ ಬಿಲ್ಲಿನಿಂದ ಹೊರಟ ತೀಕ್ಷ್ಣಬಾಣಗಳಿಂದ ಪುಡಿಪುಡಿಮಾಡಿದಳು. ಇಂತು ತನ್ನ ಶಕ್ತಿಯು ಭಗ್ನವಾದುದನ್ನು ಕಂಡು ಮಹಾರಾಕ್ಷಸನಾದ ದುರ್ಗನು ದೈತ್ಯಸಮೂಹಕ್ಕೆಲ್ಲ ಮಹಾಸಂತೋಷವನ್ನುಂಟುಮಾಡುವ ಚಕ್ರಾಯುಧವನ್ನು ಕಳುಹಿಸಿದನು. ಅದೂ ಸಹ ದೇವಿಯು ಬಿಟ್ಟ ನೂರಾರು ಬಾಣಗಳಿಂದ ಮಧ್ಯಮಾರ್ಗದಲ್ಲಿಯೇ ಚೂರಾಗಿಬಿದ್ದಿತು.

೧೦೯. ಬಳಿಕ ದೇವಮರ್ದನನಾದ ಅವನು ಮಹೇಂದ್ರನ ಧನುಸ್ಸಿಗೆ ಸಮಾನವಾದ ಶಾರ್ಙ್ಗವೆಂಬ ಬಿಲ್ಲನ್ನು ತೆಗೆದುಕೊಂಡು ಬಾಣವನ್ನು ಹೂಡಿ ದೇವಿಯ ಹೃದಯ ಪ್ರದೇಶಕ್ಕೆ ಗುರಿಯಿಟ್ಟು ಹೊಡೆದನು.

೧೧೦. ಎಲೈ ಮುನಿಯೆ ! ಆ ಬಾಣವಾದರೊ, ದೇವಿಯ ಅತ್ಯಂತವೇಗಾನ್ವಿತಗಳಾದ ಅನೇಕ ಬಾಣಗಳಿಂದ ತಡೆಯಲ್ಪಟ್ಟರೂ ವೇಗದಿಂದ ಅವಳನ್ನು ಸಮೀಪಿಸುತ್ತಲೇ ಬರುತ್ತಿದ್ದಿತು.

೧೧೧. ಆಗ ದೇವಿಯು ಎರಡನೆಯ ಯಮದಂಡವೊ ಎಂಬಂತೆ ಸಮೀಪಿಸುತ್ತಿದ್ದ ಆ ಬಾಣವನ್ನು ವೇಗವಾಗಿ ಬೀಸಿದ ಬಿಲ್ಲಿನ ಕೋಲಿನಿಂದಲೇ ಹೊಡೆದು ವಿಪತ್ತನ್ನು ತಪ್ಪಿಸಿಕೊಂಡಳು.

ತಸ್ಮಿನ್ನಿಷ್ಫಲತಾಂ ಯಾತೇ ಮಾರ್ಗಣೇ ದುರ್ಗಮಾಸುರಃ ।
ಕ್ರುದ್ಧಃ ಶೂಲಂ ಸಮಾದಾಯ ಸಂವರ್ತಾನಲಸುಪ್ರಭಮ್ ॥ ೧೧೨ ॥
ಮಹಾವೇಗೇನ ಚಿಕ್ಷೇಪ ತಾಂ ದೇವೀಮಭಿ ದೈತ್ಯಪಃ ।
ಪರಾಪತಚ್ಚ ತಚ್ಛೂಲಂ ನಿಜಶೂಲೇನ ಚಂಡಿಕಾ ॥ ೧೧೩ ॥
ಅಂತರೈವ ಪ್ರಚಿಚ್ಛೇದ ಸಹದೈತ್ಯಜಯಾಶಯಾ ।
ತಸ್ಮಿನ್ನಪಿ ಮಹಾಶೂಲೇ ದೇವೀಶೂಲಾವಹೇಲಿತೇ ॥ ೧೧೪ ॥
ಗದಾಮಾದಾಯ ದೈತ್ಯೇಂದ್ರಃ ಸಹಸಾಭಿಪಪಾತ ಹ ।
ಆಜಘಾನ ಚ ತಾಂ ದೇವೀಂ ಭುಜಮೂಲೇ ಮಹಾಬಲಃ ॥ ೧೧೫ ॥
ಸಾಪಿ ದೇವೀಭುಜಂ ಪ್ರಾಪ್ಯ ಗಿರೀಂದ್ರಶಿಖರಾಕೃತಿಃ ।
ಗದಾಶು ಪರಿಪುಸ್ಫೋಟ ಶತಧಾ ಚ ಸಹಸ್ರಧಾ ॥ ೧೧೬ ॥
ತದಾ ದೇವ್ಯಾ ಸ ದೈತ್ಯೇಂದ್ರೋ ವಾಮಪಾದತಲೇನ ಹಿ ।
ಆತಾಡಿತಃ ಪಪಾತೋರ್ವ್ಯಾಂ ಹೃದಿ ಗಾಢಂ ಪ್ರಪೀಡಿತಃ ॥ ೧೧೭ ॥
ತತ್ಕ್ಷಣಾದೇವ ದೈತ್ಯೇಂದ್ರಃ ಪತಿತ್ವಾ ಪುನರುತ್ಥಿತಃ ।
ಬಭೂವ ಸಹಸಾ ದೃಶ್ಯೋ ದೀಪೋ ವಾತಹತೋ ಯಥಾ ॥ ೧೧೮ ॥

---

೧೧೨–೧೧೫. ಇಂತು ತನ್ನ ಬಾಣವು ನಿಷ್ಫಲವಾಗಿ ಪರಿಣಮಿಸಲು ಆ ದುರ್ಗಮಹಾದೈತ್ಯನು ಮಹಾ ಕೋಪಾವಿಷ್ಟನಾಗಿ ಪ್ರಳಯಾಗ್ನಿಯ ತೇಜಸ್ಸಿನಿಂದೊಡಗೂಡಿದ ಮತ್ತೊಂದು ಶೂಲವನ್ನು ತೆಗೆದುಕೊಂಡು ದೇವಿಗೆ ಅಭಿಮುಖವಾಗಿ ಮಹಾವೇಗದಿಂದ ಬಿಸುಟನು. ಚಂಡಿಕೆಯು ತನ್ನ ಕಡೆಗೆ ಬರುತ್ತಿರುವ ಆ ಶೂಲವನ್ನು ತನ್ನ ಶೂಲದಿಂದ ಹೊಡೆಯಲು ಅದು ಮಧ್ಯದಲ್ಲಿಯೇ ಮುರಿದು ಬಿದ್ದಿತು. ಅದರೊಡನೆ ರಾಕ್ಷಸನ ವಿಜಯದ ಆಶೆಯೂ ಮುರಿದುಬಿದ್ದಿತು. ಆ ಮಹಾಶೂಲವೂ ಸಹ ದೇವಿಯ ಶೂಲದಿಂದ ಲೀಲಾಮಾತ್ರವಾಗಿ ನಿಗ್ರಹಿಸಲ್ಪಡಲು ರಾಕ್ಷಸೇಂದ್ರನು ಗದೆಯನ್ನು ತೆಗೆದುಕೊಂಡು ಸಂಭ್ರಮದಿಂದ ಮೇಲೆರಗಿ ಬಂದನು. ಮತ್ತು ಮಹಾಬಲಶಾಲಿಯಾದ ಅವನು ದೇವಿಯನ್ನು ಭುಜಮೂಲ ಪ್ರದೇಶದಲ್ಲಿ ಹೊಡೆದನು.

೧೧೬. ಮಹಾಪರ್ವತದ ಕೋಡುಗಲ್ಲಿನಂತೆ ಆಕಾರವುಳ್ಳ ಆ ಗದೆಯು ಮಹಾದೇವಿಯ ಭುಜವನ್ನು ಸೋಕಿದ ಮಾತ್ರಕ್ಕೇ ನೂರಾರು ಸಾವಿರಾರು ಚೂರುಗಳಾಗಿ ಮುರಿದುಬಿದ್ದಿತು.

೧೧೭. ಆಗ ದೇವಿಯು ತನ್ನ ಎಡಗಾಲಿನಿಂದ ಆ ರಾಕ್ಷಸನನ್ನು ಬಲವಾಗಿ ಒದೆದಳು. ಅದರಿಂದ ಅವನು ಹೃದಯದಲ್ಲಿ ಬಲವಾಗಿ ಪೆಟ್ಟನ್ನು ತಿಂದು ಸಂಕಟಗೊಂಡು ನೆಲಕ್ಕೆ ಉರುಳಿದನು.

೧೧೮. ಆ ರಾಕ್ಷಸೇಂದ್ರನು ಕ್ಷಣಮಾತ್ರದಲ್ಲಿಯೇ ನೆಲಕ್ಕೆ ಬಿದ್ದು ಪುನಃ

ತಾವಜ್ಜಗಜ್ಜನನ್ಯಾ ತಾಃ ಪ್ರೇರಿತಾ ನಿಜಶಕ್ತಯಃ ।
ವಿಚೇರುರ್ದೈತ್ಯಸೈನ್ಯೇಷು ಸಂವರ್ತೇ ಮೃತ್ಯುಸೈನ್ಯವತ್ ॥ ೧೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದುರ್ಗಾಪರಾಕ್ರಮವರ್ಣನಂ"
ನಾಮೈಕಸಪ್ತತಿತಮೋಽಧ್ಯಾಯಃ

---

ಮೇಲಕ್ಕೆದ್ದು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ದೀಪದ ಜ್ವಾಲೆಯಂತೆ ತೂಗಾಡುತ್ತ ಸಂಭ್ರಾಂತನಾಗಿ ಕಾಣುತ್ತಿದ್ದದು.

೧೧೯. ಅಷ್ಟರಲ್ಲಿಯೇ ಲೋಕಮಾತೆಯಾದ ವಿಂಧ್ಯವಾಸಿನಿಯ ಪ್ರೇರಣೆಯನ್ನು ಹೊಂದಿದ ಆಕೆಯ ಶಕ್ತಿಯರೆಲ್ಲರೂ ಪ್ರಳಯಕಾಲದಲ್ಲಿ ಜೀವರನ್ನು ಸದೆಬಡಿಯುವ ಯಮಧರ್ಮರಾಜನ ಸೈನ್ಯದವರಂತೆ ರಾಕ್ಷಸಸೈನ್ಯದವರಲ್ಲಿ ಸ್ವೇಚ್ಛೆಯಾಗಿ ಓಡಾಡುತ್ತಿದ್ದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ದುರ್ಗಾಪರಾಕ್ರಮವರ್ಣನ"ವೆಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತಿತಮೋಽಧ್ಯಾಯಃ

### ದುರ್ಗಾವಿಜಯವರ್ಣನಂ

ಅಗಸ್ತ್ಯ ಉವಾಚ :—

ಪಾರ್ವತೀಹೃದಯಾನಂದ ಸ್ಕಂದ ಸರ್ವಜ್ಞನಂದನ ।
ಕಾಃ ಕಾಸ್ತು ಶಕ್ತಯಸ್ತಾ ವೈ ತಾಸಾಂ ನಾಮಾನಿ ಮೇ ವದ ॥ ೧ ॥

ಸ್ಕಂದ ಉವಾಚ :—

ತಾಸಾಂ ಪರಮಶಕ್ತೀನಾಮುಮಾವಯವಸಂಭವಾಂ ।
ಆಖ್ಯಾಮ್ಯಾಖ್ಯಾನ್ ಶೃಣು ಮುನೇ ಕುಂಭಸಂಭವ ತತ್ತ್ವತಃ ॥ ೨ ॥
ತ್ರೈಲೋಕ್ಯವಿಜಯಾ ತಾರಾ ಕ್ಷಮಾ ತ್ರೈಲೋಕ್ಯಸುಂದರೀ ।
ತ್ರಿಪುರಾ ತ್ರಿಜಗನ್ಮಾತಾ ಭೀಮಾ ತ್ರಿಪುರಭೈರವೀ ॥ ೩ ॥
ಕಾಮಾಖ್ಯಾ ಕಮಲಾಕ್ಷೀ ಚ ಧೃತಿಸ್ತ್ರಿಪುರತಾಪನೀ ।
ಜಯಾ ಜಯಂತೀ ವಿಜಯಾ ಜಲೇಶೀ ಚಾಪರಾಜಿತಾ ॥ ೪ ॥
ಶಂಖಿನೀ ಗಜವಕ್ತ್ರಾ ಚ ಮಹಿಷಘ್ನೀ ರಣಪ್ರಿಯಾ ।
ಶುಭಾ ನಂದಾ ಕೋಟರಾಕ್ಷೀ ವಿದ್ಯುಜ್ಜಿಹ್ವಾ ಶಿವಾರವಾ ॥ ೫ ॥
ತ್ರಿನೇತ್ರಾ ಚ ತ್ರಿವಕ್ತ್ರಾ ಚ ತ್ರಿಪದಾ ಸರ್ವಮಂಗಲಾ ।
ಹುಂಕಾರಹೇತಿಸ್ತಾಲೇಶೀ ಸರ್ಪಾಸ್ಯಾ ಸರ್ವಸುಂದರೀ ॥ ೬ ॥

---

## ಕನ್ನಡದ ಅನುವಾದ

### ದುರ್ಗಾದೇವಿಯ ವಿಜಯವರ್ಣನ

೧. ಅಗಸ್ತ್ಯನು ಕೇಳುತ್ತಾನೆ:—ಪಾರ್ವತಿಯ ಮನಸ್ಸಿನ ಆನಂದಕ್ಕೆ ಕಾರಣನಾದ ಷಣ್ಮುಖನೆ! ಸರ್ವಜ್ಞನಾದ ಮಹೇಶ್ವರನ ಪುತ್ರನೆ! ಆ ಶಕ್ತಿಯರು ಯಾರು ಯಾರು? ಅವರ ಹೆಸರುಗಳನ್ನು ನನಗೆ ತಿಳಿಸು.

೨. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮಹಾಮುನಿಯೆ! ಉಮಾದೇವಿಯ ಶರೀರದಿಂದುದ್ಭವಿಸಿದ ಆ ಪರಮ ಶಕ್ತಿಯರ ಹೆಸರುಗಳನ್ನು ಯಥಾರ್ಥವಾಗಿ ತಿಳಿಸುವೆನು. ಶ್ರದ್ಧೆಯಿಂದ ಕೇಳು.

೩–೧೩. ತ್ರೈಲೋಕ್ಯವಿಜಯೆ, ತಾರೆ, ಕ್ಷಮಾ, ತ್ರಿಲೋಕಸುಂದರಿ, ತ್ರಿಪುರಾ, ತ್ರಿಲೋಕಮಾತಾ, ಭೀಮಾ, ತ್ರಿಪುರಭೈರವಿ, ಕಾಮಾಖ್ಯ, ಕಮಲಾಕ್ಷಿ, ಧೃತಿ, ತ್ರಿಪುರತಾಪಿನಿ, ಜಯಾ, ಜಯಂತಿ, ವಿಜಯಾ, ಜಲೇಶಿ, ಅಪರಾಜಿತಾ, ಶಂಖಿನಿ, ಗಜವಕ್ತ್ರಾ, ಮಹಿಷಘ್ನಿ, ರಣಪ್ರಿಯಾ, ಶುಭಾ, ನಂದಾ, ಕೋಟರಾಕ್ಷಿ, ವಿದ್ಯುಜ್ಜಿಹ್ವಾ, ಶಿವಾರವಾ, ತ್ರಿನೇತ್ರಾ, ತ್ರಿವಕ್ತ್ರಾ, ತ್ರಿಪದಾ, ಸರ್ವಮಂಗಳಾ, ಹುಂಕಾರಹೇತಿ, ತಾಲೇಶಿ, ಸರ್ಪಾಸ್ಯಾ, ಸರ್ವ

ಸಿದ್ಧಿರ್ಬುದ್ಧಿಃ ಸ್ವಧಾ ಸ್ವಾಹಾ ಮಹಾನಿದ್ರಾ ಶರಾಸನಾ ।
ಪಾಶಪಾಣಿಃ ಖರಮುಖೀ ವಜ್ರತಾರಾ ಷಡಾನನಾ ॥ ೭ ॥
ಮಯೂರವದನಾ ಕಾಕೀ ಶುಕೀ ಭಾಸೀ ಗರುತ್ಮತೀ ।
ಪದ್ಮಾವತೀ ಪದ್ಮಕೇಶೀ ಪದ್ಮಾಸ್ಯಾ ಪದ್ಮವಾಸಿನೀ ॥ ೮ ॥
ಅಕ್ಷರಾ ತ್ರ್ಯಕ್ಷರಾ ತಂತುಃ ಪ್ರಣವೇಶೀ ಸ್ವರಾತ್ಮಿಕಾ ।
ತ್ರಿವರ್ಗಾ ಗರ್ವರಹಿತಾ ಅಜಪಾ ಜಪಹಾರಿಣೀ ॥ ೯ ॥
ಜಪಸಿದ್ಧಿಸ್ತಪಸ್ಸಿದ್ಧಿರ್ಯೋಗಸಿದ್ಧಿಃ ಪರಾಮೃತಾ ।
ಮೈತ್ರೀಕೃನ್ಮಿತ್ರನೇತ್ರಾ ಚ ರಕ್ಷೋಘ್ನೀ ದೈತ್ಯತಾಪಿನೀ ॥ ೧೦ ॥
ಸ್ತಂಭನೀ ಮೋಹನೀ ಮಾಯಾ ಬಹುಮಾಲಾ ಬಲೋತ್ಕಟಾ ।
ಉಚ್ಚಾಟನೀ ಮಹೋಲ್ಕಾಸ್ಯಾ ದನುಜೇಂದ್ರಕ್ಷಯಂಕರೀ ॥ ೧೧ ॥
ಕ್ಷೇಮಂಕರೀ ಸಿದ್ಧಿಕರೀ ಛಿನ್ನಮಸ್ತಾ ಶುಭಾನನಾ ।
ಶಾಕಂಭರೀ ಮೋಕ್ಷಲಕ್ಷ್ಮೀಸ್ತ್ರಿವರ್ಗಫಲದಾಯಿನೀ ॥ ೧೨ ॥
ವಾರ್ತಾಲೀ ಜಂಭಲೀ ಕ್ಲಿನ್ನಾ ಅಶ್ವಾರೂಢಾ ಸುರೇಶ್ವರೀ ।
ಜ್ವಾಲಾಮುಖೀಪ್ರಭೃತಯೋ ನವಕೋಟ್ಯೋ ಮಹಾಬಲಾಃ ॥ ೧೩ ॥
ಬಲಾನಿ ಬಲಿನಾಂ ತಾಭಿರ್ದಾನವಾನಾಂ ಸ್ವಲೀಲಯಾ ।
ಸಂಕ್ಷಿಪ್ತಾನಿ ಜಗಂತೀವ ಪ್ರಲಯಾನಲಹೇತಿಭಿಃ ॥ ೧೪ ॥

---

ಸುಂದರಿ, ಸಿದ್ಧಿ, ಬುದ್ಧಿ, ಸ್ವಧಾ, ಸ್ವಾಹಾ, ಮಹಾನಿದ್ರಾ, ಶರಾಸನಾ, ಪಾಶಪಾಣಿ, ಖರಮುಖಿ, ವಜ್ರತಾರಾ, ಷಡಾನನಾ, ಮಯೂರವದನಾ, ಕಾಕೀ, ಶುಕೀ, ಭಾಸೀ, ಗರುತ್ಮತೀ, ಪದ್ಮಾವತೀ, ಪದ್ಮಕೇಶೀ, ಪದ್ಮಾಸ್ಯಾ, ಪದ್ಮವಾಸಿನೀ, ಅಕ್ಷರಾ, ತ್ರಿಪುರಾ, ತಂತು, ಪ್ರಣವೇಶೀ, ಸ್ವರಾತ್ಮಿಕಾ, ತ್ರಿವರ್ಗಾ, ಗರ್ವರಹಿತಾ, ಅಜಪಾ, ಜಪಹಾರಿಣೀ, ಜಪಸಿದ್ಧಿ, ತಪಸ್ಸಿದ್ಧಿ, ಯೋಗಸಿದ್ಧಿ, ಪರಾಮೃತಾ, ಮೈತ್ರೀಕೃತ್, ಮಿತ್ರನೇತ್ರಾ, ರಕ್ಷೋಘ್ನೀ, ದೈತ್ಯತಾಪಿನೀ, ಸ್ತಂಭನೀ, ಮೋಹಿನೀ, ಮಾಯಾ, ಬಹುಮಾಯಾ, ಬಲೋತ್ಕಟಾ, ಉಚ್ಚಾಟನೀ, ಮಹೋಲ್ಕಾಸ್ಯಾ, ದನುಜೇಂದ್ರಕ್ಷಯಂಕರಿ, ಕ್ಷೇಮಂಕರಿ, ಸಿದ್ಧಿಕರಿ, ಛಿನ್ನಮಸ್ತಾ, ಶುಭಾನನಾ, ಶಾಕಂಭರೀ, ಮೋಕ್ಷಲಕ್ಷ್ಮಿ, ತ್ರಿವರ್ಗಫಲದಾಯಿನಿ, ವಾರ್ತಾಲಿ, ಜಂಭಲಿ, ಕ್ಲಿನ್ನಾ, ಅಶ್ವಾರೂಢಾ, ಸುರೇಶ್ವರೀ, ಜ್ವಾಲಾಮುಖಿ—ಇವರು ಮೊದಲಾಗಿ ಮಹಾಬಲಶಾಲಿಗಳಾದ ಒಂಬತ್ತುಕೋಟಿ ಶಕ್ತಿಯರಿದ್ದರು.

೧೪. ಪ್ರಳಯಾಗ್ನಿಯ ಜ್ವಾಲೆಗಳಿಂದ ಹದಿನಾಲ್ಕು ಲೋಕಗಳು ಸುಟ್ಟು ಸಂಕುಚಿತಗಳಾಗುವಂತೆ ಮಹಾಬಲಿಷ್ಠರಾದ ರಾಕ್ಷಸರ ಸೈನ್ಯವೆಲ್ಲವೂ ಆ ಶಕ್ತಿಯರ ಲೀಲೆಯಿಂದಲೇ ಕ್ಷಯವನ್ನು ಹೊಂದಿತು.

ತಾವತ್ಸ ದುರ್ಗೋ ದೈತ್ಯೇಂದ್ರಃ ಪಯೋದಾಂತರತೋ ಬಲೀ ।
ಚಕಾರ ಕರಕಾವೃಷ್ಟಿಂ ವಾತ್ಯಾ ವೇಗವತೀಂ ಬಹು ॥ ೧೫ ॥
ತತೋ ಭಗವತೀ ದೇವೀ ಶೋಷಣಾಸ್ತ್ರಪ್ರಯೋಗತಃ ।
ವೃಷ್ಟಿಂ ನಿವಾರಯಾಮಾಸ ವರ್ಷೋಪಲಮಯೀಂ ಕ್ಷಣಾತ್ ॥ ೧೬ ॥
ಯೋಷಿನ್ಮನೋರಥವತೀ ಷಂಡಂ ಪ್ರಾಪ್ಯ ಯಥಾಽಫಲಾ ।
ಸಾ ದೈತ್ಯಕರಕಾವೃಷ್ಟಿರ್ದೇವೀಂ ಪ್ರಾಪ್ಯ ತಥಾಭವತ್ ॥ ೧೭ ॥
ಅಥ ದೈತೇಯರಾಜೇನ ಬಾಹುಸಂಕರ್ಷಕೋಪತಃ ।
ಉತ್ಪಾಟ್ಯ ಶೈಲಶಿಖರಂ ಪರಿಕ್ಷಿಪ್ತಂ ನಭೋಽಙ್ಗಣಾತ್ ॥ ೧೮ ॥
ಅದ್ರೇಃ ಶೃಂಗಂ ಸುವಿಸ್ತೀರ್ಣಮಾಪತತ್ಪರಿವೀಕ್ಷ್ಯ ಸಾ ।
ಶತಕೋಟಿಪ್ರಹಾರೇಣ ಕೋಟಿಶಃ ಸಕಲಂ ವ್ಯಧಾತ್ ॥ ೧೯ ॥
ಆಂದೋಲ್ಯ ಮೌಲಿಮಸಕೃತ್ಕುಂಡಲಾಭ್ಯಾಂ ವಿರಾಜಿತಂ ।
ಗಜೀಭೂಯಾಶು ದುದ್ರಾವ ತಾಂ ದೇವೀಂ ಸಮರೇಽಸುರಃ ॥ ೨೦ ॥
ಶೈಲಾಕಾರಂ ತಮಾಯಾಂತಂ ದೃಷ್ಟ್ವಾ ಭಗವತೀ ಗಜಂ ।
ಬದ್ಧ್ವಾ ಪಾಶೇನ ಜವತಃ ಖಡ್ಗೇನ ಕರಮಚ್ಛಿನತ್ ॥ ೨೧ ॥

---

೧೫. ಅಷ್ಟರಲ್ಲಿ ರಾಕ್ಷಸೇಶ್ವರನಾದ ದುರ್ಗನು ತನ್ನ ಮಾಯೆಯಿಂದ ಮೇಘಮಂಡಲದ ಮಧ್ಯದಲ್ಲಿ ಸೇರಿ ಬಿರುಗಾಳಿಯೊಡಗೂಡಿದ ಅಪರಿಮಿತವಾದ ಆನೆಕಲ್ಲುಗಳ ಮಳೆಯನ್ನು ಸೈನ್ಯದಮೇಲೆ ಸುರಿಸಿದನು.

೧೬. ಆಗ ಭಗವತಿಯು ಶೋಷಣಾಸ್ತ್ರವನ್ನು ಪ್ರಯೋಗಮಾಡಿ ಕ್ಷಣಮಾತ್ರದಲ್ಲಿಯೇ ಆ ಮಳೆಯನ್ನು ತಡೆದು ನಿಲ್ಲಿಸಿದಳು.

೧೭. ಬಹಳ ಕುತೂಹಲದಿಂದ ಯುಕ್ತಳಾದ ಸ್ತ್ರೀಯು ನಪುಂಸಕನನ್ನು ಸೇರಿ ಹೇಗೆ ವ್ಯರ್ಥಮನೋರಥಳಾಗುವಳೊ, ಹಾಗೆಯೇ ಆ ಆನೆಕಲ್ಲಿನ ಮಳೆಯೂ ದೇವಿಯ ಸಮೀಪವನ್ನು ಸೇರಿ ನಿಷ್ಫಲವಾಯಿತು.

೧೮. ಆಗ ದೈತ್ಯರಾಜನು ಕೋಪದಿಂದ ತೋಳುಗಳನ್ನು ಹಿಸುಕಿಕೊಳ್ಳುತ್ತ ವಿಶಾಲವಾದ ಒಂದು ಪರ್ವತದ ಕೊನೆಯನ್ನೇ ಕಿತ್ತು ಅಂತರಿಕ್ಷದಿಂದಲೇ ಅದನ್ನು ದೇವಿಯ ಮೇಲೆ ಎಸೆದನು.

೧೯. ಬಹಳ ವಿಶಾಲವಾದ ಆ ಬೆಟ್ಟದ ಶೃಂಗವು ಮೇಲೆಬೀಳುತ್ತಿರುವುದನ್ನು ಕಂಡು ದೇವಿಯು ವಜ್ರಾಯುಧದ ಪ್ರಹಾರದಿಂದ ಅದನ್ನೆಲ್ಲವನ್ನೂ ಕೋಟಿಭಾಗಗಳಾಗಿ ಕತ್ತರಿಸಿಹಾಕಿದಳು.

೨೦. ಚಿನ್ನದ ಕುಂಡಲಗಳಿಂದಲಂಕೃತವಾದ ತನ್ನ ತಲೆಯನ್ನು ಮತ್ತೆ ಮತ್ತೆ ತೂಗುತ್ತ ಆ ರಾಕ್ಷಸನು ನೆಲಕ್ಕಿಳಿದು ಆನೆಯ ರೂಪವನ್ನು ಸ್ವೀಕರಿಸಿ ರಣಭೂಮಿಯಲ್ಲಿ ವೇಗದಿಂದ ದೇವಿಗೆ ಅಭಿಮುಖವಾಗಿ ಓಡಿಬಂದನು.

೨೧. ಪರ್ವತಸಮಾನವಾದ ದೇಹದಿಂದ ಕೂಡಿದುದಾಗಿ ತನ್ನ ಮೇಲೆರಗಿ

ತತೋಽತ್ಯಂತಂ ಸ ಚೀತ್ಕೃತ್ಯ ದೇವ್ಯಾ ಕೃತ್ತಕರಃ ಕರೀ ।
ಅಕಿಂಚಿತ್ಕರತಾಂ ಪ್ರಾಪ್ಯ ಮಾಹಿಷಂ ವಪುರಾದದೇ ॥ ೨೨ ॥
ಅಚಲಾಂ ಸಚಲಾಂ ಸರ್ವಾಂ ಸ ಚಕ್ರೇ ಖುರಘಾತತಃ ।
ಶಿಲೋಚ್ಚಯಾಂಶ್ಚ ಬಹುಶಃ ಶೃಂಗಾಭ್ಯಾಂ ಸೋಽಕ್ಷಿಪದ್ಬಲೀ ॥ ೨೩ ॥
ನಿಶ್ವಾಸವಾತಾನಿಹತಾಃ ಪೇತುರುರ್ವ್ಯಾಂ ಮಹಾದ್ರುಮಾಃ ।
ಉದ್ವೇಲಿತಾಃ ಸಮಭವನ್ಸಪ್ತಾಪಿ ಜಲರಾಶಯಃ ॥ ೨೪ ॥
ಮಹಾಮಹಿಷರೂಪೇಣ ತೇನ ತ್ರೈಲೋಕ್ಯಮಂಡಪಃ ।
ಆಂದೋಲಿತೋಽತಿಬಲಿನಾ ಯುಗಾಂತೇ ವಾತ್ಯಯಾ ಯಥಾ ॥ ೨೫ ॥
ಬ್ರಹ್ಮಾಂಡಮಪ್ಯಕಾಂಡೇನ ತದ್ಭಯೇನ ಸಮಾಕುಲಂ ।
ದೃಷ್ಟ್ವಾ ಭಗವತೀ ಕ್ರುದ್ಧಾ ತ್ರಿಶೂಲೇನ ಜಘಾನ ತಂ ॥ ೨೬ ॥
ತ್ರಿಶೂಲಘಾತವಿಭ್ರಾಂತಃ ಪತಿತ್ವಾ ಪುನರುತ್ಥಿತಃ ।
ತಂ ತ್ಯಕ್ತ್ವಾ ಮಾಹಿಷಂ ವೇಷಮಭೂದ್ಬಾಹುಸಹಸ್ರಭೃತ್ ॥ ೨೭ ॥

---

ತ್ತಿರುವ ಆನೆಯನ್ನು ಕಂಡು ಭಗವತಿಯು ಶೀಘ್ರವಾಗಿ ಪಾಶದಿಂದ ಅದನ್ನು ಕಟ್ಟಿ ತನ್ನ ಕತ್ತಿಯಿಂದ ಅದರ ಸೊಂಡಿಲನ್ನು ಕತ್ತರಿಸಿಹಾಕಿದಳು.

೨೨. ಆಗ ಬಹುವಾಗಿ ಚೀತ್ಕಾರವನ್ನು ಮಾಡುತ್ತ ಸೊಂಡಿಲನ್ನು ಕಳೆದುಕೊಂಡು ಆ ರಾಕ್ಷಸನು ಮತ್ತೇನನ್ನೂ ಮಾಡಲಾರದೆ ಎಮ್ಮೆಯ ರೂಪವನ್ನು ತೆಗೆದುಕೊಂಡು ಬಂದನು.

೨೩. ಅವನು ತನ್ನ ಗೊರಸುಗಳ ಹೊಡೆತದಿಂದ ಅಚಲವೆನಿಸಿದ ಭೂಮಿಯನ್ನೂ ಚಲಿಸುವಂತೆ ಮಾಡುತ್ತ ಬಲಶಾಲಿಯಾದುದರಿಂದ ಅನೇಕ ಕೋಡುಗಲ್ಲುಗಳ ಸಮೂಹಗಳನ್ನೂ ತನ್ನ ಕೊಂಬುಗಳಿಂದ ಎತ್ತಿಹಾಕುತ್ತಿದ್ದನು.

೨೪. ಅವನ ನಿಟ್ಟುಸಿರಿನ ಗಾಳಿಯ ಹೊಡೆತಕ್ಕೆ ಸಿಕ್ಕಿದ ಮಹಾವೃಕ್ಷಗಳೂ ಭೂಮಿಯಲ್ಲಿ ಮುರಿದುಬಿದ್ದುವು. ಏಳು ಸಮುದ್ರಗಳೂ ಆ ಗಾಳಿಯ ರಭಸಕ್ಕೆ ತುತ್ತಾಗಿ ಅಲ್ಲಕಲ್ಲೋಲವಾಗಿ ಮೇರೆದಪ್ಪಿ ಉಕ್ಕಿಹೋದುವು.

೨೫. ಅತ್ಯಂತ ಬಲಿಷ್ಠನಾದ ಆ ಮಹಾಮಹಿಷನ ರೂಪವನ್ನು ತಳೆದ ಆ ರಾಕ್ಷಸನಿಂದ ಬ್ರಹ್ಮಾಂಡವೆಂಬ ಮಂಟಪವೆಲ್ಲವೂ ಪ್ರಳಯಕಾಲದ ಬಿರುಗಾಳಿಗೆ ಸಿಕ್ಕಿದಂತೆ ತೂಗಾಡತೊಡಗಿತು.

೨೬. ನಿಷ್ಕಾರಣವಾಗಿಯೇ ಬ್ರಹ್ಮಾಂಡವು ಅವನ ಭಯದಿಂದ ವ್ಯಾಕುಲಗೊಂಡಿತು. ಇದನ್ನು ಕಂಡು ಕೋಪಗೊಂಡ ಆ ಭಗವತಿಯು ತನ್ನ ತ್ರಿಶೂಲದಿಂದ ಆ ಮಹಿಷವನ್ನು ಹೊಡೆದಳು.

೨೭. ಆ ರಾಕ್ಷಸನಾದರೊ ಆ ತ್ರಿಶೂಲದ ಹೊಡೆತದಿಂದ ಸಂಭ್ರಾಂತನಾಗಿ ನೆಲಕ್ಕೆ ಬಿದ್ದು ಪುನಃ ಮೇಲಕ್ಕೆದ್ದನು. ಅಲ್ಲದೆ ಅವನು ಮಹಿಷರೂಪವನ್ನು ತ್ಯಜಿಸಿ ಸಾವಿರ ಬಾಹುಗಳಿಂದೊಡಗೂಡಿದವನಾಗಿ ಮತ್ತೆ ಕಾಣಿಸಿಕೊಂಡನು.

ಸ ದುರ್ಗೋ ನಿತರಾಂ ದುರ್ಗೋ ವಿಬಭೌ ಸಮರಾಜಿರೇ ।
ಆಯುಧಾನಾಂ ಸಹಸ್ರಾಣಿ ಬಿಭ್ರತ್ಕಾಲಾಂತಕೋಪಮಃ ॥ ೨೮ ॥
ಅಥ ತೂರ್ಣಂ ಸ ದೈತ್ಯೇಂದ್ರಸ್ತಾಂ ದೇವೀಂ ರಣಕೋವಿದಾಂ ।
ಮಹಾಬಲಃ ಪ್ರಗೃಹ್ಯಾಶು ನೀತವಾನ್ಗಗನಾಂಗಣಂ ॥ ೨೯ ॥
ತತೋ ನಭೋಽಂಗಣಾದ್ದೂರಾತ್ಕ್ಷಿಪ್ತ್ವಾ ಸ ಜಗದಂಬಿಕಾಂ ।
ಕ್ಷಣಾತ್ಕಲಂಬಜಾಲೇನ ಚ್ಛಾದಯಾಮಾಸ ವೇಗವಾನ್ ॥ ೩೦ ॥
ಅಥಾಂತರಿಕ್ಷಗಾ ದೇವೀ ತಸ್ಯ ಮಾರ್ಗಣಮಧ್ಯಗಾ ।
ವಿದ್ಯುನ್ಮಾಲೇವ ವಿಬಭೌ ಮಹಾಭ್ರಪಟಲೀಧೃತಾ ॥ ೩೧ ॥
ತಾಂ ವಿಧೂಯ ಶರವ್ರಾತಂ ನಿಜೇಷುನಿಕರೈರಲಂ ।
ಮಹೇಷುಣಾಥ ವಿವ್ಯಾಧ ಸಾ ತಂ ದೈತ್ಯಜನೇಶ್ವರಂ ॥ ೩೨ ॥
ಹೃದಿ ವಿದ್ಧಸ್ತಯಾ ದೇವ್ಯಾ ಸ ಚ ತೇನ ಮಹೇಷುಣಾ ।
ವ್ಯಾಘೂರ್ಣಮಾನನಯನಃ ಕ್ಷಿತಿಮಾಪಾತಿವಿಹ್ವಲಃ ॥ ೩೩ ॥

---

೨೮. ಯಾನಾಗಲೂ ಅಜೇಯನಾಗಿದ್ದ ಆ ದುರ್ಗರಾಕ್ಷಸೇಂದ್ರನು ಕೈಗಳಲ್ಲಿ ಸಾವಿರಾರು ಆಯುಧಗಳನ್ನು ಹಿಡಿದುಕೊಂಡು ಯಮನನ್ನು ಹೋಲುವವನಾಗಿ ಯುದ್ಧರಂಗದಲ್ಲಿ ಪ್ರಕಾಶಿಸುತ್ತಿದ್ದನು.

೨೯. ಮತ್ತು ಯುದ್ಧಶಾಸ್ತ್ರದಲ್ಲಿ ನಿಪುಣಳಾದ ದೇವಿಯನ್ನು ನಿಮಿಷಮಾತ್ರದಲ್ಲಿಯೇ ಹಿಡಿದುಕೊಂಡು ಮಹಾಬಲಶಾಲಿಯಾದುದರಿಂದ ಆಕೆಯನ್ನು ಆಕಾಶಮಾರ್ಗದಲ್ಲಿ ಎತ್ತಿಕೊಂಡು ಹೋದನು.

೩೦. ಬಳಿಕ ಆಕಾಶದಿಂದಲೇ ಲೋಕಮಾತೆಯನ್ನು ದೂರಕ್ಕೆ ಬಿಸುಟು ತನ್ನ ಹಸ್ತಲಾಘವವನ್ನು ತೋರಿಸುತ್ತ ಕ್ಷಣಮಾತ್ರದಲ್ಲಿಯೇ ಆಕೆಯನ್ನು ಬಾಣಗಳ ಮಳೆಯನ್ನು ಕರೆದು ಮರೆಮಾಡಿದನು.

೩೧. ಆಗ ದೇವಿಯು ಅಂತರಿಕ್ಷದಲ್ಲಿ ಅವನ ಬಾಣಗಳ ಮಧ್ಯದಲ್ಲಿ ನಿಂತು ಮಹಾಮೇಘಗಳ ಗುಂಪಿನ ಮಧ್ಯದಲ್ಲಿ ಹೊಳೆಯುತ್ತಿರುವ ಮಿಂಚಿನಬಳ್ಳಿಯಂತೆ ಪ್ರಕಾಶಮಾನಳಾಗಿದ್ದಳು.

೩೨. ಮತ್ತು ಆ ಬಾಣಸಮೂಹವನ್ನೆಲ್ಲ ತನ್ನ ಬಾಣಗಳಿಂದ ನಿಮಿಷಮಾತ್ರದಲ್ಲಿಯೇ ಚೆದರಿಸಿ ಆ ರಾಕ್ಷಸರಾಜನನ್ನು ಮಹತ್ತರವಾದ ಒಂದು ಬಾಣದಿಂದ ವ್ಯಥೆಗೊಳಿಸಿದಳು.

೩೩. ದೇವಿಯ ಮಹಾಸ್ತ್ರದಿಂದ ಹೃದಯಪ್ರದೇಶದಲ್ಲಿ ಪೆಟ್ಟನ್ನು ತಿಂದ ಆ ಮಹಾಸುರನು ಸಂಕಟಗೊಂಡು ಕಣ್ಣುಗಳು ಕೆಂಪೇರಿ ತಿರುಗುತ್ತಿರಲು ಪ್ರಜ್ಞೆ ತಪ್ಪಿ ಭೂಮಿಯಲ್ಲಿ ಬಿದ್ದುರುಳಿದನು.

ಮಹಾರುಧಿರಧಾರಾಭಿಃ ಸ್ರವಂತೀಂ ಚ ಪ್ರವರ್ತಯನ್ ।
ತಸ್ಮಿನ್ನಿಪತಿತೇ ದುರ್ಗೇ ಮಹಾದುರ್ಗಪರಾಕ್ರಮೇ ॥ ೩೪ ॥
ದೇವದುಂದುಭಯೋ ನೇದುಃ ಪ್ರಹೃಷ್ಟಾನಿ ಜಗಂತಿ ಚ ।
ಸೂರ್ಯಾಚಂದ್ರಮಸೌ ಸಾಗ್ನೀ ತೇಜೋ ನಿಜಮವಾಪತುಃ ॥ ೩೫ ॥
ಪುಷ್ಪವೃಷ್ಟಿಂ ಪ್ರಕುರ್ವಂತಃ ಪ್ರಾಪ್ತಾ ದೇವಾ ಮಹರ್ಷಿಭಿಃ ।
ತುಷ್ಟುವುಶ್ಚ ಮಹಾದೇವೀಂ ಮಹಾಸ್ತುತಿಭಿರಾದರಾತ್ ॥ ೩೬ ॥

ದೇವಾ ಊಚುಃ:—

ನಮೋ ದೇವಿ ಜಗದ್ಧಾತ್ರಿ ಜಗತ್ರಯಮಹಾರಣೇ ।
ಮಹೇಶ್ವರಮಹಾಶಕ್ತೇ ದೈತ್ಯದ್ರುಮಕುಠಾರಿಕೇ ॥ ೩೭ ॥
ತ್ರೈಲೋಕ್ಯವ್ಯಾಪಿನಿ ಶಿವೇ ಶಂಖಚಕ್ರಗಧಾಧರಿ ।
ಸ್ವಶಾರ್ಙ್ಗವ್ಯಗ್ರಹಸ್ತಾಗ್ರೇ ನಮೋ ವಿಷ್ಣುಸ್ವರೂಪಿಣಿ ॥ ೩೮ ॥
ಹಂಸಯಾನೇ ನಮಸ್ತುಭ್ಯಂ ಸರ್ವಸೃಷ್ಟಿವಿಧಾಯಿನಿ ।
ಪ್ರಾಚಾಂ ವಾಚಾಂ ಜನ್ಮಭೂಮೇ ಚತುರಾನನರೂಪಿಣಿ ॥ ೩೯ ॥

---

೩೪–೩೫. ಮತ್ತು ತನ್ನ ದೇಹದಿಂದ ಅಪಾರವಾದ ರಕ್ತದ ಧಾರೆಗಳನ್ನು ಸುರಿಸಿ ಒಂದು ನದಿಯನ್ನೇ ಉಂಟುಮಾಡಿದನು. ಇಂತು ಮಹತ್ತರವೂ ಅಜೇಯವೂ ಆದ ಪರಾಕ್ರಮವುಳ್ಳ ದುರ್ಗರಾಕ್ಷಸನು ಸಂಹೃತನಾಗಲು ದೇವತೆಗಳ ಮಂಗಳವಾದ್ಯಗಳೆಲ್ಲವೂ ಮೊಳಗಿದುವು. ಲೋಕಗಳೆಲ್ಲವೂ ಸಂತೋಷಗೊಂಡುವು. ಸೂರ್ಯಚಂದ್ರರೂ ಅಗ್ನಿದೇವನೂ ತಮ್ಮ ಮುನ್ನಿನ ತೇಜಸ್ಸನ್ನು ಪಡೆದರು.

೩೬. ದೇವತೆಗಳು ಮಹರ್ಷಿಗಳೊಡಗೂಡಿ ಪುಷ್ಪವೃಷ್ಟಿಗಳನ್ನು ಸುರಿಸುತ್ತ ಆ ಯುದ್ಧಭೂಮಿಗೆ ಬಂದರು. ಅವರು ಅನೇಕ ಮಹಾಸ್ತೋತ್ರಗಳಿಂದ ಆ ಮಹಾದೇವಿಯನ್ನು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿದರು.

೩೭. ದೇವತೆಗಳು ಹೇಳುತ್ತಾರೆ:—ದೇವಾಧಿದೇವತೆಯೆ! ಲೋಕರಕ್ಷಕಳೆ! ಮೂರು ಲೋಕಗಳ ಉತ್ಪತ್ತಿಗೆ ಕಾರಣಳಾದವಳೆ! ತ್ರಿಲೋಕಸಂಹಾರಕನಾದ ಮಹೇಶ್ವರನಿಗೂ ಶಕ್ತಿಯಾಗಿರುವವಳೆ! ದೈತ್ಯರ ವನಕ್ಕೆ ಕೊಡಲಿಯಂತಿರುವವಳೆ! ನಿನಗೆ ನಮಸ್ಕಾರಗಳನ್ನು ಮಾಡುವೆವು.

೩೮. ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವವಳೂ, ಮಂಗಳಸ್ವರೂಪಿಣಿಯೂ, ಶಂಖ, ಚಕ್ರ, ಗದೆಗಳನ್ನು ಹಿಡಿದಿರುವವಳೂ, ಶಾರ್ಙ್ಗವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವಳೂ, ವಿಷ್ಣುಸ್ವರೂಪಿಣಿಯೂ, ಆದ ನಿನಗೆ ನಮಸ್ಕಾರವು.

೩೯. ಹಂಸವಾಹನವನ್ನಲಂಕರಿಸಿ ಸಮಸ್ತ ಬ್ರಹ್ಮಾಂಡವನ್ನೂ ಸೃಷ್ಟಿ

ತ್ವಮೈಂದ್ರೀ ತ್ವಂ ಚ ಕೌಬೇರೀ ವಾಯವೀ ತ್ವಂ ತ್ವಮಂಬುಪಾ ।
ತ್ವಂ ಯಾಮ್ಯಾ ನೈರ್ಋತೀ ತ್ವಂ ಚ ತ್ವಮೈಶೀ ತ್ವಂ ಚ ಪಾವಕೀ ॥ ೪೦ ॥
ಶಶಾಂಕಕೌಮುದೀ ತ್ವಂ ಚ ಸೌರೀ ಶಕ್ತಿಸ್ತ್ವಮೇವ ಚ ।
ಸರ್ವದೇವಮಯೀ ಶಕ್ತಿಸ್ತ್ವಮೇವ ಪರಮೇಶ್ವರೀ ॥ ೪೧ ॥
ತ್ವಂ ಗೌರೀ ತ್ವಂ ಚ ಸಾವಿತ್ರೀ ತ್ವಂ ಗಾಯತ್ರೀ ಸರಸ್ವತೀ ।
ಪ್ರಕೃತಿಸ್ತ್ವಂ ಮತಿಸ್ತ್ವಂ ಚ ತ್ವಮಹಂಕೃತಿರೂಪಿಣೀ ॥ ೪೨ ॥
ಚೇತಸ್ಸ್ವರೂಪಿಣೀ ತ್ವಂ ವೈ ತ್ವಂ ಸರ್ವೇಂದ್ರಿಯರೂಪಿಣೀ ।
ಪಂಚತನ್ಮಾತ್ರರೂಪಾ ತ್ವಂ ಮಹಾಭೂತಾತ್ಮಿಕೇಽಂಬಿಕೇ ॥ ೪೩ ॥
ಶಬ್ದಾದಿರೂಪಿಣೀ ತ್ವಂ ವೈ ಕರಣಾನುಗ್ರಹಾ ತ್ವಮ್ ।
ಬ್ರಹ್ಮಾಂಡಕರ್ತ್ರೀ ತ್ವಂ ದೇವಿ ಬ್ರಹ್ಮಾಂಡಾಂತಸ್ತ್ವಮೇವ ಹಿ ॥ ೪೪ ॥
ತ್ವಂ ಪರಾಸಿ ಮಹಾದೇವಿ ತ್ವಂ ಚ ದೇವಿ ಪರಾಪರಾ ।
ಪರಾಪರಾಣಾಂ ಪರಮಾ ಪರಮಾತ್ಮಸ್ವರೂಪಿಣೀ ॥ ೪೫ ॥

---

ಮಾಡುವವಳಾಗಿ, ಅನಾದಿಸಿದ್ಧಗಳಾದ ವೇದರಾಶಿಗಳಿಗೆ ಜನ್ಮಭೂಮಿಯೂ ಚತುರ್ಮುಖಬ್ರಹ್ಮರೂಪಿಣಿಯೂ ಆದ ನಿನ್ನನ್ನು ನಮಸ್ಕರಿಸುವೆನು.

೪೦. ನೀನೇ ಮಹೇಂದ್ರನಿಗೂ, ಕುಬೇರನಿಗೂ, ವಾಯುವಿಗೂ, ವರುಣನಿಗೂ, ಯಮನಿಗೂ, ನಿರ್ಋತಿಗೂ, ಈಶಾನನಿಗೂ ಅಗ್ನಿಗೂ ಶಕ್ತಿಯಾಗಿರುವೆ.

೪೧. ನೀನು ಚಂದ್ರಸೂರ್ಯರಲ್ಲಿದ್ದು ಚಂದ್ರನ ಬೆಳದಿಂಗಳೂ, ಸೂರ್ಯನ ತಾಪವೂ ಆಗಿರುವೆ. ಸಮಸ್ತ ದೇವತಾಮಯಳಾದ ನೀನೇ ಪರಮೇಶ್ವರನ ಶಕ್ತಿಸ್ವರೂಪಿಣಿಯಾಗಿರುವೆ.

೪೨. ನೀನೇ ಗೌರಿಯು, ಸಾವಿತ್ರಿಯು, ಗಾಯತ್ರಿಯು, ಸರಸ್ವತಿಯು, ತ್ರಿಗುಣಾತ್ಮಕವಾದ ಪ್ರಕೃತಿಯು, ಬುದ್ಧಿಯು, ಅಹಂಕಾರರೂಪಿಣಿಯೂ ನೀನೆ.

೪೩. ಜೀವರಲ್ಲಿ ಚೇತನಸ್ವರೂಪಳಾದವಳೇ ನೀನು. ಸಕಲೇಂದ್ರಿಯಗಳೂ ನಿನ್ನ ರೂಪಗಳೇ ಆಗಿರುವುವು. ಎಲೌ ಪಾರ್ವತಿಯೆ! ನೀನೇ ಪಂಚತನ್ಮಾತ್ರೆಗಳ ರೂಪದಿಂದಲೂ ಮಹಾಭೂತಗಳ ಅಂತರ್ಯಾಮಿನಿಯಾಗಿಯೂ ಕಾಣಿಸುತ್ತಿರುವೆ.

೪೪. ನೀನೇ ಶಬ್ದಾದಿ ವಿಷಯಗಳ ರೂಪವನ್ನು ತಾಳಿರುವೆ. ಇಂದ್ರಿಯಗಳಿಗೆ ಅಭಿಮಾನಿದೇವತೆಯಾಗಿರುವೆ. ಬ್ರಹ್ಮಾಂಡಕ್ಕೆ ಸೃಷ್ಟಿಕಾರಕಳಾಗಿರುವೆ. ಬ್ರಹ್ಮಾಂಡದ ಸರ್ವಸ್ವದಲ್ಲಿಯೂ ವ್ಯಾಪಿಸಿರುವವಳು ನೀನೆ.

೪೫. ದೇವೇಶ್ವರಿಯಾದ ನೀನೇ ಸರ್ವಶಕ್ತಳು. ಪರವೆನಿಸಿದ ಮಹತ್ತೂ ಅಪರಗಳೆನಿಸಿದ ಅದರ ವಿಕಾರಗಳಾದ ಅಹಂಕಾರಾದಿಗಳೂ ನಿನ್ನ ರೂಪಗಳೇ ಆಗಿರುವುವು. ಈ ಪರಾಪರಗಳೆರಡಕ್ಕೂ ಅತೀತಳಾದ ನೀನೇ ಪರಮಾತ್ಮಸ್ವರೂಪಿಣಿಯೂ ಆಗಿ ತೋರುತ್ತಿರುವೆ.

ಸರ್ವರೂಪಾ ತ್ವಮೀಶಾನಿ ತ್ವಮರೂಪಾಸಿ ಸರ್ವಗೇ ।
ತ್ವಂ ಚಿಚ್ಛಕ್ತಿರ್ಮಹಾಮಾಯೇ ತ್ವಂ ಸ್ವಾಹಾ ತ್ವಂ ಸ್ವಧಾಮೃತೇ ॥ ೪೬ ॥
ವಷಡ್ವೌಷಟ್ಸ್ವರೂಪಾಸಿ ತ್ವಮೇವ ಪ್ರಣವಾತ್ಮಿಕಾ ।
ಸರ್ವಮಂತ್ರಮಯೀ ತ್ವಂ ವೈ ಬ್ರಹ್ಮಾದ್ಯಾಸ್ತ್ವತ್ಸಮುದ್ಭವಾಃ ॥ ೪೭ ॥
ಚತುರ್ವರ್ಗಾತ್ಮಿಕಾ ತ್ವಂ ವೈ ಚತುರ್ವರ್ಗಫಲೋದಯೇ ।
ತ್ವತ್ತಃ ಸರ್ವಮಿದಂ ವಿಶ್ವಂ ತ್ವಯಿ ಸರ್ವಂ ಜಗನ್ನಿಧೇ ॥ ೪೮ ॥
ಯದ್ದೃಶ್ಯಂ ಯದದೃಶ್ಯಂ ಚ ಸ್ಥೂಲಸೂಕ್ಷ್ಮಸ್ವರೂಪತಃ ।
ತತ್ರ ತ್ವಂ ಶಕ್ತಿರೂಪೇಣ ಕಿಂಚಿನ್ನ ತ್ವದೃತೇ ಕ್ವಚಿತ್ ॥ ೪೯ ॥
ಮಾತಸ್ತ್ವಯಾದ್ಯ ವಿನಿಹತ್ಯ ಮಹಾಸುರೇಂದ್ರಂ
ದುರ್ಗಂ ನಿಸರ್ಗವಿಬುಧಾರ್ಪಿತದೈತ್ಯಸೈನ್ಯಂ ।
ತ್ರಾತಾಃ ಸ್ಮ ದೇವಿ ಸತತಂ ನಮತಾಂ ಶರಣ್ಯೇ
ತ್ವತ್ತೋಽಪರಃ ಕ ಇಹ ಯಂ ಶರಣಂ ವ್ರಜಾಮಃ ॥ ೫೦ ॥

---

೪೬. ನೀನೇ ಸರ್ವಸ್ವರೂಪಳಾಗಿರುವೆ. ಮಹೇಶ್ವರನ ಮಹಿಷಿಯಾಗಿರುವೆ. ರೂಪರಹಿತಳೂ ಆಗಿ ಸರ್ವದಲ್ಲಿಯೂ ವ್ಯಾಪ್ತಳಾಗಿರುವೆ. ನೀನೇ ಜ್ಞಾನಶಕ್ತಿಯು. ಮಹಾಮಾಯೆಯು. ನೀನೇ ಸ್ವಾಹಾದೇವಿಯು, ಸ್ವಧೆಯು, ಅಮೃತ ರೂಪಿಣಿಯೂ ನೀನೆ.

೪೭. ನೀನೇ ವಷಟ್ಕಾರ, ವೌಷಟ್ಕಾರ ಸ್ವರೂಪಳಾಗಿರುವೆ. ನೀನೇ ಪ್ರಣವಾತ್ಮಿಕೆಯು: ನೀನು ಸರ್ವಮಂತ್ರಮಯಳಾಗಿರುವೆ. ಬ್ರಹ್ಮಾದಿ ದೇವತೆಗಳೆಲ್ಲರೂ ನಿನ್ನಿಂದಲೇ ಸಂಭೂತರಾಗಿರುವರು.

೪೮. ನೀನು ಚತುರ್ವಿಧ ಪುರುಷಾರ್ಥರೂಪಳಾಗಿ ಅವುಗಳನ್ನು ಕೊಡುವುದರಿಂದ ಫಲಸ್ವರೂಪಿಣಿಯೂ ಆಗಿರುವೆ. ನಿನ್ನಿಂದಲೇ ಈ ಸಕಲ ಬ್ರಹಾಂಡವೂ ಉದ್ಭೂತವಾಗಿರುವುದು. ನಿನ್ನಲ್ಲಿಯೇ ಸಕಲ ಜಗತ್ತೂ ಲಯವನ್ನು ಹೊಂದುವುದು.

೪೯. ಸ್ಥೂಲ ಮತ್ತು ಸೂಕ್ಷ್ಮರೂಪಗಳಿಂದ ಯಾವ ಪದಾರ್ಥಗಳು ನೇತ್ರಗಳಿಗೆ ಕಾಣುತ್ತಿರುವುವೊ ಮತ್ತು ಕಾಣದಿರುವುವೊ, ಅವುಗಳಲ್ಲೆಲ್ಲ ನೀನು ಶಕ್ತಿರೂಪದಿಂದ ನೆಲಸಿರುವೆ. ನಿನ್ನನ್ನುಳಿದು ಮತ್ತೊಂದು ತತ್ತ್ವವಿಲ್ಲ.

೫೦. ಓ ಜಗನ್ಮಾತೆಯೆ ! ರಾಕ್ಷಸೋತ್ತಮನಾದ ಈ ದುರ್ಗಾಸುರನನ್ನು ಕೊಂದು ನೀನು ರಾಕ್ಷಸಸೈನ್ಯವನ್ನೆಲ್ಲ ಆಜಾನಸಿದ್ಧರಾದ ಬ್ರಹ್ಮಾದಿದೇವತೆಗಳ ವಶಕ್ಕೆ ಒಪ್ಪಿಸಿರುವೆ. ನಿನ್ನಿಂದ ನಾವು ಸಂರಕ್ಷಿತರಾಗಿರುವೆವು. ಎಲೌ ದೇವಿಯೆ ! ನಿತ್ಯವೂ ನಮಸ್ಕರಿಸುತ್ತಿರುವವರಿಗೆ ನೀನು ಶರಣ್ಯಳಾಗಿರುವೆ. ನಾವು ಶರಣು ಹೋಗಬೇಕೆಂದರೆ ನಿನ್ನನ್ನುಳಿದು ಮತ್ತೆ ಯಾವ ದೇವತೆಯಿರುವನು ?

ಲೋಕೇ ತ ಏವ ಧನಧಾನ್ಯಸಮೃದ್ಧಿಭಾಜ
ಸ್ತೇ ಪುತ್ರಪೌತ್ರ ಸುಕಲತ್ರಸುಮಿತ್ರವಂತಃ ।
ತೇಷಾಂ ಯಶಃ ಪ್ರಸರಚಂದ್ರಕರಾವದಾತಂ
ವಿಶ್ವಂ ಭವೇದ್ಭವಸಿ ಯೇಷು ಸುದೃಕ್ತ್ವಮೀಶೇ ॥ ೩೧ ॥
ತ್ವದ್ಭಕ್ತಿಚೇತಸಿ ಜನೇನ ವಿಪತ್ತಿಲೇಶಃ
ಕ್ಲೇಶಃ ಕ್ವ ವಾನುಭವತೀ ನತಿಕೃತ್ಸು ಪುಂಸು ।
ತ್ವನ್ನಾಮಸಂಸ್ಮೃತಿಜುಷಾಂ ಸಕಲಾಯುಷಾಂ ಕ್ವ
ಭೂಯಃ ಪುನರ್ಜನಿರಿಹ ತ್ರಿಪುರಾರಿಪತ್ನಿ ॥ ೩೨ ॥
ಚಿತ್ರಂ ಯದತ್ರ ಸಮರೇ ಸ ಹಿ ದುರ್ಗದೈತ್ಯ
ಸ್ತ್ವದ್ದೃಷ್ಟಿಪಾತಮಧಿಗಮ್ಯ ಸುಧಾನಿಧಾನಂ ।
ಮೃತ್ಯೋರ್ವಶತ್ವಮಗಮದ್ವಿದಿತಂ ಭವಾನಿ
ದೃಷ್ಟೋಽಪಿ ತೇ ದೃಶಿಗತಃ ಕುಗತಿಂ ನ ಯಾತಿ ॥ ೩೩ ॥
ತ್ವಚ್ಛಸ್ತ್ರವಹ್ನಿಶಲಭತ್ವಮಿತಾ ಅಪೀಹ
ದೈತ್ಯಾಃ ಪತಂಗರುಚಿಮಾಪ್ಯ ದಿವಂ ವ್ರಜಂತಿ ।

---

೩೧. ಓ ಸರ್ವೇಶ್ವರಿಯೆ ! ಯಾರಲ್ಲಿ ನೀನು ನಿನ್ನ ಕೃಪಾದೃಷ್ಟಿಯನ್ನು ಪ್ರಸರಿಸುವೆಯೊ, ಅವರೇ ಲೋಕದಲ್ಲಿ ಧನಧಾನ್ಯಗಳ ಸಮೃದ್ಧಿಗೆ ಪಾತ್ರರಾಗುವರು. ಅವರೇ ಪುತ್ರ, ಪೌತ್ರ, ಭಾರ್ಯಾ, ಬಾಂಧವರಿಂದೊಡಗೂಡಿರುವರು. ಅವರ ಯಶಸ್ಸೆಂಬ ಚಂದ್ರಮಂಡಲದ ಶುಭ್ರಕಿರಣಗಳಿಂದ ಪ್ರಸಾರಿತವಾಗಿ ಭೂಲೋಕವೆಲ್ಲವೂ ಪ್ರಕಾಶಮಯವಾಗಿರುವುದು.

೩೨. ನಿನ್ನ ಭಕ್ತಿಯಿಂದ ಭರಿತವಾದ ಅಂತಃಕರಣವುಳ್ಳ ಜನರಿಗೆ ಕಷ್ಟಗಳ ಲೇಶವೂ ಸಂಭವಿಸುವುದಿಲ್ಲ. ನಿನಗೆ ನಮಸ್ಕಾರಗಳನ್ನು ಮಾಡುತ್ತಿರುವ ಮನುಜರಿಗೆ ಕ್ಲೇಶಗಳೆಲ್ಲಿಯವು? ತಮ್ಮ ಸಕಲ ಆಯುಷ್ಯವೂ ತ್ರಿಪುರಧ್ವಂಸಕನ ಪತ್ನಿಯಾದ ನಿನ್ನ ನಾಮಗಳನ್ನು ಸ್ಮರಿಸುವುದರಲ್ಲಿಯೇ ಆಸಕ್ತರಾಗಿರುವ ಪರಮ ಭಕ್ತರಿಗೆಂದಿಗೂ ಪುನರ್ಜನ್ಮವು ಹೇಗೆ ಪ್ರಾಪ್ತವಾದೀತು ?

೩೩. ಎಲೌ ಭವಾನಿಯೆ ! ಇದು ಬಹಳ ವಿಚಿತ್ರವಾಗಿರುವುದು. ಅಮೃತ ಭರಿತವಾದ ನಿನ್ನ ಕಟಾಕ್ಷದೃಷ್ಟಿಗೆ ವಿಷಯನಾಗಿದ್ದರೂ ಯುದ್ಧರಂಗದಲ್ಲಿ ಈ ದುರ್ಗರಾಕ್ಷಸನು ಮೃತ್ಯುವನ್ನು ಪಡೆದನಲ್ಲವೆ. ಎಂತಹ ದುಷ್ಟನಾದರೂ ನಿನ್ನ ಕಣ್ಣುಗಳಿಗೆ ಕಾಣಿಸುವವನಾದರೆ ಎಂದಿಗೂ ದುರ್ಗತಿಯನ್ನು ಪಡೆಯುವುದಿಲ್ಲವೆಂಬುದು ಲೋಕವಿದಿತವಾಗಿರುವುದಲ್ಲವೆ.

೩೪. ನಿನ್ನ ಶಸ್ತ್ರವೆಂಬ ಬೆಂಕಿಯಲ್ಲಿ ಶಲಭತ್ವವನ್ನು ಹೊಂದಿದ ರಾಕ್ಷಸರೂ ಸೂರ್ಯನ ತೇಜಸ್ಸಿನಿಂದ ಕೂಡಿದವರಾಗಿ ಸ್ವರ್ಗಲೋಕವನ್ನು ಸೇರುವರು.

ಸಂತಃ ಖಲೇಷ್ವಪಿ ನ ದುಷ್ಟಧಿಯೋ ಯತಃ ಸ್ಯುಃ
ಸಾಧುಷ್ವಿವ ಪ್ರಣಯಿನಃ ಸ್ವಪಥಂ ದಿಶಂತಿ ॥ ೫೪ ॥
ಪ್ರಾಚ್ಯಾಂ ಮೃಡಾನಿ ಪರಿಪಾಹಿ ಸದಾ ನತಾನ್ನೋ
ಯಾಮ್ಯಾಮಿವ ಪ್ರತಿಪದಂ ವಿಪದೋ ಭವಾನಿ ।
ಪ್ರತ್ಯಗ್ದಿಶಿ ತ್ರಿಪುರತಾಪನಪತ್ನಿ ರಕ್ಷ
ತ್ವಂ ಪಾಹ್ಯುದೀಚಿ ನಿಜಭಕ್ತಜನಾನ್ಮಹೇಶಿ ॥ ೫೫ ॥
ಬ್ರಹ್ಮಾಣಿ ರಕ್ಷ ಸತತಂ ನತಮೌಲಿದೇಶಂ
ತ್ವಂ ವೈಷ್ಣವಿ ಪ್ರತಿಕುಲಂ ಪರಿಪಾಲಯಾಧಃ ।
ರುದ್ರಾಗ್ನಿನೈರ್ಋತಿಸದಾಗತಿದಿಕ್ಷು ಪಾಂತು
ಮೃತ್ಯುಂಜಯಾತ್ರಿನಯನಾ ತ್ರಿಪುರಾ ತ್ರಿಶಕ್ತ್ಯಃ ॥ ೫೬ ॥
ಪಾತು ತ್ರಿಶೂಲಮಮಲೇ ತವ ಮೌಲಿಜಾನ್ನೋ
ಭಾಲಸ್ಥಲಂ ಶಶಿಕಲಾ ಮೃದುಮಾಭ್ರುವೌ ಚ ।
ನೇತ್ರೇ ತ್ರಿಲೋಚನವಧೂರ್ಗಿರಿಜಾ ಚ ನಾಸಾ
ಮೋಷ್ಠಂ ಜಯಾ ಚ ವಿಜಯಾ ತ್ವಧರಪ್ರದೇಶಂ ॥ ೫೭ ॥

---

ಸಾಧುಗಳು ಎಂದಿಗೂ ಖಲರಲ್ಲಿಯೂ ದುಷ್ಟಬುದ್ಧಿಯನ್ನು ತೋರಿಸುವುದಿಲ್ಲವಷ್ಟೆ. ಇತರ ಸಾಧುಗಳಲ್ಲಿ ಹೇಗೆಯೊ, ಹಾಗೆಯೇ ಅವರಲ್ಲಿಯೂ, ಪ್ರೀತಿಯನ್ನೇ ತೋರುತ್ತ ಅವರಿಗೆ ತಮ್ಮ ಋಜುಮಾರ್ಗವನ್ನು ಉಪದೇಶಮಾಡುವರು.

೫೫. ಓ ಮೃಡಾನಿಯೆ! ಸದಾ ನಮಸ್ಕರಿಸುತ್ತಿರುವ ನಮ್ಮನ್ನು ಪೂರ್ವ ದಿಕ್ಕಿನಲ್ಲಿ ರಕ್ಷಿಸು. ಭವಾನಿಯೆ! ದಕ್ಷಿಣದಿಕ್ಕಿನಲ್ಲಿ ಹೆಜ್ಜೆಹೆಜ್ಜೆಗೂ ನಮ್ಮನ್ನು ವಿಪತ್ತುಗಳಿಂದ ಕಾಪಾಡು. ತ್ರಿಪುರಗಳನ್ನು ಸುಟ್ಟ ಮಹಾದೇವನ ರಾಣಿಯೆ! ಪಶ್ಚಿಮದಲ್ಲಿ ನಮ್ಮನ್ನು ರಕ್ಷಿಸುತ್ತಿರು. ಮಹೇಶ್ವರಿಯೆ! ನಿನ್ನ ಭಕ್ತಜನರಾದ ನಮ್ಮನ್ನು ನೀನೇ ಉತ್ತರದಿಕ್ಕಿನಲ್ಲಿ ನಿಂತು ಪರಿಪಾಲಿಸುತ್ತಿರುವವಳಾಗು.

೫೬. ಬ್ರಹ್ಮಾಣಿಯೆ! ನಿನಗೆ ಶರಣಾಗತವಾಗಿರುವ ಊರ್ಧ್ವಲೋಕಗಳೆಲ್ಲ ವನ್ನೂ ನಿತ್ಯವೂ ರಕ್ಷಿಸು. ವೈಷ್ಣವಿಯೆ! ನೀನು ಅಧೋಲೋಕಗಳಲ್ಲಿರುವ ಭಕ್ತರ ಪ್ರತಿಯೊಂದು ಕುಲವನ್ನೂ ಪಾಲಿಸು. ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ನಿನ್ನ ಶಕ್ತಿಯರಾದ ಮೃತ್ಯುಂಜಯಾ, ತ್ರಿನಯನಾ ಮತ್ತು ತ್ರಿಪುರೆ ಯರೆಂಬುವರು ಈಶಾನ, ಆಗ್ನೇಯ, ನೈಋತ್ಯ ಮತ್ತು ವಾಯುವ್ಯ ದಿಕ್ಕುಗಳಲ್ಲಿ ನಮ್ಮನ್ನು ಕಾಪಾಡಲಿ.

೫೭. ಎಲೌ ಪಾಪರಹಿತಳೆ! ನಿನ್ನ ತ್ರಿಶೂಲವು ನಮ್ಮ ಶಿರಃಪ್ರದೇಶಗಳನ್ನು ರಕ್ಷಿಸುತ್ತಿರಲಿ. ಮೌಳಿಯೊಳಗಿನ ಚಂದ್ರನ ಮೃದುಕಾಂತಿಯು ನಮ್ಮ ಹಣೆ ಗಳನ್ನೂ ಹುಬ್ಬುಗಳವರೆಗೂ ರಕ್ಷಿಸಲಿ. ತ್ರಿನೇತ್ರನ ರಾಣಿಯು ನೇತ್ರಗಳನ್ನೂ,

ಶ್ರೋತ್ರದ್ವಯಂ ಶ್ರುತಿರವಾ ದಶನಾವಲಿಂ ಶ್ರೀ
ಶ್ಚಂಡೀ ಕಪೋಲಯುಗಲಂ ರಸನಾಂ ಚ ವಾಣೀ ।
ಪಾಯಾತ್ಸದೈವ ಚಿಬುಕಂ ಜಯಮಂಗಲಾ ನಃ
ಕಾತ್ಯಾಯನೀ ವದನಮಂಡಲಮೇವ ಸರ್ವಂ ॥ ೫೮ ॥
ಕಂಠಪ್ರದೇಶಮವತಾದಿಹ ನೀಲಕಂಠೀ
ಭೂದಾರಶಕ್ತಿರನಿಶಂ ಚ ಕೃಕಾಟಿಕಾಯಂ ।
ಕೌರ್ಮಂ ಸದೇಶಮನಿಶಂ ಭುಜದಂಡಮೈಂದ್ರೀ
ಪದ್ಮಾ ಚ ಪಾಣಿಫಲಕಂ ನತಿಕಾರಿಣಾಂ ನಃ ॥ ೫೯ ॥
ಹಸ್ತಾಂಗುಲೀಃ ಕಮಲಜಾ ವಿರಜಾ ನಖಾಂಶ್ಚ
ಕಕ್ಷಾಂತರಂ ತರಣಿಮಂಡಲಗಾ ತಮೋಘ್ನೀ ।
ವಕ್ಷಸ್ಥಲಂ ಸ್ಥಲಚರೀ ಹೃದಯಂ ಧರಿತ್ರೀ
ಕುಕ್ಷಿದ್ವಯಂ ತ್ವವತು ನಃ ಕ್ಷಣದಾಚರಘ್ನೀ ॥ ೬೦ ॥
ಅವ್ಯಾತ್ಸದೋದರದರೀಂ ಜಗದೀಶ್ವರೀ ನೋ
ನಾಭಿಂ ನಭೋಗತಿರಜಾ ತ್ವಥ ಪೃಷ್ಠದೇಶಂ ।
ಪಾಯಾತ್ಕಟಿಂ ಚ ವಿಕಟಾ ಪರಮಾ ಸ್ಫಿಚೌ ನೋ
ಗುಹ್ಯಂ ಗುಹಾರಣಿರಪಾನಮಪಾಯಹಂತ್ರೀ ॥ ೬೧ ॥

---

ಗಿರಿಜೆಯು ಮೂಗನ್ನೂ, ಜಯಾದೇವಿಯು ಮೇಲ್ತುಟಿಯನ್ನೂ ವಿಜಯೆಯು ಕೆಳಮಟಿಯ ಪ್ರದೇಶವನ್ನೂ ಪಾಲಿಸಲಿ.

೫೮. ವೇದಸಂಸ್ತುತೆಯು ಕಿವಿಗಳೆರಡನ್ನೂ, ಮಹಾಲಕ್ಷ್ಮಿಯು ದಂತ ಪಙ್ಕ್ತಿಯನ್ನೂ, ಚಂಡಿಕೆಯು ಎರಡು ಕೆನ್ನೆಗಳನ್ನೂ, ಸರಸ್ವತಿಯು ನಾಲಿಗೆ ಯನ್ನೂ, ಜಯಮಂಗಳೆಯು ನಿತ್ಯವೂ ನಮ್ಮ ಗಲ್ಲವನ್ನೂ, ಕಾತ್ಯಾಯನಿಯು ಮುಖಮಂಡಲವೆಲ್ಲವನ್ನೂ ಪಾಲಿಸುತ್ತಿರಲಿ.

೫೯. ನೀಲಕಂಠಿಯು ನಮ್ಮ ಕಂಠಪ್ರದೇಶವನ್ನು ಕಾಪಾಡಲಿ. ವಾರಾಹಿ ಯೆಂಬ ಶಕ್ತಿಯು ಕುತ್ತಿಗೆಯ ಹಿಂಭಾಗವನ್ನು ರಕ್ಷಿಸಲಿ. ಕೂರ್ಮಶಕ್ತಿಯು ನಿತ್ಯವೂ ಭುಜಪ್ರದೇಶವನ್ನೂ, ಇಂದ್ರಾಣಿಯು ಭುಜದಂಡಗಳನ್ನೂ, ಪದ್ಮೆಯು ನಮಸ್ಕರಿಸುತ್ತಿರುವ ನಮ್ಮ ಮುಂಗೈಗಳನ್ನೂ ಕಾಪಾಡಲಿ.

೬೦. ಕಮಲಜಾತೆಯು ಕೈಬೆರಳುಗಳನ್ನೂ, ವಿರಜಾದೇವಿಯು ಉಗುರು ಗಳನ್ನೂ, ಸೂರ್ಯಮಂಡಲಾಂತರ್ಗತಳಾದ ತಮೋಘ್ನಿಯು ಪಕ್ಕಗಳನ್ನೂ, ಸ್ಥಲಚರಿಯು ವಕ್ಷಸ್ಥಳವನ್ನೂ, ಧರಿತ್ರಿಯು ಹೃದಯವನ್ನೂ, ರಾಕ್ಷಸಮರ್ದಿ ನಿಯು ಎರಡು ಹೊಟ್ಟೆಗಳನ್ನೂ ಸಂರಕ್ಷಿಸಲಿ.

೬೧. ಜಗದೀಶ್ವರಿಯು ನಿತ್ಯವೂ ನಮ್ಮ ಉದರವೆಂಬ ಗುಹೆಯನ್ನೂ,

ಊರುದ್ವಯಂ ಚ ವಿಪುಲಾ ಲಲಿತಾ ಚ ಜಾನೂ
ಜಂಘೇ ಜವಾವತು ಕಠೋರತರಾತ್ರ ಗುಲ್ಫೌ ।
ಪಾದೌ ರಸಾತಲಚರಾಂಗುಲಿದೇಶಮುಗ್ರಾ
ಚಾಂದ್ರೀ ನಖಾನ್ಪದತಲಂ ತಲವಾಸಿನೀ ಚ ॥ ೬೨ ॥
ಗೃಹಂ ರಕ್ಷತು ನೋ ಲಕ್ಷ್ಮೀಃ ಕ್ಷೇತ್ರಂ ಕ್ಷೇಮಕರೀ ಸದಾ ।
ಪಾತು ಪುತ್ರಾನ್ಪ್ರಿಯಕರೀ ಪಾಯಾದಾಯುಃ ಸನಾತನೀ ॥ ೬೩ ॥
ಯಶಃ ಪಾತು ಮಹಾದೇವೀ ಧರ್ಮಂ ಪಾತು ಧನುರ್ಧರೀ ।
ಕುಲದೇವೀ ಕುಲಂ ಪಾತು ಸದ್ಗತಿಂ ಸದ್ಗತಿಪ್ರದಾ ॥ ೬೪ ॥
ರಣೇ ರಾಜಕುಲೇ ದ್ಯೂತೇ ಸಂಗ್ರಾಮೇ ಶತ್ರುಸಂಕಟೇ ।
ಗೃಹೇ ವನೇ ಜಲಾದೌ ಚ ಶರ್ವಾಣೀ ಸರ್ವತೋಽವತು ॥ ೬೫ ॥
ಇತಿ ಸ್ತುತ್ವಾ ಜಗದ್ಧಾತ್ರೀಂ ಪ್ರಣೇಮುಶ್ಚ ಪುನಃ ಪುನಃ ।
ಸರ್ವೇ ಸವಾಸವಾ ದೇವಾಃ ಸರ್ಷಿಗಂಧರ್ವಚಾರಣಾಃ ॥ ೬೬ ॥

---

ನಭೋಗಾಮಿಯು ನಾಭಿಯನ್ನೂ, ಅಜೆಯು ಪೃಷ್ಠಭಾಗವನ್ನೂ, ವಿಕಟೆಯು ನಡುವನ್ನೂ, ಪರಮೆಯು ಜಘನಗಳನ್ನೂ, ಗುಹಮಾತೆಯು ಗುಹ್ಯೇಂದ್ರಿಯವನ್ನೂ, ಅಪಾಯಹಂತ್ರಿಯು ಗುದದ್ವಾರವನ್ನೂ ಪಾಲಿಸುತ್ತಿರಲಿ.

೬೨. ವಿಪುಲೆಯು ಎರಡು ತೊಡೆಗಳನ್ನೂ, ಲಲಿತೆಯು ಮೊಣಕಾಲುಗಳನ್ನೂ, ಜವೆಯು ಕೆಳಗಾಲುಗಳನ್ನೂ, ಕಠೋರರೂಪಳು ಮೇಲುಪಾದಗಳನ್ನೂ, ರಸಾತಲಸಂಚಾರಿಣಿಯು ಅಂಗಾಲುಗಳನ್ನೂ, ಉಗ್ರಳು ಕಾಲ್ಬೆರಳುಗಳನ್ನೂ, ರೋಹಿಣಿಯು ಕಾಲುಗುರುಗಳನ್ನೂ, ತಲಲೋಕವಾಸಿನಿಯು ಪಾದತಲಗಳನ್ನೂ ಪಾಲಿಸಲಿ.

೬೩. ನಮ್ಮ ಮನೆಗಳನ್ನು ಮಹಾಲಕ್ಷ್ಮಿಯೂ, ಕ್ಷೇತ್ರಗಳನ್ನು ನಿತ್ಯವೂ ಕ್ಷೇಮಕರಿಯೂ, ಪ್ರಿಯಕರಿಯು ಪುತ್ರಪೌತ್ರರನ್ನೂ, ಸನಾತನಿಯು ಆಯುಷ್ಯವನ್ನೂ ಕಾಪಾಡುತ್ತಿರಲಿ.

೬೪. ಮಹಾದೇವಿಯು ನಮ್ಮ ಕೀರ್ತಿಯನ್ನು ಕಾಪಾಡಲಿ. ಧನುರ್ಧರಿಯು ಧರ್ಮಕಾರ್ಯಗಳನ್ನು ಪಾಲಿಸಲಿ. ಕುಲದೇವಿಯು ಕುಲವನ್ನುದ್ಧರಿಸಲಿ. ಸದ್ಗತಿಪ್ರದೆಯು ನಮಗೆ ಸದ್ಗತಿಯನ್ನು ಕೊಡುವವಳಾಗಲಿ.

೬೫. ಯುದ್ಧರಂಗದಲ್ಲಿಯೂ, ರಾಜಾಸ್ಥಾನಗಳಲ್ಲಿಯೂ, ದ್ಯೂತಮಂಟಪದಲ್ಲಿಯೂ, ಕಲಹಗಳಲ್ಲಿಯೂ, ಶತ್ರುಗಳಿಂದೊದಗುವ ಸಂಕಟಗಳಲ್ಲಿಯೂ, ಮನೆಯಲ್ಲಿಯೂ, ಅರಣ್ಯದಲ್ಲಿಯೂ, ಜಲಾಶಯಾದಿಗಳಲ್ಲಿಯೂ ಶರ್ವಾಣಿಯು ನಮ್ಮನ್ನು ಸರ್ವವಿಧದಿಂದಲೂ ಕಾಪಾಡಲಿ.

೬೬. ಇಂತೆಂದು ಜಗದಾಧಾರಳಾದ ಆ ದೇವಿಯನ್ನು ಸ್ತೋತ್ರಮಾಡಿ

ತತಸ್ತುಷ್ಟಾ ಜಗನ್ಮಾತಾ ತಾನಾಹ ಸುರಸತ್ತಮಾನ್ ।
ಸ್ವಾಧಿಕಾರಾನ್ಸುರಾಃ ಸರ್ವೇ ಶಾಸತು ಪ್ರಾಗ್ಯಥಾ ತಥಾ ॥ ೬೭ ॥
ತುಷ್ಟಾಹಮನಯಾ ಸ್ತುತ್ಯಾ ನಿತರಾಂ ತು ಯಥಾರ್ಥಯಾ ।
ವರಮನ್ಯಂ ಪ್ರದಾಸ್ಯಾಮಿ ತಚ್ಛೃಣುಧ್ವಂ ಸುರೋತ್ತಮಾಃ ॥ ೬೮ ॥

ದುರ್ಗೋವಾಚ :—

ಯಃ ಸ್ತೋಷ್ಯತಿ ತು ಮಾಂ ಭಕ್ತ್ಯಾ ನರಃ ಸ್ತುತ್ಯಾನಯಾ ಶುಚಿಃ ।
ತಸ್ಯಾಹಂ ನಾಶಯಿಷ್ಯಾಮಿ ವಿಪದಂ ಚ ಪದೇ ಪದೇ ॥ ೬೯ ॥
ಏತತ್ಸ್ತೋತ್ರಸ್ಯ ಕವಚಂ ಪರಿಧಾಸ್ಯತಿ ಯೋ ನರಃ ।
ತಸ್ಯ ಕ್ವಚಿದ್ಭಯಂ ನಾಸ್ತಿ ವಜ್ರಪಂಜರಗಸ್ಯ ಹಿ ॥ ೭೦ ॥
ಅದ್ಯ ಪ್ರಭೃತಿ ಮೇ ನಾಮ ದುರ್ಗೇತಿ ಖ್ಯಾತಿಮೇಷ್ಯತಿ ।
ದುರ್ಗದೈತ್ಯಸ್ಯ ಸಮರೇ ಪಾತನಾದತಿದುರ್ಗಮಾತ್ ॥ ೭೧ ॥
ಯೇ ಮಾಂ ದುರ್ಗಾಂ ಶರಣಗಾ ನ ತೇಷಾಂ ದುರ್ಗತಿಃ ಕ್ವಚಿತ್ ।
ದುರ್ಗಾಸ್ತುತಿರಿಯಂ ಪುಣ್ಯಾ ವಜ್ರಪಂಜರಸಂಜ್ಞಿಕಾ ॥ ೭೨ ॥

---

ಇಂದ್ರನೇ ಮೊದಲಾದ ದೇವತೆಗಳೂ, ಮಹರ್ಷಿಗಳೂ, ಗಂಧರ್ವರೂ, ಚಾರಣರೂ ಮತ್ತೆ ಮತ್ತೆ ಪ್ರಣಾಮಗಳನ್ನುಮಾಡಿದರು.

೬೭. ಆಗ ಸಂತುಷ್ಟಳಾದ ಲೋಕಮಾತೆಯು ಆ ದೇವೋತ್ತಮರನ್ನು ಕುರಿತು ಹೇಳತೊಡಗಿದಳು. ದುರ್ಗಿಯು ಹೇಳುತ್ತಾಳೆ:—"ಎಲೈ ದೇವತೆಗಳಿರಾ! ಪೂರ್ವದಲ್ಲಿದ್ದಂತೆಯೇ ನೀವೆಲ್ಲರೂ ನಿಮ್ಮ ನಿಮ್ಮ ಅಧಿಕಾರಗಳನ್ನುವಹಿಸಿಕೊಂಡು ಲೋಕಗಳನ್ನು ಶಾಸನಮಾಡುತ್ತಿರಿ.

೬೮. ನಾನು ಯಥಾರ್ಥವಾದ ಈ ನಿಮ್ಮ ಸ್ತೋತ್ರದಿಂದ ಸಂತೋಷಗೊಂಡಿರುವೆನು. ಎಲೈ ಸುರೋತ್ತಮರಿರಾ! ನಿಮಗೆ ಮತ್ತೊಂದು ವರವನ್ನೂ ಕೊಡುವೆನು. ಅದನ್ನು ಶ್ರದ್ಧೆಯಿಂದ ಕೇಳಿರಿ.

೬೯. ಯಾವ ಮನುಷ್ಯನು ಶುಚಿರ್ಭೂತನಾಗಿ ನನ್ನನ್ನು ಈ ಸ್ತೋತ್ರದಿಂದ ಭಕ್ತಿಪೂರ್ವಕವಾಗಿ ಸ್ತುತಿಸುವನೊ, ಅವನಿಗೆ ಅಡಿಗಡಿಗೂ ಸಂಭವಿಸುವ ವಿಪತ್ತುಗಳೆಲ್ಲವನ್ನೂ ನಾನು ನಾಶಮಾಡುತ್ತಿರುವೆನು.

೭೦—೭೧. ಯಾವನು ಈ ಸ್ತೋತ್ರವೆಂಬ ಕವಚವನ್ನು ಧರಿಸಿ ಮೈಯನ್ನು ರಕ್ಷಿಸಿಕೊಳ್ಳುವನೊ, ಅವನು ವಜ್ರಪಂಜರದಲ್ಲಿರುವನು. ಅವನಿಗೆ ಎಲ್ಲಿಯೂ ಭಯವು ಸಂಭವಿಸುವುದಿಲ್ಲ. ದುರ್ಗದೈತ್ಯನನ್ನು ಯುದ್ಧದಲ್ಲಿ ನಿಗ್ರಹಿಸಿದ ಮಹಾದುಸ್ಸಾಧ್ಯವಾದ ಕಾರ್ಯವನ್ನು ಮಾಡಿದುದರಿಂದ ಇಂದು ಮೊದಲು ದುರ್ಗೆಯೆಂಬುದಾಗಿ ನನ್ನ ಹೆಸರು ಪ್ರಖ್ಯಾತಿಯನ್ನು ಪಡೆಯುವುದು.

೭೨. ಯಾವ ಮಾನವರು ದುರ್ಗಿಯಾದ ನನಗೆ ಶರಣುಹೋಗುವರೊ,

ಅನಯಾ ಕವಚಂ ಕೃತ್ವಾ ಮಾ ಬಿಭೇತು ಯಮಾದಪಿ ।
ಭೂತಪ್ರೇತಪಿಶಾಚಾಶ್ಚ ಶಾಕಿನೀಡಾಕಿನೀಗಣಾಃ ॥ ೭೩ ॥
ಝೂಟಿಂಗಾ ರಾಕ್ಷಸಾಃ ಕ್ರೂರಾ ವಿಷಸರ್ಪಾಗ್ನಿದಸ್ಯವಃ ।
ವೇತಾಲಾಶ್ಚಾಪಿ ಕಂಕಾಲಗ್ರಹಾ ಬಾಲಗ್ರಹಾ ಅಪಿ ॥ ೭೪ ॥
ವಾತಪಿತ್ತಾದಿಜನಿತಾಸ್ತಥಾ ಚ ವಿಷಮಜ್ವರಾಃ ।
ದೂರಾದೇವ ಪ್ರಲಾಯಂತೇ ಶ್ರುತ್ವಾ ಶ್ರುತಿಮಿಮಾಂ ಶುಭಾಂ ॥ ೭೫ ॥
ವಜ್ರಪಂಜರನಾಮ್ನೈತತ್ಸ್ತೋತ್ರಂ ದುರ್ಗಪ್ರಶಂಸನಂ ।
ಏತತ್ಸ್ತೋತ್ರಕೃತತ್ರಾಣೇ ವಜ್ರಾದಪಿ ಭಯಂ ನ ಹಿ ॥ ೭೬ ॥
ಅಷ್ಟಜಪ್ತೇನ ಚಾನೇನ ಯೋಽಭಿಮಂತ್ರಜಲಂ ಪಿಬೇತ್ ।
ತಸ್ಯೋದರಗತಾ ಪೀಡಾ ಕ್ವಾಪಿ ನೋ ಸಂಭವಿಷ್ಯತಿ ॥ ೭೭ ॥
ಗರ್ಭಪೀಡಾ ತು ನೋ ಜಾತು ಭವಿಷ್ಯತ್ಯಭಿಮಂತ್ರಣಾತ್ ।
ಬಾಲಾನಾಂ ಪರಮಾ ಶಾಂತಿರೇತತ್ಸ್ತೋತ್ರಾಂಬುಪಾನತಃ ॥ ೭೮ ॥

---

ಅವರಿಗೆಂದಿಗೂ ದುರ್ಗತಿಯುಂಟಾಗುವುದಿಲ್ಲ. ಈ ದುರ್ಗಾಸ್ತೋತ್ರವು ವಜ್ರಪಂಜರಸ್ತುತಿಯೆಂಬ ಹೆಸರುಳ್ಳದ್ದಾಗಿ ಪರಮಪುಣ್ಯತಮವಾಗಿರುವುದು.

೭೩–೭೫. ಇದರ ಕವಚವನ್ನು ಧರಿಸಿದವನು ಯಮಧರ್ಮರಾಜನಿಗೂ ಭಯಪಡಬೇಕಾದುದಿಲ್ಲ. ಭೂತಗಳು, ಪ್ರೇತಗಳು, ಪಿಶಾಚಗಳು, ಶಾಕಿನಿಯರು, ಡಾಕಿನಿಯರ ಸಮೂಹಗಳು, ಝೂಟಿಂಗರೆಂಬ ಪಿಶಾಚರು, ಕ್ರೂರ ರಾಕ್ಷಸರು, ವಿಷಸರ್ಪಗಳು, ಅಗ್ನಿ, ಕಿರಾತರು, ಬೇತಾಳರು, ಕಂಕಾಲರು, ನವಗ್ರಹಗಳಲ್ಲಿ ದುಷ್ಟವಾದವುಗಳು, ವಾತಪಿತ್ತಾದಿಗಳಿಂದ ಹುಟ್ಟಿದ ಜ್ವರಗಳು, ವಿಷಮಜ್ವರಗಳು ಇವುಗಳೆಲ್ಲವೂ ಪರಮಪವಿತ್ರವಾದ ಈ ಸ್ತೋತ್ರವನ್ನು ಕೇಳಿದ ಮಾತ್ರದಿಂದಲೇ ದೂರಕ್ಕೆ ಓಡಿಹೋಗುವುವು.

೭೬. ದುರ್ಗಾದೇವಿಯನ್ನು ಪ್ರಶಂಸೆಮಾಡುವ ಈ ಸ್ತೋತ್ರಕ್ಕೆ ವಜ್ರಪಂಜರವೆಂದು ಹೆಸರಾಗಿರುವುದು. ಈ ಸ್ತೋತ್ರದಿಂದ ರಕ್ಷಣೆಯನ್ನು ಮಾಡಿಕೊಂಡವರಿಗೆ ವಜ್ರಾಯುಧದಿಂದಲೂ ಭಯವುಂಟಾಗುವುದಿಲ್ಲ.

೭೭. ಈ ಸ್ತೋತ್ರದಿಂದ ಎಂಟುಸಲ ಅಭಿಮಂತ್ರಿಸಲ್ಪಟ್ಟ ಜಲವನ್ನು ಯಾವನು ಪಾನಮಾಡುವನೊ, ಅವನ ಹೊಟ್ಟೆಯೊಳಗಿನ ಪೀಡೆಯು ನಾಶವಾಗಿ ಪುನಃ ಎಂದಿಗೂ ಅದು ತಲೆದೋರುವುದಿಲ್ಲ.

೭೮. ಇದರಿಂದ ಗರ್ಭಿಣಿಯರಿಗೆ ಅಭಿಮಂತ್ರಣಮಾಡಲು ಗರ್ಭಕ್ಕೆ ಯಾವ ವಿಧವಾದ ಕ್ಲೇಶವೂ ಉಂಟಾಗುವುದಿಲ್ಲ. ಈ ಸ್ತೋತ್ರದ ಅಭಿಮಂತ್ರಣಮಾಡಿದ ಜಲದ ಪಾನದಿಂದ ಬಾಲಗ್ರಹದೋಷಗಳೂ ನಾಶವಾಗಿ ಮಕ್ಕಳಿಗೆ ಶಾಂತಿಯುಂಟಾಗುವುದು.

ಯತ್ರ ಸಾನ್ನಿಧ್ಯಮೇತಸ್ಯ ಸ್ತವಸ್ಯೇಹ ಭವಿಷ್ಯತಿ ।
ಏತಾಸ್ತು ಶಕ್ತಯಃ ಸರ್ವಾಃ ಸರ್ವತ್ರ ಸಹಿತಾ ಮಯಾ ॥ ೭೯ ॥
ರಕ್ಷಾಂ ಪರಿಕರಿಷ್ಯಂತಿ ಮದ್ಭಕ್ತಾನಾಂ ಮಮಾಜ್ಞಯಾ ।
ಇತಿ ದತ್ವಾ ವರಾನ್ದೇವೀ ದೇವೇಭ್ಯೋಽಂತರ್ಹಿತಾ ತದಾ ।
ತೇಽಪಿ ಸ್ವರ್ಗೌಕಸಃ ಸರ್ವೇ ಸ್ವಂ ಸ್ವಂ ಸ್ವರ್ಗಂ ಯಯುರ್ಮುದಾ ॥೮೦॥

ಸ್ಕಂದ ಉವಾಚ :—

ಇತ್ಥಂ ದುರ್ಗಾಭವನ್ನಾಮ ತಯಾ ದೇವ್ಯಾ ಮಹಾಮುನೇ ।
ಕಾಶ್ಯಾಂ ಸೇವ್ಯಾ ಯಥಾ ಸಾ ಚ ತಚ್ಛೃಣುಷ್ವ ವದಾಮಿ ತೇ ॥ ೮೧ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಭೌಮವಾರೇ ವಿಶೇಷತಃ ।
ಸಂಪೂಜ್ಯಾ ಸತತಂ ಕಾಶ್ಯಾಂ ದುರ್ಗಾ ದುರ್ಗತಿನಾಶಿನೀ ॥ ೮೨ ॥
ನವರಾತ್ರಂ ಪ್ರಯತ್ನೇನ ಪ್ರತ್ಯಹಂ ಸಾ ಸಮರ್ಚಿತಾ ।
ನಾಶಯಿಷ್ಯತಿ ವಿಘ್ನೌಘಾನ್ಸುಮತಿಂ ಚ ಪ್ರದಾಸ್ಯತಿ ॥ ೮೩ ॥

---

೭೯. ಭೂಲೋಕದಲ್ಲಿ ಎಲ್ಲೆಲ್ಲಿ ಈ ಸ್ತೋತ್ರಪಠನರೂಪವಾದ ಸಾನ್ನಿಧ್ಯವುಂಟಾಗುತ್ತಿರುವುದೊ, ಅಲ್ಲೆಲ್ಲವೂ ನನ್ನೊಡನೆ ಕೂಡಿದ ಈ ಸಕಲ ಶಕ್ತಿಗಳೂ ಸಹ ಪ್ರಸನ್ನಗಳಾಗಿಯೇ ನೆಲಸಿರುವುವು.

೮೦. ನನ್ನ ಆಜ್ಞೆಯನ್ನನುಸರಿಸಿ ಅವುಗಳು ನನ್ನ ಭಕ್ತರಿಗೆ ಯಾವಾಗಲೂ ಸಂರಕ್ಷಣೆಯನ್ನು ಕೊಡುತ್ತಿರುವುವು.'' ಇಂತೆಂದು ಅಲ್ಲಿ ನೆರೆದಿದ್ದ ದೇವತೆಗಳಿಗೆ ವರಗಳನ್ನು ಕೊಟ್ಟು ಆ ದುರ್ಗಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ಆ ದೇವತೆಗಳೆಲ್ಲರೂ ಸಹ ಸಂತೋಷಗೊಂಡವರಾಗಿ ತಮ್ಮ ತಮ್ಮ ಸ್ವರ್ಗಗಳಿಗೆ ಹೊರಟುಹೋದರು.

೮೧. ಸ್ಕಂದನು ಹೇಳುತ್ತಾನೆ:—ಅಗಸ್ತ್ಯಮಹಾಮುನಿಯೆ! ವಿಂಧ್ಯವಾಸಿನಿಗೆ ಈ ವಿಧವಾಗಿ ದುರ್ಗಿಯೆಂಬ ಹೆಸರುಂಟಾಯಿತು. ಕಾಶೀಕ್ಷೇತ್ರದಲ್ಲಿ ಆಕೆಯನ್ನು ಹೇಗೆ ಸೇವಿಸಬೇಕೆಂಬ ವಿಷಯವನ್ನು ನಿನಗೆ ಹೇಳುವೆನು, ಕೇಳು.

೮೨. ಅಷ್ಟಮಿ ಅಥವ ಚತುರ್ದಶಿಗಳಿಂದ ಕೂಡಿದ ಮಂಗಳವಾರಗಳಲ್ಲಿ ವಿಶೇಷವಾಗಿ ಕಾಶಿಯಲ್ಲಿ ನೆಲಸಿ ದುರ್ಗತಿನಾಶಕಗಳಾಗಿರುವ ದುರ್ಗಾದೇವಿಯನ್ನು ಸತತವೂ ಪೂಜೆಮಾಡಬೇಕು.

೮೩. ಆಶ್ವಯುಜಶುಕ್ಲಪಕ್ಷದ ಪಾಡ್ಯಮಿ ಮೊದಲುಗೊಂಡು ನವರಾತ್ರಿಯ ದಿನಗಳಲ್ಲಿ ಪ್ರತಿನಿತ್ಯವೂ ಪ್ರಯತ್ನದಿಂದ ದೇವಿಯ ಪೂಜೆಯನ್ನು ಮಾಡಲು ಆಕೆಯು ಸಮಸ್ತವಿಘ್ನ ಸಮೂಹಗಳನ್ನೂ ನಾಶಮಾಡುವಳು ಮತ್ತು ಸದ್ಬುದ್ಧಿಯನ್ನೂ ಅನುಗ್ರಹಿಸುವಳು.

ಮಹಾಪೂಜೋಪಹಾರೈಶ್ಚ ಮಹಾಬಲಿನಿವೇದನೈಃ ।
ದಾಸ್ಯತ್ಯಭೀಷ್ಟದಾ ಸಿದ್ಧಿಂ ದುರ್ಗಾ ಕಾಶ್ಯಾಂ ನ ಸಂಶಯಃ ॥ ೮೪ ॥
ಪ್ರತಿಸಂವತ್ಸರಂ ತಸ್ಯಾಃ ಕಾರ್ಯಾ ಯಾತ್ರಾ ಪ್ರಯತ್ನತಃ ।
ಶಾರದಂ ನವರಾತ್ರಂ ಚ ಸಕುಟುಂಬೈಃ ಶುಭಾರ್ಥಿಭಿಃ ॥ ೮೫ ॥
ಯೋ ನ ಸಾಂವತ್ಸರೀಂ ಯಾತ್ರಾಂ ದುರ್ಗಾಯಾಃ ಕುರುತೇ ಕುಧೀಃ ।
ಕಾಶ್ಯಾಂ ವಿಘ್ನಸಹಸ್ರಾಣಿ ತಸ್ಯ ಸ್ಯುಶ್ಚ ಪದೇ ಪದೇ ॥ ೮೬ ॥
ದುರ್ಗಾಕುಂಡೇ ನರಃ ಸ್ನಾತ್ವಾ ಸರ್ವದುರ್ಗಾರ್ತಿಹಾರಿಣೀಂ ।
ದುರ್ಗಾಂ ಸಂಪೂಜ್ಯ ವಿಧಿವನ್ನವಜನ್ಮಾಘಮುತ್ಸೃಜೇತ್ ॥ ೮೭ ॥
ಸಾ ದುರ್ಗಾ ಶಕ್ತಿಭಿಃ ಸಾರ್ಧಂ ಕಾಶೀಂ ರಕ್ಷತಿ ಸರ್ವತಃ ।
ತಾಃ ಪ್ರಯತ್ನೇನ ಸಂಪೂಜ್ಯಾಃ ಕಾಲರಾತ್ರಿಮುಖಾ ನರೈಃ ॥ ೮೮ ॥
ರಕ್ಷಂತಿ ಕ್ಷೇತ್ರಮೇತದ್ವೈ ತಥಾನ್ಯಾ ನವಶಕ್ತಯಃ ।
ಉಪಸರ್ಗಸಹಸ್ರೇಭ್ಯಸ್ತಾ ವೈ ದಿಗ್ದೇವತಾಃ ಕ್ರಮಾತ್ ॥ ೮೯ ॥

---

೮೪. ವಿಶೇಷ ಪೂಜಾಸಾಮಗ್ರಿಗಳಿಂದಲೂ, ಅನೇಕವಿಧಗಳಾದ ನೈವೇದ್ಯಗಳ ಸಮರ್ಪಣೆಯಿಂದಲೂ ಕಾಶಿಯಲ್ಲಿರುವ ಅಭೀಷ್ಟಪ್ರದಳಾದ ದುರ್ಗಾದೇವಿಯನ್ನು ಪೂಜಿಸಲು ಕಾರ್ಯಗಳಲ್ಲಿ ಸಿದ್ಧಿಯನ್ನು ಕೈಗೂಡಿಸುವಳು. ಇದರಲ್ಲಿ ಸಂದೇಹವಿಲ್ಲ.

೮೫. ಉತ್ತರೋತ್ತರ ಶ್ರೇಯಸ್ಸನ್ನಪೇಕ್ಷಿಸುವವರು ತಮ್ಮ ಕುಟುಂಬ ಸಮೇತರಾಗಿ ಅಲ್ಲಿಗೆ ಹೋಗಿ ಪ್ರತಿವರ್ಷದಲ್ಲಿಯೂ ಶರನ್ನವರಾತ್ರಿಯ ದಿನಗಳಲ್ಲಿ ಆ ದೇವಿಗೆ ಮಹಾಯಾತ್ರೆಯನ್ನು ಅವಶ್ಯಕವಾಗಿ ಮಾಡಿಸಬೇಕು.

೮೬. ಯಾವ ಮಂದಬುದ್ಧಿಯು ದುರ್ಗಾದೇವಿಗೆ ಪ್ರತಿವರ್ಷದಲ್ಲಿಯೂ ಈ ಯಾತ್ರೆಯನ್ನು ನಡೆಯಿಸುವುದಿಲ್ಲವೊ, ಅವನಿಗೆ ಕಾಶೀಕ್ಷೇತ್ರದಲ್ಲಿ ಅಡಿಗಡಿಗೂ ವಿಘ್ನಪರಂಪರೆಗಳೇ ಬಂದೊದಗುತ್ತಿರುವುವು.

೮೭. ದುರ್ಗಾಕುಂಡದಲ್ಲಿ ಸ್ನಾನವನ್ನುಮಾಡಿಕೊಂಡು ಯಾವ ಮನುಜನು ದುಸ್ತರಗಳಾದ ಸಮಸ್ತ ಕಷ್ಟಗಳನ್ನೂ ಪರಿಹರಿಸುವ ದುರ್ಗಾದೇವಿಯನ್ನು ವಿಧಿಪ್ರಕಾರವಾಗಿ ಪೂಜಿಸುವನೊ, ಅವನು ಒಂಬತ್ತು ಜನ್ಮಗಳಲ್ಲಿ ಮಾಡಿದ ಸಕಲ ಪಾತಕಗಳನ್ನೂ ಕಳೆದುಕೊಳ್ಳುವನು.

೮೮. ಆ ದುರ್ಗೆಯೇ ಮೇಲೆ ಹೇಳಿದ ಶಕ್ತಿಯರೊಡಗೂಡಿ ಕಾಶೀಕ್ಷೇತ್ರವನ್ನು ಸಕಲ ದಿಕ್ಕುಗಳಲ್ಲಿಯೂ ಸಂರಕ್ಷಿಸುತ್ತಿರುವಳು. ಕಾಲರಾತ್ರಿಯೇ ಮುಂತಾದ ಅವರೆಲ್ಲರೂ ಮನುಷ್ಯರಿಗೆ ಆವಶ್ಯಕವಾಗಿಯೂ ಪೂಜ್ಯರಾಗಿರುವರು.

೮೯. ಅವರಂತೆಯೇ ಬೇರೆ ನವಶಕ್ತಿಯರು ಈ ಕ್ಷೇತ್ರವನ್ನು ಅಸಂಖ್ಯಾತ ಉಪದ್ರವಗಳಿಂದ ಸಂರಕ್ಷಿಸುತ್ತಿರುವರು. ಅವರೇ ದಿಗ್ದೇವತೆಗಳು. ಅವರನ್ನು ಕ್ರಮವಾಗಿ ನಿರೂಪಿಸಿರುವೆನು.

ಶತನೇತ್ರಾ ಸಹಸ್ರಾಸ್ಯಾ ತಥಾಽಯುತಭುಜಾಽಪರಾ ।
ಅಶ್ವಾರೂಢಾ ಗಜಾಸ್ಯಾ ಚ ತ್ವರಿತಾ ಶವವಾಹಿನೀ ॥ ೯೦ ॥
ವಿಶ್ವಾ ಸೌಭಾಗ್ಯಗೌರೀ ಚ ಸೃಷ್ಟಾಃ ಪ್ರಾಚ್ಯಾದಿಮಧ್ಯತಃ ।
ಏತಾ ಯತ್ನೇನ ಸಂಪೂಜ್ಯಾಃ ಕ್ಷೇತ್ರರಕ್ಷಣದೇವತಾಃ ॥ ೯೧ ॥
ತಥೈವ ಭೈರವಾಶ್ಚಾಷ್ಟೌ ದಿಕ್ಷ್ವಷ್ಟಾಸು ಪ್ರತಿಷ್ಠಿತಾಃ ।
ರಕ್ಷಂತಿ ಸತತಂ ಕಾಶೀಂ ನಿರ್ವಾಣಶ್ರೀನಿಕೇತನಂ ॥ ೯೨ ॥
ರುರುಶ್ಚಂಡೋಽಸಿತಾಂಗಶ್ಚ ಕಪಾಲೀ ಕ್ರೋಧನಸ್ತಥಾ ।
ಉನ್ಮತ್ತಭೈರವಸ್ತದ್ವತ್ಕ್ರಮಾತ್ಸಂಹಾರಭೀಷಣೌ ॥ ೯೩ ॥
ಚತುಃಷಷ್ಟಿಸ್ತು ವೇತಾಲಾ ಮಹಾಭೀಷಣಮೂರ್ತಯಃ ।
ರುಂಡಮುಂಡಸ್ರಜಃ ಸರ್ವೇ ಕರ್ತ್ರೀಖರ್ಪರಪಾಣಯಃ ॥ ೯೪ ॥
ಶ್ವವಾಹನಾ ರಕ್ತಮುಖಾ ಮಹಾದಂಷ್ಟ್ರಾ ಮಹಾಭುಜಾಃ ।
ನಗ್ನಾ ವಿಮುಕ್ತಕೇಶಾಶ್ಚ ಪ್ರಮತ್ತಾ ರುಧಿರಾಸವೈಃ ॥ ೯೫ ॥

---

೯೦–೯೧. ಶತನೇತ್ರಾ, ಸಹಸ್ರಾಸ್ಯಾ, ಅಯುತಭುಜಾ, ಅಶ್ವಾರೂಢಾ, ಗಜಾಸ್ಯ, ತ್ವರಿತಾ, ಶವವಾಹಿನೀ, ವಿಶ್ವಾ, ಸೌಭಾಗ್ಯಗೌರಿ–ಇವರೇ ದಿಗ್ದೇವತೆಗಳು. ಕ್ರಮವಾಗಿ ಪೂರ್ವದಿಕ್ಕು ಮೊದಲುಕೊಂಡು ಕ್ಷೇತ್ರಮಧ್ಯವನ್ನೂ ಸಹ ಕಾಪಾಡುತ್ತಿರುವರು. ಕ್ಷೇತ್ರಪಾಲನದಲ್ಲಿ ನಿರತರಾಗಿರುವ ಈ ದೇವತೆಯರೂ ಪ್ರಯತ್ನಪೂರ್ವಕವಾಗಿ ಸಕಲರಿಗೂ ಪೂಜಾರ್ಹರಾಗಿರುವರು.

೯೨. ಹಾಗೆಯೇ ಎಂಟು ದಿಕ್ಕುಗಳಲ್ಲಿಯೂ ಎಂಟುಮಂದಿ ಭೈರವರು ಪ್ರತಿಷ್ಠಿತರಾಗಿರುವರು. ಅವರು ಮೋಕ್ಷಲಕ್ಷ್ಮಿಗೆ ನಿವಾಸವೆನಿಸಿದ ಈ ಕಾಶೀಕ್ಷೇತ್ರವನ್ನು ಬಹು ಜಾಗರೂಕತೆಯಿಂದ ಸಂರಕ್ಷಿಸುತ್ತಿರುವರು.

೯೩. ಅವರ ಹೆಸರುಗಳನ್ನು ಪೂರ್ವದಿಕ್ಕಿನಿಂದ ಮೊದಲುಗೊಂಡು ಕ್ರಮವಾಗಿ ಹೇಳುವೆನು. ರುರು, ಚಂಡ, ಅಸಿತಾಂಗ, ಕಾಪಾಲಿ, ಕ್ರೋಧನ, ಉನ್ಮತ್ತಭೈರವ, ಸಂಹಾರ ಮತ್ತು ಭೀಷಣ ಎಂಬುವರೇ ಅಷ್ಟಭೈರವರು.

೯೪. ಇವರಿಗೆ ಸಹಾಯಕರಾಗಿ ಅರುವತ್ತುನಾಲ್ಕು ಭೇತಾಳರಿರುವರು. ಅವರೆಲ್ಲರೂ ಮಹಾಭಯಂಕರ ಸ್ವರೂಪರು. ಎಲ್ಲರೂ ತಲೆಗಳನ್ನೂ ದೇಹಗಳನ್ನೂ ಮಾಲೆಗಳಾಗಿ ಧರಿಸಿ ಕತ್ತಿಗಳನ್ನೂ ತಲೆಗಳ ಕಪಾಲಗಳನ್ನೂ ಕೈಗಳಲ್ಲಿ ಹಿಡಿದಿರುವರು.

೯೫. ನಾಯಿಗಳನ್ನೇ ವಾಹನಗಳನ್ನಾಗಿ ಮಾಡಿಕೊಂಡು ಕೆಂಪು ಮುಖಗಳಿಂದಲೂ, ಉದ್ದಕೋರೆದಾಡೆಗಳಿಂದಲೂ, ಬಲಿಷ್ಠಗಳಾದ ಭುಜಗಳಿಂದಲೂ ಕೂಡಿದವರಾಗಿರುವರು. ಮತ್ತು ವಸ್ತ್ರಹೀನರಾಗಿಯೂ, ಬಿರಿದ ತಲೆಗೂದಲುಳ್ಳವರಾಗಿಯೂ, ರಕ್ತಪಾನದಿಂದ ಪ್ರಮತ್ತರಾಗಿಯೂ ಇರುವರು.

ನಾನಾರೂಪಧರಾಃ ಸರ್ವೇ ನಾನಾಶಸ್ತ್ರಾಸ್ತ್ರಪಾಣಯಃ ।
ತದಾಕಾರೈಶ್ಚ ತದ್ಭೃತ್ಯೈಃ ಕೋಟಿಶಃ ಪರಿವಾರಿತಾಃ ॥ ೯೬ ॥
ವಿದ್ಯುಜ್ಜಿಹ್ವೋ ಲಲಜ್ಜಿಹ್ವಃ ಕ್ರೂರಾಸ್ಯಃ ಕ್ರೂರಲೋಚನಃ ।
ಉಗ್ರೋ ವಿಕಟದಂಷ್ಟ್ರಶ್ಚ ವಕ್ರಾಸ್ಯೋ ವಕ್ರನಾಸಿಕಃ ॥ ೯೭ ॥
ಜಂಭಕೋ ಜೃಂಭಣಮುಖೋ ಜ್ವಾಲಾನೇತ್ರೋ ವೃಕೋದರಃ ।
ಗರ್ತನೇತ್ರೋ ಮಹಾನೇತ್ರಸ್ತುಚ್ಛನೇತ್ರೋಽಂತ್ರಮುಂಡನಃ ॥ ೯೮ ॥
ಜ್ವಲತ್ಕೇಶಃ ಕಂಬುಶಿರಾಃ ಖರಗ್ರೀವೋ ಮಹಾಹನುಃ ।
ಮಹಾನಾಸೋ ಲಂಬಕರ್ಣಃ ಕರ್ಣಪ್ರಾವರಣೋಽನಸಃ ॥ ೯೯ ॥
ಇತ್ಯಾದಯೋ ಮುನೇ ಕ್ಷೇತ್ರಂ ದುರ್ವೃತ್ತರುಧಿರಪ್ರಿಯಾಃ ।
ತ್ರಾಸಯಂತೋ ದುರಾಚಾರಾನ್ರಕ್ಷಂತಿ ಪರಿತಃ ಸದಾ ॥ ೧೦೦ ॥
ತ್ರೈಲೋಕ್ಯವಿಜಯಾದ್ಯಾಶ್ಚ ಜ್ವಾಲಾಮುಖ್ಯಂತಗಾಶ್ಚ ಯಾಃ ।
ಶಕ್ತಯೋಽತ್ರ ಮಯಾ ಖ್ಯಾತಾಃ ಮುನೇ ಕಲಶಸಂಭವ ॥ ೧೦೧ ॥
ತಾಃ ಕಾಶೀಂ ಪರಿರಕ್ಷಂತಿ ಚತುರ್ದಿಕ್ಷೂದ್ಯತಾಯುಧಾಃ ।
ತಾಃ ಸಮರ್ಚ್ಯಾಃ ಪ್ರಯತ್ನೇನ ಮಹಾವಿಘ್ನಪ್ರಶಾಂತಯೇ ॥ ೧೦೨ ॥

---

೯೬. ಅವರೆಲ್ಲರೂ ಅನೇಕರೂಪಗಳನ್ನು ತಾಳಿರುವರು. ಬಹುವಿಧಗಳಾದ ಶಸ್ತ್ರಗಳನ್ನೂ, ಅಸ್ತ್ರಗಳನ್ನೂ ಕೈಗಳಲ್ಲಿ ಹಿಡಿದಿರುವರು. ಒಬ್ಬೊಬ್ಬರೂ ತಮ್ಮ ಸ್ವರೂಪದಿಂದಲೇ ಇರುವ ಕೋಟಿಗಟ್ಟಲೆ ಅನುಚರರಿಂದ ಪರಿವಾರಿತರಾಗಿರುವರು.

೯೭-೧೦೦. ವಿದ್ಯುಜ್ಜಿಹ್ವ, ಲಲಜ್ಜಿಹ್ವ, ಕ್ರೂರಾಸ್ಯ, ಕ್ರೂರಲೋಚನ, ಉಗ್ರ, ವಿಕಟದಂಷ್ಟ್ರ, ವಕ್ರಾಸ್ಯ, ವಕ್ರನಾಸಿಕ, ಜಂಭಕ, ಜೃಂಭಣಮುಖ, ಜ್ವಾಲಾನೇತ್ರ, ವೃಕೋದರ, ಗರ್ತನೇತ್ರ, ಮಹಾನೇತ್ರ, ತುಚ್ಛನೇತ್ರ, ಅಂತ್ರ ಮುಂಡನ, ಜ್ವಲತ್ಕೇಶ, ಕಂಬುಶಿರ, ಖರ್ವಗ್ರೀವ, ಮಹಾಹನು, ಮಹಾನಾಸ, ಲಂಬಕರ್ಣ, ಕರ್ಣಪ್ರಾವರಣ, ಅನಸ—ಇವರೇ ಮುಂತಾದ ಅರುವತ್ತುನಾಲ್ಕು ಭೇತಾಳರು ದುರಾಚಾರನಿರತರ ರಕ್ತವನ್ನು ಪಾನಮಾಡುವುದರಲ್ಲಿಯೇ ಆಸಕ್ತಿಯುಳ್ಳವರಾಗಿರುವರು. ಮಹಾಮುನಿಯೆ! ಇಂತು ಇವರು ದುಷ್ಟರಿಗೆಲ್ಲ ಭಯವನ್ನುಂಟುಮಾಡುತ್ತ ಸರ್ವಕಾಲದಲ್ಲಿಯೂ ಕಾಶಿಯನ್ನು ಸುತ್ತಲೂ ಕಾಪಾಡುತ್ತಿರುವರು.

೧೦೧. ಎಲೈ ಕಲಶೋದ್ಭವನೆ! ತ್ರೈಲೋಕ್ಯವಿಜಯಿಯೇ ಮೊದಲುಗೊಂಡು ಜ್ವಾಲಾಮುಖಿಯವರೆಗಿನ ಶಕ್ತಿಯರನ್ನು ನಿನಗೆ ಹಿಂದೆ ನಿರೂಪಿಸಿದೆನಲ್ಲವೆ.

೧೦೨. ಅವರು ವಾರಾಣಸೀಕ್ಷೇತ್ರದ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಷ್ಠಿತರಾಗಿ ತಮ್ಮ ಆಯುಧಗಳನ್ನು ಎತ್ತಿ ಹಿಡಿದು ಸುತ್ತಲೂ ರಕ್ಷಿಸುತ್ತಿರುವರು. ಅಲ್ಲಿ ಸಂಭವಿಸಬಹುದಾದ ಮಹಾವಿಘ್ನಗಳನ್ನು ಶಮನಮಾಡಲು ಅವರನ್ನು ಸರ್ವಪ್ರಕಾರದಿಂದಲೂ ಅರ್ಚನೆಮಾಡಬೇಕು.

ಭೈರವಾ ರುರುಮುಖ್ಯಾಶ್ಚ ಮಹಾಭಯನಿವಾರಕಾಃ ।
ಸಂಪೂಜ್ಯಾಃ ಸರ್ವದಾ ಕಾಶ್ಯಾಂ ಸರ್ವಸಂಪತ್ತಿಹೇತವಃ ॥ ೧೦೩ ॥
ವಿದ್ಯುಜ್ಜಿಹ್ವಪ್ರಭೃತಯೋ ವೇತಾಲಾ ಉಗ್ರರೂಪಿಣಃ ।
ಅತ್ಯುಗ್ರಾನಪಿ ವಿಘ್ನೌಘಾನ್ಹರಿಷ್ಯಂತ್ಯರ್ಚಿತಾ ಇಹ ॥ ೧೦೪ ॥
ತಥಾ ಭೂತಾವಲೀ ಚಾತ್ರ ನಾನಾಭೀಷಣರೂಪಿಣೀ ।
ಉದಾಯುಧಾಽವತಿ ಪುರೀಂ ಶತಕೋಟಿಮಿತಾ ಮುನೇ ॥ ೧೦೫ ॥
ನಿರ್ವಾಣಲಕ್ಷ್ಮೀಃಕ್ಷೇತ್ರಸ್ಯ ಪಾಲಯಿತ್ರೀ ಪದೇ ಪದೇ ।
ಏತಾ ವೈ ದೇವತಾಃ ಪೂಜ್ಯಾಃ ಕಾಶ್ಯಾಂ ನಿರ್ವಾಣಕಾಂಕ್ಷಿಭಿಃ ॥ ೧೦೬ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ನರೋ ದುರ್ಗಜಯಾಭಿಧಂ ।
ನಾನಾಶಕ್ತಿಸಮಾಯುಕ್ತಂ ದುರ್ಗಮಾಶು ತರಿಷ್ಯತಿ ॥ ೧೦೭ ॥
ಯ ಏತೇ ಭೈರವಾಃ ಪ್ರೋಕ್ತಾ ಯೇ ವೇತಾಲಾ ಉದಾಹೃತಾಃ ।
ತೇಷಾಂ ನಾಮಾನಿ ಚಾಕರ್ಣ್ಯ ನರೋ ವಿಘ್ನೈರ್ನ ದೂಯತೇ ॥ ೧೦೮ ॥

---

೧೦೩. ರುರುವೇ ಮೊದಲಾದ ಭೈರವರೂ ಭಕ್ತರ ಮಹಾಭಯಗಳನ್ನು ನಿವಾರಿಸುತ್ತಿರುವರು. ಕಾಶಿಯಲ್ಲಿ ಅವರನ್ನು ಸರ್ವಕಾಲದಲ್ಲಿಯೂ ಪೂಜಿಸಬೇಕು. ಅವರೇ ಸಕಲೈಶ್ವರ್ಯಗಳ ಪ್ರಾಪ್ತಿಗೂ ಕಾರಣರಾಗಿರುವರು.

೧೦೪. ವಿದ್ಯುಜ್ಜಿಹ್ವನೇ ಮುಂತಾದ ಭಯಂಕರರೂಪರಾದ ಭೇತಾಳರೂ ಸಹ ಇಲ್ಲಿ ನೆಲೆಗೊಂಡಿರುವರು. ಅವರನ್ನು ಭಕ್ತಿಯಿಂದ ಪೂಜಿಸಲು ಅತ್ಯುಗ್ರಗಳಾದ ಪಾಪಸಮೂಹಗಳನ್ನೂ ನಾಶಗೊಳಿಸುವರು.

೧೦೫. ಎಲೈ ಅಗಸ್ತ್ಯಮುನಿಯೆ! ಇದಲ್ಲದೆ ನಾನಾವಿಧ ಭಯಂಕರ ಸ್ವರೂಪಗಳನ್ನು ತಾಳಿರುವ ಭೂತಸಮೂಹವೂ ಇಲ್ಲಿರುವುದು. ನೂರುಕೋಟಿ ಸಂಖ್ಯೆಯುಳ್ಳ ಮಹಾಸೈನ್ಯವೂ ಸಹ ಸಜ್ಜಿತಗಳಾದ ಶಸ್ತ್ರಾಸ್ತ್ರಗಳನ್ನು ಹಿಡಿದು ಈ ಮಹಾಕ್ಷೇತ್ರವನ್ನು ಕಾಪಾಡುತ್ತಿರುವುದು.

೧೦೬. ಕ್ಷೇತ್ರದ ಹೆಜ್ಜೆಹೆಜ್ಜೆಯ ಪ್ರದೇಶವನ್ನೂ ಮೋಕ್ಷಲಕ್ಷ್ಮಿಯು ಪಾಲಿಸುತ್ತಿರುವಳು. ಶಾಶ್ವತವಾದ ಮೋಕ್ಷಪದವಿಯನ್ನು ಪಡೆಯಲಪೇಕ್ಷಿಸುವವರೆಲ್ಲರೂ ಕಾಶೀಕ್ಷೇತ್ರದಲ್ಲಿರುವ ಈ ಎಲ್ಲ ದೇವತೆಗಳನ್ನೂ ಪೂಜಿಸಬೇಕು.

೧೦೭. ದುರ್ಗಾಜಯವೆಂಬ ಹೆಸರುಳ್ಳದುದೂ, ಅನೇಕ ವಿಧ ಶಕ್ತಿಯರ ನಾಮಾವಳಿಗಳಿಂದೊಡಗೂಡಿದುದೂ ಆದ ಪರಮಪಾವನವಾದ ಈ ಅಧ್ಯಾಯವನ್ನು ಶ್ರವಣಮಾಡಿದ ಮನುಷ್ಯನು ಮಹಾಕಷ್ಟವನ್ನೂ ಶೀಘ್ರವಾಗಿಯೆ ಕಡೆಹಾಯುವನು.

೧೦೮. ಹಿಂದೆ ಯಾವ ಭೈರವರು ನಿರೂಪಿಸಲ್ಪಟ್ಟರೊ, ಯಾವ ಬೇತಾಲರ ಹೆಸರುಗಳು ಕೀರ್ತಿಸಲ್ಪಟ್ಟುವೊ, ಆ ಹೆಸರುಗಳನ್ನೆಲ್ಲ ಕೇಳಿದ ಮನುಜನು ಎಂದಿಗೂ ವಿಘ್ನಗಳಿಂದ ಪರಿತಪಿಸುವುದಿಲ್ಲ.

ಅದೃಷ್ಟಾ ಅಪಿ ತೇ ಭೂತಾ ಏತದಾಖ್ಯಾನಪಾಠಕಂ ।
ರಕ್ಷಿಷ್ಯಂತಿ ಪ್ರಯತ್ನೇನ ಸಹಶ್ರೋತೃಜನೇನ ಚ ॥ ೧೦೯ ॥
ತಸ್ಮಾತ್ಸರ್ವಪ್ರಯತ್ನೇನ ಕಾಶೀಭಕ್ತಿಪರೈರ್ನರೈಃ ।
ಶ್ರೋತವ್ಯಮಿದಮಾಖ್ಯಾನಂ ಮಹಾವಿಘ್ನನಿವಾರಣಂ ॥ ೧೧೦ ॥
ಗೃಹೇಽಪಿ ಯಸ್ಯ ಲಿಖಿತಮೇತತ್ಸ್ಥಾಸ್ಯತಿ ಪೂಜಿತಂ ।
ತಸ್ಯಾಪದಾಂ ಸಹಸ್ರಾಣಿ ನಾಶಯಿಷ್ಯಂತಿ ದೇವತಾಃ ॥ ೧೧೧ ॥
ಕಾಶ್ಯಾಂ ಯಸ್ಯಾಸ್ತಿ ವೈ ಪ್ರೇಮ ತೇನ ಕೃತ್ವಾಽಽದರಂ ಗುರುಂ ।
ಶ್ರೋತವ್ಯಮಿದಮಾಖ್ಯಾನಂ ವಜ್ರಪಂಜರಸನ್ನಿಭಂ ॥ ೧೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದುರ್ಗಾವಿಜಯವರ್ಣನಂ"
ನಾಮ ದ್ವಿಸಪ್ತತಿತಮೋಽಧ್ಯಾಯಃ

---

೧೦೯. ಆ ಭೂತಗಳು ಯಾರ ಕಣ್ಣುಗಳಿಗೆ ಕಾಣಿಸದಿದ್ದರೂ ಈ ಪುಣ್ಯ ಚರಿತ್ರೆಯನ್ನು ಪಠಿಸುವವನನ್ನೂ ಕೇಳುವ ಭಕ್ತಜನರನ್ನೂ ಸರ್ವಪ್ರಕಾರದಿಂದಲೂ ಕಾಪಾಡುತ್ತಿರುವರು.

೧೧೦. ಆದುದರಿಂದಲೇ ಕಾಶೀಕ್ಷೇತ್ರದಲ್ಲಿ ಭಕ್ತಿಯನ್ನಿಟ್ಟಿರುವ ಮನುಷ್ಯರು ಸರ್ವಪ್ರಯತ್ನದಿಂದಲೂ ಮಹಾವಿಘ್ನಗಳ ನಿವಾರಣೆಗೆ ಸದುಪಾಯವೆನಿಸಿದ ಈ ಉಪಾಖ್ಯಾನವನ್ನು ಕೇಳಬೇಕು.

೧೧೧. ಈ ಆಖ್ಯಾನವು ಬರೆಯಲ್ಪಟ್ಟಿರುವ ಪುಸ್ತಕವು ಯಾರ ಮನೆಯಲ್ಲಿ ನಿತ್ಯವೂ ಪೂಜಿಸಲ್ಪಡುತ್ತಿರುವುದೊ, ಅವನಿಗೆ ನಿತ್ಯವೂ ಬಂದೊದಗುವ ಸಾವಿರಾರು ಆಪತ್ತುಗಳನ್ನು ದೇವತೆಗಳೆಲ್ಲರೂ ನಾಶಮಾಡುವರು.

೧೧೨. ಕಾಶೀಕ್ಷೇತ್ರದಲ್ಲಿ ಯಾವ ಮಾನವನಿಗೆ ಅತ್ಯಂತವಾದ ಪ್ರೇಮವಿರುವುದೋ, ಅವನು ಆದರದಿಂದ ಒಬ್ಬ ಪಂಡಿತನನ್ನು ಗುರುವಾಗಿ ಸ್ವೀಕರಿಸಿ ಆತನ ಮುಖದಿಂದ ವಜ್ರಪಂಜರಕ್ಕೆ ಸಮಾನವಾದ ಈ ಆಖ್ಯಾಯಿಕೆಯನ್ನು ಕೇಳಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ದುರ್ಗಾವಿಜಯವರ್ಣನ"ವೆಂಬ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

---

1203—47. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

